# ಪರಿವರ್ತನಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು

## ಸಂಪುಟ ೧

## ದರ್ಶನ ಮತ್ತು ಅಧ್ಯಾತ್ಮ

ಸ್ವಾಮಿ ರಂಗನಾಥಾನಂದ





ಶ್ರೀ ರಾಮಕೃಷ್ಣ ಆಶ್ರಮ

# ಪರಿವರ್ತನಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು

## ಸಂಪುಟ ೧

## ದರ್ಶನ ಮತ್ತು ಅಧ್ಯಾತ್ಮ

ಸ್ವಾಮಿ ರಂಗನಾಥಾನಂದ



ಶ್ರೀ ರಾಮಕೃಷ್ಣ ಆಶ್ರಮ
ಯಾದವಗಿರಿ, ಮೈಸೂರು 570 020

*Parivarthanasheela Samajakke Shashvatha Moulyagalu.* Vol. I—*Darshana mattu Adhyatma* (Kannada translation of *Eternal Values for a Changing Society–Philosophy and Spirituality* by Swami Ranganathananda.) Published by Sri Ramakrishna Ashrama, Yadavagiri, Mysore 570 020. May 2000 Price : Rs. 100/-. pp 487 + xvi.

ಮೊದಲ ಮುದ್ರಣ ೨೦೦೦



ಬೆಲೆ : ರೂ. 100/-

ಪ್ರಕಾಶಕರು
ಅಧ್ಯಕ್ಷರು
ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು

ಅಕ್ಷರ ಜೋಡಣೆ
ಹರ್ಷ ಪ್ರಿಂಟರ್ಸ್, ೨೮೮೫, ಬಸವೇಶ್ವರ ರಸ್ತೆ, ೧೫ನೆಯ ತಿರುವು, ಮೈಸೂರು.

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು ದೂರವಾಣಿ - ೬೬೮೨೮೦೨

## ಕನ್ನಡ ಅನುವಾದಕ್ಕೆ ಮುನ್ನುಡಿ

'ಅತ್ಯುನ್ನತ ಸತ್ಯಗಳು ಎಲ್ಲಿ ಅನುಷ್ಠಾನ ಸಾಧ್ಯವಾಗುವುದೊ ಆ ಸಮಾಜವೇ ಪರಮಶ್ರೇಷ್ಠವಾದುದು' ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಸಮಾಜವೆಂದರೆ ಕೇವಲ ವ್ಯಕ್ತಿಗಳ ಸಮೂಹವಲ್ಲ. ಒಂದು ನಿರ್ದಿಷ್ಟ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವ್ಯಕ್ತಿಗಳು ಒಂದುಗೂಡಿದಾಗ ಅದು ಸಮಾಜವೆನಿಸುತ್ತದೆ. ಸಮಾಜಕ್ಕೆ ಈ ಸಂಸ್ಕೃತಿಯನ್ನು ನೀಡುವವನು ವ್ಯಕ್ತಿಯೇ. ವ್ಯಕ್ತಿ ತನ್ನ ಅಂತರಂಗದ ಸಾಮರ್ಥ್ಯವನ್ನು, ಪ್ರತಿಭೆಯನ್ನು, ನೈತಿಕ ಮತ್ತು ಆಧ್ಯಾತ್ಮಿಕ ಪರಿಪೂರ್ಣತೆಯನ್ನು ಹೊರಗೆ ವ್ಯಕ್ತಪಡಿಸುವುದರ ಮೂಲಕ ಅವನು ಸಮಾಜಕ್ಕೆ ಸಂಸ್ಕೃತಿಯನ್ನು ನೀಡುತ್ತಾನೆ. ಮತ್ತೆ ಅದೇ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬೆಳೆದು ಅವನು ಸುಸಂಸ್ಕೃತನಾಗುತ್ತಾನೆ. ಹೀಗೆ ಅವನು ಸಮಾಜವನ್ನು ಸೃಷ್ಟಿಸುವವನು ಹಾಗೂ ಸಮಾಜದ ಸೃಷ್ಟಿ ಎರಡೂ ಆಗಿದ್ದಾನೆ.

ಆದ್ದರಿಂದ ನಾವು ಎಂತಹ ಸಮಾಜವನ್ನು ನಿರ್ಮಿಸುತ್ತೇವೆ ಎಂಬುದು ಪ್ರತಿಯೊಬ್ಬ ವ್ಯಕ್ತಿಯನ್ನೂ ಅವಲಂಬಿಸಿದೆ. ನಾವು ಕೆಟ್ಟ ಸಮಾಜವನ್ನು ನಿರ್ಮಿಸಿದರೆ ಅದರ ಕೆಟ್ಟತನಕ್ಕೆ ನಾವೂ ನಮ್ಮ ಮುಂದಿನ ಪೀಳಿಗೆಯವರೂ ಬಲಿಪಶುಗಳಾಗುತ್ತೇವೆ. ಇದನ್ನು ನಿವಾರಿಸುವುದಕ್ಕೆ ಪ್ರತಿಯೊಬ್ಬ ವ್ಯಕ್ತಿಯೂ ಉನ್ನತವೂ ಶಾಶ್ವತವೂ ಆದ ಮೌಲ್ಯಗಳನ್ನು ಮೈಗೂಡಿಸಿಕೊಂಡು, ತಾನು ಉತ್ತಮನಾಗುವುದರ ಮೂಲಕ ಸಮಾಜವನ್ನು ಉತ್ತಮಪಡಿಸಲು ಪ್ರಯತ್ನಿಸಬೇಕು. ಆಗ ಸ್ವಾಮಿ ವಿವೇಕಾನಂದರು ಹೇಳುವಂತೆ ಅತ್ಯುನ್ನತ ನೈತಿಕ ಮತ್ತು ಆಧ್ಯಾತ್ಮಿಕ ಸತ್ಯಗಳು ಸಮಾಜದಲ್ಲಿ ಅನುಷ್ಠಾನ ಸಾಧ್ಯವಾಗುತ್ತವೆ.

ಇಂತಹ ಶಾಶ್ವತ ಮೌಲ್ಯಗಳಾವುವು, ಅವುಗಳನ್ನು ನಮ್ಮದಾಗಿಸಿಕೊಳ್ಳುವುದರ ಆವಶ್ಯಕತೆ ಮತ್ತು ಸಾಧ್ಯತೆ – ಇವುಗಳನ್ನು ಕುರಿತ ವಿಚಾರಪೂರ್ಣ ಭಾವನೆಗಳನ್ನೊಳಗೊಂಡಿರುವ ನಾಲ್ಕು ಸಂಪುಟಗಳ ಬೃಹತ್ ಗ್ರಂಥವೇ Eternal Values for a Changing Society. ಅಧ್ಯಯನ, ಚಿಂತನೆ ಮತ್ತು ಅನುಭವಗಳ ಫಲರೂಪವಾದ ಈ ಗ್ರಂಥವು ಸ್ವಾಮಿ ರಂಗನಾಥಾನಂದಜಿಯವರ ವಿವಿಧ ಉಪನ್ಯಾಸಗಳ ಸಂಗ್ರಹವಾಗಿದೆ. ಈ ಗ್ರಂಥವು ಬಹು ವಿಸ್ತಾರವಾದ ಜ್ಞಾನಪ್ರಕಾರಗಳನ್ನು ನಮ್ಮ ಮುಂದೆ ತೆರೆದಿಡುತ್ತದೆ.

ಇದು ಮೊದಲು ಒಂದು ಸಂಪುಟದಲ್ಲಿ ಪ್ರಕಟವಾಗಿದ್ದು ಅದರ ಕನ್ನಡಾನುವಾದವನ್ನು "ಪರಿವರ್ತನಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು" ಎಂಬ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿತ್ತು. ಮುಂದೆ ಈ ಗ್ರಂಥ ವಿಸ್ತಾರವಾಗುತ್ತ ಹೋಗಿ ಈಗ ಇದು ಆಂಗ್ಲ ಭಾಷೆಯಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ.

ಮೈಸೂರಿನ ರಾಮಕೃಷ್ಣ ಆಶ್ರಮವು ಇದರ ಸಂಪೂರ್ಣ ಕನ್ನಡ ಅನುವಾದವನ್ನು ಇದೀಗ ಪ್ರಕಟಿಸುತ್ತಿದೆ. ಇದರಲ್ಲಿ ಬರುವ ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಭಾಗಗಳನ್ನು ಕನ್ನಡದ ನುರಿತ ಸಾಹಿತಿಗಳೂ ವಿದ್ವಾಂಸರೂ ಅನುವಾದಿಸಿಕೊಟ್ಟಿದ್ದಾರೆ. ಅವರೆಲ್ಲರಿಗೂ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ. ಇದರ ಪ್ರಧಾನ ಸಂಪಾದಕರಾಗಿ ಈ ಕೃತಿಯು ಉತ್ತಮ ಗುಣಮಟ್ಟದಲ್ಲಿ ಪ್ರಕಟವಾಗುವುದಕ್ಕೆ ಶ್ರಮಿಸಿದ ಡಾ. ಪ್ರಭುಶಂಕರ ಮತ್ತು ಶ್ರೀ ಕೆ.ಸಿ. ಶಿವಪ್ಪ ಇವರಿಗೆ ನಾವು ಆಭಾರಿಗಳಾಗಿದ್ದೇವೆ.

ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು

ಅಧ್ಯಕ್ಷರು

## BY THE SAME AUTHOR

1. Eternal Values for a Changing Society :
   Vol. I. Philosophy and Spirituality
   Vol. II. Great Spiritual Teachers
   Vol. III. Education for Human Excellence
   Vol. IV. Democracy for Total Human Fulfilment
2. The Message of the Upanisads
3. A Pilgrim looks at the World Vol.I & Vol. II
4. Swami Vivekananda and Human Excellence
5. Vivekananda: His Humanism
6. Science and Religion
7. The Essence of Indian Culture
8. An Introduction to the Study of the Gita
9. The Spiritual Life of the Indian People
10. Vedanta and the Future of Mankind
11. The Charm and Power of the Upanisads
12. Bhagavan Buddha and Our Heritage
13. The Christ We Adore
14. Practical Vedanta and the Science of Values
15. The Indian Vision of God as Mother
16. Essence of Indian Culture
17. The Approach to Truth in Vedanta
18. Divine Grace
19. Democratic Administration in the Light of Practical Vedanta

**ಕನ್ನಡಾನುವಾದಗಳು**

ಉಪನಿಷತ್ತುಗಳ ಸಂದೇಶ

ಅನುಷ್ಠಾನ ವೇದಾಂತದ ಬೆಳಕಿನಲ್ಲಿ ಪ್ರಜಾಸತ್ತಾತ್ಮಕ ಆಡಳಿತ

ವಿಜ್ಞಾನ ಮತ್ತು ಆಧ್ಯಾತ್ಮ

ಆದರ್ಶ ಗೃಹಸ್ಥ

## ಮೊದಲ ಮತ್ತು ಎರಡನೆಯ ಆವೃತ್ತಿಗಳಿಗೆ ಬರೆದ ಮುನ್ನುಡಿ*

ಅದ್ವೈತ ಆಶ್ರಮವು ಹಿಂದೆ ಸ್ವಾಮಿ ರಂಗನಾಥಾನಂದರ ಕೆಲವು ಉಪನ್ಯಾಸಗಳನ್ನು ಪ್ರಕಟಿಸಿತು. ಪ್ರಸಕ್ತ ಸಂಪುಟದಲ್ಲಿ ಆ ಉಪನ್ಯಾಸಗಳೆಲ್ಲ ಇವೆ. ಸಂಪುಟದ ಹೆಸರೇ ಸೂಚಿಸುವಂತೆ, ಅವುಗಳಲ್ಲಿ ಸುಗಮವಾಗಿ ಪ್ರವಹಿಸುವ ಕೇಂದ್ರ ಭಾವನೆಯನ್ನು ಓದುಗರು ಗ್ರಹಿಸಲಾಗುವ ರೀತಿಯಲ್ಲಿ ಅವನ್ನು ಒಂದು ಕ್ರಮದಲ್ಲಿ ಜೋಡಿಸಿದೆ.

ಆಧುನಿಕ ಚಿಂತನೆಗೆ ಸ್ವಾಮಿ ವಿವೇಕಾನಂದರ ಮುಖ್ಯವಾದ ಕೊಡುಗೆಗಳಲ್ಲಿ ಒಂದು ಎಂದರೆ, ಸಮಾಜವು ಐತಿಹಾಸಿಕ ಆವಶ್ಯಕತೆಗಳಿಗೆ ತಕ್ಕಂತೆ ಅನಂತ ರೀತಿಗಳಲ್ಲಿ ಪರಿವರ್ತನೆಯಾಗಬಹುದು; ಆದರೆ ಮಾನವನ ಎಲ್ಲಾ ಪ್ರಯತ್ನದ ಹಿಂದೆ ಮೂಲಭೂತವಾಗಿರುವ ಶಾಶ್ವತ ಮೌಲ್ಯಗಳನ್ನು ಬಿಟ್ಟುಬಿಡಬೇಕು ಅಥವಾ ಬದಲಾಯಿಸಬೇಕು ಎನ್ನುವುದರಲ್ಲಿ ಯಾವ ಔಚಿತ್ಯವೂ ಇಲ್ಲ ಎನ್ನುವುದನ್ನು ಎತ್ತಿ ತೋರಿಸಿರುವುದು. ಇವುಗಳು ಮಾತ್ರವೇ ಪ್ರಗತಿಗೆ ಚಾಲನ ಶಕ್ತಿಯನ್ನು ಒದಗಿಸಬಲ್ಲವು ಎಂದು ಅವರು ಒತ್ತಿ ಹೇಳಿದರು. ಅವರ ಕಲ್ಪನೆಯಲ್ಲಿ ಆಧ್ಯಾತ್ಮಿಕತೆಯು ಒಂದು ಪ್ರೇರಕಶಕ್ತಿ. ಅದು ಸಾಮಾಜಿಕ ಮತ್ತು ಇತರ ನೆಲೆಗಳಲ್ಲಿ ಬಗೆಬಗೆಯ ಕಾರ್ಯಚಟುವಟಿಕೆಗಳ ಮೂಲಕ ಮಾನವನ ಏಕೈಕ ಗುರಿಯತ್ತ – ಅಂದರೆ ಭಗವಂತನ ಸಾಕ್ಷಾತ್ಕಾರದತ್ತ – ಒಂದೇ ಸಮನಾಗಿ ಮುಂದುವರಿಯುವಲ್ಲಿ ವಿಫಲವಾಗದ ಮೂಲಾಧಾರ ಎಂದು ತಂತಾನೆ ಪ್ರಕಟವಾಗುತ್ತದೆ.

ಆಧುನಿಕ ಯುಗವು ಎದುರಿಸುತ್ತಿರುವ ಅನೇಕಾನೇಕ ಸಾಮಾಜಿಕ, ಆರ್ಥಿಕ ಮತ್ತು ಆಧ್ಯಾತ್ಮಿಕ ಸಮಸ್ಯೆಗಳಿಗೆ ಈ ಕೃತಿ ಪರಿಹಾರವನ್ನು ಒದಗಿಸುತ್ತದೆ. ಇದು ಸಕಾಲಿಕವಾದ ಪ್ರಕಟಣೆಯೆಂದು ಓದುಗರು ಹೇಳುತ್ತಾರೆಂಬ ನಂಬಿಕೆ ನಮಗಿದೆ.

ಸೂಕ್ತ ಸ್ಥಳಗಳಲ್ಲಿ ಆಕರ ಗ್ರಂಥಗಳನ್ನು ಸ್ಮರಿಸಲಾಗಿದೆ. ಈ ಮಾಹಿತಿಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿರುವ ಎಲ್ಲರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ನವೆಂಬರ್ 1958 — ಪ್ರಕಾಶಕರು

* ಕಲ್ಕತ್ತೆಯ ಅದ್ವೈತಾಶ್ರಮ ಪ್ರಕಟಿಸಿದ Eternal Values for a Changing Society ಕೃತಿಗೆ ಬರೆದ ಮುನ್ನುಡಿಯ ಕನ್ನಡ ಅನುವಾದ

## ಸಮಗ್ರ ಸಂಪುಟದ ವಿಸ್ತೃತ ಮೂರನೆಯ ಆವೃತ್ತಿಗೆ ಬರೆದ ಮುನ್ನುಡಿ*

ಸ್ವಾಮಿ ರಂಗನಾಥಾನಂದ ಅವರ Eternal Values for a Changing Society ಎಂಬ ಮೌಲಿಕ ಗ್ರಂಥವನ್ನು ಪೌರ್ವಾತ್ಯ ಮತ್ತು ಪಾಶ್ಚಾತ್ಯ ಓದುಗರ ಮುಂದಿಡಲು ನಮಗೆ ಸಂತೋಷವಾಗುತ್ತಿದೆ. ಕಳೆದ ಮೂವತ್ತಾರು ವರ್ಷಗಳಲ್ಲಿ ದೇಶವಿದೇಶಗಳಲ್ಲಿ ರಂಗನಾಥಾನಂದರು ನೀಡಿದ ಉಪನ್ಯಾಸಗಳು ಮತ್ತು ಬರಹಗಳನ್ನು ಈ ಕೃತಿ ಒಳಗೊಂಡಿದೆ.

ಪಶ್ಚಿಮ ಬಂಗಾಳದ ಹೌರಾ ಜಿಲ್ಲೆಯ ಬೇಲೂರು ಮಠದಲ್ಲಿ ಕೇಂದ್ರ ಕಚೇರಿಯಿರುವ ರಾಮಕೃಷ್ಣ ಮಠದ ಹಿರಿಯ ಸಾಧುಗಳಾದ ಸ್ವಾಮಿ ರಂಗನಾಥಾನಂದರು ಈ ಮಠದ ಟ್ರಸ್ಟಿನ ಹಾಗೂ ಅದಕ್ಕೆ ಸೇರಿದ ಸಂಸ್ಥೆಯಾದ ರಾಮಕೃಷ್ಣ ಮಿಷನ್ನಿನ ಆಡಳಿತ ಮಂಡಳಿಯ ಸದಸ್ಯರು. ಇವರು ಕೇರಳ ರಾಜ್ಯದ ತ್ರಿಕ್ಕೂರಿನ ಬಳಿಯ ಸಿಲ್ವಾನ್ ಎಂಬ ಹಳ್ಳಿಯ ಮಧ್ಯಮವರ್ಗದ ಹಿಂದೂ ಕುಟುಂಬ ವೊಂದರಲ್ಲಿ 1908 ರ ಡಿಸೆಂಬರ್ 15ರಂದು ಜನಿಸಿದರು. ಪೂರ್ವಾಶ್ರಮದಲ್ಲಿ ಅವರ ಹೆಸರು ಶಂಕರನ್. ಪಕ್ಕದ ಒಲ್ಲೂರ್ ಗ್ರಾಮದಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿದರು. ಆಗ ಮಾಡಿದ ರಾಮಕೃಷ್ಣ–ವಿವೇಕಾನಂದ ಸಾಹಿತ್ಯದ ಅಧ್ಯಯನದಿಂದ ಅವರಲ್ಲಿ ತ್ಯಾಗ ಸೇವೆಗಳ ಆದರ್ಶಭಾವನೆ ಮೂಡಿತು.

ಪರಿಣಾಮವಾಗಿ ತರುಣ ಶಂಕರನ್ ಅವರು ಗಿರಿಧಾಮವಾದ ಊಟಿಯಲ್ಲಿ ಶ್ರೀ ರಾಮಕೃಷ್ಣರ ನೇರ ಶಿಷ್ಯರೂ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಎರಡನೆಯ ಅಧ್ಯಕ್ಷರೂ ಆದ ಸ್ವಾಮಿ ಶಿವಾನಂದರ ಆಶೀರ್ವಾದ ಪಡೆದು 1926ರ ಜುಲೈ ತಿಂಗಳಲ್ಲಿ ರಾಮಕೃಷ್ಣ ಆಶ್ರಮದ ಮೈಸೂರು ಶಾಖೆಗೆ ಸೇರಿದರು. ಆಗ ಅವರಿಗೆ ಹದಿನೇಳೂವರೆ ವರ್ಷದ ಎಳೆವಯಸ್ಸು. ಮುಂದಿನ ಹನ್ನೆರಡು ವರ್ಷಗಳನ್ನು – ಮೊದಲ ಒಂಬತ್ತು ವರ್ಷಗಳನ್ನು ಮೈಸೂರಿನಲ್ಲೂ, ಅನಂತರ ಮೂರು ವರ್ಷಗಳನ್ನು ಬೆಂಗಳೂರಿನಲ್ಲೂ ರಾಮಕೃಷ್ಣ ಮಠಗಳ ಶಾಖೆಗಳಲ್ಲಿ ಕಳೆದರು. ಈ ಅವಧಿಯಲ್ಲಿ ಫ್ರಾನ್ಸ್‌ನ ಗ್ರೆಟ್ಸ್‌ನಲ್ಲಿರುವ ರಾಮಕೃಷ್ಣ ವೇದಾಂತ ಕೇಂದ್ರದ ಸಂಸ್ಥಾಪಕರಾದ ಸ್ವಾಮಿ ಸಿದ್ಧೇಶ್ವರಾನಂದರ ಪ್ರೀತಿಪೂರ್ವಕ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆ ಇವರಿಗೆ ಲಭ್ಯ ವಾಯಿತು.

1929ರಲ್ಲಿ ಅವರು ಬೇಲೂರು ಮಠದಲ್ಲಿ ಸ್ವಾಮಿ ಶಿವಾನಂದರಿಂದ ಬ್ರಹ್ಮಚರ್ಯ ದೀಕ್ಷೆ ಮತ್ತು ಯತಿಚೈತನ್ಯ ಎಂಬ ಹೊಸ ಹೆಸರಿನಲ್ಲಿ ಪೂರ್ಣಪ್ರಮಾಣದ ಶಿಷ್ಯವೃತ್ತಿ ಪಡೆದರು. ನಾಲ್ಕು ವರ್ಷಗಳ ತರುವಾಯ, ಅಂದರೆ ಜನವರಿ 1933 ರಲ್ಲಿ, ಸ್ವಾಮಿ ಶಿವಾನಂದರಿಂದ ಸಂನ್ಯಾಸ ದೀಕ್ಷೆ ಯನ್ನೂ, ರಂಗನಾಥಾನಂದರೆಂಬ ಯತಿನಾಮವನ್ನೂ ಪಡೆದರು. ಧ್ಯಾನ, ಅಧ್ಯಯನ ಮತ್ತು ಮಠದ ಸೇವೆಗಳಿಂದ ಕೂಡಿದ ಮೈಸೂರಿನ ನೈಷ್ಠಿಕ ಜೀವನವು ಅವರ ಅನಂತರದ ಎಲ್ಲ ಪವಿತ್ರ ಬದುಕು ಮತ್ತು ಕಾರ್ಯಗಳಿಗೆ ಭದ್ರವಾದ ಬುನಾದಿಯಾಯಿತು.

ಮೈಸೂರುವಾಸದ ಕೊನೆಯ ವರ್ಷದಲ್ಲಿ ರಂಗನಾಥಾನಂದರು ಆಶ್ರಮದ ಶಾಲಾಕಾಲೇಜು ವಿದ್ಯಾರ್ಥಿಗಳ ಹಾಸ್ಟೆಲಿನ ವಾರ್ಡನ್ ಆಗಿದ್ದರು. ಬೆಂಗಳೂರಿನಲ್ಲಿದ್ದಾಗ ಅವರು ನಗರದ ನೂರಾರು

* ಭಾರತೀಯ ವಿದ್ಯಾಭವನ ಪ್ರಕಟಿಸಿರುವ ಈ ಕೃತಿಗೆ ಬರೆದ ಮುನ್ನುಡಿಯ ಕನ್ನಡ ಅನುವಾದ

ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರೊಡನೆ ನಿಕಟ ಸಂಪರ್ಕ ಹೊಂದಿದ್ದರು. ಬೆಂಗಳೂರಿನ ಸೆಂಟ್ರಲ್ ಜೈಲಿನ ಸತ್ಯಾಗ್ರಹ ಕೈದಿಗಳೂ ಸೇರಿದಂತೆ ಎಲ್ಲಾ ಕೈದಿಗಳಿಗೆ ನೈತಿಕ ಮತ್ತು ಧಾರ್ಮಿಕ ತರಗತಿಗಳನ್ನು ನಡೆಸಿದರು. ಅನಂತರ ಮೂರು ವರ್ಷಗಳ ಕಾಲ ರಂಗೂನ್‌ನ ರಾಮಕೃಷ್ಣ ಮಿಷನ್ ಸೊಸೈಟಿಯಲ್ಲಿ ಕಾರ್ಯದರ್ಶಿ ಹಾಗೂ ಗ್ರಂಥಪಾಲರಾಗಿ ಕೆಲಸಮಾಡಿದರು. ಈ ಅವಧಿಯಲ್ಲಿ ಅವರು ಬರ್ಮಾದಲ್ಲಿ ವ್ಯಾಪಕವಾದ ಉಪನ್ಯಾಸಪ್ರವಾಸ ಕೈಗೊಂಡರು. ಆಮೇಲೆ ಆರು ವರ್ಷಗಳ ಕಾಲ ಅಂದಿನ ಭಾರತದ ಪ್ರಾಂತ್ಯವಾದ ಸಿಂದ್‌ನ ರಾಜಧಾನಿ; ಈಗ ಪಶ್ಚಿಮ ಪಾಕಿಸ್ತಾನದ ಮುಖ್ಯ ಬಂದರುನಗರವಾದ ಕರಾಚಿಯಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಅಧ್ಯಕ್ಷರಾಗಿದ್ದರು. ರಂಗೂನ್ ಮತ್ತು ಕರಾಚಿಗಳಲ್ಲಿ ಅವರು ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರೊಡನೆ ಮಿತ್ರನಾಗಿಯೂ ಮಾರ್ಗದರ್ಶಿಯಾಗಿಯೂ ಉತ್ತಮ ಬಾಂಧವ್ಯವನ್ನು ಮುಂದುವರಿಸಿದ್ದು ಮಾತ್ರ ವಲ್ಲದೆ, ವಿವಿಧ ಸ್ತರಗಳ ಸಾರ್ವಜನಿಕರ ಮೇಲೆ ಉತ್ತಮ ಪ್ರಭಾವ ಬೀರಿದರು. ರಂಗೂನ್ ಮತ್ತು ಕರಾಚಿಯ ಶಾಖೆಗಳಲ್ಲಿ ಉಪನಿಷತ್ತು, ಗೀತೆಗಳನ್ನು ಕುರಿತು ಪ್ರತಿ ವಾರ ನಡೆಸುತ್ತಿದ್ದ ವ್ಯಾಸಂಗ ತರಗತಿಗಳು ಹಾಗೂ ಇತರ ಆಧ್ಯಾತ್ಮಿಕ, ತಾತ್ತ್ವಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ವಿಷಯ ಗಳನ್ನು ಕುರಿತು ವಿಶೇಷ ಸಂದರ್ಭಗಳಲ್ಲಿ ನೀಡುತ್ತಿದ್ದ ಉಪನ್ಯಾಸಗಳು, ಪ್ರವಚನಗಳು ವಿವಿಧ ಧರ್ಮ ಮತ್ತು ದೇಶಗಳಿಗೆ ಸೇರಿದ ಅಪಾರ ಜನಸ್ತೋಮವನ್ನು ಆಕರ್ಷಿಸುತ್ತಿದ್ದವು.

ಸ್ವಾಮೀಜಿಯವರು ಕರಾಚಿಯಲ್ಲಿದ್ದಾಗ, ನಾನಾ ರೀತಿಯ ಜನೋಪಯೋಗಿ ಕಾರ್ಯಚಟುವಟಿಕೆ ಗಳಲ್ಲಿ ತೊಡಗಿದ್ದುದು ಮಾತ್ರವಲ್ಲದೆ, ಸಾರ್ವಜನಿಕರಿಂದ ಅಪಾರ ನಿಧಿ ಸಂಗ್ರಹಣಮಾಡಿ, 1943ರ ಬಂಗಾಳ ಕ್ಷಾಮದಲ್ಲಿ ನೊಂದವರ ಕಷ್ಟವನ್ನು ಪರಿಹರಿಸುವ ಸಲುವಾಗಿ ವಿಶೇಷ ಹಡಗಿನಲ್ಲಿ 1250 ಟನ್ನುಗಳಷ್ಟು ಅಕ್ಕಿಯನ್ನು ಕಲ್ಕತ್ತೆಗೆ ರವಾನಿಸಿದರು. ಸ್ವಾಮಿ ರಂಗನಾಥಾನಂದರು 1949 ರಿಂದ 1962 ರವರೆಗೆ ನವದೆಹಲಿಯ ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಯಾಗಿದ್ದರು. ಇಲ್ಲಿ ಅವರು ವಿಶಾಲವಾದ ಸಾರ್ವಜನಿಕ ಗ್ರಂಥಾಲಯ ಮತ್ತು ಸಭಾಂಗಣ, ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಭಾರಿ ಪಠ್ಯಪುಸ್ತಕ ಭಂಡಾರ, ಮತ್ತು ಶ್ರೀರಾಮಕೃಷ್ಣರ ಭವ್ಯ ದೇವಾಲಯಗಳನ್ನು ಕಟ್ಟಿಸಿದರು. ಮಾನವ ಕಲ್ಯಾಣ ಕ್ಷೇತ್ರದಲ್ಲಿ, ಅವರು ಆಸ್ಪತ್ರೆ, ಕುಷ್ಠರೋಗ ನಿವಾರಣಾ ಕೇಂದ್ರಗಳಲ್ಲಿ ದುಡಿಯುವ ನಿಷ್ಠಾವಂತ ಕಾರ್ಯಕರ್ತರ ತಂಡಗಳನ್ನು ಸಂಘಟಿಸಿದರು.

ಭಾನುವಾರ ಬೆಳಗ್ಗೆ ದೆಹಲಿ ವಿಶ್ವವಿದ್ಯಾ ನಿಲಯದಲ್ಲಿ ಮತ್ತು ಭಾನುವಾರ ಸಂಜೆ ರಾಮಕೃಷ್ಣ ಮಿಷನ್ನಿನ ಕಟ್ಟಡದಲ್ಲಿ ಅವರು ನೀಡುತ್ತಿದ್ದ ಪ್ರವಚನಗಳಿಗೆ ಜನರು ಕಿಕ್ಕಿರಿದು ಸೇರುತ್ತಿದ್ದರು. ಪ್ರವಚನ ಕೇಳಲು ಮಿಷನ್ನಿಗೆ ಬರುತ್ತಿದ್ದ ಜನರ ಸಂಖ್ಯೆ ಕೆಲವುವೇಳೆ ಎರಡು ಸಾವಿರಕ್ಕೂ ಮೀರುತ್ತಿತ್ತು. ಇವು ಭಾರತದ ರಾಜಧಾನಿನಗರದ ಸಾಂಸ್ಕೃತಿಕ ಹಾಗೂ ಬೌದ್ಧಿಕ ಬದುಕಿನ ಮಹೋನ್ನತ ಅಂಶಗಳಾದವು. ದೆಹಲಿಯಲ್ಲಿದ್ದ ಈ ವರ್ಷಗಳಲ್ಲಿ ಮತ್ತು ಅನಂತರ ಕಲ್ಕತ್ತದಲ್ಲಿದ್ದ ಅವಧಿಯಲ್ಲಿ, ಸ್ವಾಮೀಜಿಯವರು ಭಾರತದ ನಾನಾ ವಿಶ್ವವಿದ್ಯಾನಿಲಯಗಳು, ಶಾಲಾಕಾಲೇಜುಗಳು, ಸಾಂಸ್ಕೃತಿಕ ಕೇಂದ್ರಗಳು, ಆಡಳಿತ ಶಿಕ್ಷಣ ಅಕಾಡಮಿಗಳು, ಮತ್ತಿತರ ಸಂಘಸಂಸ್ಥೆಗಳ ಪ್ರವಾಸವನ್ನು ಮತ್ತೆ ಮತ್ತೆ ಕೈಗೊಂಡು ಉಪನ್ಯಾಸಗಳನ್ನು ನೀಡಿದರು. ಭಾರತ ಸರ್ಕಾರದ ಶಿಕ್ಷಣ ಸಚಿವಾಲಯದ ಪ್ರಾರ್ಥನೆಯ ಮೇರೆಗೆ, ಅವರು ವ್ಯಾಪಕವಾದ ಉಪನ್ಯಾಸ ಪ್ರವಾಸಗಳನ್ನು ಕೈಗೊಂಡರು. ಇದರ ಅಂಗವಾಗಿ ಅವರು 1958 ರಲ್ಲಿ ಜಪಾನಿನ ವಿಶ್ವವಿದ್ಯಾನಿಲಯಗಳು, ಹಾಗೂ ಆಗ್ನೇಯ ಏಷ್ಯಾದೇಶಗಳ ಪ್ರವಾಸ ಮಾಡಿದರು. ಅನಂತರ ಹಲವಾರು ಸಲ 1961ರ ಏಪ್ರಿಲ್ ಹಾಗೂ ಆಗಸ್ಟ್‌ಗಳ ನಡುವೆ ಜೆಕೊಸ್ಲೊವಾಕಿಯ, ಪೋಲೆಂಡ್, ರಷ್ಯಾ ಮತ್ತು ಸ್ಪೇನ್ ದೇಶಗಳೂ ಸೇರಿದಂತೆ ಹದಿನೇಳು ಐರೋಪ್ಯ ದೇಶಗಳ ಉಪನ್ಯಾಸ ಪ್ರವಾಸ ಮಾಡಿದರು.

ಆಕಾಶವಾಣಿಯ ಆಹ್ವಾನದ ಮೇರೆಗೆ ಸ್ವಾಮೀಜಿಯವರು ಅನೇಕ ಭಾಷಣಗಳನ್ನು ನೀಡಿದ್ದಾರೆ.

1966ನೆ ಫೆಬ್ರವರಿಯಲ್ಲಿ ಅವರು ಕಲ್ಕತ್ತ ವಿಶ್ವವಿದ್ಯಾನಿಲಯದ ('ಭಾರತದ ಶೈಕ್ಷಣಿಕ ದೃಷ್ಟಿ' ಎಂಬ ವಿಷಯದ ಮೇಲೆ) ಘಟಿಕೋತ್ಸವ ಭಾಷಣವನ್ನೂ, 1967ರ ಜೂನ್ ತಿಂಗಳಲ್ಲಿ ಮುಂಬಯಿಯ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸಸ್ ಸಂಸ್ಥೆಯಲ್ಲಿ ('ಸಮಾಜಕಾರ್ಯದ ಭಾರತೀಯ ದರ್ಶನ' ಎಂಬ ವಿಷಯದ ಮೇಲೆ) ಘಟಿಕೋತ್ಸವ ಭಾಷಣವನ್ನೂ ನೀಡಿದ್ದಾರೆ.

ಕಲ್ಕತ್ತೆಯ ಅದ್ವೈತ ಆಶ್ರಮವು 1958 ರಲ್ಲಿ ಸ್ವಾಮೀಜಿಯವರ ಭಾಷಣಗಳು ಹಾಗೂ ಲೇಖನಗಳ ಸಂಗ್ರಹವನ್ನು Eternal Values for a Changing Society ಎಂಬ ಹೆಸರಿನಲ್ಲಿ ಪ್ರಕಟಿಸಿತು. ಇದರ ಎರಡನೆಯ ಆವೃತ್ತಿಯು ಎರಡು ವರ್ಷಗಳ ನಂತರ ಹೊರಬಂದಿತು. ಹಿಂದಿನ ಆವೃತ್ತಿಗಳಲ್ಲಿ ಸೇರಿರದ ಅವರ ಕೆಲವು ಪ್ರಮುಖ ಭಾಷಣಗಳು ಮತ್ತು ಬರಹಗಳನ್ನು, ಮತ್ತು 1958 ರ ನಂತರದ ಅವರ ಬಹುತೇಕ ಭಾಷಣಗಳು ಹಾಗೂ ಲೇಖನಗಳನ್ನು ಒಳಗೊಂಡ ಈ ವಿಸ್ತೃತ ಆವೃತ್ತಿಯನ್ನು ಅದ್ವೈತ ಆಶ್ರಮದ ಅನುಮತಿಯ ಮೇರೆಗೆ ಹೊರತರಲು ನಮಗೆ ಸಂತೋಷವಾಗುತ್ತಿದೆ.

ಸ್ವಾಮೀಜಿಯವರ ಭಾಷಣಗಳು ಮತ್ತು ಲೇಖನಗಳನ್ನುಳ್ಳ Eternal Values for a Changing Society ಎಂಬ ಶೀರ್ಷಿಕೆಯುಳ್ಳ ಈ ಸಂಪುಟವನ್ನು, ಅದರ ವಸ್ತು ಮತ್ತು ಪ್ರತಿಪಾದನೆಯ ದೃಷ್ಟಿಯಲ್ಲಿ, ಅವರದೇ ಇನ್ನೊಂದು ಕೃತಿಯಾದ The Message of the Upanisads ಎಂಬ ಕೃತಿಯ ಜೊತೆಸಂಪುಟವೆನ್ನಬಹುದು. The Message of the Upanisads ಎಂಬ ಕೃತಿಯನ್ನು ನಾವೇ ಪ್ರಕಟಿಸಿದ್ದೆವು. ಅದರ ಪರಿಷ್ಕೃತ ಎರಡನೆಯ ಆವೃತ್ತಿಯನ್ನು ಈ ಕೃತಿಯೊಂದಿಗೆ ಈಗ ಪ್ರಕಟಿಸುತ್ತಿದ್ದೇವೆ.

ಮೇ 1971

ಪ್ರಕಾಶಕರು

## ವಿಸ್ತೃತ ನಾಲ್ಕು ಸಂಪುಟಗಳ ನಾಲ್ಕನೆಯ ಆವೃತ್ತಿಗೆ ಬರೆದ ಮುನ್ನುಡಿ*

ರಾಮಕೃಷ್ಣ ಮಠದ ಹಿರಿಯ ಸಾಧುಗಳಾದ ಸ್ವಾಮಿ ರಂಗನಾಥಾನಂದರು ( ಜನನ 1908) ಭಾರತೀಯ ಪರಂಪರೆಯ ಆದರ್ಶ ಗುರುವಿನ ಪ್ರತೀಕ. ಆದಿ ಶಂಕರಾಚಾರ್ಯರು (788-820) ತಮ್ಮ ವಿವೇಕ ಚೂಡಾಮಣಿಯಲ್ಲಿ ಆದರ್ಶ ಗುರುವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ: ಶ್ರೋತ್ರಿಯೋ, ಅವೃಜಿನೋ, ಅಕಾಮಹತಃ, ಬ್ರಹ್ಮವಿತ್ತಮಃ ಶಾಂತಃ, ನಿರಿಂಧನ ಇವಾನಲಃ – ವೇದವಿದನು, ಪಾಪರಹಿತನು, ( ಇತರರ ಸೇವೆ ಮಾಡಬೇಕೆಂಬುದನ್ನು ಬಿಟ್ಟು) ಬೇರೆ ಯಾವುದೇ ಆಸೆ ಇಲ್ಲದವನು, ಭಗವದ್ಭಕ್ತನು, ಸುಟ್ಟ ನಂತರದ ಬೆಂಕಿಯಂತೆ ಶಾಂತನು.

ಸ್ವಾಮೀಜಿಯವರಲ್ಲಿ ಆಳವಾದ ವಿದ್ವತ್ತು ಮತ್ತು ಸಹಜವಾದ ನಮ್ರತೆಗಳು ಮೇಳವಿಸಿವೆ. ಇದು ಬುದ್ಧಿಶ್ರೀಮಂತಿಕೆಯ ಕುರುಹು.

ಸ್ವಾಮೀಜಿಯವರು ತಮ್ಮ ಸಹಜ ವಾಗ್ಮಿತೆಯಿಂದ ಭಾರತದ ಸನಾತನ ಸಂಸ್ಕೃತಿಯ ನಿರೂಪಣೆಯನ್ನು, ಭಾರತೀಯ ಶಾಸ್ತ್ರಗ್ರಂಥಗಳ ಆಳವಾದ ಪಾಂಡಿತ್ಯದಿಂದ, ಮಾನವ ವಿಷಯಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಪಾತ್ರಕ್ಕೆ ಸಲ್ಲಬೇಕಾದ ಸ್ಥಾನವನ್ನು ನೀಡಿ, ಜಗತ್ತಿನಾದ್ಯಂತ ಜನರನ್ನು ಮಂತ್ರಮುಗ್ಧರನ್ನಾಗಿಸುತ್ತಾರೆ. ಅವರು ವರ್ತಮಾನವನ್ನು ಬೆಳಗಲು ಭೂತಕಾಲದತ್ತ ತೋರಿಸುತ್ತಾರೆ. ವೇದಗಳ, ಉಪನಿಷತ್ತುಗಳ ಆಧ್ಯಾತ್ಮಿಕ ಧ್ಯೇಯೋದ್ದೇಶಗಳನ್ನು ಅವರು ಎತ್ತಿಹಿಡಿಯುತ್ತಾರೆ. ಆದರೆ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳ ಪ್ರಾಪಂಚಿಕ ಉಪಯೋಗಗಳನ್ನು ಅವರು ಜರಿಯುವುದಿಲ್ಲ. 'ಧರ್ಮವಿಲ್ಲದ ವಿಜ್ಞಾನ ಕುರುಡು, ವಿಜ್ಞಾನವಿಲ್ಲದ ಧರ್ಮ ಕುಂಟು' ಎಂದು ಒತ್ತಿಹೇಳಿದ ಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನರಂತೆ, ಸ್ವಾಮೀಜಿ ಆಧ್ಯಾತ್ಮಿಕತೆ ಮತ್ತು ವಿಜ್ಞಾನಗಳ ಸಮನ್ವಯವನ್ನು ಎತ್ತಿಹಿಡಿಯುತ್ತಾರೆ.

ಸ್ವಾಮೀಜಿಯವರ ಭಾರತೀಯ ಆಧ್ಯಾತ್ಮಿಕ ಮತ್ತು ಸಾಮಾಜಿಕ ಮೌಲ್ಯಗಳ ಪ್ರತಿಪಾದನೆಯು ಪ್ರಾಚೀನ ಮತ್ತು ಆಧುನಿಕ ಕೃತಿಗಳ ಆಳವಾದ ಅಧ್ಯಯನದಿಂದಲೂ, ಸಂನ್ಯಾಸಿಯಾಗಿ ತಾವು ಸಂಪಾದಿಸಿದ ವಾಸ್ತವಿಕ ಅನುಭವದಿಂದಲೂ ಬಂದಿದೆ. ಅವರು ಹದಿನೇಳೂವರೆ ವರ್ಷದವ-ರಾಗಿದ್ದಾಗ ರಾಮಕೃಷ್ಣ ಆಶ್ರಮಕ್ಕೆ ಸೇರಿದ್ದು, ಒಂಬತ್ತನೆಯ ಅಥವಾ ಹತ್ತನೆಯ ವಯಸ್ಸಿನಲ್ಲಿ ಸ್ವಪ್ನದಲ್ಲಿ ಬಿದ್ದ ದೈವೀಕರೆಗೆ ಓಗೊಟ್ಟು.

ಸ್ವಾಮೀಜಿಯವರ ಆಧ್ಯಾತ್ಮಿಕ ಕೊಡುಗೆಗಳನ್ನು ವಿಶ್ವದಾದ್ಯಂತ ಜನರು – ಬಡವರು ಬಲ್ಲಿದರು, ಪಂಡಿತರು ಪಾಮರರು, ಹಳ್ಳಿಗಾಡಿನವರು ನಗರವಾಸಿಗಳು ಎಲ್ಲರೂ – ಕಟ್ಟಾಸೆಯಿಂದ ಬಹಳವಾಗಿ ಅಪೇಕ್ಷಿಸುತ್ತಾರೆ:

ಸ್ವಾಮಿ ವಿವೇಕಾನಂದರ 'ಧರ್ಮವೆಂಬುದು ಖಾಲಿ ಹೊಟ್ಟೆಯವರಿಗಲ್ಲ' ಎಂಬ ಸೂಕ್ತಿಗೆ ತಕ್ಕಂತೆ, ಸ್ವಾಮಿ ರಂಗನಾಥಾನಂದರು ಲೋಕೋತ್ತರ ದೃಷ್ಟಿ ಹಾಗೂ ದಕ್ಷತೆಗಳಿಂದ ರಾಮಕೃಷ್ಣ ಮಠ

---

* ಭಾರತೀಯ ವಿದ್ಯಾಭವನ ಪ್ರಕಟಿಸಿರುವ ಈ ಕೃತಿಯ ಮುನ್ನುಡಿಯ ಕನ್ನಡ ಅನುವಾದ

ಮತ್ತು ಇತರ ಸ್ವಯಂಸೇವಾ ಸಂಘಗಳು ಏರ್ಪಡಿಸುವ ಬರಗಾಲ ಮತ್ತು ನೆರೆಪರಿಹಾರ ಸೇವೆಗಳಲ್ಲಿ ಯಾವಾಗಲೂ ಮುಂಚೂಣಿಯಲ್ಲಿರುತ್ತಾರೆ.

'ಜನಸೇವೆಯೇ ಜನಾರ್ದನ ಸೇವೆ' ಎಂಬುದನ್ನು ಎತ್ತಿಹಿಡಿಯುವ ದೇವದೂತರಾದ ಸ್ವಾಮೀಜಿಯವರು, ವೈದ್ಯಕೀಯ ನೆರವನ್ನು – ಅದರಲ್ಲೂ ಮುಖ್ಯವಾಗಿ ಕುಷ್ಠರೋಗಿಗಳಿಗೆ ಮತ್ತು ಹಳ್ಳಿಗಾಡಿನವರಿಗೆ ನೀಡುವಲ್ಲಿ ಪ್ರಶಂಸನೀಯ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ.

ಈಗ ನಾಲ್ಕು ಸಂಪುಟಗಳಲ್ಲಿ ಹೊರಬರುತ್ತಿರುವ Eternal Values for a Changing Society ಎಂಬುದು ಏಕಸಂಪುಟದ ಮೂಲಕೃತಿಯ ಪರಿಷ್ಕೃತ ಹಾಗೂ ವಿಸ್ತೃತ ನಾಲ್ಕನೆಯ ಆವೃತ್ತಿ. ಈ ಸಂಪುಟಗಳಲ್ಲಿ ಸ್ವಾಮೀಜಿಯವರ ಭಾಷಣಗಳು ಮತ್ತು ಲೇಖನಗಳು ಇವೆ. ಸಂಸ್ಕೃತಿ, ಧರ್ಮ, ವಿಜ್ಞಾನ, ತತ್ತ್ವಶಾಸ್ತ್ರ, ಶಿಕ್ಷಣ, ಆಡಳಿತ, ನಿರ್ವಹಣೆ ಮತ್ತು ಜೀವನಚರಿತ್ರೆ ಎಲ್ಲವೂ ಈ ಕೃತಿಯ ವ್ಯಾಪ್ತಿಯಲ್ಲಿವೆ.

ಸ್ವಾಮಿ ರಂಗನಾಥಾನಂದರ ಮೂಲಕ ಪಾಶ್ಚಾತ್ಯ ಮತ್ತು ಪೌರ್ವಾತ್ಯ ದೇಶಗಳ ವೇದಾಂತ ಪ್ರೇಮಿಗಳು, ಅದರಲ್ಲೂ ಮುಖ್ಯವಾಗಿ ಯೂರೋಪ್, ಅಮೆರಿಕ ಮತ್ತು ಆಸ್ಟ್ರೇಲಿಯಾದವರು ಧಾರಾಳವಾಗಿ ಧನಸಹಾಯ ಮಾಡಿದ್ದರಿಂದ ಈ ಕೃತಿಗೆ ಇಷ್ಟು ಕಡಿಮೆ ಬೆಲೆ ಇಡುವಂತಾಗಿದೆ. ಅವರಿಗೆಲ್ಲ ನಾವು ಋಣಿಗಳು.

ಮಾರ್ಚ್ 1, 1986 ಪ್ರಕಾಶಕರು

## ಪರಿವಿಡಿ

೧

# ಭಾರತ ಸಂಸ್ಕೃತಿಯ ಸಾರ*

## ೧. ಪ್ರಸ್ತಾವನೆ

ಭಾರತ ಸಂಸ್ಕೃತಿ ಎಂಬುದು ಪುಟ್ಟ ಭಾಷಣವೊಂದರಲ್ಲಿ ವಿಶದವಾಗಿ ವಿವೇಚಿಸಲು ಕಷ್ಟಕರವಾದ ವಿಷಯ. ಈ ಸಂಸ್ಕೃತಿಯ ಸುದೀರ್ಘ ಇತಿಹಾಸ, ಇದರ ವಿವಿಧ ರೂಪಗಳು, ಇದರ ಶ್ರೀಮಂತ ವೈವಿಧ್ಯ—ಇವನ್ನೆಲ್ಲಾ ಕುರಿತು ಕೇವಲ ಕೆಲವು ನಿಮಿಷಗಳಲ್ಲಿಯೇ ಹೇಳಿ ಮುಗಿಸುತ್ತೇನೆಂಬುದು ಕಷ್ಟಕರವಾದ ಕೆಲಸ. ವಿಷಯವೇನೋ, ಒಂದು ವಿಶೇಷ ಕಾರಣಕ್ಕಾಗಿ, ಬಹು ಸ್ವಾರಸ್ಯವಾದುದು. ಪ್ರಾಚೀನವಾದ ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಯಾವುದಾದರೊಂದು ಬಗೆಯ ಸ್ವಾರಸ್ಯ ನಮ್ಮಲ್ಲಿ ಎಲ್ಲರಿಗೂ ಉಂಟು ; ಆದರೆ ಅದು ಸಾರೋದ್ಧಾರವಾಗಿ ನಡೆದುಕೊಂಡು ಬಂದಿರುವ ಸಂಸ್ಕೃತಿಯಾಗಿದ್ದಾಗ, ಆ ಸ್ವಾರಸ್ಯ ಮತ್ತಷ್ಟು ಸಮಕಾಲಿಕವೂ ಪ್ರಸಕ್ತವೂ ಆದುದಾಗುತ್ತದೆ. ಬ್ಯಾಬಿಲೋನಿಯಾದವರ ಅಥವಾ ಈಜಿಪ್ಟಿನವರ, ಅಥವಾ ಗ್ರೀಕರದೇ ಆದರೂ ಕೂಡ, ಅಂತಹ ಪ್ರಾಚೀನ ಸಂಸ್ಕೃತಿಗಳನ್ನು ಅಧ್ಯಯನ ಮಾಡ ಹೊರಟಾಗ ಪುರಾತನಾನುಭವಗಳಿಂದ ಪ್ರಯೋಜನ ಪಡೆಯಬೇಕೆಂಬ ಐತಿಹಾಸಿಕ ದೃಷ್ಟಿಯೊಂದರಿಂದಲೇ ಹೆಚ್ಚಾಗಿ ನಾವು ಅವುಗಳನ್ನು ಅಧ್ಯಯನ ಮಾಡುತ್ತೇವೆ. ಆದರೆ ಭಾರತ ಸಂಸ್ಕೃತಿಯ ಅಧ್ಯಯನವು ಅಸಾಧಾರಣವಾದ ಅರ್ಥವನ್ನು ಒಳಗೊಂಡಿದೆ. ಏಕೆಂದರೆ, ಮಾನವ ಜನಾಂಗದ ಹತ್ತಿರ ಹತ್ತಿರ ೧/೭ ಭಾಗದ ಜನಜೀವನದಲ್ಲಿ ಅದು ಇಂದಿಗೂ ಜೀವಂತವಾಗಿರುವ ಒಂದು ಸಂಗತಿಯಾಗಿದೆ. ಈ ಸಂಸ್ಕೃತಿಯು ಈಗ ಸುಮಾರು ಐದು ಸಹಸ್ರ ವರ್ಷಗಳ ಕೆಳಗೆ ಹೇಗೆ ಉದಿಸಿತು, ಅಲ್ಲಿಂದ ಮುಂದಿನ ಶತಮಾನಗಳಲ್ಲಿ ಅದು ಹೇಗೆ ಬೆಳೆದು ಪುಷ್ಟಿಗೊಂಡಿತು, ಕೊನೆಗೆ ಮಾನವ ಜನಾಂಗದ ಅಮೂಲ್ಯವಾದ ಆಸ್ತಿಯಾಗಿ ಅದು ಹೇಗೆ ನಮಗೆ ಇಳಿದು ಬಂದಿದೆ—ಎಂಬುದು ಅತ್ಯಂತ ಚಿತ್ತಾಕರ್ಷಕವೂ, ಲಾಭದಾಯಕವೂ ಆದ ಅಧ್ಯಯನ ವಸ್ತುವಾಗಿದೆ.

## ೨. ಭಾರತೀಯ ಸಂಸ್ಕೃತಿ : ಒಂದು ಐತಿಹಾಸಿಕ ವಿಹಂಗಮ ನೋಟ

ಭಾರತ ಸಂಸ್ಕೃತಿಯು ಇತಿಹಾಸ ಪ್ರಸಿದ್ಧವಾದ ಒಂದು ದೃಶ್ಯ ಪರಂಪರೆ. ವಿಲ್ ಡ್ಯೂರಂಟನು ತನ್ನ (The Story of Civilization ಗ್ರಂಥದ vol 1, Oriental Heritage ; p. 391) ಎಂಬ ಭಾರತವನ್ನು ಕುರಿತ ಮೊದಲ ಪರಿಚ್ಛೇದದಲ್ಲಿ ಹೀಗೆ ಹೇಳುತ್ತಾನೆ :

---

*೧೯೬೪ರ ಡಿಸೆಂಬರ್‌ನಲ್ಲಿ ಕಲ್ಕತ್ತೆಯ ರಾಮಕೃಷ್ಣಮಿಶನ್ ಇನ್ಸ್ಟಿಟ್ಯೂಟ್ ಆಫ್ ಕಲ್ಚರ್‌ನಲ್ಲಿ ಮಾಡಿದ ಈ ಉಪನ್ಯಾಸ ಅದೇ ಇನ್‌ಸ್ಟಿಟ್ಯೂಟ್‌ನ ಬುಲೆಟಿನ್‌ನ ೧೯೬೫ರ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಇದಕ್ಕೂ ಮುಂಚೆ ನವದೆಹಲಿಯ ಭಾರತದ ಅಂತರರಾಷ್ಟ್ರೀಯ ಕೇಂದ್ರದಲ್ಲಿ ೧೯೬೪ರ ಸೆಪ್ಟೆಂಬರ್‌ನಲ್ಲಿ ಗಣ್ಯ ವ್ಯಕ್ತಿಗಳ ಸಭೆಯಲ್ಲಿ ಮಾಡಿದ ಉಪನ್ಯಾಸದ ವಿಷಯವಾಗಿತ್ತು.

*ಆಧುನಿಕ ವಿದ್ಯಾರ್ಥಿಗೆ ಭಾರತದ ವಿಚಾರದಲ್ಲಿರುವ ವಿಷಯಪರಿಜ್ಞಾನ ಕೇವಲ ಇತ್ತೀಚಿನದು, ಮತ್ತು ಅಸಮರ್ಪಕವಾದುದು. ಇದಕ್ಕಿಂತಲೂ ನಾಚಿಕೆಗೇಡಾದುದು ಮತ್ತೊಂದಿಲ್ಲ. ಹತ್ತಿರ ಹತ್ತಿರ ಎರಡು ದಶಸಹಸ್ರ ಚದರ ಮೈಲಿಗಳಷ್ಟು ವಿಸ್ತಾರವಾದ ಈ ಪರ್ಯಾಯ ದ್ವೀಪವು ಸಂಯುಕ್ತ ಸಂಸ್ಥಾನಗಳ ಮೂರನೇ ಎರಡರಷ್ಟು ವಿಸ್ತಾರವಾಗಿದೆ; ತನ್ನ ಸ್ವಾಮಿಯಾಗಿರುವ ಗ್ರೇಟ್ ಬ್ರಿಟನ್ನಿನ ಇಪ್ಪತ್ತರಷ್ಟು ಗಾತ್ರವುಳ್ಳದ್ದಾಗಿದೆ. ಅದರ ಜನಸಂಖ್ಯೆ ೩,೨೦,೦೦೦,೦೦೦. ಎಂದರೆ ಉತ್ತರ ಮತ್ತು ದಕ್ಷಿಣ ಅಮೆರಿಕಗಳೆರಡೂ ಸೇರಿಸಿದರೆ ಆಗುವುದಕ್ಕಿಂತಲೂ ಹೆಚ್ಚು; ಅಥವಾ ಅಖಂಡ ಭೂಮಂಡಲದ ಜನಸಂಖ್ಯೆಯಲ್ಲಿ ಐದನೆಯ ಒಂದು ಭಾಗ; ಕ್ರಿ.ಪೂ. ಎರಡು ಸಾವಿರದ ಒಂಭೈನೂರು ಅಥವಾ ಅದಕ್ಕೂ ಪ್ರಾಚೀನವಾದ ಮೊಹಂಜೊದಾರೋದಿಂದ ಹಿಡಿದು ಗಾಂಧಿ, ರಾಮನ್, ಟಾಗೂರರವರೆಗೆ ಪ್ರಭಾವಶಾಲಿಯಾಗಿ ಹರಿದು ಬಂದಿರುವ ಸತತವಾದ ಅದರ ಬೆಳವಣಿಗೆ ಮತ್ತು ನಾಗರಿಕತೆ; ಕೇವಲ ಬರ್ಬರವಾದ ವಿಗ್ರಹಪೂಜೆಯಿಂದ ಹಿಡಿದು ಅತ್ಯಂತ ಸೂಕ್ಷ್ಮವಾದ ಆಧ್ಯಾತ್ಮಿಕ ವಿಶ್ವದೇವತಾಭಾವದವರೆಗೆ ಪ್ರತಿಯೊಂದು ಘಟ್ಟವನ್ನೂ ಒಳಗೊಂಡ ಮತಧರ್ಮಗಳು; ಕ್ರಿಸ್ತನಿಗಿಂತಲೂ ಹಿಂದಿನ ಎಂಟು ಶತಮಾನಗಳಿಂದ ಹಿಡಿದು ಕ್ರಿಸ್ತಾನಂತರದ ಎಂಟನೇ ಶತಮಾನದ ಶಂಕರರವರೆಗೆ ಒಂದು ಏಕತತ್ತ್ವವಾದದ ಮೇಲೆ ಸಹಸ್ರ ರೀತಿಯ ವೈವಿಧ್ಯಗಳನ್ನು ಉಪನಿಷತ್ತುಗಳಲ್ಲಿ ಪ್ರತಿಪಾದಿಸಿರುವ ತತ್ತ್ವಜ್ಞಾನಿಗಳು; ಮೂರು ಸಹಸ್ರ ವರ್ಷಗಳ ಕೆಳಗೆ ಜ್ಯೋತಿಶ್ಶಾಸ್ತ್ರವನ್ನು ಬೆಳೆಸುವುದರಿಂದ ಹಿಡಿದು ನಮ್ಮ ಕಾಲದಲ್ಲಿಯೇ ನೋಬೆಲ್ ಬಹುಮಾನ ವಿಜೇತರಾಗಿರುವವರೆಗೆ ವಿಜ್ಞಾನಿಗಳು; ಗುರುತಿಸುವುದಕ್ಕೆ ಸಾಧ್ಯವಿಲ್ಲದಷ್ಟು ಪ್ರಪ್ರಾಚೀನ ಕಾಲದಲ್ಲಿಯೇ ಹಳ್ಳಿಗಳಲ್ಲಿದ್ದ ಪ್ರಜಾರಾಜ್ಯ ವ್ಯವಸ್ಥೆ ಮತ್ತು ರಾಜಧಾನಿಗಳಲ್ಲಿ ಅಶೋಕ ಅಕ್ಬರ್‌ನಂತಹ ವಿವೇಕಶಾಲಿಗಳೂ ದಯಾಮಯರೂ ಆದ ರಾಜರುಗಳು; ಸರಿಸುಮಾರು ಹೋಮರನಷ್ಟೇ ಪ್ರಾಚೀನರಾಗಿ ಮಹಾಕಾವ್ಯಗಳನ್ನು ಹಾಡುತ್ತಿದ್ದ ಚಾರಣರು ಮತ್ತು ಇಂದು ಜಗತ್ತೆಲ್ಲವನ್ನೂ ಶ್ರೋತೃಗಳನ್ನಾಗಿ ಮಾಡಿಕೊಂಡಿರುವ ಆಧುನಿಕ ಕವಿಗಳು; ಟಿಬೆಟ್ಟಿನಿಂದ ಸಿಲೋನಿನವರೆಗೂ, ಕಾಂಬೋಡಿಯಾದಿಂದ ಜಾವಾದವರೆಗೂ ಹಿಂದೂ ದೇವತೆಗಳಿಗಾಗಿ ದೈತ್ಯಾಕಾರದ ಗುಡಿಗಳನ್ನು ನಿರ್ಮಿಸಿದ ಅಥವಾ ಮೊಘಲ್ ರಾಜರಾಣಿಯರಿಗಾಗಿ ಪರಿಪೂರ್ಣ ಶ್ರೇಷ್ಠವಾದ ಅರಮನೆಗಳನ್ನು ಕೆತ್ತಿ ನಿಲ್ಲಿಸಿದ ಶಿಲ್ಪಿಗಳು—ಹೀಗೆ ತಾಳ್ಮೆಯ ಸ್ಥಿರ ಪ್ರಯತ್ನದಿಂದ ಸಂಪಾದಿಸಿಕೊಂಡು ಬಂದಿರುವ ಪಾಂಡಿತ್ಯವನ್ನು ಇಂದು ನಮ್ಮ ಕಣ್ಣೆದುರಿಗೆ ತಂದು, ತೆರೆದು ನಿಲ್ಲಿಸುವ ಭಾರತವೇ ಇದು. ನಿನ್ನೆ ಮೊನ್ನೆಯವರೆಗೂ ನಾಗರಿಕತೆ ಎಂಬುದು ಕೇವಲ ಯೂರೋಪಿಗೇ ಮೀಸಲಾದುದು ಎಂದು ಭಾವಿಸಿದ್ದ ಪಾಶ್ಚಾತ್ಯ ಮನಸ್ಸಿಗೆ ಇದು ಚಿರನೂತನವಾದ ಒಂದು ಪ್ರಾಜ್ಞ ಭೂಖಂಡದಂತೆ ಗೋಚರವಾಗುತ್ತದೆ.*

ವಿಶ್ವಸಂಸ್ಥೆಯ ಪ್ರೋತ್ಸಾಹದಿಂದ ಓರಿಯಂಟಲ್ ಲಾಂಗ್‌ಮನ್ಸ್‌ರವರು ಪ್ರಕಟಿಸಿರುವ "ಆಗ್ನೇಯ ಏಷ್ಯಾದ ಸಾಂಪ್ರದಾಯಿಕ ಸಂಸ್ಕೃತಿಗಳು" (Traditional cultures in South-East Asia) ಎಂಬ ಗ್ರಂಥವು ಸಂಸ್ಕೃತಿ ಎಂಬುದಕ್ಕೆ ಈ ಕೆಳಗಿನ ಸೂತ್ರಪ್ರಾಯವಾದ ವಿವರಣೆಯನ್ನು ಕೊಟ್ಟಿದೆ. ಯುನೆಸ್ಕೊ ವೃತ್ತಾಂತದ ೧೯೫೫ನೇ ಮೇ ತಿಂಗಳ ಸಂಚಿಕೆಯಲ್ಲಿ ಶ್ರೀಮಾನ್ ಕೆ. ಎ. ನೀಲಕಂಠಶಾಸ್ತ್ರಿಗಳು ಬರೆದಿರುವ The Future for Traditional Cultures ಎಂಬ ಲೇಖನದಲ್ಲಿ ಉದ್ಧರಿಸಿದುದು :

*ಯಾವುದಾದರೊಂದು ನಿರ್ದಿಷ್ಟವಾದ ಸಮಾಜದಲ್ಲಿ ಒಂದು ತಲೆಮಾರಿನಿಂದ ಮತ್ತೊಂದಕ್ಕೆ ಹರಿದುಬರುವ, ಸಮಗ್ರವಾಗಿ ಸಂಚಿತವಾಗಿರುವ ಲೌಕಿಕ ಆಶೋತ್ತರಗಳು, ಭಾವನೆಗಳು,*

*ಸಂಕೇತಗಳು, ನಂಬಿಕೆಗಳು, ಮನೋಭಾವಗಳು, ಮೌಲ್ಯಗಳು, ಸಾಮಾಜಿಕ ಪದ್ಧತಿಗಳು—ಇವೇ ಸಂಸ್ಕೃತಿ.*

ಸಂಸ್ಕೃತಿಯ ವಿಷಯವನ್ನು ವಾಸ್ತವಿಕ ಮತ್ತು ಮಾನಸಿಕ ಎಂದು ಎರಡು ವಿಧವಾಗಿ ವಿಂಗಡಿಸ ಬಹುದು. ಭಾರತ ಸಂಸ್ಕೃತಿಯನ್ನು ಈ ಎರಡು ದೃಷ್ಟಿಗಳಿಂದಲೂ ಅಧ್ಯಯನ ಮಾಡಬಹುದು. ಸಂಸ್ಕೃತಿಯೊಂದರ ಪ್ರಾರಂಭದ ಬೆಳವಣಿಗೆಯೆಲ್ಲಾ ಅದರ ಭೌತಿಕ ರೂಪಕ್ಕೆ ಸಂಬಂಧಿಸಿದು ದಾಗಿರುತ್ತದೆ. ಭಾರತದ ವಿಷಯದಲ್ಲಾದರೋ, ಅದರ ಸಂಸ್ಕೃತಿ ಎಲ್ಲಿ, ಯಾವ ಕಾಲದಲ್ಲಿ ಪ್ರಾರಂಭ ವಾಯಿತೆಂದು ಹೇಳುವುದೇ ಸಾಧ್ಯವಿಲ್ಲ. ಭಾರತದ ಇತಿಹಾಸದಲ್ಲಿ, ಅದರಲ್ಲಿಯೂ ನಾವು ಹಿಂದು ಹಿಂದಕ್ಕೆ ಹೋದಷ್ಟೂ ಕಾಲ ನಿರ್ಣಯ ಮಾಡುವುದು ಅತ್ಯಂತ ದುಷ್ಕರವಾದ ಕಾರ್ಯವಾಗುತ್ತದೆ. ಆದರೂ, ಇತಿಹಾಸಜ್ಞರೂ ಸಂಶೋಧನಾ ಕಾರ್ಯತತ್ಪರರೂ ತಾಳ್ಮೆಯಿಂದ ಶೇಖರಿಸಿರುವ ಆಧಾರ ಸಾಮಗ್ರಿಗಳಿಂದ ಇತಿಹಾಸದ ಅರುಣೋದಯದ ವೇಳೆಗಾಗಲೇ ಭಾರತೀಯರು ಅಭಿವೃದ್ಧಿ ರೂಪದ ಭೌತಿಕ ಸಂಸ್ಕೃತಿಯನ್ನು ಸಂಪಾದಿಸಿದರೆಂದು ನಮಗೆ ತಿಳಿದು ಬಂದಿದೆ. ಅವರ ಪ್ರಪ್ರಥಮ ಲಿಖಿತ ದಾಖಲೆಯಾದ ಋಗ್ವೇದವು—ಅದು ಮಾನವ ಜನಾಂಗದ ಮೊಟ್ಟಮೊದಲ ಲಿಖಿತ ದಾಖಲೆಯೂ ಆಗಿದೆ—ಆ ಕಾಲಕ್ಕಾಗಲೇ ವ್ಯವಸಾಯ ಜೀವನ, ಗ್ರಾಮ ಕೈಗಾರಿಕೆ, ಗ್ರಾಮಾಡಳಿತ ವ್ಯವಸ್ಥೆ ಇತ್ಯಾದಿ ಗಳಲ್ಲಿ ನಿರತವಾಗಿ ನೆಲೆ ನಿಂತಿರುವ ಜನಜೀವನ ಚಿತ್ರವನ್ನು ನಮಗೆ ನೀಡುತ್ತದೆ; ಹಾಗೂ ಜೀವನ, ಕಾವ್ಯ ಮತ್ತು ಯುದ್ಧ ಇವುಗಳಲ್ಲಿ ಜನರಿಗಿದ್ದ ಅಪಾರ ಪ್ರೇಮವನ್ನೂ ಅದರಲ್ಲಿ ಪ್ರದರ್ಶಿಸಿದೆ.

ಹೀಗೆ ಈ ಜನರ ಪ್ರಾಚೀನ ಲೌಕಿಕ ಸಂಸ್ಕೃತಿಯ ಪ್ರಾರಂಭ ದೆಶೆಯನ್ನು ಕುರಿತು ಹೇಳುವುದು ಪ್ರಯಾಸದ ಕೆಲಸ. ಮಹಾ ಮೇಧಾವಿಗಳಾದ ಹಲವು ಇತಿಹಾಸಜ್ಞರು ಸಿಂಧೂ ಕಣಿವೆಯ ನಾಗರಿಕತೆಯು ಋಗ್ವೇದಕ್ಕಿಂತಲೂ ಪ್ರಾಚೀನವಾದದ್ದೆಂದು ಹೇಳುತ್ತಾರೆ ; ಈ ಅಭಿಪ್ರಾಯವನ್ನೂ ಸ್ವೀಕರಿಸಿ, ಋಗ್ವೇದಕ್ಕಿಂತ ಇನ್ನೂ ಹಿಂದಕ್ಕೆ ಹೋಗಿ ನೋಡೋಣವೆಂದರೆ, ಆಗಲೂ ಕೂಡ ಇಲ್ಲಿನ ನಾಗರಿಕತೆಯು ನಮ್ಮನ್ನು ದಿಗ್ಭ್ರಾಂತಿಗೊಳಿಸುವಷ್ಟು ಅತ್ಯಂತ ಕೃತಕವಾದ ನಗರ ನಾಗರಿಕತೆಯಿಂದ ಕೂಡಿ ಪ್ರಗತಿಪರವಾದ ರೂಪದಿಂದ ದಿಗಂತದಲ್ಲಿ ಗೋಚರಿಸುತ್ತದೆ. ವಸ್ತು ಸ್ಥಿತಿ ಹೀಗಿರುವುದರಿಂದ ಭಾರತ ಸಂಸ್ಕೃತಿಯ ಪ್ರಪ್ರಥಮವಾದ ಪ್ರಾರಂಭದೆಸೆಯನ್ನು ಕುರಿತು ವಿವೇಚಿಸುವುದು ಬಹಳ ಕಷ್ಟ. ಆದರೆ ಒಂದು ವಿಷಯ ನಮಗೆ ಸ್ಪಷ್ಟವಾಗಿ ಹೊಳೆಯುತ್ತದೆ ; ಅದೆಂದರೆ ಮಾನವ ಇತಿಹಾಸದ ರಂಗಸ್ಥಳದಲ್ಲಿ ತನ್ನ ಪ್ರಥಮ ಪ್ರವೇಶವಾಗುವ ವೇಳೆಗಾಗಲೇ ಈ ಸಂಸ್ಕೃತಿಯು ಪುರಾತನವಾದ ಅನಾಗರಿಕ ಸ್ಥಿತಿಯನ್ನೆಲ್ಲಾ ಬಹು ಹಿಂದೆಯೇ ಕಳೆದು, ಮನಸ್ಸು ಬುದ್ಧಿಗಳಲ್ಲಿ ತುಂಬಾ ಮುಂದುವರಿದ ಸುಸ್ಥಿತಿಯನ್ನು ಪಡೆದಿದ್ದಂತಹ ಸಾಮಾಜಿಕ ವಿಕಾಸವನ್ನು ಪ್ರದರ್ಶಿಸುತ್ತದೆ. ಇತಿಹಾಸ ತಜ್ಞರು ಹಿಂದೂ ಆರ್ಯ ಎಂದು ಕರೆಯುವ ಋಗ್ವೇದಕಾಲದ ಭಾರತೀಯರು ಚೈತನ್ಯಪೂರ್ಣವಾದ ಜನಾಂಗ ವಾಗಿದ್ದರು ; ಗಾಢವಾದ ಧಾರ್ಮಿಕ ಪ್ರವೃತ್ತಿಯವರಾಗಿದ್ದರು ; ಅವರಿಗೆ ಸಾಕಷ್ಟು ವಿರಾಮವಿತ್ತು. ಈ ಸಂದರ್ಭ ಸನ್ನಿವೇಶಗಳು ಅವರ ಹೆಚ್ಚಿನ ಶಕ್ತಿಯನ್ನೆಲ್ಲಾ ಚಿಂತನಾ ಪ್ರಯೋಗಕ್ಕೆ ಬಳಸಲು ಪ್ರಚೋದನೆ ನೀಡಿದುವು.

ಜನರ ಒಂದು ತಂಡ ಬೇಸಾಯ ಕೈಗಾರಿಕೆಗಳಲ್ಲಿ ನೆಲೆಯಾಗಿ ನಿಂತು, ಪ್ರಾಪಂಚಿಕ ಸಂಸ್ಕೃತಿಯ ನೆಲೆಗಟ್ಟಿನಲ್ಲಿ ತಕ್ಕಮಟ್ಟಿಗೆ ಸ್ಥಿರತೆ ಮತ್ತು ಭದ್ರತೆಗಳನ್ನು ಪಡೆದು, ಸಾಕಷ್ಟು ವಿರಾಮ ಸಿಕ್ಕುವಂತಾ ದಾಗ, ಅವರು ತಮ್ಮ ಆ ವಿರಾಮ ಕಾಲವನ್ನು ಮಾನವನ ಅಂತರಂಗ ಜೀವನದ ಉನ್ನತ ಭೂಮಿಕೆ ಯಲ್ಲಿ ಪ್ರಾಯೋಗಿಸುವುದು ಸಹಜ ; ಇದರಿಂದ ಅವರ ಸಂಸ್ಕೃತಿಯ ಮತ್ತೊಂದು ಮುಖವಾದ ಮಾನಸಿಕ ಸಂಸ್ಕೃತಿ ಉದಯಿಸುತ್ತದೆ—ಎಂಬುದು ಮಾನವ ಶಾಸ್ತ್ರದಿಂದ ನಮಗೆ ತಿಳಿದುಬರುತ್ತದೆ. ಋಗ್ವೇದದ ಕಾಲಕ್ಕಾಗಲೇ ಈ ಮಾನಸಿಕ ಮತ್ತು ವೈಚಾರಿಕ ಜೀವನ ಕ್ರಿಯೆಗಳು ಸಾಹಿತ್ಯಕ್ಷೇತ್ರದಲ್ಲಿ

ಮಾತ್ರವೇ ಅಲ್ಲದೆ ಜಗತ್ತಿನ ಸ್ವರೂಪ, ಮಾನವ ಜೀವನದ ಉದ್ದೇಶ ಇತ್ಯಾದಿ ಸಮಸ್ಯೆಗಳನ್ನೊಳಗೊಂಡ ದಿಟ್ಟನಾದ ತಾತ್ವಿಕ ಜಿಜ್ಞಾಸಾಕ್ಷೇತ್ರದಲ್ಲಿಯೂ ತಲೆ ಎತ್ತಿಕೊಂಡು, ನಮ್ಮತ್ತ ದಿಟ್ಟಿಸುವುದನ್ನು ನಾವು ಕಾಣುತ್ತೇವೆ. ಭಾರತೀಯ ಜನಜೀವನದ ಬಹು ಪ್ರಾಚೀನಕಾಲವಾದ ಋಗ್ವೇದದ ಕಾಲದಲ್ಲಿ ಪ್ರಾರಂಭವಾದ ಈ ತಾತ್ತ್ವಿಕ ಮನೋಭಾವ ಮತ್ತು ಅಂತರ್ಮುಖ ಪ್ರವೃತ್ತಿಗಳು ಮುಂದಿನ ಶತಮಾನಗಳಲ್ಲಿ ವಿಸ್ತಾರವಾಗಿಯೂ ಮಹತ್ತಾಗಿಯೂ ಬೆಳೆದು, ಅನಂತರ ಅವೇ ಅಂತಿಮವಾಗಿ ಭಾರತ ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿ ಹೋಗುತ್ತವೆ.

### ೩. ವೈದಿಕ ವಿಶ್ವದೃಷ್ಟಿ

ವಿಸ್ತಾರವಾಗಿ, ವೈವಿಧ್ಯಮಯವಾಗಿರುವ ವೈದಿಕ ಸಾಹಿತ್ಯವು ಆ ಕಾಲದ ಭಾರತೀಯರ ಮನಸ್ಸು ಮತ್ತು ಪ್ರವೃತ್ತಿಗಳ ಸ್ವರೂಪವನ್ನು ನಮಗೆ ಸ್ಪಷ್ಟಪಡಿಸುತ್ತದೆ. ವೈದಿಕ ಯುಗದ ದಿವ್ಯ ಪ್ರತಿಭೆಯು ಉಪಾರ್ಜಿಸಿದ ಚಿಂತನಾಂಶ ಮತ್ತು ಸೂಕ್ಷ್ಮದೃಷ್ಟಿಗಳು ಮುಂದಿನ ಭಾರತೀಯ ಸಂಸ್ಕೃತಿ ಮತ್ತು ಭಾವನೆಗಳ ಬೆಳವಣಿಗೆಗೆಲ್ಲಾ ಅಸ್ತಿಭಾರ ಮತ್ತು ಪ್ರಚೋದನ ಶಕ್ತಿಗಳಾದುವು. ಭಾರತವನ್ನು ಶತಶತಮಾನಗಳ ಕಾಲ ಪೋಷಿಸಿಕೊಂಡು ಬಂದಿರುವ ಒಂದು ವಿಶ್ವದೃಷ್ಟಿಯನ್ನು ಅವು ಬಿಟ್ಟುಹೋಗಿವೆ ; ಅದು ಇಂದಿಗೂ ಚೈತನ್ಯದಾಯಕವಾಗಿದೆ.

ಭಾರತ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ನಾವು ಈ ವಿಶ್ವದೃಷ್ಟಿಯನ್ನು ಒಳಹೊಕ್ಕು ನೋಡಬೇಕು. ಪ್ರತಿಯೊಂದು ಸಂಸ್ಕೃತಿ ಮತ್ತು ನಾಗರಿಕತೆಗೂ ಅದರ ಹಿಂದೊಂದು ತತ್ತ್ವಜ್ಞಾನದ ಸ್ಫೂರ್ತಿ ಇರುತ್ತದೆ. ಒಂದು ಸಂಸ್ಕೃತಿಯ ಅಥವಾ ನಾಗರಿಕತೆಯ ಮನಸ್ಸನ್ನೂ ಮನೋಧರ್ಮವನ್ನೂ ಮತ್ತು ಕಾರ್ಯಗತಿಗಳನ್ನೂ ಸಮಗ್ರವಾಗಿ ಗ್ರಹಿಸಲು ಅದರ ತತ್ತ್ವಜ್ಞಾನವನ್ನು ಅರ್ಥಮಾಡಿಕೊಳ್ಳುವುದು ಆವಶ್ಯಕ. ಹೆಗಲ್‌ನು ಹೇಳುವಂತೆ "ತತ್ತ್ವಜ್ಞಾನದ ಆಧಾರವಿಲ್ಲದ ನಾಗರಿಕತೆಯು ಪಾವನಕೆ ಪಾವನವಾದ ದೇವರಿಲ್ಲದ ದೇಗುಲವಿದ್ದಂತೆ."

ಭಾರತ ಸಂಸ್ಕೃತಿಯು ತನ್ನ ಸುದೀರ್ಘ ಕಾಲಗತಿಯಲ್ಲಿ ಜೀವನದ ವಿವಿಧ ಮುಖಗಳಲ್ಲಿಯೂ ಮಟ್ಟಗಳಲ್ಲಿಯೂ ಪ್ರಯೋಗಗಳನ್ನು ನಡೆಸಿದೆ. ಜೀವನದ ಮೌಲ್ಯವಾವುದನ್ನೂ ಅದು ಕಡೆಗಣಿಸಿಲ್ಲವಾದರೂ ಇತರ ವಿಷಯಗಳಿಗಿಂತ ಕೆಲವಕ್ಕೆ ಮಾತ್ರ ಹೆಚ್ಚು ಗಮನವನ್ನು ಕೇಂದ್ರೀಕರಿಸಿದೆ. ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಕಲೆ, ವಿಜ್ಞಾನ, ಧರ್ಮ ಮತ್ತು ತತ್ತ್ವಶಾಸ್ತ್ರ—ಇವೆಲ್ಲವೂ ಅದರ ನೆರವಿನಿಂದ ಶ್ರೀಮಂತವಾಗಿವೆ; ಆದರೆ ಧರ್ಮ ಮತ್ತು ತತ್ತ್ವಶಾಸ್ತ್ರದ ಕ್ಷೇತ್ರಗಳಲ್ಲಿ ಅದು ನೀಡಿರುವ ಕೊಡುಗೆ ಅತ್ಯಂತ ಮಹತ್ತಾದುದು ಮತ್ತು ಅದ್ವಿತೀಯವಾದುದು. ಭಾರತೀಯರ ಸಂಸ್ಕೃತಿ ಮತ್ತು ಮನೋಭಾವಗಳು—ಕೆಲವು ಪಾಶ್ಚಾತ್ಯ ವಿದ್ವಾಂಸರು ಮಾಡಿರುವಂತೆ—ಹೆಚ್ಚು ಪಾರಲೌಕಿಕವೆಂದು ಭಾವಿಸುವುದು ವಸ್ತುಸ್ಥಿತಿಗೆ ವಿರುದ್ಧವಾಗುತ್ತದೆ. ಪಾರಲೌಕಿಕತೆ ಅತೀಂದ್ರಿಯತತ್ವಗಳು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣವೆಂಬುದರಲ್ಲಿ ಸಂದೇಹವೇನೂ ಇಲ್ಲ ; ಆದರೆ ಈ ಅತೀಂದ್ರಿಯತತ್ವದ ತಳಹದಿಯಲ್ಲಿ ನಿತ್ಯ ನೂತನವಾದ ಉತ್ಸಾಹ ಮತ್ತು ಈ ಉತ್ಸಾಹದಿಂದ ಅಭಿವ್ಯಕ್ತವಾಗುವ ಕಲೆ, ಸಾಹಿತ್ಯ, ಸಂಗೀತ ಮತ್ತು ನರ್ತನಗಳಿಂದ ಕೂಡಿದ ಐಹಿಕಜೀವನದ ಪ್ರೀತ್ಯಾದರಗಳು ದೃಢವಾಗಿಯೂ ಸ್ಪಷ್ಟವಾಗಿಯೂ ಇವೆ.

ಡಾ॥ ಬ್ರಜೇಂದ್ರನಾಥ ಸೀಲರು The Positive Science of the Ancient Hindus (1915) ಗ್ರಂಥದ ಉಪೋದ್ಘಾತ ಪು. ivರಲ್ಲಿ ಹೀಗೆ ಹೇಳುತ್ತಾರೆ :

*ಭೌತಿಕ ಘಟನೆಗಳನ್ನು ಪರೀಕ್ಷಿಸುವುದರಲ್ಲಾಗಲೀ, ಕೈಗಾರಿಕೆಯ ಪ್ರಯೋಗತಂತ್ರಕ್ಕೆ ಅಗತ್ಯವಾದ ನಿಷ್ಕೃಷ್ಟ ಜ್ಞಾನರಾಶಿಯನ್ನು ಬೆಳೆಸಿಕೊಂಡು ಬಂದಿರುವುದರಲ್ಲಾಗಲೀ ತಮ್ಮ*

*ಶಾಸ್ತ್ರಜ್ಞಾನವನ್ನೂ, ವೈಜ್ಞಾನಿಕ ವಿಧಾನಗಳನ್ನೂ ಬಳಸಿರುವುದರಲ್ಲಾಗಲೀ ಹಿಂದುಗಳು ಗ್ರೀಕರಿಗಿಂತ ಕಡಿಮೆಯೇನೂ ಅಲ್ಲ; ಅಲ್ಲದೆ ಹಿಂದುಗಳ ವೈಜ್ಞಾನಿಕ ಭಾವನೆಗಳೂ ಮತ್ತು ವಿಧಾನಶಾಸ್ತ್ರವೂ (ಉದಾ : ಬೀಜಗಣಿತದ ವಿಶ್ಲೇಷಣೆಯಲ್ಲಿನ ಅನುಮಿತ ವಿಧಾನ ಅಥವಾ ವಿಧಾನಗಳು) ಏಷ್ಯಾ ಖಂಡದಲ್ಲಿ—ಪ್ರಾಚ್ಯ ಪಾಶ್ಚಾತ್ಯಗಳೆರಡರಲ್ಲಿಯೂ—ಚೀನಾ ಜಪಾನುಗಳಲ್ಲಿ ಮತ್ತು ಸಿರಿಯಾ ಅರೇಬಿಯಾ ಚಕ್ರಾಧಿಪತ್ಯಗಳಲ್ಲಿಯೂ ಕೂಡ ಪ್ರಾಕೃತಿಕ ತತ್ತ್ವಜ್ಞಾನದ ಬೆಳವಣಿಗೆಯ ಮೇಲೆ ಆಳವಾದ ಪ್ರಭಾವವನ್ನು ಬೀರಿವೆ.*

ಭಾರತವು ಸಂಪದ್ಭರಿತವಾದ ದೇಶ, ತತ್ತ್ವಜ್ಞಾನಪರಿಪೂರ್ಣವಾದ ದೇಶ—ಎಂದು ಹೊರದೇಶಗಳಲ್ಲಿ ಕೀರ್ತಿಯನ್ನು ಗಳಿಸಿಕೊಂಡು ಬಂದಿದೆ; ಭಾರತದೊಡನೆ ವ್ಯಾಪಾರವನ್ನೂ ಮತ್ತು ಅದರ ಚಿಂತನೆ ಭಾವನೆಗಳ ಸಂಪರ್ಕವನ್ನೂ ಪರದೇಶದವರು ತುಂಬ ಬಯಸುತ್ತಿದ್ದರು. ಈ ಎಲ್ಲ ಸಂಗತಿಗಳಿಂದ ಸ್ಪಷ್ಟವಾಗುವುದೇನೆಂದರೆ ಹೊರಗಿನ ಅಡ್ಡಿ ಆತಂಕಗಳನ್ನು ಹೋರಾಟಗಳಿಂದ ನಿವಾರಿಸಿಕೊಳ್ಳುವವನಾಗಿಯೂ, ಸಮಾಜ ಜೀವನ ಮತ್ತು ವ್ಯಕ್ತಿ ಜೀವನದಲ್ಲಿ ಸುಖಭೋಗಗಳನ್ನು ಬಯಸುವವನಾಗಿಯೂ ಇರುವ ಮಾನವನಲ್ಲಿ ಪ್ರಾಚೀನ ಭಾರತದ ಜನತೆ ಅಪಾರವಾದ ಆಸಕ್ತಿಯನ್ನು ವಹಿಸಿತ್ತು. ಸಂಸ್ಕೃತಿಯ ಈ ಮುಖವು ಋಗ್ವೇದ ಕಾಲದ ಭಾರತದಲ್ಲಿ ನಮಗೆ ಪ್ರಧಾನವಾಗಿ ಕಂಡುಬರುತ್ತದೆ. ಮುಂದಿನ ಯುಗಗಳಲ್ಲಿ ಹೊಸ ಹೊಸ ಭಾವನೆಗಳು ಮೂಡಿ ಬೆಳೆಯುತ್ತಾ ಹೋದಂತೆ ಇದು ದ್ವಿತೀಯ ಸ್ಥಾನಕ್ಕೆ ಇಳಿಯಿತು. ಆದರೂ ಅದರ ಸುದೀರ್ಘ ಇತಿಹಾಸದ ಯಾವ ಕಾಲದಲ್ಲಿಯೂ ಅದನ್ನು ನಿಷ್ಪ್ರಯೋಜಕ ವಸ್ತುವೆಂದು ಕಡೆಗಣಿಸಲಿಲ್ಲ.

## ೪. ಹಿಂದೂ ಆರ್ಯರ ಚಿಂತನೆ ಮತ್ತು ಮನೋವೃತ್ತಿ

ಈ ಸಂಸ್ಕೃತಿಯ ಸೃಷ್ಟಿಕರ್ತರಾದ ಹಿಂದೂ ಆರ್ಯರು ತಾರುಣ್ಯ, ಉಲ್ಲಾಸ, ಚೈತನ್ಯ ಮತ್ತು ತೀವ್ರಾಸಕ್ತಿಗಳಿಂದ ತುಂಬಿತುಳುಕುತ್ತಾ ದೃಢಾಂಗರಾಗಿದ್ದ ಜನಾಂಗವಾಗಿತ್ತೆಂಬ ಸುಂದರ ಚಿತ್ರವೊಂದನ್ನು ಋಗ್ವೇದವು ನಮ್ಮ ಕಣ್ಣಿಗೆ ಕಟ್ಟುತ್ತದೆ. ಅವರಿಗೆ ಬಾಳು ಪ್ರಿಯವಾಗಿತ್ತು, ಅವರು ದುಡಿಯಲು ಸಮರ್ಥರಾಗಿದ್ದರು; ಕಾವ್ಯಸೃಷ್ಟಿಯಲ್ಲಿಯೂ, ಕೆಲ ಕಾಲಾನಂತರ ತತ್ತ್ವಶಾಸ್ತ್ರದಲ್ಲಿಯೂ ಅವರು ಸ್ವಾಭಾವಿಕವಾದ ಅನುರಕ್ತಿಯುಳ್ಳವರಾಗಿದ್ದರು. ಋಗ್ವೇದದ ವಾತಾವರಣದಲ್ಲಿ ಎಲ್ಲಿಯೂ ನಿರಾಶಾವಾದದ ಸೋಂಕು ಕೂಡ ಇಲ್ಲ. ಅತೀಂದ್ರಿಯ ವಿಷಯಗಳು ನಿಸ್ಸಂದೇಹವಾಗಿಯೂ ಅದರಲ್ಲಿವೆ, ನಿಜ. ಆದರೆ ಸತ್ತ ಮೇಲೆ ಸ್ವರ್ಗಕ್ಕೆ ಹೋಗಬೇಕೆಂಬ ಉತ್ಕಟೇಚ್ಛೆಯೊಂದನ್ನು ಬಿಟ್ಟರೆ, ಅತೀಂದ್ರಿಯವಾದ ಮತ್ತಾವುದಕ್ಕೂ ಹಲುಬಿ ಹಂಬಲಿಸುವಂತಹ ಸೂಚನೆಯೂ ಅಲ್ಲಿಲ್ಲ. ಅವರು ಬಯಸುವ ಈ ಸ್ವರ್ಗವೆಂಬುದು ಕೂಡ ಮರ್ತ್ಯದ ಇಂದ್ರಿಯಸುಖಗಳ ಒಂದು ಆದರ್ಶ ಸ್ವರೂಪ ಮಾತ್ರ. ಅದೂ ಈ ಕೆಳಲೋಕದ ನೀರಸ ಜೀವನದಿಂದ ಸ್ವಾಗತಾರ್ಹವಾದ ಒಂದು ಬದಲಾವಣೆ ಮಾತ್ರ. ಋಗ್ವೇದ ಕಾಲದ ಭಾರತೀಯರು ಲೌಕಿಕ ಪ್ರೇಮಿಗಳಾಗಿದ್ದುದರಲ್ಲಿ ಮುಚ್ಚುಮರೆ ಏನೂ ಇಲ್ಲ. ಅದಕ್ಕಾಗಿ ಅವರು ಪಾಶ್ಚಾತ್ತಾಪ ಪಡತಕ್ಕವರಾಗಿಯೂ ಇರಲಿಲ್ಲ. ಈ ವಿಚಾರದಲ್ಲಿ ಅವರು ನಮ್ಮ ಸಮಕಾಲೀನ ನಾಗರಿಕ ಜನರನ್ನು ನಿಕಟವಾಗಿ ಹೋಲುತ್ತಾರೆ. ಇಬ್ಬರೂ ಪ್ರತ್ಯಕ್ಷ ಪ್ರಮಾಣವಾದಿಗಳು, ಪ್ರತ್ಯಕ್ಷಪ್ರಮಾಣದ ಆಶಯಗಳಿಗೆ ಅನುಕೂಲವಾಗುವಂತೆ ಅವರು ಧರ್ಮವನ್ನು ಕೂಡ ಬಗ್ಗಿಸುತ್ತಾರೆ.

ಆದರೆ ಹಿಂದೂ ಆರ್ಯರು ದೈಹಿಕಸುಖ ಮಾತ್ರದಿಂದಲೇ ಜೀವನದಲ್ಲಿ ತೃಪ್ತಿಗೊಳ್ಳುವವರಾಗಿರಲಿಲ್ಲ. ಅವಿಶ್ರಾಂತವಾಗಿ, ಕ್ರಿಯಾಶೀಲವಾಗಿದ್ದ ಅವರ ಮನಸ್ಸು ಕೇವಲ ಸುಖಜೀವನದಿಂದ ಬಹುಕಾಲ ಸಂತೃಪ್ತವಾಗಿರುವುದು ಸಾಧ್ಯವಿರಲಿಲ್ಲ. ಭೌತಿಕವಾಗಿಯೂ ಸಾಮಾಜಿಕವಾಗಿಯೂ ತಮ್ಮ

ಭದ್ರತೆಯನ್ನು ಸಾಧಿಸುತ್ತಲೇ, ಅವರ ಆಲೋಚನಾಲಹರಿ ಆಳವಾದ ಮಂಥನಕ್ಕೆ ಸಿಕ್ಕಿ ಹಲವು ಸಮಸ್ಯೆಗಳ ಅನುಭವವಾಗತೊಡಗಿತು. ಇದು ಮೆಲ್ಲಮೆಲ್ಲನೆ ಮುಂದುವರಿದು ಅದುವರೆಗೆ ಕೇವಲ ಸರಳವಾದ ಆಶಾವಾದವಾಗಿದ್ದ ಅವರ ಹಿಂದಿನ ತತ್ತ್ವಶಾಸ್ತ್ರದಲ್ಲಿ ನಂಬಿಕೆ ತಪ್ಪಿ ವಿಚಾರ ಪ್ರಪಂಚದ ವಿಶಾಲ ದಿಗಂತಗಳಿಗೂ ಅನುಭವದ ಆಳಕ್ಕೂ ಅವರು ಮುನ್ನುಗ್ಗುವಂತೆ ಮಾಡಿತು. ವೇದಯುಗದ ಕೊನೆಯ ವೇಳೆಗೆ ಭಾರತ ಇತಿಹಾಸವು ಉಪನಿಷತ್ತುಗಳ ಮೂಲಕ ತನ್ನ ಅತ್ಯಂತ ಸೃಜನಶೀಲಯುಗಕ್ಕೆ ಕಾಲಿಟ್ಟಿತು. ಅಲ್ಲಿಂದ ಮುಂದಿನ ಭಾರತ ಇತಿಹಾಸವನ್ನೆಲ್ಲಾ ಕುರಿತು ಹೇಳುವುದಾದರೆ, ಅದು ಅತ್ಯಂತ ನಿರ್ಣಾಯಕವಾದುದೂ ವ್ಯಾಪಕವಾದುದೂ ಆಗಿದೆ. ಉಪನಿಷತ್ತುಗಳೇ ಮನುಷ್ಯನ ಚಿಂತನಾ ಚೇತನದ ಶಿಖರವನ್ನೇರಿ ಆ ಉನ್ನತ ಪ್ರದೇಶದಿಂದ ಕೆಳಗಿನ ಅನುಭವ ಜಗತ್ತನ್ನೆಲ್ಲಾ ಸಮೀಕ್ಷಿಸುತ್ತಿರುವುದನ್ನು ನಾವು ಕಾಣುತ್ತೇವೆ.

### ೫. ಹಿಂದೂ ಆರ್ಯರು ಬಿಟ್ಟುಹೋಗಿರುವ ತತ್ತ್ವಜ್ಞಾನದ ಆಸ್ತಿ

ಹಿಂದೂ ಆರ್ಯರ ಮನಸ್ಸಿನಲ್ಲಿ ನೆಲಸಿದ್ದ ವೈಚಾರಿಕ ಮನೋವೃತ್ತಿಯು ಅವರನ್ನು ತಮ್ಮ ಅನುಭವಗಳ ಶೋಧನೆಗೂ, ಸುತ್ತಮುತ್ತಿನ ಪರಿಸರದ ಸಂಶೋಧನೆಗೂ, ತಮ್ಮ ದೇವರುಗಳ ಮತ್ತು ಪರಂಪರೆಯಾಗಿ ಬಂದಿರುವ ಧಾರ್ಮಿಕ ಶ್ರದ್ಧೆ, ಸಿದ್ಧಾಂತಗಳ ಪರಿಶೋಧನೆಗೂ ಪ್ರಚೋದಿಸಿತು ; ತಮ್ಮ ಯೋಚನೆ ತರ್ಕಸಮ್ಮತವಾಗಿದ್ದು, ಯಾವುದಾದರೊಂದು ವಿಷಯವು ತರ್ಕಸಮ್ಮತವಾದ ತೀರ್ಮಾನಕ್ಕೆ ಸಾಧ್ಯವಿಲ್ಲದುದಾಗಿದ್ದರೆ ಅಂತಹ ವಿಷಯದ ವಿಚಾರದಲ್ಲಿ ತಮ್ಮ ಸಂದೇಹವನ್ನು ಸೂಚಿಸಲು ಅವರು ಹಿಂದೆಗೆಯುತ್ತಿರಲಿಲ್ಲ. ನಾಸ್ತಿಕವಾದದ ಸೃಜನಶೀಲ ಪಾತ್ರದಲ್ಲಿ ಅವರು ಸತ್ಯವನ್ನು ಸೋದಾಹರಣವಾಗಿ ವಿವರಿಸಿ ತೋರಿಸುತ್ತಾರೆ; ಸತ್ಯಾನುಸಂಧಾನದಲ್ಲಿ ಅಂತಹ ನಾಸ್ತಿಕವಾದವು ತರ್ಕಸಮ್ಮತವಾದ ಧಾರ್ಮಿಕ ಶ್ರದ್ಧೆಗೆ ಅಗತ್ಯವಾದ ಒಂದು ಪೂರ್ವ ರಂಗ. ಬಾಹ್ಯ ಪ್ರಪಂಚದ ಸತ್ಯವನ್ನು ಅವರು ಅನ್ವೇಷಣೆ ಮಾಡಹೊರಟಾಗ ಅದು ಅವರನ್ನು ದಿಗ್ಭ್ರಾಂತರನ್ನಾಗಿ ಮಾಡಿತು; ವಿಚಾರ ಮಾಡಿದಷ್ಟೂ ಅದರ ರಹಸ್ಯವು ಗಹನವಾಗುತ್ತಾ ಹೋಯಿತು. ಈ ರಹಸ್ಯ ಪ್ರಶ್ನೆಯಿಂದ ಹಿಂದೂ ಆರ್ಯರ ಮನಸ್ಸಿನ ಮೇಲೆ ಆದ ಸಂಘಟನೆಯು ಋಗ್ವೇದದ ನಾಸದೀಯ ಸೂತ್ರದಲ್ಲಿ ಒಡೆದು ಮೂಡಿದೆ. ಜ್ಞಾನವು ಎಷ್ಟೇ ಮುಂದುವರಿಯಲಿ, ಅದು ಅಂತರಂಗ ಜಗತ್ತಿನ ರಹಸ್ಯವನ್ನು ಭೇದಿಸಿದ ಹೊರತು ಬಾಹ್ಯ ಜಗತ್ತಿನ ರಹಸ್ಯವು ಸ್ವಲ್ಪವೂ ಕಡಿಮೆಯಾಗದೆ ಮತ್ತಷ್ಟು ಗಹನವಾಗುತ್ತಾ ಹೋಗುತ್ತದೆ ಎಂಬುದು ಆ ಹಿಂದೂ ಆರ್ಯರ ಮನಸ್ಸಿಗೆ ಬಹುಬೇಗ ಗೋಚರವಾಯಿತು. ಇದನ್ನು ಆಧುನಿಕ ವಿದ್ವಾಂಸರು ಈಗೀಗ ನಿಧಾನವಾಗಿ ಕಂಡುಕೊಳ್ಳುತ್ತಿದ್ದಾರೆ. ಸತ್ಯ ಸ್ವರೂಪದ ಸಂಪೂರ್ಣ ತತ್ತ್ವಜ್ಞಾನಕ್ಕಾದರೂ ಬಹಿರಂಗ ಮತ್ತು ಅಂತರಂಗ ಇವೆರಡೂ ಜಗತ್ತುಗಳ ಅನುಭವ ವಿವೇಚನೆಯ ಆಧಾರ ಅಗತ್ಯ.

ಬಾಹ್ಯ ಪ್ರಕೃತಿಯ ತಾತ್ವಿಕ ಜ್ಞಾನವನ್ನು ರೂಪಿಸುವಾಗ ಇಂದ್ರಿಯಗಳಿಂದ ಪಡೆದ ಆಧಾರಗಳನ್ನು ನಾವು ಅವಲಂಬಿಸುತ್ತೇವೆ ; ಪ್ರಾರಂಭದಲ್ಲಿ ಈ ಆಧಾರಗಳನ್ನು ಅವಲಂಬಿಸಿ ಹೊರಡುತ್ತೇವೆ ಯಾದರೂ ಬಹುಬೇಗ ಯುಕ್ತಿಯುಕ್ತವಾದ ಅನುಮಾನದ ರೆಕ್ಕೆಯನ್ನೇರಿ, ಆ ಆಧಾರಗಳನ್ನು ಮೀರಿ ಮುಂದೆ ಹೋಗುವುದು ಅನಿವಾರ್ಯವಾಗುತ್ತದೆ. ಪ್ರಾಚೀನ ಭಾರತೀಯರು ವಿಶ್ವಶಾಸ್ತ್ರದ ಕ್ಷೇತ್ರದಲ್ಲಿ ಕಟ್ಟಿರುವ ವೈಚಾರಿಕ ಕಲ್ಪನೆಗಳು ದಿಟ್ಟತನದಿಂದ ಕೂಡಿ ನಿರ್ಭೀತವಾಗಿವೆ ; ಅಲ್ಲದೆ, ಆಧುನಿಕ ವಿಜ್ಞಾನವು ವಿಶ್ವಶಾಸ್ತ್ರದಲ್ಲಿ ಮಾಡಿಕೊಂಡಿರುವ ವಿವೇಚನಾ ಕಲ್ಪನೆಗಳನ್ನು ಅವು ನಿಕಟವಾಗಿ ಹೋಲುತ್ತವೆ; ಆಧುನಿಕ ವಿಜ್ಞಾನಿಗಳಂತೆ ಪ್ರಾಚೀನ ಭಾರತದ ವಿಜ್ಞಾನಿಗಳೂ ಅಖಂಡ ಬ್ರಹ್ಮಾಂಡದ ಹಿನ್ನೆಲೆಯಲ್ಲಿ ಸ್ವಯಂ ವಿಕಸನಶೀಲವಾದ ಕಾರಣವೊಂದು ಇರುವುದಾಗಿ ನಂಬಿದ್ದರು. ಭಾರತೀಯ

ತತ್ತ್ವಜ್ಞರು ಕಾರ್ಯಕಾರಣಗಳಲ್ಲಿ ಅನನ್ಯತ್ವವನ್ನು ಪ್ರತಿಪಾದಿಸುವುದು ಇದಕ್ಕೊಂದು ಮುಖ್ಯವಾದ ಉಪಸಿದ್ಧಾಂತ; ಕಾರ್ಯವೆಂಬುದು ಕಾರಣದ ಮತ್ತೊಂದು ರೂಪ ಮಾತ್ರ; ಕಾರ್ಯವೆಂಬುದು ಸ್ಥೂಲ ರೂಪ, ಅದರ ಸೂಕ್ಷ್ಮರೂಪವೇ ಕಾರಣ; ನಿಸರ್ಗದ ಎಲ್ಲ ವಸ್ತುಗಳೂ, ಎಲ್ಲ ಘಟನೆಗಳೂ, ಮಾನವನು ಕೂಡ ಈ ಕಾರ್ಯ-ಕಾರಣಗಳ ಗತಿಗೆ ಅಧೀನ. ಈ ಜಗತ್ತಿನಲ್ಲಿ ಸ್ವೇಚ್ಛೆಯಾಗಿಯೇ ಆಗಲೀ, ಆಕಸ್ಮಿಕವಾಗಿಯೇ ಆಗಲಿ ಯಾವುದೂ ನಡೆಯುವುದಿಲ್ಲ. ತರ್ಕಬದ್ಧವಾದ, ವಸ್ತು ನಿಷ್ಠವಾದ ವೈಜ್ಞಾನಿಕ ಪರೀಕ್ಷೆಯಿಂದ ಮಾನವನು ಘಟನೆಗಳ ಕಾರಣ ಅಥವಾ ಕಾರಣಗಳನ್ನು ಕಂಡುಹಿಡಿದು ನಿಸರ್ಗದ ಕಾರ್ಯಗತಿಗಳ ಮೇಲೆ ಹತೋಟಿಯನ್ನು ಪಡೆಯಬಲ್ಲನು.

ಇವೆರಡರ ನಡುವೆ ನಿಕಟ ಬಾಂಧವ್ಯವಿರುವ ಎರಡನೆಯ ಅಂಕವೆಂದರೆ ವಿಕಾಸವಾದದ ಕಲ್ಪನೆ. ವಿಶ್ವವೆಂಬುದು ವಿಕಾಸರೂಪದ ಕಾರ್ಯಗತಿಯಿಂದ ಹುಟ್ಟಿದುದು; ಅದು ವಿಶ್ವದಿಂದ ಬೇರೆಯಾದ ದಿವ್ಯಶಕ್ತಿಯಿಂದ ಸೃಷ್ಟಿಯಾದುದಲ್ಲ ಎಂಬ ತತ್ತ್ವವನ್ನು ಹಿಂದೂ ಆರ್ಯರು ನಿರೂಪಿಸಿದರು. ವಿಶ್ವವಿಕಾಸದಲ್ಲಿ ಮಾತ್ರವೇ ಅಲ್ಲದೆ ಜೀವವಿಕಾಸದಲ್ಲಿಯೂ ಅವರಿಗೆ ನಂಬಿಕೆಯಿತ್ತು. ಜಗತ್ತು ಸ್ಥಗಿತವಾದುದಲ್ಲ, ಕ್ರಿಯಾತ್ಮಕವಾದುದು; ವಿಶ್ವಶಕ್ತಿಯು ಅವ್ಯಕ್ತರೂಪದಿಂದ ವ್ಯಕ್ತ ರೂಪಕ್ಕೆ ಹರಿದು ಬರುತ್ತದೆ. ಪ್ರಕೃತಿಯ ವಿಚಾರದಲ್ಲಿದ್ದ ಅವರ ಭಾವನೆ ಆಧುನಿಕ ವಿಜ್ಞಾನದ ಭಾವನೆಗಿಂತಲೂ ಹೆಚ್ಚು ವ್ಯಾಪಕವಾಗಿತ್ತು. ಭೌತ ಮತ್ತು ಜೀವವಿಜ್ಞಾನಗಳನ್ನು ಮಾತ್ರವೇ ಅಲ್ಲದೆ ಅನುಭವ ಜಗತ್ತಿನ ಭೌತಿಕ ಮತ್ತು ಆಧ್ಯಾತ್ಮಿಕ ಮುಖಗಳನ್ನು ಅದು ಒಳಗೊಂಡಿತ್ತು.

ಭಾರತೀಯರ ಭಾವನೆಯಲ್ಲಿ ಪ್ರಕೃತಿಗೆ ಅತೀತವಾದ ಕಲ್ಪನೆಗೆ ಸ್ಥಾನವಿಲ್ಲವೆಂಬುದು ಹೋಲಿಕೆಯ ಮೂರನೆ ಅಂಶ. ಮನಸ್ಸು ಮತ್ತು ಭೌತವಸ್ತು, ಪ್ರಾಕೃತಿಕ ಮತ್ತು ಅಪ್ರಾಕೃತಿಕ—ಇವುಗಳ ಪರಸ್ಪರ ಸಂಬಂಧವೆಂಬುದು ಆಧುನಿಕ ಪಾಶ್ಚಾತ್ಯರ ವಿವೇಚನೆಯಲ್ಲಿ ಒಂದು ವಿಶಿಷ್ಟ ಲಕ್ಷಣವಾಗಿದೆ ; ಆದರೆ ಇದು ಭಾರತೀಯರ ವಿವೇಚನೆಯಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ನಾಲ್ಕನೆಯದಾಗಿ, ಆಧುನಿಕ ಚಿಂತನೆಯಲ್ಲಿ ಕ್ರಾಂತಿಕಾರಕ ಸಂಶೋಧನೆಗಳೆನಿಸಿರುವ ಶಕ್ತಿಸಂಚಯನ ಮತ್ತು ವಸ್ತು-ಶಕ್ತಿಗಳ ಏಕತೆ ಎಂಬ ತತ್ತ್ವಗಳು ಭಾರತೀಯರ ತಾತ್ತ್ವಿಕ ಚಿಂತನೆಯ ಅಖಂಡಾಂಶ ವಾಗಿವೆ. ಐದನೆಯದಾಗಿ, ವಿಶ್ವದ ಕಾಲ ದೇಶಗಳ ಅನಂತತೆ, ಅವೆರಡರ ಪರಸ್ಪರ ಸಾಪೇಕ್ಷತೆ ಎಂಬುವು ಪ್ರಾಚೀನ ಭಾರತದ ಚಿಂತನೆಗೂ ಆಧುನಿಕ ವಿಜ್ಞಾನದ ಚಿಂತನೆಗೂ ಇರುವ ಹೋಲಿಕೆಯ ಮತ್ತೊಂದು ಮುಖ್ಯಾಂಶ.

ಪ್ರಾಚೀನ ಭಾರತ ವಿದ್ವಾಂಸರ ವೈಚಾರಿಕಾಸಕ್ತಿಯನ್ನು, ಊಹಾ ಸಾಹಸವನ್ನು ತೋರಿಸಲು ಈ ಕೆಲವು ಉದಾಹರಣೆಗಳು ಸಾಕು. ಉಪನಿಷತ್ತುಗಳಲ್ಲಿ ಅವರ ಮನಸ್ಸಿನ ಚಿಂತನೆಗಳ ಸಕೃದ್ದರ್ಶನವಾಗುತ್ತದೆ. ಧರ್ಮಾಂಧತೆಯ ಹಿಂಸೆಗಾಗಲೀ, ರಾಜಕೀಯ ದಬ್ಬಾಳಿಕೆಗಾಗಲೀ, ಕೊನೆಗೆ ಸಾರ್ವಜನಿಕಾಭಿಪ್ರಾಯದ ಒತ್ತಡಕ್ಕಾಗಲೀ ಅವರು ಸೊಪ್ಪು ಹಾಕಲಿಲ್ಲ; ಏಕಾಗ್ರನಿಷ್ಠೆಯ ಭಕ್ತಿಯಿಂದ ಅವರು ಸತ್ಯಾನ್ವೇಷಣಾತತ್ಪರರಾಗಿದ್ದರು. ಇಂತಹ ನಿಷ್ಠೆ ಚಿಂತನೆಯ ಇತಿಹಾಸದಲ್ಲಿ ಅಪೂರ್ವ. ಮ್ಯಾಕ್ಸ್‌ಮುಲ್ಲರರ ಮಾತಿನಲ್ಲಿ (Six Systems of Indian Philosophy p. 182) ಹೇಳುವುದಾದರೆ—

*ಪ್ರಾಚೀನ ಗಾಥಿಕ್ ಶೈಲಿಯ ಎತ್ತರವಾದ ತೂಗುಗೋಪುರದ ತುತ್ತತುದಿಯ ಮೆಟ್ಟಿಲುಗಳನ್ನು ಸುತ್ತಿಕೊಂಡು ಏರುವಾಗ ಅನುಭವವಾಗುವಂತೆ ಯಾವ ತಾತ್ತ್ವಿಕ ದರ್ಶನ ಪದ್ಧತಿಯ ಸಾಧನೆಯ ಮಹೋನ್ನತ್ಯದ ದರ್ಶನ ಪಡೆದಾಗ ಯಾರಿಗಾದರೂ ತಲೆ ತಿರುಗಿ ಹೋಗುವುದೋ ಅಂತಹ ವೇದಾಂತ ದರ್ಶನವನ್ನು ಸಹಸ್ರಾರು ವರ್ಷಗಳ ಹಿಂದೆಯೇ ಅವಿಶ್ರಾಂತರೂ ಧೀರರೂ ಆದ ಭಾರತೀಯರು ಸಾವಕಾಶವಾಗಿ, ವಿಸ್ತಾರವಾಗಿ ಬೆಳೆಸಿರುವುದು ನಿಶ್ಚಯವಾಗಿಯೂ*

*ದಿಗ್ಭ್ರಮೆಗೊಳಿಸುವ ಅದ್ಭುತವೇ ಸರಿ. ಬಿರುಗಾಳಿ ಸಿಡಿಲುಗಳಿಗೆ ಜಗ್ಗದಂತೆ ಅಂಥ ಒಂದು ಗೋಪುರವನ್ನು ನಮ್ಮ ತತ್ವಜ್ಞಾನಿಗಳಲ್ಲಿ ಹಿರಾಕ್ಲಿಟಸ್, ಪ್ಲೇಟೋ, ಕ್ಯಾಂಟ್, ಕೊನೆಗೆ ಹೆಗಲ್ ಸಹ—ಯಾರೂ ನಿರ್ಮಿಸುವ ಸಾಹಸ ಮಾಡಿಲ್ಲ. ನಾವು ಅದನ್ನು ಆತ್ಮವೆಂದು ಕರೆಯಲಿ, ಬ್ರಹ್ಮವೆಂದು ಕರೆಯಲಿ, ಒಂದು ಮಾತ್ರ ಇರಬಲ್ಲುದೆಂದು ಆರಂಭದಲ್ಲಿ ಒಮ್ಮೆ ಸ್ಪಷ್ಟವಾಗಿ ಗೋಚರವಾದ ಮೇಲೆ ಕಡೆಯಲ್ಲಿಯೂ ಆ ಒಂದೇ ಇರುವುದರಿಂದ ಮೊದಲ ಮೆಟ್ಟಲು ನಿರ್ಮಾಣವಾಗುತ್ತಲೇ ಒಂದಾದಮೇಲೊಂದರಂತೆ ಆ ಕಲ್ಲುಗಳ ಕಟ್ಟಡವು ಕ್ರಮಬದ್ಧವಾಗಿ ಬೆಳೆದುಕೊಂಡು ಹೋಗುತ್ತದೆ."*

### ೭. ಉಪನಿಷತ್ತುಗಳು ಮತ್ತು ಆಧುನಿಕ ವಿಜ್ಞಾನ ಚಿಂತನೆ

ಉಪನಿಷತ್ತುಗಳಲ್ಲಿ ವಿಚಾರಗಳ ಪರಸ್ಪರ ಸಂಘರ್ಷಣೆಯಿಂದ ಹೆಚ್ಚು ಸಮಂಜಸವಾದ ವಿಚಾರವು ಉದಯವಾಗುವುದನ್ನೂ, ಅಷ್ಟು ಸಮಾಧಾನಕರವಲ್ಲದ ವಿಚಾರಗಳು ಸ್ವಲ್ಪವೂ ದುಗುಡ ವಿಲ್ಲದೆ ನಿರಾಕೃತವಾಗುವುದನ್ನೂ ನಾವು ಅಧ್ಯಯನ ಮಾಡಬಹುದು. ಆಧಾರ ಕಲ್ಪನೆಗಳನ್ನು ಸ್ವೀಕರಿಸುವುದಾಗಲಿ, ನಿರಾಕರಿಸುವುದಾಗಲಿ, ಕೇವಲ ಅನುಭವದ ಒರೆಗಲ್ಲಿನ ಮೇಲೆ ಉಜ್ಜಿ ನೋಡಿಯೇ ಹೊರತು ಮತ ತತ್ತ್ವಗಳ ಆದೇಶಕ್ಕೆ ತಲೆ ಬಾಗಿಯೇನೂ ಅಲ್ಲ. ಹೀಗೆ ನಾವು ಜೀವಿಸು ತ್ತಿರುವ ಈ ಜಗತ್ತಿನ ರಹಸ್ಯವನ್ನು ಭೇದಿಸುವಲ್ಲಿ ತತ್ತ್ವಚಿಂತನೆಯು ಅಗ್ರಗಾಮಿಯಾಗುತ್ತದೆ. ಈ ಮಹಾ ಸಾಹಸಕ್ಕೆ ಜ್ಞಾನಿಗಳಾದ ಬಹು ಸ್ವಲ್ಪ ಜನ ಮಾತ್ರ ಕೈಹಾಕಿದರು ; ಅವರಿಗೆ ಸತ್ಯ ಸಾಕ್ಷಾತ್ಕಾರದಲ್ಲಿಯೂ ಮಾನವ ಕಲ್ಯಾಣದಲ್ಲಿಯೂ ಅಪಾರವಾದ ಆಸಕ್ತಿ ಇತ್ತು. ಕಲ್ಪನಾ ಕ್ಷೇತ್ರದಲ್ಲಿ ಅವರು ಏನನ್ನು ಸಾಧಿಸಿದರೋ ಅದು ಆಧುನಿಕ ಯುಗದಲ್ಲಿ ಅತ್ಯಂತ ಮುಂದುವರಿದ ವೈಜ್ಞಾನಿಕ ವಿಶ್ವಶಾಸ್ತ್ರದೊಡನೆ ಹೆಗಲೆಣೆಯಾಗಿ ನಿಲ್ಲಬಲ್ಲದೆಂಬುದು ಆಶ್ಚರ್ಯಕರವಾದುದೇನೂ ಅಲ್ಲ.

ಆದರೆ ಚಿಂತನಾಶೀಲರಾದ ಭಾರತೀಯರು ತಮ್ಮ ಬೌದ್ಧಿಕ ಕಲ್ಪನೆಗಳಷ್ಟರಿಂದಲೇ ತೃಪ್ತರಾಗ ಲಿಲ್ಲ. ಇಂದು ಆಧುನಿಕ ವಿಜ್ಞಾನಿಗಳು ಕಂಡುಹಿಡಿಯುತ್ತಿರುವಂತೆ ಅವರೂ ಕೂಡ, ಇಷ್ಟೆಲ್ಲಾ ತತ್ತ್ವವಿವೇಚನಾಜ್ಞಾನವಿದ್ದರೂ ಜಗತ್ತಿನ ವಿಷಯ ಮಾತ್ರ ರಹಸ್ಯವಾಗಿಯೇ ಉಳಿಯುವುದೆಂಬು ದನ್ನು ಕಂಡುಕೊಂಡಿದ್ದರು; ಆ ಜ್ಞಾನ ಮುಂದುವರೆದಷ್ಟೂ ರಹಸ್ಯವು ಮಾತ್ರ ಗಾಢತರವಾಗುತ್ತಲೇ ಹೋಗುತ್ತದೆ. ಗಾಢವಾದ ಆ ವಿಶ್ವರಹಸ್ಯದಲ್ಲಿ ಮಾನವ ರಹಸ್ಯವು ಒಂದು ಪ್ರಮುಖವಾದ ಅಂಗ ವಾಗಿದೆ. ಉಪನಿಷತ್ತುಗಳಿಗೆ ಈ ಸತ್ಯ ಗೊತ್ತಾಗಿತ್ತು. ಇಪ್ಪತ್ತನೇ ಶತಮಾನದ ಭೌತವಿಜ್ಞಾನದಲ್ಲಿ ಒತ್ತಿಒತ್ತಿ ಹೇಳಿರುವ ಕೇಂದ್ರ ಸತ್ಯವೂ ಇದೇ ; ಮಿಕ್ಕೆಲ್ಲ ರಹಸ್ಯಗಳಿಗೂ ಬೀಗದ ಕೈಯನ್ನು ತನ್ನ ಕೈಯಲ್ಲಿಯೇ ಇಟ್ಟುಕೊಂಡಿರುವ ಮಾನವನೇ ಈ ಎರಡರಲ್ಲಿಯೂ ಅತ್ಯಂತ ಮಹತ್ತಾದ ರಹಸ್ಯವಾಗಿದ್ದಾನೆ.

ಈ ತಿಳಿವಳಿಕೆ ಮೂಡುತ್ತಲೇ ಪ್ರಾಚೀನ ಭಾರತದ ತತ್ತ್ವಶಾಸ್ತ್ರವು ನೂತನವೂ ಕ್ರಾಂತಿಕಾರಕವೂ ಆದ ಮಾರ್ಗವೊಂದನ್ನು ಹಿಡಿಯಿತು ; ಕಲ್ಪನಾಶೀಲವಾಗಿದ್ದ ಅದು ಪ್ರಯೋಗಾತ್ಮಕವಾಯಿತು. ಬಾಹ್ಯ ಜಗತ್ತು ಅನುಭವಕ್ಷೇತ್ರಕ್ಕೆ ಬರುವುದು ಇಂದ್ರಿಯಗೋಚರವಾಗುವುದರಿಂದ ಮಾತ್ರ ಸಾಧ್ಯ. ಇದು ಅಖಂಡ ಸತ್ಯದ ಒಂದು ಸಣ್ಣ ಅಂಶ ಮಾತ್ರ. ಅದಕ್ಕೂ ಆಚೆ ಇಂದ್ರಿಯಕ್ಕೆ ಅಗೋಚರವಾದ ಅನಂತ ವಿಸ್ತಾರವಿದೆ. ಇಪ್ಪತ್ತನೆಯ ಶತಮಾನದ ಭೌತವಿಜ್ಞಾನವು ಇಂದ್ರಿಯ ಗೋಚರವಾಗಬಲ್ಲ ಜಗತ್ತಿಗೆ ಮಾತ್ರ ಸೀಮಿತವಾಗಿದೆ. ಆದರೆ ದೃಶ್ಯಮಾನವಾದ ಜಗತ್ತಿನ ಅನ್ವೇಷಣೆಗಾಗಿ ಕಲೆಹಾಕಿದ ಆಧಾರಾಂಶಗಳಲ್ಲಿ ದ್ರಷ್ಟುವಿನ ನಿತ್ಯಸಿದ್ಧವಾದ ತತ್ತ್ವವೂ ಸೇರಿರುತ್ತದೆಂಬುದೂ ಅದಕ್ಕೆ ಗೊತ್ತಿರು ತ್ತದೆ. ಆಧುನಿಕ ವಿಜ್ಞಾನವು ದೃಶ್ಯಮಾನದ ಆಧಾರದಿಂದ ಅದೃಶ್ಯಮಾನದಲ್ಲಿ ಇಣಿಕಿ ನೋಡಲು

ಪ್ರಯತ್ನವನ್ನೇನೋ ಮಾಡುತ್ತಿದೆ ; ಆದರೆ ಅಂತಹ ಪ್ರಯತ್ನಗಳೆಲ್ಲಾ ಕಲ್ಪನೆಯನ್ನು ಬೆನ್ನುಹತ್ತುವ ಸಾಹಸಗಳಾಗಿದ್ದು, ರಹಸ್ಯವನ್ನು ಮತ್ತಷ್ಟು ಅಗ್ರಾಹ್ಯವಾಗಿ ಮಾಡುತ್ತವೆ. ಸರ್ ಜೇಮ್ಸನ ಮಾತುಗಳಲ್ಲಿ ಹೇಳುವುದಾದರೆ (The New Background of Science. p. 68) :

*ಭೌತವಿಜ್ಞಾನವು ಭೌತವಸ್ತುಗಳಿಂದಲೂ ಶಕ್ತಿಪ್ರಸರಣದಿಂದಲೂ ಕೂಡಿದ ಜಗತ್ತನ್ನು ಅಧ್ಯಯನ ಮಾಡಲು ಹೊರಟಿದೆ ; ಆದರೆ ಅವೆರಡರಲ್ಲಿ ಯಾವುದೊಂದರ ಸ್ವರೂಪವನ್ನೂ ಅದು, ತನಗೆ ತಾನೇ ಕೂಡ, ವರ್ಣಿಸುವುದಕ್ಕಾಗಲೀ ಚಿತ್ರಿಸುವುದಕ್ಕಾಗಲೀ ಸಾಧ್ಯವಿಲ್ಲ ವೆಂಬುದನ್ನು ಕಂಡುಕೊಂಡಿದೆ. ಭೌತವಿಜ್ಞಾನಿಗೆ ಫೋಟಾನ್ಸ್, ಎಲೆಕ್ಟ್ರಾನ್ಸ್ ಮತ್ತು ಪ್ರೊಟಾನ್ಸ್ ಎಂಬ ಮಾತುಗಳು ಬೀಜಗಣಿತವನ್ನು ಮೊದಲ ದಿನ ಕಲಿಯಹೊರಟ ಬಾಲಕನಿಗೆ ಎಕ್ಸ್-ವೈ-ಜಡ್ ಎಂಬಿವು ಹೇಗೋ ಹಾಗೆ ಅರ್ಥಹೀನವಾಗಿವೆ. ಎಕ್ಸ್ ವೈ ಜಡ್ ಎಂದರೇನೆಂಬುದನ್ನು ತಿಳಿಯದೆಯೇ ಅವುಗಳನ್ನು ಬಳಸುವ ವಿಧಾನಗಳನ್ನು ತಿಳಿದುಕೊಂಡರೆ ಸಾಕೆನ್ನುವುದಷ್ಟೇ ನಮ್ಮ ದೊಡ್ಡ ಹಾರೈಕೆ. ಹೀಗಾಗಿ, ಈಗ ಸಧ್ಯಕ್ಕೆ ನಮ್ಮ ಜ್ಞಾನೋತ್ಕರ್ಷವೆಂಬುದು, ಐನ್‌ಸ್ಟೀನ್ ವರ್ಣಿಸಿರುವಂತೆ ಒಂದು ಅಜ್ಞೇಯದಿಂದ ಮತ್ತೊಂದು ಅಜ್ಞೇಯವನ್ನು ಹಿಂಡಿ ಹೊರತೆಗೆಯುವ ಕಾರ್ಯವಾಗಿ ಪರಿಣಮಿಸಿದೆ.*

ಇಂದ್ರಿಯಗೋಚರವಾಗಿರುವ ಮತ್ತು ಗೋಚರವಾಗಬಲ್ಲ ಆಧಾರಾಂಶಗಳಲ್ಲಿ ದ್ರಷ್ಟೃವಿನ ಆಧಾರಾಂಶವೂ ಇದೆಯೆಂಬುದರ ಅರ್ಥವೇನು ? ತಾತ್ತ್ವಿಕ ಮತ್ತು ವಾಸ್ತವಿಕ—ಈ ಎರಡು ದೃಷ್ಟಿಗಳಿಂದಲೂ ಬಾಹ್ಯಜಗತ್ತಿಗಿಂತ ಮಹತ್ತರವಾದ ರಹಸ್ಯವೊಂದನ್ನು ಕಣ್ಮರೆ ಮಾಡುತ್ತಿರುವಂತೆ ಕಾಣಿಸುತ್ತಿರುತ್ತದೆ. ಅನಾತ್ಮದ ಪ್ರಜ್ಞೆಯಿಂದ ಆತ್ಮವು ಬಿಡಿಸಲಾಗದ ಸಮಸ್ಯೆಯಾಗಿ ಹೋಗಿದ್ದರೆ ಆತ್ಮದ ಸ್ವರೂಪವನ್ನು ಕುರಿತು ವಿವೇಚನೆ ಮಾಡಬೇಕಾದುದು ನ್ಯಾಯವಾದ ಅಗತ್ಯವಷ್ಟೇ ಅಲ್ಲ, ಅನಿವಾರ್ಯವಾದ ವೈಜ್ಞಾನಿಕಾನ್ವೇಷಣೆಯೂ ಆಗುತ್ತದೆ. ಬಾಹ್ಯಜಗತ್ತಿನ ನಮ್ಮ ಜ್ಞಾನದಲ್ಲಿ ಮನಸ್ಸು ಜ್ಞಾತೃವಾಗಿ ಸೇರಿಕೊಂಡಿದ್ದರೆ ಮನಸ್ಸಿನ ಸ್ವಭಾವವನ್ನೂ ಜ್ಞಾನದ ಸ್ವರೂಪವನ್ನೂ ವಿಚಾರಮಾಡ ಹೊರಡುವುದು ಸತ್ಯಸ್ವರೂಪದ ವೈಜ್ಞಾನಿಕ ಪರೀಕ್ಷೆಯ ಸಮಗ್ರ ಭಾಗವೇ ಆಗುತ್ತದೆ. ಸರ್ ಆರ್ಥರ್ ಎಡ್ಡಿಂಗ್‌ಟನ್ನನು ( Philosophy of Physical Science. p. 5) ಹೀಗೆ ಹೇಳುತ್ತಾನೆ :

*ನಮ್ಮ ಜ್ಞಾನಾನ್ವೇಷಣೆಯ ಸಾಧನೆಯಲ್ಲಿ ನಾವು ಅಪೇಕ್ಷಿಸುವ ಜ್ಞಾನದ ಸ್ವಭಾವವನ್ನು ಅರಿತುಕೊಳ್ಳುವುದು ನಿಜವಾಗಿಯೂ ಒಂದು ಸಹಾಯವೇ ಎಂಬುದನ್ನು. ನಾವು ಕಂಡುಕೊಂಡಿದ್ದೇವೆ.*

ಲಿಂಕನ್ ಬಾರ್ನೆಟ್ (The Universe and Dr. Einstein. pp. 126-127) ಹೀಗೆ ಹೇಳುತ್ತಾನೆ :

*ವೈಜ್ಞಾನಿಕ ವಿವೇಚನೆಯ ವಿಕಾಸದಲ್ಲಿ ಒಂದು ವಿಚಾರ ಮನದಟ್ಟುವಂತೆ ಸುಸ್ಪಷ್ಟವಾಗಿದೆ. ತನ್ನನ್ನೂ ಮೀರಿಸಿದ ರಹಸ್ಯದತ್ತ ಕೈದೋರದ ಭೌತಿಕ ಜಗತ್ತಿನ ರಹಸ್ಯವಾವುದೂ ಇಲ್ಲ. ಬುದ್ಧಿಯ ಎಲ್ಲ ರಾಜಮಾರ್ಗಗಳೂ, ತಾತ್ತ್ವಿಕ ವಿಚಾರದ ಎಲ್ಲ ಸೀಳುದಾರಿಗಳೂ ಕಟ್ಟಕಡೆಗೆ ಕೊಂಡೊಯ್ಯುವುದು ಮಾನವ ಕೌಶಲದಿಂದ ಎಂದೆಂದಿಗೂ ದಾಟಲಾರದಂತಹ ಒಂದು ಪ್ರಪಾತಕ್ಕೇ. ಏಕೆಂದರೆ ತನ್ನ ಅಸ್ತಿತ್ವದ ಒಂದು ವ್ಯವಸ್ಥೆಯೇ—ತನ್ನ ಪರಿಮಿತಿ ಮತ್ತು ಪ್ರಕೃತಿ ಸಂಸಕ್ತತೆಯ ಜಟಿಲತೆ—ಮಾನವನನ್ನು ಬಂಧಿಸಿದೆ. ಅವನು ತನ್ನ ಕಾರ್ಯದಿಗಂತವನ್ನು ವಿಸ್ತರಿಸಿದಷ್ಟೂ, ಭೌತವಿಜ್ಞಾನಿ ನೀಲ್ಸ್‌ಬೋರ್ ಹೇಳುವಂತೆ "ನಮ್ಮ ಜೀವನ ಮಹಾ ನಾಟಕದಲ್ಲಿ ನಾವು ಪ್ರೇಕ್ಷಕರೂ ನಟರೂ ಎರಡು ಆಗಿದ್ದೇವೆ" ಎಂಬ ಮಾತಿನ ಸತ್ಯತೆಯನ್ನು*

*ಹೆಚ್ಚು ಹೆಚ್ಚು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುತ್ತಾನೆ. ಹೀಗೆ ಮಾನವನು ತಾನೇ ತನ್ನ ರಹಸ್ಯತಮ ವಸ್ತುವಾಗಿದ್ದಾನೆ. ತನ್ನನ್ನು ತಾನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವಾದ ಕಾರಣ ತಾನು ಬಂದು ಬಿದ್ದಿರುವ ಈ ಮಾಯೆಯ ಮುಸುಕಿನ ವಿಶಾಲ ಜಗತ್ತು ಅವನಿಗೆ ಅರ್ಥವಾಗುತ್ತಿಲ್ಲ. ತನ್ನ ಜೀವದ ಕಾರ್ಯಗತಿಯೇ ಅವನಿಗೆ ಅರ್ಥವಾಗುತ್ತಿಲ್ಲ ; ತನ್ನ ಸುತ್ತಿನ ಜಗತ್ತನ್ನು ಅರ್ಥ ಮಾಡಿಕೊಳ್ಳುವುದಕ್ಕಾಗಲೀ ವಿವೇಚಿಸುವುದಕ್ಕಾಗಲೀ ಅಥವಾ ಕಲ್ಪನೆ ಕಟ್ಟಿಕೊಳ್ಳುವುದಕ್ಕಾಗಲೀ ಅವನಿಗಿರುವ ವಿಶಿಷ್ಟವಾದ ಯೋಗ್ಯತೆ ಮತ್ತಷ್ಟು ಕಡಿಮೆಯೇ ಸರಿ. ದೇಹೇಂದ್ರಿಯಾತೀತನಾಗಿ ತನ್ನನ್ನು ತಾನು ಮೀರುವ ಮತ್ತು ದರ್ಶನ ಕ್ರಿಯೆಯಲ್ಲಿ ಸಾಕ್ಷಿಯಾಗಿ ತನ್ನನ್ನು ತಾನೇ ನೋಡ ಬಲ್ಲ ಅತ್ಯಂತ ಉದಾತ್ತವೂ ಗೂಢವೂ ಆದ ಧೀಶಕ್ತಿಯನ್ನಂತೂ ಅವನು ಅರ್ಥಮಾಡಿ ಕೊಳ್ಳುವುದು ಸರ್ವಥಾ ಅಸಾಧ್ಯವೇ ಸರಿ.*

## ೭. ಮಾನವ ರಹಸ್ಯದ ಸವಾಲು

ಮಹಾವಿಜ್ಞಾನಿಗಳು ನಮ್ಮ ಮುಂದಿಡುವ ಈ ಹಲವಾರು ವಿವೇಚನೆಗಳಿಂದ, ಭೌತವಿಜ್ಞಾನವು ತಾತ್ವಿಕವಾಗಿ ಮಾನವನ ಆತ್ಮದ ಮಹಾದ್ಭುತ ರಹಸ್ಯವನ್ನು ನೇರವಾಗಿಯೇ ಎದುರಿಸಬೇಕೆಂಬುದು ಸ್ಪಷ್ಟವಾಗಿಯೇ ಇದೆ. ಆಧುನಿಕ ಜೀವ ವಿಜ್ಞಾನಿಗಳಲ್ಲಿಯೂ ಇದೇ ಸ್ಥಿತಿ ಕಂಡುಬರುತ್ತದೆ. ವಿಕಾಸವಾದವೆಂಬುದು ಇಂದು ವಿಶ್ವವ್ಯಾಪಿಯಾದ ಅಸಾಧಾರಣ ವಿದ್ಯಮಾನವೆಂದು ಭಾವಿಸಲಾಗಿದೆ. ಅವ್ಯಕ್ತದ ಒಡಲಿನಿಂದ ವಿಭಕ್ತವಾದ ವಿಶ್ವದ ಕಡೆ ಹರಿಯುತ್ತಿರುವ ಒಂದು ಚಲನೆಯನ್ನು ಪ್ರಕೃತಿಯು ಪ್ರಕಾಶಪಡಿಸುತ್ತಿದೆ. ವಿಶ್ವವಿಕಾಸವು ಮೊದಲು ಜೈವಿಕ ಮಟ್ಟಕ್ಕೇರಿ ಆಮೇಲೆ ಅದು ಮತ್ತೆ ಮಾನವ ಮಟ್ಟಕ್ಕೇರುತ್ತದೆ. ಅದ್ಭುತವಾದ ಈ ವಿಕಾಸಕಾರ್ಯವು ನಮಗೆ ಯಾವ ರಹಸ್ಯವನ್ನು ಬೋಧಿಸು ತ್ತದೆ ? ಹತ್ತೊಂಭತ್ತನೆಯ ಶತಮಾನದಲ್ಲಿ ಈ ವಿಷಯವನ್ನು ಹೆಚ್ಚು ಆಳವಾಗಿ ಚರ್ಚಿಸಲಿಲ್ಲ. ಆ ಶತಮಾನದ ಪ್ರಾಮುಖ್ಯತೆ ಇರುವುದು ವಿಕಾಸವಾದದ ಸತ್ಯಾಂಶವನ್ನು ಸ್ಥಾಪಿಸುವುದರಲ್ಲಿ. ವ್ಯವಸ್ಥಿತವಾದ ದೇವತಾಶಾಸ್ತ್ರ ಸಿದ್ಧಾಂತದ ದೃಢಶಕ್ತಿ ಮತ್ತು ಪೂರ್ವಗ್ರಹಪೀಡಿತವಾದ ಪ್ರಬಲ ವಿರೋಧ—ಇವುಗಳನ್ನು ಎದುರಿಸಿ ಹೋರಾಡುವುದರ ಮೂಲಕವೇ ಸಾಧಿಸಬೇಕಾಯಿತು. ಡಾರ್ವಿನ್ನನ ಅಮರಗ್ರಂಥಗಳಾದ (Origin of the Species and Descent of Man) "ತಳಿಗಳ ಮೂಲ" ಮತ್ತು "ಮಾನವನ ಅವತರಣ"ಗಳು ಪ್ರಕಟವಾಗಿ ಈಗ ನೂರು ವರ್ಷಗಳಿಗೂ ಮೇಲಾಗಿವೆ. ಅಂದಿನಿಂದ ಇಂದಿನವರೆಗೆ ಪ್ರಾಣಿಶಾಸ್ತ್ರವು—ಅದರಲ್ಲಿಯೂ ವಿಕಾಸದ ಗತಿಯನ್ನು ಕುರಿತು ಬಹುಮುಖ್ಯವಾಗಿಯೂ, ವಿಕಾಸದ ಮಹತ್ವವನ್ನು ಕುರಿತು ಸ್ವಲ್ಪಮಟ್ಟಿಗೂ ನಡೆದಿರುವ ಅಧ್ಯಯನದಲ್ಲಿ—ತುಂಬ ಮುಂದುವರಿದಿವೆ.

ಡಾರ್ವಿನ್ನನ 'ತಳಿಗಳ ಮೂಲ' ಗ್ರಂಥ ಪ್ರಕಟಣೆಯ ಸ್ಮಾರಕವಾಗಿ ಶತಮಾನೋತ್ಸವವನ್ನು ಆಚರಿಸಹೊರಟ ಚಿಕಾಗೋ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ೧೯೫೯ನೇ ನವೆಂಬರ್‌ನಂದು ಜಗತ್ತಿನ ಪ್ರಮುಖ ವಿಜ್ಞಾನಿಗಳ ಸಮ್ಮೇಲನವೊಂದು ನಡೆಯಿತು. ಅದರಲ್ಲಿ ಡಾರ್ವಿನ್ನನಿಂದ ಈಚೆಗಾಗಿರುವ ಬೆಳವಣಿಗೆಯನ್ನು ಕುರಿತು ಚರ್ಚಿಸುವುದೇ ಮುಖ್ಯ ವಿಷಯವಾಗಿತ್ತು. ಈ ಸಮ್ಮೇಳನದಲ್ಲಿ ನಡೆದ ಕಾರ್ಯಕ್ರಮಗಳು ಡಾರ್ವಿನ್ ನಂತರದ ವಿಕಾಸವಾದ (Evolution after Darwin) ಎಂಬ ಸಾಮಾನ್ಯ ಶಿರೋನಾಮೆಯಲ್ಲಿ ಮೂರು ಸಂಪುಟಗಳಲ್ಲಿ ಪ್ರಕಟವಾಗಿವೆ. ಮಾನವನ ಸತ್ಯ ಸ್ವರೂಪ ಮತ್ತು ಭವಿಷ್ಯತ್ತುಗಳಿಗೆ ಸಂಬಂಧಿಸಿದಂತಹ ಕ್ರಾಂತಿಕಾರಕ ಬದಲಾವಣೆಗಳು ಅವುಗಳಿಂದ ನಮಗೆ ತಿಳಿದು ಬರುತ್ತವೆ. ಪ್ರಥಮ ಸಂಪುಟದಲ್ಲಿ "ಡಾರ್ವಿನ್ ವಾದದ ಉದಯ" (The Emergence of Darwinism) ಎಂಬ ಪ್ರಥಮ ಲೇಖನವನ್ನು ಬರೆಯುತ್ತಾ ಸರ್

ಜೂಲಿಯನ್ ಹಕ್ಸ್‌ಲೆ ಹೀಗೆ ತಿಳಿಸುತ್ತಾರೆ: ಡಾರ್ವಿನ್ನನ ಗ್ರಂಥಗಳು ಪ್ರಕಟವಾದಾಗ "ವಿಕಾಸವಾದದ ಸತ್ಯತೆಯನ್ನು ಮತ್ತು ಅದರ ವೈಜ್ಞಾನಿಕ ಜ್ಞಾನದ ವ್ಯಾಪ್ತಿಯನ್ನು ಭದ್ರವಾದ ನೆಲಗಟ್ಟಿನ ಮೇಲೆ ಸಂಸ್ಥಾಪಿಸುವುದು ಅತ್ಯಗತ್ಯವಾಗಿತ್ತು. ಇತ್ತೀಚಿನ ವರ್ಷಗಳಲ್ಲಿಯಾದರೋ, ನಾವು ನಮ್ಮ ಗಮನ ವನ್ನು ವಿಕಾಸವಾದದ ಗತಿಯತ್ತ ಹರಿಸಿದ್ದೇವೆ; ಇದರ ಫಲವಾಗಿ ವಿಕಾಸವಾದದ ಕಾರ್ಯಗತಿಯನ್ನು ಕುರಿತು ಸಾಮಾನ್ಯವಾಗಿಯೂ, ಅದರಲ್ಲಿ ನಮ್ಮ ಸ್ವಂತದ ಸ್ಥಾನ ಮತ್ತು ಪಾತ್ರಗಳನ್ನು ಕುರಿತು ನಿರ್ದಿಷ್ಟವಾಗಿಯೂ, ಬಹು ಮುಖವಾದ ಅನೇಕ ನಿರ್ಣಯಗಳನ್ನು ಕೈಕೊಳ್ಳಲು ನಮಗೆ ಸಾಧ್ಯವಾಗಿದೆ." (Evolution after Darwin, The University of Chicago Centennial Vol 1, The Evolution of Life p. 17).

ತನ್ನ ಲೇಖನವನ್ನು ಮುಂದುವರಿಸುತ್ತಾ ಸರ್ ಜೂಲಿಯನ್ ಹಕ್ಸ್‌ಲೆ ವಿಕಾಸವಾದವು ನಿರ್ಜೀವ ದಿಂದ ಸಜೀವ ಅಥವಾ ಪ್ರಾಣಿ ಜೀವನದ ಮಟ್ಟಕ್ಕೆ ಬೆಳೆಯುತ್ತಾಹೋದಂತೆ ಮಹತ್ತಾದ ಅರ್ಥವುಳ್ಳ ನೂತನ ಸ್ವರೂಪವನ್ನು ಪಡೆಯಿತು ಎಂದು ಹೇಳುತ್ತಾರೆ. (ಅದೇ ಪು. ೧೯)

*ಪ್ರಾಣಜೀವನಾವಸ್ಥೆಯ ಮಹಾ ನವೀನತೆ ಎಂದರೆ ಪ್ರಾಣಜೀವನದ ಪ್ರಾಮುಖ್ಯತೆಯನ್ನು ಮಹೋನ್ನತಿಗೇರಿಸುವಂತಹ ಜ್ಞಾನೋದಯ—ಮಾನಸಿಕ ಅಥವಾ ಬೌದ್ಧಿಕ ಗ್ರಹಣಶಕ್ತಿಯ— ಉದಯ.*

*ಕಟ್ಟಕಡೆಗೆ, ಮಾನವವರ್ಗದತ್ತ ಕೊಂಡೊಯ್ಯುವ ಶ್ರೇಣಿಯಲ್ಲಿ ಅರಿವಿನ ಅವಸ್ಥೆ ಯಾವ ಘಟ್ಟವನ್ನು ಮುಟ್ಟಿತ್ತೆಂದರೆ ವ್ಯಕ್ತಿಗೆ ಆಗುವ ಅನುಭವಗಳು ಅವನಲ್ಲಿ ಸಂಚಿತವಾಗುತ್ತಾ ಹೋಗುವುದಷ್ಟೇ ಅಲ್ಲ, ಮುಂದಿನ ತಲೆಮಾರುಗಳಿಗೆ ಅವು ಒಟ್ಟೊಟ್ಟಾಗಿಯೇ ಇಳಿದು ಬರುತ್ತವೆ ಎಂಬ ಸಿದ್ಧಾಂತವನ್ನು ಮುಟ್ಟಿತು. ಈ ಎರಡನೆಯದಾದ ಸೂಕ್ಷ್ಮ ವಿಷಯದಿಂದ ವಿಕಾಸವಾದದ ಮಾನವ ಭಾಗದ ವಿವೇಚನೆ ಅಥವಾ ಮನೋವಿಶ್ಲೇಷಣಾತ್ಮಕವಾದ ಸಾಮಾಜಿಕ ವಿವೇಚನೆ ಪ್ರಾರಂಭವಾಯಿತು....*

*ಅತ್ಯಂತ ಸ್ಥೂಲವಾಗಿ ಹೇಳುವುದಾದರೆ ವಿಕಾಸವಾದದ ಜೀವವಿಜ್ಞಾನ ಭಾಗವು ಸ್ವಸಂತಾನೋತ್ಪತ್ತಿ ಎಂಬ ನೂತನ ಕಲ್ಪನೆಯಿಂದ ಹೊರಟ ಶಾಖೆ; ಮಾನವ ಮನಸ್ಸಿನ ಸ್ವಯಂ ಪುನರುತ್ಪತ್ತಿಯ ಭಾವನೆಯಿಂದ ಬಂದ ಮಾನವ ಸ್ಥಿತಿ.*

ಈ ನೂತನ ಮಜಲಿನ ತಾತ್ತ್ವಿಕ ಮತ್ತು ವ್ಯಾವಹಾರಿಕ ಮಹತ್ವವನ್ನು ಎತ್ತಿ ತೋರಿಸುತ್ತಾ ಹಕ್ಸ್‌ಲೆ ಹೇಳುತ್ತಾರೆ (ಅದೇ ಪುಟ) :

*ಈ ಹೊಸ ಸಂಗತಿ ಮತ್ತು ಹೊಸ ಭಾವನೆಗಳ ಬೆಳಕಿನಲ್ಲಿ ನೋಡಿದಾಗ ಮಾನವನ ನಿಜವಾದ ಭವಿತವ್ಯ ಚಕಿತಗೊಳಿಸುವಂತಹ ಹೊಸರೂಪವನ್ನು ತಾಳುವಂತೆ ಕಾಣುತ್ತದೆ. ಈ ಭೂಗ್ರಹದ ಮೇಲೆ ನಡೆಯಬಹುದಾದ ಮುಂದಿನ ವಿಕಾಸಕ್ಕೆಲ್ಲಾ ಅದೇ ಮುಖ್ಯ ಕರ್ತೃ ವಾಗಬೇಕಾಗುತ್ತದೆ. ಮುಂದೆ ಪ್ರಧಾನವಾದ ಯಾವ ಉತ್ಕರ್ಷತೆಯಾಗಬೇಕಾದರೂ ಅದು ಮಾನವನಲ್ಲಿ, ಮಾನವನ ಮೂಲಕವೇ ಆಗಬೇಕಾಗುತ್ತದೆ. ಆದರೆ ಮಾನವನು ಅಷ್ಟೇ ಪ್ರಬಲ ವಾಗಿ ತನ್ನ ಆತ್ಮವಿಕಾಸವನ್ನೂ ಒಳಗೊಂಡಂತೆ ಈ ವಿಕಸನ ಕಾರ್ಯಕ್ಕೆ ಅಪಾಯಕರವಾದ ಪೀಡೆಯಾಗಿ ಅದನ್ನು ವಿರೂಪಗೊಳಿಸಲೂಬಹುದು.*

ಮಾನವ ವಿಕಾಸದ ಹೆಗ್ಗುರಿ ಮಾನವ ಜೀವನವನ್ನು ಈಗಿರುವುದಕ್ಕಿಂತಲೂ ಹೆಚ್ಚು ಮಹತ್ತಾಗಿ ಸಫಲಗೊಳಿಸುವುದೆಂದು ವಿವೇಚಿಸುತ್ತಾ ಹಕ್ಸ್‌ಲೆ ತಮ್ಮ ಮಾತನ್ನು ಮುಂದುವರಿಸುತ್ತಾರೆ (ಅದೇ ಪುಟ ೨೦) :

*ಇಂದಿನ ನಮ್ಮ ಜ್ಞಾನದ ಬೆಳಕಿನಲ್ಲಿ ಇಷ್ಟು ಮಾತ್ರ ನಮಗೆ ಕಾಣಿಸುತ್ತದೆ—ಮಾನವನ ಅತ್ಯಂತ ವ್ಯಾಪಕವಾದ ಹೆಗ್ಗುರಿಯು ಕೇವಲ ಅಳಿಯದೆ ಉಳಿಯಬೇಕೆಂಬುದಷ್ಟೇ ಅಲ್ಲ ; ತನ್ನ ಸಂಖ್ಯಾಬಲವನ್ನು ಹೆಚ್ಚಿಸಿಕೊಳ್ಳಬೇಕೆಂಬುದೂ ಅಲ್ಲ; ಜೀವರಚನಾ ವ್ಯವಸ್ಥೆಯಲ್ಲಿ ಹೆಚ್ಚು ಸಂಕೀರ್ಣತೆಯನ್ನು ಸಾಧಿಸಬೇಕೆಂಬುದೂ ಅಲ್ಲ ; ಸುತ್ತಮುತ್ತಿನ ಪರಿಸರದ ಮೇಲೆ ಮತ್ತಷ್ಟು ತನ್ನ ಹತೋಟಿಯನ್ನು ಪಡೆಯಬೇಕೆಂಬುದೂ ಅಲ್ಲ ; ಹಾಗಾದರೆ ಮತ್ತೇನು ? ಜೀವನದಲ್ಲಿ ಇನ್ನೂ ಮಹತ್ತಾದ ಸಫಲತೆಯನ್ನು ಸಾಧಿಸುವುದೇ ಮಾನವನ ಪರಮ ಧ್ಯೇಯ—ಇದಕ್ಕಾಗಿ ಮಾನವ ಜಾತಿಯು ಸಾಂಘಿಕವಾಗಿಯೂ ಮತ್ತು ಅದರ ಅಂಗಭೂತರಾದ ಅನೇಕ ಸದಸ್ಯರು ವೈಯಕ್ತಿಕವಾಗಿಯೂ ಇನ್ನೂ ಹೆಚ್ಚು ಸಾಧ್ಯತೆಗಳನ್ನು ಇನ್ನೂ ಹೆಚ್ಚು ಸಂಪೂರ್ಣವಾಗಿ ಪಡೆಯುವುದು.*

ಈ ಸಫಲತಾ ಭಾವನೆಯ ವ್ಯಾಪ್ತಿಯನ್ನು ವೈಜ್ಞಾನಿಕವಾಗಿ ಪರಿಶೀಲಿಸಬೇಕೆಂದು ವಾದಿಸುತ್ತಾ ಹಕ್ಸ್ಲೆ ಕಡೆಯಲ್ಲಿ ಹೀಗೆ ಹೇಳುತ್ತಾರೆ (ಅದೇ ಪುಟ ೨೧) :

*ಪರಮತೃಪ್ತಿಯೇ ಮನುಷ್ಯನ ಕಟ್ಟಕಡೆಯ ಅಥವಾ ಪ್ರಧಾನವಾದ ಗುರಿಯೆಂದು ಒಮ್ಮೆ ಸ್ವೀಕರಿಸಿದ ಮೇಲೆ ನಮ್ಮ ಮುಂದಿರುವ ಸಂಯುಕ್ತ ಮನೋ-ಸಾಮಾಜಿಕ ವಿಕಾಸದ (Psycho Social Evolution) ಸುದೀರ್ಘ ಮಾರ್ಗದಲ್ಲಿ ನಮಗೆ ಹಾದಿ ತೋರಲು ಸಹಾಯಕವಾಗುವಂತಹ ಮಾನವಸಾಧ್ಯತಾ ವಿಜ್ಞಾನವೊಂದು ನಮಗೆ ಬೇಕಾಗುತ್ತದೆ.*

### ೮. ಮಾನವ : ವಿಶ್ವದ ಕೇಂದ್ರ ರಹಸ್ಯ

ಹೀಗೆ ಭೌತಿಕ ಮತ್ತು ಜೈವಿಕ ವಿಜ್ಞಾನಗಳೆರಡರ ಕಡೆಯಿಂದಲೂ ಮಾನವನು ವಿಶ್ವದ ಕೇಂದ್ರ ರಹಸ್ಯವಾಗುತ್ತಾನೆ. ಪ್ರಕೃತಿಯು ತನ್ನ ಸ್ವಂತ ವಿಕಾಸದ ಫಲವಾದ ಮನುಷ್ಯನ ಮೂಲಕ ತನ್ನ ಅಂತರಾಳದಲ್ಲಿ ಹುದುಗಿರುವ ಅಗಾಧ ರಹಸ್ಯಗಳ ಸ್ಥೂಲ ರೇಖೆಗಳನ್ನು ವ್ಯಕ್ತಗೊಳಿಸಿದೆ. ಇಲ್ಲಿಯೇ ಮಾನವನು ವಿಕಾಸದ ಒಂದು ಮಾದರಿ ಮತ್ತು ಪ್ರಕೃತಿಯ ಕೀಲಿಕೈ ಆಗಿ ಅದ್ವಿತೀಯನಾಗಿದ್ದಾನೆ. ಆದ್ದರಿಂದಲೇ ಹಕ್ಸ್ಲೆಯು ಮಾನವ ಸಾಧ್ಯತೆಯ ವಿಜ್ಞಾನ ಎಂದು ಯಾವುದನ್ನು ಕರೆದಿದ್ದಾನೆಯೋ ಅದರ ಬೆಳವಣಿಗೆಗೆ ಅಷ್ಟು ಪ್ರಾಮುಖ್ಯತೆ ಬಂದಿರುವುದು. ಅದು ಅಂತಹ ವಿಜ್ಞಾನವಾಗಿತ್ತು. ಅದು ಧರ್ಮದ ವಿಜ್ಞಾನ. ಭಾರತದ ಅನ್ವೇಷಣೆಯ ಫಲವಾಗಿ ಯಾವ ಸತ್ಯವು ಉಪನಿಷತ್ತಿನಲ್ಲಿ ಕಂಡುಬಂದಿತೋ ಆ ಧರ್ಮ ವಿಜ್ಞಾನವೇ ಹಕ್ಸ್ಲೆಯವರ ವಿಜ್ಞಾನವಾಗಿತ್ತು. ಭಾರತವು ಅದನ್ನು ಭೌತ ವಿಜ್ಞಾನ ಮತ್ತು ಜೀವನಗಳ ಐಕ್ಯತೆಯಿಂದ ತನ್ನ ವೇದಾಂತದ ಐಕ್ಯಘಟನಾ ತತ್ತ್ವ ಶಾಸ್ತ್ರವನ್ನಾಗಿ ಹೊರಹೊಮ್ಮಿಸಿತು.

ನಾವು ಯಾವುದೇ ಸಂಸ್ಕೃತಿಯನ್ನು ಕುರಿತು ಸಮಾಲೋಚಿಸುವಾಗ ಆ ಸಂಸ್ಕೃತಿಯಲ್ಲಿ ಮಾನವನೆಂದರೆ ಯಾವ ಭಾವನೆಯಿದೆ ಎಂಬ ಮುಖ್ಯ ಪ್ರಶ್ನೆಯನ್ನು ಕೇಳಬೇಕಾಗುತ್ತದೆ. ಈಗ ನಮಗೆ ತಿಳಿದುಬಂದಿರುವ ಬೇರೆ ಬೇರೆ ಸಂಸ್ಕೃತಿಗಳನ್ನು ನಾವು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು : ಒಂದು, ಗ್ರೀಕ್ ಅಥವಾ ಗ್ರೀಕ್-ರೋಮನರದು, ಮತ್ತೊಂದು ಭಾರತೀಯರದು. ಈ ಎರಡು ಸಂಸ್ಕೃತಿಗಳ ಒಂದೊಂದರಲ್ಲಿಯೂ ಮಾನವ ಮತ್ತು ಅವನ ಶ್ರೇಷ್ಠತೆಯ ವಿಚಾರದಲ್ಲಿ ನಿರ್ದಿಷ್ಟವಾದ ಭಿನ್ನದೃಷ್ಟಿಯಿರುವುದು ಕಂಡುಬರುತ್ತದೆ. ಮಾನವ ಮತ್ತು ಅವನ ಶ್ರೇಷ್ಠತೆಯ ವಿಚಾರದಲ್ಲಿರುವ ಭಾವನೆಯು ಒಂದು ಜನಾಂಗದ ಸಂಸ್ಕೃತಿಯನ್ನು ಅಳೆಯುವುದಕ್ಕೆ ಸೊಗಸಾದ ಅಳತೆಗೋಲಾಗಬಲ್ಲದು. ನೆಲೆಗೊಂಡ ಬೇಸಾಯ, ಸರಳವಾದ ಕೈ ಕಸಬುಗಳು, ಪರಿಣಾಮಕಾರಿ

ಯಾದ ಸಾಮಾಜಿಕ ಸಂಘಟನೆ ಇತ್ಯಾದಿಗಳ ಮೂಲಕ ಸ್ವಲ್ಪ ಮಟ್ಟಿಗೆ ಆರ್ಥಿಕ ಮತ್ತು ಸಾಮಾಜಿಕ ಭದ್ರತೆಗಳನ್ನು ಸಾಧಿಸಿರುವುದು—ಇವು ಹಿಂದೆ ವೃದ್ಧಿಗೊಂಡ ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಸರ್ವಸಾಮಾನ್ಯವಾಗಿರುವ ಲಕ್ಷಣಗಳು. ಒಂದು ಸಂಸ್ಕೃತಿಯಲ್ಲಿ ಕಾಣಬರುವ ಲೌಕಿಕ ಮೂಲಾಧಾರಗಳ ಜೊತೆಗೆ ಒಂದು ಸಂಸ್ಕೃತಿಯ ಅತ್ಯಂತ ಮುಖ್ಯವಾದ ನಿರ್ಣಾಯಕಾಂಶ ವೆಂದರೆ ಅದರ ಬೌದ್ಧಿಕ ಜೀವನದ ನಿರ್ದೇಶನ, ಅನುಭವಗಳನ್ನು ಕುರಿತು ಅದು ಕೇಳುವ ಪ್ರಶ್ನೆಗಳು, ಅದು ಪಡೆಯುವ ಉತ್ತರಗಳು. ಮಾನವನ ಮನಸ್ಸಿನಲ್ಲಿ ನಡೆಯುವ ಈ ಕೋಲಾಹಲವು ಜೀವನದ ಶಕ್ತಿಗಳನ್ನು ಪ್ರಜ್ಞಾಪೂರ್ವಕವಾಗಿ ನಿಯಂತ್ರಿಸುವ, ಮಾರ್ಗದರ್ಶನ ಮಾಡಿಸುವ ಪ್ರಾರಂಭ ಲಕ್ಷಣಗಳನ್ನು ಸೂಚಿಸುತ್ತದೆ. ಮಾನವನು ತನ್ನ ಬಹಿರಂಗ ಜೀವನದಲ್ಲಿ ಪ್ರಕೃತಿಯ ಒತ್ತಡಕ್ಕೆ ಮಣಿಯಬೇಕಾಗಿದ್ದರೆ ವಿಕಾಸದಲ್ಲಿನ ಈ ಹೊಸ ಪ್ರವೃತ್ತಿ ಹೆಚ್ಚು ಮುಂದುವರಿಯಲು ಆಗುತ್ತಿರ ಲಿಲ್ಲ. ಸೃಷ್ಟಿಯ ಉಳಿದೆಲ್ಲ ಜೀವಿಗಳಂತೆ ಅವನೂ ತನ್ನ ಅಸ್ತಿತ್ವಕ್ಕಾಗಿಯೇ ಹೋರಾಡಬೇಕಾಗಿದ್ದಿದ್ದರೆ ತನ್ನದೇ ಆದ ವಿಕಾಸೋನ್ನತಿಗೆ ಏರಬೇಕೆಂಬ ಅಪೇಕ್ಷೆಯನ್ನು ಬೆಳೆಸಿಕೊಳ್ಳುತ್ತಿರಲಿಲ್ಲ; ಅದಕ್ಕೆ ತಕ್ಕ ಯೋಗ್ಯತೆಯನ್ನು ಗಳಿಸಿಕೊಳ್ಳುವುದಂತೂ ಇನ್ನೂ ದೂರವಾಗುತ್ತಿತ್ತು. ಪ್ರಾಪಂಚಿಕ ಸಂಸ್ಕೃತಿಯ ಮೂಲ ತತ್ತ್ವಗಳಲ್ಲಿ ಅವನು ಸಾಧಿಸಿದ ಸಿದ್ಧಿಯ ಮಹತ್ವವಿರುವುದು ಇದರಲ್ಲೇ. ಈಗ ಅವನು ವಿಕಾಸವನ್ನು ಮನಸ್ಸು ಮತ್ತು ಬುದ್ಧಿಗಳ ಉನ್ನತ ಕ್ಷೇತ್ರಗಳೊಳಕ್ಕೆ ಮುನ್ನುಗ್ಗಿಸಬಲ್ಲ ; ಇವು ಮಾನವನ ವಿಕಾಸದ ವಿಶಿಷ್ಟ ಕ್ಷೇತ್ರಗಳು. ಇಲ್ಲಿ ಗಾತ್ರಕ್ಕೆ ಬದಲಾಗಿ ಗುಣವು ಪ್ರಗತಿಯ ಮುಖ್ಯ ಮಾನದಂಡವಾಗುತ್ತದೆ. ಅವನಿಗಿರುವ ವಾಕ್‌ಶಕ್ತಿ ಮತ್ತು ಸಂಚಿತಾನುಭವಗಳನ್ನು ಬಳಸಿಕೊಳ್ಳಬಲ್ಲ ಸಾಮರ್ಥ್ಯಗಳಿಂದ ಅವನಿಗೆ ಇದರಲ್ಲಿ ಸಹಾಯವಾಗುತ್ತವೆ. ಹೀಗೆ ತನ್ನ ಜನನದಿಂದ ಇಳಿದು ಬರುವ ಆಸ್ತಿಗಿಂತಲೂ ಹೆಚ್ಚಾಗಿ ಸಂಸ್ಕೃತಿಯ ಒಂದು ಆಸ್ತಿಯಿಂದ ಅವನು ಸಂಪನ್ನನಾಗಿರುತ್ತಾನೆ. ಇವುಗಳ ಸಹಾಯದಿಂದ ಸಂಸ್ಕೃತಿಯ ಬೌದ್ಧಿಕಾಂಶವು ತಲೆಮಾರಿನಿಂದ ತಲೆಮಾರಿಗೆ ಮುಂದುವರೆಯುತ್ತಾ ಹೋಗುತ್ತದೆ. ಜೂಲಿಯನ್ ಹಕ್ಸಲೆ ಹೇಳುತ್ತಾರೆ (Lecture on "The Evolutionary Vision" Vol III, Issues in Evolution p. 252 ಎಂಬುದರ ಮೇಲಿನ ಭಾಷಣ ಪು. ೨೫೨.)

> *ಆದ್ದರಿಂದ ಮಾನವನು ವಿಶೇಷ ಮಹತ್ವವುಳ್ಳವನಾಗಿದ್ದಾನೆ... ಅಸ್ತಿತ್ವದ ಗುಣ ಮತ್ತು ವೈಭವಗಳೊಡನೆ ಕೂಡಿದ ಮನಸ್ಸಿನ ಕಡೆ ಪ್ರವೃತ್ತಿಯನ್ನು ಪಡೆದ ಮಾನವನು ವಿಶ್ವದ ಭೌತವಸ್ತು ಮತ್ತು ಅದಕ್ಕೆ ಸಮಾನಶಕ್ತಿಯುಳ್ಳವುಗಳ ಪರಿಮಾಣ ವಿಸ್ತಾರದಲ್ಲಿ ಮತ್ತು ಅವಕ್ಕೂ ಹೆಚ್ಚಾಗಿ ಎಲ್ಲವನ್ನೂ ಒಳಗೊಳ್ಳುವ ವಿಕಾಸ ಕಾರ್ಯದಲ್ಲಿ ಮನಸ್ಸು ಮತ್ತು ಗುಣಗಳ ಪ್ರಾಮುಖ್ಯದ ಒಂದು ಪ್ರಮಾಣವಾಗಿ ತನ್ನ ಅಸ್ತಿತ್ವವನ್ನು ಅಲ್ಲಲ್ಲಿಯೇ ಜ್ಞಾಪಕಕ್ಕೆ ತರುವವ ನಾಗಿದ್ದಾನೆ.*

ವಿಕಾಸವನ್ನು ಮನಸ್ಸು ಮತ್ತು ಪ್ರಜ್ಞೆಗಳ ಉನ್ನತ ಕ್ಷೇತ್ರಕ್ಕೂ ಹಕ್ಸ್‌ಲೆಯು ನಾಮಕರಣ ಮಾಡಿರುವ ಮಾನವ ಸಾಧ್ಯತೆಯ ವಿಜ್ಞಾನಕ್ಕೂ ಒಯ್ಯುವ ಈ ಪ್ರಗತಿಯೇ ಉಪನಿಷತ್ತುಗಳ ಕಾಲದ ಭಾರತದಲ್ಲಿ ನಡೆದದ್ದು. ಆ ಪ್ರಗತಿಯ ಫಲಗಳಲ್ಲಿ ಅಮೃತತ್ವದ ಗುಣವಿದೆ. ಅವು ಭಾರತವನ್ನು ಬಹುಕಾಲ ಪೋಷಿಸಿವೆ ; ಅವು ಮಾನವನಿಗೆ ಮನೋಜ್ಞವಾಗಿವೆಯೆಂದು ಆಧುನಿಕ ಕಾಲದಲ್ಲಿಯೂ ರುಜುವಾತಾಗಿದೆ.

ಮಾನವನ ರಹಸ್ಯದ ವಿಷಯವನ್ನು ಇಂದು ಪ್ರಾಯೋಗಿಕವಾಗಿ ಅತ್ಯಂತ ತ್ವರಿತದಿಂದ ವಿವೇಚಿಸ ಬೇಕೆಂದು ಹಕ್ಸ್‌ಲೆಯವರು ಈ ಹಿಂದೆಯೇ ತಮ್ಮ ನಿರೂಪಣೆಯಲ್ಲಿ ಸೂಚಿಸಿದ್ದಾರೆ. ಈ ಅವಸರಕ್ಕೆ ಕಾರಣವೇನೆಂದರೆ, ಆಧುನಿಕ ಯಂತ್ರ ವಿಜ್ಞಾನವು ಮಾನವನ ಕೈಗೆ ಅಪಾರವಾದ ಶಕ್ತಿಯನ್ನು

ನೀಡುವುದರಿಂದ, ಅವನು ಪ್ರಪ್ರಥಮವಾಗಿ ವಿಕಾಸ ಪ್ರಗತಿಗೆ ಕಾರ್ಯಭಾರ ಕರ್ತೃವಾಗಬಹುದು ಅಥವಾ ತನ್ನ ನಾಗರಿಕತೆ ಮತ್ತು ಉಳಿದ ನಿಸರ್ಗವೆಲ್ಲದರ ಸರ್ವನಾಶಕನಾದರೂ ಆಗಬಹುದು. ಮಾನವನು ಜಗದಗಲದ ನಾಗರಿಕತೆಯನ್ನು ಸೃಷ್ಟಿಸುತ್ತಾನೆ. ಇಷ್ಟವಿರಲಿ ಬಿಡಲಿ ಅದನ್ನು ನಾಶಮಾಡುತ್ತಾನೆ. ಈ ದುರಂತವಾದ ವಿರೋಧಾಭಾಸವನ್ನು ನೋಡಿದರೆ ಮಾನವನೆಂಬ ರಹಸ್ಯವನ್ನು ಆಳವಾಗಿ ಅವನಲ್ಲಿ ಹುದುಗಿರುವ ಸೃಜನಶೀಲ ಸಾಧ್ಯತೆಗಳನ್ನು ಭೇದಿಸಿ ತಿಳಿಯುವುದು ಅಗತ್ಯ ; ಅವನು ವಿಕಾಸದ ಸುಂದರತಮ ಪುಷ್ಪವಾಗುವಂತೆ ಮತ್ತು ನಿಸ್ಸಂದಿಗ್ಧವಾಗಿ ಶ್ರೀಮಂತವಾಗಿರುವ ತನ್ನ ನಾಗರಿಕತೆಯ .ರಕ್ಷಕನಾಗುವಂತೆಯೂ ಶಿಕ್ಷಣ ನೀಡಲು ಸಾಧ್ಯವಾಗುವಂತಹ ಪ್ರಯೋಗ ತಂತ್ರವೊಂದನ್ನು ಹೊರಹೊಮ್ಮಿಸಬೇಕು ಎಂಬುದು ಸ್ಪಷ್ಟವಾಗುವುದಿಲ್ಲವೆ ? ಬರ್‌ಟ್ರಾಂಡ್ ರಸಲ್‌ರವರು 'ಸಾಧನೆಯಲ್ಲಿ ಮಾನವ ಕೌಶಲ್ಯ ಮತ್ತು ಸಿದ್ಧಿಯಲ್ಲಿ ಮಾನವ ಮೌಢ್ಯವೆಂಬೆರಡರ ಪಂದ್ಯದ ಮಧ್ಯದಲ್ಲಿ ನಾವಿದ್ದೇವೆ.... ಮಾನವರು ಅರಿವಿನಷ್ಟೇ ವಿವೇಕದಲ್ಲಿ ವೃದ್ಧಿಗೊಳ್ಳದಿದ್ದರೆ. ಅರಿವಿನ ವೃದ್ಧಿ ದುಃಖದ ವೃದ್ಧಿಯಾಗುತ್ತದೆ' ಎಂದು ಹೇಳುತ್ತಾರೆ. (The Impact of Science on Society ಪುಟ ೧೨೦-೧೨೧.)

ಎಡಿಂಗ್‌ಟನ್ನರಂತಹ ವಿಜ್ಞಾನಿಗಳು ಕೆಲವು ಪ್ರಶ್ನೆಗಳನ್ನು ವಾದಭಂಗಿಯಲ್ಲಿ ಇಡುತ್ತಾರೆ. ಅಲ್ಲಿ ಈ ರಹಸ್ಯವು ವಿಶ್ವಸೃಷ್ಟಿಯ ಒಟ್ಟು ರಹಸ್ಯಗಳ ಸಂದರ್ಭದಲ್ಲಿ ಎದ್ದು ಕಾಣುತ್ತದೆ.

ಕೆಲವು ದಶಕಗಳ ಕೆಳಗೆ ಬಿ. ಬಿ. ಸಿ. ಪ್ರಸಾರದಲ್ಲಿ ಎಡಿಂಗ್‌ಟನ್ನರು 'ನಮ್ಮ ವಿಚಾರದಲ್ಲಿ ಯಥಾರ್ಥವಾವುದು ?' ಎಂಬ ಪ್ರಶ್ನೆಯನ್ನೆತ್ತಿಕೊಂಡು 'ನಾವು ಕೆಟ್ಟು ಹೋಗಿರುವ ನಕ್ಷತ್ರವೊಂದರ ತುಣುಕು' ಎಂದು ಉತ್ತರ ಹೇಳ ಹೊರಟರು. ಅಚ್ಚ ಜ್ಯೋತಿರ್ಭೌತಿಕ ದೃಷ್ಟಿಯಿಂದ ಅದೇ ಮೊದಲ ಉತ್ತರ. ಮತ್ತೆ, ಹತ್ತೊಂಬತ್ತನೆಯ ಶತಮಾನದ ಭೌತಿಕಶಾಸ್ತ್ರದ ಪರಿಭಾಷೆಯಲ್ಲಿ 'ನಾವು ಒಂದು ಯಂತ್ರದ ತುಣುಕು, ಕೆಳಗಿರುವ ಹಿಡಿಕೆಯನ್ನು ಕಾಲಪುರುಷ ತಿರುಗಿಸುವ ತನಕ ಓಡಾಡುವ, ಮಾತಾಡುವ ಮತ್ತು ನಗುವ ಗೊಂಬೆಗಳು' ಎಂದು ಆತ ಹೇಳಿದರು. ನಿಷ್ಠುರನಾದ ಕಾಲಪುರುಷನು ಕೀಲು ತಿರುಗಿಸುವ ಮತ್ತು ಕೀಲು ಉಜ್ಜುವ ಯಂತ್ರಗಳಂತಿದ್ದೇವೆ, ನಾವು.

ಆದರೆ ಈ ಎರಡು ಉತ್ತರಗಳಿಂದಲೂ ಎಡಿಂಗ್‌ಟನ್ನರಿಗೆ ತೃಪ್ತಿಯಾಗಲಿಲ್ಲ. ಆದ್ದರಿಂದ ಅವರು ಕಡೆಯಲ್ಲಿ 'ಆದರೆ ಮೂಲಭೂತವಾಗಿ, ನುಣುಚಿಕೊಳ್ಳಲು ಸಾಧ್ಯವಾದ ಉಕ್ತಿಯೊಂದಿದೆ : ಪ್ರಶ್ನೆಯನ್ನು ಕೇಳುವುದು ಯಾವುದೋ ಅದೇ ನಾವು' ಎಂದು ಸೇರಿಸಿದರು. ಇದರಲ್ಲಿ ಮಹತ್ತಾದ ಒಂದು ಸೂಚನೆಯನ್ನು ಸೂಕ್ಷ್ಮವಾಗಿ ನೀಡಲಾಗಿದೆ. ನಾವು ಕರ್ತೃ ; ನಾವು ಆತ್ಮ ; ನಮ್ಮನ್ನು ಕೇವಲ ಭೌತವಸ್ತುಗಳೊಡನೆ ಸರಿಸಮ ಮಾಡುವಂತಿಲ್ಲ. ಮಹದ್ವಿಸ್ತಾರವಾದ ಒಂದು ಪರಿಮಾಣ ನಮ್ಮೊಳಗಿದೆ ; ಅದು ಭೌತಿಕ, ಯಾಂತ್ರಿಕ ಅಥವಾ ಕೇವಲ ಬಾಹ್ಯವಸ್ತುಗಳ ಗುಂಪಿಗೆ ತನ್ನನ್ನು ಇಳಿಸಲು ಒಪ್ಪುವುದಿಲ್ಲ. ಆಧುನಿಕ ಅಸ್ತಿತ್ವವಾದ ದರ್ಶನವು ಹತ್ತೊಂಬತ್ತನೆಯ ಶತಮಾನದ ಸಂಪೂರ್ಣ ಯಾಂತ್ರಿಕ ಲಕ್ಷಣದ ವಿಜ್ಞಾನದರ್ಶನಕ್ಕೆ ವಿರುದ್ಧವಾಗಿ ನಿಂತು ಮಾನವಾತ್ಮದ ಪ್ರತಿಭಟನೆಯನ್ನು ಸ್ಥಾಪಿಸುತ್ತದೆ.

ಆಧುನಿಕ ಯುಗದಲ್ಲಿ ತನ್ನ ಯಥಾರ್ಥ ಸ್ವರೂಪವನ್ನು ಅನುಭವವೇದ್ಯವಾಗಿ ಮಾಡಿಕೊಳ್ಳಬೇಕೆಂಬ ಪ್ರೇರೇಪಣೆ ಮಾನವನಲ್ಲಿ ಬೆಳೆಯುತ್ತಿದೆ ; ತನ್ನ ಅರಿವು ಅರಳಿ ವಿವೇಕವಾಗು ವಂತೆ ಮಾಡುವ ಆವಶ್ಯಕತೆಯನ್ನು ಅವನು ತೀವ್ರವಾಗಿ ಮನಸ್ಸಿಗೆ ಹಚ್ಚಿಕೊಂಡಿದ್ದಾನೆ; ಅನಂತ ನಿತ್ಯಗಳಿಗೆ ಅನಾಮಧೇಯವಾದೊಂದು ಹಸಿದಿದೆ ಎಂದು ಅವನಿಗೆ ಅನುಭವವಾಗುತ್ತಿದೆ; ತನ್ನ ಸೋದರ ಜೀವಿಗಳ ಮೇಲೆ ಪ್ರೇಮದ ಲತಾತಂತುವನ್ನು ಹಬ್ಬಿಸುವುದಕ್ಕೆ ಮತ್ತು ಸಮಾಜ ವಿಜ್ಞಾನಿಯಾದ ಸೋರೋಕಿನ್ನನು ಹೇಳಿರುವ ಪರಾರ್ಥತೆಯ ತರಂಗಗಳನ್ನು ಪ್ರಸಾರ ಮಾಡುವುದಕ್ಕೆ ಸಾಧ್ಯವಾಗು

ವಂತೆ ತನ್ನ ವ್ಯಕ್ತಿತ್ವದ ವಿಶ್ವವ್ಯಾಪಕವಾಗಬಲ್ಲ ಪರಿಮಾಣವನ್ನು ಅರಸುತ್ತಿದ್ದಾನೆ. ಆಧುನಿಕವಾದ ಈ ಚಿಂತನೆ ಮತ್ತು ಆಶೋತ್ತರಗಳ ಹಿನ್ನೆಲೆಯಲ್ಲಿ ಭಾರತ ಸಂಸ್ಕೃತಿಗೆ ನೇರವಾಗಿಯೂ ಮಾನವನ ಸಂಸ್ಕೃತಿಯ ಪರಂಪರೆಗೆ ಸಾಮಾನ್ಯವಾಗಿಯೂ ಉಪನಿಷತ್ತುಗಳ ಕೊಡುಗೆ ಅರ್ಥವತ್ತಾದುದಾಗುತ್ತದೆ.

## ೯. ಉಪನಿಷತ್ತುಗಳ ಮನೋಜ್ಞತೆ

ನಾವು ಈಗಾಗಲೇ ನೋಡಿರುವಂತೆ ಉಪನಿಷತ್ತುಗಳು ಅಸಾಧಾರಣಾದ ಚಿಂತನೆ ಮತ್ತು ಸ್ಫೂರ್ತಿಗಳು ಉಕ್ಕಿ ಹರಿಯುತ್ತಿದ್ದಂತಹ ವಿಶೇಷ ಲಕ್ಷಣ ಲಕ್ಷಿತವಾದ ಯುಗವೊಂದನ್ನು ಕಣ್ಣಿಗೆ ಕಟ್ಟುತ್ತವೆ. ಹೀಗೆ ಉಕ್ಕಿಹರಿಯಲು ಸಾಧ್ಯವಾಗುವಂತೆ ಮಾಡಿದ ಭೌತಿಕ ಮತ್ತು ಬೌದ್ಧಿಕ ವಾತಾವರಣವು ಸೊಗಸಾದ ಒಂದು ಅಧ್ಯಯನ ವಸ್ತು. ಆರ್ಥಿಕವಾಗಿ ಯೋಚನೆ ಮಾಡಿದಾಗ ಅಂದಿನ ಭಾರತದಲ್ಲಿ ಮಾನವನ ಮನಸ್ಸಿಗೆ ಭಾರವಾಗಿದ್ದಂತಹ ಸಮಸ್ಯೆ ಯಾವುದೂ ಇರಲಿಲ್ಲ. ದೇಶ ವಿಶಾಲವಾಗಿತ್ತು; ಜನಸಂಖ್ಯೆ ವಿರಳವಾಗಿತ್ತು, ಜಲಸಮೃದ್ಧಿಯಿಂದ ಕೂಡಿ ಫಲವತ್ತಾಗಿದ್ದ ಜಮೀನು ಬೇಕಾದಷ್ಟು ಲಭ್ಯವಾಗಿತ್ತು. ಪ್ರತಿಯೊಬ್ಬರಿಗೂ ಅಪರಿಮಿತವಾದ ಆರ್ಥಿಕಾಭಿವೃದ್ಧಿಯ ಅವಕಾಶಗಳಿದ್ದುವು. ಭಾರತದ ಬಹು ಭಾಗ ಅಂದು ಅರಣ್ಯಗಳಿಂದ ತುಂಬಿತ್ತು. ಹಲವಾರು ಶತಮಾನಗಳಾದ ಮೇಲೆ ಕ್ರಿಸ್ತಪೂರ್ವದ ಮೊದಲ ಸಹಸ್ರ ವರ್ಷಗಳಲ್ಲಿದ್ದ ಬುದ್ಧನ ಕಾಲದಲ್ಲೂ ಕೂಡ ಉತ್ತರ ಭಾರತದ ಜನಸಂಖ್ಯೆ ಕೇವಲ ಹದಿನೈದರಿಂದ ಇಪ್ಪತ್ತು ದಶಲಕ್ಷಗಳೊಳಗಿದ್ದಿತ್ತೆಂದು ರ್ಹಿಸ್ ಡೇವಿಡ್ಸರಂತಹ ಕೆಲವು ಪ್ರಮಾಣಪುರುಷರು ಅಂದಾಜು ಮಾಡುತ್ತಾರೆ. ವಿಸ್ತಾರವಾದ ದೇಶ, ಫಲವತ್ತಾದ ನೆಲ, ಯಥೇಚ್ಛವಾದ ಮಳೆ, ಚಪ್ಪಟೆಯಾದ ಹುಲ್ಲುಗಾವಲುಗಳು, ವಿರಳವಾದ ಜನಸಂಖ್ಯೆ ಇವೆಲ್ಲ ಆರ್ಥಿಕ ಸ್ಥಿತಿ ಸುಸ್ಥಿರವಾಗಿದ್ದುದನ್ನು ಸೂಚಿಸುತ್ತವೆ ; ಸೋಮಾರಿ ಅಥವಾ ಅಂಗವಿಕಲನಾದವನನ್ನು ಬಿಟ್ಟರೆ ಬೇರೆ ಯಾರೂ ಅಂದು ಬಡವರಾಗಿರಬೇಕಾಗಿರಲಿಲ್ಲ.

ಭಾರತೀಯ ಕೃಷಿಕರೂ ಕೈಕಸಬಿನವರೂ ತಮ್ಮ ಕಾಯಕಷ್ಟ, ಸರಳ ಸ್ವಭಾವಗಳ ಸದ್ಗುಣಗಳಿಗಾಗಿ ಪ್ರಸಿದ್ಧರಾಗಿದ್ದರು. ಆ ಕಾಲದಲ್ಲಿ ಬಡತನದ ವಿಚಾರ ಅಷ್ಟಾಗಿ ಕೇಳಿಬರುವುದಿಲ್ಲ. ಬಡತನ ಭಾರತದಲ್ಲಿ ಕಾಣಿಸಿಕೊಂಡದ್ದು ಬಹುಕಾಲದ ಮೇಲೆ. ಅದಕ್ಕೆ ಮೊದಲನೆ ಕಾರಣ ಪರದೇಶಿಯರು ನುಗ್ಗಿ ಬಂದು ರಾಷ್ಟ್ರದ ಐಶ್ವರ್ಯವನ್ನು ಭಾರಿ ಪ್ರಮಾಣದಲ್ಲಿ ಕೊಳ್ಳೆ ಹೊಡೆದುದು ; ಎರಡನೆಯದಾಗಿ ಅದರಿಂದ ಪ್ರಾಪ್ತವಾದ ಅರಕ್ಷಣೆ. ಆದಿ ಹಿಂದೂ ಆರ್ಯರಿಂದ ಪ್ರಾರಂಭವಾದ ಗ್ರಾಮಾಡಳಿತ ಪದ್ಧತಿಯು ಇತಿಹಾಸದ ಸಹಸ್ರಾರು ವರ್ಷಗಳ ವಿಪರ್ಯಾಯಗಳನ್ನೆಲ್ಲಾ ಎದಿರಿಸಿ ನಿಂತು ನಮ್ಮ ಕಾಲದವರೆಗೂ ಇಳಿದುಬಂದಿದೆ. ಹಿಂದೂ ಆರ್ಯರ ಸಾಮಾಜಿಕ ಸನ್ನಿವೇಶವೆಲ್ಲ ಮಹತ್ವದ ಗುಪ್ತ ಶಕ್ತಿಗಳಿಂದ ಕೂಡಿ ಪರಿಣಾಮಕಾರಿಯಾಗಿತ್ತು; ಏಕೆಂದರೆ ಆ ಸಮಾಜಕ್ಕೆ ಚಿಂತನೆ ಮಾಡುವುದಕ್ಕೂ ಪ್ರಶ್ನೆ ಮಾಡುವುದಕ್ಕೂ ಸಾಕಷ್ಟು ವ್ಯವಧಾನವಿತ್ತು. ಹಿಂದೂ ಆರ್ಯರು ತಮ್ಮ ಅಪೇಕ್ಷೆಗೆ ತಕ್ಕಂತೆ ಬಹಿರಂಗದ ಅಥವಾ ಅಂತರಂಗದ ಜಗತ್ತನ್ನು ಗೆಲ್ಲಲು ತಮಗಿದ್ದ ಕಾಲಾವಕಾಶವನ್ನು ಬಳಸಿಕೊಳ್ಳಬಹುದಾಗಿತ್ತು. ನಿಸ್ಸಂದೇಹವಾಗಿಯೂ ನಿಶಿತಮತಿಗಳಾಗಿದ್ದ ಅವರು ತಮ್ಮ ಬುದ್ಧಿಶಕ್ತಿಯನ್ನು ಭೌತ ಜಗತ್ತಿನ ವಿಜಯದತ್ತ ತಿರುಗಿಸಿ ಅದರ ಫಲಿತಾಂಶವನ್ನು ಅನುಭವಿಸಬಹುದಾಗಿತ್ತು. ಅಂತಹ ಸಂಸ್ಕೃತಿಯ ಆದರ್ಶಗಳ ಪ್ರಸಾರ ಸಾಮಾನ್ಯವಾಗಿ ರಾಜಕೀಯ, ಆರ್ಥಿಕ ಮತ್ತು ಅನೇಕ ವೇಳೆ ಸೈನಿಕವಾದ ಆಕ್ರಮಣಶೀಲ ಚಳುವಳಿಯಾಗಿ ಪರಿಣಮಿಸುತ್ತದೆ. ಇದು ದೈಹಿಕದಿಂದ ಬೌದ್ಧಿಕ ಮಟ್ಟಕ್ಕೇರುವ ಎಲ್ಲ ಸಂಸ್ಕೃತಿಗಳ ಸಾಮಾನ್ಯ ಮಾರ್ಗ. ಅಂತಹ ಬೌದ್ಧಿಕ ಸಂಸ್ಕೃತಿಯು ಕೊಡುವ ಫಲಗಳೆಂದರೆ ಭೌತವಿಜ್ಞಾನ, ಯಂತ್ರವಿಜ್ಞಾನ, ಅರ್ಥಶಾಸ್ತ್ರ, ಇತಿಹಾಸ, ರಾಜ್ಯಶಾಸ್ತ್ರ, ಸಾಹಿತ್ಯ,

ಕಲೆ, ತರ್ಕಶಾಸ್ತ್ರ, ವ್ಯಾಕರಣ, ಚಿಂತನಾತ್ಮಕ ದರ್ಶನ, ಸಾಂಪ್ರದಾಯಿಕ ಮತಧರ್ಮ ಮತ್ತು ಯುದ್ಧದ ಮೂಲಕ ರಾಜ್ಯವಿಸ್ತರಣೆ. ಸಮಾಜ ಜೀವಿಯಾದ ಮಾನವ, ಅವನ ಅಭಿವೃದ್ಧಿ ಮತ್ತು ದೇಶ ಕಾಲಗಳ ಜಗತ್ತಿನಲ್ಲಿ ಅವನು ಹರಡಿಕೊಳ್ಳುವುದು—ಇವು ಈ ಬೌದ್ಧಿಕ ಸಂಸ್ಕೃತಿಯ ವಸ್ತುಗಳು. ಶಾಸನ ಸಭೆಯ ಮಟ್ಟದಲ್ಲಿ ಮಾನವ ಜೀವನವನ್ನು ಸದಾ ಸಂಸ್ಕರಣ ಮಾಡುವುದು ಇದರ ಹೆಗ್ಗುರಿ. ಗ್ರೀಕ್-ರೋಮನರ ಇತಿಹಾಸದಲ್ಲಿ ಮಾತ್ರವೇ ಅಲ್ಲದೆ ಚೀನಾದವರ, ಪ್ರಾಚೀನ ಮಧ್ಯಪೂರ್ವದವರ ಮತ್ತು ಆಧುನಿಕ ಪಾಶ್ಚಾತ್ಯರ ಸಂಸ್ಕೃತಿಗಳಲ್ಲಿಯೂ ಇದಕ್ಕೆ ಉದಾಹರಣೆಗಳು ಸಿಕ್ಕುತ್ತವೆ.

## ೧೧. ಉಪನಿಷತ್ತುಗಳು ಮತ್ತು ಭಾರತ ಸಂಸ್ಕೃತಿ

ಈ ಯಥಾಸ್ಥಿತಿಯ ಬೆಳವಣಿಗೆ ಭಾರತ ಸಂಸ್ಕೃತಿಯಲ್ಲಿಯೂ ಕಂಡುಬರುತ್ತದೆ. ಆದರೆ ಅದರ ಗತಿಯ ಪ್ರಾರಂಭದಲ್ಲಿಯೇ ಅದಕ್ಕೆ ಮಾನವಾನುಭವದ ವಿಲಕ್ಷಣ ಹೊಸ ಕ್ಷೇತ್ರವೊಂದರ ಅರಿವಾಯಿತು. ಮಾನವನಲ್ಲಿ ಗೋಚರವಾಗಿರುವಂತೆ, ಅವನ ಪ್ರಜ್ಞೆ ಮತ್ತು ಅಹಂಕಾರಗಳಲ್ಲಿ ಗೋಚರವಾಗಿರುವಂತೆ ಇರುವ ಸ್ವಸ್ವಭಾವದ ಅಂತರಂಗವೇ ಅದು. ಋಗ್ವೇದದಲ್ಲಿಯೂ ಕೂಡ ಭಾರತೀಯನ ಮನಸ್ಸು ತನ್ನೊಳಗೆ ಯಾವುದೋ ದೈವಿಕವಾದ ಮತ್ತು ಅಮರವಾದ ಸೂಚನೆಗಳಿರುವಂತೆ ಅನುಭವಗಳನ್ನು ಪಡೆಯುತ್ತಿತ್ತು. ವರ್ಷಗಳು ಉರುಳಿದಂತೆ ಅದರ ಗಾತ್ರ ಮತ್ತು ಶಕ್ತಿಗಳು ಬೆಳೆಯುತ್ತಾ ಹೋದವು; ಕಡೆಗೆ ಉಪನಿಷತ್ತುಗಳಲ್ಲಿ ಅದು ಅನುಭವದ ಆಳದಲ್ಲಿ ಕ್ರಮಬದ್ಧವಾಗಿ, ನಿಷ್ಪಕ್ಷಪಾತವಾಗಿ ವೈಜ್ಞಾನಿಕವಾಗಿ ಸತ್ಯಾನ್ವೇಷಣೆ ಮಾಡುತ್ತ ಹರಿಯುವ ಪ್ರವಾಹವಾಯಿತು. ಈ ಹೊಸ ಅನ್ವೇಷಣಾ ಕ್ಷೇತ್ರವು ಅದರ ಸಮಕಾಲೀನ ಭಾರತೀಯನ ಮನಸ್ಸಿಗೆ ಅದ್ಭುತವಾದ ಆಕರ್ಷಣೆಯನ್ನು ಒಡ್ಡಿತ್ತೆಂದು ಉಪನಿಷತ್ತುಗಳಿಂದ ನಮಗೆ ಗೊತ್ತಾಗುತ್ತದೆ. ಆ ಆಕರ್ಷಣೆಯು ಭಾರತೀಯರ ಮನಸ್ಸನ್ನು ಇಂದಿಗೂ ತನ್ನ ಅಡಿಯಾಳನ್ನಾಗಿ ಮಾಡಿಕೊಂಡಿದೆ.

ಉಪನಿಷತ್ತುಗಳು ಅಂತರಂಗವನ್ನು ಆಳವಾಗಿ ಅನ್ವೇಷಿಸಬೇಕೆಂಬುದಕ್ಕೆ ಪ್ರಾಧಾನ್ಯತೆಯನ್ನು ನೀಡಿದವು ; ಇದಾದ ಶತಶತಮಾನಗಳ ಮೇಲೆ ಗ್ರೀಕರು 'ಮಾನವ ನಿನ್ನನ್ನು ನೀನು ತಿಳಿ' ಎಂಬ ಸೂಕ್ತಿಯಲ್ಲಿ ಯಾವ ಸೂತ್ರವನ್ನು ನಿರ್ಮಿಸಿ ಮಧ್ಯಮಾರ್ಗದಲ್ಲಿಯೇ ಅದನ್ನು ನಿಲ್ಲಿಸಿಬಿಟ್ಟರೋ, ಆ ಸೂತ್ರವನ್ನು ಉಪನಿಷತ್ತುಗಳು ಹೃದ್ಯವಾದ ರೀತಿಯಲ್ಲಿ ಪ್ರತಿಪಾದಿಸಿದವು. ಇವುಗಳ ಮೂಲಕ ಅವು ಪ್ರಾರಂಭದೆಸೆಯಲ್ಲಿದ್ದ ಹಿಂದೂ ಆರ್ಯ ಸಂಸ್ಕೃತಿಗೆ ಒಂದು ಶಾಶ್ವತ ಸ್ವರೂಪವನ್ನು ಕೊಟ್ಟವು. ಆ ತರುವಾಯ ಭಾರತ ಸಂಸ್ಕೃತಿಯಲ್ಲಾದ ಬೆಳವಣಿಗೆಗಳೆಲ್ಲಾ ಈ ಉಪನಿಷತ್‌ರೂಪದ ಆಸ್ತಿಯಿಂದಲೇ ಶಕ್ತಿಯುತವಾಗಿ ನಿಬಂಧಿತವಾದುವು. ಅಂತರಂಗದಲ್ಲಿ ಆಳವಾಗಿ ಇಳಿಯಬೇಕೆಂಬ ಈ ಒತ್ತಡವು ಭಾರತ ಸಂಸ್ಕೃತಿಯ ಮೇಲೆ ಒಂದು ಮಹತ್ ಪರಿಣಾಮವನ್ನು ಬೀರಿತು. ಇಡೀ ಇತಿಹಾಸದ ಉದ್ದಕ್ಕೂ ಅದು ತನ್ನ ತತ್ತ್ವಪ್ರಸಾರಕ್ಕಾಗಿ ನಡೆಸಿದ ಚಳುವಳಿಗಳಲ್ಲಿ ಅನಾಕ್ರಮಶೀಲವಾದುವು; ಸ್ವಾಮಿ ವಿವೇಕಾನಂದರು ಹೇಳುವಂತೆ ಮಾನವನಿಗೆ ಅದು ನೀಡಿರುವ ಸಂದೇಶದ ಒಂದೊಂದು ಮಾತು "ತನ್ನ ಹಿಂದೆ ಆಶೀರ್ವಾದವನ್ನೂ ಮತ್ತು ತನ್ನ ಮುಂದೆ ಶಾಂತಿಯನ್ನೂ ಅಳವಡಿಸಿಕೊಂಡಿದೆ" (ಕೃತಿಶ್ರೇಣಿ ಸಂಪುಟ iii, ಪುಟ ೧೧೭).

ಒಂದು ಸಂಸ್ಕೃತಿಯ ಪರಾಕಾಷ್ಠಶ್ರೇಷ್ಠತೆ ಯಾರಲ್ಲಿ ಆವಿರ್ಭವಿಸಿರುವುದೋ ಆ ಮಾದರಿಯ ಮನುಷ್ಯನಲ್ಲಿ ಆ ಸಂಸ್ಕೃತಿಯ ಸಾರಸರ್ವಸ್ವ ಕಂಡುಬರುತ್ತದೆ. ಒಬ್ಬ ಅಚ್ಚುಮೆಚ್ಚಿನ ಜನನಾಯಕನು ಲೌಕಿಕ ಫಲಸಿದ್ಧಿಯ ಪಡಿಯಚ್ಚಿನಂತಿದ್ದರೆ ಅಲ್ಲಿನ ಸಂಸ್ಕೃತಿ ಲೌಕಿಕವಾದುದಾಗುತ್ತದೆ. ಭಾರತ ಸಂಸ್ಕೃತಿಯನ್ನು ಆಧ್ಯಾತ್ಮಿಕ ಸಂಸ್ಕೃತಿ ಎಂದು ಕರೆಯುವುದರಲ್ಲಿ ಏನಾದರೂ ತಿರುಳಿದ್ದರೆ ಅದಕ್ಕೆ ಕಾರಣ ಭಾರತದ ಜನರಿಗೆ ಅತ್ಯಂತ ಅಚ್ಚುಮೆಚ್ಚಿನ ನಾಯಕನಾದವನು ದೇವಭಾವದ ಮಾನವ

ನಾಗಿದ್ದುದು, ಇರುವುದು. ಡಾ।। ಎಸ್. ರಾಧಾಕೃಷ್ಣನ್‌ರವರ ಮಾತಿನಲ್ಲಿ ಹೇಳುವುದಾದರೆ (Eastern Religions and Western Thought, pp. 381-82) :

*ಭಾರತವ ಆದರ್ಶಪುರುಷನು ಗ್ರೀಸಿನ ಉದಾತ್ತ ಪುರುಷನಾಗಲೀ, ಮಧ್ಯ ಯೂರೋಪಿನ ಧೀರನಾದ ವೀರಪುರುಷನಾಗಲೀ ಅಲ್ಲ ; ನಿಷ್ಠುರ ನಿಯಮ ಪಾಲನೆಯಿಂದಲೂ ಅನಾಸಕ್ತವಾದ ಸದ್ಗುಣಾಚರಣೆಯಿಂದಲೂ ವಿಶ್ವ ಮೂಲದ ಅಂತರ್ ದೃಷ್ಟಿಯನ್ನು ಪಡೆದವನು, ತನ್ನ ಕಾಲ ದೇಶಗಳ ಪೂರ್ವಗ್ರಹ ಪಕ್ಷಪಾತದಿಂದ ಮುಕ್ತನಾಗಿರುವವನು. ಉಪನಿಷತ್ತಿನ ಋಷಿಗಳು ಮತ್ತು ಬುದ್ಧನ ಕಾಲದಿಂದ ಹಿಡಿದು ಶ್ರೀ ರಾಮಕೃಷ್ಣ, ಗಾಂಧಿಯವರೆಗೆ ಈ ಆದರ್ಶವನ್ನು ದೃಢವಾಗಿ ಸ್ವೀಕರಿಸಿ ಅದನ್ನು ಅನುಭವವೇದ್ಯವಾಗಿ ಮಾಡಿಕೊಳ್ಳಲು ಪರಿಣಾಮಕಾರಿಯಾಗಿ ಹೋರಾಡಿದ ಮಹಾಪುರುಷರನ್ನು ಪ್ರತಿಯೊಂದು ತಲೆಮಾರಿನಲ್ಲಿಯೂ, ದೇಶದ ಪ್ರತಿಯೊಂದು ಭಾಗದಲ್ಲಿಯೂ ಸೃಷ್ಟಿಸಿರುದು ಭಾರತದ ಒಂದು ಹೆಮ್ಮೆ.*

ಗ್ರೀಕರೂ ಇತರರೂ ಸಮಾಜದಲ್ಲಿ ಮಾನವ ಹೇಗಿರಬೇಕೆಂಬ ವಿಷಯದಲ್ಲಿ ಪರಿಣತಿಯನ್ನು ಪಡೆದರು. ಭಾರತೀಯರು ಗಂಭೀರಭಾವದ ಮಾನವನನ್ನು ವ್ಯಷ್ಟಿರೂಪದ ಮಾನವನನ್ನು ರೂಪಿಸುವುದರಲ್ಲಿ ಪರಿಣತರಾದರು. ಇವೆರಡರಲ್ಲಿ ಒಂದೊಂದಕ್ಕೂ ತನ್ನದೇ ಆದ ಗೌರವವಿದೆ, ಮಹತ್ವವಿದೆ ; ಒಂದೊಂದಕ್ಕೂ ಒಂದು ಮಿತಿಯೂ ಇದೆ ; ಹೀಗಾಗಿ ಒಂದು ಮತ್ತೊಂದಕ್ಕೆ ಪೂರಕ ವಾಗುವಂತೆ ಇದೆ. ಸ್ವಾಮಿ ವಿವೇಕಾನಂದರು ಭಾರತೀಯರ ಮನಸ್ಸಿಗಿರುವ ಈ ವಿಶಿಷ್ಟ ಒಲವನ್ನು ಕುರಿತು ತಮ್ಮ 'ಮನಸ್ಸಿನ ಶಕ್ತಿಗಳು' ಎಂಬ ಭಾಷಣದಲ್ಲಿ ಹೀಗೆ ಹೇಳುತ್ತಾರೆ (ವಿವೇಕಾನಂದರ ಕೃತಿಶ್ರೇಣಿ ಸಂಪುಟ iii, ಪುಟ ೨೦-೨೧ :

*ಇದು ಭಾರತೀಯ ಮನಸ್ಸಿನ ವೈಶಿಷ್ಟ್ಯ. ಯಾವುದರಲ್ಲಾದರೂ ಅದಕ್ಕೆ ಆಸಕ್ತಿ ಹುಟ್ಟಿದರೆ ಅದರಲ್ಲೇ ಅದು ನಿರತವಾಗಿ ಉಳಿದೆಲ್ಲವನ್ನೂ ಕೈಬಿಡುತ್ತದೆ. ಭರತಖಂಡವು ಎಷ್ಟು ಜನ ವಿಜ್ಞಾನಿಗಳಿಗೆ ತೌರೂರು ಎಂಬುದು ನಿಮಗೆ ಗೊತ್ತಿದೆ. ಗಣಿತಶಾಸ್ತ್ರ ಇಲ್ಲಿ ಪ್ರಾರಂಭವಾಯಿತು. ಇಂದೂ ಸಹ ನೀವು ಒಂದು, ಎರಡು, ಮೂರು ಇತ್ಯಾದಿ ಸೊನ್ನೆಯವರೆಗೆ ಸಂಸ್ಕೃತದ ಅಂಕಿಗಳ ರೀತಿ ಯಲ್ಲೇ ಎಣಿಕೆ ಮಾಡುತ್ತೀರಿ. ನಿಮಗೆಲ್ಲ ಗೊತ್ತಿರುವಂತೆ ಬೀಜಗಣಿತವು ಭಾರತದಲ್ಲಿಯೇ ಹುಟ್ಟಿತು. ನ್ಯೂಟನ್ನನು ಹುಟ್ಟುವುದಕ್ಕೆ ಸಹಸ್ರಾರು ವರ್ಷಗಳ ಮೊದಲೇ ಗುರುತ್ವಾಕರ್ಷಣ ಶಕ್ತಿಯ ವಿಚಾರ ಭಾರತೀಯರಿಗೆ ಗೊತ್ತಿತ್ತು... ಭಾರತದ ಇತಿಹಾಸದೊಂದು ಘಟ್ಟದಲ್ಲಿ ಮಾನವ ಮತ್ತು ಅವನ ಮನಸ್ಸು ಎಂಬ ಒಂದೇ ಒಂದು ವಿಷಯವು ಅವರ ಆಸಕ್ತಿಯನ್ನೆಲ್ಲಾ ತುಂಬಿಕೊಂಡಿತ್ತು. ತಮ್ಮ ಗುರಿಯನ್ನು ಸಾಧಿಸುವುದಕ್ಕೆ ಅದು ಅತ್ಯಂತ ಸುಲಭವಾದ ಮಾರ್ಗ ವೆಂದು ತೋರಿದುದರಿಂದ ಅಂದು ಅದು ಅವರಿಗೆ ಅತ್ಯಂತ ಚಿತ್ತಾಕರ್ಷಕವಾಗಿತ್ತು. ನಿಯಮಾನುಸರಣೆಯಿಂದ ಮಾನವನ ಮನಸ್ಸು ತನಗೆ ಬೇಕಾದುದೆಲ್ಲವನ್ನೂ ಸಾಧಿಸ ಬಲ್ಲುದೆಂದು ಭಾರತೀಯನ ಮನಸ್ಸಿಗೆ ಸಂಪೂರ್ಣ ಮನದಟ್ಟಾದುದರಿಂದ ಮನಸ್ಸಿನ ಶಕ್ತಿಗಳು ಅಧ್ಯಯನದ ಮುಖ್ಯ ವಿಷಯಗಳಾದವು. ಯಂತ್ರ, ಮಂತ್ರ ಮತ್ತು ಇತರ ಶಕ್ತಿಗಳು ಅಂತಹ ಅಸಾಧಾರಣ ವಿಷಯಗಳಾಗಿಯೇನೂ ಇರಲಿಲ್ಲ ; ಅದಕ್ಕೂ ಮೊದಲು ವಿಜ್ಞಾನಗಳನ್ನು ಬೋಧಿಸುತ್ತಿದ್ದ ಹಾಗೆಯೇ ಕ್ರಮಬದ್ಧವಾಗಿ ಬೋಧಿಸುವ ಶಾಸ್ತ್ರವಾಗಿತ್ತು, ಇದು. ಈ ವಿಚಾರದಲ್ಲಿ ಆ ಜನಾಂಗಕ್ಕೆ ಎಷ್ಟು ನಂಬಿಕೆ ಹುಟ್ಟಿತೆಂದರೆ, ಭೌತಿಕ ವಿಜ್ಞಾನಗಳು ಬಹುಮಟ್ಟಿಗೆ ಸತ್ತೇ ಹೋದವು.*

## ೧೧. ಭಾರತಕ್ಕೆ ಪ್ರತಿಯಾಗಿ ಗ್ರೀಸ್ ದೇಶ

ಆದ್ದರಿಂದ ನಾವು ಭಾರತೀಯ ಸಂಸ್ಕೃತಿಯ ತಿರುಳನ್ನು ಹುಡುಕಬೇಕಾದುದು ಉಪನಿಷತ್ತುಗಳಿಂದ ನಮಗಿಳಿದು ಬಂದಿರುವ ಪಿತ್ರಾರ್ಜಿತದಲ್ಲಿ. ಯಾವುದಾದರೊಂದು ಕಾಲಮಾನದ ಚಿಂತನಾ ಕ್ಷೋಭೆಯು ಒಂದು ಸಂಸ್ಕೃತಿಯ ಉತ್ತರೋತ್ತರ ಚಳುವಳಿಗಳಿಗೆಲ್ಲಾ ನಿರ್ಣಾಯಕ ವಸ್ತುವಾಗುವುದಾದರೆ, ಆ ಚಿಂತನಾಕ್ಷೋಭೆಯ ಅಧ್ಯಯನವು ಆ ಸಂಸ್ಕೃತಿಯನ್ನು ಆಮೂಲಾಗ್ರವಾಗಿ ಪರಿಶೋಧಿಸಲು ಗುರಿತಪ್ಪದ ಸಾಧನವಾಗುತ್ತದೆ. ಇಂತಹುದೇ ಆದ ಒಂದು ಸಂಗತಿಯು ಪಾಶ್ಚಾತ್ಯ ಇತಿಹಾಸದಲ್ಲಿರುವುದು ನಮಗೆ ಗೊತ್ತಿದೆ. ಕ್ರಿ.ಪೂ. ಐದನೇ ಶತಮಾನದಲ್ಲಿ ಗ್ರೀಸ್ ದೇಶವು ಕೆಲಕಾಲ ಅದ್ಭುತವಾದೊಂದು ಚಿಂತನಾಕ್ಷೋಭೆಯನ್ನು ಅನುಭವಿಸಿತು. ಅದು ಪಾಶ್ಚಾತ್ಯ ಸಂಸ್ಕೃತಿಯ ಬೆಳವಣಿಗೆಗೆ ಅತ್ಯಂತ ಶಕ್ತಿಯುತವಾದ ನಿರ್ದೇಶನವಾಯಿತು. ಇ. ಎಮ್. ಫಾರ್ಸ್ಟರ್‌ನ ಗ್ರಂಥದಿಂದ ಉದ್ಧರಿಸಿ ಹೇಳುವುದಾದರೆ (ಲೊವೆಸ್ ಡಿಕಿನ್ಸನ್ ಬರೆದ Greek View of Life ಮುನ್ನುಡಿ) :

*ಗ್ರೀಸ್ ದೇಶದಲ್ಲಿ ವಿಜ್ಞಾನವಿರಲಿಲ್ಲ, ನಿಜ. ಅದಕ್ಕೆ ಭೌಗೋಳಿಕವಾದ ಯಾವ ನಿರ್ಬಂಧವೂ ಇರಲಿಲ್ಲ. ಆದರೆ ಅದು ತನ್ನ ನಗರ ರಾಷ್ಟ್ರದ ಪುಟ್ಟ ಪರಿಧಿಯೊಳಗಿನಿಂದಲೇ ಆಧುನಿಕ ಮಾನವನನ್ನು ತನ್ನ ಸಮಾಜ ಸಂಬಂಧದಲ್ಲಿ ಬಂಧಿಸಿ ಚಿಂತಿಸುವಂತೆ ಮಾಡಬಲ್ಲ ಅನೇಕ ವಿಷಯಗಳನ್ನು ಒಳಗೊಂಡಿದೆ. ಆದರ ಗ್ರಂಥಕರ್ತರು ಪ್ರತಿಭಾಶಾಲಿಗಳಾದುದರಿಂದ ಮತ್ತು ಅವರು ಸೂಕ್ಷ್ಮಗ್ರಾಹಿಗಳಾದುದರಿಂದ ಅಗತ್ಯವಾದ ಈ ವಿಷಯಗಳನ್ನು ಕುರಿತು ಆ ದೇಶವು ನಮಗೆ ಹೊಸ ವಿಷಯಗಳನ್ನು ತಿಳಿಸಿಕೊಡಬಲ್ಲುದು. ಈಗ ಎರಡು ಸಹಸ್ರ ವರ್ಷಗಳು ಕಳೆದುಹೋಗಿದ್ದರೂ ಆ ವಿಷಯ ಇನ್ನೂ ಚಿರನೂತನವಾಗಿಯೇ ಇದೆ.*

ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬರುವ ಮಾನವ ಕಲ್ಪನೆ 'ಮಾನವನು ಆಪಾತತಃ ಸಮುದಾಯ ಜೀವಿ' ಎಂಬ ಪ್ರಾಚೀನ ಗ್ರೀಕರ ಕಲ್ಪನೆಯಿಂದ ಎತ್ತಿ ಕೊಂಡುದು. ಇದು ಮಾನವನ ರಾಜಕೀಯ ದೃಷ್ಟಿ ಎಂದು ಯಾರಾದರೂ ಕರೆಯಬಹುದಾದುದು. ಋಗ್ವೇದವು ಕೂಡ ಈ ಕಲ್ಪನೆಯನ್ನು ಎತ್ತಿ ಹಿಡಿದು, ಅದನ್ನು ಸಮಾಜದ ಪ್ರಮಾಣಕ್ಕೆ ಮಾತ್ರವೇ ಅಲ್ಲದೆ ವಿಶ್ವವಿಸ್ತಾರವಾಗುವಂತೆ ಬೆಳೆಸಿತು. ಋಗ್ವೇದ ಕಾಲದ ಹಿಂದೂ ಆರ್ಯರ ಮತ್ತು ಪ್ರಾಚೀನ ಗ್ರೀಕರ ಧರ್ಮಾದರ್ಶಗಳಲ್ಲಿ ಎಷ್ಟೋ ಹೋಲಿಕೆಗಳಿವೆ. ಇಬ್ಬರೂ ಧರ್ಮವನ್ನು ರಾಜಕೀಯ ದೃಷ್ಟಿಯಿಂದ ಪರಿಶೀಲಿಸಿದರು. ಅದು ಮತಾತೀತವಾಗಿತ್ತು. ದೈವ ಮತ್ತು ಮಾನವ ವರ್ಗಗಳು ಸೇರಿ ಸಮಗ್ರವಾದುದಾಗಿತ್ತು, ಸಹಾನುವರ್ತನ ನಿರ್ದೇಶನವುಳ್ಳದಾಗಿತ್ತು, ಮತ್ತು ಸ್ಪಷ್ಟವಾಗಿಯೇ ಐಹಿಕವಾದುದಾಗಿತ್ತು. ಮಾನವನ ಈ ಆಶಯದಿಂದ ಜನರ ಸ್ಥಿತಿಗತಿಗಳನ್ನು ಉತ್ತಮಗೊಳಿಸುವುದಕ್ಕಾಗಿ ರಾಜಕೀಯ ಮತ್ತು ಸಾಮಾಜಿಕ ಹೋರಾಟಗಳೂ, ಆಕ್ರಮಣಶೀಲವಾದ ಯುದ್ಧಗಳೂ, ಅಷ್ಟೇಕೆ ವಿಪ್ಲವಗಳು ಕೂಡ ಹುಟ್ಟಿಕೊಂಡವು.

ಗ್ರೀಕರ ಮನಸ್ಸು ಧರ್ಮದ ಈ ದೃಷ್ಟಿಯನ್ನು ಮೀರಿ ಬೆಳೆಯಲಿಲ್ಲ. ಗ್ರೀಕರ ಅತೀಂದ್ರಿಯ ಮತಧರ್ಮಗಳು ರಾಜಕೀಯ ಮಟ್ಟವನ್ನು ಮೀರಿ ಬೆಳೆದರೂ ವಿಶಿಷ್ಟವಾದ ಗ್ರೀಕರ ದೃಷ್ಟಿ ಮತ್ತು ಚಿಂತನೆ ಇವೆರಡಕ್ಕೂ ಅವು ಹೊರತಾಗಿದ್ದು, ಅಖಂಡವಾಗಿ ಅವುಗಳೊಡನೆ ಸೇರಿಕೊಳ್ಳಲಿಲ್ಲ. ಸಾಮಾಜಿಕ ಮತ್ತು ರಾಜಕೀಯ ವಿಷಯಗಳಲ್ಲಿ ಅವರು ನೀಡಿರುವ ಕೊಡುಗೆ ಅದ್ವಿತೀಯವಾದುದು, ಅಮರವಾದುದು. ಈ ವಿಷಯಗಳನ್ನು ಎಷ್ಟೇ ಪ್ರಯತ್ನಪೂರ್ವಕವಾಗಿ, ಗಾಢಾಸಕ್ತಿಯಿಂದ ತರ್ಕಪೂರ್ಣವಾದ ಪರೀಕ್ಷೆಗೆ ಒಳಪಡಿಸಿದರೋ ಹಾಗೆ ಅತೀಂದ್ರಿಯ ವಿಷಯಗಳನ್ನೂ ಒಳಪಡಿಸಬೇಕೆಂಬ ತಹತಹದ ಅನುಭವ ಅವರಿಗಾಗಲಿಲ್ಲ.

ಪ್ರಾಚೀನ ಗ್ರೀಕರು ಯಾವುದನ್ನು ಕಡೆಗಣಿಸಿದರೋ ಅದನ್ನೇ ಹಿಂದೂ ಆರ್ಯರು ತಮ್ಮ ಉಪನಿಷತ್ತುಗಳಲ್ಲಿ ಒಂದು ನಿರ್ಣಾಯಕವಾದ ಗಾಢಾನುರಕ್ತಿಯಿಂದ ಸ್ವೀಕರಿಸಿದರು. ಉಪನಿಷತ್ತಿನ ಮಹರ್ಷಿಗಳು ಮಾನವನ ರಾಜಕೀಯ ಮತ್ತು ಸಾಮಾಜಿಕ ಪ್ರಸರಣಕ್ಕೂ ಮೀರಿದ ಮಾನವ ನಿಗೂಢ ಶಕ್ತಿಯಲ್ಲಿ ಆಸಕ್ತರಾಗಿದ್ದರು. ಜೀವನವನ್ನು ಮಾತ್ರವೇ ಅಲ್ಲ, ಮೃತ್ಯುವನ್ನು ಕೂಡ ಕೆಣಕುವ ಸಂಶೋಧನೆಯಾಗಿತ್ತು ಅವರದು. ಇದರ ಫಲವಾಗಿ ಅಮರವಾದ ಮತ್ತು ದಿವ್ಯವಾದ ಆತ್ಮಸ್ವರೂಪ ವನ್ನು ಅವರು ಕಂಡುಹಿಡಿದರು. ಜೀವನ ಮತ್ತು ಮೃತ್ಯುಗಳು ಈ ಆತ್ಮದ ಛಾಯೆಮಾತ್ರ— 'ಯಸ್ಯಛಾಯಾ ಅಮೃತಮ್ ಯಸ್ಯ ಮೃತ್ಯುಃ' (ಋಗ್ವೇದ, x.೧೨೧.೨).

ಮೃತ್ಯುವಿನ ಸಮಸ್ಯೆಯನ್ನು ಎತ್ತಿಕೊಳ್ಳದ ಹೊರತು ಯಾವ ದರ್ಶನವೂ ಆಳವಾದ ಜ್ಞಾನವನ್ನು ಸಾಧಿಸಿದಂತೆ ಆಗುವುದಿಲ್ಲ. ಗ್ರೀಕ್ ಸಂಸ್ಕೃತಿಯಲ್ಲಿ ಇರುವ ಮುಖ್ಯ ಕೊರತೆಗಳಲ್ಲಿ ಇದೂ ಒಂದು. ಲೋವೆಸ್ ಡಿಕಿನ್ಸನ್‌ನ ಮಾತುಗಳಲ್ಲಿ ಹೇಳುವುದಾದರೆ (ಹಿಂದಿನದೇ, ಪುಟ ೬೮) :

*ತಾನು ಜಗತ್ತಿನಲ್ಲಿ ಹಾಯಾಗಿದ್ದೇನೆಂದು 'ಗ್ರೀಕ್'ನಿಗೆ ಎಷ್ಟು ಹೆಚ್ಚು ಹೆಚ್ಚು ಸಂಪೂರ್ಣ ವಾಗಿ ಮನವರಿಕೆಯಾಗುತ್ತಾ ಹೋಯಿತೋ ಅಷ್ಟೂ ಅಷ್ಟು ಸಂತೋಷದಿಂದ ಮತ್ತು ಸ್ವೇಚ್ಛೆ ಯಾಗಿ ಅವನು ತನ್ನ ಅಧಿಕಾರವನ್ನು ಚಲಾಯಿಸುವುದರಲ್ಲಿ ತಲ್ಲೀನನಾದನು; ಅವನು ಎಷ್ಟೆಷ್ಟು ಗಾಢವಾದ, ಉಜ್ವಲವಾದ ಕರ್ಮಶೀಲನಾಗಿ, ಆಸಕ್ತಿಯುತನಾಗಿ ಬಾಳಹೊರಟನೋ ಅಷ್ಟಷ್ಟು ಅವನಿಗೆ ಜೀವನ ಮರಣಗಳ ಸಂಗತಿ ಅಹಸ್ಯವಾದ, ಕಟುವಾದ ಮತ್ತು ದುರವಗಾಹವಾದ ಸಂಗತಿಯಾಗಿ ಕಾಣಿಸಿತು. ನಮ್ಮ ಇಂದಿನ ತೀರ್ಮಾನಕ್ಕೆ ತಕ್ಕಂತೆ ಹೇಳುವುದಾದರೆ, ಅವನಿಗೆ ಮತಧರ್ಮದಿಂದ ಈ ಸಮಸ್ಯಾಪೂರ್ಣಕ್ಕೆ ದೊರೆತ ಬೆಳಕು ಅತ್ಯಲ್ಪ ; ಅದರಿಂದ ದೊರೆತ ಸಮಾಧಾನ ಮತ್ತೂ ಅತ್ಯಲ್ಪ. ಅವನ ಕ್ಷಣಿಕ ಜೀವನದ ಹಾಡು ಅಪಶ್ರುತಿ ಸರಿಯಾಗುವ ಮೊದಲೇ ನಿಂತುಹೋಯಿತು; ತರ್ಕವು ತನ್ನ ವಿಮರ್ಶೆಯನ್ನು ಅವನ ಮತತತ್ತ್ವಗಳ ಮೇಲೆ ಪ್ರಯೋಗಿಸುವುದಕ್ಕೂ ಮೊದಲೇ ಅವನ ಚಿತ್ತವೃತ್ತಿಯು ತನ್ನ ನ್ಯೂನತೆಯನ್ನು ಅವನ ತಲೆಯ ಮೇಲೆ ಹೇರಿತ್ತು.*

### ೧೨. ಮಾನವತ್ವಕ್ಕೆ ಪ್ರತಿಯಾಗಿ ದೈವತ್ವ

ಉಪನಿಷತ್ತುಗಳು ವಿಶ್ವವ್ಯಾಪಿಯಾಗುವಂತಹ ಗುಣಗಳುಳ್ಳ ಸೂಕ್ಷ್ಮಜ್ಞಾನ ಸಮುದಾಯವನ್ನು ನಮಗೆ ನೀಡಿವೆ. ಈ ವಿಶ್ವವ್ಯಾಪಕತೆ ಅವುಗಳಲ್ಲಿರುವ ಅಮೂರ್ತ ಗುಣದಿಂದ ಬಂದುದು. ಅವುಗಳನ್ನು ಕಂಡುಹಿಡಿದ ಋಷಿಗಳು ಶ್ರೀಮಂತವಾದ ಮತ್ತು ಪ್ರೇಮಮಯವಾದ ವ್ಯಕ್ತಿತ್ವವುಳ್ಳವರು. ತಮ್ಮ ಸತ್ಯಾನ್ವೇಷಣೆಯಲ್ಲಿ ಅವರು ವ್ಯಕ್ತಿತ್ವನಿರಸನ ಮಾಡಿಕೊಂಡಿದ್ದರು. ಅವರ ದರ್ಶನದ ಶಾಶ್ವತಗುಣಕ್ಕೂ, ಆ ದರ್ಶನದ ಹೊಣೆಹೊತ್ತ ಸಂಸ್ಕೃತಿಯ ಶಾಶ್ವತಗುಣಕ್ಕೂ ಕಾರಣವೇನೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ವಿಶ್ವವ್ಯಾಪಕತೆ ಮತ್ತು ಮಾನವತೆ ಈ ಎರಡೂ ಭಾರತ ಸಂಸ್ಕೃತಿಯ ಪ್ರಮುಖ ಲಕ್ಷಣಗಳು. ಈ ಸಂಸ್ಕೃತಿಯು ಅಖಂಡಮಾನವನನ್ನು ಕುರಿತು ವಿವೇಚಿಸುತ್ತದೆಯೇ ಹೊರತು ಜಾತಿ, ಮತ, ಪಂಥ, ಜನಾಂಗವೆಂದು ವಿಭಾಗಗೊಂಡಿರುವವನನ್ನಲ್ಲ. ಮಾನವನು ಸಾಧಿಸಿದ ಅತ್ಯುನ್ನತ ಕೀರ್ತಿ ವೈಭವಗಳನ್ನೇ ಅದು ಅನ್ವೇಷಣ ಮಾಡಿದುದು. ಮನುಷ್ಯನ ಆಧ್ಯಾತ್ಮಿಕವಾದ ನಿಗೂಢಶಕ್ತಿಗಳನ್ನು ಶಿಕ್ಷಣದ ಮೂಲಕ ಹೆಚ್ಚುಹೆಚ್ಚಾಗಿ ಆವಿರ್ಭಾವ ಮಾಡಿಕೊಂಡುದರಿಂದ ಈ ಕೀರ್ತಿವೈಭವಗಳನ್ನು ಸಾಧಿಸಲು ಸಾಧ್ಯವಾಯಿತು. ಅಂತಹ ಶಿಕ್ಷಣ ದೊರೆಯಬೇಕಾದರೆ ಬಾಹ್ಯವಾಗಿ ಸಾಮಾಜಿಕ-ರಾಜಕೀಯವಾದ ನಿಯಮಪಾಲನೆಯಿಂದಲೂ ಆಂತರಿಕವಾಗಿ ಧರ್ಮದ ನಿಯಮಪಾಲನೆಯಿಂದಲೂ

ಸಾಧ್ಯ. ಬಾಹ್ಯವಾದ ನಿಯಮಪಾಲನೆಯಿಂದ ಮಾನವನು ಪೌರತ್ವದ ಸಾಮಾಜಿಕ ಶ್ರೇಷ್ಠತೆಯನ್ನು ಪಡೆಯುತ್ತಾನೆ ; ಇದರಲ್ಲಿ ಅವನು ಸಾಮಾಜಿಕ ಮೌಲ್ಯ ಮತ್ತು ಹಿತಗಳನ್ನು ಸೃಷ್ಟಿಸುವವನಾಗಿ ಸುಖಾನುಭವವನ್ನು ಪಡೆಯುತ್ತಾನೆ. ನಾವು ನೋಡಿರುವಂತೆ ಋಗ್ವೇದದಲ್ಲಿ ಎತ್ತಿಹಿಡಿದಿರುವುದು ಇದೇ ಮಾನವ ಭಾವನೆಯನ್ನು ; ಆದರೆ ಭಾರತದ ಮುಂದಿನ ಚಿಂತನೆಯಲ್ಲಿ ಈ ಭಾವನೆ ಹೆಚ್ಚು ಬೆಳೆಯಲಿಲ್ಲ ; ಕ್ರಮಬದ್ಧವಾದ ಅದರ ಬೆಳವಣಿಗೆ ಮತ್ತು ಅಭಿವ್ಯಕ್ತಿಗಳಾದುದೇನಿದ್ದರೂ ಅದು ಪ್ರಾಚೀನ ಗ್ರೀಕರ ಚಿಂತನೆಯಲ್ಲಿ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಅದು ಪ್ರತಿಭಾನ್ವಿತರಾದ ಗ್ರೀಕರ ಮನಸ್ಸಿನ ಮುಖ್ಯ ಕಾರ್ಯವಾಯಿತು. ಮಾನವ ಸಂಸ್ಕೃತಿಗೆ ನೀಡಿರುವ ಈ ಎಣೆ ಇಲ್ಲದ ಕೊಡುಗೆಗಾಗಿ ಇಡೀ ಜಗತ್ತೇ ಏಕೆ ಕೃತಜ್ಞವಾಗಿರಬೇಕೆಂಬುದಕ್ಕೆ ಇಲ್ಲಿ ವಿವರಣೆ ಸಿಕ್ಕುತ್ತದೆ. ಭಾರತವು ಮತ್ತೊಂದು ಕ್ಷೇತ್ರದಲ್ಲಿ ಪ್ರಾವೀಣ್ಯತೆ ಗಳಿಸಹೊರಟುದರಿಂದ ಅದರ ಸಂಸ್ಕೃತಿಯ ಪ್ರಾಯೋಗಿಕ ವಲಯದಲ್ಲಿ ಈ ಭಾವನೆಯು ಸಾಕಷ್ಟು ಅಭಿವ್ಯಕ್ತವಾಗಲಿಲ್ಲ ; ಆದರೂ ಅದರ ತರ್ಕಬದ್ಧವಾದ ಆಧ್ಯಾತ್ಮಿಕಶಾಸ್ತ್ರ ವೇದಾಂತದಲ್ಲಿ ಆ ಭಾವನೆಗೆ ಗೌರವಾರ್ಹವಾದ ಒಂದು ಸ್ಥಾನವಿದ್ದೇ ಇದೆ. ಮಾನವನ ಈ ಮಹಾಸಾಧನೆಯಲ್ಲಿ ಒಂದು ಉಚ್ಚವಾದ ಮಾನವ ಪಾರಮಾರ್ಥಿಕತೆಯ ಆವಿರ್ಭಾವ ವನ್ನು ಅದು ಒಪ್ಪುತ್ತದೆ. ಸಂಭವಿಸಬಹುದಾದ ಅಡ್ಡಿ ಆತಂಕಗಳನ್ನು ಎದುರಿಸಿ ನಿವಾರಿಸುವುದು, ಭೌತಿಕವಾಗಿಯೂ ಸಾಮಾಜಿಕವಾಗಿಯೂ ಹಿತಕರವಾದ ಪರಿಸರವನ್ನು ಸ್ಥಾಪಿಸಿ ಮಾನವನು ಮಹೋನ್ನತವಾದ ಸಾಮಾಜಿಕ ಸ್ಥಿತಿಗೇರುವಂತೆ ಮಾಡುವುದು, ಸಂಸ್ಕೃತಿ ನಾಗರಿಕತೆಗಳ ಸುಖ ಸಂತೋಷಗಳನ್ನು ಅನುಭವಿಸುವುದು—ಇವೇ ಮಾನವನ ನಿಜವಾದ ಪುರುಷಕಾರಗಳು. ಅವನನ್ನು ಮಾನವ ಪ್ರೇಮದ ದೃಷ್ಟಿಯಿಂದ ನೋಡಬೇಕಾದುದು ಹೀಗೆ.

ಮಾನವನ ಈ ಕೀರ್ತಿ ಹಿರಿಮೆಗಳನ್ನು ಉಪನಿಷತ್ತುಗಳು ಒಪ್ಪುವುದರ ಜೊತೆಯಲ್ಲಿಯೇ 'ಇವಕ್ಕಿಂತ ಇನ್ನೂ ಉನ್ನತವಾದ ಮಹಿಮೆ ಇದೆಯೆ ?' ಎಂದು ಪ್ರಶ್ನೆ ಹಾಕಿದವು. ಮಾನವತ್ವದ ಆದರ್ಶವು ಪ್ರಕೃತಿಯ ಅಂತರಂಗವಲಯದಲ್ಲಿ, ಸಾಪೇಕ್ಷತ್ವದ ಅಂತರಂಗದಲ್ಲಿ ಸಾಧಿಸ ಬೇಕಾದುದು—ಎಂಬುದನ್ನೂ ಅವು ಕಂಡುಹಿಡಿದವು. ಉಪನಿಷತ್ತಿನ ಋಷಿಗಳು ಪ್ರಕೃತಿಯನ್ನು ಮೀರಿ ಹೋಗಲು ಬಯಸಿದರು ; ಮಾನವನ ವಿಷಯಾತೀತ ಪ್ರಮಾಣವನ್ನು ಸಾಧಿಸಹೊರಟರು ; ಮಾನವತ್ವವನ್ನು ಎಲ್ಲ ವಿಧದಲ್ಲಿಯೂ ಮೀರಿರುವ ದೈವತ್ವದ ಪ್ರಮಾಣವನ್ನು ಸಾಧಿಸಹೊರಟರು. ಇದು ಧರ್ಮದ ಚಿರವಲಯ ; ಸಾಮಾಜಿಕ ರಾಜಕೀಯದ ಒಂದು ಅಧೀನ ವಸ್ತುವಾಗಿರುವಂತಹ ಧರ್ಮವಲ್ಲ, ಆದರೆ ಮಾನವಪ್ರಜ್ಞೆಯು ದೇಹೇಂದ್ರಿಯಗಳನ್ನೂ ಜಗತ್ತಿನ ಪರಿಸರಗಳನ್ನು ಮೀರಿ ಹೋಗಬಲ್ಲ ಸಂಪೂರ್ಣ ಪಾರಮಾರ್ಥಿಕವಾದ ಧರ್ಮ. ತಾನು ಕಾಲ, ದೇಶ, ಕಾರಣಗಳ ಎಲ್ಲೆಯನ್ನು ಮೀರಿದ ಅಮೃತಾತ್ಮನೆಂಬುದನ್ನು ಮಾನವನು ಇದರಲ್ಲಿ ಗ್ರಹಿಸುತ್ತಾನೆ. ಪ್ರಾಚೀನ ಭಾರತದ ಋಷಿಗಳು ಈ ಸಾಧನೆಯ ಆಹ್ವಾನವನ್ನು ಧೈರ್ಯವಾಗಿ ಸ್ವೀಕರಿಸಿದರು. ಅವರು ಅನುಸರಿಸಿದ ಕ್ರಮಗಳು, ಕೈಕೊಂಡ ಹೋರಾಟಗಳು ಮತ್ತು ಈ ಮಹಾ ಸಾಹಸಕಾರ್ಯದಲ್ಲಿ ಅವರು ಪಡೆದ ದಿಗ್ವಿಜಯ—ಇವು ಉಪನಿಷತ್ತುಗಳಲ್ಲಿ ಅಸದೃಶವಾಗಿ ವರ್ಣಿತವಾಗಿವೆ. ಅತ್ಯಂತ ಶಕ್ತಿಯುತವಾದ ಮತ್ತು ರಮ್ಯವಾದ, ಕಾವ್ಯಮಯವಾದ ಸಾಲುಗಳಲ್ಲಿ ಇವು ನಿರೂಪಿತವಾಗಿವೆ. ಅಮೃತತ್ವವನ್ನು ಅನ್ವೇಷಿಸಹೊರಟ ಋಷಿಗಳು ಅದರ ನಿರೂಪಣೆಯ ಸಾಹಿತ್ಯಕ್ಕೂ, ಅದು ಒಳಗೊಂಡ ಸಂಸ್ಕೃತಿಗೂ ಕೂಡ ಅಮೃತತ್ವ ವನ್ನು ಅನುಗ್ರಹಿಸಿದರು.

### ೧೩. ಗೀತೆಯಲ್ಲಿ ಅವುಗಳ ಸಮನ್ವಯ

ಭಾರತೀಯ ಸಂಸ್ಕೃತಿಯು ಒಂದು ಕ್ಷೇತ್ರದಲ್ಲಿ ಪ್ರಾವೀಣ್ಯತೆಯನ್ನು ಗಳಿಸಹೊರಟು

ಮತ್ತೊಂದನ್ನು ಬಹುಮಟ್ಟಿಗೆ ಕಡೆಗಣಿಸಿತಾದರೂ, ಭಾರತದರ್ಶನವಾದ ವೇದಾಂತವು, ನಾವು ಮೊದಲೇ ಹೇಳಿರುವಂತೆ, ಎರಡನ್ನೂ ಒಟ್ಟುಗೂಡಿಸಿ ತನ್ನಲ್ಲಿ ಸಮನ್ವಯಗೊಳಿಸಿಕೊಳ್ಳದೆ ಹೋಗಲಿಲ್ಲ. ಇದು ಸನಾತನ ಧರ್ಮ. ಇದರಲ್ಲಿ ಪುರುಷತ್ವ ಮತ್ತು ಋಷಿತ್ವ ಎಂಬ ಎರಡು ಮೌಲ್ಯಗಳೂ ಒಂದು ವ್ಯಾಪಕವಾದ ಪಾರಮಾರ್ಥಿಕತೆಯಲ್ಲಿ ಸಮ್ಮಿಳಿತವಾಗಿವೆ. ಗೀತೆಯು ಅಂತಹ ಒಂದು ಅತ್ಯಂತ ಸಪ್ರಮಾಣವಾದ ಗ್ರಂಥ. ಉಪನಿಷತ್ತುಗಳ ಉದಯವಾದ ಮೇಲೆ ಕಾಣಿಸಿಕೊಂಡ ಗೀತೆಯು ಲೌಕಿಕ ಪಾರಲೌಕಿಕಗಳನ್ನೂ, ಕರ್ಮಪೂಜೆಗಳನ್ನೂ ಸಂಯೋಜನಗೊಳಿಸಿತು. ಜೀವನದ ಅಖಂಡ ದರ್ಶನವನ್ನು ನೇರ್ಪುಗೊಳಿಸ ಹೊರಟ ಪ್ರಯತ್ನಗಳಲ್ಲೆಲ್ಲಾ ಗೀತೆಯೇ ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ಮೊಟ್ಟಮೊದಲನೆಯ ವಿಜಯಪ್ರದವಾದ ಪ್ರಯತ್ನ. ಶ್ರೀ ಶಂಕರರು ಈ ಮಹಾಗ್ರಂಥದ ವ್ಯಾಖ್ಯಾನಕ್ಕೆ ಅಧಿಕಾರಯುತವಾದ ಮುನ್ನುಡಿಯೊಂದನ್ನು ಬರೆಯುತ್ತಾ ಗೀತೆಯ ಈ ಕೇಂದ್ರ ಸಂದೇಶವನ್ನು ಉಜ್ವಲಗೊಳಿಸಿದ್ದಾರೆ : 'ದ್ವಿವಿಧೋ ಹಿ ವೇದೋಕ್ತೋ ಧರ್ಮಃ— ಪ್ರವೃತ್ತಿ ಲಕ್ಷಣೋ ನಿವೃತ್ತಿ ಲಕ್ಷಣಶ್ಚ ಜಗತಃ ಸ್ಥಿತಿ ಕಾರಣಂ ಪ್ರಾಣಿನಾಂ ಸಾಕ್ಷಾತ್ ಅಭ್ಯುದಯ ನಿಶ್ರೇಯಸಹೇತುಃ—ಜಗತ್ತಿನ ಸ್ಥಿತಿ ಮತ್ತು ಸಂರಕ್ಷಣೆಗಳಿಗೆ ನೆರವಾಗುವಂತೆ ವೇದದಲ್ಲಿ ಜ್ಞಾನಬೋಧೆಯನ್ನು ದ್ವಿಮುಖವಾಗಿ ಮಾಡಿದ್ದಾರೆ ; ಒಂದು ಪ್ರವೃತ್ತಿ ಲಕ್ಷಣವುಳ್ಳದ್ದು, ಮತ್ತೊಂದು ನಿವೃತ್ತಿ ಲಕ್ಷಣ ವುಳ್ಳದ್ದು ; ಎಲ್ಲ ಪ್ರಾಣಿಗಳ ಲೌಕಿಕಾಭ್ಯುದಯವನ್ನೂ, ಪಾರಲೌಕಿಕ ಶ್ರೇಯಸ್ಸನ್ನೂ ಸಾಧಿಸುವುದೇ ಅದರ ಉದ್ದೇಶ.'

## ೧೪. ದೈವತ್ವಕ್ಕೆ ಹಾದಿ

ಅಂತಹ ಸಂಯೋಜನೆಯೊಂದನ್ನು ಸಾಧಿಸಲು ಸಾಧ್ಯವಾಗುವ ಮುನ್ನ ಅಂತರಂಗ ಜಗತ್ತಿನ ಆಳವನ್ನು ಪ್ರವೇಶಿಸುವುದು ಅಗತ್ಯವಾಗಿತ್ತು. ಉಪನಿಷತ್ತುಗಳು ಇದನ್ನು ಪರಿಪೂರ್ಣವಾಗಿ ನೆರವೇರಿಸಿ, ಇಡೀ ಮಾನವ ಜನಾಂಗಕ್ಕೆ ವಿಜ್ಞಾನಗಳಲ್ಲೆಲ್ಲ ಅತ್ಯಂತ ಮಹತ್ತಾದ ಆತ್ಮವಿಜ್ಞಾನವನ್ನು ನೀಡಿದವು. ಅಂದಿನಿಂದಲೂ ಭಾರತವು ಈ ಕ್ಷೇತ್ರದಲ್ಲಿ ದೀಪಧಾರಿಯಾಗಿ ನಿಂತಿದೆ. ನೈತಿಕಶಕ್ತಿ ಮತ್ತು ಸತ್ಯಾಸಕ್ತಿಗಳ ಕೋಟೆಯಲ್ಲಿ ಧ್ಯಾನಾಸಕ್ತನಾಗುವುದೇ ಈ ಕ್ಷೇತ್ರದ ಪರಮ ಪ್ರಧಾನವಾದ ಪ್ರಯೋಗತಂತ್ರ. ಧರ್ಮವೆಂಬುದು ಒಂದು ಅನುಭವದ ವಿಷಯವೇ ಹೊರತು ಬರಿಯ ಸಿದ್ಧಾಂತ ಅಥವಾ ನಂಬಿಕೆಯಲ್ಲ ಎಂಬುದು ಭಾರತ ಚಿಂತನೆಯ ಒಂದು ಸತ್ಫಲ. ಈ ಪ್ರಯೋಗತಂತ್ರವನ್ನು ಉಪನಿಷತ್ತುಗಳು ಪರಿಪೂರ್ಣಗೊಳಿಸಿದುವಾದರೂ ಅದರ ಪ್ರಪ್ರಾಚೀನತೆಯು ಸಿಂಧೂ ಕಣಿವೆಯ ಸಂಸ್ಕೃತಿಯಷ್ಟು ಹಿಂದಕ್ಕೆ ಹೋಗುತ್ತದೆ. ಅದರ ಪ್ರಾಚೀನ ವಸ್ತುಸಂಗ್ರಹಣೆಯಲ್ಲಿ ಯೋಗಾರೂಢ ನಾಗಿ ಧ್ಯಾನಮುದ್ರೆಯಲ್ಲಿ ಕುಳಿತಿರುವ ವಿಗ್ರಹ ಒಂದಿದೆ. ಆ ನಂತರದ ಯುಗದಲ್ಲಿ ಬುದ್ಧನು ಆ ಪ್ರಯೋಗತಂತ್ರವನ್ನು ಪರಿಪೂರ್ಣಗೊಳಿಸಹೊರಟನು. ಭಾರತದ ಎಲ್ಲ ಯುಗಗಳಲ್ಲಿಯೂ ಅದು ಧರ್ಮವಿಜ್ಞಾನದ ಕೇಂದ್ರ ಪ್ರಯೋಗ ತಂತ್ರವಾಗಿ ನಡೆದುಕೊಂಡು ಬಂದಿತು. ಆಧುನಿಕ ಕಾಲದಲ್ಲಿ ಶ್ರೀ ರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರ ಜೀವನದಿಂದ ಅದಕ್ಕೆ ಸಮರ್ಥವಾದ ಒತ್ತಾಸೆ ಮತ್ತು ಪ್ರಚೋದನೆಗಳು ದೊರೆತವು.

ಉಪನಿಷತ್ತುಗಳಲ್ಲಿ ಒಂದಾದ ಕಠೋಪನಿಷತ್ತು ಈ ಪ್ರಯೋಗ ತಂತ್ರದ ಕ್ರಮ ಮತ್ತು ಫಲಗಳನ್ನು ಅಡಕವಾದ ಶ್ಲೋಕ ಒಂದರಲ್ಲಿ (IV-1) ನಿರೂಪಿಸುತ್ತದೆ :

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ
ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ :
ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್
ಆವೃತ್ತ ಚಕ್ಷುರಮೃತತ್ವಮಿಚ್ಛನ್—

*ಸ್ವಯಂಭುವು ಇಂದ್ರಿಯಗಳನ್ನೂ (ಮನಸ್ಸೂ ಸೇರಿದಂತೆ) ಬಹಿರ್ಮುಖವಾಗುವ ದೋಷವನ್ನಿಟ್ಟು ಸೃಷ್ಟಿ ಮಾಡಿದನು. ಆದ್ದರಿಂದ ಮನುಷ್ಯನು ಹೊರಗಡೆ ನೋಡುತ್ತಾನೆಯೇ ಹೊರತು ಅಂತರಾತ್ಮವನ್ನು ನೋಡುವುದಿಲ್ಲ. ಯಾವನೋ ಒಬ್ಬ ವಿವೇಕಿಯು ಅಮೃತತ್ವವನ್ನು ಬಯಸುತ್ತಾ ಇಂದ್ರಿಯಗಳನ್ನು (ಮನಸ್ಸನ್ನೂ ಸಹ) ಅಂತರ್ಮುಖವಾಗಿ ಮಾಡಿ ಅಂತರಾತ್ಮನನ್ನು ನೋಡುತ್ತಾನೆ."*

ಮಾನವನು ಅಂತರಂಗವನ್ನು ಒಳಹೊಕ್ಕು ಧ್ಯಾನ ಮಾಡುವುದರಿಂದ ದೇಹ, ಇಂದ್ರಿಯಗಳು, ಅಹಂಕಾರ ಮತ್ತು ಪ್ರಕೃತಿ ಸಂಭವಗಳಾಗಿ ಕಾಲಾಧೀನವಾಗಿ ನಾಶವಾಗುವಂತಹ ಇತರ ಎಲ್ಲ ಅನಾತ್ಮ ವಸ್ತುಗಳನ್ನೂ ತ್ಯಜಿಸಲು ಶಕ್ತನಾಗುತ್ತಾನೆ. ಹೀಗೆ ಅವನು ಅನಂತವಾದ ಸತ್, ಅನಂತವಾದ ಚಿತ್ ಮತ್ತು ಅನಂತವಾದ ಆನಂದವಾಗಿರುವ ತನ್ನ ಅಮರವಾದ ದೈವಸ್ವರೂಪವನ್ನು ಪಡೆಯುತ್ತಾನೆ. ದೇಹ, ಇಂದ್ರಿಯ ಮತ್ತು ಅಹಂಕಾರಗಳು ಕಾಲದೇಶಗಳ ಜಗತ್ತಿನ ಅನುಭವಗಳನ್ನು ಪಡೆಯುವುದಕ್ಕಾಗಿಯೇ ಇರುವ ಅಮೃತಾತ್ಮದ ಸಾಧನಗಳು. ಇದು ನಾವು ತಿಳಿದಿರುವ ಮನುಷ್ಯನ ಹಲವು ಮುಖಗಳು. ಇದರ ಅಂತರಾಳದಲ್ಲಿ ಯಥಾರ್ಥನಾದ ಮಾನವ—ಅಜ್ಞಾತ ಮಾನವ ಇದ್ದಾನೆ. ಉಪನಿಷತ್ತುಗಳು ಇದನ್ನು ಕಂಡುಹಿಡಿದ ಮಹಾ ಸಾಹಸ ಕಥೆಗಳಾಗಿವೆ. ಮಹರ್ಷಿಗಳಿಗೆ ತಮ್ಮ ಪ್ರಯತ್ನ ಮತ್ತು ಅನಾವರಣಗಳು ಅಮೂಲ್ಯವಾದ ಪ್ರಥಮ ಪರಿಶೋಧನೆಗಳೆಂಬುದೂ, ಇಡೀ ಮಾನವ ಜನಾಂಗಕ್ಕೆ ಅದು ಮಹತ್ವಪೂರ್ಣವಾದುದೆಂಬುದೂ ತಿಳಿದಿತ್ತು. ಧೀರವಾದ ಅವರ ವಾಕ್‌ಶಕ್ತಿಯಲ್ಲಿಯೂ ಅದರಲ್ಲಿ ವ್ಯಾಪಿಸಿರುವ ಸಂತೋಷದಲ್ಲಿಯೂ ಈ ಪ್ರಜ್ಞೆಯು ವ್ಯಕ್ತವಾಗುತ್ತದೆ.

## ೧೫. ಭಾರತ ಮತ್ತು ದೈವತ್ವದ ಆಕರ್ಷಣೆ

ಮಾನವ ಹೃದಯದಲ್ಲಿರುವ ಈ ದೈವಶಕ್ತಿಯ ಅನಾವರಣವು ಭಾರತ ಸಂಸ್ಕೃತಿಯ ಇತ್ತೀಚಿನ ಬೆಳವಣಿಗೆಯ ಮೇಲೆ ಶಕ್ತಿಯುತವಾದ ತನ್ನ ಪ್ರಭಾವಮುದ್ರೆಯನ್ನೊತ್ತಿದೆ. ಅಂತಹ ಅನಾವರಣದ ಪರಿಣಾಮವು ಗುಪ್ತವಾಗಿ, ಏಕಾಂತವಾಗಿ ನಿಲ್ಲಲು ಸಾಧ್ಯವಿಲ್ಲ. ಮೊಟ್ಟಮೊದಲ ಬಾರಿಗೆ ಅದು ಪರಿಶೋಧನೆಗೆ ದೊಡ್ಡ ಕ್ಷೇತ್ರವೊಂದನ್ನು ತೆರೆಯಿತು, ಅದು ಹೆಚ್ಚು ಆಕರ್ಷಕವೂ ಕಷ್ಟಕರವಾದುದೂ ಮತ್ತು ಅಪಾಯಕರವಾದುದೂ ಆಗಿತ್ತಾದರೂ ದೇಶಕಾಲಗಳ ಬಾಹ್ಯಜಗತ್ತಿಗಿಂತಲೂ ಹೆಚ್ಚು ಆಶಾದಾಯಕವಾಗಿತ್ತು. ಉಪನಿಷತ್ತಿನ ಋಷಿಗಳು ಮಾಡಿದ್ದ ಹಾದಿಯಲ್ಲಿ ಭಾರತದ ಪ್ರಾಂತಗಳು ಒಂದೊಂದಾಗಿ ನಡೆಯುತ್ತಾ ಹೋದವು; ಕಡೆಗೆ ಬುದ್ಧನೂ ಆತನ ಚಳುವಳಿಯೂ ಪ್ರಾರಂಭವಾಗುವ ವೇಳೆಗೆ ಇಡೀ ಭಾರತವೇ ಧಾರ್ಮಿಕಾನುರಾಗದ ಆವೇಶಕ್ಕೆ ಒಳಗಾಗಿ ಹೋಯಿತು. ಈ ಅನುಭವದ ಗೌರಿಶಂಕರವನ್ನು ಏರಲು ಅದು ನಾಡಿನ ಪ್ರತಿಭಾನ್ವಿತರನ್ನೆಲ್ಲಾ—ಸಾಮಾನ್ಯ ಜನರನ್ನೂ ಕೂಡ ಆಕರ್ಷಿಸಿತು. ತಮ್ಮ ಸತ್ಯಾನ್ವೇಷಣೆಯಲ್ಲಿ ಲೌಕಿಕವಾದುದನ್ನೆಲ್ಲಾ ತ್ಯಾಗ ಮಾಡಿದ ಅನ್ವೇಷಕರೂ ಧರ್ಮನಿಷ್ಠರೂ ಯುಗಯುಗಗಳ ಉದ್ದಕ್ಕೂ ಹೊರಟಿರುವ ಪರಿಣಾಮಕರವಾದ ಮೆರವಣಿಗೆಯೇ ಭಾರತ ಸಂಸ್ಕೃತಿಯ ಇತಿಹಾಸದ ಪ್ರಧಾನ ಲಕ್ಷಣವಾಗಿದೆ. ಈ ವೈಶಿಷ್ಟ್ಯವು ನಾಸ್ತಿಕರನ್ನೂ ಮತ್ತು ಅಜ್ಞೇಯತಾವಾದಿಗಳನ್ನೂ ಒಳಗೊಂಡಂತೆ ಎಲ್ಲ ಬಗೆಯ ಬುದ್ಧಿಜೀವಿಗಳನ್ನೂ ತನ್ನ ಪ್ರಭಾವದ ವಲಯದಿಂದ ಹೊರತಾಗಲು ಬಿಟ್ಟಿಲ್ಲ. ಈ ಆಧುನಿಕ ಯುಗದಲ್ಲಿಯೂ ಕೂಡ ರಾಮಮೋಹನರಾಯ್, ಅರವಿಂದಘೋಷ್, ರವೀಂದ್ರನಾಥಟಾಗೂರ್, ಮಹಾತ್ಮಗಾಂಧಿಯವರಂತಹ ಭಾರತ ಜನಜಂಗುಳಿಯ ಸುಪ್ರಸಿದ್ಧ ಸಂಸ್ಕೃತಿ ನಾಯಕರನ್ನು ಕೂಡ ಆ ಪ್ರಾಚೀನಕಾಲದ

ಮೆರವಣಿಗೆಯು ತನ್ನ ಪ್ರಚಂಡವಾದ ಸೆಳವಿನಲ್ಲಿ ಎಳೆದುಕೊಂಡು ಹೋಗಿದೆ.

### ೧೬. ಭಾರತೀಯ ಸಂಸ್ಕೃತಿಯ ಪಾರಮಾರ್ಥಿಕ ನಿರ್ದೇಶನ

ಮಾನವ ಮತ್ತು ವಿಶ್ವಗಳ ಮೂಲಭೂತ ಸತ್ಯಸ್ವರೂಪವು ಆಮೂಲಾಗ್ರವಾಗಿ ಪಾರಮಾರ್ಥಿಕವಾದುದು, ಅದು ದ್ವೈತವಿಲ್ಲದ ಅದ್ವೈತ, ಮನುಷ್ಯನು ಅದರ ಸಿದ್ಧಿಯನ್ನು ಪಡೆಯಬಹುದು, ಈ ಸಿದ್ಧಿಯೇ ಮಾನವ ಜೀವನದ ಗುರಿ, ಈ ಗುರಿಯನ್ನು ಬೇರೆ ಬೇರೆ ಮಾರ್ಗಗಳಿಂದ ಮುಟ್ಟಬಹುದು— ಇವೇ ಭಾರತ ಜೀವನಕ್ಕೆ ಸ್ಫೂರ್ತಿಯನ್ನಿತ್ತಿರುವ ಪ್ರಧಾನ ಭಾವನೆಗಳಾಗಿವೆ ; ಇವು ಭಾರತ ಸಂಸ್ಕೃತಿಗೆ ಒಂದು ಪಾರಮಾರ್ಥಿಕ ನೆಲೆಗಟ್ಟನ್ನೂ ಮತ್ತು ಪಾರಮಾರ್ಥಿಕ ನಿರ್ದೇಶನವನ್ನೂ ನೀಡಿ ಭಾರತೀಯರ ಅದೃಷ್ಟವನ್ನು ರೂಪಿಸಿವೆ. ಡಾ|| ಎಸ್. ರಾಧಾಕೃಷ್ಣನ್‌ರವರು ಹೀಗೆ ಹೇಳುತ್ತಾರೆ (Eastern Religions and Western Thought p. 2) :

*ಒಬ್ಬ ವ್ಯಕ್ತಿಯಮ ಹೇಗೋ ಹಾಗೆ ಮಾನವ ಜನಾಂಗದ ಅದೃಷ್ಟವೂ ಕೂಡ ಜೀವನಶಕ್ತಿಗಳ ಮೇಲೆ, ಅವಕ್ಕೆ ಮಾರ್ಗದರ್ಶನ ಮಾಡಿಸುವ ಬೆಳಕಿನ ಮೇಲೆ ಮತ್ತು ಅದನ್ನು ರೂಪಿಸುವ ನಿಯಮಗಳ ಮೇಲೆ ನಿಂತಿರುತ್ತದೆ.*

ವೇದಾಂತವು ಮೂಲಸತ್ಯವಾದ ಬ್ರಹ್ಮನನ್ನು ಸತ್ ಚಿತ್ ಆನಂದ ಎಂದು ವರ್ಣಿಸುತ್ತದೆ. ಜಗತ್ತಿನ ಮೂಲ ಸತ್ಯವು ಆನಂದದ ಒಂದು ಅಂಗವಾಗುವ ಹಾಗಿದ್ದರೆ ಅದು ಜಗತ್ತಿನ ಒಂದು ಅಂಗವೂ ಆಗುತ್ತದೆ. ತೈತ್ತರೀಯ ಉಪನಿಷತ್ತಿನಲ್ಲಿ (II-೨) ಹೇಳಿರುವಂತೆ 'ರಸೋ ವೈ ಸಃ ; ರಸಂ ಹ್ಯೇವಾಯಂ ಲಬ್ಧ್ವಾ ಆನಂದೀ ಭವತಿ ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದಯಾತಿ—ಅವನು (ಬ್ರಹ್ಮ) ರಸಮಯ ; ಈ ರಸವನ್ನು ಪಡೆಯುವುದರಿಂದ ಮಾನವನು ಆನಂದಮಯನಾಗುತ್ತಾನೆ, (ಹೃದಯ) ಪ್ರದೇಶದಲ್ಲಿ ಆನಂದವಿಲ್ಲದಿದ್ದರೆ ಯಾವ ಮನುಷ್ಯ ತಾನೇ ಉಸಿರಾಡುತ್ತಿದ್ದ, ಬದುಕುತ್ತಿದ್ದ ? ನಿಜವಾಗಿಯೂ ಆನಂದದ ಮೂಲ ಅವನೇ.'

### ೧೭. ಭಾರತೀಯ ಸಂಸ್ಕೃತಿಯಲ್ಲಿ ಸೌಂದರ್ಯೋಪಾಸನಾಂಶ

ವೇದಾಂತವು ಜಗತ್ತನ್ನು ಭಗವಂತನ ಆನಂದಜನ್ಯ ಎಂದು ಭಾವಿಸುತ್ತದೆ. ಆದ್ದರಿಂದ ಮುಂಡಕೋಪನಿಷತ್ತು ಹೀಗೆ ಹಾಡುತ್ತದೆ (II-೭-೮) :

ಯಃ ಸರ್ವಜ್ಞಾಃ ಸರ್ವವಿತ್ ಯಸ್ಯೈಷ ಮಹಿಮಾ ಭುವಿ ;
ದಿವ್ಯೇ ಬ್ರಹ್ಮಪುರೇ ಹ್ಯೇಷಾ ವ್ಯೋಮ್ನಿ ಆತ್ಮಾ ಪ್ರತಿಷ್ಠಿತಃ ;
ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ;
ತತ್ ವಿಜ್ಞಾನೇನ ಪರಿಪಶ್ಯಂತಿ ಧೀರಾಃ ಆನಂದರೂಪಂ ಅಮೃತಂ ಯತ್ ವಿಭಾತಿ—

*ಯಾರ ಮಹಿಮೆಯು ಜಗತ್ತಿನಲ್ಲಿ ಕಾಣಬರುತ್ತದೆಯೋ ಯಾರು ಎಲ್ಲವನ್ನೂ ಬಲ್ಲನೋ, ಯಾವನು ಎಲ್ಲವನ್ನೂ ಅರ್ಥಮಾಡಿಕೊಳ್ಳುತ್ತಾನೆಯೋ ಅವನು—ಆ ಬ್ರಹ್ಮನು ದಿವ್ಯವಾದ ಬ್ರಹ್ಮನ ಪಟ್ಟಣ ಪ್ರದೇಶದಲ್ಲಿ (ಹೃದಯದಲ್ಲಿ) ವಾಸಿಸುತ್ತಾನೆ. ಅವನು ಮನಸ್ಸಿನ ರೂಪವನ್ನು ಧರಿಸಿ ಇಂದ್ರಿಯಗಳನ್ನೂ ದೇಹವನ್ನೂ ಅವುಗಳ ನಾಯಕನಂತೆ ನಡೆಸುತ್ತಾನೆ. ಅವನು ದೇಹದಲ್ಲಿ ಹೃದಯದೊಳಗಡೆ ವಾಸಿಸುತ್ತಾನೆ. ಜ್ಞಾನಿಗಳಾದವರು ಸಾಕ್ಷಾತ್ಕಾರದ ಮೂಲಕ ಆನಂದಮಯನಾಗಿ, ಅಮೃತಸ್ವರೂಪನಾಗಿ ಬೆಳಗುವ ಆತನನ್ನು ಎಲ್ಲೆಲ್ಲಿಯೂ ಕಾಣುತ್ತಾರೆ.*

ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಜಗತ್ತು 'ಆನಂದರೂಪಂ, ಅಮೃತಮ್.' ಈಶೋಪನಿಷತ್ತು ಭಗವಂತನನ್ನು ಕವಿ ಅಥವಾ ಋಷಿ ಎಂದು ಕರೆಯುತ್ತದೆ (ಶ್ಲೋಕ ೮). ಸೃಷ್ಟಿ ಎಂಬುದು

ತೆರತೆರೆಯಾಗಿ ಛಂದೋಗತಿಯಲ್ಲಿ ಹರಿದು ಬರುತ್ತಿರುವ ಒಂದು ಕಾವ್ಯ. ಶಂಕರಾಚಾರ್ಯರ ಮಾತಿನಲ್ಲಿ ಹೇಳುವುದಾದರೆ ಅದೊಂದು 'ಸೌಂದರ್ಯಲಹರಿ'. ನಟರಾಜರೂಪದ ಭಗವಂತನ ಪ್ರತಿಮೆಯು ಜಗತ್ತೆಲ್ಲವೂ ಪರಬ್ರಹ್ಮನ ಆನಂದ ನರ್ತನದಿಂದ ಜನ್ಯವಾದುದೆಂದು ನಮಗೆ ಬೋಧಿಸುತ್ತದೆ.

ಈ ದಾರ್ಶನಿಕ ಭಾವನೆಗಳು ಮತ್ತು ಧಾರ್ಮಿಕ ಸಾಕ್ಷಾತ್ಕಾರಗಳು ಭಾರತೀಯರ ಸೌಂದರ್ಯೋಪಾಸನ ಮನೋಭಾವ ಮತ್ತು ಮನಃ ಪರಿಪಾಕಗಳನ್ನೂ, ಅವರ ರಸಜ್ಞತಾ ಪ್ರತಿಭೆಯ ವಿಕಸನವನ್ನೂ ಸ್ಫೂರ್ತಿಗೊಳಿಸಿ ಪೋಷಿಸಿದುವು. ಸಾಹಿತ್ಯ ಮತ್ತು ಕುಶಲಕಲೆಗಳ ಕ್ಷೇತ್ರದಲ್ಲಿ ಭಾರತೀಯರ ಕೊಡುಗೆಯು (ಅದರ ಒಟ್ಟು ಸಾಂಸ್ಕೃತಿಕ ಪಿತ್ರಾರ್ಜಿತದಲ್ಲಿ) ಚಿರಂತನವಾಗಿ ನಿಲ್ಲಬಲ್ಲ ಅತ್ಯಂತ ಆಕರ್ಷಕಾಂಶಗಳಿಂದ ಕೂಡಿದೆ. ಅದು ಬಹುಮಟ್ಟಿಗೆ ಧಾರ್ಮಿಕ ಮನೋಭಾವದಿಂದ ಸ್ಫೂರ್ತಿಗೊಂಡುದಾದರೂ ಅದರಲ್ಲಿ ನಿಷೇಧಾರ್ಥಕವಾಗಿ ವಿರಕ್ತವಾದುದು ಯಾವುದೂ ಇಲ್ಲ ; ಏಕೆಂದರೆ, ನಾವು ಈಗಾಗಲೇ ನೋಡಿರುವಂತೆ ಆ ಧಾರ್ಮಿಕ ಮನೋಭಾವವೇ ಸೌಂದರ್ಯ ಸಂತೋಷಗಳ ಮೌಲ್ಯದಿಂದ ತುಂಬಿರುತ್ತದೆ.

## ೧೮. ಪರಮತಸಹಿಷ್ಣುತೆ ಮತ್ತು ಸಾರ್ವತ್ರಿಕ ಸ್ವೀಕಾರ

ಭಾರತದ ದಾರ್ಶನಿಕ ಚಿಂತನೆಯ ಮುಖ್ಯ ಫಲಗಳಲ್ಲಿ ಅದರ ಧಾರ್ಮಿಕ ದೃಷ್ಟಿಯು ವಿಶಾಲವಾಗಿರುವುದೂ ಒಂದು. 'ಸೃಷ್ಟಿಯಲ್ಲಿರುವುದೆಲ್ಲವೂ ಪಾರಮಾರ್ಥಿಕವಾಗಿ ಒಂದೇ' ಎಂಬ ತಿಳಿವಳಿಕೆ, ಮತ್ತು 'ಧರ್ಮದ ಗುರಿ ಪಾರಮಾರ್ಥಿಕ ಸಾಕ್ಷಾತ್ಕಾರ' ಎಂಬ ಸ್ಪಷ್ಟತೆ—ಇವು ಮತಧರ್ಮಗಳ ಸಮನ್ವಯವನ್ನು ಪೋಷಿಸಿದವು. ಭಾರತವು ತನ್ನ ದೃಷ್ಟಿಯಲ್ಲಿಯೂ ವರ್ತನೆಯಲ್ಲಿಯೂ ಆಳವಾದ ಧಾರ್ಮಿಕ ನಿಷ್ಠೆಯನ್ನೂ ಪರಮತಸಹಿಷ್ಣುತೆಯಿಂದ ಕೂಡಿದ ವಿಶಾಲ ಚಿತ್ತವೃತ್ತಿಯನ್ನೂ ಒಂದುಗೂಡಿಸಿಕೊಂಡ ಅದ್ವಿತೀಯ ಇತಿಹಾಸವನ್ನು ಪಡೆದಿದೆ. ಅನಂತವೂ ವಿಶ್ವವ್ಯಾಪಕವೂ ಆದ ದೈವಭಾವನೆಯಿಂದ ಮಾತ್ರ ಇದು ಪ್ರವಹಿಸುವುದು ಸಾಧ್ಯ. ಡಾ|| ಎಸ್. ರಾಧಾಕೃಷ್ಣನ್‌ರ ಮಾತಿನಲ್ಲಿ ಹೇಳುವುದಾದರೆ (Eastern Religions and Western Thought, p. 317) :

> *ಪರಮತ ಸಹಿಷ್ಣುತೆ ಎಂಬುದು ಸಾಂತವಾದ ಮನಸ್ಸು ಅನಂತತೆಯ ಅಕ್ಷಯಕ್ಕೆ ನೀಡುವ ಕಾಣಿಕೆ.*

ಅನಂತನಾದ ಭಗವಂತನನ್ನು ಅನಂತ ರೀತಿಯಲ್ಲಿ ಆರಾಧಿಸುವುದೆಂದರೆ ಪರಮತ ಸಹಿಷ್ಣುತೆ ಮತ್ತು ಭ್ರಾತೃಭಾವಗಳನ್ನು ಕಾರ್ಯತಃ ಸಾಧಿಸುವುದು. ಭಾರತವು ಈ ವಿಶ್ವಸೌಹಾರ್ದವನ್ನು ತನ್ನ ವೈದಿಕ ಋಷಿಗಳು ಹಾಡಿರುವ 'ಏಕಂ ಸತ್ ವಿಪ್ರಾ ಬಹುಧಾ ವದಂತಿ—ಸತ್ಯವು ಒಂದೇ, ಋಷಿಗಳು ಅದನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ' ಎಂಬ ಮಹತ್ತಾದ ಸೂಕ್ತಿಯಿಂದ ಪಡೆದರು. ಸ್ವಾಮಿ ವಿವೇಕಾನಂದರು ಇದನ್ನು 'ಧರ್ಮದ ಮಹಾಸ್ವಾತಂತ್ರ್ಯ ಶಾಸನ' ಎಂದು ಕರೆಯುತ್ತಾರೆ. ವೈದಿಕ ಋಷಿಗಳ ಪುನರುಜ್ಜೀವನರೂಪದಲ್ಲಿ ಕೃಷ್ಣ, ಬುದ್ಧ, ಶಂಕರ, ರಾಮಕೃಷ್ಣ ಮತ್ತು ಇನ್ನೂ ಅನೇಕ ಹಿರಿಯಕಿರಿಯ ತೇಜೋಮೂರ್ತಿಗಳು ಉದಿಸಿ, ಧರ್ಮದಲ್ಲಿ ಸ್ವಾತಂತ್ರ್ಯವೂ, ಮಾನವರ ಪರಸ್ಪರ ಸಂಬಂಧದಲ್ಲಿ ವಿವೇಕವೂ ಇರಬೇಕೆಂಬುದನ್ನು ತಮ್ಮ ಸ್ಫೂರ್ತಿಯುತವಾದ ವಾಣಿಯಿಂದ ಪ್ರತಿಪಾದಿಸಿದ್ದಾರೆ. ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳುತ್ತಾನೆ (ಗೀತೆ iv-೧೧) :

> ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ;
> ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ—

*ಯಾರು ಹೇಗೆ ನನ್ನನ್ನು ಆಶ್ರಯಿಸುತ್ತಾರೆಯೋ ಅವರನ್ನು ನಾನು ಹಾಗೆ ಅನುಗ್ರಹಿಸುತ್ತೇನೆ, ಎಲೈ ಅರ್ಜುನ ! ಮನುಷ್ಯರು ಸರ್ವಪ್ರಕಾರದಿಂದಲೂ ನನ್ನ ಪಥವನ್ನೇ ಅನುಸರಿಸುತ್ತಾರೆ.*

ಹಿಂದೆಯೇ ಹೇಳಿರುವಂತೆ, ಈ ಮೇಲಿನ ಭಾವನೆಯನ್ನು ಎತ್ತಿಹಿಡಿದವರು ಕೇವಲ ಸಂತರು ಮತ್ತು ಋಷಿಗಳು, ಚಿಂತನಾಶೀಲರೂ ಮತ್ತು ದಾರ್ಶನಿಕರೂ ಮಾತ್ರವೇ ಅಲ್ಲ; ಸಾಮಾನ್ಯ ಜನರೂ ಕೂಡ ಅದನ್ನು ಎತ್ತಿಹಿಡಿದರು. ಈ ಹಿತಕರವಾದ ಮನೋಭಾವವನ್ನು ರಾಜ್ಯಾಡಳಿತದಲ್ಲಿ ಕೂಡ ಅನುಸರಿಸಲಾಯಿತು. ಹೀಗೆ ಅನುಸರಿಸಿದ ರಾಜರ ಮತ್ತು ಚಕ್ರವರ್ತಿಗಳ ದೊಡ್ಡ ಸಾಲಿನಲ್ಲಿ ಮೂರನೆಯ ಶತಮಾನದಲ್ಲಿದ್ದ ಅಶೋಕ ಚಕ್ರವರ್ತಿಯು ಅತ್ಯಂತ ಭವ್ಯವಾದ ಉದಾಹರಣೆಯಾಗಿದ್ದಾನೆ. ಆತನು ವಿಸ್ತಾರವಾದ ತನ್ನ ರಾಜ್ಯದಲ್ಲೆಲ್ಲಾ ಕಲ್ಲುಬಂಡೆಗಳ ಮೇಲೂ ಕಂಬಗಳ ಮೇಲೂ ಸ್ಫೂರ್ತಿಯುತವಾದ ಶಾಸನಗಳನ್ನು ಕೊರೆಸಿ ಈ ಭಾವನೆಯನ್ನು ಪ್ರಸಾರ ಮಾಡಿದನು. ಪರಮತ ಸೈರಣೆಯ ಈ ಸ್ವೀಕಾರವು ಭಾರತೀಯ ಸಂಸ್ಕೃತಿಯ ಸಾರವಾಗಿದೆ. ಅದು ರಾಜಕೀಯದ ಅವಸರದಿಂದಾಗಲೀ ಸಾಮಾಜಿಕ ಚಾತುರ್ಯದಿಂದಾಗಲೀ ನಿಯಂತ್ರಿತವಾದುದಲ್ಲ. ಅದು ಅದರ ಯಥಾರ್ಥ ದರ್ಶನದ ಫಲ ಮತ್ತು ವಿಶ್ವದೃಷ್ಟಿಯ ಅಖಂಡ ಅಂಶ.

## ೧೯. ಸಾಂಸ್ಕೃತಿಕ ಮತ್ತು ಧಾರ್ಮಿಕ ನೆಲೆ ತಪ್ಪಿದವರಿಗೆ ಭಾರತದ ಸುಸ್ವಾಗತ

ನೆಲೆ ತಪ್ಪಿ ಭಾರತಕ್ಕೆ ಬಂದ ಇತರ ಮತಧರ್ಮದವರಿಗೂ ಜನಾಂಗದವರಿಗೂ ಇಲ್ಲಿನ ಆಳರಸರೂ ಮತ್ತು ಜನತೆ ನೀಡಿದ ಸತ್ಕಾರವು ಭಾರತ ಸಂಸ್ಕೃತಿಯ ಅತ್ಯಂತ ಭವ್ಯ ಮುಖಗಳಲ್ಲಿ ಒಂದು. ತಮ್ಮ ಸ್ವಂತ ದೇಶಗಳಲ್ಲಿಯೇ ಅಪಾರ ಹಿಂಸೆಗೆ ಒಳಗಾಗಿ, ತಮ್ಮ ದೇವಸ್ಥಾನಗಳೆಲ್ಲ ನಾಶವಾಗಿ, ತಮ್ಮ ಮತಬಾಂಧವರು ಸಾಮೂಹಿಕ ಕಗ್ಗೊಲೆಗೆ ಒಳಗಾಗಿ ಪ್ಯಾಲಸ್ಟೈನಿನ ಯಹೂದಿಗಳೂ, ಇರಾನಿನ ಪಾರ್ಸಿಕರೂ ಭಾರತೀಯರ ಪರಮತಸಹಿಷ್ಣುತೆ ಮತ್ತು ಅತಿಥಿಸತ್ಕಾರಗಳ ಪರಂಪರೆಯಲ್ಲಿ ನಂಬಿಕೆ ಇಟ್ಟು ರಕ್ಷಣೆಯನ್ನು ಅರಸುತ್ತಾ ಇಲ್ಲಿಗೆ ಬಂದರು. ಇಲ್ಲಿ ಅವರ ನಿರೀಕ್ಷೆ ಮತ್ತು ಆಶೋತ್ತರಗಳು ನೆನೆದಂತೆಯೇ ಕೈಗೂಡಿದವು. ಏಕೆಂದರೆ ಭಾರತವು ಅವರನ್ನು ಆದರ ಗೌರವಗಳಿಂದ ಸ್ವಾಗತಿಸಿತು. ಅಂದಿನಿಂದ ಅದು ಅವರನ್ನೂ ಅವರ ಧರ್ಮಗಳನ್ನೂ ಸಂರಕ್ಷಿಸಿಕೊಂಡು ಬಂದಿದೆ. ಸ್ವಾಮಿ ವಿವೇಕಾನಂದರು ೧೮೯೩ನೇ ಸೆಪ್ಟೆಂಬರ್ ೧೧ರಂದು ಚಿಕಾಗೋ ಧರ್ಮ ಸಮ್ಮೇಳನದಲ್ಲಿ ತಮ್ಮ ಪ್ರಾರಂಭ ಭಾಷಣ ಮಾಡುತ್ತಾ ಭಾರತ ಇತಿಹಾಸದಲ್ಲಿಯೇ ಅಲ್ಲ ಇಡೀ ಮಾನವ ಇತಿಹಾಸ ದಲ್ಲಿಯೇ ಅತ್ಯಂತ ಭವ್ಯವಾದ ಈ ಪ್ರಕರಣವನ್ನು ಕುರಿತು ಸ್ಮರಣಯೋಗ್ಯವಾದ ವಾಣಿಯಲ್ಲಿ ಹೀಗೆ ಹೇಳಿದ್ದಾರೆ (ಕೃತಿಶ್ರೇಣಿ, ಸಂಪುಟ ೧-ಪುಟ ೩, ೪):

*ಜಗತ್ತಿಗೆಲ್ಲಾ ಧಾರ್ಮಿಕ ಸಹಾನುಭೂತಿ ಮತ್ತು ಸಾರ್ವತ್ರಿಕ ಅಂಗೀಕಾರವನ್ನು ಬೋಧಿಸಿದ ಧರ್ಮಕ್ಕೆ ನಾನು ಸೇರಿದವನೆಂಬುದು ನನ್ನ ಹೆಮ್ಮೆ. ನಾವು ಕೇವಲ ವಿಶ್ವ ಸಹಾನುಭೂತಿಯನ್ನು ಮಾತ್ರ ಒಪ್ಪಿಕೊಳ್ಳುವವರಲ್ಲ ; ಅದರ ಜೊತೆಗೆ ಎಲ್ಲ ಧರ್ಮಗಳೂ ಸತ್ಯವೆಂಬುದನ್ನು ಒಪ್ಪಿಕೊಳ್ಳುತ್ತೇವೆ. ಎಲ್ಲ ಜನಾಂಗಗಳಲ್ಲೂ ಎಲ್ಲ ಧಾರ್ಮಿಕ ಪಂಥಗಳಲ್ಲೂ ಕೋಟಲೆಗೆ ತುತ್ತಾಗಿ ನಿರಾಶ್ರಿತರಾದವರಿಗೆ ಆಶ್ರಯವನ್ನು ಕಲ್ಪಿಸಿಕೊಟ್ಟ ದೇಶಕ್ಕೆ ನಾನು ಸೇರಿದವನೆಂಬುದು ನನಗೊಂದು ಹೆಮ್ಮೆ. ಯಾವ ವರ್ಷ ರೋಮನ್ ಚಕ್ರಾಧಿಪತ್ಯದವರ ದೌರ್ಜನ್ಯದಿಂದ ಯಹೂದ್ಯರ ಪವಿತ್ರ ದೇವಾಲಯವು ನುಚ್ಚುನೂರಾಗಿ ಹೋಯಿತೋ ಅದೇ ವರ್ಷ ಅವರು ದಕ್ಷಿಣ ಭಾರತಕ್ಕೆ ಬಂದು ನಮ್ಮಲ್ಲಿ ಆಶ್ರಯಪಡೆದರು ; ಅಳಿದುಳಿದ ಈ ಇಸ್ರೇಲಿಗಳ ತುಣುಕನ್ನು ನಮ್ಮ ಹೃದಯದಲ್ಲಿ ಅಳವಡಿಸಿಕೊಂಡಿರುವೆವೆಂದು ಹೇಳುವುದು ನಮಗೊಂದು ಹೆಮ್ಮೆ. ಭವ್ಯವಾದ ಜರತುಷ್ಟ್ರ ಜನಾಂಗದ ಅವಶೇಷಕ್ಕೂ ಆಶ್ರಯವಿತ್ತು, ಇಂದಿಗೂ ಅದನ್ನು ಪೋಷಿಸುತ್ತಿರುವ ಧರ್ಮಕ್ಕೆ ನಾನು ಸೇರಿದವ ನೆಂದು ಹೇಳಿಕೊಳ್ಳಲು ನನಗೆ ಹೆಮ್ಮೆ. ಸಹೋದರರೇ, ನನ್ನ ಅತ್ಯಂತ ಬಾಲ್ಯಾರಭ್ಯದಿಂದಲೂ ನಾನು ಪಠಿಸುತ್ತಿದ್ದ ಮತ್ತು ಲಕ್ಷಾಂತರ*

*ಜನರು ದಿನದಿನವೂ ಪಠಿಸುತ್ತಿರುವ ಸ್ತೋತ್ರ ಗೀತೆಯೊಂದನ್ನು ನಾನೀಗ ನಿಮಗೆ ತಿಳಿಸಿ ಹೇಳು ತ್ತೇನೆ—'ಬೇರೆ ಬೇರೆ ಸ್ಥಳಗಳಲ್ಲಿ ಹುಟ್ಟಿದ ನದಿಗಳೆಲ್ಲಾ ಕೊನೆಗೆ ಸಾಗರವನ್ನು ಸೇರುವಂತೆ, ಹೇ ಭಗವಂತ, ಮಾನವರು ಅವರವರ ಸಂಸ್ಕಾರಗಳಿಗೆ ತಕ್ಕಂತೆ ಅನುಸರಿಸುವ ಬೇರೆ ಬೇರೆ ದಾರಿಗಳೆಲ್ಲವೂ, ವಕ್ರವಾಗಿಯೋ ನೇರವಾಗಿಯೋ ನಿನ್ನೆಡೆಗೇ ಕರೆದೊಯ್ಯುತ್ತವೆ*

## ೨೦. ಸ್ವೀಕರಣ ಮತ್ತು ಸಮನ್ವಯ

ಇಂತಹ ವಿಶಾಲವಾದ ಮತ್ತು ಪರಮತ ಸಹಿಷ್ಣುವಾದ ವಿಶ್ವದೃಷ್ಟಿಯಿಂದ ಪ್ರಚೋದಿತವಾದ ಮತ್ತು ಪೋಷಿಸಲ್ಪಟ್ಟ ಸಂಸ್ಕೃತಿಯು ನಿಷ್ಠುರವಾಗಿರುವುದಾಗಲೀ ಪ್ರತ್ಯೇಕತಾ ಮನೋಭಾವವುಳ್ಳ ದ್ದಾಗಲೀ ಆಗಲು ಸಾಧ್ಯವಿಲ್ಲ. ಜನಾಂಗ ಅಥವಾ ಸಾಮಾಜಿಕ -ರಾಜಕೀಯ ಕಾರಣಗಳಾವುವೂ ಈ ಸಂಸ್ಕೃತಿಯ ಕೇಂದ್ರ ಚಾಲಕ ಶಕ್ತಿಗೆ ಕಾರಣವಲ್ಲ ; ಆ ಚಾಲಕ ಶಕ್ತಿ ಪಾರಮಾರ್ಥಿಕವಾದುದು. ಮೇಲಿನ ಎರಡು ಕಾರಣಗಳಲ್ಲಿ ಮೊದಲನೆಯದು ನೈಷ್ಠುರ್ಯವನ್ನೂ ಅಸಹನೆಯನ್ನೂ ಹುಟ್ಟಿಸಿ ಹಿಂಸೆ ಮತ್ತು ಯುದ್ಧಗಳಿಗೆ ಮಾರ್ಗ ಮಾಡುತ್ತದೆ. ಪಾರಮಾರ್ಥಿಕವಾದುದಾದರೋ ವಿಶ್ವವ್ಯಾಪಕ ವಾಗಿ ದಯಾಮಯವಾದುದು. ಈ ವಿಶ್ವವ್ಯಾಪಕವಾದ ಮನೋಧರ್ಮವಿರುವುದರಿಂದಲೇ ಭಾರತ ಧರ್ಮವು ಚರ್ಚಿನಂತಹ ನಿರಂಕುಶಾಧಿಕಾರವುಳ್ಳ ಧರ್ಮಸಂಸ್ಥೆಯನ್ನಾಗಲೀ, ತನ್ನ ರಕ್ಷಣೆ ಪೋಷಣೆಗಾಗಿ ಪ್ರತ್ಯೇಕ ಸಂಪ್ರದಾಯ ಸೂತ್ರಗಳನ್ನಾಗಲೀ ಬೆಳೆಸುವುದಿಲ್ಲ. ಸಂಸ್ಕೃತಿಗಳಲ್ಲಿರ ಬಹುದಾದ ಕಾಠಿಣ್ಯಕ್ಕೆ ಅವುಗಳ ಧರ್ಮಪರಂಪರೆಯಲ್ಲಿನ ಪ್ರತ್ಯೇಕತೆಯೇ ಬಹುಮಟ್ಟಿಗೆ ಕಾರಣವೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಈ ಪ್ರತ್ಯೇಕತಾ ಮನೋಭಾವದ ಬಹು ಅಂಶವು ತನ್ನ ಜನಾಂಗ ಶ್ರೇಷ್ಠವೆಂಬ ತಿಳಿವಳಿಕೆಯಿಂದ ಹುಟ್ಟುತ್ತದೆ. ಮಾನವ ಹೃದಯದಲ್ಲಿ ದೇವರಿರುವ ನೆಂಬ ಅರಿವಿನಿಂದ ಬರುವ ಪಾರಮಾರ್ಥಿಕ ಮನೋಭಾವವು ಎಲ್ಲ ಜನಾಂಗ, ಪಂಥ, ಸಾಮಾಜಿಕ—ರಾಜಕೀಯ ಎಂಬ ಭೇದಭಾವಗಳನ್ನು ಕತ್ತರಿಸಿ, ಮಾನವನನ್ನು ಅವನ ಅಖಂಡ ಪರಿಪೂರ್ಣ ಸ್ಥಿತಿಯಲ್ಲಿ ಸ್ವೀಕರಿಸುತ್ತದೆ. ಕೃಷ್ಣ, ಬುದ್ಧ, ಶಂಕರ ಮತ್ತು ರಾಮಕೃಷ್ಣರು ಮಾನವ ಜನಾಂಗವನ್ನು ಸ್ವೀಕರಿಸಿದುದು ಬಿಡಿ ಬಿಡಿ ಭಾಗವಾಗಿಯಲ್ಲ, ಅದರ ಅಖಂಡರೂಪದಲ್ಲಿ.

ಅತಿನಿಷ್ಠೆ ಮತ್ತು ಪ್ರತ್ಯೇಕತಾ ಮನೋಭಾವಗಳು ಸಂಸ್ಕೃತಿ ಸಂಸ್ಕೃತಿಗಳ ಮಧ್ಯೆ ಚಿರಂತನವಾದ ತಿಕ್ಕಾಟಕ್ಕೆ ಮೂಲವಾಗುತ್ತವೆ. ಅತಿನಿಷ್ಠೆಯ ಸಂಸ್ಕೃತಿಗಳು, ಬರ್ಟ್ರಂಡ್ ರಸಲ್‌ನ ಮಾತುಗಳಲ್ಲಿ ಹೇಳುವುದಾದರೆ, ಪರಸ್ಪರ ಬಿಲಿಯರ್ಡ್ ಚಂಡುಗಳಂತೆ ನಡೆದುಕೊಳ್ಳುತ್ತವೆ; ಅವೆರಡಕ್ಕೂ ಇರುವ ಪರಸ್ಪರ ಸಂಬಂಧವೆಂದರೆ ಘರ್ಷಣೆ ಮಾತ್ರ. ಭಾರತ ಸಂಸ್ಕೃತಿಗೆ ಪುನಃಶ್ಚೇತನಗೊಳ್ಳುವ ಮತ್ತು ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವ ಶಕ್ತಿ ಇರುವುದರಿಂದ ಅದರಲ್ಲಿ ಸಮೀಕರಣ ಮತ್ತು ಸಮನ್ವಯದ ಜಾಯಮಾನ ಬೆಳೆದುಬಂದಿದೆ. ಇದರಿಂದ ಇತಿಹಾಸದಲ್ಲಿ ಧರ್ಮಯುಗದ ಉದ್ದಕ್ಕೂ ಈ ಸಂಸ್ಕೃತಿಯು ಆಗಾಗ ಪುನರುಜ್ಜೀವನಗೊಳ್ಳುತ್ತಾ ಶ್ರೀಮಂತವಾಗಿದ್ದುಕೊಂಡು ಪ್ರಭಾವಯುತ ವಾಗಿ ನಡೆದುಕೊಂಡು ಬರಲು ಸಾಧ್ಯವಾಗಿದೆ. ಸಾಂಸ್ಕೃತಿಕವಾದ ಅತಿನಿಷ್ಠೆಯು 'ನೀನು ಅಥವಾ ನಾನು' ಎಂಬುದನ್ನು ತಾರ್ಕಿಕ ದೃಷ್ಟಿಯಲ್ಲಿ ನೋಡುವುದರಿಂದ ಹುಟ್ಟುತ್ತದೆ. ಭಾರತವಾದರೋ 'ನೀನು, ನಾನು' ಎಂಬುದನ್ನು ಪಾರಮಾರ್ಥಿಕ ದೃಷ್ಟಿಯಿಂದ ನೋಡಹೊರಟಿತು. ಅನೇಕತೆಯಲ್ಲಿ ಏಕತೆಯನ್ನು ಕಾಣುವ ತನ್ನ ಪಾರಮಾರ್ಥಿಕ ದೃಷ್ಟಿಯಿಂದ ಅದು ಸ್ಫೂರ್ತಿಯನ್ನು ಪಡೆಯಿತು. ಈ ದೃಷ್ಟಿಯ ಫಲವಾಗಿ, ಜಡವಾದ, ಏಕತಾನದ ಮತ್ತು ಆಕ್ರಮಣಶೀಲವಾದ ಹೋರಾಟಕ್ಕೆ ಬದಲಾಗಿ ಇಲ್ಲಿನ ಕ್ಷೇತ್ರವು ಶಾಂತಿಯುತವಾದ ಕಾರ್ಯನೀತಿ ಮತ್ತು ವಿವಿಧತೆಯಲ್ಲಿ ಏಕತೆಯ ಕಾರ್ಯಕ್ರಮವನ್ನು ಅಳವಡಿಸಿಕೊಂಡಿತು.

ಈ ಸಮೀಕರಣ ಕಾರ್ಯಗತಿಯು ಭಾರತ ಇತಿಹಾಸದ ಅತ್ಯಂತ ಪ್ರಾಚೀನಕಾಲದಲ್ಲಿಯೇ, ಹಿಂದೂ ಆರ್ಯರು ಮೊಟ್ಟಮೊದಲು ಸಿಂಧೂ ಕಣಿವೆಯ ಜನರೊಡನೆಯೂ ಮತ್ತು ಭಾರತದಲ್ಲಿ ಮೊದಲಿನಿಂದಲೂ ನೆಲೆಸಿದ್ದ ಇತರ ಜನರೊಡನೆಯೂ ಸೇರಿದಾಗಲೇ ಪ್ರಾರಂಭವಾಯಿತು. ಶಕ್ತಿಯುತವಾದ ಈ ಎರಡು ಸಂಸ್ಕೃತಿ ಪ್ರವಾಹಗಳೂ ಸಮಗ್ರವಾಗಿ ಸಮನ್ವಯಗೊಂಡು ಭಾರತ ಸಂಸ್ಕೃತಿಯ ನದಿಯಾಗಿದೆ. ಈ ನದಿಯು ಹೊಸ ಸಂಸ್ಕೃತಿಯನ್ನೂ ಹೊಸ ಜನರನ್ನೂ ಸಮೀಕರಿಸಿ ಕೊಳ್ಳುವುದರ ಮೂಲಕ ಹೊಸ ಶಕ್ತಿಯನ್ನು ಕೂಡಿಸಿಕೊಳ್ಳುತ್ತಾ ಹರಿದುಕೊಂಡು ಹೋಯಿತು. ಗಂಗಾ ನದಿಯು ಭಾರತ ಸಂಸ್ಕೃತಿಗೆ ಸೊಗಸಾಗಿ ಹೊಂದಿಕೊಳ್ಳುವ ಒಂದು ಲಾಂಛನ. ಅದು ಹಿಮಾಲಯದ ವಕ್ಷಸ್ಥಳದಲ್ಲಿ ಪವಿತ್ರವಾದ ಒಂದು ಚಿಕ್ಕ ತೀರ್ಥವಾಗಿ ಹುಟ್ಟುತ್ತದೆ ; ಅದು ಹರಿಯುತ್ತ ದಾರಿಯಲ್ಲಿ ಹಲವಾರು ಉಪನದಿಗಳಿಂದ ನೀರನ್ನು ಪಡೆದು ಕಡೆಯಲ್ಲಿ ಲಕ್ಷಾಂತರ ಜನರಿಗೆ ಆನಂದವನ್ನೂ ಧನ್ಯತೆಯನ್ನೂ ನೀಡುವ ಮಹಾನದಿಯಾಗುತ್ತದೆ. ಇರಾನಿನವರು, ಗ್ರೀಕರು, ಸಿಥಿಯನ್ನರು, ಅರಬ್ಬರು, ತುರುಕರು, ಮುಂಗೋಲಿಯನರು ಮತ್ತು ಕಟ್ಟಕಡೆಯದಾಗಿ ಯೂರೋಪಿನವರು—ಇವರೆಲ್ಲರೂ ಭಾರತ ಸಂಸ್ಕೃತಿಯ ಶ್ರೀಮಂತಿಕೆಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಜಗತ್ತಿನಲ್ಲಿರುವ ಎಲ್ಲ ಮುಖ್ಯ ಮತಧರ್ಮಗಳೂ ಈ ಸಂಸ್ಕೃತಿಯ ಪ್ರವಾಹದಲ್ಲಿ ತಮ್ಮ ಭಾವಗಳನ್ನು ದರ್ಶನಗಳನ್ನು ಸುರಿದಿದ್ದಾರೆ.

### ೨೧. ಭಾರತ ಸಂಸ್ಕೃತಿಯ ಆಧುನಿಕ ಪುನರುಜ್ಜೀವನ

ಬೇರೆಬೇರೆಯಾದ ಈ ಮೂಲಾಂಶಗಳ ಸಮೀಕರಣ ಕಾರ್ಯವು ಇನ್ನೂ ಮುಗಿದಿಲ್ಲವೆಂಬುದು ನಿಜ ; ಎಲ್ಲ ಬಗೆಯ ಸಮೀಕರಣ ಕಾರ್ಯದಲ್ಲಿಯೂ, ಕೇಂದ್ರಭೂತವಾದ ಸಾಂಸ್ಕೃತಿಕ ಸಂಪ್ರದಾಯದ ಸತ್ವಶಕ್ತಿಯೂ ಮತ್ತು ಹೊರಗಿನಿಂದ ಬಂದು ಸೇರಿಸಿಕೊಳ್ಳುತ್ತಿರುವ ಸಾಂಸ್ಕೃತಿಕ ಪ್ರಭಾವಗಳಿಗೆ ಅದು ನೀಡುವ ಆಶ್ರಯವೂ ಅಡಕವಾಗಿರುತ್ತವೆ. ಸುಮಾರು ಕ್ರಿಸ್ತಶಕ ಸಾವಿರದಿಂದೀಚೆಗೆ ಈ ಕೇಂದ್ರ ಸಾಂಸ್ಕೃತಿಕ ಸಂಪ್ರದಾಯವು ದುರ್ಬಲವಾಗುತ್ತಾ ಬಂದಿದೆ. ಇದು ಸಮೀಕರಣ ಕಾರ್ಯಗತಿಯನ್ನು ಸಂಪೂರ್ಣವಾಗಿ ತಡೆದು ನಿಲ್ಲಿಸಿಲ್ಲವಾದರೂ ಅದರ ವೇಗವನ್ನು ತಗ್ಗಿಸಿದೆ. ಇಂದು ಭಾರತವು ತನ್ನ ಸಂಸ್ಕೃತಿಯಲ್ಲಿ ಒಂದು ಪುನರುಜ್ಜೀವನವನ್ನೂ, ಸಮೀಕರಣ ಕಾರ್ಯಗತಿಯಲ್ಲಿ ಒಂದು ತೀವ್ರತೆಯನ್ನೂ ಕಾಣುತ್ತಿದೆ. ಇಷ್ಟೇ ಅಲ್ಲ ; ಆಧುನಿಕ ರಾಷ್ಟ್ರೀಯ ಪುನರುಜ್ಜೀವನಕ್ಕೆ ಹೊಣೆಗಾರರೂ ನಾಯಕರೂ ಆದ ರಾಮಮೋಹನರಾಯ್, ರಾಮಕೃಷ್ಣ, ವಿವೇಕಾನಂದ, ಟಾಗೂರ್, ಗಾಂಧಿ—ಇವರೆಲ್ಲರೂ ತಮ್ಮ ದೃಷ್ಟಿಯಲ್ಲಿಯೂ ಅಭಿಪ್ರಾಯದಲ್ಲಿಯೂ ದೇಶೋವಿಶಾಲವಾಗಿ ದಯಾಪೂರ್ಣರಾಗಿದ್ದವರು. ಇವರ ಪ್ರೇರಣೆಗೊಳಗಾಗಿ ಈ ಪುನರುಜ್ಜೀವನದ ಕಾರ್ಯಗತಿಯು ವ್ಯಾಪಕವೂ ಪರಿಪೂರ್ಣವೂ ಆಗಿದೆ ; ಇದರಿಂದ ಮಾನವ ಜನಾಂಗದ ಎಲ್ಲ ಶ್ರೇಷ್ಠ ಸಂಸ್ಕೃತಿ ಪರಂಪರೆಗಳ ಸಮನ್ವಯಕ್ಕೆ ತಾನು ತೌರುಮನೆಯಾಗುವಂತೆ ಭಾರತವು ನಾಂದಿಯನ್ನು ಹಾಡುತ್ತಿದೆ. ರಾಮಕೃಷ್ಣ ವಿವೇಕಾನಂದರನ್ನು ವಿಶ್ವಾತ್ಮರೆಂದು ವರ್ಣಿಸುತ್ತಾ ಭಾರತದಲ್ಲಿ ನಡೆಯುತ್ತಿರುವ ಆಧುನಿಕ ಪುನರುಜ್ಜೀವನದ ಮಹಾಪುರುಷಶ್ರೇಷ್ಠರೆಂದು ಅವರನ್ನು ತನ್ನ ಪಾಶ್ಚಾತ್ಯ ವಾಚಕರಿಗೆ ರೊಮ್ಮೆ ರೋಲಾ ಹೀಗೆ ಪರಿಚಯ ಮಾಡಿಕೊಡುತ್ತಾನೆ (The Life of Ramakrishna, p. 8) :

> *ಆಧ್ಯಾತ್ಮಿಕ ಮಹಾಪುರುಷರ ವೈಭವಯುತವಾದ ದಿಬ್ಬಣದಿಂದ—ಇವರ ವಿಚಾರವನ್ನು ಮುಂದೆ ಸಮೀಕ್ಷಿಸುತ್ತೇನೆ—ನನ್ನ ಗೌರವಕ್ಕೆ ಪಾತ್ರರಾದ ಇಬ್ಬರನ್ನು ಮಾತ್ರ ಇಲ್ಲಿ ಆಯ್ದು ಕೊಂಡಿದ್ದೇನೆ. ಏಕೆಂದರೆ, ಅವರು ಅದ್ವಿತೀಯವಾದ ಚಿತ್ತಾಕರ್ಷಣೆ ಮತ್ತು ಸತ್ವಶಕ್ತಿಗಳಿಂದ ವಿಶ್ವಾತ್ಮದ ದಿವ್ಯ ಸ್ವರಸಮ್ಮೇಳನವನ್ನು ಸಾಕ್ಷಾತ್ಕಾರಮಾಡಿಕೊಂಡಿದ್ದಾರೆ. ಹಾಗೆ ಹೇಳಬಹು*

*ದಾದರೆ ಅವರು ಆ ಸ್ವರಸಮ್ಮೇಳನದ ಮೊಸಾರ್ಟ್ ಮತ್ತು ಅದರ ಬಿಥೋವನ್—ಪೇಟರ್ ಸೆರಾಫಿಕಸ್ ಮತ್ತು ಗುಡುಗಿನ ಅಧಿದೇವತೆಯಾದ ಜೋನ್ ಆಗಿರುವ ರಾಮಕೃಷ್ಣ ಮತ್ತು ವಿವೇಕಾನಂದರು.*

## ೨೨. ಮುಕ್ತಾಯ : ಭಾರತೀಯ ಸಂಸ್ಕೃತಿಯ ಭವಿಷ್ಯ

ಭಾರತ ಸಂಸ್ಕೃತಿಯು ತನ್ನದೇ ಆದ ರೀತಿಯಲ್ಲಿ ಮಹತ್ತಾದುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ, ಆದರೆ ಅದು ಆಂಶಿಕವಾದುದು ಅಪೂರ್ಣವಾದುದು—ಎಂಬ ವಿವೇಕಾನಂದರ ನಿಶ್ಚಿತಾಭಿಪ್ರಾಯದ ಮೇಲೆ ಸಂಪೂರ್ಣ ಸಂಯೋಜನೆಯ ಪ್ರವೃತ್ತಿಯನ್ನು ಸ್ಥಾಪಿಸಲಾಗಿದೆ. ಏಕ ವಿಷಯ ಪ್ರಾವೀಣ್ಯತೆಯ ಕಾರಣದಿಂದ ಈ ಸಮಗ್ರತೆಯ ಮುದ್ರೆಯನ್ನು ಧರಿಸಿರುವ ಈಗಿನ ಎಲ್ಲ ಸಂಸ್ಕೃತಿಗಳ ವಿಚಾರದಲ್ಲಿಯೂ ಈ ಮಾತು ನಿಜ. ವಿವೇಕಾನಂದರು ಭಾರತ ಸಂಸ್ಕೃತಿಯನ್ನು ತಾವೇ ಸ್ವತಃ ಸಾಧಿಸಿದ್ದ ಮಾರ್ಗದಲ್ಲಿ ಮುನ್ನಡೆಸಿದರು ; ಎಂದರೆ ಆಧುನಿಕ ಸಂಸ್ಕೃತಿಯನ್ನು ಯಥಾರ್ಥವಾದ ಮಾನವೀಯ ಸಂಸ್ಕೃತಿಯಾಗಿ ವಿಕಾಸಗೊಳಿಸಬೇಕೆಂಬ ದೃಷ್ಟಿಯಿಂದ ಆಧುನಿಕ ಸಂಸ್ಕೃತಿಯ ಮೌಲ್ಯಗಳನ್ನು ಮೆಚ್ಚಿ ಹೃದ್ಗತಮಾಡಿಕೊಳ್ಳುವುದು. ಅವರ ನಿಲುವು ಭೂತ ಭವಿಷ್ಯತ್ತುಗಳ ಮತ್ತು ಪ್ರಾಚ್ಯ ಪಾಶ್ಚಾತ್ಯಗಳ ಸಂಗಮಸ್ಥಳದಲ್ಲಿತ್ತು. ರೋಮೈ ರೋಲಾ ಹೀಗೆ ಹೇಳುತ್ತಾನೆ (Life of Vivekananda, chap. IV—The City of Mankind, p. 310) :

*ವಿವೇಕಾನಂದರ ರಚನಾತ್ಮಕವಾದ ಅಸಾಧಾರಣ ಪ್ರತಿಭೆಯನ್ನು ಸಮತೋಲನ ಮತ್ತು ಸಂಯೋಜನೆ ಎಂಬ ಎರಡು ಮಾತುಗಳಲ್ಲಿ ಭಟ್ಟಿ ಇಳಿಸಬಹುದು. ಅವರು ಚೇತನದ ಎಲ್ಲ ಹಾದಿಗಳನ್ನು ಅಂಗೀಕರಿಸಿದರು ; ಸಮಗ್ರವಾಗಿ ನಾಲ್ಕು ಯೋಗಗಳು, ಸನ್ಯಾಸ ಮತ್ತು ಸೇವೆ, ಕಲೆ ಮತ್ತು ವಿಜ್ಞಾನ, ಅತ್ಯಂತ ಪಾರಮಾರ್ಥಿಕವಾದುದರಿಂದ ಹಿಡಿದು ಅತ್ಯಂತ ಪ್ರಾಯೋಗಿಕವಾದುದರವರೆಗೆ, ಧರ್ಮ ಮತ್ತು ಕರ್ಮ, ಅವರು ಬೋಧಿಸಿದ ಪ್ರತಿಯೊಂದು ಮಾರ್ಗವೂ ಅದರದರ ಮಿತಿಯೊಡನೆ ಕೂಡಿತ್ತು. ಆದರೆ ಅವರು ಮಾತ್ರ ಎಲ್ಲ ಮಾರ್ಗಗಳನ್ನೂ ಸಾಧಿಸಿದ್ದರು, ಅಂಗೀಕರಿಸಿದ್ದರು. ನಾಲ್ಕು ಕುದುರೆಗಳನ್ನು ಕಟ್ಟಿದ ರಥದಲ್ಲಿರುವಂತೆ ಅವರು ಸತ್ಯದ ನಾಲ್ಕು ಮಾರ್ಗಗಳ ಕಡಿವಾಣಗಳನ್ನೂ ತಮ್ಮ ಕೈಲಿ ಹಿಡಿದು ಏಕಕಾಲದಲ್ಲಿಯೇ ಅವೆಲ್ಲವುಗಳ ಜೊತೆಗೆ ಅದ್ವೈತದ ಕಡೆಗೆ ಸಾಗುತ್ತಿದ್ದರು. ಅವರು ಮಾನವಶಕ್ತಿಯ ಸಮ್ಮೇಳನವೇ ಮೂರ್ತಿಗೊಂಡಂತಿದ್ದರು.*

ಭಾರತ ತನ್ನ ಪ್ರಭಾವಯುತವಾದ ಮತ್ತು ಸುದೀರ್ಘವಾದ ಗತಕಾಲದಿಂದಲೂ ತನ್ನ ಆಧುನಿಕ ಪುನರುಜ್ಜೀವನದಿಂದ ಗಳಿಸಿಕೊಂಡಿರುವ ನವಯೌವನ ಚೈತನ್ಯಗಳಿಂದಲೂ ಅದು ಮತ್ತು ಅದರ ಸಂಸ್ಕೃತಿಯು ಇನ್ನೂ ವೈಭವಯುತವಾದ ಮತ್ತು ಫಲದಾಯಕವಾದ ಭವಿಷ್ಯವನ್ನು ನಿರೀಕ್ಷಿಸ ಬಹುದು. ಭಾರತವು ಜಗತ್ತಿಗೆ ನೀಡಿರುವ ಕೊಡುಗೆಯನ್ನು ಕುರಿತು ಮಾತನಾಡುತ್ತ ಸ್ವಾಮಿ ವಿವೇಕಾನಂದರು, ಅದರ ಹಿಂದಿನ ಐತಿಹಾಸಿಕ ಪಾತ್ರದ ಆಧಾರದಿಂದ ಅದರ ಭವಿಷ್ಯತ್ತಿನ ಮೇಲೆ ಬೆಳಕನ್ನು ಚೆಲ್ಲುತ್ತಾರೆ (ಕೃತಿಶ್ರೇಣಿ ೩ನೇ ಸಂಪುಟ) :

*ಈ ಪ್ರಪಂಚದಲ್ಲಿ ಹುಟ್ಟಿರುವ ಪ್ರತಿಯೊಬ್ಬನಿಗೂ ಒಂದು ಹವ್ಯಾಸವಿದೆ. ಅವನು ಅದರ ದಿಕ್ಕಿನಲ್ಲಿ ಹೋಗಬೇಕು, ಆ ಬಾಳನ್ನು ಬಾಳಲೇ ಬೇಕು. ವ್ಯಕ್ತಿಯ ವಿಚಾರದಲ್ಲಿ ಯಾವುದು ಸತ್ಯವೋ ಅದು ಜನಾಂಗದ ವಿಚಾರದಲ್ಲಿಯೂ ಅಷ್ಟೇ ಸತ್ಯ. ಪ್ರತಿಯೊಂದು ಜನಾಂಗಕ್ಕೂ ಒಂದು ಹವ್ಯಾಸವಿದೆ, ಪ್ರತಿಯೊಂದು ಜನಾಂಗಕ್ಕೂ ವಿಶಿಷ್ಟವಾದೊಂದು ಅಸ್ತಿತ್ವ ಕಾರಣವಿದೆ.*

ಪ್ರತಿಯೊಂದು ಜನಾಂಗಕ್ಕೂ ಜಗತ್ ಜೀವನದಲ್ಲಿ ಮಾಡಿ ಮುಗಿಸಬೇಕಾದ ಒಂದು ವಿಶಿಷ್ಟವಾದ ನಿಷ್ಕೃಷ್ಟ ಕಾರ್ಯವಿದೆ. ಪ್ರತಿಯೊಂದು ಜನಾಂಗವೂ ತನ್ನದೇ ಆದ ಫಲಿತಾಂಶಗಳನ್ನು ನೀಡ ಬೇಕು, ನಿಯತ ಕಾರ್ಯವನ್ನು ಮಾಡಿ ಮುಗಿಸಬೇಕು. ರಾಜಕೀಯ ಔನ್ನತ್ಯ ಅಥವಾ ಸೈನ್ಯಶಕ್ತಿಯು ಎಂದೆಂದಿಗೂ ನಮ್ಮ ನಿಯತ ಕಾರ್ಯವಲ್ಲ ; ಅದು ಎಂದೂ ಆಗಿರಲಿಲ್ಲ ಮತ್ತು ನನ್ನ ಮಾತನ್ನು ಗಮನಿಸಿ, ಅದು ಎಂದೂ ಆಗುವುದಿಲ್ಲ. ಆದರೆ ನಮಗೆ ಬೇರೆ ನಿಯತವಾದ ಕಾರ್ಯಗಳು ಇವೆ ; ಜನಾಂಗದ ಎಲ್ಲ ಆಧ್ಯಾತ್ಮಿಕ ಶಕ್ತಿಯನ್ನೂ ಒಂದು ವಿದ್ಯುತ್ ಯಂತ್ರದಲ್ಲಿ ಹೇಗೋ ಹಾಗೆ ರಕ್ಷಿಸಿ, ಉಳಿಸಿ, ಒಟ್ಟುಗೂಡಿಸಿ, ಸಂದರ್ಭದ ಸನ್ನಿವೇಶಗಳು ಶುಭ ಸೂಚಕವಾಗಿದ್ದಾಗಲೆಲ್ಲ ಸಾರವತ್ತಾದ ಆ ಶಕ್ತಿಯನ್ನು ಜಗತ್ತಿನ ವಿಪ್ಲವದೊಳಕ್ಕೆ ಸುರಿಯುವುದು. ಪರ್ಷಿಯನ್ನರು, ಗ್ರೀಕರು, ರೋಮನ್ನರು, ಅರಬ್ಬರು ಅಥವಾ ಇಂಗ್ಲಿಷರು ತಮ್ಮ ಸೈನ್ಯದ ತುಕಡಿಗಳನ್ನು ನಡೆಸಿ ಜಗತ್ತನ್ನೂ ಗೆಲ್ಲಲಿ ; ಹಾಗೆ ಗೆದ್ದ ಬೇರೆ ಬೇರೆ ರಾಷ್ಟ್ರಗಳನ್ನು ಒಟ್ಟಿಗೆ ಕೂಡಿಸಲಿ. ಭಾರತದ ದರ್ಶನ ಮತ್ತು ಅಧ್ಯಾತ್ಮಗಳು ಹೊಸದಾಗಿ ಮಾಡಿದ ಕಾಲುವೆಗಳ ಮೂಲಕ ಜಗತ್ತಿನ ರಾಷ್ಟ್ರಗಳ ಧಮನಿಗಳಲ್ಲಿ ಹರಿಯಲು ಸಿದ್ಧವಾಗಿವೆ. ಹಿಂದೂಗಳ ಪ್ರಶಾಂತ ಚಿಂತನೆಯು ಮಾನವನ ಮುನ್ನಡೆಯ ಮೊತ್ತಕ್ಕೆ ತನ್ನ ಪಾಲಿನ ಹಸುಗೆಯನ್ನು ಸುರಿಯಲೇಬೇಕು. ಜಗತ್ತಿಗೆ ಭಾರತದ ಕೊಡುಗೆ ಎಂದರೆ ಆಧ್ಯಾತ್ಮಿಕ ಜ್ಯೋತಿ... ಬೆಳಗು ಮುಂಜಾನೆ ಮೃದುವಾದ ಮಂಜು ಕಣ್ಣಿಗೆ ಕಾಣದಂತೆ, ಕಿವಿಗೆ ಬೀಳದಂತೆ, ಆದರೂ ಅತ್ಯಂತ ಮಹತ್ತಾದ ಪರಿಣಾಮಕರವಾಗಿ ಸುರಿಯುವಂತೆ, ಈ ಪ್ರಶಾಂತವಾದ, ತಾಳ್ಮೆಯಿಂದ ಕೂಡಿದ, ಸಂಕಟಗಳನ್ನೆಲ್ಲ ಅನುಭವಿಸಿ ಮುಗಿಸುವ ಈ ಜನಾಂಗವು ಚಿಂತನಾ ಜಗತ್ತಿನಲ್ಲಿ ಕೆಲಸ ಮಾಡುತ್ತಿದೆ.

ಅನು : ತ. ಸು. ಶಾಮರಾಯ

೨

# ಆಧುನಿಕ ಮಾನವನಿಗೆ ವೇದಾಂತದ ಪ್ರಬೋಧನೆ*

## ೧. ಪ್ರಸ್ತಾವನೆ

ಐದು ಸಹಸ್ರ ವರ್ಷಗಳಿಗೂ, ಹೆಚ್ಚು ಕಾಲದಿಂದ ವಿಚ್ಛಿತ್ತಿಯಿಲ್ಲದೆ ಹರಿದು ಬಂದಿರುವ ತನ್ನ ಸುದೀರ್ಘ ಸಾಂಸ್ಕೃತಿಕ ಇತಿಹಾಸಕ್ಕೆ ಭಾರತ ಪ್ರಸಿದ್ಧವಾಗಿದೆ. ಗಮನಾರ್ಹವಾದ ಈ ಸುದೀರ್ಘ ಕಾಲದಲ್ಲಿ ಅದು ಆಲೋಚನಾಸಾಧ್ಯವಾದ ಪ್ರತಿಯೊಂದು ಕೋನ, ಎತ್ತರ, ಆಳಗಳಿಂದಲೂ ಜೀವನದ ಅನುಭವವನ್ನು ಪಡೆದಿದೆ. ಸ್ಥೂಲವಾಗಿ ವಿಶ್ವ ದೃಷ್ಟಿಯಿಂದ ಅದಕ್ಕೆ ದೊರೆತ ಮಾರ್ಗ ದರ್ಶನ, ಮತಧರ್ಮ ಮತ್ತು ಆಧ್ಯಾತ್ಮಿಕ ಪ್ರೇರಣೆಗಳಿಂದ ಅದಕ್ಕೆ ದೊರೆತ ಪೋಷಣೆ—ಇವುಗಳ ಫಲವಾಗಿ ಅದರ ಸಾಂಸ್ಕೃತಿಕ ಜೀವನ ಅತ್ಯಪೂರ್ವ ಗುಣಗಳಿಂದ ಕೂಡಿದ ವಿಪುಲತೆ, ವೈವಿಧ್ಯತೆ ಮತ್ತು ಪರಿಣತೆಗಳಿಂದ ತುಂಬಿದೆ.

## ೨. "ಹಿಂದೂ" ಪದದ ಮೂಲ

ಅದರ ಸಂಸ್ಕೃತಿ ಜೀವನಗಳ ಪ್ರತಿಯೊಂದು ಮುಖವನ್ನೂ ಅರ್ಥಮಾಡಿಕೊಂಡು, ಪೋಷಿಸಿಕೊಂಡು ಬಂದಿರುವ ಆ ಮತಧರ್ಮ ಅಥವಾ ತತ್ತ್ವಶಾಸ್ತ್ರವು (ಏಕೆಂದರೆ ಭಾರತೀಯ ದೃಷ್ಟಿಯಲ್ಲಿ ಇವೆರಡೂ ಬಿಡಿಸಲಾರದಷ್ಟು ಸೇರಿಕೊಂಡು ಹೋಗಿವೆ) ಯಾವುದು ? ಭಾರತವು ಇತ್ತೀಚಿನ ಶತಮಾನಗಳಲ್ಲಿ ನಿರ್ದಿಷ್ಟವಾದ ಹೆಸರು, ಆಚಾರಗಳುಳ್ಳ ನೂರಾರು ಜಾತಿ, ಮತಗಳನ್ನು ತನ್ನ ಮಾತೃಗರ್ಭದಿಂದ ಹೊರತಂದು ಪೋಷಿಸಿರುವುದಾದರೂ ಅದು ತನ್ನ ಮೊದಲ ಮತಧರ್ಮ, ತತ್ತ್ವಶಾಸ್ತ್ರಗಳಿಗೆ ನಿರ್ದಿಷ್ಟವಾದ ಯಾವ ಹೆಸರನ್ನೂ ತಾನೇ ಕೊಡಲಿಲ್ಲ.

'ಹಿಂದೂ', 'ಹಿಂದೂಧರ್ಮ' ಎಂಬ ಮಾತುಗಳನ್ನು ಚಲಾವಣೆಗೆ ತಂದವರು ಭಾರತೇತರ ದೇಶದವರು, ಅದರಲ್ಲಿಯೂ ಮುಖ್ಯವಾಗಿ ಪ್ರಾಚೀನ ಇರಾನಿನವರು. ಸಿಂಧೂ ಅಥವಾ ಇಂಡಸ್ ನದಿಯ ಪೂರ್ವದಿಕ್ಕಿನ ದೇಶದ ಜನ, ಧರ್ಮಗಳನ್ನು ಸೂಚಿಸುವುದಕ್ಕಾಗಿ ಈ ಮಾತುಗಳನ್ನು ಬಳಸಿದರು.

'ಇಂಡಿಯಾ' ಎಂಬ ಮಾತೇ (ಪ್ರಾಚೀನ ಇರಾನಿನ 'ಹಿಂದ್' ಶಬ್ದದಿಂದ ಹುಟ್ಟಿಬಂದುದೆಂದು ಆಧುನಿಕ ಪಾಶ್ಚಾತ್ಯರು ಹೇಳುತ್ತಾರೆ) ಗ್ರೀಕ್ ಭಾಷೆಯದು. ಭಾರತೀಯ ವಿದ್ವಾಂಸರು ತಮ್ಮ ಧರ್ಮವನ್ನು ಸಾಮಾನ್ಯವಾದ, ಆದರೆ ಅರ್ಥವತ್ತಾದ 'ಸನಾತನ ಧರ್ಮ' ಎಂಬ ಹೆಸರಿನಿಂದ ಕರೆದರು.

---

*ಹದಿನೇಳು ಯೂರೋಪ್ ದೇಶಗಳಲ್ಲಿ ತಮ್ಮ ೪ ತಿಂಗಳಿನ ಪ್ರವಾಸದಲ್ಲಿ ೧೯೬೧ರ ಏಪ್ರಿಲ್ ೧೪ರಂದು ಅಥೆನ್ಸಿನ, ಆರ್ಕಿಯಾಲಾಜಿಕಲ್ ಸೊಸೈಟಿಯ ಸಭಾಮಂದಿರದಲ್ಲಿ ಮಾಡಿದ ಉಪನ್ಯಾಸ.

## ೩. ಉಪನಿಷತ್ತುಗಳ ಶಾಸ್ತ್ರೀಯ ದೃಕ್ಪಥ

ಈ ಸನಾತನಧರ್ಮದ ಮುಖ್ಯ ಲಕ್ಷಣಗಳು ವೈದಿಕ ಸಾಹಿತ್ಯದ ಕೊನೆಯ ಭಾಗಗಳಾದ ಉಪನಿಷತ್ತುಗಳಿಂದ ಅಥವಾ ವೇದಾಂತದಿಂದ ಉದಿಸಿದುದು ಕಂಡುಬರುತ್ತದೆ. ಈ ಉಪನಿಷತ್ತುಗಳಲ್ಲಿ ಕಾಣಬರುವುದು ಪೂರ್ವಸಿದ್ಧವಾದ ಜಾತಿ ಅಥವಾ ಮತದ ಸಿದ್ಧಾಂತಗಳೇನೂ ಅಲ್ಲ ; ಎಲ್ಲ ವಿಜ್ಞಾನಗಳಲ್ಲಿರುವ ಲಕ್ಷಣಗಳಂತೆಯೇ ಅವುಗಳಲ್ಲಿಯೂ ಪ್ರಕೃತಿ, ಜೀವನ, ಅನುಭವಗಳ ಆಧಾರದಿಂದ ಸತ್ಯಾನ್ವೇಷಣೆಯಲ್ಲಿ ತೀವ್ರವಾದ ಆಸಕ್ತಿ ಮತ್ತು ಮನೋವೃತ್ತಿಗಳು ಕಾಣಬರುತ್ತವೆ ; ಆ ಅನ್ವೇಷಣೆ ನಿರ್ಭೀತಿಯಿಂದ ತುಂಬಿದೆ ಮತ್ತು ಅದರಲ್ಲಿ ಸೂಕ್ಷ್ಮಗ್ರಹಣಶಕ್ತಿ ಇತ್ತೆಂಬುದು ವ್ಯಕ್ತವಾಗುತ್ತದೆ.

ಪ್ರಾಚೀನ ಭಾರತವು ಈ ಮತಧರ್ಮದ ಸುಭದ್ರವಾದ ಕಟ್ಟಡವನ್ನು ಹೇಗೆ ನಿರ್ಮಿಸಿತೆಂಬುದನ್ನೂ ಅನಂತವಾದ, ಸರ್ವಗ್ರಾಹ್ಯವಾದ ಆಧ್ಯಾತ್ಮಿಕ ತತ್ತ್ವಗಳಿಂದ ಕೂಡಿದ ಆ ಮತಧರ್ಮದ ಸ್ವರೂಪ ಮತ್ತು ಒಳಹುರುಳನ್ನೂ ಶಾಂತವಾಗಿ, ಜಾಣ್ಮೆಯಿಂದ ಅಧ್ಯಯನ ಮಾಡುವುದರಿಂದ ಇಂದಿನ ನರನಾರಿಯರಿಗೆ ಒಳ್ಳೆಯ ಬೌದ್ಧಿಕ ಮತ್ತು ಆಧ್ಯಾತ್ಮಿಕ ಶಿಕ್ಷಣರೂಪವಾದ ಪ್ರತಿಫಲವಾದೀತು.

ಪ್ರಾಚೀನ ಭಾರತ ಇತಿಹಾಸದ ವೈದಿಕಯುಗ ಕೊನೆಯಾಗುತ್ತಿತ್ತು. ವಾತಾವರಣವೆಲ್ಲವೂ ಏನು ? ಹೇಗೆ ? ಎಂದು ಪ್ರಶ್ನಿಸುವ, ಅನ್ವೇಷಿಸುವ ಮನೋಭಾವದಿಂದ ತುಂಬಿಹೋಗಿತ್ತು ; ಸ್ವತಂತ್ರ ಮನೋಭಾವದ ಗಾಳಿ ಬೀಸುತ್ತಿತ್ತು. ಭಾರತೀಯರ ಆಸಕ್ತಿಯು ಬಾಹ್ಯ ಜಗತ್ತಿನ ಅಧ್ಯಯನದಿಂದ ಅಂತರಂಗ ಜಗತ್ತಿನ ಅಧ್ಯಯನದತ್ತ, ಬಾಹ್ಯವಾದ ಪ್ರಕೃತಿಸ್ವರೂಪದತ್ತಣಿಂದ ಮಾನವನ ಅಂತರಂಗ ಸ್ವರೂಪದತ್ತ ಹೊರಳಿತ್ತು.

ಇದಕ್ಕೂ ಪೂರ್ವದಲ್ಲಿ ನಡೆಯುತ್ತಿದ್ದ ಅಧ್ಯಯನದಿಂದ ಅತ್ಯವಸರವಾಗಿದ್ದ ಚಿಂತನಾಸಮಸ್ಯೆಗಳಿಗೆ—ಜಗತ್ತು ಮಾನವ ಮತ್ತು ಅವನ ಪರ್ಯವಸಾನ ಇವುಗಳಿಗೆ—ಸಮರ್ಪಕವಾದ ಉತ್ತರ ದೊರೆಯುವಂತಿರಲಿಲ್ಲ. ಬಹುಶಃ ಮಾನವನನ್ನು ಅಧ್ಯಯನ ಮಾಡುವುದರಿಂದ ಅಸ್ತಿತ್ವದ ರಹಸ್ಯವನ್ನು ತಿಳಿಯಲು ಸಹಾಯಕವಾಗುವುದೆಂಬ ಭಾವನೆ ಇತ್ತೋ ಏನೋ ! ಹಾಗಿಲ್ಲದಿದ್ದರೂ, ಅದರಿಂದ ಹೊಸದೊಂದು ರಹಸ್ಯಭೇದನಕ್ಕೆ ಅವಕಾಶ ದೊರೆತಂತಾಯ್ತು.

ಮಾನವ ಮತ್ತು ಅವನ ಅಂತರಂಗ ಚೇತನದ ವಿಷಯದಲ್ಲಿ ಪ್ರಾಚೀನ ಭಾರತ ಇತಿಹಾಸದಲ್ಲಿ ಕಾಣಬರುವಂತಹ ಈ ಒಂದು ಅಸಾಧಾರಣವಾದ ಆಸಕ್ತಿಗೆ ಸಂವಾದಿಯಾಗುವಂತೆ ಆಧುನಿಕಕಾಲದ ವಿಚಾರಪರರೂ ಅದರಲ್ಲಿ ಆಸಕ್ತಿಯನ್ನು ತಳೆದಿದ್ದಾರೆ.

ಮಾನವ ಮನಸ್ಸಿನಿಂದ ರಚಿತವಾಗಿರುವ ಆಂತರಿಕ ಜಗತ್ತು ತನ್ನ ಸತ್ಯಸಂಗತಿಗಳಾದ ಪ್ರಜ್ಞೆ, ನೈತಿಕ ಭಾವನೆ, ತಾರ್ಕಿಕ ಮತ್ತು ವಿವೇಚನಾಶಕ್ತಿಗಳು ಎಚ್ಚರ ಸ್ಥಿತಿ, ಸ್ವಪ್ನ, ಗಾಢನಿದ್ರೆ, ತಾನು ಸತ್ತಿಲ್ಲವೆಂಬ ಒಂದು ಅಸ್ಪಷ್ಟ ಭಾವನೆ, ಸಜೀವವಾಗಿರುವುದು ಇವೆಲ್ಲವೂ ಅಂದಿನ ಪ್ರತಿಭಾವಂತರಿಗೆ ಒಡ್ಡಿದ ಸವಾಲಿನಂತಿದ್ದವು ; ಅವರು ಈ ಸವಾಲನ್ನು ಸ್ವೀಕರಿಸಿ ವೈಯಕ್ತಿಕವಾಗಿಯೋ, ಒಟ್ಟಾಗಿಯೋ ಪಟ್ಟುಹಿಡಿದು, ವಾಸ್ತವಿಕ ಪ್ರವೃತ್ತಿಯಿಂದ ಹೋರಾಡಿದರು ; ಆಧ್ಯಾತ್ಮಿಕ ಜ್ಞಾನದ ಇತಿಹಾಸದಲ್ಲಿ ಇಂತಹುದು ಅಪೂರ್ವ.

## ೪. ವೇದಾಂತ : ಒಂದು ಮಹತ್ತರ ಸಮನ್ವಯ

ಈ ಪ್ರಯತ್ನಗಳ ಪರಿಣಾಮಕಾರಕವಾದ ನಿರೂಪಣೆಯೂ, ಅವುಗಳಿಂದ ಪಡೆದ ಸತ್ಯಸಂಗತಿಗಳೂ ಸೂಕ್ಷ್ಮ ಪರಿಜ್ಞಾನವೂ ಉಪನಿಷತ್ತುಗಳ ಅಮರ ಸಾಹಿತ್ಯದಲ್ಲಿ ಮುಂದಿನ ಮಾನವ ಜನಾಂಗಕ್ಕಾಗಿ ಉಳಿದುಕೊಂಡು ಬಂದಿವೆ ; ಅವು ವಿಸ್ತಾರವೂ ವೈವಿಧ್ಯಮಯವೂ ಆದ ವೈದಿಕ ಸಾಹಿತ್ಯದ ಕೊನೆಯ

ಭಾಗಗಳಾಗಿವೆ. ವೇದದ ಸಾರಸರ್ವಸ್ವದಂತಿರುವ ತತ್ತ್ವಗಳನ್ನು ಒಳಗೊಂಡಿರುವುದರಿಂದ ಉಪನಿಷತ್ತುಗಳನ್ನು ವೇದಾಂತವೆಂದೂ ಕರೆಯುತ್ತಾರೆ.

ವೇದಾಂತವೆಂಬುದು ನಿರ್ಭೀತ ಮನಸ್ಸಿನ ಸತ್ಯಾನ್ವೇಷಣೆಯಿಂದ ಸೃಷ್ಟಿಯಾದುದು. ಮ್ಯಾಕ್ಸ್‌ಮುಲ್ಲರ್ ಹೇಳುವಂತೆ (Three Lectures on Vedanta Philosophy, p. 39) : ಆ ಮನಸ್ಸು 'ಸಂತೋಷಪಡಿಸಬೇಕಾಗಿರುವ ಸಾರ್ವಜನಿಕರಿದ್ದಾರೆಂದಾಗಲೀ ಅಥವಾ ತೃಪ್ತಿಪಡಿಸ ಬೇಕಾಗಿರುವ ಟೀಕಾಕಾರರಿರುವರೆಂಬ ಯೋಚನೆಯಿಂದಾಗಲೀ ವಿಚಲಿತವಾಗುವುದಿಲ್ಲ.'

ಆ ಅನ್ವೇಷಣೆಯು ಸಂಪೂರ್ಣ ವಸ್ತುನಿಷ್ಠವಾಗಿ ನಿರ್ಲಿಪ್ತವಾದುದು ; ವ್ಯಕ್ತಿಗತವಾದ ಮನೋ ವೃತ್ತಿ, ಪಕ್ಷಪಾತಗಳಿಂದ ಮುಕ್ತವಾದುದು ; ಗಾಢವಾದ ಸತ್ಯಾನುರಕ್ತಿಯಿಂದ ಪ್ರಚೋದಿತವಾಗಿ ಸಂಪೂರ್ಣ ಸ್ವತಂತ್ರವಾದ ವಾತಾವರಣದಲ್ಲಿ ಹೆಜ್ಜೆ ಹೆಜ್ಜೆಯಾಗಿ ಮುನ್ನುಗ್ಗಿಹೋಗುವಂತಹ ಚಿಂತನೆ ಯಿಂದ ಕೂಡಿದುದು ; ಅಂತರಂಗಸ್ವಭಾವದ ಜಗತ್ತಿನ ಬೇರೆ ಬೇರೆ ಸತ್ಯಸಂಗತಿಗಳನ್ನು ಗಮನಿಸಿ ವರ್ಗೀಕರಿಸುವುದು ; ತತ್ತ್ವಗಳನ್ನು ಮುಂದಿಟ್ಟು ಸವಾಲು ಹಾಕಿ, ತಾಳೆಹಾಕಿ ನೋಡಿ, ಕಟ್ಟಕಡೆಯಲ್ಲಿ ಯಾವ ಪ್ರಭಾವಕ್ಕೂ ಮಣಿಯದೆ, ಯಾವ ಸಿದ್ಧಾಂತಕ್ಕೂ ಮಾರುಹೋಗದೆ ಸ್ವೀಕರಿಸುವುದು ಅಥವಾ ತಿರಸ್ಕರಿಸುವುದು ; ಸ್ವೀಕೃತವಾದ ನಂಬಿಕೆಗಳನ್ನು ಆಕ್ಷೇಪಿಸುವುದು, ಕೆಲವು ವೇಳೆ ಗೇಲಿ ಎಬ್ಬಿಸಿ, ಅನೇಕ ವೇಳೆ ಕಣ್ಣೀರುಗರೆಯದೆ ಅವುಗಳನ್ನು ನಿರಾಕರಿಸುವುದು ; ಅಗೋ ಆಗ ವೇದಾಂತ ಎಂಬ ಹೆಸರಿನ ಸುಂದರ ಚಿಂತನಾಮಂದಿರ ಗೋಚರವಾಗುತ್ತದೆ. ಅದರ ಸಾಧನಾವಿಧಾನ ವ್ಯಕ್ತಿ ನಿಷ್ಠವಲ್ಲ ವಾದ್ದರಿಂದ ಸತ್ವದಲ್ಲಿ ಅದು ವಿಶ್ವವ್ಯಾಪಿಯಾದುದು ; ಅದರ ಯುಕ್ತಿಯುಕ್ತತೆ ಮತ್ತು ಆಧ್ಯಾತ್ಮಿಕತೆ ಗಳು ಅದನ್ನು ವಿಜ್ಞಾನ, ತತ್ತ್ವಜ್ಞಾನ, ಮತಧರ್ಮ-ಧರ್ಮಗಳು ಒಂದಾಗಿ ಸೇರಿರುವ ಒಂದು ಸಮನ್ವಯ ಸಿದ್ಧಾಂತವನ್ನಾಗಿ ಮಾಡಿವೆ.

ಇದು ಆ ಕಾಲದಲ್ಲಿ ಭಾರತದ ಒಂದು ಭಾಗವಾಗಿದ್ದ ಈಗಿನ ಪೂರ್ವ ಪಂಜಾಬ್, ಉತ್ತರಪ್ರದೇಶ, ಪಶ್ಚಿಮ ಬಿಹಾರಗಳಲ್ಲಿ ವ್ಯಾಪಕವಾಗಿ ಕಾಣಿಸಿಕೊಂಡ ಬೌದ್ಧಿಕ ಮತ್ತು ಆಧ್ಯಾತ್ಮಿಕ ಚೈತನ್ಯಾತ್ಮಕ ಶಕ್ತಿಯ ಫಲ. ಆ ಯುಗದ ಅತ್ಯಂತ ಪ್ರತಿಭಾಶಾಲಿಗಳಾದ ಸಂತರು, ರಾಜರು, ಪುರುಷರು, ಸ್ತ್ರೀಯರು, ಯುವಕರು ಎಲ್ಲರೂ ಅದರಲ್ಲಿ ಸೇರಿದ್ದರು.

### ೫. ಉಪನಿಷತ್ತುಗಳು : ಚೈತನ್ಯಾತ್ಮಕ ಯುಗದ ಅದ್ಭುತ ಪರಿಪಾಕ

ಉಪನಿಷತ್ತುಗಳಲ್ಲಿ ನಮಗೆ ಚೈತನ್ಯಾತ್ಮಕ ಯುಗವೊಂದರ ಚಿತ್ರ ಕಾಣಬರುತ್ತದೆ. ಸತ್ಯಜ್ಞಾನ ಗಳನ್ನು ಅನ್ವೇಷಿಸುತ್ತಿರುವ ಗುರು-ಶಿಷ್ಯರ ಮನೋಜ್ಞವಾದೊಂದು ಮೆರವಣಿಗೆ ; ಸಣ್ಣ ಗುಂಪಾಗಿಯೋ, ದೊಡ್ಡ ಸಭೆಗಳಲ್ಲಿಯೋ, ಅವರು ನಡೆಸುತ್ತಿರುವ ಸಂಭಾಷಣೆಯ ಹೃದಯಂಗಮ ನಿರೂಪಣೆ ; ಶಕ್ತಿಯುತವಾದ, ಗಂಭೀರವಾದ ಕಾವ್ಯದ ಭವ್ಯಾಕರ್ಷಣೆಯಿಂದ ಆಗಾಗ ಆ ಜಗತ್ತಿಗೆ ಹಾರಾಟ ; ಸುಂದರವಾದ ರೂಪಕಗಳ ವ್ಯೂಹ, ತೇಲಿಹೋಗುತ್ತಿರುವ ಅವರ ಚಿಂತನೆಯ ಬಾಣ ಗಳಿಗೆ ಕಟ್ಟಿದ ಗರಿಗಳಂತಿರುವ ಪರಿಣಾಮಕಾರಿಯಾದ ಕಲ್ಪನಾ ಚಿತ್ರಗಳು—ಉಪನಿಷತ್ತುಗಳ ಈ ವಿವಿಧ ಲಕ್ಷಣಗಳು ಅವುಗಳಿಗೆ ಕಡೆಯವರೆಗೂ ನಿಲ್ಲಬಲ್ಲಂತಹ ಸಾಹಿತ್ಯದ ಸೌಂದರ್ಯದ ರಮ್ಯತೆ ಗಳನ್ನೂ, ಸಜೀವವಾದ ಅಧ್ಯಾತ್ಮದ ಔನ್ನತ್ಯ ಸತ್ವಗಳನ್ನೂ ನೀಡಿವೆ.

ಭೌತವಿಜ್ಞಾನಿಗಳು ಬಾಹ್ಯವಾದ ಭೌತ ಪ್ರಕೃತಿಯ ಸ್ವರೂಪವನ್ನು ಕುರಿತು ಸೂತ್ರಗಳನ್ನು ಕಂಡು ಹಿಡಿಯುವಂತೆಯೇ ಉಪನಿಷತ್ತಿನ ಋಷಿಗಳು ಅಂತರಂಗ ಜಗತ್ತನ್ನು ನಿಯಮಿಸುತ್ತಿರುವ ಸೂತ್ರ ಗಳನ್ನು ಕಂಡುಹಿಡಿದರು. ತಾವು ವಿವರಿಸಹೊರಡುವ ಸೂತ್ರಗಳು ಅಥವಾ ವಸ್ತುಸ್ಥಿತಿಗಳನ್ನು ವಿಜ್ಞಾನಿ ಗಳು ಸೃಷ್ಟಿಸುವುದಿಲ್ಲ ; ಅವು ಸೃಷ್ಟಿಯಷ್ಟೇ ಅನಾದಿ. ಆದರೆ ಸತ್ಯದ ಮೇಲಿನ ತನ್ನ

ಅಮಿತಾಸಕ್ತಿಯಿಂದ ಹುಟ್ಟಿದ ಏಕಾಂತದ ಸಾಧನೆ, ವಸ್ತುನಿಷ್ಠೆ ಮತ್ತು ನಿಷ್ಪಕ್ಷಪಾತತೆಗಳಿಂದ (ಇವುಗಳನ್ನೇ ವೈಜ್ಞಾನಿಕ ಮನಸ್ಸು, ವೈಜ್ಞಾನಿಕ ಮನಃ ಪರಿಪಾಕ ಎಂದು ಕರೆಯುವುದು) ವಿಜ್ಞಾನಿಯು ತಿಳಿಸುವವರೆಗೆ ಮಾನವನಿಗೆ ಅವು ಗೊತ್ತಿರಲಿಲ್ಲ.

## ೬. "ವೇದ" ಪದದ ಲಕ್ಷಣ ನಿರೂಪಣೆ

ವಿಜ್ಞಾನಿಯು ಪ್ರಕೃತಿಯ ನಿಯಮಗಳನ್ನು 'ಹೊರಗೆಡಹುವವನು' ಮಾತ್ರ ; ಈ ನಿಯಮಗಳ ತಿಳುವಳಿಕೆಯಿಂದ ಪ್ರಕೃತಿಯ ರಭಸವನ್ನೂ ಕಾರ್ಯರೀತಿಗಳನ್ನೂ ನಿಯಂತ್ರಿಸಲು ಅವನು ಶಕ್ತನಾಗುತ್ತಾನೆ. ಬೌದ್ಧಿಕವಾದ, ನೈತಿಕವಾದ, ಆಧ್ಯಾತ್ಮಿಕವಾದ ಸಾಧನೆಯಿಂದ ನಿಶ್ಚಿತವಾಗಿದ್ದ ಮತಿ ಅವರಿಗೆ ಸಹಾಯಕವಾಗಿದ್ದುದರಿಂದ ವೇದಗಳಲ್ಲಿ ನಿರೂಪಿತವಾಗಿರುವ ಆಧ್ಯಾತ್ಮಿಕ ತತ್ತ್ವಗಳನ್ನು ಹೊರಗೆಡಹಿದ ಋಷಿಗಳಿಗೂ ಭಾರತದ ಚಿಂತನಾಶಕ್ತಿ ಅದೇ ಸ್ಥಾನವನ್ನು ನೀಡುತ್ತದೆ.

ಸ್ವಾಮಿ ವಿವೇಕಾನಂದರು ಚಿಕಾಗೋವಿನ ಧರ್ಮಸಮ್ಮೇಳನಕ್ಕೆ ನೀಡಿದ ಉಪನ್ಯಾಸದಲ್ಲಿ (ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೧, ಪುಟ ೪-೫, ೫ನೇ ಆವೃತ್ತಿ) ಹೀಗೆ ಹೇಳುತ್ತಾರೆ :

> *ವೇದಗಳೆಂದರೆ ಯಾವುದೋ ಪುಸ್ತಕಗಳೆಂದು ಅರ್ಥವಲ್ಲ. ಬೇರೆಬೇರೆಯವರು ಬೇರೆ ಬೇರೆ ಕಾಲಗಳಲ್ಲಿ ಕಂಡುಹಿಡಿದ ಆಧ್ಯಾತ್ಮಿಕ ಸೂತ್ರಗಳ ಸಂಗ್ರಹರೂಪವಾದ ಒಂದು ಭಂಡಾರವೆಂದು ಅದಕ್ಕೆ ಅರ್ಥ. ಗುರುತ್ವಾಕರ್ಷಣಸೂತ್ರವು ಅದನ್ನು ಕಂಡುಹಿಡಿಯುವುದಕ್ಕೆ ಮೊದಲೂ ಇತ್ತು, ಮಾನವ ಜನಾಂಗವೆಲ್ಲಾ ಅದನ್ನು ಮರೆತರೂ ಅದು ಇದ್ದೇ ಇರುತ್ತದೆ; ಅದರ ಹಾಗೆಯೇ ಆಧ್ಯಾತ್ಮಿಕ ಜಗತ್ತನ್ನು ನಿಯಮಿಸುತ್ತಿರುವ ಸೂತ್ರವೂ ಕೂಡ. ಒಂದು ಆತ್ಮಕ್ಕೂ ಮತ್ತೊಂದು ಆತ್ಮಕ್ಕೂ ಮಧ್ಯೆ, ಒಂದು ಜೀವಕ್ಕೂ ಎಲ್ಲ ಜೀವಿಗಳ ತಂದೆಯಾದವನಿಗೂ ಮಧ್ಯೆ ಇರುವ ನೈತಿಕವಾದ, ಧಾರ್ಮಿಕವಾದ, ಆಧ್ಯಾತ್ಮಿಕವಾದ ಸಂಬಂಧಗಳು ಅವುಗಳನ್ನು ಕಂಡುಹಿಡಿಯುವುದಕ್ಕೆ ಮೊದಲೂ ಇದ್ದುವು, ನಾವು ಅವುಗಳನ್ನು ಮರೆತರೂ ಅವು ಇದ್ದೇ ಇರುತ್ತವೆ.*
>
> *ಈ ಸೂತ್ರಗಳನ್ನು ಕಂಡುಹಿಡಿದವರನ್ನು ಋಷಿಗಳೆಂದು ಕರೆಯುತ್ತೇವೆ, ಅಲ್ಲದೆ ಪರಿಪೂರ್ಣ ಜೀವಿಗಳೆಂದೂ ಅವರನ್ನು ಗೌರವಿಸುತ್ತೇವೆ. ಅವರಲ್ಲಿ ಅತ್ಯಂತ ಮಹದ್ವ್ಯಕ್ತಿಗಳಾಗಿದ್ದವರಲ್ಲಿ ಕೆಲವರು ಮಹಿಳೆಯರಾಗಿದ್ದರೆಂಬುದನ್ನು ಇಲ್ಲಿನ ಶ್ರೋತೃಗಳಿಗೆ ತಿಳಿಸಲು ನನಗೆ ಸಂತೋಷವಾಗುತ್ತಿದೆ.*

ಆಧ್ಯಾತ್ಮಿಕ ಸತ್ಯಗಳನ್ನು ಕಂಡುಹಿಡಿಯುವ ಈ ಯೋಗ್ಯತೆ—ಈ ಋಷಿತ್ವ ಭಾರತೀಯರ ರಾಷ್ಟ್ರೀಯ ಗುತ್ತಿಗೆಯೇನು ಅಲ್ಲ ; ಅದು ವಿಶ್ವವ್ಯಾಪಿಯಾದ ಅದ್ಭುತ ಗುಣವೆಂದು ಭಾರತದ ಅಭಿಪ್ರಾಯ. ವಾಸ್ತವವಾಗಿ ವೇದಾಂತ ಅಥವಾ ಸನಾತನ ಧರ್ಮವು ಈ ಪ್ರಯತ್ನವೇ ಮತ್ತು ಅದರ ಅತ್ಯುಚ್ಚ ಸ್ಥಿತಿಯೇ ಮತಧರ್ಮವಾಗುತ್ತದೆ ಎಂದು ತಿಳಿಸುತ್ತದೆ. ಮತಧರ್ಮ ಎಂಬುದು ಒಂದು ಅನುಭವವೇ ಹೊರತು ಅದು ಒಂದು ನಂಬಿಕೆಯಾಗಲೀ ಅನುಕರಣೆಯಾಗಲೀ ಅಲ್ಲ ; ಅದು ಮತವೂ ಅಲ್ಲ, ಸಿದ್ಧಾಂತವೂ ಅಲ್ಲ.

## ೭. ವೇದಾಂತದ ವಿಶ್ವವ್ಯಾಪಕತೆ

ಮಾನವನ ಮಹೋನ್ನತವಾದ ಆಧ್ಯಾತ್ಮಿಕಾನುಭವಗಳನ್ನು ಸಪ್ರಮಾಣವಾಗಿ ಹೊರದೋರಿದ ಕ್ರಿಸ್ತ, ಲಾವೊತ್ಸೆ, ಸೇಯಿಂಟ್ ಫ್ರಾನ್ಸಿಸ್, ಎಕ್‌ಹಾರ್ಟ್ ಮೊದಲಾದವರಂತಹ ಭಾರತೇತರ ಋಷಿಗಳನ್ನು ಅಂಗೀಕರಿಸಬೇಕೆಂದು ವೇದಾಂತವು ಭಾರತಕ್ಕೆ ಬೋಧಿಸಿದೆ. ವೇದಾಂತದ ಶಾಶ್ವತ ಫಲಗಳಲ್ಲಿ ಶಾಂತಿ ಮತ್ತು ಸಮನ್ವಯ, ಸಹಿಷ್ಣುತೆ ಮತ್ತು ಸ್ವೀಕಾರಗಳು ಮುಖ್ಯವಾದವು.

ಪರಮಾರ್ಥ ಅದ್ವೈತವಾದುದೆಂದೂ ಅದನ್ನು ತಿಳಿಯಲು ಹಲವು ಮಾರ್ಗಗಳು ಸಾಧ್ಯವೆಂದೂ ಮಾಡುವ ಬೋಧನೆಯಿಂದ ಇದು ಮೂಡಿಬರುತ್ತದೆ. ಋಗ್ವೇದವು ತನ್ನ ಸುಪ್ರಸಿದ್ಧವಾದ 'ಏಕಂ ಸತ್, ವಿಪ್ರಾ ಬಹುಧಾ ವದಂತಿ-ಸತ್ಯ ಒಂದೇ ; ಋಷಿಗಳು ಅದನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ' ಎಂಬ ಹೇಳಿಕೆಯಲ್ಲಿ ಈ ಮಹತ್ತಾದ ಭಾವನೆಯನ್ನು ಬಾಯ್ತುಂಬ ಹೊಗಳಿ ಹೇಳಿದೆ.

ಈ ಮನೋಭಾವನೆಯನ್ನಿಟ್ಟುಕೊಂಡು ಮುಂದಿನ ಪ್ರತಿಯೊಂದು ಯುಗದಲ್ಲಿಯೂ— ಗೀತೆಯಲ್ಲಿನ ಶ್ರೀಕೃಷ್ಣನಿಂದ ಹಿಡಿದು ಬುದ್ಧ, ಅಶೋಕ, ಶಂಕರ, ಅಕ್ಬರ್, ನಮ್ಮ ಕಾಲದವರೇ ಆದ ಶ್ರೀರಾಮಕೃಷ್ಣರವರೆಗೆ—ಭಾರತದ ಅಭಿಪ್ರಾಯವು ಬೆಳೆಯುತ್ತ ಬಂದು, ಕೊನೆಗೆ ಭಾರತದ ಧರ್ಮ, ಸಂಸ್ಕೃತಿಗಳ ದೃಷ್ಟಿಯಲ್ಲಿ ಅದು ಅತ್ಯಂತ ಮುಖ್ಯವಾದ ಒಂದು ಕುರುಹಾಗಿ ಹೋಗಿದೆ.

### ೮. ಮಾನವನ ಸ್ವಭಾವಸಿದ್ಧವಾದ ದೈವತ್ವ

ಮಾನವನು ಸ್ವಭಾವತಃ ದೇವರೇ ಎಂಬುದು ವೇದಾಂತದ ಮತ್ತೊಂದು ಮುಖ್ಯವಾದ ಉಪದೇಶ. ವೇದಾಂತದ ಋಷಿಗಳ ನಿರ್ಮಲ ದೃಷ್ಟಿಗೆ ಮಾನವನು ಸಜೀವ ತನುಮನೋ ಉಪಾಧಿಯ ಮೂಲಕ ದೈವತ್ವದ ಅಭಿವ್ಯಕ್ತಿಗಾಗಿ ಹೋರಾಡುತ್ತಿರುವಂತೆ ಕಾಣಿಸಿತು. ಪರಿಶುದ್ಧತೆ, ಜ್ಞಾನ, ಸ್ವಾತಂತ್ರ್ಯ— ಇವು ಮಾನವನ ಸಾರಭೂತವಾದ ಸ್ವಭಾವಗಳು.

'ಸ್ವರ್ಗದ ಸಾಮ್ರಾಜ್ಯ ನಿನ್ನೊಳಗೇ ಇದೆ' ಎಂದು ಜೀಸಸ್ ಭರವಸೆ ನೀಡುತ್ತಾನೆ. ಪರಿಸರ ಮತ್ತು ಜೀವಗಳಲ್ಲಿ ಉಚಿತವಾದಂತಹ ವ್ಯತ್ಯಾಸಗಳನ್ನು ಪಡೆಯುವುದರ ಮೂಲಕ ಈ ದೈವತ್ವದ ಆವಿರ್ಭಾವವನ್ನು ಪಡೆಯುವ ಕಥೆಯೇ ವಿಕಾಸವಾದದ ಕಥೆಯಾಗಿದೆ. ಈ ವಿಕಾಸವು ಪ್ರಾರಂಭ ದೆಸೆಯಲ್ಲಿ ಅನುಕೂಲ ಅಥವಾ ಪ್ರತಿಕೂಲವಾದ ಸ್ವಾಭಾವಿಕ ಸಂದರ್ಭಗಳಿಂದಲೂ ಅನಂತರ ಸಾಮಾಜಿಕವಾದ ಅಥವಾ ವೈಯಕ್ತಿವಾದ ಕಾರಣಗಳಿಂದಲೂ ವೃದ್ಧಿಗೊಳ್ಳಬಹುದು ಅಥವಾ ಕುಂಠಿತವಾಗಬಹುದು.

ವಿಕಾಸಕಾರ್ಯ ಮುಂದುವರಿದಂತೆಲ್ಲಾ ಮನುಷ್ಯನ ಆತ್ಮಶಕ್ತಿಯು ಸ್ವತಂತ್ರವಾಗಿ ಪ್ರಕಟಗೊಳ್ಳಲು ತಡೆಯಾಗಿರುವ ಅಡ್ಡಿಗಳನ್ನೆಲ್ಲಾ ನಿವಾರಿಸಿಕೊಂಡು ಕ್ರಮಕ್ರಮವಾಗಿ ನಾಗರಿಕತೆ, ಸಂಸ್ಕೃತಿ, ಆಧ್ಯಾತ್ಮಿಕ ಸಾಕ್ಷಾತ್ಕಾರ ಇವುಗಳನ್ನು ಸಾಧಿಸುತ್ತದೆ. ಕ್ರಿಸ್ತರೂ, ಬುದ್ಧರೂ ಈ ವಿಕಾಸದ ಸುದೀರ್ಘ ಪರಿಶ್ರಮದ ಅಂತಿಮ ಗುರಿಯನ್ನು ಪ್ರತಿನಿಧಿಸುತ್ತಾರೆ.

### ೯. ಅನುಭೂತಿಯಾಗಿ ಧರ್ಮ

ಜೀವನದಲ್ಲಿಯೂ ವರ್ತನೆಯಲ್ಲಿಯೂ ಅಂತಸ್ಥವಾದ ದೇವತ್ವವನ್ನು ಪರಿಪೂರ್ಣವಾಗಿ ಅಭಿವ್ಯಕ್ತಿಗೊಳಿಸುವ ಆಧ್ಯಾತ್ಮಿಕ ಸಾಕ್ಷಾತ್ಕಾರವೇ ಜೀವನದ ಪರಮ ಧ್ಯೇಯವೆಂಬ ವೇದಾಂತದ ಮೂರನೆಯ ಮಹತ್ವಪೂರ್ಣ ಅಭಿಪ್ರಾಯವನ್ನು ಇದು ಪರಿಚಯಮಾಡಿಕೊಡುತ್ತದೆ. ಆಹಾರ-ವಸ್ತ್ರ, ವಸತಿ-ಸಂರಕ್ಷಣೆ, ಅಧಿಕಾರ-ಜ್ಞಾನ, ರಾಜಕೀಯ-ಸಮಾಜ, ಇವುಗಳೇ ನಮ್ಮ ಕೊನೆಯ ಗುರಿಯಲ್ಲವೆಂದು ವೇದಾಂತ ಹೇಳುತ್ತದೆ. ಅವು ಕೇವಲ ಸಾಧನಗಳು ಮಾತ್ರ; ಮಾನವನ ಸಂಪೂರ್ಣ ಬೆಳವಣಿಗೆ, ಮೊದಲೇ ಅವನ ಅಂತರಂಗದಲ್ಲಿರುವ ಪರಿಪೂರ್ಣತೆಯ ಸಂಪೂರ್ಣ ಆವಿರ್ಭಾವವೇ ನಿಜವಾದ ಗುರಿ. ಜೀಸಸ್‌ನ ಬುದ್ಧಿವಾದ ಈ ಭಾವನೆ, ಭರವಸೆಗಳನ್ನೇ ಪ್ರತಿಪಾದಿಸುತ್ತದೆ : 'ಸ್ವರ್ಗದಲ್ಲಿರುವ ತಂದೆ ಹೇಗೆ ಪರಿಪೂರ್ಣನಾಗಿದ್ದಾನೆಯೋ ಹಾಗೆ ನೀನೂ ಪರಿಪೂರ್ಣನಾಗಿರು.'

ವೇದಾಂತವು ಮಾನವ ಜೀವನವನ್ನು ಅಖಂಡವಾಗಿ ಕಾಣುತ್ತದೆ. ಅದರ ವಸ್ತು ಮಾನವ ; ಸತ್ಯ, ಸೌಂದರ್ಯ, ಸೌಜನ್ಯಗಳ ಅಖಂಡ ಸ್ವರೂಪವನ್ನು ಅನ್ವೇಷಿಸುತ್ತಿರುವ ಮಾನವ. ಈ

ಅನ್ವೇಷಣೆಯ ಒಂದು ಭಾಗ ಬಾಹ್ಯ ಪ್ರಪಂಚಕ್ಕೆ ಸಂಬಂಧಪಟ್ಟುದು; ಆದರೆ ಈ ಅನ್ವೇಷಣೆಯಲ್ಲಿ ಅತ್ಯಂತ ಅರ್ಥವತ್ತಾದುದು ಅಂತರಂಗ ಜಗತ್ತಿಗೆ ಸೇರಿದುದು. ಮೊದಲನೆಯದು ಭೌತ ಮತ್ತು ಸಮಾಜ ವಿಜ್ಞಾನಗಳ ಅನುಸಂಧಾನದ ಮೂಲಕ ಸಮಾಜದ ಕ್ಷೇಮವನ್ನು ಸಾಧಿಸುತ್ತದೆ; ಎರಡನೆಯದು ನೀತಿ, ಧರ್ಮಗಳ ಸಾಧನೆಯಿಂದ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ಸಾಧಿಸುತ್ತದೆ.

ಲೌಕಿಕ ಮತ್ತು ಅದಕ್ಕೆ ವ್ಯತಿರಿಕ್ತವಾದ ಧಾರ್ಮಿಕ—ಇವೆರಡರಲ್ಲಿ ಯಾವ ತಿಕ್ಕಾಟವೂ ಇರುವುದಕ್ಕೆ ಸಾಧ್ಯವಿಲ್ಲ ; ಏಕೆಂದರೆ ಇವೆರಡೂ ಒಬ್ಬನೆ ವ್ಯಕ್ತಿಯ ಬೇರೆ ಬೇರೆ ಹಂತಗಳನ್ನು ಸೂಚಿಸುತ್ತವೆ. ಜೀವನದ ದೈಹಿಕ, ಮಾನಸಿಕ, ನೈತಿಕ, ಧಾರ್ಮಿಕ ಇತ್ಯಾದಿ ಎಲ್ಲ ಮಟ್ಟಗಳಲ್ಲಿಯೂ ಬೆಳವಣಿಗೆ, ವಿಕಾಸ, ಸಾಕ್ಷಾತ್ಕಾರ ಎಂಬ ಭಾವನೆಗಳು ಪ್ರಧಾನ ಗುಣವಾಗಿರಬೇಕೆಂದು ವೇದಾಂತ ಒತ್ತಿ ಹೇಳುತ್ತದೆ. ಹಾಗಿಲ್ಲದಿದ್ದರೆ ಯಾವ ಮಟ್ಟದಲ್ಲಿಯಾದರೂ ಅದು ಕುಂಠಿತಗೊಂಡು ನಾಶವಾಗ ಬಹುದು. ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಕಠೋಪನಿಷತ್ತಿನ (I. ೩೩-೧೪) ಮಾತುಗಳನ್ನು ಅವಲಂಬಿಸಿ 'ಏಳು ಎಚ್ಚರಗೊಳ್ಳು, ಗುರಿಮುಟ್ಟುವವರೆಗೆ ನಿಲ್ಲಬೇಡ' ಎಂದು ಪಲ್ಲವಿಯಂತೆ ಮೇಲಿಂದ ಮೇಲೆ ಹೇಳುತ್ತಾರೆ.

## ೧೦. ಉಪನಿಷತ್ತುಗಳ ನಂತರ ವೇದಾಂತದ ಬೆಳವಣಿಗೆ

ವೇದಾಂತ ಹುಟ್ಟಿದುದು ಉಪನಿಷತ್ತಿನ ಸಾಹಿತ್ಯದಿಂದ. ಮುಂದಿನ ಒಂದು ಯುಗದಲ್ಲಿ ಅದರ ಅತ್ಯುತ್ತಮವಾದ ಮತ್ತು ಅತ್ಯಂತ ಚೈತನ್ಯಾತ್ಮಕವಾದ ನಿರೂಪಣೆಯು ವ್ಯಾಪಕವಾದ ಆಧ್ಯಾತ್ಮಿಕ ಜ್ಞಾನವಾಗಿ, ಶ್ರೀಕೃಷ್ಣನ ಗೀತೆಯ ಮೂಲಕ ಕಾಣಿಸಿಕೊಂಡಿತು. ಇನ್ನು ಸ್ವಲ್ಪ ಮುಂದೆ ಮಹಾಪುರುಷ ಬುದ್ಧನಿಂದ ತ್ಯಾಗ, ಕರುಣೆಗಳ ಅಧ್ಯಾತ್ಮ ಜ್ಞಾನವಾಗಿ ಮತ್ತೊಂದು ಅರ್ಥಪೂರ್ಣವಾದ ವಿಕಸನ ರೂಪದಿಂದ ಕಾಣಿಸಿಕೊಂಡಿತು. ಇನ್ನೂ ಹನ್ನೆರಡು ಶತಮಾನಗಳಾದ ಮೇಲೆ ಉಜ್ವಲ ತತ್ತ್ವಜ್ಞಾನಿ ಗಳಾದ ಶಂಕರರು ಕಾಣಿಸಿಕೊಂಡು ತಮ್ಮ ದೇಶೋವಿಶಾಲವಾದ ವ್ಯಾಪಕ ಬುದ್ಧಿಯಿಂದ ವೇದಾಂತಕ್ಕೆ ಅತ್ಯಂತ ತಾರ್ಕಿಕ ಸೂತ್ರಗಳನ್ನು ಸಂಪಾದಿಸಿಕೊಟ್ಟರು.

ಅವರಿಂದ ಎಂಟು ಶತಮಾನಗಳ ತರುವಾಯ ಆಚಾರ್ಯ ರಾಮಾನುಜರೂ, ಅವರ ಹಿಂದೆಯೇ ಹಲವು ಉದಾರ ಹೃದಯದ ಸಂತರೂ ಸಮಾಜ ಸುಧಾರಕರೂ ಕಾಣಿಸಿಕೊಂಡರು ; ಅವರಿಂದ ವೇದಾಂತವು ಅಸದೃಶವಾದ ಭಾವಶ್ರೀಮಂತಿಕೆಯನ್ನು ಪಡೆಯಿತು ; ದೈವದ ಕಡೆ ಹರಿಯುತ್ತಿದ್ದ ಅವರ ಆಸಕ್ತಿಯನ್ನು ಮಾನವನತ್ತ ಹರಿಯುವ ಪ್ರೇಮವನ್ನಾಗಿ ಪರಿವರ್ತಿಸಿ ಭಕ್ತಿಭಾವವನ್ನು ತುಂಬುವುದರ ಮೂಲಕ ಬಹುಕಾಲದಿಂದ ಬಯಸುತ್ತಿದ್ದ ಸರ್ವಸಮಾನತಾ ಭಾವವನ್ನು ಸಾಧಿಸಿತು.

ನಮ್ಮ ಕಾಲದಲ್ಲಿಯೇ ಕಳೆದ ಶತಮಾನದಲ್ಲಿ ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದರು ವೇದಾಂತದ ಇಬ್ಬರು ಚೈತನ್ಯಾತ್ಮಕ ಪ್ರತಿನಿಧಿಗಳಾಗಿ ಕಾಣಿಸಿಕೊಂಡು, ಪ್ರಾಚೀನ ಭಾವನೆಗಳ ಬೆಳವಣಿಗೆಗಳೆಲ್ಲವನ್ನೂ ಕೂಡಿಸಿಕೊಂಡು, ಅವುಗಳೊಡನೆ ಆಧುನಿಕ ವಿಜ್ಞಾನ, ಸಮಾಜ ಜ್ಞಾನಗಳಿಂದ ಸ್ಥಾಪಿತವಾಗಿರುವ ಚೈತನ್ಯಾತ್ಮಕ ಭಾವನೆಗಳನ್ನು ಸೇರಿಸಿ ಇಡೀ ಮಾನವ ಜನಾಂಗದ ಒಂದು ವ್ಯಾಪಕವಾದ ಸಮನ್ವಯ ತತ್ತ್ವವನ್ನು ಹೊರತಂದರು.

## ೧೧. ಮುಕ್ತಾಯ

ವೇದಾಂತವು ಅತ್ಯಂತ ಪೂಜನೀಯವಾಗಿ ಪ್ರಾಚೀನವಾದುದಾದರೂ ಅದರ ಇತಿಹಾಸದ ಪ್ರತಿಯೊಂದು ಮಹದ್ಘಟನೆಯ ಕಾಲದಲ್ಲಿಯೂ ಅದು ತಾರುಣ್ಯಭರಿತವಾಗಿ, ಚೈತನ್ಯಪೂರ್ಣವಾಗಿ ಇದ್ದುಕೊಂಡು ಬಂದಿದೆ. ಆದರೆ, ಆಧುನಿಕ ಭೌತಶಾಸ್ತ್ರ ಮತ್ತು ತಂತ್ರಶಾಸ್ತ್ರಗಳಿಂದ ಸೃಷ್ಟಿಯಾದ

ಆಧುನಿಕ ಜಗತ್ತಿನ ಸ್ಥಿತಿಗತಿಗಳ ಸಂದರ್ಭದಲ್ಲಿ ಅದರ ಅತ್ಯಂತ ಚಿತ್ತಾಕರ್ಷಕವಾದ ಕಥೆಯು ಈಗತಾನೇ ಪ್ರಾರಂಭವಾಗುತ್ತಿದೆ; ಇದರಲ್ಲಿ ಇಡೀ ಜಗತ್ತಿನ ವಿಚಾರಪರವಾದ ಮಾನವ ಜನಾಂಗವೇ ಶ್ರೋತೃವಾಗಿದೆ.

ಅನು : ತ. ಸು. ಶಾಮರಾಯ

೩

# ಸನಾತನ ಧರ್ಮದ ತತ್ತ್ವಜ್ಞಾನ*

## ೧. ಪ್ರಸ್ತಾವನೆ

ಭಾರತದ ಋಷಿಗಳು ಬೋಧಿಸಿದ ಧರ್ಮಜ್ಞಾನವು ಸನಾತನ ಧರ್ಮ ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ವೇದಾಂತದ ಸಿದ್ಧಾಂತಗಳು ಇದರ ಆಧ್ಯಾತ್ಮಿಕ ಮೂಲ. ಜೀವನದ ಮತ್ತು ಅನುಭವದ ಪೂರ್ಣತೆಯನ್ನು ಸಮಗ್ರತೆಯನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿ, ವಿಶ್ವದೃಷ್ಟಿಯ ಹಿನ್ನೆಲೆಯಲ್ಲಿ ಜೀವನ ಮತ್ತು ಅನುಭವಗಳ ಎಲ್ಲಾ ಅಂಶಗಳನ್ನು ಮೌಲ್ಯಮಾಪನ ಮಾಡುವ ದೃಢಪ್ರಯತ್ನ ಇದರಲ್ಲಿ ನಡೆದಿರುವುದರಿಂದ ಸನಾತನ ಧರ್ಮವೆಂಬ ಇದರ ಖ್ಯಾತ ನಾಮವು ಸಮರ್ಥನೀಯವಾಗಿದೆ.

## ೨. ವೇದಾಂತ

ವೇದಾಂತದ ಋಷಿಗಳ ಏಕೈಕವಾದ ಹೆಗ್ಗುರಿ ಎಂದರೆ ವಸ್ತುಗಳಲ್ಲಿರುವ ಸತ್ಯವನ್ನು ಶೋಧಿಸುವುದು. ಆಧ್ಯಾತ್ಮಿಕ ಸಮಾಲೋಚನೆಯ ಇತಿಹಾಸದಲ್ಲಿಯೇ ಅಪೂರ್ವವಾದ ಒಂದು ಆಸಕ್ತಿ, ಸತ್ವ, ವಸ್ತುನಿಷ್ಠೆಗಳಿಂದ ಅವರು ಈ ಗುರಿಯನ್ನು ಬಿಡದೆ ಹಿಂಬಾಲಿಸಿದರು. ವೇದಾಂತಿಗಳ ಈ ಸ್ಫೂರ್ತಿಯು ಆಧುನಿಕ ವಿಚಾರಪರರ ಮುಕ್ತಕಂಠದ ಪ್ರಶಂಸೆಗೆ ಪಾತ್ರವಾಗಿದೆ. ಪ್ರೊ. ಮ್ಯಾಕ್ಸ್ ಮುಲ್ಲರು ತಮ್ಮ Three Lectures on Vedanta Philosophy ಇದರಲ್ಲಿ (ಪು. ೩೯-೪೦) ಹೀಗೆ ಹೇಳುತ್ತಾರೆ :

> *ಪ್ರಾಚೀನ ಸಂಸ್ಕೃತ ದಾರ್ಶನಿಕರಲ್ಲಿನ ಮಹೋತ್ಕೃಷ್ಟತೆಯ ಬಹುಭಾಗಕ್ಕೆ ಮುಖ್ಯ ಕಾರಣವೇನೆಂದರೆ, ತಾವು ಮೆಚ್ಚಿಸಬೇಕಾಗಿರುವ ಸಾರ್ವಜನಿಕರಿದ್ದಾರೆಂಬ, ಅಥವಾ ತಾವು ಸಮಾಧಾನಪಡಿಸಬೇಕಾಗಿರುವ ಟೀಕಾಕಾರರಿರುವರೆಂಬ ಭಾವನೆಯಿಂದ ಅವರು ನಿರ್ಬಾಧಿತರಾಗಿದ್ದರು. ತಾವು ಮಾಡಬೇಕೆಂದು ನಿರ್ಧರಿಸಿದ್ದ ಕಾರ್ಯದ ವಿನಹ ಮತ್ತಾವುದನ್ನೂ ಅವರು ಆಲೋಚಿಸುತ್ತಿರಲಿಲ್ಲ. ಅವರ ಒಂದು ಗುರಿ ಎಂದರೆ ತಾವು ಕೈಕೊಂಡಿದ್ದ ಕಾರ್ಯದಲ್ಲಿ ಎಷ್ಟು ಪರಿಪೂರ್ಣತೆಯನ್ನು ಸಾಧಿಸಲು ಸಾಧ್ಯವೋ ಅಷ್ಟನ್ನೂ ಸಾಧಿಸುವುದಾಗಿತ್ತು... ಆದ್ದರಿಂದ ಅವರ ಕೆಲಸ ಎಷ್ಟು ಉತ್ತಮವಾಗಿ ನಡೆಯಲು ಸಾಧ್ಯವೋ ಅಷ್ಟು ಉತ್ತಮವಾಗಿ ನಡೆಯಿತು, ಮತ್ತು ಅದು ಸಹಸ್ರಾರು ವರ್ಷಗಳವರೆಗೂ ಬದುಕಿಕೊಂಡು ಬಂದಿತು ಎಂಬುದರಿಂದ ನಾವು ಆಶ್ಚರ್ಯಪಡುವುದೇನಿದೆ ?*

ಹಾಗೆ ಕಟ್ಟಲಾದ ಚಿಂತನಾಸೌಧದ ಸ್ವರೂಪವನ್ನೂ ಅದನ್ನು ನಿರ್ಮಿಸಿದವರ ಧೈರ್ಯವನ್ನೂ ಕುರಿತು ಆತ ಹೀಗೆ ಹೇಳುತ್ತಾರೆ (The Six Systems of Indian Philosophy, p. 182) :

---

*೧೯೫೦ ಫೆಬ್ರುವರಿ ೧೭ರಂದು, ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ.

*ಪ್ರಾಚೀನ ಗಾಥಿಕ್ ಶೈಲಿಯ ಎತ್ತರವಾದ ತೂಗುಗೋಪುರದ ತುತ್ತತುದಿಯ ಮೆಟ್ಟಿಲುಗಳನ್ನು ಸುತ್ತಿಕೊಂಡು ಏರುವಾಗ ಅನುಭವವಾಗುವಂತೆ ಯಾವ ತಾತ್ತ್ವಿಕ ದರ್ಶನ ಪದ್ಧತಿಯ ಸಾಧನೆಯ ಮಹೋನ್ನತ್ಯದ ದರ್ಶನ ಪಡೆದಾಗ ಯಾರಿಗಾದರೂ ತಲೆ ತಿರುಗಿ ಹೋಗುವುದೋ ಅಂತಹ ವೇದಾಂತ ದರ್ಶನವನ್ನು ಸಹಸ್ರಾರು ವರ್ಷಗಳ ಹಿಂದೆಯೇ ಅವಿಶ್ರಾಂತರೂ ಧೀರರೂ ಆದ ಭಾರತೀಯರು ಸಾವಕಾಶವಾಗಿ, ವಿಸ್ತಾರವಾಗಿ ಬೆಳೆಸಿರುವುದು ನಿಶ್ಚಯವಾಗಿಯೂ ದಿಗ್ಭ್ರಮೆಗೊಳಿಸುವ ಅದ್ಭುತವೇ ಸರಿ. ಬಿರುಗಾಳಿ ಸಿಡಿಲುಗಳಿಗೆ ಜಗ್ಗದಂತೆ ಅಂಥ ಒಂದು ಗೋಪುರವನ್ನು ನಮ್ಮ ತತ್ತ್ವಜ್ಞಾನಿಗಳಲ್ಲಿ ಹಿರಾಕ್ಲಿಟಸ್, ಪ್ಲೇಟೋ, ಕ್ಯಾಂಟ್, ಕೊನೆಗೆ ಹೆಗಲ್ ಸಹ ಯಾರೂ ನಿರ್ಮಿಸುವ ಸಾಹಸ ಮಾಡಿಲ್ಲ. ನಾವು ಅದನ್ನು ಆತ್ಮವೆಂದು ಕರೆಯಲಿ, ಬ್ರಹ್ಮವೆಂದು ಕರೆಯಲಿ ಒಂದು ಮಾತ್ರ ಇರಬಲ್ಲುದೆಂದು ಆರಂಭದಲ್ಲಿ ಒಮ್ಮೆ ಸ್ಪಷ್ಟವಾಗಿ ಗೋಚರವಾದ ಮೇಲೆ ಕಡೆಯಲ್ಲಿಯೂ ಆ ಒಂದೇ ಇರುವುದರಿಂದ ಮೊದಲ ಮೆಟ್ಟಿಲು ನಿರ್ಮಾಣವಾಗುತ್ತಲೇ ಒಂದಾದ ಮೇಲೊಂದರಂತೆ ಈ ಕಲ್ಲುಗಳ ಕಟ್ಟಡವು ಕ್ರಮಬದ್ಧವಾಗಿ ಬೆಳೆದುಕೊಂಡು ಹೋಗುತ್ತದೆ.*

## ೩. ವೇದಾಂತ–ಸನಾತನ ಧರ್ಮ

ಪರಾತ್ಪರ ಸತ್ಯದಲ್ಲಿರುವ ಆಸಕ್ತಿಯ ಜೊತೆಗೆ ಮಾನವ ಸುಖ, ಕ್ಷೇತ್ರಗಳ ಆಳವಾದ ಹಂಬಲವೂ ಸೇರಿ ಅಧ್ಯಾತ್ಮ ತತ್ತ್ವವೊಂದನ್ನು ಜೀವಂತವಾದ ಶ್ರದ್ಧೆಯನ್ನಾಗಿಯೂ, ವಿಶ್ವದೃಷ್ಟಿಯನ್ನು ಒಂದು ಸಾಮಾಜಿಕ ತತ್ತ್ವವನ್ನಾಗಿಯೂ ಪರಿವರ್ತನೆಗೊಳಿಸುತ್ತದೆ. ಒಂದು ಭಾವ ಮತ್ತು ಒಂದು ದೃಷ್ಟಿ—ಇವು ನಮ್ಮ ಪಯಣಕ್ಕೆ ದೀವಿಗೆಯಾಗಿ, ಆತ್ಮಕ್ಕೆ ಬೆಳಕಾಗಿ ಪರಿವರ್ತನೆಗೊಳ್ಳುತ್ತವೆ ; ವೇದಾಂತವು ಸನಾತನಧರ್ಮವಾಗಿ ಕಾಣಿಸಿಕೊಳ್ಳುತ್ತದೆ. ಸತ್ಯದ ಮೇಲಿನ ಶುದ್ಧ ಆಸಕ್ತಿಯು ಅಖಂಡ ಮಾನವ ಶ್ರೇಯಸ್ಸಿನ ವಿಸ್ತಾರವಾದ ಹೊಳೆಯಾಗಿ ಹರಡಿಕೊಳ್ಳುವುದನ್ನು ನಿರೂಪಿಸುವ ಗ್ರಂಥ ಭಗವದ್ಗೀತೆ. ಅದರ ಉಪದೇಶಕನಾದ ಶ್ರೀಕೃಷ್ಣನು ಈ ಮಹಾಪರಿವರ್ತನೆಯ ಕೇಂದ್ರವಾಗಿ ನಿಲ್ಲುತ್ತಾನೆ. ಉಪನಿಷತ್ತಿನ ಋಷಿಗಳ ಈ ಮನೋಭಾವವನ್ನು ಕ್ರಿ.ಶ. ಎಂಟನೇ ಶತಮಾನದಲ್ಲಿದ್ದ ಸುಪ್ರಸಿದ್ಧ ವೇದಾಂತ ಜ್ಞಾನಿಗಳಾದ ಗೌಡಪಾದರು ತಮ್ಮ ಮಾಂಡೂಕ್ಯಕಾರಿಕೆಯಲ್ಲಿ ಹೀಗೆ ಹೇಳುತ್ತಾರೆ (IV-2) :

ಅಸ್ಪರ್ಶಯೋಗೋ ವೈ ನಾಮ ಸರ್ವಸತ್ತ್ವ ಸುಖೋ ಹಿತಃ ।
ಅವಿವಾದೋ ಅವಿರುದ್ಧಶ್ಚ ದೇಶಿತಸ್ತಂ ನಮಾಮ್ಯಹಂ ॥

*ಸೃಷ್ಟಿ ಎಲ್ಲದರ ಐಕ್ಯತೆಯನ್ನು ಪ್ರಕಟಗೊಳಿಸತಕ್ಕುದೂ, ಎಲ್ಲ ಜೀವಿಗಳ ಸುಖ ಶ್ರೇಯಸ್ಸುಗಳಿಗೆ ಸಾಧಕವಾದುದೂ, ಎಲ್ಲ ಹೋರಾಟ ವಿರೋಧಗಳಿಂದ ಮುಕ್ತವಾದುದೂ ಆದ ಈ ವೇದಾಂತ ಬೋಧನ ಯೋಗಕ್ಕೆ ನಾನು ನಮಸ್ಕರಿಸುತ್ತೇನೆ.*

## ೪. ಭಗವದ್ಗೀತೆಯಲ್ಲಿ ಈ ಭಾವದ ಬೆಳವಣಿಗೆ

ಭಗವದ್ಗೀತೆಯು ಉಪನಿಷತ್ತುಗಳ ಆಳವಾದ ಅಧ್ಯಾತ್ಮಜ್ಞಾನದಿಂದ ಸಾಕಾರ ದೈವಕೇಂದ್ರವಾಗಿರುವ ಭಕ್ತಿಪ್ರಮುಖ ಮತಧರ್ಮವೊಂದನ್ನು ಪರಿಶುದ್ಧವಾದ, ಶಕ್ತಿಯುತವಾದ ಮತ್ತು ಗಂಭೀರವಾದ ಸ್ವಭಾವವನ್ನು ನೆಲೆಗೊಳಿಸುವ ವೈಯಕ್ತಿಕ ನೀತಿಯನ್ನೂ, ಭೂತಹಿತ ಲೋಕಸಂಗ್ರಹಗಳನ್ನು ಪ್ರಚೋದಿಸುವ ಒಂದು ಸಮಾಜಧರ್ಮವನ್ನು ಸೃಷ್ಟಿಸಿತು.

ಸನಾತನ ಧರ್ಮಕ್ಕೆ ಉಪನಿಷತ್ತುಗಳು ಮೂಲ. ವೇದಾಂತ ಕೃತ್, ಮತ್ತು ವೇದವಿತ್ ಎಂದು ಕರೆಯಬಹುದಾದಂತಹ ಮಹಾಪ್ರಜ್ಞಾಶಾಲಿಯಾದ, ಉಪನಿಷತ್ತಿನ ಜ್ಞಾನವನ್ನೆಲ್ಲ ಸಂಪೂರ್ಣವಾಗಿ ಅರಗಿಸಿಕೊಂಡಿರುವ ಮಹಾಪುರುಷನೊಬ್ಬನು ಸನಾತನಧರ್ಮವನ್ನು ಗೀತೆಯಲ್ಲಿ ಪ್ರಕಾಶಪಡಿಸಿದನು. ಉಪನಿಷತ್ತುಗಳ ವ್ಯಾಪ್ತಿ ಮತ್ತು ಅರ್ಥಗಳು ಸಮಗ್ರವಾದ ಜೀವನ ತತ್ತ್ವಗಳಾಗಿ ಗೀತೆಯಲ್ಲಿ ಮೈವೆತ್ತಿವೆ. ಒಂದು ಪ್ರಾಚೀನ ಶ್ಲೋಕದಲ್ಲಿ ಉಪನಿಷತ್ತುಗಳನ್ನು ಒಂದು ಆಕಳಿಗೂ, ಶ್ರೀಕೃಷ್ಣನನ್ನು ಹಾಲು ಕರೆಯುವವನಿಗೂ ಅರ್ಜುನನನ್ನು ಒಂದು ಕರುವಿಗೂ ಗೀತೆಯನ್ನು ಹಾಲಿಗೂ ಹೋಲಿಸಲಾಗಿದೆ. ಹಾಗೆ ಕರೆದ ಹಾಲು ಆಧ್ಯಾತ್ಮಿಕವಾಗಿ ಹಸಿದ ಜಗತ್ತನ್ನು ಪೋಷಿಸಿ ಬೆಳೆಸುವ ಅಮೃತವೆಂದು ಆ ಶ್ಲೋಕದಲ್ಲಿ ಅರ್ಥಪೂರ್ಣವಾಗಿ ಸೇರಿಸಲಾಗಿದೆ.

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲ ನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥

## ೫. ಶ್ರುತಿಗಳು

ಈ ಉಪನಿಷತ್ತುಗಳು ತತ್ತ್ವಶಾಸ್ತ್ರ, ಪಾರಮಾರ್ಥಗಳಲ್ಲಿ ವೈದಿಕ ಸಮಾಲೋಚನೆಯ ಉನ್ನತೋನ್ನತ ವಿಕಾಸವನ್ನು ತೋರಿಸುತ್ತವೆ. ಈ ಕಾರಣದಿಂದಲೂ, ವಿಸ್ತಾರವಾಗಿ ವೈವಿಧ್ಯಪೂರ್ಣವಾಗಿರುವ ವೈದಿಕಸಾಹಿತ್ಯದ ಅಂತ್ಯ ಭಾಗಗಳಾಗಿರುವುದರಿಂದಲೂ ಉಪನಿಷತ್ತುಗಳನ್ನು—ಅವುಗಳ ಗ್ರಂಥ ರೂಪ, ಅದರಲ್ಲಿಯೂ ಹೆಚ್ಚು ಪ್ರಮುಖವಾದ ಹತ್ತು ಗ್ರಂಥಗಳ ರೂಪದಿಂದಲೂ, ಅವುಗಳಲ್ಲಿ ವ್ಯಾಪಕವಾಗಿರುವ ಚಿಂತನರೂಪದಿಂದಲೂ ಕೂಡ ಇರುವ ಅವುಗಳನ್ನು—ವೇದಾಂತ ಅಥವಾ ವೇದಗಳ ಕೊನೆ ಅಥವಾ ವೇದಗಳ ಸಿದ್ಧಿಗಳೆಂದೂ ಕರೆಯುತ್ತಾರೆ. ವೇದಗಳನ್ನು ಶ್ರುತಿಗಳೆಂದೂ ಕರೆಯುತ್ತಾರೆ ; ತಮ್ಮ ನಿಷ್ಪಕ್ಷಪಾತವಾದ ಧೋರಣೆ ಮತ್ತು ಸಾರ್ವತ್ರಿಕವಾದ ವ್ಯಾಪ್ತಿ ಯಿಂದ ಆಧ್ಯಾತ್ಮಿಕ ವಿಷಯಗಳಲ್ಲಿ ಅವು ಅತ್ಯಂತ ವಿಶ್ವಾಸಾರ್ಹವಾದುವೆಂದು ಆ ಮಾತಿನಿಂದ ವ್ಯಕ್ತವಾಗುತ್ತದೆ. ವೇದ ಎಂಬ ಮಾತಿಗೆ, ಶಂಕರಾಚಾರ್ಯರ ಪ್ರಕಾರ ಮುಖ್ಯವಾಗಿ ಜ್ಞಾನ ಎಂದು ಅರ್ಥ. ಆ ಜ್ಞಾನವು ಆದಿ ಅಂತ್ಯಗಳಿಲ್ಲದ, ಮುಕ್ತಿಗೊಯ್ಯಬಲ್ಲ ಮತ್ತು ಯಾರು ಬೇಕಾದರೂ ತಾಳೆಹಾಕಿ ನೋಡಬಲ್ಲಂತಹುದು. ಸ್ವಾಮಿ ವಿವೇಕಾನಂದರು ಚಿಕಾಗೋ ಧರ್ಮಸಮ್ಮೇಳನದಲ್ಲಿ ಮಾತನಾಡುತ್ತಾ (ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೧, ಪು. ೪-೫, ೧೧ನೇ ಆವೃತ್ತಿ) ಹೇಳಿದರು :

*ವೇದವೆಂದು ಹೇಳಿದಾಗ ಯಾವ ಗ್ರಂಥವೆಂದೂ ಅರ್ಥವಲ್ಲ ; ಬೇರೆ ಬೇರೆ ಜನ ಬೇರೆ ಬೇರೆ ಕಾಲಗಳಲ್ಲಿ ಕಂಡುಹಿಡಿದ ಆಧ್ಯಾತ್ಮಿಕ ಸೂತ್ರ ಸಂಗ್ರಹದ ಭಂಡಾರವದು... ಈ ಸೂತ್ರಗಳನ್ನು ಕಂಡುಹಿಡಿದವರನ್ನು ಋಷಿಗಳೆಂದು ಕರೆಯುತ್ತಾರೆ, ನಾವು ಅವರನ್ನು ಪರಿಪೂರ್ಣಾತ್ಮರೆಂದು ಗೌರವಿಸುತ್ತೇವೆ. ಅವರಲ್ಲಿ ಬಹು ಮಹಾತ್ಮರೆನ್ನಿಸಿಕೊಂಡವರಲ್ಲಿ ಕೆಲವರು ಹೆಂಗಸರೆಂದು ಈ ಸಭಿಕರಿಗೆ ತಿಳಿಸಲು ನನಗೆ ಸಂತೋಷವಾಗುತ್ತದೆ.*

## ೬. ವೇದಾಂತ : ಅದರ ವಿಶ್ವವ್ಯಾಪಕ ದೃಷ್ಟಿ

ವೇದಾಂತವೆಂದರೆ ತತ್ತ್ವಶಾಸ್ತ್ರ, ಮತಧರ್ಮ ಎರಡೂ ಆಗುತ್ತದೆ. ವೇದಾಂತದ ಪರತತ್ತ್ವ ಎಂಬುದು ಕೇವಲ ತರ್ಕದ ಆಧಾರದಿಂದ ನಿಂತಿರತಕ್ಕುದಲ್ಲ. ಅದೊಂದು ಅನುಭವದಿಂದ ಬಂದ ವಸ್ತುತತ್ತ್ವ, ಒಂದು ವಾಸ್ತವಿಕ ವಿಷಯ, ತಾರ್ಕಿಕ ವಿವೇಚನೆ ಮತ್ತು ಸಾಮಾನ್ಯಾನುಭವಗಳ ಪೂರ್ವ ಭಾವನೆಗಳಿಗೆ ಮೂಲಾಧಾರವಾದುದು ; ಆದರೆ ಅದು ಅವೆರಡಕ್ಕೂ ಅತೀತವಾದುದು. 'ಮಾತು ಮನಸ್ಸುಗಳಿಂದ ಯಾವುದನ್ನು ವ್ಯಕ್ತಪಡಿಸಲಾಗುವುದಿಲ್ಲವೋ, ಆದರೆ ಯಾವುದರಿಂದ ಮಾತು

ಮನಸ್ಸುಗಳು ತಾವಾಗಿಯೇ ವ್ಯಕ್ತವಾಗುತ್ತವೆಯೋ' ಅದೇ ಅದು (ಕೇನೋಪನಿಷತ್ತು I-೫-೬). ಅದು ಚಿಂತನೆಯ ದ್ರಷ್ಟಾರ, ವಿಶ್ವದ ಸಾಕ್ಷಿ. ಅದು ಬೋಧಿಸುವ ಶ್ರೇಷ್ಠತಮ ಯಥಾರ್ಥಜ್ಞಾನವು ಏಕಕಾಲದಲ್ಲಿಯೇ ಪರಾತ್ಪರವಾದ ಅಧ್ಯಾತ್ಮ ತತ್ತ್ವವೂ ಆಗಿರುತ್ತದೆ, ಮತಧರ್ಮದ ದೇವರೂ ಆಗಿರುತ್ತದೆ. ಅದರಲ್ಲಿ ತರ್ಕ, ಶ್ರದ್ಧೆಗಳೆರಡೂ ಒಂದಾಗಿರುತ್ತವೆ. ಅದು ಮಾನವನಲ್ಲಿರುವ ಅಸ್ತಿತ್ವ, ಆತ್ಮ ; ಅವನ ಅಹಂಕಾರ ಮಮಕಾರಗಳ ಹಿಂದಿರುವ ತನ್ನತನ, ಈಶ್ವರನಾಗಿ ಅದು ಮತಧರ್ಮದ ಸಾಕಾರರೂಪದ ದೇವರು ; ಮಾನವನ ಮನಸ್ಸು ಗ್ರಹಿಸಬಲ್ಲ ಪರಾತ್ಪರದ ಮಹದ್ಭಾವನೆ ; ಮಾನವ ಮತ್ತು ಮಾನವೇತರ ಆತ್ಮಗಳೆಲ್ಲದರ ಸಮಷ್ಟಿಯಾದ ಪರಮಾತ್ಮ, ಕಾಲದೇಶಗಳಲ್ಲಿ ಶಾಂತವಾಗಿ ಕಾಣಿಸಿಕೊಳ್ಳುವ ಈ ಜಗತ್ತು. ಹೀಗೆ ವೇದಾಂತವು ಒಂದೇ ಸತ್ಯವನ್ನು ಅಧ್ಯಾತ್ಮಶಾಸ್ತ್ರದಲ್ಲಿ ಬ್ರಹ್ಮನೆಂದೂ, ತತ್ತ್ವಶಾಸ್ತ್ರದ ಪ್ರಮಾಣ ಪ್ರಮೇಯಗಳಲ್ಲಿ ಮತ್ತು ಯೋಗಶಾಸ್ತ್ರಗಳಲ್ಲಿ ಆತ್ಮನೆಂದೂ, ತನ್ನ ಮತಧರ್ಮದಲ್ಲಿ ಈಶ್ವರ ಅಥವಾ ಭಗವಂತನೆಂದೂ ಕರೆಯುತ್ತದೆ. ಅದು ಬಹುತತ್ತ್ವದಲ್ಲಿನ ಏಕತ್ವ. ಅದು ಒಂದೇ ಆದರೂ ಋಷಿಗಳು ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. ಈ ದೈವದ ಏಕತ್ವಭಾವವನ್ನು ಭಾಗವತ ಸುಂದರವಾಗಿ ಚಿತ್ರಿಸುತ್ತದೆ (I. ೨-೧೧) :

ವದಂತಿ ತತ್ ತತ್ತ್ವ ವಿದಾಹ ತತ್ತ್ವಂ ಯತ್ ಜ್ಞಾನಮದ್ವಯಮ್
ಬ್ರಹ್ಮೇತಿ ಪರಮಾತ್ಮೇತಿ ಭಗವಾನ್ ಇತಿ ಶಬ್ದ್ಯತೇ ॥

*ಸತ್ಯವನ್ನು ತಿಳಿದವರು ಅದನ್ನು ಒಂದು ಎಂದು ಹೇಳುತ್ತಾರೆ; ಆ ಅದ್ವಿತೀಯ ತತ್ತ್ವವನ್ನು ಬ್ರಹ್ಮ, ಪರಮಾತ್ಮ, ಭಗವಾನ್ ಎಂದೂ ಬೇರೆ ಬೇರೆಯಾಗಿ ಕರೆಯುತ್ತಾರೆ.*

### ೭. ಮಾನವ : ಅಮೃತಪುತ್ರ

ಬ್ರಹ್ಮನನ್ನು ಆತ್ಮನಾಗಿ, ಅಹಂಕಾರದ ಹಿಂದಿರುವ ಸತ್ಯವಾಗಿ ಭಾವಿಸಿದಾಗ ನಮಗೆ ಕಾಣಬರುವ ದೈವಭಾವವು ಏಕದೇವವಾದದ ವಿಶ್ವಾತೀತ ದೈವದಂತಿಲ್ಲ ; ಅವನು ನಮ್ಮಿಂದ ಹೊರಗಿಲ್ಲ, ನಾವು ಅವನಿಂದ ಬೇರೆಯಾಗಿಲ್ಲ. ಅವನು ನಮ್ಮ ಆತ್ಮದ ಆತ್ಮ, ನಮ್ಮ ಆತ್ಮವೇ. ಅವನು ಪ್ರತ್ಯಗಾತ್ಮನ್-ಅಂತರಾತ್ಮ ; ಅವನು ಅಂತರ್ಯಾಮಿನ್-ಅಂತರ್ವಾಸಿ, ಅಂತರ್‌ಪ್ರಭು. ಭಗವಂತನ ಅನಂತತೆ ಮಾನವನ ಸಾಂತತೆಯನ್ನು ವಹಿಸಿಕೊಳ್ಳುತ್ತದೆ. ಮಾನವನು ದೈವರೂಪಿ, ಆದ್ದರಿಂದ ಅವನ ಉದ್ಧಾರ ಅವನ ಜೀವದಲ್ಲಿಯೇ ಅಂತರ್ಗತವಾಗಿದೆ. ಅವನು ಸ್ವಭಾವತಃ ಪಾಪಿಯೂ ಅಲ್ಲ, ಕೆಟ್ಟವನೂ ಅಲ್ಲ. ಅವನು ಅಮರವಾದ ಆನಂದದ ಮಗು-ಅಮೃತಸ್ಯ ಪುತ್ರಾಃ (ಶ್ವೇತಾಶ್ವತರ ಉಪನಿಷತ್ II-೫).

ಆದರೆ ಈ ದೈವಸ್ವಭಾವ ತೆರೆಯ ಹಿಂದೆ ಮರೆಯಾಗಿ, ಮರೆತು ಮಲಗಿದೆ: ಪ್ರಕೃತಿಯಲ್ಲಿ, ಹಾಗೂ ಮಾನವನಲ್ಲಿ ಈ ಕತ್ತಲೆಯ ತೆರೆ ಯಥಾರ್ಥವಾದುದನ್ನು ಮುಚ್ಚಿಹಾಕಿದೆ; ಈ ಅವಿದ್ಯೆ ಅಥವಾ ಮಾಯೆ ನಮ್ಮ ಸತ್ಯಸ್ವರೂಪವನ್ನು ನಾವು ಮರೆತುಬಿಡುವಂತೆ ಮಾಡಿದೆ. ಮನುಷ್ಯ ಎಷ್ಟು ಶುದ್ಧನಾಗಿದ್ದಾನೋ, ಅಥವಾ ಅಶುದ್ಧನಾಗಿದ್ದಾನೋ ಅದಕ್ಕೆ ತಕ್ಕಂತೆ ಈ ಅಜ್ಞಾನದ ತೆರೆ ತೆಳುವಾಗಿಯೋ ದಪ್ಪನಾಗಿಯೋ ಇರುತ್ತದೆ. ಇದನ್ನು ಸಂಪೂರ್ಣವಾಗಿ ನಾಶಮಾಡುವುದೇ ಆತ್ಮಪ್ರಕಾಶ ಅಥವಾ ಪರಿಪೂರ್ಣತೆ. 'ಪರಿಶುದ್ಧಹೃದಯರು ಪುಣ್ಯಶಾಲಿಗಳು ; ಏಕೆಂದರೆ ಅವರು ದೇವರನ್ನು ಕಾಣುತ್ತಾರೆ' (ಮ್ಯಾಥ್ಯೂ V-೮). ಮನಶ್ಶುದ್ಧಿ ಹೆಚ್ಚಿದಂತೆಲ್ಲಾ ಈ ತೆರೆಯನ್ನು ಹರಿಯುವ ಕಾರ್ಯ ಹೆಜ್ಜೆ ಹೆಜ್ಜೆಯಾಗಿ ಮುಂದುವರಿದಂತಾಗುತ್ತದೆ; ಅದರಂತೆಯೇ ಅಶುದ್ಧವಾದ ಯೋಚನೆ ಅಥವಾ ಕಾರ್ಯವು ಆ ತೆರೆಯನ್ನು ದಪ್ಪವಾಗಿ ಮಾಡಿ ಕತ್ತಲೆಯನ್ನು ಹೆಚ್ಚಿಸುತ್ತದೆ. ಧರ್ಮ ಮತ್ತು ನೀತಿಗಳ ಪ್ರಸಕ್ತಿ ಬರುವುದು ಇಲ್ಲಿಯೇ. ಪ್ರತಿಯೊಂದು ನೈತಿಕ ಕರ್ಮವು ನಮ್ಮ ಮಿಥ್ಯಾತ್ಮದ ಕೋಟೆಗೆ

ಕೊಟ್ಟ ಒಂದು ಗುದ್ದಲಿಯ ಪೆಟ್ಟಿನಂತಾಗಿ, ನಮ್ಮ ಸತ್ಯಾತ್ಮದ ಅರಿವಿನ ಕಡೆ ಒಂದು ಹೆಜ್ಜೆ ಮುಂದಿಟ್ಟಂತೆ. ಪಾಪ, ಮಾನವನು ಸಾಂತದ ಬಂಧನ ಮತ್ತು ಜೀವನದ ಮಿತಿಯನ್ನು ತಿಳಿದುಕೊಂಡಿದ್ದಾನೆ ; ಆದರೆ ಅವನ ಅಂತರಂಗದಲ್ಲಿ ತಾನು ಸ್ವತಂತ್ರನಾಗಬೇಕು, ಜೀವನು ಅನಂತನಾಗಬೇಕು ಎಂಬ ಬಯಕೆ ಇದೆ. ಆತ್ಮವು ದೈವಸ್ವರೂಪವೆಂದೂ, ಕೇವಲ ಭೌತವಸ್ತುವಿನಿಂದ ಬಂಧನಕ್ಕೊಳಗಾಗಿದೆಯೆಂದೂ ವೇದಾಂತ ಬೋಧಿಸುತ್ತದೆ ; ಈ ಬಂಧನ ಹರಿದಾಗ ಮಾತ್ರ ಪರಿಪೂರ್ಣತೆ ಕೈಸಾರುತ್ತದೆ ; ಇದನ್ನು ಸೂಚಿಸಲು ಅದು ಬಳಸುವ ಪದ 'ಮುಕ್ತಿ' ಎಂಬುದು. ಮುಕ್ತಿ ಎಂದರೆ ಸ್ವಾತಂತ್ರ್ಯ, ಅಪರಿಪೂರ್ಣತೆಯ ಬಂಧನದಿಂದ ಸ್ವತಂತ್ರನಾಗುವುದು, ಮೃತ್ಯು ಮತ್ತು ದುಃಖಗಳಿಂದ ಸ್ವತಂತ್ರನಾಗುವುದು. ಹೀಗೆ ಮಾನವನು ಅನಂತ-ಸಾಂತ, ಬೆಳಕು-ಕತ್ತಲೆಗಳಿಂದ ಕೂಡಿರುವ ಮುಕ್ತಿ-ಬಂಧನಗಳ ಒಂದು ಸಂಕೀರ್ಣತೆ. ಭಗವಂತನ ಸೃಷ್ಟಿಯಲ್ಲೆಲ್ಲಾ ಮುಕ್ತಿಸಾಧನೆಗಾಗಿ, ಬಂಧನದ ಪರಿಜ್ಞಾನದಿಂದ ಚಡಪಡಿಸುತ್ತಾ ಜೀವನಯಾತ್ರೆಯನ್ನು ಸಾಗಿಸುವವನು ಮಾನವನೊಬ್ಬನೇ ; ಆದ್ದರಿಂದ ಅವನು ತನ್ನ ಹೃದಯವನ್ನು ರಚನಾತ್ಮಕವಾದ ಅಶಾಂತಿ ಗೃಹವಾಗಿ ಮಾಡಿಕೊಳ್ಳುತ್ತಾನೆ. ಇದಕ್ಕೆ ತಕ್ಕಂತೆ, ಅವನಲ್ಲಿ ಆತ್ಮಪ್ರಜ್ಞೆ ಮೂಡಿದಂದಿನಿಂದಲೂ ಅವನ ಹೃದಯವು ಈ ಎರಡು ಶಕ್ತಿಗಳ ಮಧ್ಯೆ ಘೋರ ಸಂಗ್ರಾಮ ನಡೆಯುತ್ತಿರುವ ರಣಭೂಮಿಯಾಗಿದೆ ; ಮಾನವ ಜನಾಂಗದ ನಾಗರಿಕತೆಯೆಂಬುದು ಏರಿಳಿತಗಳಿಂದ ಕೂಡಿದ ಈ ಘೋರ ಸಂಗ್ರಾಮದ ಭಯಂಕರ ಕಥೆಯೇ ಆಗಿದೆ ; ಆಗಾಗ ಅದನ್ನು ವ್ಯತ್ಯಸ್ತಗೊಳಿಸಲೆಂದೋ, ಹೊಸದಾಗಿ ರೂಪಿಸಲೆಂದೋ ಮಾನವನ ಲೌಕಿಕ ಪರಿಸರಕ್ಕೆ ಅದನ್ನು ಪ್ರಸರಿಸುವುದೂ ಉಂಟು. ಆದರೆ ಬಹುಮಟ್ಟಿಗೆ ಅದನ್ನು ಬಳಸುವುದು ಮನೋಭೂಮಿಕೆಯಲ್ಲಿ ಅದನ್ನು ಒಂದುಗೂಡಿಸಿ ಮುನ್ನುಗ್ಗಿಸುವುದಕ್ಕಾಗಿ.

## ೮. ವೇದಾಂತದಲ್ಲಿ ಬದುಕಿನ ವ್ಯಾಖ್ಯೆ

ನಿತ್ಯಶುದ್ಧವೂ, ಪರಿಪೂರ್ಣವೂ, ಸ್ವತಂತ್ರವೂ ಆದ ಈ ಸತ್ಯ ಒಂದು ಕಡೆ ; ಅವಿದ್ಯಾ ಅಥವಾ ಧರ್ಮಾಂಧತೆಯ ತೆರೆಯ ಮುಸುಕಿಟ್ಟುಕೊಂಡು ಅದಕ್ಕೆ ವಿರೋಧವಾಗಿರುವಂತೆ ತೋರುವುದು ಮತ್ತೊಂದು ಕಡೆ—ಇವು ಮಾನವನ ಆಧ್ಯಾತ್ಮಿಕ ಸಾಹಸಕ್ಕೂ, ಧರ್ಮಶೀಲತೆಯ ಹಸಿವು ತೃಷೆಗಳಿಗೂ, ರಾಜಕೀಯ ಸ್ವಾತಂತ್ರ್ಯ, ಸಾಮಾಜಿಕ ನ್ಯಾಯಗಳಿಗೂ ಒಂದು ಮಾತಿನಲ್ಲಿ ಹೇಳುವುದಾದರೆ ನಾಗರಿಕತೆ, ಸಂಸ್ಕೃತಿಗಳನ್ನು ಸಾಧಿಸಬೇಕೆಂಬ ಅವನ ಎಲ್ಲ ಪ್ರಯತ್ನಗಳಿಗೂ ಹಿನ್ನೆಲೆಯಲ್ಲಿರುವ ಪ್ರೇರಕಶಕ್ತಿ ಎಂಬುದು ವೇದಾಂತದ ಭಾವನೆ. ಸಂಸಾರ ಸಾಗರದಲ್ಲಿ ತೇಲುತ್ತಿರುವ ಜೀವನು ಚಿಂತನೆಯಲ್ಲಿ ತೊಡಗಿದಾಗ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳಂತೆಯೇ ವೈಜ್ಞಾನಿಕ ಸಂಶೋಧನೆಗಳೂ, ನೈತಿಕ ಸಾಧನೆಗಳೂ ಆಧ್ಯಾತ್ಮಿಕ ಸಿದ್ಧಿಗಳೂ ಹೊರಬರುತ್ತವೆ. ಇತಿಹಾಸವೆಂಬುದಕ್ಕೆ ಅದರ ವ್ಯಾಪಕವಾದ ಭಾವದಲ್ಲಿ ಹೀಗೆ ಅರ್ಥವಾಗುತ್ತದೆ. ವ್ಯಷ್ಟಿಯಲ್ಲಿ ಸಮಷ್ಟಿಯ ಪ್ರೇರಣೆ, ಸಾಂತದಲ್ಲಿ ಅನಂತದ ಅಲೆಗಳು, ಕಾಲದ ಬಲೆಯಲ್ಲಿ ನಿತ್ಯದ ಹೋರಾಟ. ವಿಶ್ವದ ಮೂಲ ಮತ್ತು ಸ್ವರೂಪಗಳನ್ನು ಕುರಿತ ಪ್ರಶ್ನೆಗೆ ಉಪನಿಷತ್ತುಗಳು ಅರ್ಥವತ್ತಾದ ಉತ್ತರವನ್ನು ನೀಡುತ್ತವೆ. 'ವಿಶ್ವವು ನಿರುಪಾಧಿಕವಾದ ಸ್ವಾತಂತ್ರ್ಯದಿಂದ ಉದಿಸಿ ಬಂದಿದೆ, ಆ ಸ್ವಾತಂತ್ರ್ಯದಲ್ಲಿಯೇ ನಿಂತಿದೆ, ಮತ್ತೆ ಆ ಸ್ವಾತಂತ್ರ್ಯಕ್ಕೇ ಹಿಂದಿರುಗುತ್ತದೆ.'

ವೇದಾಂತದ ಆಧ್ಯಾತ್ಮಿಕ ಜಗದಭಿಪ್ರಾಯದಿಂದ ಕೆಲವು ಉಪಸಿದ್ಧಾಂತಗಳು ಮೂಡಿ ಬಂದಿವೆ. ಅವು ಸನಾತನಧರ್ಮಕ್ಕೆ ಆಧಾರಭೂತವಾದ ಲಕ್ಷಣಗಳಾಗಿಯೂ, ಅನಾದಿಕಾಲದಿಂದ ಅದರ ಆಧ್ಯಾತ್ಮಿಕ ಶಕ್ತಿಯಾಗಿಯೂ ಇವೆ. ಅವು ಹಿಂದುಗಳ ಜೀವನ ದೃಷ್ಟಿಗೆ ಹಿನ್ನೆಲೆಯಲ್ಲಿರುವ ಪ್ರೇರಕ ಶಕ್ತಿಗಳಾಗಿದ್ದು, ಎಲ್ಲ ಕಾಲಗಳ ತಾರ್ಕಿಕ ಮನಸ್ಸಿಗೂ ಅವು ಗ್ರಾಹ್ಯವಾಗಿರುವುದಕ್ಕೆ ಕಾರಣವನ್ನು ಸೂಚಿಸುತ್ತದೆ.

## ೯. ವೇದಾಂತದ ದೃಷ್ಟಿಯಲ್ಲಿ ಮತಧರ್ಮ

ಈ ದೃಷ್ಟಿಯ ಮೊದಲ ಪ್ರಭಾವವಾಗಿರುವುದು ಧರ್ಮದ ಮೇಲೆ ; ಅದು ಒಂದು ಅನುಭವವಾಗುತ್ತದೆಯೇ ಹೊರತು ಸಿದ್ಧಾಂತ ಅಥವಾ ಮತವಾಗುವುದಿಲ್ಲ. ಧರ್ಮಕ್ಕೆ ಅನುಭೂತಿ-ಅನುಭವ-ಒರೆಗಲ್ಲು. 'ಆತ್ಮಾವಾ ಅರೇ ದ್ರಷ್ಟವ್ಯಃ' ಆತ್ಮನನ್ನು ಕಾಣಬೇಕು ಎಂದು ಬೃಹದಾರಣ್ಯಕೋಪನಿಷತ್ತು (II-೪-೫) ಹೇಳುತ್ತದೆ. ಅಧ್ಯಾತ್ಮವೇ ಧರ್ಮದ ತಿರುಳು. ಸೆಯಿಂಟ್ ಪಾಲ್ ಹೇಳುವಂತೆ ನಾವು ಬಾಳುವುದೂ ಸಂಚರಿಸುವುದೂ ದೇವರಲ್ಲಿ ಜೀವವನ್ನು ಇರಿಸಿಕೊಂಡು. ದೈವದ ಯಥಾವತ್ತೇ ನಮ್ಮ ಸತ್ಯಸ್ವರೂಪವಾಗಿದ್ದಲ್ಲಿ, ವಿಶ್ವರಚನೆಯಿಂದ ಪ್ರತ್ಯೇಕವಾಗಿ ನಮಗೆ ವಿರುದ್ಧವಾಗಿಲ್ಲದಿರುವುದಾದಲ್ಲಿ ಇನ್ನೂ ಪರಿಪೂರ್ಣವಾಗಿ, ಉತ್ತಮವಾಗಿ ಬಾಳಬೇಕೆಂಬ ನಿರೀಕ್ಷೆ ಸಾರ್ಥಕವಾಗುತ್ತದೆ ; ಏಕೆಂದರೆ ಮಾನವನು ದೈವಸಾಕ್ಷಾತ್ಕಾರಮಾಡಿಕೊಂಡು ದೈವವೇ ಆಗಬಲ್ಲ ; ವೇದಾಂತದ ಪ್ರಕಾರ ಇದೇ ಜೀವನದ ಉದ್ದೇಶ, ಗುರಿ. ದೇವರು ನಮ್ಮಿಂದ ಪ್ರತ್ಯೇಕವಾಗಿ, ದೂರವಾಗಿ ಇದ್ದಿದ್ದರೆ ಅವನು ಇದ್ದಾನೆಂಬ ನಂಬಿಕೆಯಿಂದ ನಾವು ತೃಪ್ತರಾಗಿ, ಆ ತೃಪ್ತಿಯ ಬೆಳಕಿನಲ್ಲಿ ನಮಗೆ ಸಾಧ್ಯವಾದಷ್ಟು ಉತ್ತಮ ರೀತಿಯಲ್ಲಿಯೇ ನಮ್ಮ ಬಾಳನ್ನು ನಡೆಸಿಕೊಂಡು ಹೋಗಬಹುದಾಗಿತ್ತು. ಮತ್ತೂ ಅದರ ಜೊತೆಗೇ ಸಂಕುಚಿತ ದೃಷ್ಟಿಯು ತೀವ್ರವಾದ ಅಸಹನೆಯನ್ನು ಹುಟ್ಟಿಸಬಹುದಾಗಿತ್ತು. ನಾವು ವಿಶ್ವಧರ್ಮವೆಂದು ಹೇಳಿಕೊಂಡು, ಆಕ್ರಮಣಶೀಲವಾದ ಅನಾಗರಿಕ ಪಂಥದ ಒಂದು ನಿಷ್ಠೆಯಿಂದಲೂ ಅದು ಶ್ರೇಷ್ಠವಲ್ಲದುದಾಗಿ ನಡೆದುಕೊಳ್ಳಬಹುದು. ಅದು ಮಾನವನನ್ನು ತನ್ನ ಜನಾಂಗದ ಹೆಮ್ಮೆಯನ್ನಾಗಿಯೂ ಸಾಮೂಹಿಕ ಶ್ರದ್ಧೆಯುಳ್ಳವನನ್ನಾಗಿಯೂ ಮಾಡಲು ಯೋಗ್ಯವಾದುದೇ ಹೊರತು ಅವನಲ್ಲಿ ದೇವರ ಭಕ್ತಿಯನ್ನು ಮಾನವ ಪ್ರೇಮವನ್ನು ಪ್ರೇರಿಸಲು ತಕ್ಕುದಲ್ಲ. ಈ ಮಟ್ಟದ ಧರ್ಮವು ಪ್ರತಿಬಂಧಕ, ನಿಷೇಧ, ನಂಬಿಕೆ, ಸ್ಥಿರೀಕರಣಗಳಿಂದ ಕೂಡಿದುದಾಗಿರುತ್ತದೆ. ಅದು ಅಂತರಂಗದ ದೀವಿಗೆಯನ್ನು ಹೊತ್ತಿಸುವುದಿಲ್ಲ, ಅಥವಾ ಆಧ್ಯಾತ್ಮಿಕ ಹೃದಯಕ್ಕೆ ಬಾಳಿನ ರೊಟ್ಟಿಯನ್ನು ಕೊಟ್ಟು ಅದರ ಹಸಿವನ್ನು ಹೋಗಲಾಡಿಸುವುದಿಲ್ಲ. ಅಂತಹ ಧರ್ಮದೃಷ್ಟಿಯು ಅಧ್ಯಾತ್ಮ ಜ್ಞಾನ ಮತ್ತು ನಂಬಿಕೆಗಳ ವಿಲಕ್ಷಣವಾದ ಹಸಿವಿನಿಂದ ಪೀಡಿತರಾದವರೂ, ಅನಂತವಾದ ಮತ್ತು ಪಾರಮಾರ್ಥಿಕಕ್ಕಾಗಿ ಹಂಬಲಿಸುವವರೂ ಆದ ಗಂಡು ಹೆಣ್ಣುಗಳ ಐತಿಹಾಸಿಕ ಮಹದ್ಘಟನೆಯೊಂದನ್ನೇನೂ ವಿವರಿಸಲಾರದು. ಈ ಹಸಿವು ಹುಟ್ಟುವುದೇ ಧರ್ಮದ ಪ್ರಪ್ರಥಮ ಲಕ್ಷಣವೆಂದು ವೇದಾಂತ ಹೇಳುತ್ತದೆ ; ಈ ಘಟ್ಟದಲ್ಲಿ ಧರ್ಮವು ಒಂದು ಪವಿತ್ರ ನಂಬಿಕೆ ಅಥವಾ ಸ್ಥಿರೀಕರಣ ಮತ್ತು ಸಂಪ್ರದಾಯಗಳಾಗುವುದು ನಿಂತು, ಅದೊಂದು ಸಾಹಸ ಕಾರ್ಯವಾಗಿ, ಆ ಸಾಹಸ ಕಾರ್ಯಕ್ಕೆ ಅನುಗುಣವಾದ ನಲಿವು, ಅಪಾಯಗಳಿಂದ ಕೂಡಿರುತ್ತದೆ. ಆಗ ಮಾನವನು ಏಕದೇವತಾವಾದವೆಂಬ ಸಂಕುಚಿತ ವಾತಾವರಣದ ಜಗತ್ತಿನಿಂದ ಹೊರಟು ವಿಸ್ತೃತ ದಿಗಂತವುಳ್ಳ, ಉದಾತ್ತ ದೃಷ್ಟಿಯುಳ್ಳ ಮತ್ತು ಆಳವಾದ ಅರ್ಥವುಳ್ಳ ಜಗತ್ತನ್ನು ಪ್ರವೇಶಿಸುತ್ತಾನೆ. ಹಸಿದ ಮನುಷ್ಯ ಬರಿಯ ಮಾತುಗಳಿಂದಾಗಲೀ ಆಹಾರದ ಮೇಲಿನ ಒಂದು ಶ್ರದ್ಧೆಯಿಂದಾಗಲೀ ಜೀವಿಸಲಾರ ; ಅಂತಹ ಮನುಷ್ಯ ಆಹಾರವನ್ನು ಪಡೆದು ತಿನ್ನಬೇಕೆಂದು ಬಯಸುತ್ತಾನೆ ; ಅದಕ್ಕಾಗಿ ಅವನು ಯಾವ ಕಷ್ಟಕ್ಕಾದರೂ ಸಿದ್ಧನಾಗುತ್ತಾನೆ ; ಆ ಪ್ರಯತ್ನದಲ್ಲಿ ಪ್ರಾಣವನ್ನು ತೆರುವುದಕ್ಕೂ ಹಿಂತೆಗೆಯುವುದಿಲ್ಲ.

ಆಧ್ಯಾತ್ಮಿಕ ಹಸಿವನ್ನು ಹುಟ್ಟಿಸುವುದೇ ಧರ್ಮ ಎಂಬ ಭಾವನೆಯಲ್ಲಿ ಆ ಹಸಿವನ್ನು ಹಿಂಗಿಸುವ ಹೋರಾಟದ ಭಾವನೆಯೂ ಸೇರಿಕೊಂಡಿದೆ. ಇದರಿಂದ ಧರ್ಮವನ್ನು ಒಂದು ಭಾವನೆ ಮತ್ತು ಸಮ್ಮತಿ ಎಂಬ ಅಭಿಪ್ರಾಯದಿಂದ ಅದೊಂದು ದೃಢನಿಶ್ಚಯ ಮತ್ತು ಅಧ್ಯವಸಾಯ ಎಂಬ ಅಭಿಪ್ರಾಯಕ್ಕೆ ರೂಪಾಂತರಿಸಬಹುದಾದ ಸಾಧನಾಭಾವನೆ—ಆಧ್ಯಾತ್ಮಿಕ ವ್ಯವಸಾಯ ನಮಗೆ

ತಕ್ಷಣವೇ ಉದಿಸುತ್ತದೆ. ಗೀತೆಯು ಹೇಳುವಂತೆ (VI-೪೪) ಅಧ್ಯಾತ್ಮಭಾವ ಒಮ್ಮೆ ಎಚ್ಚರಗೊಂಡಿತೆಂದರೆ, ಅದು ಧರ್ಮಗ್ರಂಥಗಳಲ್ಲಿನ ಶಬ್ದವಲಯವನ್ನು ಮೀರಿಹೋಗುತ್ತದೆ ; ಹಾಗೆ ಮೀರಿಹೋದವರ ಪಾಲಿಗೆ ಮತ ಮತ್ತು ಸೂತ್ರಗಳು ಹಸಿದವನಿಗೆ ಕಲ್ಲು ಇದ್ದಹಾಗೆ. ಕ್ರಿಸ್ತನು ಹೇಳಿದ 'ಮಾತು ಕೊಲ್ಲುತ್ತದೆ, ಅಂತಃಕರಣ ಜೀವದಾನ ಮಾಡುತ್ತದೆ' ಎಂಬ ಸೂಕ್ತಿ ಅಂತಹವರಿಗೆ ಮಾತ್ರವೇ ಅನ್ವಯವಾಗುತ್ತದೆ. ಎಲ್ಲ ಮಾತುಗಳ, ಎಲ್ಲ ಯೋಚನೆಗಳ ಹಿನ್ನೆಲೆಯ ಅರ್ಥವನ್ನು ನಾವು ಅರಸುತ್ತಿರುವಾಗ ಧರ್ಮಗ್ರಂಥಗಳ ಬರಿಯ ಮಾತುಗಳು ನಮಗೆ ಹೇಗೆ ತೃಪ್ತಿಯನ್ನು ಕೊಡಬಲ್ಲವು ? ಅಂತಃಕರಣವು ನಮಗೆ ಚಿರಪರಿಚಿತವಾಗಿರುವ ಈ ಹೆಗ್ಗುರುತುಗಳನ್ನೆಲ್ಲಾ ಹಿಂದೆಯೇ ಬಿಟ್ಟು ಮುಂದಕ್ಕೆ ನುಗ್ಗಿ ಹೋಗುತ್ತದೆ. ಹೀಗೆ ಹಿಂದೂ ದೃಷ್ಟಿಯ ಧರ್ಮಕ್ಕೆ ಸಾಧನಾಭಾವನೆ ಅತ್ಯಂತ ಮುಖ್ಯವಾದುದು. ಅದು ಧರ್ಮದ ಚಾಲನಶಕ್ತಿ.

ಹೀಗೆ ಸೂತ್ರೀಕರಿಸಿದ ಧರ್ಮದ ವ್ಯಾಪ್ತಿ ಅನಂತವಾದುದು ; ಅದು ವಿವಿಧ ರೂಪಗಳಲ್ಲಿ ಹೊರಹೊಮ್ಮುತ್ತದೆ. ಹೀಗೆ ತಿಳಿದುಕೊಂಡ ಧರ್ಮದ ಅರ್ಥ ಮತ್ತು ವ್ಯಾಪ್ತಿಯನ್ನು ಸ್ವಾಮಿ ವಿವೇಕಾನಂದರು ತಮ್ಮ ವೇದಾಂತ ನಿಷ್ಠೆಯನ್ನು ಕುರಿತ ಪ್ರಸಿದ್ಧ ಹೇಳಿಕೆಯಲ್ಲಿ ಹೀಗೆ ತಿಳಿಸುತ್ತಾರೆ :

> *ಪ್ರತಿಯೊಂದು ಆತ್ಮವೂ ಸ್ವಭಾವತಃ ದೈವಿಕವಾದುದು. ನಮ್ಮಲ್ಲಿರುವ ದೈವತ್ವವನ್ನು ಬಾಹ್ಯ ಮತ್ತು ಅಂತರಂಗ ಪ್ರಕೃತಿಯನ್ನು ನಿಯಮಿಸುವುದರ ಮೂಲಕ ಆವಿರ್ಭವಿಸುವಂತೆ ಮಾಡುವುದೇ ನಮ್ಮ ಹೆಗ್ಗುರಿ. ಇದನ್ನು ಕರ್ಮದಿಂದಲೋ, ಪೂಜೆಯಿಂದಲೋ, ಮನಸ್ಸಿನ ನಿರೋಧದಿಂದಲೋ ಅಥವಾ ತತ್ತ್ವಜ್ಞಾನದಿಂದಲೋ—ಇವುಗಳಲ್ಲಿ ಒಂದರಿಂದಲೋ ಹಲವುಗಳಿಂದಲೋ, ಎಲ್ಲವುಗಳಿಂದಲೋ—ಸಾಧಿಸಿ ಸ್ವತಂತ್ರನಾಗು. ಇದೇ ಧರ್ಮ ಸರ್ವಸ್ವ. ಸಿದ್ಧಾಂತಗಳೂ, ತತ್ವಗಳೂ, ಮತಾಚರಣೆಗಳೂ, ಗ್ರಂಥಗಳೂ, ದೇವಾಲಯಗಳೂ, ಮೂರ್ತಿಗಳೂ ಎಲ್ಲವು ಅಮುಖ್ಯ ವಿಷಯಗಳು.*

## ೧೦. ಸನಾತನಧರ್ಮ : ಅದರ ಅನಂತ ಆಶಯಗಳು

ಸನಾತನ ಧರ್ಮದ ಅಖಂಡವಾದ ಗುರಿ ಎಂದರೆ ತನ್ನ ಪರಿಪೂರ್ಣತೆಗಾಗಿ ಮಾನವನು ಹೋರಾಡುವುದಕ್ಕೆ, ದೈವವಾಗುವುದಕ್ಕೆ, ದೇವರನ್ನು ಸೇರಿ ಸಂದರ್ಶಿಸುವುದಕ್ಕೆ ಸಹಾಯ ಮಾಡುವುದು ; ದೇವರ ಸಾನ್ನಿಧ್ಯವನ್ನು ಸೇರುವುದು, ದೇವರನ್ನು ದರ್ಶಿಸುವುದು, ಸ್ವರ್ಗದಲ್ಲಿರುವ ತಂದೆ ಪರಿಪೂರ್ಣನಾಗಿರುವಂತೆ ತಾನೂ ಪರಿಪೂರ್ಣವಾಗುವುದು. ಇವನ್ನೇ ಹಿಂದೂ ಸಂತರು ಧರ್ಮವೆನ್ನುವುದು. ಧರ್ಮವು ಅವಿಚ್ಛಿನ್ನವಾದ ಹೋರಾಟವನ್ನು ಒಳಗೊಂಡಿದೆ. ಆ ಹೋರಾಟ ಬಹುಮಟ್ಟಿಗೆ ನೈತಿಕ ಮತ್ತು ಆಧ್ಯಾತ್ಮಿಕರೂಪವಾದುದು, ಮನುಷ್ಯನ ಭಾವನೆಗಳನ್ನೂ ಚಿಂತನೆಗಳನ್ನೂ ಪರಿಶುದ್ಧಗೊಳಿಸತಕ್ಕದ್ದು ; ಕ್ರೈಸ್ತರ ಅತೀಂದ್ರಿಯವಾದದ ಪ್ರಕಾರ ನಮ್ಮೊಳಗಿರುವ 'ಮುದುಕ'ನ ಸಾವನ್ನು ಸಾಧಿಸುವುದು. ಇಲ್ಲಿ ಒತ್ತಿ ಹೇಳುತ್ತಿರುವುದು ಧರ್ಮದ ಅನುಷ್ಠಾನವನ್ನೇ ಹೊರತು ಕೇವಲ ಬಾಯಿಂದ ಹೇಳುವ ಪ್ರತಿಜ್ಞಾ ವಾಕ್ಯಗಳನ್ನಲ್ಲ. ಈ ಹೋರಾಟವಿಲ್ಲದೇ ಹೋದರೆ ದೈವದಲ್ಲಿ ನಂಬಿಕೆಯುಳ್ಳವರ ಆಸ್ತಿಕತೆಗೂ, ನಂಬದವರ ನಾಸ್ತಿಕತೆಗೂ ಹೆಚ್ಚು ವ್ಯತ್ಯಾಸವೇನೂ ಕಾಣುವುದಿಲ್ಲವೆಂದು ಹಿಂದೂ ಸಂತರು ಭಾವಿಸುತ್ತಾರೆ. ಸಾಧನೆ ಅತ್ಯಗತ್ಯವೆಂದು ಹೇಳುವುದರಿಂದ ಹಿಂದೂವಿನ ದೃಷ್ಟಿಯಲ್ಲಿ ಧರ್ಮವೆಂಬುದು ಈಗಲೇ, ಇಲ್ಲಿಯೇ ನಡೆವ ಒಂದು ಆಧ್ಯಾತ್ಮಿಕ ಸಾಹಸವೇ ಹೊರತು ಮರಣಾನಂತರ ಪ್ರತಿಫಲವನ್ನು ಪಡೆಯಬಲ್ಲ ಒಂದು ಹುಂಡಿಯಾಗುವುದಿಲ್ಲ. ಕೇವಲ ನಂಬಿಕೆ ಸ್ಥಿರೀಕರಣಗಳು ಧರ್ಮಶ್ರದ್ಧೆಯ ಒರೆಗಲ್ಲಾಗುವುದನ್ನು ಒಡನೆಯೇ ನಿರಾಕರಿಸಬೇಕಾಗುತ್ತದೆ. ಧರ್ಮಶ್ರದ್ಧೆಯ ಏಕೈಕ ಯಥಾರ್ಥ ಪರೀಕ್ಷೆಯೆಂದರೆ ಅದು ಆತ್ಮಕ್ಕೆ ದೀಪ್ತಿ

ಯನ್ನುಂಟುಮಾಡಬಲ್ಲ ಶಕ್ತಿಯುಳ್ಳದಾಗಿರಬೇಕು. ಧರ್ಮ ಶ್ರದ್ಧೆ ಮತ್ತು ದೈವ ದರ್ಶನದ ಹಸಿವು ಈ ದೀಪ್ತ ಚೇತನದ ಪ್ರತಿಜ್ಞಾ ಮಂತ್ರಗಳೆಂಬ ಗಾಳಿಯಿಂದಾಗಲೀ, ವಿದ್ಯಾತತ್ತ್ವ ಮತ ನಂಬಿಕೆಗಳೆಂಬ ಕಲ್ಲುಗಳಿಂದಾಗಲೀ ಹೊಟ್ಟೆ ಹೊರೆಯಲು ಸಾಧ್ಯವಿಲ್ಲ. ಆಧ್ಯಾತ್ಮಿಕ ಸಾಕ್ಷಾತ್ಕಾರವೇ ಅದರ ಆಹಾರ ; ನಿರಂತರವಾದ ಅನ್ವೇಷಣೆ ಮತ್ತು ವಿಚ್ಛಿತ್ತಿಯಿಲ್ಲದ ಹೋರಾಟವೇ ಅದರ ಹಾದಿ.

### ೧೧. ಯೋಗವು ಆಧ್ಯಾತ್ಮಿಕ ಜೀವನದ ಶಾಸ್ತ್ರ ಮತ್ತು ಕಲೆ

ಈ ಅನ್ವೇಷಣೆ, ಹೋರಾಟಗಳ ಸಮಗ್ರ ವ್ಯಾಪ್ತಿಯನ್ನು ಸೂಚಿಸುವ ಶ್ರೀಮಂತ ಪದವೊಂದು ಭಾರತೀಯರ ಭಾವನೆಯಲ್ಲಿ ಕಂಡುಬರುತ್ತದೆ. ಯೋಗ-ದೇವರಲ್ಲಿ ಒಂದಾಗಿ ಕೂಡಿಸುವುದು—ಎಂಬುದೇ ಆ ಪದ. ಈ ಪದಕ್ಕೆ ಆಧ್ಯಾತ್ಮಿಕ ಅನುಷ್ಠಾನದ ಬೇರೆ ಬೇರೆ ರೂಪಗಳನ್ನೂ, ಅದರ ಹದ ಹಾದಿಗಳನ್ನೂ ವಿಜ್ಞಾನದಷ್ಟು ನಿಷ್ಪೃಷ್ಟವಾಗಿ, ಸ್ಪಷ್ಟವಾಗಿ ಲೆಖ್ಖ ಹಾಕಿಟ್ಟಿರುವುದೂ ಎಂದು ವೇದಾಂತದಲ್ಲಿ ಅರ್ಥವಾಗುತ್ತದೆ. ಕೆಲವು ವೇಷಧಾರಿಗಳೂ ಅಡ್ಡ ಕಸಬಿಗಳೂ ಯೋಗಕ್ಕೆ ಕೈ ಹಾಕಿ ಅದಕ್ಕೊಂದು ದುರ್ವಾಸನೆಯನ್ನು ಬಳಿದಿದ್ದಾರೆಂಬುದನ್ನು ಇಲ್ಲವೆನ್ನುವಂತಿಲ್ಲ. ಆದರೂ ಅದರಲ್ಲಿ ಮರೆ ಮೋಸ ಮಾಡುವಂತಹ ರಹಸ್ಯವಾದುದೇನೂ ಇಲ್ಲ. ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ ರಂತಹ ಸಂತರು ಇತ್ತೀಚೆಗೆ ಕಾಣಿಸಿಕೊಂಡು ಅದಕ್ಕೆ ಪ್ರಾಚೀನಕಾಲದಲ್ಲಿದ್ದ ಘನತೆ, ಪವಿತ್ರತೆ, ಆಕರ್ಷಣೆಗಳನ್ನು ಮತ್ತೆ ತಂದುಕೊಟ್ಟಿದ್ದಾರೆ. ಹೀಗಾಗಿ ಇಂದು ತನ್ನ ವಿವಿಧ ರೂಪಗಳಿಂದ ಕೂಡಿದ ಯೋಗಕ್ಕೆ ಧರ್ಮ ವಿಜ್ಞಾನ, ಆಧ್ಯಾತ್ಮಿಕ ಜೀವನಕಲೆ ಎಂದು ಅರ್ಥವಾಗುತ್ತದೆ.

ನಂಬಿಕೆ ಅಥವಾ ಪಾಂಡಿತ್ಯಗಳಿಂದ ಭಿನ್ನವಾದ ಆಧ್ಯಾತ್ಮಿಕ ಸಾಕ್ಷಾತ್ಕಾರವೆಂಬುದೇ ಧರ್ಮದ ಗುರಿ, ಎಂಬ ಈ ಅಭಿಪ್ರಾಯವೂ, ಅದನ್ನು ಪಡೆಯಲು ಸಾಧನೆ ಅಗತ್ಯವೆಂಬ ಈ ನಿಶ್ಚಯವೂ ಭಾರತದಲ್ಲಿ ಧರ್ಮವನ್ನು ಪ್ರತಿಷ್ಠಾ ಪೂಜೆಯ ಕೆಡುಕಿನಿಂದ ಉದ್ಧರಿಸಿದೆ ಎಂದು ಅಭಿಪ್ರಾಯ ಪಡುತ್ತಾ ಡಾ. ರಾಧಾಕೃಷ್ಣನ್‌ರವರು ಹೀಗೆ ಹೇಳುತ್ತಾರೆ ***(Eastern Religions and Western Thought, p. 322)*** :

> *ಆಧ್ಯಾತ್ಮಿಕ ಜೀವನದ ಹೆಗ್ಗುರಿಯನ್ನು ಒತ್ತಿ ಹೇಳುವುದರಿಂದ ಹಲವು ಬೇರೆ ಬೇರೆ ರೀತಿಯ ಪೂಜಕರನ್ನು ಒಂದಾಗಿ ಸೇರುವಂತೆ ಮಾಡಿದೆ ; ಇದು ಆಧ್ಯಾತ್ಮಿಕ ಪ್ರತಿಷ್ಠಾ ಪೂಜೆಯಿಂದ ಹಿಂದೂಗಳನ್ನು ಉದ್ಧರಿಸಿದೆ.*

### ೧೨. ಸರ್ವಸ್ವೀಕಾರವಾಗಿ ಸಹಿಷ್ಣುತೆ

ಸಮನ್ವಯ ಮತ್ತು ಸ್ಪಷ್ಟವಾದ ಸಾಹಚರ್ಯಗಳು ಜೀವನಕ್ಕೂ ವೇದಾಂತದ ವಿಶ್ವದೃಷ್ಟಿಗೂ ಇರುವ ಎರಡನೆಯ ಸಂಬಂಧ. ಸನಾತನ ದರ್ಮವು ಬೋಧಿಸುವುದು ಕೇವಲ ಅನ್ಯಮತ ಸಹಿಷ್ಣುತೆಯನ್ನು ಮಾತ್ರವೇ ಅಲ್ಲ, ಆದರ್ಶ ಸರ್ವಸ್ವೀಕಾರವನ್ನು. ಪರಮತಸಹಿಷ್ಣುತೆ ಎಂಬ ಮಾತಿನಿಂದ ಸೂಚಿತವಾಗುವ ಹಿರಿತನ ಪೋಷಣೆಗಳ ಮನೋಭಾವ ಹಿಂದುವಿಗೆ ಹಿಡಿಸುವುದಿಲ್ಲ. ಪರಪೋಷಣಾಭಾವದ ಕೆಡುಕಿನಿಂದ ಹಾಳಾಗಿಲ್ಲದಿರುವ ಕರುಣೆಯ ಕಲೆಯನ್ನು ಅವನು ಕಲಿತಿದ್ದಾನೆ ; ಸಾಹಸಚರ್ಯವೆಂಬುದರ ಅರ್ಥವನ್ನು ಅರಿತಿದ್ದಾನೆ. ಸ್ವಾಮಿ ವಿವೇಕಾನಂದರು ತಮ್ಮ ಚಿಕಾಗೋ ಭಾಷಣದಲ್ಲಿ ಹೀಗೆ ಹೇಳುತ್ತಾರೆ (Complete Works, Vol I, page 15, XI Edition) :

> *ಅವನಿಗೆ ಅತ್ಯಂತ ಕೀಳುಮಟ್ಟಕ್ಕೆ ಸೇರಿದ ಕಲ್ಲು ಮರಗಳ ಪೂಜೆಯಿಂದ ಹಿಡಿದು ಮಹೋನ್ನತವಾದ ಅದ್ವೈತೋಪಾಸನೆಯವರೆಗಿರುವ ಮತಧರ್ಮಗಳೆಲ್ಲಾ ಮಾನವ ಚೇತನವು ಅವ್ಯಕ್ತವಾದುದನ್ನು ಗ್ರಹಿಸಿ, ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕಾಗಿ ಮಾಡಿದ ಹಲವು ಪ್ರಯತ್ನಗಳು ; ಪ್ರತಿಯೊಂದೂ ಆದರದರ ಜನನ, ಪರಿಸರಗಳಿಂದ ನಿರ್ಧಾರಿತವಾಗಿದೆ ;*

*ಇವುಗಳಲ್ಲಿ ಒಂದೊಂದೂ ಬೆಳವಣಿಗೆಯ ಒಂದೊಂದು ಘಟ್ಟವನ್ನು ಸೂಚಿಸುತ್ತದೆ; ಪ್ರತಿಯೊಂದು ಚೇತನವೂ ಒಂದು ಗರುಡನ ಮರಿ, ತೊಳಗಿ ಬೆಳಗುತ್ತಿರುವ ಸೂರ್ಯನನ್ನು ಮುಟ್ಟುವ ತನಕ ಮೇಲೆ ಮೇಲಕ್ಕೆ ಹಾರುತ್ತಾ ಹೆಚ್ಚು ಹೆಚ್ಚು ಶಕ್ತಿಯನ್ನು ಗಳಿಸಿಕೊಳ್ಳುತ್ತದೆ.*

ಇದು ತಿಳಿವಳಿಕೆ, ಕರುಣೆ, ಗೌರವಗಳ ಆಧಾರದಿಂದ ಬಂದ ಸ್ವೀಕಾರ ಅಥವಾ ಪರಮತ ಸಹಿಷ್ಣುತೆ ; ಇದು ಸಮನ್ವಯ ಮತ್ತು ಸಜೀವ ಸಾಹಚರ್ಯಗಳಿಗೆ ಮಾರ್ಗದರ್ಶಕವಾಗುತ್ತದೆ ; ಹಾಗಾಗದೆ ಅಹಂಕಾರ ಅಥವಾ ಅನಾದರ ಅಥವಾ ಅವೆರಡೂ ಮೂಲವಾಗಿರುವ ವಾಡಿಕೆಯ ಜತೆಗೆ ಸೇರಿದರೆ ಸಹಿಷ್ಣುತೆಯು ತಿರಸ್ಕಾರ ಮತ್ತು ಅನಿವಾರ್ಯ ಸ್ವೈರಣೆಗಳ ಹಾದಿಯನ್ನು ಹಿಡಿಯುತ್ತದೆ.

### ೧೩. ಮುಕ್ತಾಯ : ವೇದಾಂತದ ಮುಕ್ತಿದಾಯಕ ಪ್ರಭಾವ

ವೇದಾಂತದ ಮೂರನೆಯ ಫಲವೆಂದರೆ ಮನಸ್ಸು ಬುದ್ಧಿಗಳ ಮೇಲೆ ಅದು ಬೀರುವ ಉದ್ಧಾರದ ಪ್ರಭಾವ. ತಾನೇ ತಾರ್ಕಿಕ ಪ್ರಯತ್ನದಿಂದ ಹೊರಬಂದುದಾದುದರಿಂದ ಅದು ಮಾನವ ಮನಸ್ಸನ್ನು ಪಂಥಾಭಿಪ್ರಾಯದ ಹಿಡಿತದಿಂದ ಬಿಡಿಸಿ, ಜೀವನ ಮತ್ತು ಅನುಭವಗಳ ಚಿಂತನೆಯಿಂದ ಸತ್ಯವನ್ನು ಕಂಡುಕೊಳ್ಳಲು ಅವಕಾಶವನ್ನು ಕಲ್ಪಿಸುತ್ತದೆ. ಅದರ ಚಿಂತನೆಯ ಪರ್ಯಾಲೋಚನಾಂಶಗಳು ಸುಸ್ಥಾಪಿತವಾಗಿರುವ ಮತ ಸಿದ್ಧಾಂತಗಳಲ್ಲ, ಅಥವಾ ಅಪರೀಕ್ಷಿತವಾದ ಅಹಂಕಾರಭಾವನೆಗಳಲ್ಲ ; ಸ್ವತಃ ಅನುಭವವೇ—ಕಾರ್ಯತಃ ಮತ್ತು ಸಂಭವನೀಯವಾದ ಅನುಭವಗಳ ಮೊತ್ತ. ಅದನ್ನು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂದು ಮೂರು ಗುಂಪಾಗಿ ವಿಂಗಡಿಸಲಾಗಿದೆ. ಅದು ಬೋಧಿಸುವ ಸತ್ಯವು ತನ್ನ ಅನ್ವೇಷಣೆಯನ್ನು ಶೋಧಿಸಿದಮೇಲೆ ತಾನು ಪಡೆಯುವ ಅನುಭವಗಳು ಕಾರಣ-ಕಾರ್ಯಗಳಿಗೆ ಅತೀತವಾಗಿ ಶುದ್ಧವೂ ಅಚಲವೂ ಆದ ಆತ್ಮದ ಸತ್ಯವನ್ನು. ಮಾನವ ಮತ್ತು ಪ್ರಕೃತಿಗಳಲ್ಲಿರುವ ದೈವತ್ವವು ಬಾಳಿನ ಪ್ರಯಾಣವನ್ನು ಸಾಧಿಸುವುದು ಅಸತ್ಯದಿಂದ ಸತ್ಯಕ್ಕಲ್ಲ, ಸತ್ಯದಿಂದ ಸತ್ಯಕ್ಕೆ—ಕೆಳಮಟ್ಟದ ಸತ್ಯದಿಂದ ಮೇಲ್ಮಟ್ಟದ ಸತ್ಯಕ್ಕೆ. ಆದ್ದರಿಂದ ಎಲ್ಲ ಜ್ಞಾನವೂ—ಅದು ಲೌಕಿಕವಾಗಿರಲಿ ಅಥವಾ ಪಾರಲೌಕಿಕವಾಗಿರಲಿ, ಅದು ಐಹಿಕವಾಗಿರಲಿ ಅಥವಾ ಆಧ್ಯಾತ್ಮಿಕವಾಗಿರಲಿ—ವೇದಾಂತದ ಪರಿಧಿಯೊಳಗೆ ಬರುತ್ತದೆ. ಅದು ಧರ್ಮದಷ್ಟೇ ಪ್ರಕೃತಿವಿಜ್ಞಾನವನ್ನೂ ಎಚ್ಚರಿಕೆಯಿಂದ ಪೋಷಿಸುತ್ತದೆ. ಏಕೆಂದರೆ ಅವೆರಡರ ಬಳಿಕೆ, ಐಕ್ಯತೆಗಳು ತಾನೇ ಆಗಿದೆ. ಶ್ರೀಕೃಷ್ಣನು ಗೀತೆಯಲ್ಲಿ ಆತ್ಮಜ್ಞಾನ ಅನಾತ್ಮಜ್ಞಾನಗಳೆರಡೂ ಸೇರಿ ಅಧ್ಯಾತ್ಮಜ್ಞಾನವಾಗಿದೆಯೆಂದು ಹೇಳುತ್ತಾನೆ (XII-೨). ಉಪನಿಷತ್ತುಗಳು ಬ್ರಹ್ಮವಿದ್ಯಾ ಅಥವಾ ತತ್ತ್ವಶಾಸ್ತ್ರವನ್ನು ಸರ್ವವಿದ್ಯಾ ಪ್ರತಿಷ್ಠಾ (ವಿಜ್ಞಾನಗಳ ವಿಜ್ಞಾನ) ಎಂದು ಭಾವಿಸುತ್ತವೆ (ಮಾಂಡೂಕ್ಯ ಉಪನಿಷತ್ I-೧).

ಅನು : ತ. ಸು. ಶಾಮರಾಯ

೪

# ಉಪನಿಷತ್ತುಗಳ ಆಶಯ*

## ೧. ಪ್ರಸ್ತಾವನೆ

ಪ್ರಾಚೀನ ಭಾರತದ ಇತಿಹಾಸದಲ್ಲಿ ವೇದಯುಗದ ಕೊನೆಯ ಕಾಲವು, ಚಿಂತನೆಯ ಮಟ್ಟದಲ್ಲಿ ಆಳವಾದ ಕಾರ್ಯಶಕ್ತಿಯಿಂದ ಕೂಡಿದ್ದುದು ಅತ್ಯಂತ ಗಮನಾರ್ಹವಾದ ವಿಷಯ. ಆಗ ನಮ್ಮ ಪ್ರತಿಭಾವಂತರೂ ಸಂತರೂ ಆದವರಲ್ಲಿ ಮಹೋನ್ನತರೆನಿಸಿದ ಹಲವರು ವೈಯಕ್ತಿಕವಾಗಿಯೂ, ಗುಂಪುಗುಂಪಾಗಿಯೂ ಜೀವನ ಮತ್ತು ಅನುಭವಗಳ ಸಮಸ್ಯೆಗಳೊಡನೆ ಹೋರಾಟ ನಡೆಸಿದರು. ಈ ಸಾಹಸಪೂರ್ಣ ಪ್ರಯತ್ನಗಳ ಪರಿಣಾಮಕಾರಕ ವರದಿಯು ಮುಂದಿನ ಪೀಳಿಗೆಗಾಗಿ ಉಪನಿಷತ್ತುಗಳಲ್ಲಿ ಸಂರಕ್ಷಿಸಲಾಗಿದೆ. ಈ ಉಪನಿಷತ್ತುಗಳು ವಿಸ್ತಾರ ವೈವಿಧ್ಯಗಳಿಂದ ಕೂಡಿದ ವೈದಿಕ ಸಾಹಿತ್ಯದ ಕೊನೆಯ ಭಾಗಗಳಾಗಿವೆ. ಅವು ವೇದಗಳ ಸಾರಸರ್ವಸ್ವವನ್ನೂ ಒಳಗೊಂಡಿರುವುದರಿಂದ ಅವುಗಳನ್ನು ವೇದಾಂತಗಳೆಂದೂ ಕರೆಯುತ್ತಾರೆ.

## ೨. ನಿರ್ಭಯವಾದ ಸತ್ಯಾನ್ವೇಷಣೆ

ಉಪನಿಷತ್ತುಗಳ ಅತ್ಯಂತ ಮುಖ್ಯ ಲಕ್ಷಣಗಳಲ್ಲಿ ನಿರ್ಭಯವಾದ ಸತ್ಯಾನ್ವೇಷಣೆಯೂ ಒಂದು ; ಅದು ಅವುಗಳ ಸಹಜ ಸ್ವಭಾವ. ಶಿಷ್ಯರೂ ಗುರುಗಳೂ ಧರ್ಮ ಮತ್ತು ಅಧ್ಯಾತ್ಮದ ಮೂಲಭೂತ ಸಮಸ್ಯೆಗಳನ್ನು, ಮ್ಯಾಕ್ಸ್‌ಮುಲ್ಲರ್ ಹೇಳಿರುವಂತೆ 'ಸಾರ್ವಜನಿಕರನ್ನು ಸಂತೋಷಪಡಿಸಬೇಕೆಂದಾಗಲೀ, ಟೀಕೆಮಾಡುವವರನ್ನು ಸಮಾಧಾನಪಡಿಸಬೇಕೆಂದಾಗಲೀ ಉದ್ದೇಶವಿಟ್ಟುಕೊಳ್ಳದೆ' (Three Lectures on Vedanta Philosophy, p. 39) ಅಧ್ಯಾತ್ಮ ಚಿಂತನೆಯ ಇತಿಹಾಸದಲ್ಲಿಯೇ ಅತ್ಯಪೂರ್ವವಾದಂತಹ ಆಗ್ರಹ ಮತ್ತು ಉತ್ಸಾಹಗಳಿಂದ ಕೂಲಂಕಷವಾಗಿ ಚರ್ಚಿಸಿ ಪ್ರಚಾರ ಮಾಡುತ್ತಿದ್ದುದು ಕಂಡುಬರುತ್ತದೆ. ಸತ್ಯಾನ್ವೇಷಣೆಯಲ್ಲಿ ಎಂತಹ ತ್ಯಾಗವೂ ಮಹತ್ತೆನಿಸುತ್ತಿರಲಿಲ್ಲ. ಲೌಕಿಕವಾದ ಇಂದ್ರಿಯಸುಖ ಅಥವಾ ಸ್ವರ್ಗದ ಚಿತ್ತಾಕರ್ಷಣೆಗಳ ಮಾತು ಹಾಗಿರಲಿ, ಸತ್ಯಾನ್ವೇಷಿಯು ಮಾಡಬೇಕಾಗಿರುವ ಇನ್ನೂ ಕಷ್ಟಕರವಾದ ಮತ್ತು ಅಪೂರ್ವವಾದ ತ್ಯಾಗವನ್ನೂ—ಪ್ರಿಯವಾದ ಸ್ವಾಭಿಪ್ರಾಯ ಮತ್ತು ಹಿತಕರವಾದ ಪೂರ್ವಗ್ರಹಗಳನ್ನೂ ತಿರಸ್ಕರಿಸುವ ತ್ಯಾಗಶಕ್ತಿಯನ್ನು—ಧೈರ್ಯವಾಗಿ ಸಾಧಿಸಿದರು.

## ೩. ಮುಕ್ತವಾದ ವಾತಾವರಣ

ಉಪನಿಷತ್ತುಗಳ ಎರಡನೆಯ ಮುಖ್ಯಲಕ್ಷಣವೆಂದರೆ ಅದರ ಸತ್ಯಾನ್ವೇಷಣೆಯಲ್ಲಿ ವ್ಯಾಪಿಸಿದ್ದ

---

*೧೯೫೦, ಡಿಸೆಂಬರ್ ೨೧ರಂದು ಆಕಾಶವಾಣಿ, ದೆಹಲಿಯಿಂದ ಪ್ರಸಾರಿತವಾದ ಭಾಷಣ.

ಸ್ವತಂತ್ರ ವಾತಾವರಣ. ಸತ್ಯದ ಮೇಲಿನ ಪ್ರೇಮದಿಂದ ಪ್ರಚೋದಿತವಾಗಿ ಅಬಾಧಿತವಾದ ಸ್ವತಂತ್ರ ವಾತಾವರಣದಲ್ಲಿ ಚಿಂತನೆಯು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತಾ ನಿರರ್ಗಳವಾಗಿ ಮುಂದಕ್ಕೆ ಸಾಗಿಹೋಗುತ್ತದೆ ; ಪ್ರಮಾಣ ಗ್ರಂಥಗಳ ಭಯದಿಂದ ಅಥವಾ ಸಿದ್ಧಾಂತಗಳ ಪ್ರೇಮದಿಂದ ಯಾವ ಪ್ರತಿಬಂಧಕವೂ ಇಲ್ಲದಂತೆ ಗಂಭೀರವಾದ ಚರ್ಚೆ, ಅಭಿಪ್ರಾಯ ಮತ್ತು ತತ್ತ್ವಸೂತ್ರಗಳ ಪರಸ್ಪರ ವಿನಿಮಯ—ಈ ಕಾರ್ಯಗತಿಯಿಂದ ನಾವು ಮುಂದೆ ವೇದಾಂತವೆಂದು ಕರೆಯುವ ಸುಂದರ ಚಿಂತನಾ ಮಂದಿರವೊಂದು ಉದಿಸುತ್ತದೆ. ಈ ವೇದಾಂತದ ತರ್ಕ ಮತ್ತು ಪರಮಾರ್ಥವು ಅಧ್ಯಾತ್ಮವನ್ನೂ ಮತಧರ್ಮವನ್ನೂ ಒಂದಾಗಿ ಸೇರಿಸುತ್ತದೆ.

ಸ್ತಬ್ಧಗೊಳಿಸುವಂತಹ ಗುರು ಶಿಷ್ಯರ ಮೆರವಣಿಗೆ, ಸಣ್ಣ ಗುಂಪುಗಳಲ್ಲಿಯೂ ಬೃಹತ್ ಸಮ್ಮೇಳನಗಳಲ್ಲಿಯೂ ಅವರು ನಡೆಸುವ ಸಂಭಾಷಣೆಗಳ ಮನೋಜ್ಞವಾದ ವರದಿಗಳು, ಸ್ವತಂತ್ರ ಗೀತೆಗಳಲ್ಲಿ ಕಾಣಬರುವಂತಹ ಭವ್ಯತೆಯ ಪ್ರಾಂತಕ್ಕೆ ಆಗಾಗ ಕೈಗೊಳ್ಳುವ ಹಾರಾಟ, ಗಂಭೀರವಾದ ನೇರವಾದ ಸುಂದರವಾದ ರೂಪಕಗಳ ವ್ಯೂಹರಚನೆ, ಪರಿಣಾಮಕಾರಿಯಾಪಂತಹ ಕಲ್ಪನಾ ಚಿತ್ರಗಳ ಗರಿಗಳಿಂದ ಕೂಡಿ ಹಾರಾಡುತ್ತಿರುವ ಚಿಂತನೆಯ ಬಾಣಗಳು—ಈ ವಿವಿಧ ವೈಶಿಷ್ಟ್ಯಗಳು ಉಪನಿಷತ್ತುಗಳನ್ನು ಚಿರಸ್ಥಾಯಿಯಾದ ಸುಂದರ, ರಮಣೀಯವಾದ ಸಾಹಿತ್ಯವನ್ನಾಗಿಯೂ, ಜೀವಂತವಾದ ಆಧ್ಯಾತ್ಮಿಕತೆಯ ಮಹತ್ತು ಸಾಮರ್ಥ್ಯಗಳುಳ್ಳವನ್ನಾಗಿಯೂ ಮಾಡಿವೆ.

### ೪. ಮುಖ್ಯವಾದ ಉಪನಿಷತ್ತುಗಳು

ಮುಖ್ಯವಾದ ಉಪನಿಷತ್ತುಗಳ ಸಂಖ್ಯೆ ಹತ್ತು ಎಂಬುದಾಗಿ ಸ್ವೀಕರಿಸಲಾಗಿದೆ. ಅವು ಯಾವು ವೆಂದರೆ—ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ. ಇವುಗಳಲ್ಲಿ ಬೃಹದಾರಣ್ಯಕ, ಛಾಂದೋಗ್ಯ ಈ ಎರಡೂ ಅತ್ಯಂತ ಉದ್ದವಾದುವು ; ಕೇನ, ಮಾಂಡೂಕ್ಯ, ತೈತ್ತಿರೀಯಗಳಲ್ಲಿ ಒಂದೊಂದೂ ಉಪನಿಷತ್ತು ಚಿಂತನೆಯ ಬಹು ಮುಖ್ಯವಾದ ಒಂದು ಮುಖವನ್ನು ಪ್ರತಿಪಾದಿಸುವುದರಿಂದ ಇವು ಅತ್ಯಂತ ಮುಖ್ಯವಾದವು.

ಈಶೋಪನಿಷತ್ತು ವೇದಾಂತ ಚಿಂತನೆಗೆ ಆಧಾರಭೂತವಾದ ವಸ್ತುವನ್ನು—ಮಾನವ ಮತ್ತು ಪ್ರಕೃತಿಗಳು ದೈವಸ್ವರೂಪವೆಂಬುದನ್ನೂ, ಜೀವನು ಆಪಾತತಃ ಪಾರಮಾರ್ಥಿಕವೆಂಬುದನ್ನೂ ಪ್ರತಿಪಾದಿಸುತ್ತದೆ. ಅದರ ಪ್ರಥಮ ಶ್ಲೋಕವು ಸುಪ್ರಸಿದ್ಧವಾದ 'ಈಶಾವಾಸ್ಯಂ ಇದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್—ಈ ಜಗತ್ತಿನಲ್ಲಿ ಇರುವುದೆಲ್ಲವೂ ದೇವರಿಂದ ಆಚ್ಛಾದಿತವಾಗಿದೆ' —ಎಂದು ಘೋಷಿಸುತ್ತದೆ.

ಐತರೇಯವು ಪರತತ್ತ್ವದ ಆಧ್ಯಾತ್ಮಿಕ ಲಕ್ಷಣವನ್ನು ನಿರೂಪಿಸುವ ಒಂದು ಚರ್ಚೆಯನ್ನು ಒಳಗೊಂಡಿದೆ. ಪ್ರಶ್ನೋಪನಿಷತ್ತು ಅದರ ಹೆಸರೇ ಸೂಚಿಸುವಂತೆ ಪ್ರಶ್ನೋತ್ತರಗಳ ರೂಪವಾಗಿ ಆಧ್ಯಾತ್ಮಿಕ ಸಮಸ್ಯೆಗಳನ್ನು ಸಾಮಾನ್ಯ ರೀತಿಯಲ್ಲಿ ಪ್ರತಿಪಾದಿಸುತ್ತದೆ. ಮುಂಡಕವು ಜ್ಞಾನವನ್ನೂ ಉನ್ನತ (ಪರಾ) ಸಾಮಾನ್ಯ (ಅಪರಾ) ಎಂದು ವಿಭಜಿಸಿ ಮುಕ್ತಿಸ್ವರೂಪವನ್ನೂ ಪರಾವಿದ್ಯೆಯಲ್ಲಿ ಮೇಲೇರುತ್ತಾ ಹೋದಂತೆ ಆಗುವ ಆನಂದವನ್ನೂ ತೋರುವ ಗೀತ ರೂಪದಲ್ಲಿ ಹೊರ ಹೊಮ್ಮುತ್ತದೆ.

ಕಠೋಪನಿಷತ್ತು ತನ್ನದೇ ಆದ ಪ್ರತ್ಯೇಕವಾದೊಂದು ಗುಂಪಿಗೆ ಸೇರುತ್ತದೆ. ಕಾವ್ಯದ ರಮಣೀಯತೆಯನ್ನೂ ಯೋಗರಹಸ್ಯದ ಆಳವಾದ ಆಧ್ಯಾತ್ಮಿಕ ಶಕ್ತಿಯನ್ನೂ ಒಳಗೊಂಡು, ಇತರ ಯಾವ ಉಪನಿಷತ್ತಿನಲ್ಲೂ ಕಾಣಬರದಂತಹ ವೇದಾಂತ ಚಿಂತನೆಯ ಏಕಪ್ರಕಾರದ ನಿರೂಪಣೆ ಇದರಲ್ಲಿ ಕಂಡುಬರುತ್ತದೆ. ಇಲ್ಲಿನ ಸಂಭಾಷಣೆಗೆ ಅಲಂಕಾರಪ್ರಾಯವಾಗಿರುವ ಎರಡು ಪಾತ್ರಗಳು—

ಶಿಷ್ಯನಾಗಿ ಬಾಲಕ ನಚಿಕೇತ, ಗುರುವಾಗಿ ಪರಿಣತ ವಯಸ್ಸಿನ ಯಮ ಇವರು—ಅದರ ಆಕರ್ಷಣೆಯನ್ನು ಉದಾತ್ತಗೊಳಿಸಿದ್ದಾರೆ. ಚೇತನಾತ್ಮಕವಾದ ಎಳೆಯ ಜೀವವೊಂದು ಕುತೂಹಲದಿಂದ, ನಿರ್ಭಯವಾಗಿ ಭಯಂಕರ ಮೃತ್ಯುವಿನ ಬಾಗಿಲನ್ನು ತಟ್ಟಿ, ಜೀವನ ಮೃತ್ಯುಗಳಿಗೆ ಅತೀತವಾದ ಸತ್ಯಜ್ಞಾನವನ್ನು ಸೆಳೆತಂದ ಉದಾಹರಣೆ ಅತ್ಯಂತ ರೋಮಾಂಚಕಾರಕವಾಗಿದೆ.

ಬೃಹದಾರಣ್ಯಕೋಪನಿಷತ್ತು ಚಿಂತನೆ ಮತ್ತು ಸ್ಫೂರ್ತಿಗಳ ಒಂದು ಗೊಂಡಾರಣ್ಯವೇ ಸರಿ. ಅದರ ಪುಟಗಳಲ್ಲಿ ಪ್ರತಿಭಾಶಾಲಿಗಳಾದ ನಾಲ್ವರು ವ್ಯಕ್ತಿಗಳು ಪ್ರಮುಖವಾಗಿ ನಮ್ಮೆದುರು ನಿಲ್ಲುತ್ತಾರೆ. ಅವರಲ್ಲಿ ಇಬ್ಬರು ಪುರುಷರು ಇಬ್ಬರು ಸ್ತ್ರೀಯರು—ಅಧ್ಯಾತ್ಮಜ್ಞಾನಿಯಾದ ಜನಕಮಹಾರಾಜ, ಅಧ್ಯಾತ್ಮಜ್ಞಾನಿಯಾದ ಯಾಜ್ಞವಲ್ಕ್ಯ ಋಷಿ, ಯಾಜ್ಞವಲ್ಕ್ಯ ಋಷಿಯ ಹೆಂಡತಿಯಾಗಿ ಅತ್ಯಂತ ಪಾರಮಾರ್ಥಿಕಳಾದ ಮೈತ್ರೇಯಿ, ಚರ್ಚೆಯಲ್ಲಿ ಯಾಜ್ಞವಲ್ಕ್ಯನಿಗೆ ಮುಖ್ಯ ವಿರೋಧಿಯಾಗಿ ನಿಂತಿರುವ ಅಧ್ಯಾತ್ಮಜ್ಞಾನಿಯಾಗಿ ಪ್ರತಿಭಾನ್ವಿತಳಾದ ಹೆಣ್ಣು ಗಾರ್ಗಿ. ಈ ಮಹೋಪನಿಷತ್ತು ಇಲ್ಲಿನ ಮಹಾ ವ್ಯಕ್ತಿಗಳ ಬಾಯಿಂದ ಬರುವ ತರ್ಕಪೂರ್ಣವಾದ ವಿವಾದ, ಕಣ್ಣಿಗೆ ಕಟ್ಟುವಂತಹ ದೃಷ್ಟಾಂತಗಳು—ಇವುಗಳ ಮೂಲಕ ವೇದಾಂತ ಚಿಂತನೆಯ ಕೇಂದ್ರವಸ್ತುವಾದ ಜೀವೈಕ್ಯತೆ, ಜೀವಾತ್ಮದ ದೈವತ್ವ ಮತ್ತು ಪರಿಶುದ್ಧತೆಗಳನ್ನು ರಾಜಗಾಂಭೀರ್ಯದಿಂದ ಪ್ರತಿಪಾದಿಸುತ್ತದೆ. ದಿಟ್ಟತನದಿಂದ ಪರತತ್ತ್ವವನ್ನು ನಿರ್ಭೀತವಾದುದೆಂದು ಚಿತ್ರಿಸಿ, ಅದನ್ನು ಪಡೆಯುವುದೆಂದರೆ ಇಲ್ಲಿಯೇ, ಈಗಲೇ ಸಂಪೂರ್ಣ ನಿರ್ಭಯ ಮತ್ತು ಅಖಂಡ ಆನಂದದ ಸ್ಥಿತಿಯನ್ನು ಪಡೆಯುವುದು ಸಾಧ್ಯ ಎಂದು ಅದು ವರ್ಣಿಸುತ್ತದೆ (ಬೃಹದಾರಣ್ಯಕೋಪನಿಷತ್, IV- ೪-೨೪).

ಛಾಂದೋಗ್ಯೋಪನಿಷತ್ತಿನಲ್ಲಿ ಸತ್ಯಕಾಮ, ಶ್ವೇತಕೇತು, ನಾರದರಂತಹ ಪ್ರೇಮಮಯರಾದ ಸತ್ಯಾನ್ವೇಷಿಗಳ, ಆರುಣಿ ಸನತ್ಕುಮಾರರಂತಹ ಮಹಾ ಗುರುಗಳ ಪರಿಚಯವಾಗುತ್ತದೆ. ಈ ಉಪನಿಷತ್ತು ನೈಪುಣ್ಯತೆಯಿಂದ ಕೂಡಿದ ವಿವರವಾದ ನಿರೂಪಣೆಯ ಮೂಲಕ ಜೀವನ ಸತ್ಯಸ್ವರೂಪ, ಮಿಥ್ಯಾಸ್ವರೂಪಗಳನ್ನು ವಿಂಗಡಿಸಿ, ಜೀವ ಪರಮಾತ್ಮರ ಐಕ್ಯತೆಯನ್ನು ಪುನರಾವರ್ತನೆ ಮಾಡಿ ಹಾಡುತ್ತದೆ. ಬಾಳ ಗೋಳುಗಳಿಗೆಲ್ಲಾ ಆತ್ಮನ ನಿಜಸ್ವರೂಪವನ್ನು ತಿಳಿಯುವುದೇ ದಿವ್ಯೌಷಧ ಎಂದು ಚಿಕಿತ್ಸಾ ವಿಧಾನವನ್ನೂ ಅದು ಸೂಚಿಸುತ್ತದೆ ; 'ತರತಿ ಶೋಕಂ ಆತ್ಮವಿತ್—ನಿಜವಾದ ಆತ್ಮಜ್ಞಾನಿ ಎಲ್ಲ ದುಃಖಗಳನ್ನೂ ದಾಟುತ್ತಾನೆ' (ಛಾಂದೋಗ್ಯೋಪನಿಷತ್, VII, ೧-೩). ಇಂದ್ರ ಮತ್ತು ವಿರೋಚನರು ಪ್ರಜಾಪತಿಗೆ ಶಿಷ್ಯರಾಗಿದ್ದ ಅಪ್ಪಟ ಮಾನವೀಯವಾದ ಕಥೆಯ ಮೂಲಕ ಈ ಉಪನಿಷತ್ತು ಪ್ರಾಪಂಚಿಕ ಹಾಗೂ ಅದರ ಸ್ವಾರ್ಥ ಹೋರಾಟಗಳೆಂಬ ವಿಷಫಲಗಳಿಗೂ, ಪಾರಲೌಕಿಕ ಹಾಗೂ ಶಾಂತಿ ಸೌಹಾರ್ದಗಳೆಂಬ ಉತ್ಕರ್ಷಕ ಪ್ರತಿಫಲಗಳ ವ್ಯತ್ಯಾಸವನ್ನು ತೋರಿಸುವುದಕ್ಕೂ ಸಹಾಯಕವಾಗಿದೆ. ಇವುಗಳಲ್ಲಿ ಎರಡನೆಯದರತ್ತ ಮಾನವ ಬುದ್ಧಿ ಉತ್ಸಾಹದಿಂದ ಮುಂದುವರಿಯಬೇಕೆಂದು ಆಹ್ವಾನಿಸುವುದರ ಜೊತೆಯಲ್ಲಿಯೇ ಮೊದಲಿನದರಲ್ಲಿರುವ ಲೋಪದೋಷಗಳ ವಿಚಾರದಲ್ಲಿ ಎಚ್ಚರಿಕೆಯನ್ನೂ ನೀಡುತ್ತದೆ.

ತೈತ್ತಿರೀಯ ಉಪನಿಷತ್ ಜೀವಾತ್ಮನ ಲಕ್ಷಣವನ್ನು ಸಮಗ್ರವಾದ ವ್ಯಕ್ತಿತ್ವಾಧ್ಯಯನದ ಮೂಲಕ ಚರ್ಚಿಸಿ, ಆ ವ್ಯಕ್ತಿತ್ವವನ್ನು ಐದು ಕೋಶಗಳು ಅಥವಾ ಮೇಲು ಹೊದಿಕೆಗಳಾಗಿ ವಿಭಾಗಿಸುತ್ತದೆ—ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂದು. ಈ ಕೋಶಗಳ ಹೃದಯಾಂತರಾಳದಲ್ಲಿ ಮಾನವನ ಆತ್ಮವಿದೆ. ಈ ಆತ್ಮವು ಸದಾ ಶುದ್ಧ, ಸ್ವತಂತ್ರ, ಸತ್‌ಚಿತ್ ಆನಂದಸ್ವರೂಪವಾದುದು. ಹಿಂದಿನ ಒಂದು ಅಧ್ಯಾಯದಲ್ಲಿ ಪರಾತತ್ತ್ವವನ್ನು ಅನುಭವ ಜಗತ್ತಿನ ಮೂಲ, ಸ್ಥಿತಿ ಮತ್ತು ಹೆಗ್ಗುರಿ ಎಂದು ವಿವೇಚಿಸುವಾಗ ಸೃಷ್ಟಿ ಮತ್ತು ಬ್ರಹ್ಮ ಅಭಿನ್ನವೆಂದು ತಿಳಿಸಲಾಗಿದೆ.

ಪರತತ್ತ್ವ(ಬ್ರಹ್ಮ)ವೇ ಜಗತ್ತಿಗೆ ಮೂಲ, ಸ್ಥಿತಿ ಮತ್ತು ಗುರಿ ; ಎಲ್ಲ ಇಂದ್ರಿಯವ್ಯಾಪಾರಗಳ ಮತ್ತು ಮನಸ್ಸಿನ ಹಿಂದೆ ಇರುವ ಅಂತರಾತ್ಮವೇ ಅದು ಎಂಬ ಅದರ ಲಕ್ಷಣವನ್ನು ಪ್ರಕಾಶಪಡಿಸಿ, ಅದು ಸಾಪೇಕ್ಷತ್ವ ಮತ್ತು ಮಿತಿಗಳ ಸೋಂಕನ್ನೇ ನಿವಾರಿಸಿ ಶುದ್ಧಿಗೊಳಿಸುತ್ತದೆ—ಎಂಬ ಭಾವನೆಯನ್ನು ಕೇನೋಪನಿಷತ್ತು ಸ್ವೀಕರಿಸುತ್ತದೆ. ಹೀಗೆ ಮಾಡುವಾಗ ಉಪನಿಷತ್ತುಗಳಲ್ಲಿ ಬರುವ ಪರತತ್ತ್ವವು ಅನುಭವದಿಂದ ಬಂದ ಸಿದ್ಧವಸ್ತು—ಎಲ್ಲ ಅನುಭವಗಳಲ್ಲಿ ಯಾವಾಗಲೂ ಕಾಣಬರುವ ವಸ್ತು, ಕೇವಲ ಊಹೆಯಿಂದ ಅಥವಾ ತರ್ಕದಿಂದ ಬಂದ ಪೂರ್ವಭಾವನೆಯಲ್ಲ- ಎಂದು ಸ್ಪಷ್ಟಪಡಿಸುತ್ತದೆ.

ಕಡೆಯದಾಗಿ ಹನ್ನೆರಡೇ ಶ್ಲೋಕಗಳುಳ್ಳ ಅತ್ಯಂತ ಚಿಕ್ಕದಾದ ಮಾಂಡೂಕ್ಯ ಉಪನಿಷತ್ತಿಗೆ ಬಂದಾಗ—ಮುಂದೆ ಇಬ್ಬರು ಮಹಾ ದಾರ್ಶನಿಕರಾದ ಗೌಡಪಾದ ಮತ್ತು ಶಂಕರರು ಇದನ್ನು ವಿಸ್ತರಿಸಿ ವ್ಯಾಖ್ಯಾನವನ್ನು ಬರೆದಿದ್ದಾರೆ—ಈ ಎಲ್ಲ ವಿವಿಧ ಪರಿಶೋಧನೆಗಳ ಫಲಿತಾಂಶಗಳೂ ಒಂದೇ ಕಡೆ ಸೇರಿರುವಂತೆ ನಮಗೆ ಭಾಸವಾಗುತ್ತದೆ ; ದೈಹಿಕ, ಜೈವಿಕ, ಮಾನಸಿಕ, ಅಲೌಕಿಕ ಈ ಎಲ್ಲ ಅನುಭವಗಳ ತಾರ್ಕಿಕ ಸಂಯೋಜನೆಯನ್ನು ಸಂಗ್ರಹವಾಗಿ, ವ್ಯಾಪಕವಾದ ಪ್ರಯತ್ನದಿಂದ, ತಾರ್ಕಿಕ ಪರಿಶೋಧನೆಯ ರಾಜಮಾರ್ಗವನ್ನೇ ಹಿಡಿದು, ಯಥಾಪ್ರಕಾರವಾದ ಮಾನವನ ದೇವತ್ವ ಮತ್ತು ಸೃಷ್ಟಿ ಎಲ್ಲದರ ಏಕತ್ವಗಳ ಸತ್ಯವನ್ನೇ ಒಂದು ಹೊಸ ಸಿದ್ಧಾಂತವಾಗಿ ಸಾಧಿಸುತ್ತದೆ.

### ೫. ಉಪನಿಷತ್ತುಗಳು : ಅವುಗಳ ಚಿಂತನೆಗಳ ದಿಟ್ಟತನ ಮತ್ತು ಭಾವವೈಶಾಲ್ಯ

ಭಾರತದ ಋಷಿಗಳ ಧೈರ್ಯ ಮತ್ತು ಚಿಂತನಾ ವಿಸ್ತಾರವನ್ನು ಕಂಡು ಅಚ್ಚರಿಗೊಂಡ ಮ್ಯಾಕ್ಸ್ ಮುಲ್ಲರ್ ಅವರು ಆ ಋಷಿಗಳು ನಿರ್ಮಿಸಿದ ಉನ್ನತವೂ ಶಾಶ್ವತವೂ ಆದ ಚಿಂತನಾಮಂದಿರವನ್ನು ಮೆಚ್ಚಿ ತನ್ನ ಭಕ್ತಿ ಕುಸುಮಾಂಜಲಿಯನ್ನು ಅರ್ಪಿಸಿದ ಮೇಲೆ ಹೀಗೆ ಹೇಳುತ್ತಾರೆ. (The Six Systems of Indian Philosophy, 1919, p. 183) :

*ಪ್ರಾಚೀನ ವೇದಾಂತವನ್ನು ಪರಿಶೀಲಿಸಿದಾಗ ನನ್ನಲ್ಲಿ ಏಳುವ ಈ ಭಾವನೆಯನ್ನು ನಾನು ಅಡಗಿಸಿಕೊಳ್ಳಲಾರೆ. ಇತರ ದಾರ್ಶನಿಕರು ನಮ್ಮ ಇಂದ್ರಿಯಗಳಿಗೆ ಗೋಚರಿಸುತ್ತಿರುವ ಜಗತ್ತು ಸತ್ಯವಲ್ಲವೆಂದು ಹೇಳುತ್ತಾರೆ. ಆದರೆ ನಾವು ಅಹಂ ಎಂದು ಕರೆಯುವುದನ್ನೂ, ಇಂದ್ರಿಯಗಳನ್ನೂ, ಮನಸ್ಸು ಮತ್ತು ಅವುಗಳ ಆಂತರಿಕ ಸ್ವರೂಪಗಳನ್ನೂ ಮಿಥ್ಯೆ ಎಂದು ಕರೆಯುವ ಧೈರ್ಯ ಅವರಲ್ಲಿ ಯಾರಿಗೂ ಇಲ್ಲ. ಆದರೆ ಈ ವೇದಾಂತ ದಾರ್ಶನಿಕರು ದೇಹ-ಪ್ರಾಣಗಳಿಗಿಂತಲೂ ಆತ್ಮಕ್ಕೆ ಉನ್ನತ ಸ್ಥಾನವನ್ನು ನೀಡಿದ ಮೇಲೆ, ಸ್ವರ್ಗ ಮರ್ತ್ಯಗಳನ್ನೂ, ದೇವಮಾನವರನ್ನೂ, ಬ್ರಹ್ಮ ಆತ್ಮಗಳನ್ನೂ ಐಕ್ಯಗೊಳಿಸಿದ ಮೇಲೆ, ಇಂದ್ರಿಯಗೋಚರವಾದ ಈ ಜಗತ್ತಿನಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡಿ ಮುಗಿಸಬೇಕಾಗಿರುವ ಇಂದ್ರಿಯ ಗೋಚರವಾದ ಪ್ರಾಣಿಗಳ ಜೀವನದಲ್ಲಿ ಯಾವುದನ್ನೂ ಹಾಳುಮಾಡಿಲ್ಲ. ಅದಕ್ಕೆ ಬದಲಾಗಿ, ಸತ್ಯಾಂಶ ಸ್ವಲ್ಪವೂ ಇಲ್ಲದಿರುವ ಇಂದ್ರಿಯಗೋಚರ ವಸ್ತುವಾವುದೂ ಇರುವುದಕ್ಕೆ ಸಾಧ್ಯವಿಲ್ಲ ; ಆತ್ಮವನ್ನು ಅದರ ಮೂಲದ ಸ್ವಸ್ಥಾನಕ್ಕೆ ಮತ್ತೆ ಸೇರುವಂತೆ ಮಾಡಿ ಅದು ತನ್ನ ಸ್ವಸ್ವರೂಪವನ್ನು, ಎಂದರೆ ಬ್ರಹ್ಮನಲ್ಲಿ ತನ್ನ ಸ್ವರೂಪವನ್ನು ಪಡೆಯುವುದಕ್ಕೆ ಮಾನವನ ಸಜ್ಜನಿಕೆ ಸದ್ಗುಣಗಳೂ, ನಿಷ್ಠೆ ಕರ್ಮಗಳೂ ಅತ್ಯಗತ್ಯವಾದ ಸಿದ್ಧತೆಗಳು ಮಾತ್ರವೇ ಅಲ್ಲ, ಅನಿವಾರ್ಯ—ಎಂಬುದನ್ನು ತೋರಿಸಿವೆ.*

### ೬. ಉಪನಿಷತ್ತುಗಳು : ಅವುಗಳ ಚಲನಶೀಲವಾದ ಬದುಕಿನ ದೃಷ್ಟಿ

ಜೀವನವೆಂಬುದು ಕಾಲದೇಶಗಳ ಜಗತ್ತಿನಲ್ಲಿ ಜೀವಾತ್ಮನು ನಡೆಸುತ್ತಿರುವ ಒಂದು ಸಾಹಸ

ಕಾರ್ಯವೆಂದು ಉಪನಿಷತ್ತುಗಳು ತಿಳಿಸುತ್ತವೆ. ಕಠೋಪನಿಷತ್ತಿನಲ್ಲಿ ಇದನ್ನು ಒಂದು ಅರ್ಥವತ್ತಾದ ದೃಷ್ಟಾಂತದ ಸಹಾಯದಿಂದ—ರಥದ ಕಲ್ಪನೆಯಿಂದ ವಿಸ್ತರಿಸಿ ಹೇಳಿದೆ (ಕಠೋಪನಿಷತ್ III-೩-೯). ಮನುಷ್ಯನಿಗಿರುವ ದೇಹ, ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗಳೊಡನೆ ಅನುಕ್ರಮವಾಗಿ ಕುದುರೆಗಳನ್ನು ಹೂಡಿರುವ ರಥ, ಕಡಿವಾಣ, ಸಾರಥಿ ಮತ್ತು ಸವಾರ ಇವುಗಳ ಸಂಕೇತಗಳಿಗೆ ಸೊಗಸಾಗಿ ಹೊಂದಿಸಿಕೊಳ್ಳಲಾಗಿದೆ. ಅಂತಹ ರಥವನ್ನು ಹೆದ್ದಾರಿಯಲ್ಲಿ ನಿರ್ದಿಷ್ಟವಾದ ಗುರಿಗೆ ನಡೆಸಿಕೊಂಡು ಹೋಗಬೇಕಾಗಿದೆ. ಪ್ರಯಾಣ ಜಯಪ್ರದವಾಗುವುದಕ್ಕೆ ರಸ್ತೆ ಸರಾಗವಾಗಿರುವುದಕ್ಕಿಂತಲೂ ರಥದ ದಾರ್ಢ್ಯ, ಕುದುರೆಗಳ ಸಾಮರ್ಥ್ಯ, ಕಡಿವಾಣಗಳ ಬಿಗಿ, ಸಾರಥಿಯ ವಿವೇಚನೆಗಳು ಹೆಚ್ಚು ಮುಖ್ಯ. ಇವುಗಳಲ್ಲಿ ಯಾವುದೊಂದು ದುರ್ಬಲವಾದರೂ ಇಡೀ ಸಾಹಸವೇ ಭಗ್ನವಾಗಿ ಹೋಗುತ್ತದೆ. ಜೀವನವೆಂಬುದು ಸೃಜನಶೀಲವಾದ ಸಾಹಸ. ಅದು ಸಾರ್ಥಕವಾಗಬೇಕಾದರೆ ಅದರ ಸಾಧನೆ ಸಿದ್ಧಿಗಳಲ್ಲಿ ಚೈತನ್ಯಾತ್ಮಕವಾದ ಕಾವ್ಯರಚನೆ ಇರಬೇಕು. ಜಡತನದಿಂದ ಸಂತೃಪ್ತಿಗೊಳ್ಳಬಾರದು. 'ವಿಕಸನವೆಲ್ಲ ಪ್ರಾಣ, ಸಂಕೋಚನವೆಲ್ಲ ಮೃತ್ಯು' ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಜೀವ ಬ್ರಹ್ಮೈಕ್ಯದ ದೇವಾಲಯಕ್ಕೆ ಹೋಗಬೇಕಾಗಿರುವ ದೀರ್ಘ ಪ್ರಯಾಣದಲ್ಲಿ ಮಾನವನಿಗೆ ದೈಹಿಕ ಅಥವಾ ಮಾನಸಿಕವಾದ, ವೈಯಕ್ತಿಕ ಅಥವಾ ಸಾಮಾಜಿಕವಾದ ಸತ್ಯ, ಸೌಂದರ್ಯ ಸೌಜನ್ಯಗಳ ಮಹತ್ತು ಅನುಭವವಾಗುತ್ತದೆ. ತುದಿಯನ್ನು ಮುಟ್ಟಿದಾಗ ಪರಮಪುರುಷಾರ್ಥ ಅಥವಾ ಉಪನಿಷತ್ತುಗಳು ಹೇಳುವ 'ತದ್ವಿಷ್ಣೋಃ ಪರಮಂ ಪದಂ' ವಿಷ್ಣು ಅಥವಾ ಬ್ರಹ್ಮದ ಪರಮ ಪದವು ಕರಗತವಾಗುವುದೆಂಬ ಭರವಸೆ ಇದೆ. ಆದರೆ ಜೀವನದ ಸುದೀರ್ಘವಾದ ಮತ್ತು ದುರ್ಗಮವಾದ ಪ್ರಯಾಣವು ವಿಜಯವಾಗಬೇಕಾದರೆ ಪರಿಣಾಮಕಾರಿಯಾದ ಸಾಧನೆ ಅಗತ್ಯ. ಈ ಸಾಧನೆಯನ್ನು ಕುರಿತು ಈ ಉಪನಿಷತ್ತಿನಲ್ಲಿ ನಾವು ನೆನಪಿಟ್ಟುಕೊಳ್ಳಬಹುದಾದಂತಹ ಒಂದು ಶ್ಲೋಕವಿದೆ (III-೯). ದೇಹಸಾಮರ್ಥ್ಯ, ಇಂದ್ರಿಯಪಟುತ್ವಗಳೊಡನೆ ಮನಸ್ಸಿನ ಶಕ್ತಿ, ದೃಢ ನಿಶ್ಚಯಗಳನ್ನು, ಶುದ್ಧವಾದ ದೃಷ್ಟಿ ಮತ್ತು ಪ್ರಶಾಂತವಾದ ತೀರ್ಮಾನವನ್ನು ಒಟ್ಟುಗೂಡಿಸಿಕೊಳ್ಳಬೇಕೆಂದು ಅದು ತಿಳಿಸುತ್ತದೆ.

ವಿಜ್ಞಾನ ಸಾರಥಿರ್ಯಸ್ತು ಮನಃ ಪ್ರಗ್ರಹವಾನ್ ನರಃ ।
ಸೋಽಧ್ವನಃ ಪಾರಂ ಆಪ್ನೋತಿ ತದ್ವಿಷ್ಣೋಃ ಪರಮಂ ಪದಂ ॥

*ಯಾರಿಗೆ ಪ್ರಖರವಾದ ಬುದ್ಧಿಯು ಸಾರಥಿಯಾಗಿ, ದೃಢನಿಶ್ಚಯವು ಕಡಿವಾಣವಾಗಿದೆಯೋ ಅಂತಹವನು ಬಾಳಪಯಣದಲ್ಲಿ ಮಹೋನ್ನತವಾದ ಗುರಿಯನ್ನು ಮುಟ್ಟುತ್ತಾನೆ.*

ಮುಂಡಕೋಪನಿಷತ್ತು (II-೨-೩) ಇದೇ ಧಾಟಿಯಲ್ಲಿಯೇ, ಸರಿಯಾದ ಸಿದ್ಧತೆಗಳೊಡನೆ ಜೀವನದ ಹೋರಾಟಕ್ಕೆ ಇಳಿಯುವಂತೆ ಆಹ್ವಾನಿಸುತ್ತದೆ. ಉಪನಿಷತ್ ಭಾವನೆಗಳ ಕವಚವನ್ನು ತೊಟ್ಟು, ಆತ್ಮವೆಂಬ ಬಾಣವನ್ನು ಚಿಂತನೆ ಧ್ಯಾನಗಳಿಂದ ಹರಿತವಾಗಿ ಮಾಡಿಕೊಂಡು, ಸ್ವಲ್ಪವೂ ಗುರಿತಪ್ಪದಂತೆ ಪರಮ ಶ್ರೇಯಸ್ಸೆಂಬ ಲಕ್ಷ್ಯವನ್ನು ಭೇದಿಸು—ಎಂದು ಅದು ಬೋಧಿಸುತ್ತದೆ.

ಧನುರ್ ಗೃಹೀತ್ವಾ ಔಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸ ನಿಶಿತಂ ಸಂಧಯೀತ ;
ಆಯಮ್ಯ ತದ್ಭಾವಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥

ಇಷ್ಟೇ ಅಲ್ಲದೆ ಈ ಉಪನಿಷತ್ತು ಅಂಧಕಾರದಿಂದ ಬೆಳಕಿಗೆ ಹೋಗಬೇಕಾಗಿರುವ ಪ್ರಯಾಣದಲ್ಲಿ ನಮಗೆ ಮಂಗಳವಾಗಲೆಂದು ಅರ್ಥವತ್ತಾಗಿ ಆಶೀರ್ವದಿಸುತ್ತದೆ; ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ (II-೨-೬).

## ೭. ಉಪನಿಷತ್ತುಗಳ ಸಂದೇಶ : ಸಾರ್ವತ್ರಿಕ ಮತ್ತು ನಿರಂತರ

ಜೀವನ ಮತ್ತು ಅನುಭವಗಳ ಅರ್ಥಕ್ಕಾಗಿ ಉಪನಿಷತ್ತುಗಳು ನಡೆಸುತ್ತಿರುವ ಅನ್ವೇಷಣೆಯು ಕೇವಲ ಸತ್ಯದ ಮೇಲಿನ ಆಸಕ್ತಿಮಾತ್ರವಾದುದರಿಂದಲೂ, ವ್ಯಕ್ತಿಗತವಾದ ಯಾವ ಪಕ್ಷಪಾತ ದಿಂದಲೂ ಕಳಂಕಿತವಾಗಿಲ್ಲದಿರುವುದರಿಂದಲೂ ಅದರ ದರ್ಶನ ವಿಶ್ವವ್ಯಾಪಿಯಾಗಿದೆ ಮತ್ತು ಅದರ ಸಂದೇಶ ಚಿರಸ್ಥಾಯಿಯಾಗಿದೆ.

ವೇದಾಂತವು ಇತರ ದೇಶಗಳಲ್ಲಿರುವ ದರ್ಶನಗಳಂತೆ ಅಥವಾ ಇಲ್ಲಿಯೇ ಇರುವ ಇತರ ದರ್ಶನ ಪದ್ಧತಿಯಂತೆ ಇರದೆ, ವೀರಾವೇಶದಿಂದ ಕೂಡಿದ ಸಚೇತನ ದರ್ಶನವಾಗಿದೆ ; ಅಸ್ಪಷ್ಟವಾದ ಪ್ರಪ್ರಾಚೀನಕಾಲದಲ್ಲಿ ಅದು ಪ್ರತಿಪಾದಿತವಾದಾಗಿನಿಂದ ಹಿಡಿದು ನಮ್ಮ ಕಾಲದವರೆಗೆ ಭಾರತೀಯ ಜೀವನದ ಕಾರ್ಯಪರಂಪರೆಯ ಹಿನ್ನೆಲೆಯಲ್ಲಿ ಆಧ್ಯಾತ್ಮಿಕ ಪ್ರೇರಣಾ ಶಕ್ತಿಯಾಗಿ ಇದ್ದುಕೊಂಡು ಬಂದಿದೆ. ಆ ಪ್ರೇರಣಾ ಶಕ್ತಿ ದಟ್ಟವಾಗಿ ಕಾಣಿಸಿಕೊಂಡಾಗಲೆಲ್ಲಾ ಭಾರತ ಇತಿಹಾಸದಲ್ಲಿ ಸ್ಮರಣೀಯವಾದ ಮತ್ತು ಸೃಜನಾತ್ಮಕವಾದ ಮಹದ್ಘಟನೆಗಳು ನಡೆದಿವೆ. ಪ್ರಾಚೀನಯುಗದಲ್ಲಿ ಗೀತಾಚಾರ್ಯ, ಬುದ್ಧ, ಶಂಕರರ ಕಾಲವೂ, ಆಧುನಿಕ ಯುಗದಲ್ಲಿ ಶ್ರೀರಾಮಕೃಷ್ಣ, ವಿವೇಕಾನಂದರ ಕಾಲವೂ, ನಮ್ಮ ಪ್ರಾಚೀನ ಮತ್ತು ಆಧುನಿಕ ಇತಿಹಾಸದ ಹೆಗ್ಗುರುತುಗಳು. ಉಪನಿಷತ್ತುಗಳು ದಿನದಿನದ ಜೀವನದಲ್ಲಿ ನಾವು ಅನುಸರಿಸಬೇಕಾದ ನಿಯಮ ನಿಬಂಧನೆಗಳನ್ನು ವಿಧಿಸುವುದರಲ್ಲಿ ಆಸಕ್ತವಾಗಿಲ್ಲ. ಹಾಗೇನಾದರೂ ಮಾಡಿದ್ದರೆ ಇತರ ದರ್ಶನ ಪದ್ಧತಿಗಳಂತೆ ಅವೂ ಕೆಲ ಕಾಲ ಬಾಳಿ ಕಣ್ಮರೆಯಾಗುತ್ತಿದ್ದವು ; ಏಕೆಂದರೆ ಒಂದು ಕಾಲದಲ್ಲಿ ಜೀವದಾಯಕವಾಗಿರುವ ನಿಯಮ ನಿಬಂಧನೆಗಳು ಮತ್ತೊಂದು ಕಾಲಕ್ಕೆ ಮಾರಕಗಳಾಗಬಹುದು.

ಉಪನಿಷತ್ತುಗಳು ಮಾನವ ಮತ್ತು ನಿಸರ್ಗಗಳಲ್ಲಿರುವ ಕಾಲಾತೀತ ಸತ್ಯವನ್ನು ಕಂಡುಹಿಡಿದು, ಆಧ್ಯಾತ್ಮಿಕ ಆಹಾರವನ್ನು ಮಾನವನಿಗೆ ನೀಡಿ, ಆ ಮೂಲಕ ನಿತ್ಯವಸ್ತುವಿಗಾಗಿ ನಾಮರಹಿತವಾದ ಮತ್ತು ಸರ್ವಕಾಲಿಕವಾದ ಅವನ ತೃಷೆಯನ್ನು ಹಿಂಗಿಸುವ ಕಾರ್ಯದಲ್ಲಿ ಪ್ರವೃತ್ತವಾಗಿವೆ. ಮಾನವನ ನಿತ್ಯಜೀವನದ ನಡತೆ ನಡವಳಿಕೆಗಳಿಗೆ ಅಗತ್ಯವಾದ ನೀತಿ ನಿಯಮಗಳ ನಿಬಂಧನೆಯ ಕಾರ್ಯವನ್ನು ಹಿಂದೆ ಸ್ಮೃತಿಗಳಿಗೂ ಧರ್ಮಶಾಸ್ತ್ರಗಳಿಗೂ ವಹಿಸಲಾಗಿತ್ತು. ಈಗ ಅದನ್ನು ರಾಜ್ಯಶಾಸನಕ್ಕೂ ಸಾಮಾಜಿಕ ಮನಸ್ಸಾಕ್ಷಿಗೂ ಒಪ್ಪಿಸಲಾಗಿದೆ. ಉಪನಿಷತ್ತಿನ ವಸ್ತು ಸ್ವಾತಂತ್ರ್ಯ, ಅದರ ಸಂದೇಶ ನಿರ್ಭಯ. ಅದು ಸ್ತ್ರೀಪುರುಷರನ್ನು ಜೀವನದ ಎಲ್ಲ ಮುಖಗಳ ಸಾಹಸೋದ್ಯಮಕ್ಕೆ, ಪ್ರತಿಯೊಬ್ಬರೂ ಅವರವರ ಆಧ್ಯಾತ್ಮಿಕ ಅಥವಾ ದೇವತಾಸ್ವರೂಪವನ್ನು ಪಡೆಯುವುದಕ್ಕೆ, ಸಾಂತತೆಯ ಎಲ್ಲೆಕಟ್ಟು ಗಳನ್ನು ದಾಟಿಹೋಗುವುದಕ್ಕೆ ಆಹ್ವಾನ ನೀಡುತ್ತದೆ. ಪ್ರತಿಯೊಂದು ಸಾಮಾಜಿಕ, ಧಾರ್ಮಿಕ ಅಥವಾ ರಾಜಕೀಯ ಮಹತ್ ಘಟನೆಯೂ ಅಷ್ಟೇಕೆ, ಜೀವನದಲ್ಲಿ ಇಂದ್ರಿಯಗೋಚರವಾದ ಪ್ರತಿಯೊಂದು ವಿಷಯವೂ—ಜೀವಿಯಲ್ಲಿ ಅಂತರ್ಗತವಾಗಿರುವ ಮೋಕ್ಷಾಪೇಕ್ಷೆಯಿಂದ ನಡೆಯುವ ಕಾರ್ಯವೆಂದು ಅದು ವಿವರಿಸುತ್ತದೆ. ಜೀವವೆಂಬುದು ಯಾವುದೇ ಒಂದು ಅಣುವಿನಲ್ಲಿ, ಒಂದು ದೇಹದಲ್ಲಿ, ಒಂದು ಸಮಾಜ ರಚನೆಯಲ್ಲಿ ಒಂದು ರಾಜಕೀಯ ವ್ಯವಸ್ಥೆಯಲ್ಲಿ, ಒಂದು ಸಂಬಂಧಗಳ ಹೆಣಿಗೆ ಯಲ್ಲಿ ಅಥವಾ ಸಾಪೇಕ್ಷತೆಯ ಬಲೆಯಲ್ಲಿ ಸಿಕ್ಕಿಬಿದ್ದಿರುವ ಒಂದು ಅನಂತತೆ. ವೇದಾಂತದ ಪ್ರಕಾರ ಪ್ರತಿಯೊಂದು ಜೀವಿಗೂ ಮುಕ್ತಿಯೇ ನೆಲೆ, ಮುಕ್ತಿಯೇ ಗುರಿ ; ಆದ್ದರಿಂದ ಅದು ಆಗಾಗ ಹಾಡುವ ಪಲ್ಲವಿಯು ಕಠೋಪನಿಷತ್ತಿನ ಮಾತಿನಲ್ಲಿ ಹೇಳುವುದಾದರೆ (III-೧೪) 'ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ ನಿಬೋಧತ—ಏಳು, ಎಚ್ಚರಗೊಳ್ಳು, ಮಹಾನುಭಾವರನ್ನು ಸೇರಿ ಜ್ಞಾನವನ್ನು ಹೊಂದು—'

## ೮. ಮುಕ್ತಾಯ : ಉಪನಿಷತ್ತುಗಳಿಗೆ ಭಾರತದ ಋಣ

ಹೀಗೆ ಉಪನಿಷತ್ತುಗಳು ಮೂಲಭೂತವಾದುದೂ ಸಾರ್ವಕಾಲಿಕವಾದುದೂ ಆಗಿರುವುದಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟು, ಪ್ರಾಪಂಚಿಕವೂ ಪ್ರಾಂತೀಯವೂ ಆದ ವಿಷಯಗಳನ್ನು ಜಾಣತನ ದಿಂದ ಸ್ಮೃತಿಗಳಿಗೆ ವಹಿಸಿಕೊಟ್ಟವು. ಇದರಿಂದ ಅವು ಮಾನವನ ಜೀವನ ಮತ್ತು ಅದೃಷ್ಟಗಳ ಮೇಲೆ ಅಮರವಾದ ಒಂದು ಆಧಿಪತ್ಯವನ್ನು ಗಳಿಸಿಕೊಂಡುದು ಮಾತ್ರವೇ ಅಲ್ಲ, ಭಾರತ ಸಂಸ್ಕೃತಿಯ ಪ್ರಯೋಗಕ್ಕೆ ಒಂದು ಸ್ಥಿತಿಸ್ಥಾಪಕ ಶಕ್ತಿಯನ್ನು—ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವ ಶಕ್ತಿಯನ್ನು ನೀಡಿ ಅದರ ಅಮರತೆಯನ್ನು ಸಂರಕ್ಷಿಸಿವೆ. ನಮ್ಮ ಸಂಸ್ಕೃತಿ ಮತ್ತು ಧರ್ಮಗಳ ಇತಿಹಾಸದಲ್ಲಿ ಅವುಗಳ ಮುಖ್ಯ ಲಕ್ಷಣವಾಗಿ, ಹೆಗ್ಗುರುತಾಗಿರುವ ಪರಮತಸಹಿಷ್ಣುತೆಗಾಗಿ ನಾವು ಉಪನಿಷತ್ತು ಗಳಿಗೆ ಋಣಿಯಾಗಿರಬೇಕು. ನಮ್ಮ ಜೀವನವೃಕ್ಷ ಬಾಡಿ, ಇನ್ನೇನು ಒಣಗಿ ಹೋಗುತ್ತದೆಯೋ ಎಂದು ಕಾಣಿಸಿದಾಗ ಕಾಲಕಾಲಕ್ಕೆ ವಸಂತೋದಯವಾಗುತ್ತಿರುವುದಕ್ಕೂ ನಾವು ಅವುಗಳಿಗೇ ಋಣಿಯಾಗಿರಬೇಕು. ಸರ್ವಶಕ್ತವಾದ ಒಂದು ಧರ್ಮಸಂಸ್ಥೆಯ ಅಥವಾ ಖಂಡಿತವಾದ ಮತ ಸಿದ್ಧಾಂತಗಳ ಹಿಡಿತದಿಂದ ತಪ್ಪಿ ಜನಜೀವನ ಮತ್ತು ಚಿಂತನೆಗಳ ಮೇಲೆ ಆಕ್ರಮಣ ನಡೆಸಿರುವುದ ಕ್ಕಾಗಿಯೂ, ಮುಂದಿನ ಯುಗಗಳಲ್ಲಿಯೂ ಜೀವಿಗಳು ಸ್ವತಂತ್ರವಾಗಿ ಕಾರ್ಯತತ್ಪರರಾಗುವಂತೆ ಅವಕಾಶವನ್ನು ಒದಗಿಸಿದುದಕ್ಕಾಗಿಯೂ ನಾವು ಅವುಗಳಿಗೆ ಕೃತಜ್ಞರಾಗಿರಬೇಕು. ಉಪನಿಷತ್ತುಗಳಿಂದ ಮುಂದಿನ ಕಾಲಮಾನಗಳಲ್ಲಿ ಜನರು ಸುಖ ಸಂತೋಷಗಳಿಂದ ನಲಿಯುತ್ತಾ ಬಾಳಿಕೊಂಡು ಬಂದಿರು ವುದು ಭಾರತದ ದೀರ್ಘ ಇತಿಹಾಸದಲ್ಲಿ ಗಮನಾರ್ಹವಾದ ವಿಷಯ.

ಅನು : ತ. ಸು. ಶಾಮರಾಯ

೫

# ಗೀತೆಯ ಮೋಹಕಶಕ್ತಿ*

## ೧. ಪ್ರಸ್ತಾವನೆ

ಎಡ್ವಿನ್ ಆರ್‌ನಾಲ್ಡನು 'ದಿವ್ಯಗಾನ' ಎಂದು ಕರೆದ ಭಗವದ್ಗೀತೆಯನ್ನು ಮೊಟ್ಟಮೊದಲು ಕುರುಕ್ಷೇತ್ರದ ರಣರಂಗದಲ್ಲಿ (ಅದು ನಾನೀಗ ನಿಮಗೆ ಭಾಷಣ ಮಾಡುತ್ತಿರುವ ದೆಹಲಿ ನಗರದಿಂದ ಕೇವಲ ಎಂಭತ್ತು ಮೈಲಿ ದೂರದಲ್ಲಿದೆ) ಶ್ರೀಕೃಷ್ಣಭಗವಾನನು ಹಾಡಿದಂದಿನಿಂದ ಅದು ಹೆಣ್ಣು ಗಂಡುಗಳ ಹೃದಯವನ್ನು ಸೂರೆಗೊಂಡಿದೆ. ಜಗತ್ತಿನಲ್ಲಿ ಮಾನವನ ಮನಸ್ಸನ್ನು ಸೂರೆಗೊಂಡ ಹಲವು ಪ್ರಸಿದ್ಧ ಗ್ರಂಥಗಳಿವೆ ; ಅವುಗಳಲ್ಲಿ ಕೆಲವು ಆಳವಾಗಿಯೂ ಶಾಶ್ವತವಾಗಿಯೂ ಮೋಹವನ್ನು ಬೀರಿವೆ. ಅವು 'ಅಮರಸಾಹಿತ್ಯ'ದ ಜಾತಿಗೆ ಸೇರಿದುವು.

## ೨. ಪ್ರಪಂಚದ ವಾಙ್ಮಯದಲ್ಲಿ ಗೀತೆಯ ಅಪೂರ್ವ ಸ್ಥಾನ

ಅಂತಹ ಸಾಹಿತ್ಯ ರತ್ನಗಳ ಸಾಲಿನಲ್ಲಿ ಗೀತೆಗೆ ಅದ್ವಿತೀಯವಾದ ಒಂದು ಸ್ಥಾನವಿದೆ. ಏಕೆಂದರೆ ಅದರ ಬೋಧನೆಯು ಉಳಿದೆಲ್ಲಿಯೂ ಕಾಣದಿರುವಷ್ಟು ಸರ್ವವ್ಯಾಪಿಯಾದುದು. ಒಂದು ಗ್ರಂಥವು ಪಂಡಿತನಿಗೂ ವಿಚಾರಪರನಿಗೂ ಆಕರ್ಷಕವಾಗಿದ್ದರೆ ಸಾಮಾನ್ಯನಾದವನಿಗೆ ಹಿಡಿಸದೆ ಇರಬಹುದು : ಇಬ್ಬರಿಗೂ ಹಿಡಿಸಿದರೆ ವ್ಯವಹಾರಿಯ ಗಮನವನ್ನು ಅದು ಸೆಳೆಯದೆ ಹೋಗಬಹುದು. ಒಬ್ಬನ ಚಿತ್ತವೃತ್ತಿ-ಭಾವಾವೇಶಗಳನ್ನು ಕೆರಳಿಸುವಂತಹುದು ಮತ್ತೊಬ್ಬನ ಬುದ್ಧಿತರ್ಕಗಳಿಗೆ ಸಪ್ಪೆಯಾಗಬಹುದು ; ಹಾಗೆಯೇ ವಿಪರ್ಯಯವಾಗಿಯೂ ಆಗಬಹುದು. ಒಂದು ಗ್ರಂಥದ ಅಥವಾ ಯಾವುದೊಂದು ವಸ್ತುವಿನ ಸರ್ವಾಕರ್ಷಣತ್ವವೆಂಬುದು ಜನಾಂಗ-ಮತಧರ್ಮಗಳ ಸಂಬಂಧವಿಲ್ಲದೆ, ಬೇರೆ ಬೇರೆ ಬಗೆಯ ಮತ್ತು ಮಟ್ಟಗಳ—ಮನೋಭಾವ ಮನೋಧರ್ಮಗಳಿಗೆ ಪ್ರಿಯವೂ ಪ್ರಯೋಜನವೂ ಆಗುವುದರಲ್ಲಿದೆ. ಗೀತೆಯು ಹೇಳಿಮಾಡಿಸಿದ ಹಾಗೆ ಈ ಗುಂಪಿಗೆ ಸೇರುತ್ತದೆ. ಅದರ ಮೋಹಕಶಕ್ತಿಗೆ ಮನಸೋತ ಜನತೆಯನ್ನು ವಿಭಜಿಸಿ ನೋಡಿದರೆ ಬಗೆಬಗೆಯಾದ ಮನೋಧರ್ಮ, ಯೋಗ್ಯತೆ ಮತ್ತು ಚಿತ್ತವೃತ್ತಿ ಇರುವ ಜನರು ಕಂಡುಬರುತ್ತಾರೆ. ಅದರ ಅನುಯಾಯಿಗಳಲ್ಲಿ ಅದ್ಭುತ ಪ್ರತಿಭಾಶಾಲಿಗಳಿದ್ದಾರೆ, ಭಕ್ತಿ ಶ್ರದ್ಧೆಗಳಿಂದ ಕೂಡಿದ ಸರಳ ಸ್ತ್ರೀಪುರುಷ ರಿದ್ದಾರೆ, ವ್ಯವಹಾರ ಜಗತ್ತಿನ ಕಾರ್ಯನಿರತರಿದ್ದಾರೆ, ಅನೇಕ ಬೇರೆ ಬೇರೆ ಜಾತಿಮತಗಳಿಂದ ಬಂದ ಗಂಡುಹೆಣ್ಣುಗಳೂ ಇದ್ದಾರೆ. ಪ್ರಾಚೀನ ಭಾರತದ ವ್ಯಾಸ, ಶಂಕರ ಮತ್ತು ಇತರ ಆಚಾರ್ಯರೂ, ನಮ್ಮ ಕಾಲದ ಸ್ವಾಮಿ ವಿವೇಕಾನಂದ, ಲೋಕಮಾನ್ಯ ತಿಲಕ್, ಶ್ರೀ ಅರವಿಂದ, ಮಹಾತ್ಮಾಗಾಂಧಿ ಮೊದಲಾದವರೂ ಈ ಮಹಾಗ್ರಂಥದ ಭೌತಿಕಶಕ್ತಿ, ಭಾವಾಕರ್ಷಣೆ ಮತ್ತು ಆಧ್ಯಾತ್ಮಿಕ ಅಗಾಧತೆಯನ್ನು ಮೆಚ್ಚಿ

---

*೧೯೫೦, ಫೆಬ್ರುವರಿ ೧೧ರಂದು ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ.

ಹೊಗಳಿದ್ದಾರೆ. ಪ್ರಾಚೀನಕಾಲದಲ್ಲಿ ಹೇಗೋ ಹಾಗೆ ಈಗಲೂ ಕೂಡ ಇದು ಎಲ್ಲ ಜಾತಿಮತಗಳಿಗೂ ಸೇರಿದ ಲಕ್ಷಾಂತರ ಹಿಂದೂಗಳ ಹೃದಯವನ್ನು ಆಕರ್ಷಿಸುತ್ತಲೇ ಇದೆ. ಆಧುನಿಕ ಯುಗದಲ್ಲಿಯಂತೂ ಅದು ಸ್ತ್ರೀಪುರುಷರ ಹೃದಯದಲ್ಲಿ ಸ್ಥಾಪಿಸಿಕೊಂಡಿರುವ ಸಾಮ್ರಾಜ್ಯದ ಎಲ್ಲೆಗಳು ಭಾರತದ ಭೌಗೋಳಿಕ ಸರಹದ್ದುಗಳನ್ನು ದಾಟಿಹೋಗಿವೆ. ಆಧುನಿಕ ಪಾಶ್ಚಾತ್ಯರಲ್ಲಿ ಎಮರ್ಸನ್, ಕಾರ್ಲೈಲ್, ವಾಲ್ಟ್ ವ್ಹಿಟ್‌ಮನ್, ಥೋರೋ ಮೊದಲಾದ ಸತ್ತ್ವ ಸಂಪನ್ನರೂ, ದಿನದಿನಕ್ಕೂ ಅಧಿಕ ಸಂಖ್ಯೆಯಲ್ಲಿ ಇವರೊಡನೆ ಸೇರಿಕೊಳ್ಳುತ್ತಿರುವ ಸರ್ವಸಾಮಾನ್ಯ ಸ್ತ್ರೀಪುರುಷರೂ, ಪ್ರಾಚೀನ ಭಾರತದ ಈ ಗೀತೆಯಿಂದ ಮಾತ್ರ ಮುಗ್ಧರಾಗಿ ಹೋಗಿದ್ದಾರೆ.

೩. ಭವಿಷ್ಯವಾಣಿ

ಬ್ರಿಟಿಷರ ಮೊಟ್ಟಮೊದಲ ರಾಜಪ್ರತಿನಿಧಿಯಾದ ವಾರನ್ ಹೇಸ್ಟಿಂಗ್ಸನು ಹದಿನೆಂಟನೇ ಶತಮಾನದ ಎಂಟನೆ ದಶಕದಲ್ಲಿ ತನ್ನ ಗೆಳೆಯನಾದ ಸರ್ ಛಾರ್ಲೆಸ್ ವಿಲ್ಕಿನ್ಸನು ಮಾಡಿದ ಗೀತೆಯ ಮೊಟ್ಟಮೊದಲ ಭಾಷಾಂತರಕ್ಕೆ ಮುನ್ನುಡಿಯನ್ನು ಬರೆಯುತ್ತಾ ಈ ಕೆಳಗಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗ ಅದು ಕಾಲಜ್ಞಾನಿಯ ಭವಿಷ್ಯವಾಣಿಯಾಗಿತ್ತು :

*ಭಾರತದಲ್ಲಿನ ಬ್ರಿಟಿಷ್ ವಸಾಹತು ತನ್ನ ಅಸ್ತಿತ್ವವನ್ನು ಕಳೆದುಕೊಂಡ ಬಹುಕಾಲದ ಮೇಲೆಯೂ, ಆ ವಸಾಹತಿನಿಂದ ಬರುತ್ತಿದ್ದ ಹಣ ಅಧಿಕಾರಗಳ ಮೂಲವು ಮಾನವಜ್ಞಪ್ತಿಯಿಂದ ಹಾರಿಹೋದಮೇಲೂ ಇಲ್ಲಿನ ತತ್ತ್ವಶಾಸ್ತ್ರಜ್ಞರು ಅಳಿಯದೆ ಉಳಿದಿರುತ್ತಾರೆ.*

ಈಗ ಸರಿಯಾಗಿ ಎರಡು ವಾರಗಳ ಕೆಳಗೆ (೧೯೫೦ನೆ ಜನವರಿ ೨೬ರಂದು ಭಾರತದ ಸಂವಿಧಾನ ರಚನಾಸಭೆಯು ಭಾರತವನ್ನು ಸ್ವತಂತ್ರ ಪ್ರಜಾಪ್ರಭುತ್ವ ಗಣರಾಜ್ಯವೆಂದು ಘೋಷಿಸಿತು.) ಭಾರತ ದಲ್ಲಿ ಆತನು ಸ್ಥಾಪಿಸಿದ್ದ ಆ ನಶ್ವರ ಸಾಮ್ರಾಜ್ಯ ಅವನ ಭವಿಷ್ಯವಾಣಿಯಂತೆ ಕೊನೆಗೊಂಡಿತು. ಭಾರತದ ಮಹರ್ಷಿಗಳ ಸಾಮ್ರಾಜ್ಯವಾದರೋ ಆ ಭವಿಷ್ಯಗರ್ಭಿತ ನುಡಿಗಳನ್ನು ಬರೆದಾಗಿನಿಂದಲೂ ವಿಸ್ತರಿಸುತ್ತಾ ನಡೆದಿದೆ. ಆಧುನಿಕ ಜಗತ್ತಿನಲ್ಲಿ ಈ ಭಾವನೆಗಳು ವಿಸ್ತಾರವಾಗಿ ಪ್ರಸಾರವಾಗುವುದಕ್ಕೆ ಆಧುನಿಕ ಪಾಶ್ಚಾತ್ಯರ ಸತ್ಯಪ್ರೇಮ, ಬುದ್ಧಿಶಕ್ತಿಗಳು ಅಗಾಧವಾದ ನೆರವನ್ನು ನೀಡಿವೆ. ಪುನರ್ಜನ್ಮ ತಾಳಿರುವ ಭಾರತ ಈ ನಿಟ್ಟಿನಲ್ಲಿ ಕಾರ್ಯಚಟುವಟಿಕೆಯನ್ನು ಆರಂಭಿಸಿದುದು ೧೮೯೩ರಲ್ಲಿ ಚಿಕಾಗೋದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಅಲ್ಲಿ ಕಾಣಿಸಿ ಕೊಂಡ ಐತಿಹಾಸಿಕ ಘಟನೆಯಿಂದ. ಅಂದಿನಿಂದ ಆ ಸಾಮ್ರಾಜ್ಯವು ವಾರನ್ ಹೇಸ್ಟಿಂಗ್ಸನ ಸ್ವಂತ ನಾಡಾದ ಇಂಗ್ಲೆಂಡೂ ಸೇರಿದಂತೆ ಆಧುನಿಕ ಜಗತ್ತಿನ ಅಸಂಖ್ಯಾತ ಜನರ ಹೃದಯಬುದ್ಧಿಗಳಲ್ಲಿ ಆಧ್ಯಾತ್ಮಿಕವಾಗಿ ಆಕ್ರಮಣ ಮಾಡುತ್ತಾ ಬಂದಿದೆ. ಈ ಸಾಮ್ರಾಜ್ಯ ವಿಸ್ತರಣೆಗೆ ದಾಳಿ ಇಡುತ್ತಾ ನುಗ್ಗಿ ಹೋಗುವ ಸೈನ್ಯವೂ ಬೇಡ, ಅದರ ಹಿಂದೆ ಮಾರ್ಗದರ್ಶನ ನೀಡುವ ರಾಜ ತಂತ್ರಜ್ಞರೂ ಬೇಡ ; ಏಕೆಂದರೆ ನುಗ್ಗಿ ಮುಂದೆ ಹೋಗುತ್ತಿರುವುದು 'ಧರ್ಮಚಕ್ರ' ; ಅದು ಅಶೋಕನ ಶಾಸನಗಳು ಹೇಳುವಂತೆ ಜನರನ್ನು ಪರಸ್ಪರ ಅಗಲಿಸುವ ಯುದ್ಧ ಭೇರಿಗಳ ಸದ್ದಡಗಿಸಿ ಮಾನವರನ್ನು ಒಗ್ಗೂಡಿಸುವ ಸಂಗೀತವನ್ನು ಹಾಡುತ್ತದೆ. ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳುವುದಾದರೆ (ಕೃತಿಶ್ರೇಣಿ III-ಪು. ೨೭೪) :

*ಕಣ್ಣಿಗೆ ಕಾಣದೆ, ಕಿವಿಗೆ ಕೇಳಿಸದೆ, ಆದರೂ ಅತ್ಯಂತ ಸುಂದರವಾದ ಗುಲಾಬಿ ಹೂಗಳು ಅರಳುವಂತೆ ಸುರಿಯುವ ಮೃದುವಾದ ಇಬ್ಬನಿಯಂತೆ ಭಾರತವು ಜಗತ್ತಿನ ಚಿಂತನೆಗೆ ತನ್ನ ಕೊಡುಗೆಯನ್ನು ಅರ್ಪಿಸುತ್ತಿದೆ.*

ಇದು ನಿರಂತರವೂ ಶಾಶ್ವತವೂ ಆದ ಭಾರತದ ಯಥಾರ್ಥ ಚಿತ್ರಣ. ಅದರ ಸುದೀರ್ಘ ಇತಿಹಾಸದ ಬೇರೆ ಬೇರೆ ಯುಗಗಳಲ್ಲಿ ಅದು ತನ್ನ ಸಮಕಾಲೀನ ಜಗತ್ತನ್ನು ಮಂತ್ರಮುಗ್ಧವನ್ನಾಗಿ ಮಾಡಿದೆ. ವಾರನ್ ಹೇಸ್ಟಿಂಗ್ಸ್‌ನ ಆ ಸಾಮ್ರಾಜ್ಯ ಶಾಂತಯುತವಾಗಿ ಕೊನೆ ಗೊಂಡ ಮೇಲೆ ಈ ಭಾರತಕ್ಕೆ ತನ್ನ ಸ್ವಸ್ವರೂಪವನ್ನು ಪಡೆಯುವ ಅವಕಾಶ ಸಿಕ್ಕಿದೆ ; ಅಷ್ಟೇ ಅಲ್ಲ, ಆಧುನಿಕ ವಿಜ್ಞಾನದ ಕೃಪೆಯಿಂದ ಅದು ಹಿಂದಿದ್ದಂತೆ ಪರಿಮಿತವಾಗಿರದೆ ದೇಶೋ ವಿಶಾಲ ವಾಗುವ ಸದವಕಾಶವೂ ಇದೆ.

## ೪. ಪ್ರಪಂಚದಲ್ಲಿ ಸ್ವತಂತ್ರ ಭಾರತದ ಸ್ಥಾನ

ವೇದಗಳ ಭಾರತ, ಶ್ರೀಕೃಷ್ಣನ, ಬುದ್ಧನ, ಶಂಕರನ, ಅಶೋಕನ, ಅಕ್ಬರನ ಭಾರತ ಇಂದು ರಾಜಕೀಯವಾಗಿ ಸ್ವತಂತ್ರವಾಗಿದೆ. ಶತಮಾನಗಳ ಕಾಲ ರಾಜಕೀಯ ತಾಟಸ್ಥ್ಯದಿಂದ ಇದ್ದ ಭಾರತಮಾತೆ ಇಂದು ತನಗೊಂದು ಆತ್ಮವಿದೆ, ವಾಣಿಯಿದೆ ಎಂಬುದನ್ನು ಕಂಡುಕೊಳ್ಳುತ್ತಿದ್ದಾಳೆ. ಆಕೆಯ ಸ್ವಂತ ಮಕ್ಕಳಂತೆಯೇ ಸುತ್ತಮುತ್ತಿನ ಜಗತ್ತಿನವರೂ ಆಕೆಯ ಪಾದಯಾತ್ರೆ ಮುಂದು ವರಿಯುವುದರಲ್ಲಿ, ಆಕೆಯ ವಾಣಿಯ ಉಚ್ಚಾರಣೆಯಲ್ಲಿ ಅಪಾರವಾದ ಆಸಕ್ತಿಯುಳ್ಳದಾಗಿದ್ದಾರೆ. ಈ ಘಳಿಗೆಯಲ್ಲೇನೊ ನಮ್ಮ ಆಶೋತ್ತರಗಳು ಭಯಮಿಶ್ರಿತವಾಗಿರುವುದು ನಿಜ. ನೀಟ್ಸೆ (Nietzsche) ಎಂಬುವನು ಶ್ಲಾಘನೀಯವಾಗಿ ಹೇಳಿರುವಂತೆ ತನಗೆ ನೂತನವಾಗಿ ದೊರೆತಿರುವ ಸ್ವಾತಂತ್ರ್ಯ ಮತ್ತು ಶಕ್ತಿಗಳನ್ನು ಆಕೆಯ ಹಿಂಸಾಕಾರ್ಯಗಳ ಅಥವಾ ಹಿಂಸಾಚರಣೆ ಅಡ್ಡ ದಾರಿಯಲ್ಲಿ ಹರಿಸಿ, ಈಗಾಗಲೇ ಬುದ್ಧಿಭ್ರಮಣೆಗೊಂಡಿರುವ ಜಗತ್ತನ್ನು ತನ್ನ ಅಧಿಕಾರ ದರ್ಪದ ಕಾಲು ತುಳಿತದಿಂದ ಮತ್ತಷ್ಟು ವ್ಯಗ್ರಗೊಳಿಸುತ್ತಾಳೆಯೋ ? ನೂತನವಾಗಿ ಅಧಿಕಾರಪಟ್ಟಕ್ಕೇರಿರುವ ಆಕೆಯ ಧ್ವನಿ ಸುತ್ತಲಿನ ಕರ್ಕಶ ಧ್ವನಿಯ ಸೋಂಕು ತಗಲಿ, ಮಾನವನಿಗೂ ಅವನ ನಾಗರಿಕತೆಗೂ ಭರವಸೆ ಸಂತೋಷಗಳನ್ನು ನೀಡುವ ಆಕೆಯ ಘಂಟಾನಿನಾದ ನಿಂತುಹೋಯಿತೇನು ? ಆಕೆಯು ಮಾನವ ಮತ್ತು ನಿಸರ್ಗಗಳಲ್ಲಿರುವ ಅಗಾಧವಾದ ಸತ್ಯಕ್ಕೆ ಸಾಕ್ಷೀಭೂತ ಚೇತನಗಳಾಗಿರುವುದನ್ನು ಮುಂದುವರಿಸಿ ಆ ಮೂಲಕ ಕಗ್ಗತ್ತಲಿನಲ್ಲಿ ಮುಳುಗಿ ಬೆಳಕನ್ನು ಅರಸುತ್ತಿರುವ ಜಗತ್ತಿಗೆ ಆಕೆ ಬೆಳಗುಗಂಬವಾಗುವುದಿಲ್ಲವೇನು ? ಜಗತ್ತಿನ ಇತಿಹಾಸದ ಈ ವಿಕಾಸನ ಯುಗದಲ್ಲಿ ಆಕೆಯು ಶಾಂತಿ, ಸೌಹಾರ್ದ, ತ್ಯಾಗ, ಸೇವೆ ಮೊದಲಾದ ತನ್ನ ಐತಿಹಾಸಿಕ ಧರ್ಮ ಪ್ರಸಾರಣೆಯ ಸ್ವಭಾವಕ್ಕೆ ಯಥಾನುರೂಪವಾಗಿ ನಡೆದುಕೊಳ್ಳುವುದಿಲ್ಲವೇನು ? ಸಂಕ್ಷೇಪವಾಗಿ ಹೇಳುವುದಾದರೆ ಸ್ವತಂತ್ರ ಭಾರತಮಾತೆಯು ತನ್ನ ನೈಜ ಸ್ವರೂಪ, ಸ್ವಭಾವಗಳನ್ನು ಅರಿತುಕೊಂಡು, ಆಧುನಿಕ ಜಗತ್ತಿನಲ್ಲಿ ಲಕ್ಷಾಂತರ ಜನರ ಕಿವಿಗಳನ್ನೂ ಹೃದಯಗಳನ್ನೂ ಬೆಂಬತ್ತಿರುವ ಮಾನವ ಸಂಘಟನೆ ಐಕ್ಯಮತ್ಯಗಳ ರಾಗವನ್ನು ಧೈರ್ಯವಾಗಿ ಸಂಗೀತಕ್ಕೆ ಅಳವಡಿಸಲಾರಳೇನು ?

ಈ ಪ್ರಶ್ನೆಗಳಿಗೆ ಉತ್ತರ ಇನ್ನು ಕೆಲವು ದಶಕಗಳಲ್ಲಿ ಹೊರಬರುತ್ತದೆ. ಭಾರತದ ಗತಕಾಲದಲ್ಲಿನ ನಮ್ಮ ಶ್ರದ್ಧೆ ಅದರ ಭವಿಷ್ಯ ಕಾರ್ಯಗಳ ನಿರೀಕ್ಷಣೆಗೆ ಮಾರ್ಗದರ್ಶಕವಾಗುವಂತಿದ್ದರೆ ಆಗ ಜಗತ್ತು ಅದರಿಂದ ನಿರೀಕ್ಷಿಸುತ್ತಿರುವುದನ್ನೆಲ್ಲಾ ಅದು ಖಂಡಿತವಾಗಿಯೂ ನೆರವೇರಿಸುತ್ತದೆಯೆಂದು ನಾವು ಸ್ಪಷ್ಟವಾಗಿ ಮತ್ತು ಕಂಠೋಕ್ತವಾಗಿ ಹೇಳಬಹುದು. ಈ ವಿಷಯದಲ್ಲಿ ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮಗಾಂಧಿಯವರಲ್ಲಿ ಕಾಣಬರುವ ಸ್ಫೂರ್ತಿಯುತವಾದ ರಾಷ್ಟ್ರಾನುಭವದಿಂದ ಪ್ರಸ್ತುತವೂ ಪ್ರಾಚೀನಕ್ಕೆ ಬೆಂಬಲ ನೀಡುತ್ತವೆಂದು ಅರ್ಥವಾಗುತ್ತದೆ. ಆಧ್ಯಾತ್ಮಿಕ ದೈತ್ಯಶಕ್ತಿಯುಳ್ಳವರಿಂದ ಬರುವ ಆದರ್ಶ ಪ್ರಭಾವಗಳು ರಾಷ್ಟ್ರದ ಮನಸ್ಸನ್ನು ತನ್ನ ಆಧ್ಯಾತ್ಮಿಕ ಪರಂಪರೆಯಲ್ಲಿ ಸಾರ್ವತ್ರಿಕವೂ ಮಾನವೀಯವೂ ಆಗಿರುವಂತೆ ಸುಸ್ಥಿರವಾಗಿ

ಮೌನದಿಂದ ರೂಪಿಸುತ್ತಿವೆ; ಭಾರತವು ತನ್ನ ಸ್ವಸ್ವರೂಪವನ್ನು ಮತ್ತೆ ಕಂಡುಕೊಂಡು ವಿಶ್ವ ಧರ್ಮಪ್ರಸಾರದ ತನ್ನ ಕಾರ್ಯವನ್ನು ಆಧುನಿಕ ಸಂದರ್ಭದಲ್ಲಿಯೂ ಮುಂದುವರಿಸುವಂತೆ ಸಹಾಯ ಮಾಡುತ್ತವೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯವಾದ ಈ ಮಹಾ ಸಾಹಸಕಾರ್ಯದಲ್ಲಿ ತನ್ನನ್ನು ಮುನ್ನಡೆಸುವ ಬೆಳಕನ್ನು ಅರಸುತ್ತಾ ಭಾರತವು ತನ್ನ ಪ್ರಾಚೀನ ವೇದಾಂತವನ್ನು ನೂತನ ವ್ಯಾಪಕತೆಯೊಡನೆ ಹೊಸದಾಗಿ ಕಂಡುಕೊಂಡಿದೆ. ಗೀತೆಯಲ್ಲಿ ಅದರ ನಿರೂಪಣೆ ಅತ್ಯಂತ ಸುಂದರವಾಗಿ ಅಳವಟ್ಟಿರುವುದನ್ನು ಅತ್ಯಂತ ಸೂಕ್ಷ್ಮ ಪರಿಜ್ಞಾನದಿಂದ ಕಂಡುಕೊಂಡಿದೆ. ನಮ್ಮ ರಾಷ್ಟ್ರೀಯ ದರ್ಶನದ ಅರ್ಥ ಮತ್ತು ವ್ಯಾಪ್ತಿಗಳ ಈ ನೂತನ ಗ್ರಹಿಕೆ, ಸೂಕ್ಷ್ಮಪರಿಜ್ಞಾನಗಳು ಸ್ವಾಮಿ ವಿವೇಕಾನಂದರು ನಮ್ಮ ಇತಿಹಾಸದ ಹೊಸ ಯುಗಕ್ಕೆ ಬಿಟ್ಟುಹೋಗಿರುವ ಆಧ್ಯಾತ್ಮಿಕ ಆಸ್ತಿ.

### ೫. ಭಗವದ್ಗೀತೆ ಹಾಗೂ ಸ್ವತಂತ್ರ ಭಾರತದ ಭವಿಷ್ಯ

ಗೀತೆಯಲ್ಲಿ ನಿರೂಪಿತವಾಗಿರುವ ವೇದಾಂತವು ಇಂದಿನ ಭಾರತದ ಎಲ್ಲ ವಿವೇಚನಾಪರರ ಮನಸ್ಸನ್ನು ಅದ್ಭುತವಾಗಿ ಆಕರ್ಷಿಸಿರುವುದು ಬಹು ಸಂತೋಷಕರವಾದ ಒಂದು ಶುಭ ಸೂಚನೆ. ಇತರ ದೇಶಗಳಲ್ಲಿರುವ ದರ್ಶನ ತತ್ತ್ವ ಸಮೀಕ್ಷೆಗಳಂತೆ ಅಥವಾ ಇಲ್ಲಿನ ಇತರ ದರ್ಶನ, ತತ್ತ್ವಸಮಯಗಳಂತೆ ಇರದೆ, ವೇದಾಂತವು ಸಜೀವವಾದ ತತ್ತ್ವಬೋಧೆಯಾಗಿದೆ. ಸ್ವಾಮಿ ವಿವೇಕಾನಂದರ ಅಭಿಪ್ರಾಯದಲ್ಲಿ ಅದು ಭಾರತವನ್ನು ಹಿಂದೆ ಎರಡು ಸಲ ಸಾವಿನಿಂದ ಉಳಿಸಿದೆ. ಭಾರತದ ಹೃದಯ, ಮನಸ್ಸುಗಳಲ್ಲಿ ಈ ತತ್ತ್ವಜ್ಞಾನವು ಸದಾ ತನ್ನ ಚಿರಮುದ್ರೆಯನ್ನು ಸ್ಥಾಪಿಸಿದೆ. ಆದರೆ ವಿಶಾಲವಾದ ಅದರ ರಾಷ್ಟ್ರ ದೇಹದ ಮೇಲೆ, ಅದರಲ್ಲಿಯೂ ಇತ್ತೀಚಿನ ಕೆಲವು ಶತಮಾನಗಳಲ್ಲಿ ಇತರ ಕೆಲವು ಗುರುತುಗಳು ಬಿದ್ದಿವೆ. ಅನೇಕ ವೇಳೆ ಅವು ಅಷ್ಟೇನೂ ಆತ್ಮೋನ್ನತಿಕರವಾದುವೂ ಅಲ್ಲ, ಅದರ ವೇದಾಂತದ ಮನಸ್ಸಿಗೂ ಹೃದಯಕ್ಕೂ ಯೋಗ್ಯವಾದುವೂ ಅಲ್ಲ. ಪ್ರಸ್ತುತಯುಗವು ವೇದಾಂತ ಆದರ್ಶಗಳಿಗೆ ಅನುರೂಪವಾದ ಮಾನವ ಗಾಂಭೀರ್ಯ, ಸಮಾನತೆ, ಒಗ್ಗಟ್ಟುಗಳ ಆಧಾರದ ಮೇಲೆ ಸ್ಥಿರವಾಗಿ ನಿಂತಿರುವ ರಾಷ್ಟ್ರ ಶರೀರದೊಡನೆ ಭಾರತವು ಆವಿರ್ಭವಿಸುವುದನ್ನು ಕಾಣುವ ಯೋಗವಿದೆ; ಇದು ಭಾರತ ಭೂಮಿಯ ಮೇಲೆ, ಮೊಟ್ಟಮೊದಲ ಬಾರಿಗೆ, ಒಂದು ಅಖಂಡ ವೇದಾಂತದ ನಾಗರಿಕತೆಯ ವಿಕಸನಕ್ಕೆ ಹಾದಿ ಮಾಡಿಕೊಡುತ್ತದೆ.

### ೬. ಮುಕ್ತಾಯ

ಈ ಪರಿಪೂರ್ಣತೆಯ ಸಾಧನೆ ಬಹುಮಟ್ಟಿಗೆ ಗೀತೆಯಿಂದ ದೊರೆತ ಆಧ್ಯಾತ್ಮ ಮತ್ತು ಸಾಮಾಜಿಕ ಧರ್ಮಗಳಿಂದ ನೆರವೇರುತ್ತದೆ. ಗೀತಾಚಾರ್ಯನು ಬಯಸಿದ್ದ, ಆದರೆ ಗತಕಾಲದಲ್ಲಿ ಆತನ ಜನ ಅವುಗಳನ್ನು ಕಡೆಗಣಿಸಿದ್ದ ಪ್ರಯೋಗವು ಇದರಲ್ಲಿ ಕಂಡುಬರುತ್ತದೆ. ಈ ವೇದಾಂತದ ಮೂಲತತ್ತ್ವಗಳನ್ನೂ, ಜೀವನ ಮತ್ತು ಅದರ ಸಮಸ್ಯೆಗಳ ಮೇಲೆ ಅದು ಮೂಡಿಸುವ ಮನೋಭಾವವನ್ನೂ ಅರ್ಥಮಾಡಿಕೊಳ್ಳುವುದರಿಂದ ಭಗವಾನ್ ಶ್ರೀಕೃಷ್ಣನ ಗೀತೆಯ ಬೌದ್ಧಿಕ ವಾತಾವರಣವನ್ನು ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿಯವರ ಭಾರತೀಯ ಮನೋಭಾವವನ್ನೂ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಅದೇ ಭವಿಷ್ಯಭಾರತ.

ಅನು : ತ. ಸು. ಶಾಮರಾಯ

೬

# ಗೀತಾಧ್ಯಯನಕ್ಕೆ ಒಂದು ಪೂರ್ವ ಪೀಠಿಕೆ*

## ೧. ಭಗವದ್ಗೀತೆ : ಸರ್ವಸಮ್ಮತವೂ ವಿಶ್ವವ್ಯಾಪಿಯೂ ಆದ ಒಂದು ಉಪದೇಶಾಮೃತ

### ೧. ಪ್ರಸ್ತಾವನೆ

'ಮೂಲಕೃತಿ' ಎಂಬ ಮಾತನ್ನು ನಾವು ಸಾಮಾನ್ಯವಾಗಿ ಯಾವ ಅರ್ಥದಲ್ಲಿ ಬಳಸುತ್ತಿದ್ದೇವೆಯೋ ಆ ಅರ್ಥದಲ್ಲಿ ಗೀತೆಯು ಮೂಲಕೃತಿಯೇನೂ ಅಲ್ಲ ; ಆದರೂ ಆಲ್‌ಡಸ್ ಹಕ್ಸ್ಲೆ 'ಎಂದಿಗೂ ಬತ್ತಲಾರದ, ಅಕ್ಷಯವಾದ ತತ್ತ್ವಶಾಸ್ತ್ರ' ಎಂದು ಕರೆಯುವ ಅರ್ಥದಲ್ಲಿ ಅದು ಮೂಲಸ್ಯ ಮೂಲಭೂತವಾದ ಒಂದು ನಿರೂಪಣೆ. ಉಪನಿಷತ್ತುಗಳಲ್ಲಿ ಕಾಣಬರುವ ಪ್ರಾಚೀನ ತತ್ತ್ವಜ್ಞಾನ ಪ್ರವಾಹವು ಕಡಿವಡಿಯದೆ ಮುಂಬರಿದು ಹರಿದ ವಾಹಿನಿಯೇ ಪವಿತ್ರ ಗೀತಾ ಗಂಗೆಯಾಗಿದೆ. ಗೀತೆಯು ವೇದಾಂತದ ತಿರುಳಿನಂತಿರುವ ತತ್ತ್ವಗಳನ್ನು ಸಂಗ್ರಹಿಸಿ, ಅದನ್ನು ಅತ್ಯಂತ ಜನಪ್ರಿಯವಾದ ರೀತಿಯಲ್ಲಿ ನಿರೂಪಿಸುತ್ತದೆ. ಆದ್ದರಿಂದಲೇ ಅದು ಈ ದೇಶದಲ್ಲಿನ ಅಸಂಖ್ಯಾತ ಜನಸಮುದಾಯಕ್ಕೆ ಪವಿತ್ರವಾದ ಧರ್ಮಗ್ರಂಥವಾಗಿದೆ. ನಾವು ಗೀತೆಯನ್ನು ಅಧ್ಯಯನ ಮಾಡುವಾಗ ಅದರಲ್ಲಿ ಉಪನಿಷತ್ತುಗಳ ತತ್ತ್ವಪರಿಶೀಲನೆಯನ್ನು ಮಾತ್ರವೇ ಅಲ್ಲ, ಆ ತತ್ತ್ವಜ್ಞಾನದಲ್ಲಿ ಗರ್ಭಿತವಾದ ಧಾರ್ಮಿಕ ಸ್ವರೂಪವನ್ನೂ ಅಧ್ಯಯನ ಮಾಡುತ್ತೇವೆ. ನಮಗೆ ಧಾರ್ಮಿಕ ಮಾರ್ಗದರ್ಶನ ಬೇಕು, ಗೀತೆ ಅದನ್ನು ನೀಡುತ್ತದೆ. ನಿತ್ಯಜೀವನಕ್ಕೆ ಸಂಬಂಧವಿಲ್ಲದ ಪರತತ್ತ್ವವನ್ನು ಕುರಿತು ಹೇಳುವಂತಹ ಆಧ್ಯಾತ್ಮಿಕ ಶಾಸ್ತ್ರದಿಂದ ನಮಗೆ ಹೆಚ್ಚು ಪ್ರಯೋಜನವೇನೂ ಇಲ್ಲ. ಆದ್ದರಿಂದ ವೇದಾಂತದಿಂದ ಸೂಚಿತವಾಗುವ ದಿವ್ಯ ಧಾರ್ಮಿಕ ನಿಯಮಗಳನ್ನು ಗೀತೆಯಲ್ಲಿ ವಿವರಿಸಲಾಗಿದೆ.

ಗೀತೆಯಲ್ಲಿ ನಡವಳಿಕೆಯ ನೀತಿ ನಿಯಮಗಳ ಜೊತೆಗೆ ಇನ್ನೊಂದು ಅಂಶವೂ ಇದೆ : ಅದೇ ಭಕ್ತಿ, ಭಗವಂತನಲ್ಲಿ ಆಸಕ್ತಿ. ಗೀತೆಯ ಭಕ್ತಿಯಲ್ಲಿ ಧಾರ್ಮಿಕ ಮನೋಭಾವನೆಯು ತನ್ನ ಅತ್ಯುನ್ನತವಾದ, ಅತ್ಯುತ್ತಮವಾದ ಸ್ವರೂಪದಲ್ಲಿ ವ್ಯಕ್ತವಾಗಿದೆ. ಇದು ಇನ್ನೂ ಆರಂಭದಶೆಯಲ್ಲಿರುವ ಶೂನ್ಯ ಹೃದಯದಿಂದ ಬಂದುದಲ್ಲ ; ಹೃದಯ ತುಂಬಿ ಹೊರಹೊಮ್ಮುತ್ತಿರುವ ಭಗವತ್ ಪ್ರೇಮ, ಅದು. ಇದೇ ಗೀತೆಯ ಭಕ್ತನನ್ನು ಏಕಕಾಲದಲ್ಲಿಯೇ ನಿರ್ಭಯ ಮತ್ತು ಮೃದು ಹೃದಯಗಳ

---

*ಪಾಕಿಸ್ತಾನದಲ್ಲಿರುವ, ಹೈದರಾಬಾದ್ (ಸಿಂಧ್)ನಲ್ಲಿ ೧೯೪೬ರ ಫೆಬ್ರವರಿ-ಮಾರ್ಚ್‌ನಲ್ಲಿ ಮಾಡಿದ ಉಪನ್ಯಾಸಗಳ ಸಾರಾಂಶ.

ಸಾಕಾರಮೂರ್ತಿಯನ್ನಾಗಿ ಸೃಷ್ಟಿಮಾಡುವುದು. ಹನ್ನೆರಡನೆಯ ಅಧ್ಯಾಯವು ಆಧ್ಯಾತ್ಮಿಕ ಸಂಯಮ ಸಾಧನೆಯ ಈ ಹಾದಿಯ ಮೂಲಕ ನಿರ್ಮಾಣವಾಗುವ ಆದರ್ಶ ವ್ಯಕ್ತಿತ್ವವನ್ನು ಪ್ರಶಂಸಿಸುವ ಒಂದು ಮಹಾ ಸಾಹಸದ ಕಥೆ.

ಈ ಎಲ್ಲ ಕಾರಣಗಳಿಂದ ಗೀತೆಯು ನಮ್ಮ ಜೀವನದಲ್ಲಿ ಒಂದು ಪ್ರಾಮುಖ್ಯತೆಯನ್ನು ಪಡೆದಿದೆ ; ಆ ಪ್ರಾಮುಖ್ಯತೆ ದಿನದಿನಕ್ಕೂ ವೃದ್ಧಿಯಾಗುತ್ತಲೇ ಇದೆ. ಚಾರ್ಲ್ಸ್ ವಿಲ್‌ಕಿನ್ಸನ ಗೀತೆಯ ಆಂಗ್ಲ ಅನುವಾದಕ್ಕೆ ಮುನ್ನುಡಿಯನ್ನು ಬರೆಯುತ್ತಾ, ಭಾರತದ ಪ್ರಥಮ ಬ್ರಿಟಿಷ್ ಗೌರ್ನರ್ ಜನರಲ್ಲನಾದ ವಾರನ್ ಹೇಸ್ಟಿಂಗ್ಸ್‌ನು ಹೀಗೆ ಹೇಳುತ್ತಾನೆ :

*ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯವು ಇನ್ನಿಲ್ಲವೆಂದಾಗಿ ಬಹುಕಾಲವಾದ ಮೇಲೂ, ಅದರಿಂದ ಬರುತ್ತಿದ್ದ ವರಮಾನ ಮತ್ತು ಅಧಿಕಾರಗಳ ಮೂಲಗಳು ನೆನಪಿನಿಂದ ಅಳಿಸಿಹೋದ ಮೇಲೂ ಭಾರತದ ದರ್ಶನಶಾಸ್ತ್ರಗಳನ್ನು ಬರೆದವರು ಅಳಿಯದೆ ಉಳಿಯುತ್ತಾರೆ.*

ಈ ಮಾತುಗಳನ್ನು ಬರೆದಂದಿನಿಂದ ಗೀತೆಯು ಪ್ರಾಚ್ಯ ಪಾಶ್ಚಾತ್ಯ ದೇಶಗಳೆರಡರಲ್ಲಿಯೂ ಇರುವ ಸ್ತ್ರೀ-ಪುರುಷರ ಹೃದಯಗಳಲ್ಲಿ ದಿನದಿನಕ್ಕೂ ಪ್ರವರ್ಧಮಾನವಾಗುತ್ತಿರುವ ಸಾಮ್ರಾಜ್ಯವನ್ನು ಸ್ಥಾಪಿಸಿಕೊಳ್ಳುತ್ತಿದೆ. ಆಧುನಿಕ ವಿಚಾರಶೀಲರಿಗೆ ಜಗತ್ತಿನ ಧರ್ಮಗ್ರಂಥಗಳು ಮತ್ತು ಪ್ರವಾದಿಗಳು ಎಂದರೆ ಅಷ್ಟಕ್ಕಷ್ಟೆ. ಅನೇಕ ವೇಳೆ ದ್ವೇಷವೂ ಕೂಡ. ಆದರೆ ಭಗವದ್ಗೀತೆಯ ವಿಚಾರದಲ್ಲಿ ಮಾತ್ರ ಹಿಂದಿನ ಕಾಲದಲ್ಲಿ ಭಾರತದ ವಿಚಾರಪರರ ಮನಸ್ಸಿಗೆ ಅದು ಹೇಗೆ ಹಿಡಿಸುತ್ತಿತ್ತೋ ಹಾಗೆಯೇ ಆಧುನಿಕ ಜಗತ್ತಿನ ವಿಚಾರಪರರಿಗೂ ಹೃದಯಂಗಮವಾಗಿರುವುದು ಇತರ ರೀತಿಯ ಗ್ರಂಥಗಳಿಗೂ ಇದಕ್ಕೂ ಇರುವ ಒಂದು ತೀವ್ರ ರೀತಿಯ ವೈಲಕ್ಷಣ್ಯ. ಗೀತೆಯ ಈ ಮನೋಜ್ಞತಾಶಕ್ತಿಯ ಮೂಲವು ಅದರ ಸಂದೇಶದ ಎರಡು ಮುಖ್ಯ ಲಕ್ಷಣಗಳಾದ ವೈಚಾರಿಕತೆ ಮತ್ತು ಸರ್ವಸಮ್ಮತತೆ ಇವುಗಳಲ್ಲಿದೆ.

### ೨. ಸರ್ವರಿಗೂ ಅನ್ವಯವಾಗುವ ಗೀತೆ

ಗೀತೆಯನ್ನೇ ಕುರಿತು ವಿಚಾರಮಾಡಹೊರಡುವ ಮುನ್ನ ಮುನ್ನುಡಿ ರೂಪವಾಗಿ ಕೆಲವು ಮಾತುಗಳನ್ನಾಡುವುದು ಅಗತ್ಯ. ನಿಮ್ಮಲ್ಲಿ ಬಹು ಜನರಿಗೆ ಗೀತೆಯ ವಿಷಯವೂ ಮತ್ತು ಹಿಂದೂ ಧರ್ಮಗ್ರಂಥಗಳಲ್ಲಿ ಅದಕ್ಕಿರುವ ಸ್ಥಾನದ ವಿಷಯವೂ ಸ್ವಲ್ಪಮಟ್ಟಿಗಾದರೂ ತಿಳಿದೇ ಇರಬೇಕು. ವೇದಾಂತಾಧ್ಯಯನದ ಸಮಯದಲ್ಲಿ 'ಹಿಂದೂ' ಎಂಬ ಮಾತನ್ನು ಬಳಸಿದಾಗ, ಅದಕ್ಕಿಂತ ಉತ್ತಮವಾದ ಶಬ್ದ ದೊರೆಯದಿದ್ದುದರಿಂದ ಅದನ್ನು ಬಳಸುತ್ತಿದ್ದೇನೆ. ಏಕೆಂದರೆ ಈ ಧರ್ಮಗ್ರಂಥಗಳೂ ತತ್ತ್ವದರ್ಶನಗಳೂ ಬಹುಮಟ್ಟಿಗೆ ಜಗತ್ತಿನಲ್ಲಿ ಹಿಂದೂ, ಬೌದ್ಧ, ಕ್ರೈಸ್ತ, ಮುಸ್ಲಿಂ ಮೊದಲಾದ ಇತರ ಯಾವ ಮತಧರ್ಮಗಳು ಹುಟ್ಟುವುದಕ್ಕಿಂತ ಬಹು ಹಿಂದಿನ ಕಾಲದಲ್ಲಿಯೇ ಬೆಳೆದವು. ಇಂದಿನ ಈ ಭೇದಗಳು ಆಗಿನ್ನೂ ಇರಲಿಲ್ಲ. ಹಿಂದಿನ ಮಹರ್ಷಿಗಳು ಈ ಯಾವ ಭೇದಭಾವವೂ ಇಲ್ಲದೆ ತಮ್ಮ ಧರ್ಮದ ತತ್ತ್ವಗಳನ್ನು ವಿಶದಗೊಳಿಸಿದರು. ಈ ಅಂಶವನ್ನು ನಮ್ಮ ಲಕ್ಷ್ಯದಲ್ಲಿಟ್ಟುಕೊಳ್ಳುವುದು ಅತ್ಯಗತ್ಯ. ನಾವು 'ಹಿಂದು' ಎಂಬ ಮಾತನ್ನು ಬಳಸುವುದು ಒಂದು ಗುಂಪಿನ ಜನರನ್ನು ಮತ್ತೊಂದು ಗುಂಪಿನವರಿಂದ ಪ್ರತ್ಯೇಕಿಸಿ ಗುರುತಿಸುವುದಕ್ಕಾಗಿ. ಆದರೆ ಗೀತೆಯ ಸಂಬಂಧವಾಗಿ ನಾನು ಈ ಮಾತನ್ನು ಬಳಸಿದಾಗ ಈ ಪ್ರತ್ಯೇಕತೆಗೆ ಅವಕಾಶವಿಲ್ಲ. ಏಕೆಂದರೆ, ಋಷಿಗಳು ತಮ್ಮ ದಿವ್ಯ ಭಾವನೆಗಳನ್ನು ಯಾವುದೊಂದು ನಿರ್ದಿಷ್ಟವಾದ ಪಂಥದವರಿಗೆ—ಎಂದರೆ ಉಳಿದೆಲ್ಲರಿಗೆ ಪ್ರತಿಯಾಗಿ ಹಿಂದುಗಳಿಗೆ—ಮಾತ್ರ ಅಲ್ಲ ನೀಡಿದುದು ; ಮತ ಮತ್ತು ಜನಾಂಗಗಳ ಸಂಬಂಧವಿಲ್ಲದೆ, ಮಾರ್ಗದರ್ಶನ ಬೇಕೆಂದವರಿಗೆಲ್ಲ ಅದನ್ನು ನೀಡಿದರು.

ಈ ಅಂಶವನ್ನು ದೃಷ್ಟಿಯಲ್ಲಿಟ್ಟುಕೊಂಡು ನಾವು ಈ ಪ್ರಾಚೀನ ಗ್ರಂಥಗಳು ಮತ್ತು ತತ್ತ್ವಗಳ ಸಮೀಪಕ್ಕೆ ಹೋಗಬೇಕು. ಅಲ್ಲಿ ಬೋಧಿಸಿರುವುದು ಮಾನವಧರ್ಮವನ್ನೇ ಹೊರತು ಈ ಮತ, ಆ ಮತಗಳ ಧರ್ಮವನ್ನಲ್ಲ. ಧರ್ಮ, ನೀತಿ, ಅಧ್ಯಾತ್ಮ ಶಾಸ್ತ್ರಗಳನ್ನು ಪ್ರಸಾರಮಾಡುವುದು ಸಮಷ್ಟಿಮಾನವ ಹಿತಸಾಧನೆಗಾಗಿಯೇ ಹೊರತು ಅದರಲ್ಲಿ ಯಾವ ಅಂಶಗಳಿಗಾಗಿಯೂ ಅಲ್ಲ. ನಮ್ಮ ಎಲ್ಲ ಪ್ರಾಚೀನ ಗ್ರಂಥಗಳಲ್ಲಿಯೂ ಈ ವಿಶ್ವ ವಿಶಾಲ ದೃಷ್ಟಿಯನ್ನೇ ಪ್ರಧಾನವಾಗಿ ಒತ್ತಿ ಹೇಳಿದೆ. ಈ ವಿಶ್ವದೃಷ್ಟಿಗೆ ಎಷ್ಟು ಪ್ರಾಧಾನ್ಯತೆಯನ್ನು ನೀಡಿದ್ದಾರೆಂದರೆ, ಮಹಾ ಸ್ಮೃತಿಕಾರನಾದ ಮನುವು ಹಿಂದೂಗಳ ಹಿತಸಾಧನೆಯನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಳ್ಳದೆ ಇಡೀ ಮಾನವ ಜನಾಂಗ ವನ್ನು ದೃಷ್ಟಿಯಲ್ಲಿಟ್ಟುಕೊಂಡು ತನ್ನ ಧರ್ಮ ನಿಯಮಗಳನ್ನು ರಚಿಸಿದ್ದಾನೆ. ಮನುವು ತನ್ನ ಪೀಳಿಗೆ ಯಾದ ಮಾನವರ ಮಾರ್ಗದರ್ಶನಕ್ಕಾಗಿ ಬರೆದ ಈ ಶಾಸ್ತ್ರವು ಮಾನವ ಧರ್ಮಶಾಸ್ತ್ರ. ಮನುಷ್ಯನು ಜಗತ್ತಿನ ಯಾವ ಭಾಗದಲ್ಲೇ ವಾಸವಾಗಿರಲಿ, ಯಾವ ಜನಾಂಗಕ್ಕೇ ಸೇರಿರಲಿ ಸರ್ವಸಾಮಾನ್ಯವಾಗಿ ಇದು ಸಮಸ್ತ ಮಾನವರಿಗೂ ಅನ್ವಯಿಸುತ್ತದೆ. ಮನುಷ್ಯನು ಸೌಖ್ಯವನ್ನು ಕ್ಷೇಮವನ್ನು ಪಡೆಯ ಬಯಸುವುದಾದರೆ ಅವನು ಕೆಲವು ಆದರ್ಶಗಳನ್ನೂ, ಕೆಲವು ಕ್ರಮವನ್ನೂ ಅನುಸರಿಸಬೇಕಾಗುತ್ತದೆ. ಈ ಆದರ್ಶಗಳೂ ಕ್ರಮಗಳೂ ಸಾರ್ವತ್ರಿಕವಾಗಿವೆ ಮತ್ತು ಈ ಗ್ರಂಥದಲ್ಲಿ ಅವು ಶಾಸನಗಳಾಗಿ ವಿಧಿಸಲ್ಪಟ್ಟಿವೆ. ಅವುಗಳನ್ನು ಕಾರ್ಯಾಚರಣೆಗೆ ತರುವಲ್ಲಿ ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗಬಹುದು. ವೇದಗಳಲ್ಲಿ, ಉಪನಿಷತ್ತುಗಳಲ್ಲಿ, ಅನಂತರ ಗೀತೆಯಲ್ಲಿಯೂ ಹೀಗೆಯೇ ವ್ಯತ್ಯಾಸವಾಗಬಹುದು ; ಅವುಗಳಲ್ಲಿನ ಬೋಧೆಗಳು ತಮ್ಮ ಅಭಿಪ್ರಾಯದಲ್ಲಾಗಲೀ, ಧೋರಣೆ ಯಲ್ಲಾಗಲೀ ಪಕ್ಷಪಾತ ಅಥವಾ ಸಂಕುಚಿತ ಮನೋಭಾವದಿಂದ ಕೂಡಿಲ್ಲ, ಜಾತಿ ಮತಗಳು ಅವುಗಳನ್ನು ತಮ್ಮ ತಮ್ಮ ಲಾಭಕ್ಕಾಗಿ ಬಳಸಿಕೊಂಡರೂ ಸಮೃದ್ಧವಾದ ಆ ಧರ್ಮನಿಯಮಗಳ ಭಂಡಾರವನ್ನು ಬರಿದು ಮಾಡಲಾರವು. ಏಕೆಂದರೆ ಅವು ಮಾನವಸ್ವಭಾವವನ್ನೇ ಕುರಿತು ನಿರೂಪಿಸುತ್ತವೆ. ಸತ್ಯ ಸಾಕ್ಷಾತ್ಕಾರಕ್ಕಾಗಿ ಮನುಷ್ಯನಲ್ಲಿರುವ ಆಶೋತ್ತರಗಳೂ ಮತ್ತು ಅವನ ಹೋರಾಟಗಳೂ ಅವುಗಳ ವಸ್ತುವಾಗಿದೆ. ಮಾನವನನ್ನು ಬೇರೆಬೇರೆಯ ಧರ್ಮ ಜಾತಿಗಳಾಗಿ ವಿಭಜಿಸಿರುವುದು ಏನಿದ್ದರೂ ಅನಂತರದ ಇತ್ತೀಚಿನ ಕಥೆ ಮಾತ್ರವಾಗಿದೆ.

ಹೀಗೆ ನಾವು ಗೀತೆಯನ್ನು ಓದುತ್ತಾ ಹೋದಂತೆ ಅದರ ಬೋಧನೆಯು ಇಡೀ ಮಾನವ ಜನಾಂಗಕ್ಕೆಲ್ಲಾ (ತಮ್ಮ ಆತ್ಮೋನ್ನತಿಯನ್ನು ಪಡೆಯಲೆಂದು ಪ್ರಯತ್ನಿಸುತ್ತಿರುವ ಸ್ತ್ರೀಪುರುಷರಿಗೆಲ್ಲ ಸಮಾನವಾಗಿ) ಉದ್ದಿಷ್ಟವಾಗಿರುವ ನಮಗೆ ಸ್ಪಷ್ಟವಾಗುತ್ತದೆ. ಈ ದರ್ಶನ ಮತ್ತು ಧರ್ಮವು ನೀಡಿರುವುದು ಇದನ್ನೇ. ಈ ಆದರ್ಶವನ್ನು ಮನಸ್ಸಿಗೆ ಹಿಡಿಸುವಂತೆ ಸಂಭಾಷಣಾರೂಪದಲ್ಲಿ ನೀಡಿರುವುದು ಗೀತೆಯ ವೈಶಿಷ್ಟ್ಯ. ಈ ಸಂಭಾಷಣೆ ನಡೆದಿರುವುದು ಕೃಷ್ಣ ಅರ್ಜುನರ ಮಧ್ಯೆ. ನಮ್ಮ ಪ್ರಾಚೀನ ಪವಿತ್ರ ಗ್ರಂಥಗಳಲ್ಲಿ ಅರ್ಜುನನನ್ನು ಮಾನವ ಜನಾಂಗದ ಪ್ರತೀಕವಾದ ನರನ (ಅದು ಅವನ ಪೂರ್ವಜನ್ಮ) ಅವತಾರವೆಂದೂ, ಕೃಷ್ಣನನ್ನು ಸಮಸ್ತ ಪ್ರಾಣಿಗಳ ಅಂತರಾತ್ಮನಾದ ಭಗವಾನ್ ನಾರಾಯಣನ ಅವತಾರವೆಂದೂ ಭಾವಿಸಲಾಗಿದೆ. ಇಲ್ಲಿ ಕೃಷ್ಣನು ಜ್ಞಾನ ಬೋಧೆ ಮಾಡುತ್ತಿರುವುದು ಯಾವುದೋ ಒಂದು ವಿಶಿಷ್ಟವಾದ ಜಾತಿಗಾಗಿರದೆ, ತನ್ನ ಶಿಷ್ಯನಾದ ಅರ್ಜುನನ ಮೂಲಕ ಇಡೀ ಮಾನವ ಜನಾಂಗಕ್ಕೇ ಮಾಡಿದುದಾಗಿದೆ. ಆದ್ದರಿಂದ ಗೀತೆಯಲ್ಲಿ ಭಗವಂತನಾದ ನಾರಾಯಣನೇ ಮಾನವನಾದ ನರನ ಇದಿರಿನಲ್ಲಿ ಪ್ರತ್ಯಕ್ಷವಾಗಿ ನಿಂತಿದ್ದಾನೆ. ಇದೇ ಅದರ ಗಂಭೀರವೂ ದಿವ್ಯವೂ ಆದ ಸನ್ನಿವೇಶ ರಚನಾ ಕೌಶಲ್ಯವಾಗಿದೆ.

## ೩. ಎಲ್ಲರ ಶ್ರೀಕೃಷ್ಣ

ನಮ್ಮ ದೇಶದಲ್ಲಿ ಶತಶತಮಾನಗಳ ಕಾಲದಿಂದ ಹಿಂದೂಗಳ ಮನಸ್ಸು ತನ್ನ ಚಿಂತನಾವೃತ್ತಗಳನ್ನು ಹೆಚ್ಚು ಹೆಚ್ಚು ಸಂಕೋಚನಗೊಳ್ಳುವಂತಹ ನಿರ್ದೇಶನವನ್ನು ಪಡೆಯುತ್ತಾ ಬಂದಿದೆ. ಗೀತೆಯಲ್ಲಿನ ವಿಶ್ವವ್ಯಾಪಕವಾದ ಭಾವನೆಗಳನ್ನು ಕೂಡ ಈ ಸಂಕುಚಿತವಾದ ಜಾಡುಗಳಲ್ಲಿಯೇ ಅಡಗಿಸಿಡಲು ಪ್ರಯತ್ನಿಸಲಾಗಿದೆ. ಶ್ರೀಕೃಷ್ಣನನ್ನು ಕೂಡ ಒಂದು ಮತದ (ಅದು ವೈಷ್ಣವ ಮತವಾಗಿರಲಿ, ಬೇರೊಂದಾಗಿರಲಿ) ಚೌಕಟ್ಟಿನಲ್ಲಿ ಸೆರೆಹಾಕುವ ಪ್ರಯತ್ನ ನಡೆದಿದೆ. ಶ್ರೀಕೃಷ್ಣನು ವಿಶ್ವಗುರುವಾಗಿದ್ದನು. ಅವನು ವೈಷ್ಣವ ಮತ, ಶೈವ ಮತ ಅಥವಾ ಬೇರೊಂದು ಮತ ಎಂಬ ಯಾವ ಭೇದವನ್ನೂ ಮಾಡಲಿಲ್ಲ. ನಮಗಿಂದು ಆವಶ್ಯಕವಿರುವುದು ಇಂತಹ ಒಂದು ವಿಶ್ವಮಾನ್ಯವಾಗಬಲ್ಲ ಸಾಮರಸ್ಯ ; ಅದು ಎಲ್ಲ ಜಾತಿ, ಮತಗಳಿಗೂ ಅತೀತವಾಗಿ, ಎಲ್ಲರನ್ನೂ ಆಲಂಗಿಸಿ, ಪ್ರತಿಯೊಬ್ಬರಿಗೂ ಒಂದೇ ಬಗೆಯಾದ ಪ್ರೇರಣೆಯನ್ನು ನೀಡಬೇಕು. ಆದ್ದರಿಂದ ಗೀತೆಯನ್ನು ಅದರದೇ ಆದ ವಿಶಿಷ್ಟ ಸನ್ನಿವೇಶ ದೃಷ್ಟಿಯಿಂದ ಸಮಾಲೋಚಿಸಬೇಕು. ಅದೊಂದು ವೇದಾಂತದ ಮೇಲಿನ ಭಾಷ್ಯ. ಅದನ್ನು ನೀಡಿದವನು ವಿಶ್ವವಿಶಾಲವಾದ ಹೃದಯವುಳ್ಳವನೂ, ದಯಾಪರನಾದವನೂ ಆದ ಸ್ವಯಂ ಶ್ರೀಕೃಷ್ಣನೇ. ಸರ್ವಸಮ್ಮತವಾದ ಜ್ಞಾನಬೋಧೆಯನ್ನು ನೀಡಬೇಕಾದರೆ ಅದು ವಿಶ್ವವ್ಯಕ್ತಿಯಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ. ಅದನ್ನು ಅರ್ಥಮಾಡಿಕೊಳ್ಳಬೇಕಾದರೂ ವಿಶ್ವವಿಶಾಲ ಹೃದಯದ ವಿದ್ಯಾರ್ಥಿಗೆ ಮಾತ್ರ ; ಸಾಧ್ಯವಲ್ಲದೆ ಬೇರೆಯವರಿಗಾಗದು. ಸ್ವಮತಾಭಿಮಾನದ ಸಂಕುಚಿತ ದೃಷ್ಟಿಯುಳ್ಳವನು ಅದನ್ನು ಓದಿದರೆ, ಅವನಿಗೆ ಗೋಚರಿಸುವುದು ತನ್ನದೇ ಪ್ರತಿಧ್ವನಿಯಂತಿರುವ ಸಂಕುಚಿತ ಬೋಧೆ ಮಾತ್ರ ; ಶ್ರೀಕೃಷ್ಣನ ವಿಷಯವಾದ ಅವನ ಕಲ್ಪನೆಯು ಅವನ ಸಂಕುಚಿತವಾದ ಮನೋಭಾವಕ್ಕೆ ಅನುಗುಣವಾಗಿಯೇ ಇರುತ್ತದೆ. ಇದು ಹಿಂದೆ ಹೀಗೆಯೇ ನಡೆದಿದೆ ; ಆದರೆ ಇಂದು ನಮಗೆ ಬೇಕಾಗಿರುವುದೆಂದರೆ ನಿಷ್ಪಕ್ಷಪಾತವಾಗಿರುವ ತೆರೆದ ಮನಸ್ಸು ಮತ್ತು ಬಾಳಿನ ವಿಚಾರದಲ್ಲಿ ವಿಶ್ವವಿಶಾಲವಾದ ಮನೋಭಾವ. ಹೀಗಾದಾಗ ಮಾತ್ರ ಗೀತೆಯು ತನ್ನ ಅತ್ಯುತ್ತಮ ಫಲವಾದ ವಿಶ್ವವ್ಯಾಪಕತೆಯನ್ನು ಮತ್ತು ಪ್ರಾಯೋಗಿಕತೆಯನ್ನು ನಮಗೆ ನೀಡೀತು. ಗೀತೆಯು ನಮ್ಮ ದೇಶದ ಮತ್ತು ಪರದೇಶದ ಜನರ ಮೇಲೆ ತನ್ನ ಪ್ರಭಾವವನ್ನು ಅಷ್ಟು ವಿಸ್ತಾರವಾಗಿ ಬೀರಿರುವುದಕ್ಕೆ ಕಾರಣ ಇದರಿಂದ ಅರ್ಥವಾಗುತ್ತದೆ. ಈ ದೇಶದ ಮತ್ತು ಪರದೇಶದ ಜನರು ತಮ್ಮ ದೈವನಿಷ್ಠೆಗೆ ಮತ್ತು ತಮ್ಮದೇ ಆದ ಆಧ್ಯಾತ್ಮಿಕ ಪ್ರಯತ್ನಗಳಿಗೆ ಬೆಂಬಲವನ್ನು ನೀಡುವಂತಹ ಯಾವುದೋ ಒಂದನ್ನು ಗೀತೆಯಲ್ಲಿ ಕಾಣುತ್ತಾರೆ. ಅವರು ಕ್ರೈಸ್ತರಾಗಿರಲಿ, ಮುಸ್ಲಿಮರಾಗಿರಲಿ ಅಥವಾ ಹಿಂದೂಗಳಲ್ಲಿಯೇ ಬೇರೆ ಬೇರೆ ಪಂಥಗಳಿಗೆ ಸೇರಿದವರಾಗಿರಲಿ, ಗೀತೆಯು ಅವರವರದೇ ಆದ ಧರ್ಮನಿಷ್ಠೆಯಲ್ಲಿ ಅವರಿಗಿರುವ ಶ್ರದ್ಧೆಯನ್ನು ಬಲಪಡಿಸುತ್ತದೆ. ಅದರ ವಿಶ್ವವ್ಯಾಪಕತೆ ಎಂಬುದು ಒಂದು ವಿಶಿಷ್ಟ ರೀತಿಯದು. ಅದೊಂದು ಆಕ್ರಮಣವಲ್ಲ, ಒಂದು ಆಹ್ವಾನ. ಗೀತೆಯೆಂಬುದು ಪ್ರತಿಯೊಬ್ಬರಿಗೂ, ಅವನವನ ಅಥವಾ ಅವಳವಳ ಇಷ್ಟಕ್ಕೆ ಅನುಸಾರವಾಗಿಯೇ ಅವರದು. ಈಗಿರುವ ಬೇರೆ ಬೇರೆ ಮತ ಧರ್ಮಗಳ ಮಧ್ಯೆ ವ್ಯವಹಾರ ಮಾಡಬೇಕಾದರೆ ಅಂತಹ ವಿಶ್ವವ್ಯಾಪಕವಾದ ಒಂದು ಸಂದೇಶ ಇಂದು ನಮಗೆ ಅತ್ಯಗತ್ಯ.

## ೪. ಶ್ರೀಕೃಷ್ಣಾರ್ಜುನ ಸಂವಾದ

ಶ್ರೀ ಶಂಕರಾಚಾರ್ಯರು ಭಗವದ್ಗೀತೆಯ ಮೇಲಿನ ತಮ್ಮ ಭಾಷ್ಯಕ್ಕೆ ಮುನ್ನುಡಿಯನ್ನು ಬರೆಯುತ್ತಾ ಗೀತಾ ಸಂಭಾಷಣೆಯ ಸ್ವರೂಪವನ್ನು ಕುರಿತು ತಮ್ಮ ಅಭಿಪ್ರಾಯವನ್ನು ನಮಗೆ ತಿಳಿಸುತ್ತಾರೆ. ಗೀತೆಯನ್ನು ಬೋಧಿಸಿದುದು ಹೇಗೆ ಎಂಬ ವಿಚಾರದಲ್ಲಿ ಬೇರೆಬೇರೆಯವರು ಬೇರೆ

ಬೇರೆ ಅಭಿಪ್ರಾಯಗಳನ್ನು ಕೊಡುತ್ತಾರೆ. ತುಂಬಾ ಮಡಿವಂತಿಕೆಯ ಗುಂಪಿಗೆ ಸೇರಿದವರು ಈ ಶ್ಲೋಕಗಳೆಲ್ಲಾ ಕೃಷ್ಣಾರ್ಜುನರು ಹೇಗೆ ಪರಸ್ಪರ ಸಂಭಾಷಿಸಿದರೋ ಹಾಗೆಯೇ ತದ್ವತ್ತಾಗಿಯೇ ಇವೆ ಎಂದು ಭಾವಿಸುತ್ತಾರೆ. ಅವರು ಬರಹವನ್ನು ನೆಚ್ಚುವವರು. ಆದರೆ, ಬೈಬಲ್ಲಿನಲ್ಲಿ ಹೇಳುವಂತೆ 'ಬರಹ ಕೊಲ್ಲುತ್ತದೆ; ಆದರೆ ಅದರ ಅಂತಸ್ಸತ್ವ ಬದುಕಿಸುತ್ತದೆ.' ಯುದ್ಧಭೂಮಿಯಲ್ಲಿ ಅಷ್ಟು ದೀರ್ಘಕಾಲ ಪ್ರಶ್ನೋತ್ತರಗಳನ್ನು, ಅದರಲ್ಲಿಯೂ ಶ್ಲೋಕರೂಪವಾಗಿ ನಡೆಸಿದರೆನ್ನುವುದು ಅತ್ಯಂತ ಅಸಮರ್ಥನೀಯವಾದುದು. ವಿಚಾರಪರರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಇಂದಿನ ಶಾಸ್ತ್ರ ಸಂಪ್ರದಾಯಕ್ಕೆಲ್ಲಾ ಆದಿಮೂಲರೆಂದು ಭಾವಿಸಲಾಗಿರುವ ಮಹಾನುಭಾವರಾದ ಶಂಕರಾಚಾರ್ಯರು ಈ ಅಭಿಪ್ರಾಯವನ್ನು ಸ್ವೀಕರಿಸಿಲ್ಲ. ಅವರು ತಮ್ಮ ಭಾಷ್ಯದಲ್ಲಿ ಹೇಳಿರುವ ಪ್ರಕಾರ ಅರ್ಜುನನು ಭ್ರಾಂತನಾಗಿ ಮುಂದೋರದವನಾಗಿದ್ದನು, ಶ್ರೀಕೃಷ್ಣನು ಅವನಿಗೆ ಮನಮುಟ್ಟುವಂತಹ ಬುದ್ಧಿವಾದವನ್ನು ನೀಡಿದನು, ಈ ಬುದ್ಧಿವಾದವನ್ನು ವ್ಯಾಸಮಹರ್ಷಿಗಳು ಏಳುನೂರು ಶ್ಲೋಕಗಳಾಗಿ ರಚಿಸಿದರು. ಶಂಕರಾಚಾರ್ಯರ ಈ ಅಭಿಪ್ರಾಯ ತುಂಬಾ ಯುಕ್ತಿಯುಕ್ತವಾಗಿ ಕಾಣುತ್ತದೆ.

ಒಂದು ಮಹೋಪದೇಶ ಅಥವಾ ಮಹತ್ತಾದ ಒಂದು ಉದಾತ್ತಭಾವನೆ ಉದಿಸುವುದು ಅನೇಕ ವೇಳೆ ಸಂದರ್ಭ ಸನ್ನಿವೇಶಗಳ ಒತ್ತಡದಿಂದ ಎಂದು ನಮಗೆ ತೋರುತ್ತದೆ. ಜಗತ್ತಿನ ಯಾವ ಭಾಗದಲ್ಲೇ ಉದಿಸಿದ ಚೈತನ್ಯಪೂರ್ಣ ಭಾವನೆ ಅಥವಾ ಚಳುವಳಿಗಳನ್ನು ಕುರಿತು ಹೇಳುವುದಾದರೂ ಈ ಮಾತುಸತ್ಯ. ಇಂದು ಜಗತ್ತಿನ ಅನೇಕ ಭಾಗಗಳಲ್ಲಿರುವ ಸ್ತ್ರೀಪುರುಷರ ಜನಜಂಗುಳಿಗೆ ಚಾಲಕ ಶಕ್ತಿಯಂತಿರುವ ಮಹಾನ್ ಮಾರ್ಕ್ಸ್‌ವಾದವು ಹತ್ತೊಂಬತ್ತನೆಯ ಶತಮಾನದಲ್ಲಿ ಉದಿಸಿದುದು, ಅದಕ್ಕಾಗಿ ಸಮಾಜವು ಕಾಯುತ್ತ ಕುಳಿತಿದ್ದಾಗ, ಬಹುಕಾಲದಿಂದ ಕೂಡಿ ಬಿದ್ದಿದ್ದ ಸ್ಥಿತಿಗತಿಗಳಿಂದ ಅದು ಹೊರಹೊಮ್ಮಿತು. ಕಳೆದ ಶತಮಾನದ ಮಧ್ಯದಶಕಗಳಲ್ಲಿ ಅದು ಸ್ಪಷ್ಟರೂಪವನ್ನು ತಾಳಿತು. ಫ್ರೆಂಚರ ಯುದ್ಧ ಘೋಷಣೆಗೆ ಸಂಕೇತವಾಗಿದ್ದ 'ಸ್ವಾತಂತ್ರ್ಯ, ಸಮಾನತೆ, ಸೋದರ ಪ್ರೇಮ' ಎಂಬ ಭಾವನೆಯು ಫ್ರಾನ್ಸಿನಲ್ಲಿ ಹದಿನೆಂಟನೇ ಶತಮಾನದ ಮಧ್ಯಭಾಗದಲ್ಲಿದ್ದ ದಬ್ಬಾಳಿಕೆಯ ಕಾಲದಲ್ಲಿ ಹುಟ್ಟಿದುದು. ಅದರಂತೆಯೇ, ನಾವು ಗೀತೆಯನ್ನೂ, ಮಹಾಭಾರತ ಕಾಲದಲ್ಲಿ ಇದ್ದ ಸ್ಥಿತಿಗತಿಗಳನ್ನೂ ಮತ್ತು ಗೀತಾಬೋಧನೆಯನ್ನು ನಡೆಸಬೇಕಾಗಿ ಬಂದ ಸ್ಥಿತಿಗತಿಗಳನ್ನೂ ಅಧ್ಯಯನ ಮಾಡಿದಾಗ, ಗೀತೆಯ ಭಾವನೆಗಳನ್ನು ಪ್ರಸಾರ ಮಾಡುವುದಕ್ಕೆ ಪ್ರಬಲವಾದ ಕಾರಣಗಳಿದ್ದವೆಂದು ಕಾಣಬರುತ್ತದೆ. ಬಹು ಪ್ರಾಚೀನಕಾಲದಲ್ಲಿಯೇ ನಮ್ಮಲ್ಲಿ ವೈದಿಕ ಸಾಹಿತ್ಯವಿತ್ತು ; ಅದರೊಂದಿಗೆ ಮತಾಚರಣೆಯ ಧರ್ಮವೂ ಸೇರಿತ್ತು. ಅದರಂತೆಯೇ ನಮ್ಮಲ್ಲಿ ಉಪನಿಷತ್ತುಗಳನ್ನೂ ದಾರ್ಶನಿಕ ಧರ್ಮವನ್ನೂ ಕಲಿಸಲಾಗುತ್ತಿತ್ತು. ಇವೆರಡೂ ಪರಸ್ಪರ ವಿರುದ್ಧವಾಗಿಯೇ ಬಳಕೆಯಾಗುತ್ತಿದ್ದವು. ವೇದೋಕ್ತವಾದ ಮತಾಚರಣೆಯಿಂದ ಇಹಲೋಕ ದಲ್ಲಿಯೂ ಸತ್ತಮೇಲೆ ಸ್ವರ್ಗಲೋಕದಲ್ಲಿಯೂ ಸುಖ ದೊರೆಯುವುದೆಂಬ ಭರವಸೆ ದೊರೆಯುತ್ತದೆ. ಆದ್ದರಿಂದ, ಇಹಜೀವನದಲ್ಲಿ ಸುಖಸಂಪತ್ತುಗಳನ್ನು ಸತ್ತ ಮೇಲೆ ಒಂದು ನೆಲೆಯನ್ನು ಬಯಸುವ ಒಬ್ಬ ಮನುಷ್ಯನು ಆ ಕಾಲದ ಪ್ರಜ್ಞೆಗೆ ತಕ್ಕಂತೆ ಹಲವಾರು ದೇವರುಗಳಿಗೆ ಯಜ್ಞಯಾಗಾದಿಗಳನ್ನು ಮಾಡಿ, ತನ್ನ ಅಭೀಷ್ಟವನ್ನು ಪಡೆಯಲು ಪ್ರಯತ್ನಿಸುತ್ತಿದ್ದನು. ಮುಂದೆ ಉಪನಿಷತ್ತುಗಳು ಈ ಸ್ವರ್ಗ ತತ್ತ್ವವನ್ನು ಪ್ರತಿಭಟಿಸಿದವು. ಕಠೋಪನಿಷತ್ತನ್ನು ಅಧ್ಯಯನ ಮಾಡಹೊರಟಾಗ, ನಚಿಕೇತನು ತನ್ನ ಮೊದಲ ವರದಿಂದ ಈ ಲೋಕಕ್ಕೆ ಸಂಬಂಧಪಟ್ಟ ಯಾವುದೋ ಒಂದು ಪ್ರಯೋಜನವನ್ನು ಬಯಸಿದುದು ಕಂಡುಬರುತ್ತದೆ. ಎರಡನೆಯ ವರದಿಂದ ಸ್ವರ್ಗ ಪದವಿಯನ್ನು ಪಡೆಯುವುದು ಹೇಗೆಂಬುದನ್ನು ತಿಳಿಯಬಯಸುತ್ತಾನೆ. ಆದರೆ ಇವಿಷ್ಟರಿಂದಲೇ ಅವನು ತೃಪ್ತನಾಗುವುದಿಲ್ಲ. ಉಪನಿಷತ್ತುಗಳಲ್ಲಿನ ಪ್ರತಿಭಟನೆಯು ಇನ್ನೂ ಉನ್ನತವಾದ ಉದ್ದೇಶ ಮತ್ತು ಕಾರ್ಯಗಳಿಗೆ ನಮ್ಮನ್ನು ಕೊಂಡೊಯ್ಯುತ್ತದೆ ; ಆದ್ದರಿಂದಲೇ

ನಚಿಕೇತನ ಮೂರನೆಯ ವರವು ಬಾಳಿನ ಸಮಸ್ಯೆಗಳಿಗೆ ಸಂಬಂಧಿಸಿದುದಾಗಿದ್ದು, ಉನ್ನತವಾದ ದರ್ಶನ ಮತ್ತು ಧರ್ಮಗಳ ಪರಾಮರ್ಶೆಯಿಂದ ಕೂಡಿದೆ. ಜೀವನದ ಹಿನ್ನೆಲೆಯಲ್ಲಿರುವ ಸತ್ಯವನ್ನು ಕುರಿತು ವಿವೇಚಿಸುವುದರಿಂದ ಮಾತ್ರವೇ ಈ ಸಮಸ್ಯೆಯನ್ನು ಬಗೆಹರಿಸುವುದಕ್ಕೆ ಸಾಧ್ಯ. ಇದು ಉಪನಿಷತ್ತುಗಳು ಕೈಗೊಂಡಿರುವ ವಿಶೇಷ ಕಾರ್ಯ. ಆದ್ದರಿಂದ ಈ ಪ್ರಶ್ನೆ ಮೊಟ್ಟ ಮೊದಲ ಬಾರಿ ಉಪನಿಷತ್ತುಗಳಲ್ಲಿ ಅಗ್ರಗಣ್ಯವಾಗಿ ಕಾಣಿಸಿಕೊಳ್ಳುತ್ತದೆ. ಇದರ ಜೊತೆಯಲ್ಲಿಯೇ ಇಹ ಮತ್ತು ಪರ ಜೀವನಗಳ ಈ ಅಂತರ ಹೆಚ್ಚುತ್ತಾ ಹೋಗಿದ್ದುದರಿಂದ ಇವೆರಡರ ಹೊಂದಾಣಿಕೆ ಅತ್ಯಗತ್ಯವಾಗಿತ್ತು ; ಭಗವದ್ಗೀತೆಯು ತನ್ನ ಬೋಧನೆಯಲ್ಲಿ ಈ ಹೊಂದಾಣಿಕೆಯನ್ನು ತರಲು ಪ್ರಯತ್ನಿಸಿದೆ. ಸತ್ತ ಮೇಲೆ ಸ್ವರ್ಗದಲ್ಲಿ ಸುಖವಸತಿಯನ್ನು ಕಲ್ಪಿಸುವುದಕ್ಕಾಗಿ ಕರ್ಮ ಅಥವಾ ಯಜ್ಞಯಾಗಾದಿ ಮತಾಚರಣೆಗಳನ್ನು ಮಾಡುವಂತೆ ವೇದಗಳು ಬೋಧಿಸುತ್ತವೆ. ಉಪನಿಷತ್ತುಗಳಿಗೆ ಬಂದರೆ ಇದರ ಪ್ರತಿಭಟನೆ ಕಾಣಬರುತ್ತದೆ. ಅವುಗಳಲ್ಲಿ ಕರ್ಮ, ಯಜ್ಞ ಮೊದಲಾದುವುಗಳ ಪ್ರಸ್ತಾಪವೇ ಇಲ್ಲ. ಇಲ್ಲಿನ ಆದರ್ಶವೆಂದರೆ ಧ್ಯಾನದಿಂದ ಸತ್ಯಸಾಕ್ಷಾತ್ಕಾರ ಮಾಡಿಕೊಳ್ಳುವುದು. ಕರ್ಮಕ್ಕೆ ಇಲ್ಲಿ ಯಾವ ಸ್ಥಾನವೂ ಇಲ್ಲ. ಆದರೆ ಗೀತೆಯಲ್ಲಿ ಕರ್ಮಮಾರ್ಗದ ಅವಶ್ಯಕತೆ ಮತ್ತು ಚಿಂತನೆ, ಧ್ಯಾನಗಳ ಆವಶ್ಯಕತೆ ಇವೆರಡಕ್ಕೂ ಶ್ರೀಕೃಷ್ಣನದೇ ಆದ ಒಂದು ಸಮನ್ವಯ ಕಂಡು ಬರುತ್ತದೆ. ಈ ಎರಡು ವಿರುದ್ಧ ಶಕ್ತಿಗಳಲ್ಲಿ ಸಮನ್ವಯವಿಲ್ಲದಿದ್ದರೆ ಬಾಳು ಪರಿಪೂರ್ಣವಾಗುವುದಿಲ್ಲ. 'ನಾನು ಚಿಂತನೆಯ ಗೋಜಿಗೆ ಹೋಗದೆ ಕರ್ಮ ಮಾಡುತ್ತೇನೆ' ಎಂದು ಹೇಳುವ ಮನುಷ್ಯನು ಫಲಪ್ರದನಾಗುವುದಿಲ್ಲ. ಕೇವಲ ಚಿಂತನೆಯಲ್ಲಿಯೇ ತಲ್ಲೀನನಾಗಿರುವ ಮನುಷ್ಯನೂ ಕೂಡ ಪರಿಪೂರ್ಣನಾಗಿರುವುದಿಲ್ಲ. ಆದ್ದರಿಂದ, ಆ ಕಾಲಕ್ಕೆ ಅವೆರಡೂ ಸಮನ್ವಯಗೊಂಡ ಹೊಸ ದರ್ಶನವೊಂದು ಅಗತ್ಯವಾಗಿತ್ತು. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನೀಡಿದುದು ಅದನ್ನೇ. ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿಯೂ ಗೀತೆಯ ಪೂರ್ವ ಯುಗದಲ್ಲಿ ಪರಿಚಿತವಾಗಿದ್ದ ಮಾತುಗಳೂ ಭಾವಗಳೂ ಬಳಕೆಯಾಗಿರುವು ದನ್ನು ನಾವು ಕಾಣುತ್ತೇವೆ. ಶ್ರೀಕೃಷ್ಣನು ಅವುಗಳನ್ನು ತೆಗೆದುಕೊಂಡು, ಅವುಗಳಿಗೆ ತನ್ನದೇ ಆದ ಅರ್ಥವನ್ನೂ ವಿವರಣೆಯನ್ನೂ ತುಂಬಿ, ಕರ್ಮ ಮತ್ತು ಚಿಂತನೆಗಳು ಸಮನ್ವಯಗೊಂಡ ರಚನಾತ್ಮಕ ದರ್ಶನವೊಂದನ್ನು ನೀಡುತ್ತಾನೆ. ನಾಲ್ಕನೆಯ ಮತ್ತು ಹದಿನೆಂಟನೆಯ ಅಧ್ಯಾಯಗಳಲ್ಲಿ ಬರುವ ಕರ್ಮ ಮತ್ತು ಅಕರ್ಮಗಳ ಅರ್ಥವಿವರಣೆಯಲ್ಲಿ ಇದು ವಿಶೇಷವಾಗಿ ನಮಗೆ ಕಾಣಬರುತ್ತವೆ.

### ೫. ಸಮಗ್ರ ದರ್ಶನದ ಮಾರ್ಗದರ್ಶನದಲ್ಲಿ ಬದುಕು

ಎರಡನೆಯದಾಗಿ, ಉಪನಿಷತ್ತುಗಳು ನಿರಂತರವಾದ ತಾತ್ತ್ವಿಕ ಪರಿಶೋಧನೆಯ ಫಲವಾಗಿರುವ ಸತ್ಯವಸ್ತುವೊಂದನ್ನು ಕುರಿತು ತಿಳಿಸುತ್ತವೆ. ಶ್ರೀಕೃಷ್ಣನು ಈ ದರ್ಶನದ ಧಾರ್ಮಿಕ ಪರಿಣಾಮವನ್ನು ಹೊರತರಲು ಪ್ರಯತ್ನಿಸಿದನು. ಮನುಷ್ಯನಿಗೆ ಎಷ್ಟೋ ಮಾರ್ಗದರ್ಶನ ಬೇಕು. ತತ್ತ್ವಶಾಸ್ತ್ರದಿಂದ ಅದು ದೊರೆಯದೆ ಹೋದರೆ ಬೇರೆ ಕಡೆ ಅದನ್ನು ಪಡೆಯಲು ಪ್ರಯತ್ನಿಸುತ್ತಾನೆ. ಜೀವನವು ಉನ್ನತ ಮಟ್ಟಕ್ಕೆ ಏರಬೇಕೆಂದು ನಾವು ತತ್ತ್ವಶಾಸ್ತ್ರದ ಮಾರ್ಗದರ್ಶನವನ್ನು ಅಪೇಕ್ಷಿಸುತ್ತೇವೆ. ಜೀವನವನ್ನು ಸಾಮಾನ್ಯಮಟ್ಟದಿಂದ ಧಾರ್ಮಿಕ ಮತ್ತು ನೈತಿಕ ಮೌಲ್ಯಗಳ ಮೇಲ್ಮಟ್ಟಕ್ಕೊಯ್ಯು ಭವ್ಯ ದರ್ಶನವೊಂದರ ಮಾರ್ಗದರ್ಶನಕ್ಕೆ ಅದನ್ನು ಒಳಪಡಿಸುವುದೇ ಗೀತೆಯ ಹೆಗ್ಗುರಿ.

ಭಗವದ್ಗೀತೆಯಲ್ಲಿ ಕಲ್ಪಿಸಲಾಗಿರುವ ಜೀವನ ದರ್ಶನದ ಯೋಜನೆಯೆಲ್ಲವೂ ಅದರ ಎರಡನೆಯ ಅಧ್ಯಾಯದಿಂದ ನಮಗೆ ತಿಳಿದುಬರುತ್ತದೆ. ಶ್ರೀಕೃಷ್ಣನು ಗೀತೆಯಲ್ಲಿ ನೀಡಿದ ನೂತನವಾದ ಮತ್ತು ಮೂಲಭೂತವಾದ ಈ ಸೂತ್ರಸಂಹಿತೆ ಕಾಣಬರುವವರೆಗೆ ಉಪನಿಷತ್ತಿನ

ಚಿಂತನೆಯು ಬೆಳೆದು ವಿಕಾಸಗೊಂಡುದು ಹೀಗೆಯೇ. ಮಾನವ ಜನಾಂಗದ ಗೆಳೆಯನಾಗಿ, ದಾರ್ಶನಿಕನಾಗಿ, ಮಾರ್ಗದರ್ಶಕನಾಗಿ ಶ್ರೀಕೃಷ್ಣನು ಉದಾತ್ತವಾದ ಅಧ್ಯಾತ್ಮಶಾಸ್ತ್ರವನ್ನೂ ಪ್ರಾಯೋಗಿಕವಾದ ಧರ್ಮವನ್ನೂ ಒಳಗೊಂಡ ಸಂದೇಶವನ್ನು ನೀಡಿದನು. ಅದು ಮಾನವ ಜನಾಂಗವನ್ನು ಈವರೆಗೆ ಸಂರಕ್ಷಿಸಿಕೊಂಡು ಬಂದಿದೆ, ಮುಂದೆ ಯುಗಾಂತರಗಳವರೆಗೆ ಸಂರಕ್ಷಿಸಿಕೊಂಡು ಹೋಗುತ್ತದೆ.

ಉಪನಿಷತ್ತುಗಳು ಭಾರತದ ಚಿಂತನೆಯ ಮಹೋನ್ನತವಾದ ಮತ್ತು ಅತ್ಯಂತ ಭವ್ಯವಾದ ಹೇಳಿಕೆ ಗಳನ್ನು ಒಳಗೊಂಡಿವೆ. ಮ್ಯಾಕ್ಸ್‌ಮುಲ್ಲರನು ಪ್ರಾಚೀನ ಭಾರತದಲ್ಲಿದ್ದ ವಿವೇಚನಾಪರರು ತಾತ್ತ್ವಿಕ ಚಿಂತನೆಯ ಭವ್ಯ ಭವನವನ್ನು ನಿರ್ಮಿಸಿದ್ದುದನ್ನೂ, ಸತ್ಯ ಮತ್ತು ನ್ಯಾಯಗಳ ಪ್ರೇಮದಿಂದ ಮುಂದುವರೆಯುತ್ತಾ, ನಿಂದೆಯ ಭಯದಿಂದಾಗಲೀ, ಸ್ತೋತ್ರದ ಮೋಹದಿಂದಾಗಲೀ ತಮ್ಮ ಕಾರ್ಯದಿಂದ ಹಿಮ್ಮೆಟ್ಟದಿದ್ದ ದಿಟ್ಟತನವನ್ನೂ ಕುರಿತು ಹೊಗಳುತ್ತಾನೆ. ನಾವು ಉಪನಿಷತ್ತುಗಳನ್ನು ಅಧ್ಯಯನ ಮಾಡುತ್ತಿರುವಾಗ ಚಿಂತನೆಯ ಒಂದು ಮಹಾ ಸಾಗರವೇ ನಮ್ಮ ಎದುರು ಬಂದು ನಿಲ್ಲುತ್ತದೆ. ಈ ಚಿಂತನೆಯನ್ನು ಪ್ರಾಯೋಗಿಕವಾದ ಆಧ್ಯಾತ್ಮಿಕ ಸಂದೇಶದ ಕ್ರಮಬದ್ಧರೂಪದಲ್ಲಿ ಜೋಡಿಸುವ ಪ್ರಯತ್ನ ಮೊಟ್ಟಮೊದಲ ಬಾರಿಗೆ ಗೀತೆಯಲ್ಲಿ ನಡೆದಿದೆ.

### ೬. ಭಾರತದ ಐತಿಹಾಸಿಕ ಶಕಗಳು ಮತ್ತು ಶಕಪುರುಷರು

ಮಹಾಭಾರತವು ಕ್ರಿಸ್ತಪೂರ್ವ ಹದಿನಾಲ್ಕನೆಯ ಶತಮಾನದಲ್ಲಿ ನಡೆದ ಘಟನೆಗಳನ್ನು ನಿರೂಪಿಸುತ್ತದೆ ; ಅದು ಗೀತೆಯನ್ನು ಒಳಗೊಂಡಿದೆ —ಹೀಗೆಂದು ಆಧುನಿಕ ವಿದ್ವಾಂಸರು ತೀರ್ಮಾನಕ್ಕೆ ಬಂದಿದ್ದಾರೆ. ನಿಶ್ಚಿತವಾದ ಕಾಲ ಯಾವುದೇ ಇರಲಿ, ಅದು ಬಹು ಪ್ರಾಚೀನವೆಂಬ ವಿಚಾರದಲ್ಲಿ ಯಾವ ಸಂದೇಹವೂ ಇಲ್ಲ. ಪ್ರಾಚೀನ ಭಾರತದಲ್ಲಿ ಇತಿಹಾಸದ ಕಾಲಗಣನೆ ಅನಿರ್ದಿಷ್ಟವಾದುದು. ಕ್ರಿಸ್ತಪೂರ್ವ ಏಳನೇ ಶತಮಾನದಲ್ಲಿದ್ದ ಬುದ್ಧನ ಕಾಲದಿಂದ ಮಾತ್ರ ಯಾವುದೋ ಒಂದು ತರಹ ಕಾಲಗಣನೆ ದೊರೆಯುವಂತಾಗಿದೆ. ಅದಕ್ಕೆ ಹಿಂದೆ ಬರುವ ಪ್ರತಿಯೊಂದೂ ಪ್ರಾಚೀನ ಭಾರತದ ಪೌರಾಣಿಕೇತಿಹಾಸವಾಗಿ ಬರುತ್ತದೆ. ಗೀತೆಯು ಸೂತ್ರಸಂಹಿತಾ ಸ್ವರೂಪವನ್ನು ಪಡೆದುದು ಬುದ್ಧನಿಗಿಂತಲೂ ಕೆಲವು ಶತಮಾನಗಳ ಹಿಂದೆ ಎಂದು ತಿಳಿದುಕೊಳ್ಳ ಬಹುದು. ಉಪನಿಷತ್ತುಗಳಲ್ಲಿಯೂ ಮಹೋನ್ನತವಾದ ಭಾವನೆಗಳಿವೆ ; ಆದರೆ ಜನ ಇವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಬುದ್ಧನು ಬಂದು, ಪ್ರಾಚೀನ ತತ್ತ್ವಗಳ ನಿಜವಾದ ಅರ್ಥವನ್ನು ಜನರು ತಿಳಿದುಕೊಳ್ಳುವಂತೆ ಅವುಗಳಿಗೆ ನೂತನ ರೂಪವನ್ನಿತ್ತನು.

ಮಹೋನ್ನತವಾದ ಪ್ರತಿಯೊಂದು ಭಾವನೆ ಸೂತ್ರಸಂಹಿತಾಸ್ವರೂಪವನ್ನು ತಾಳಿದಾಗಲೂ ಅದು ಈ ದೇಶದಲ್ಲಿ ಒಂದು ಹೊಸ ಯುಗವನ್ನು ಸೃಷ್ಟಿಸಿದೆ ; ಅಂತಹ ಯುಗದ ಹಿನ್ನೆಲೆಯಲ್ಲಿ ಮಹಾಪುರುಷನೊಬ್ಬನು ಆವಿರ್ಭವಿಸಿದ್ದಾನೆ. ರಾಷ್ಟ್ರವ್ಯಾಪಕವಾದ ಪ್ರತಿಯೊಂದು ಮಹಾ ಘಟನೆಯೂ ಮಹಾತತ್ತ್ವ ಪ್ರಸಾರವೊಂದರ ದಿವ್ಯಫಲವೇ. ಆ ತತ್ತ್ವವನ್ನು ಜನರಿಗೆ ನೀಡಿದ ಮಹಾಪುರುಷನೊಬ್ಬನ ಹಿನ್ನೆಲೆಯಲ್ಲಿ ಉಳ್ಳದ್ದೇ. ಕ್ರಿಸ್ತಪೂರ್ವ ೬-೭ನೇ ಶತಮಾನದಲ್ಲಿ ಬುದ್ಧ ಇದ್ದ ; ಆಮೇಲೆ ಕ್ರಿ. ಶ. ೭-೮ನೇ ಶತಮಾನದಲ್ಲಿ ಶಂಕರರು ಬಂದರು ; ಈ ಮಹಾಪುರುಷರ ಜ್ಞಾನದೀವಿಗೆಯ ಬೆಳಕಿನಲ್ಲಿಯೇ ನಾವಿನ್ನೂ ಇದ್ದೇವೆ. ಆಧುನಿಕ ಯುಗಕ್ಕೆ ಬಂದರೆ, ಹತ್ತೊಂಭತ್ತನೆಯ ಶತಮಾನದಲ್ಲಿ, ನಾವು ನಮ್ಮ ಮಧ್ಯದಲ್ಲಿ ಅನೇಕ ದಿವ್ಯ ಜ್ಯೋತಿಗಳನ್ನು ಪಡೆದಿದ್ದೆವು. ಇಂದು ನಾವು ಅವರಿಂದಲೂ ಅವರ ಉಪದೇಶಗಳಿಂದಲೂ ಮಾರ್ಗದರ್ಶನ ಪಡೆಯುವ ಭಾಗ್ಯಶಾಲಿಗಳಾಗಿದ್ದೇವೆ. ಭಾರತ ಇತಿಹಾಸವನ್ನು ಅಧ್ಯಯನ ಮಾಡಹೊರಟ ಯಾರಿಗೇ

ಆಗಲಿ, ಅಲ್ಲಿನ ಪ್ರತಿಯೊಂದು ಮಹಾಘಟನೆಗೂ ಪೂರ್ವಭಾವಿಯಾಗಿ ಚಿಂತನೆ, ಜೀವನಗಳ ಅದ್ಭುತಾದರ್ಶದ ಸೂತ್ರಸಂಹಿತೆಯೂ, ಅದರ ಹಿಂದೆ ಸ್ಫೂರ್ತಿಯ ಕೇಂದ್ರವಾಗಿ ಒಬ್ಬ ಮಹಾನ್ ವ್ಯಕ್ತಿಯೂ ಕಂಡುಬರುತ್ತಾರೆ. ಅಸದೃಶವಾದ ಈ ಸಂಗತಿಯು ಅಚ್ಚರಿಯನ್ನುಂಟುಮಾಡುತ್ತದೆ. ಈ ಐತಿಹಾಸಿಕ ಘಟನೆಯಲ್ಲಿ ಯಾವುದೋ ಒಂದು ಅಪೂರ್ವವಾದ ಶಕ್ತಿ ಇದೆ ; ಅದೇ ನಮ್ಮ ಸಂಸ್ಕೃತಿಯ ನಿರಂತರತೆಗೂ ಜೀವಶಕ್ತಿಗೂ ಮೂಲಕಾರಣ. ಚೀನವನ್ನು ಬಿಟ್ಟರೆ ಇನ್ನೆಲ್ಲಿಯೂ ಈ ನಿರಂತರತೆ ಕಾಣಬರುವುದಿಲ್ಲ. ನಮ್ಮ ಹಿಂದೆ ಐದು ಸಹಸ್ರ ವರ್ಷಗಳ ಇತಿಹಾಸವಿದೆ. ನಾವು ಪೂರ್ವಕಾಲದ ಅದೇ ಜನರಾಗಿದ್ದೇವೆ, ಅದೇ ಪ್ರಾಚೀನ ಆದರ್ಶಗಳೇ ಇಂದೂ ನಮ್ಮನ್ನು ಮುಂದುವರಿಸುತ್ತಿವೆ. ಈ ಜಗತ್ತಿನ ರಂಗಸ್ಥಳದಲ್ಲಿ ನಮ್ಮ ಈ ಸಂಸ್ಕೃತಿಯನ್ನು ಸ್ಥಿರವಾಗಿ ನಿಲ್ಲಿಸಿರುವುದಾವುದು ? ಅನೇಕ ನಾಗರಿಕತೆಗಳು ಈ ಜಗತ್ತಿನ ರಂಗಸ್ಥಳದಲ್ಲಿ ಪ್ರವೇಶಿಸಿ, ನೀರ ಮೇಲಿನ ಗುಳ್ಳೆಗಳಂತೆ ಮಾಯವಾಗಬಹುದು. ಕಣ್ಮರೆಯಾಗಿ ಹೋಗುತ್ತಿರುವ ಈ ಎಲ್ಲ ನಾಗರಿಕತೆಗಳ ಮಧ್ಯೆ ಭಾರತ ಮತ್ತು ಚೀನಾ ಇವೆರಡು ಮಾತ್ರ ಶಾಶ್ವತವಾಗಿ ನಿಂತಿವೆ.

## ೭. ಭಾರತದಲ್ಲಿ ಅಂತರ್ಗತವಾಗಿರುವ ಆಧ್ಯಾತ್ಮಿಕ ಶಕ್ತಿ

ನಮ್ಮ ಸಂಸ್ಕೃತಿಯಲ್ಲಿನ ಜೀವನಶಕ್ತಿಯ ಮೂಲ ಅಥವ ಮೂಲಗಳು ಎಲ್ಲಿಂದ ಬಂದವು ಎಂಬುದನ್ನು ನಾವು ಆಳವಾಗಿ ಆಲೋಚಿಸುವಂತೆ ಮಾಡುತ್ತದೆ, ಇದು. ಗ್ರೀಸ್ ಮತ್ತು ರೋಮ್‌ಗಳು ಈ ಜಗತ್ತಿನ ರಂಗಸ್ಥಳದಲ್ಲಿ ಅತ್ಯಂತ ವೈಭವದಿಂದ, ಶಕ್ತಿಯುತವಾಗಿ ತಮ್ಮ ಪಾತ್ರವನ್ನು ಪ್ರದರ್ಶಿಸಿದುವು. ಅವಕ್ಕೂ ಬಹು ಪೂರ್ವದಲ್ಲಿ ಬ್ಯಾಬಿಲೋನಿಯಾ ಮತ್ತು ಈಜಿಪ್ಟ್‌ಗಳಿದ್ದುವು. ಇಂದು ಇಂಗ್ಲೆಂಡು ಆಗಲೇ ಇಳಿಕೆಯ ಮಾರ್ಗದಲ್ಲಿದೆ. ಅಮೆರಿಕಾ ರಷ್ಯಾಗಳೂ ಇವೆ. ಒಂದಾನೊಂದು ಕಾಲದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವುಗಳು ಇಂದು ಕಣ್ಮರೆಯಾಗಿವೆ. ರಾಜ್ಯಗಳೂ ಅವುಗಳ ಪ್ರಾಕೃತಿಕ ಲಕ್ಷಣಗಳು ಹಾಗೆಯೇ ಇವೆ, ಆದರೆ ಸಾಂಸ್ಕೃತಿಕ ನಿರಂತರತೆ ಮಾತ್ರ ನಿಂತುಹೋಗಿದೆ. ಪರಂಪರೆ ಮುರಿದುಹೋಗಿದೆ. ಪ್ರಾಚೀನ ಗ್ರೀಸ್, ರೋಮ್‌ಗಳ ಇದಿರಿನಲ್ಲಿಯೇ ಇತ್ತು ಭಾರತ ; ಜಗತ್ತಿನ ರಂಗದ ಮೇಲೆ ಹೊಸದಾಗಿ ಬರುವವರನ್ನು ಸ್ವಾಗತಿಸಲು ಭಾರತ ಈಗಲೂ ನಿಂತಿದೆ ; ಮುಂದೆ ಬರಲಿರುವ ಇತರರನ್ನೂ ಸ್ವಾಗತಿಸಲು ಮುಂದೆಯು ಸಿದ್ಧವಾಗಿರುತ್ತದೆ. ಇದು ಇತಿಹಾಸದ ಸತ್ಯಸಂಗತಿ. ಭಾರತೀಯ ಇತಿಹಾಸದ ವಿದ್ಯಾರ್ಥಿಗಳಾದ ನಾವು ಈ ಸತ್ಯಸಂಗತಿಯನ್ನು ಕುರಿತು ಅನ್ವೇಷಣೆ ಮಾಡಿ, ಅದು ನಮಗೆ ನೀಡುವ ವಿವೇಕವನ್ನು ಕಲಿಯಬೇಕಾದುದು ನಮ್ಮ ಕರ್ತವ್ಯ. ಇದು ನಮ್ಮ ಸಂಸ್ಕೃತಿಯ ಮೂಲವನ್ನೂ, ಆಕರಗಳನ್ನೂ ಕುರಿತು ಅನ್ವೇಷಿಸಲು ನಮಗೆ ಮಾರ್ಗದರ್ಶನ ನೀಡುತ್ತದೆ. ವೇದ ಮತ್ತು ಉಪನಿಷತ್ತುಗಳಿಂದ ಬಂದ ಭಾವನೆಗಳು ಶ್ರೀಕೃಷ್ಣ, ಬುದ್ಧ, ಶಂಕರ ಮತ್ತು ಇತರರ ಭಾವನೆಗಳೊಡನೆ ಸೇರಿ ಪರಿಪುಷ್ಟಿಗೊಂಡು, ನಮ್ಮ ಸಾಂಸ್ಕೃತಿಕ ಮೌಲ್ಯಗಳಿಗೆ ಸ್ಫೂರ್ತಿಮೂಲವನ್ನು ಒದಗಿಸಿವೆ. ಈ ಮೌಲ್ಯಗಳಲ್ಲಿನ ನಿಷ್ಠೆಯೇ ನಮ್ಮ ಜನ ಮತ್ತು ನಮ್ಮ ಸಂಸ್ಕೃತಿಗಳ ನಿರಂತರ ಚೈತನ್ಯಕ್ಕೆ ಕಾರಣವಾಗಿದೆ. ನಾವು ಒಂದು ಜನಾಂಗವಾಗಿ ಏಳುಬೀಳುಗಳನ್ನು ಅನುಭವಿಸಿದ್ದೇವೆ ; ಯಾವ ಬೆಳವಣಿಗೆಯೂ ನಿರಂತರವಾದುದಲ್ಲ ; ಏಳು ಬೀಳುಗಳು ಎಲ್ಲೆಲ್ಲಿಯೂ ಇವೆ. ಆದರೆ ಭಾರತದ ವಿಚಾರದಲ್ಲಿ ಇರುವ ವಿಶಿಷ್ಟ ಸಂಗತಿ ಎಂದರೆ—ಇತರರು ಕೆಳಗೆ ಬಿದ್ದು ಮತ್ತೆ ಚೇತರಿಸಿಕೊಳ್ಳುವುದೇ ಇಲ್ಲ ; ಆದರೆ ನಾವು ಬೀಳುತ್ತೇವೆ, ಮತ್ತೆ ಏಳುತ್ತೇವೆ. ಇತರರೂ ಬಾಳುತ್ತಾರೆ, ಸಾಯುತ್ತಾರೆ, ಮತ್ತೆ ಮೇಲೇಳುವುದಿಲ್ಲ ; ಭಾರತೀಯರು ಕೇವಲ ಸತ್ತಂತೆ ಕಾಣುತ್ತಾರೆ, ಮತ್ತೆ ಪರಿಪುಷ್ಟಿಗೊಂಡು ಪೂರ್ವಕ್ಕಿಂತಲೂ ಹೆಚ್ಚು ವೈಭವದಿಂದ ಮೇಲಕ್ಕೇಳುತ್ತಾರೆ. ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತಕ್ಕೆ ಬಂದ

ಕ್ರೈಸ್ತ ಪಾದ್ರಿಗಳು ಭಾರತವು ಸಾಯುತ್ತಿದೆಯೆಂದೂ ಮತ್ತೆ ಮೇಲೇಳುವುದಿಲ್ಲವೆಂದೂ ಭಾವಿಸಿದರು. ಅಮೆರಿಕಾದಲ್ಲಿ ವೈಭವಯುತವಾದ ನಾಗರಿಕತೆಯನ್ನು ಒಂದಾನೊಂದು ಕಾಲದಲ್ಲಿ ನಿರ್ಮಿಸಿದ್ದ ರೆಡ್ ಇಂಡಿಯನ್ನರೂ ಮೆಕ್ಸಿಕನರೂ ಮತ್ತು ಇಂಕಾಗಳೂ ಬಿಳಿಯ ಮನುಷ್ಯನ ಮತ್ತು ಅವನ ಧರ್ಮತತ್ತ್ವಗಳ ಸೋಂಕಿನಿಂದ ನಾಶವಾದುದನ್ನು ಕಂಡಿದ್ದ ಕ್ರೈಸ್ತ ಪಾದ್ರಿಗಳು ಅದರ ಹೋಲಿಕೆಯ ಮೇಲಿನಿಂದ ಭಾರತವೂ ಹಾಗಾಗುತ್ತದೆ ಎಂದು ಹೇಳುತ್ತಿದ್ದರು. ನಾವೂ ಕೂಡ ಈ ಪಾದ್ರಿಗಳ ನಿರ್ಣಯವನ್ನು ಒಪ್ಪಿಕೊಳ್ಳುವ ಮನೋಭಾವವುಳ್ಳವರಾಗಿಯೇ ಕಾಣಿಸುತ್ತಿದ್ದೆವು. ಆದರೆ ಇಂದು ನಾವು ಅವರೂ ಕೂಡಿಯೇ ಬೇರೆ ವಿಧವಾಗಿ ಭಾವಿಸುವಂತಾಗಿದೆ. ನಾವು ನಮ್ಮ ನಾಗರಿಕತೆ ಸಂಸ್ಕೃತಿಗಳ ವಿಚಾರದಲ್ಲಿ ಇಂದು ಕ್ಷಮಾಯಾಚನೆ ಮಾಡುವ ಸ್ಥಿತಿಯಲ್ಲಿ ಇಲ್ಲದಿರುವುದು ಮಾತ್ರವೇ ಅಲ್ಲ, ಜಗತ್ತನ್ನೇ ಆಕ್ರಮಿಸುವಂತಹ ಸ್ಥಿತಿಯಲ್ಲಿದ್ದೇವೆ. ಆಕ್ರಮಣವೆಂಬ ಮಾತನ್ನು ಇಲ್ಲಿ ಕೇವಲ ಆದರ್ಶಾರ್ಥದಲ್ಲಿ ಬಳಸಲಾಗಿದೆ. ಯಾವ ಸಂಸ್ಕೃತಿಯೇ ಆಗಲಿ, ಅದು ಉಕ್ಕಿ ಹರಿಯುತ್ತಿದ್ದರೆ ಅದನ್ನು ಜೀವಂತವೆಂದು ಕರೆಯಬಹುದು. ವಿಕಾಸವೇ ಜೀವನ, ಸಂಕೋಚವೇ ಮರಣ. ಕಳೆದ ಸಹಸ್ರ ವರ್ಷಗಳಿಂದ ನಾವು ಮೃತ್ಯುವನ್ನು ಆಹ್ವಾನಿಸುತ್ತಿದ್ದೆವು ; ನಮ್ಮ ಸುತ್ತ ಇಕ್ಕಟ್ಟಾದ ಗೋಡೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದೆವು. ಕಳೆದ ಒಂದು ನೂರು ವರುಷಗಳಿಂದ ನಾವು ಇಕ್ಕಟ್ಟಾದ ಗೋಡೆಗಳನ್ನೆಲ್ಲಾ ಕೆಡವಿಹಾಕಿದ್ದೇವೆ ; ನಾವೀಗ ಜಗತ್ತಿನ ಇದಿರಿನಲ್ಲಿ ನಿಂತು, ಭೂಮಂಡಲದ ದೂರ ದೂರದ ದೇಶಗಳಲ್ಲಿ ನಮ್ಮ ಭಾವನೆಗಳನ್ನು ಪ್ರಸಾರ ಮಾಡುತ್ತಿದ್ದೇವೆ. ಪ್ರಾಚೀನಕಾಲದ ಅದೇ ಜನ, ಪ್ರಾಚೀನವಾದ ಅದೇ ಸಂಸ್ಕೃತಿ ; ಆದರೆ ಅದು ಪುನರುಜ್ಜೀವನಗೊಂಡು ಸಶಕ್ತವಾಗಿದೆ. ಇದು ಗಮನಾರ್ಹವಾದುದು. ಇತರ ದೇಶಗಳು ಗಲಭೆ ಎಬ್ಬಿಸಿ, ನಿದ್ರೆಮಾಡಹೊರಟು ಸತ್ತೇ ಹೋಗುತ್ತವೆ ; ನಾವಾದರೋ, ನಿದ್ರೆಮಾಡಹೋದವರು ಮತ್ತೆ ಮೇಲಕ್ಕೆದ್ದು ಪುನರುಜ್ಜೀವನಗೊಂಡ ಶಕ್ತಿಯೊಡನೆ ಜಗತ್ತನ್ನು ಇದಿರಿಸುತ್ತೇವೆ.

## ೮. ಶ್ರೀಕೃಷ್ಣನ ದಿವ್ಯ ವ್ಯಕ್ತಿತ್ವ

ನಮ್ಮ ಇತಿಹಾಸವನ್ನು ತೆಗೆದುಕೊಳ್ಳಿ. ನಾವು ಅಲ್ಲಿ ನೋಡುವುದೇನು ? ಸುಮಾರು ಸಹಸ್ರ ವರ್ಷಕ್ಕೊಮ್ಮೆ ಮಹಾಪುರುಷನೊಬ್ಬನು ಹುಟ್ಟುತ್ತಾನೆ. ಹಾಗೆ ಹುಟ್ಟಿದ ಪ್ರತಿಯೊಬ್ಬನೂ, ಆಯಾ ಕಾಲದ ಅಗತ್ಯಕ್ಕೆ ತಕ್ಕಂತೆ ಪ್ರಾಧಾನ್ಯತೆ ನೀಡುವುದರಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಮಾಡಿದರೂ, ಅದೇ ಪ್ರಾಚೀನ ಆದರ್ಶಗಳ ಶಕ್ತಿಯನ್ನು ಪುನರುಜ್ಜೀವನಗೊಳಿಸುತ್ತಾನೆ. ಆದ್ದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಅವಿಚ್ಛಿನ್ನವಾದ ನಿರಂತರತೆ ಇರುವುದು. ಭಾರತವು ಅನೇಕ ವ್ಯತ್ಯಯಗಳಿಗೆ ಸಿಕ್ಕಿಯೂ ಉಳಿದುಕೊಂಡು ಬಂದಿದೆ. ಇದು ನಮ್ಮನ್ನು ನಮ್ರರನ್ನಾಗಿ ಮಾಡಬೇಕು. ನಮ್ಮ ಸಂಸ್ಕೃತಿ ಅಳಿಯದೆ ಉಳಿದುಕೊಂಡು ಬಂದಿರುವುದು ಸಾಕ್ಷಾತ್ ಭಗವಂತನ ಅವತಾರಪುರುಷರೆಂದು ನಾವು ಭಾವಿಸಿರುವ ಈ ಮಹಾಪುರುಷರಿಂದಲೇ ಎಂಬುದನ್ನು ನಾವು ಸದಾ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಮಹಾಪುರುಷರನ್ನು ಅವತಾರ ಪುರುಷರೆಂದೋ ಅಲ್ಲವೆಂದೋ, ನಾವು ಯಾವ ಭಾವನೆಯನ್ನೇ ತಾಳಲಿ, ರಾಷ್ಟ್ರಜೀವನವು ಅತ್ಯಂತ ಅವನತಿಗಿಳಿದಾಗ ಅವರು ಹುಟ್ಟಿ ಬರುತ್ತಾರೆ. ಅವರ ಒಂದು ಸ್ಪರ್ಶದಿಂದ ಸತ್ತೇ ಹೋದಂತಿದ್ದ ರಾಷ್ಟ್ರದ ಮೂಳೆ, ಮಾಂಸಖಂಡಗಳಲ್ಲಿ ಹೊಸ ಜೀವ ಸಂಚರಿಸುತ್ತದೆ. ದೇವನೊಬ್ಬನೇ ಜೀವವನ್ನು ಕೊಡಬಲ್ಲವನು, ಅವರನ್ನು ದೇವರೆಂದಾದರೂ ಕರೆಯಿರಿ, ದೇವಮಾನವರೆಂದಾದರೂ ಕರೆಯಿರಿ ; ಅವರು ಮಾನವರ ಸತ್ತ ಮೂಳೆ ಮಾಂಸಖಂಡಗಳೊಳಕ್ಕೆ ಹೊಸ ಜೀವವನ್ನು ತುಂಬುತ್ತಾರೆ. ಅಂತಹ ಮಹಾಪುರುಷರಲ್ಲಿ ಶ್ರೀಕೃಷ್ಣನು ಒಬ್ಬ.

ಇಡೀ ಭಾರತದ ಇತಿಹಾಸದಲ್ಲಿ ಶ್ರೀಕೃಷ್ಣನಷ್ಟು ವರಿಷ್ಠನಾದ, ಶ್ರೇಷ್ಠನಾದ, ಚೈತನ್ಯಾತ್ಮಕನಾದ

ಮತ್ತೊಬ್ಬ ಮಹಾಪುರುಷನು ನಮಗೆ ಕಾಣಬರುವುದಿಲ್ಲ. ಮಹಾಭಾರತವನ್ನು ಓದಿದರೆ ಈ ಮಾತಿನ ಸತ್ಯ ಗೊತ್ತಾಗುತ್ತದೆ. ಶ್ರೀಕೃಷ್ಣನಲ್ಲಿ ಎಲ್ಲರಿಗೂ ಪ್ರೇಮ. ಆತನು ಇಂದ್ರಪ್ರಸ್ಥಕ್ಕೆ (ಇಂದಿನ ದೆಹಲಿಯೇ ಅಂದಿನ ಇಂದ್ರಪ್ರಸ್ಥ) ಬಂದಾಗ ಆತನನ್ನು ಅಭಿನಂದಿಸುವುದಕ್ಕಾಗಿ ಸಹಸ್ರಾರು ಜನ ಸೇರುವುದನ್ನು ನೀವು ಕಾಣುತ್ತೀರಿ. ಇಂದು ನಮ್ಮ ರಾಷ್ಟ್ರನಾಯಕರನ್ನು ಸ್ವಾಗತಿಸುವುದಕ್ಕಾಗಿ ಕಿಕ್ಕಿರಿದು ನೆರೆಯುವಂತೆಯೇ, ಅಂದು ಶ್ರೀಕೃಷ್ಣನು ನಗರದ ಬೀದಿಗಳಲ್ಲಿ ನಡೆದು ಬರುತ್ತಿರುವಾಗ ಜನರು, ಅಡ್ಡಗೋಡೆಗಳ ಮೇಲೆಲ್ಲಾ ತುಂಬಿಕೊಂಡಿರುತ್ತಿದ್ದರು, ಕಿಟಕಿಗಳಿಂದ ಇಣುಕಿ ನೋಡುತ್ತಿದ್ದರು, ಆತನ ಮೇಲೆ ಹೂಮಳೆಯನ್ನು ಕರೆಯುತ್ತಿದ್ದರು. ಋಷಿಯಿಂದ ಹಿಡಿದು ರೈತನವರೆಗೂ ಎಲ್ಲರಿಗೂ ಆತನಲ್ಲಿ ಬಹುಭಕ್ತಿ. ಆತನು ಕ್ಷತ್ರಿಯರಲ್ಲಿ ಅಗ್ರಗಣ್ಯ, ಆದರೂ ಆತ ವಿನಮ್ರ. ತಾನು ಮಹಾಕಾರ್ಯ ವಾವುದನ್ನಾದರೂ ಕೈಕೊಳ್ಳುವ ಮುನ್ನ ಧರ್ಮಶೀಲರಾದವರ ಬಳಿಗೆ ಹೋಗಿ ನಮಸ್ಕರಿಸುತ್ತಾನೆ. ದರಿದ್ರರಿಗೂ ದಿಕ್ಕಿಲ್ಲದವರಿಗೂ ಆತನು ಗೆಳೆಯ. ಆತನು ಇಂದ್ರಪ್ರಸ್ಥಕ್ಕೆ ಬಂದಾಗ ದುರ್ಯೋಧನನ ಅರಮನೆಯ ಚಕ್ರವರ್ತಿ ವೈಭವವನ್ನು ಒಲ್ಲದೆ ಬಡವನಾದ ವಿದುರನ ಮನೆಯಲ್ಲಿ ತಂಗುತ್ತಾನೆ. ಆತನು ಮಹಾ ಬಲಶಾಲಿ, ರಾಜರೆಲ್ಲ ಆತನಿಗೆ ತಲೆಬಾಗುತ್ತಾರೆ ; ಆದರೂ ಆತನಿಗೆ ಯಾವ ರಾಜ್ಯಾಧಿಪತ್ಯವೂ ಬೇಡ. ಆತನೊಬ್ಬ ಗೋಪಾಲ, ಕೀಳುಗೊಲ್ಲರ ಪ್ರೇಮಕ್ಕೆ ಪಾತ್ರನಾದ ಒಬ್ಬ ಗೊಲ್ಲ. ಆತನನ್ನು ಕಂಡರೆ ಹುಡುಗರು-ಮುದುಕರು, ಗಂಡಸರು-ಹೆಂಗಸರು, ಪಂಡಿತರು-ಪಾಮರರು ಎಲ್ಲರಿಗೂ ಪರಮಪ್ರೇಮ. ಆತನ ಕಾಲದ ಭಾರತದಲ್ಲಿ ಎಲ್ಲೆಲ್ಲಿಯೂ ಶ್ರೀಕೃಷ್ಣನ ಪ್ರಭಾವ ಹಬ್ಬಿರುವುದು ನಮಗೆ ಕಾಣಬರುತ್ತದೆ. ಜನಸಮುದಾಯದ ಪ್ರತಿಯೊಂದು ವರ್ಗದಲ್ಲಿಯೂ ಆತನ ಸಾನ್ನಿಧ್ಯದ ಅನುಭವವಾಗುತ್ತಿತ್ತು.

ಶ್ರೀಕೃಷ್ಣನು ಸಮರ್ಥನಾದ ವ್ಯಕ್ತಿಯಾಗಿದ್ದನು. ಆತನ ಉಪದೇಶವು ಸತ್ವಯುಕ್ತವಾಗಿತ್ತು. ಆತನ ಉಪದೇಶವೆಂದರೆ ಶಕ್ತಿದಾಯಕವಾದ ಭಾವನೆಗಳ ಸಮೂಹ. ನಾವು ಈ ಗುಣವುಳ್ಳ ಶ್ರೀಕೃಷ್ಣನನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿಯವರೆಗೆ ಇದ್ದವನು ನಮ್ಮ ಕಣ್ಣೀರನ್ನು ಸುರಿಸುವ, ನಮ್ಮ ಮೃದು ಭಾವಗಳನ್ನು ಹೊರಸೆಳೆಯುವ ಕೃಷ್ಣನು ಮಾತ್ರ. ಆದರೆ ಗೀತೆಯ ಕೃಷ್ಣನು ಜನರನ್ನು ಉದ್ಧರಿಸಿ ಅವರನ್ನು ಶಕ್ತಿವಂತರನ್ನಾಗಿ ಮಾಡುತ್ತಾನೆ. ತನ್ನ ಸುದರ್ಶನ ಚಕ್ರದೊಡನೆ ಬಂದು, ಅಧಃಪತನಗೊಂಡಿರುವ ಭಾರತವನ್ನು ಉದ್ಧರಿಸುವಂತೆ ಶ್ರೀಕೃಷ್ಣನನ್ನು ಬೇಡುವ ಬಂಗಾಳಿ ಹಾಡೊಂದಿದೆ :

ಅವನತ ಭಾರತ ಚಾಹೆ ತೊಮಾರ
ಏಶೋ ಸುದರ್ಶನ ಧಾರಿ ಮುರಾರಿ

ಇದು ಗೀತೆಯ ಶ್ರೀಕೃಷ್ಣನ ಚಿತ್ರ.

## ೯. ಭಾರತೀಯ ಸಂಸ್ಕೃತಿಯಲ್ಲಿ ಶ್ರೀಕೃಷ್ಣನ ವೈಶಿಷ್ಟ್ಯ

ಈ ದೇಶದ ಸಂಸ್ಕೃತಿಯ ಪ್ರತಿಯೊಂದು ಮುಖದ ಮೇಲೂ ಪ್ರಭಾವಮುದ್ರೆಯನ್ನು ಒತ್ತಿರುವ ಮಹಾಪುರುಷ ಆತ. ಶ್ರೀಕೃಷ್ಣನನ್ನು ತೆಗೆದುಹಾಕಿದರೆ ನಮ್ಮ ಸಂಸ್ಕೃತಿಯಲ್ಲಿ ಬೆಲೆಯಾದುದೆಲ್ಲವೂ ಮಾಯವಾಗುತ್ತದೆ. ನಮ್ಮ ಕಲೆ, ಸಾಹಿತ್ಯ, ಸಂಗೀತ, ವರ್ಣಚಿತ್ರ, ಶಿಲ್ಪ, ಜನಪದ ನೃತ್ಯ ಇತ್ಯಾದಿ ಇತ್ಯಾದಿಗಳಲ್ಲೆಲ್ಲಾ ಆತನ ಪ್ರಭಾವಮುದ್ರೆಯಿದೆ. ಅನೇಕ ಪರದೇಶೀಯರು ಶ್ರೀಮಂತವಾದ ನಮ್ಮ ಭಾರತ ಸಂಸ್ಕೃತಿಯನ್ನು ಕಂಡು ಅಚ್ಚರಿಗೊಳ್ಳುತ್ತಾರೆ. ಈ ಸಂಸ್ಕೃತಿಯು ವೇದಗಳ ಮಸುಕು ಮಸುಕಾದ ಪ್ರಾಚೀನತೆಯಲ್ಲಿ ಒಂದು ಸಣ್ಣ ಕಾಲುವೆಯಾಗಿ ಹುಟ್ಟಿತು ; ಇತಿಹಾಸದ ಸಹಸ್ರಾರು ವರ್ಷಗಳಲ್ಲಿ ಅದು ತಡೆಯಿಲ್ಲದೆ ಹರಿದು ಬರುತ್ತಾ, ಹಲವು ಉಪನದಿಗಳಿಂದ ಶಕ್ತಿ ಶ್ರೀಮಂತಿಕೆಗಳ

ವೃದ್ಧಿಯನ್ನು ಪಡೆದಿದೆ. ಇಂದು ಅದು ಸಾರಭೂತವಾದ ತನ್ನ ಸ್ವರೂಪದಲ್ಲಿ ಸದ್ಗುಣ, ಪರಿಶುದ್ಧತೆ, ಮತ್ತು ಶಕ್ತಿಗಳಿಂದ ತುಂಬಿ ತುಳುಕುತ್ತಿರುವ ಒಂದು ದೊಡ್ಡ ಸಮುದ್ರವಾಗಿದೆ. ಶ್ರೀಮಂತವಾಗಿರುವ ಈ ಸಂಸ್ಕೃತಿ ಎಂಬ ಆಸ್ತಿಗೆ ತಾನು ಭಾಗಿಯಾಗಿರುವುದಕ್ಕಾಗಿ ಪ್ರತಿಯೊಬ್ಬ ಹಿಂದುವೂ ಹೆಮ್ಮೆ ಗೊಳ್ಳುತ್ತಿರುವುದು ನ್ಯಾಯವಾಗಿಯೇ ಇದೆ. ಈ ಸಂಸ್ಕೃತಿಯನ್ನು ಶಕ್ತಿಯುತವಾಗಿ ಶ್ರೀಮಂತ ಗೊಳಿಸಿದ ಮಹಾಪುರುಷರಲ್ಲಿ ಶ್ರೀಕೃಷ್ಣನು ಒಬ್ಬನು. ಮಾನವ ಜನಾಂಗವನ್ನು, ಹಿಂದು, ಮುಸಲ್ಮಾನ್, ಕ್ರೈಸ್ತ ಎಂದು ವಿಭಾಗಿಸಬೇಕೆಂಬ ಭಾವನೆಯ ಕನಸು ಕಾಣುವುದಕ್ಕಿಂತ ಬಹಳ ಮುಂಚೆಯೇ ಆತನು ಜೀವಿಸಿದ್ದನು. ಆದ್ದರಿಂದ ಹಿಂದೂ, ಮುಸಲ್ಮಾನ್, ಕ್ರಿಶ್ಚಿಯನ್ ಅಥವಾ ಮತ್ತಾವನೇ ಆಗಿರಲಿ, ಈ ದೇಶದ ಮಕ್ಕಳೆಲ್ಲರಿಗೂ ಸೇರಿದವನು, ಶ್ರೀಕೃಷ್ಣ. ಜಾತಿ ಮತ ಪಂಥ ಗಳ ವ್ಯತ್ಯಾಸವಿಲ್ಲದೆ, ಈ ದೇಶದ ಪ್ರತಿಯೊಬ್ಬನೂ ಶ್ರೀಕೃಷ್ಣ, ಬುದ್ಧ, ಶಂಕರರನ್ನು ಈ ರಾಷ್ಟ್ರದ ಮನಸ್ಸನ್ನು ರೂಪಿಸಿದ ಶಿಲ್ಪಿಗಳೆಂದೂ, ಯಾವುದೊಂದು ತಾರತಮ್ಯವೂ ಇಲ್ಲದೆ ಇಡೀ ಭಾರತ ಜನಾಂಗಕ್ಕೆ ಶ್ರೀಮಂತವಾದ ಸಂಸ್ಕೃತಿಯ ಆಸ್ತಿಯನ್ನು ನೀಡಿದ ಮಹಾನುಭಾವರೆಂದೂ ಅರ್ಥಮಾಡಿ ಕೊಳ್ಳುವ ಕಾಲವೊಂದು ಬರುತ್ತದೆ. ಈ ಸಂಸ್ಕೃತಿಯು ಎಲ್ಲ ಕೋಮಿನವರಿಗೂ ಸೇರಿದ ಆಸ್ತಿ. ಕೇವಲ ಈಗ ಕೆಲವು ದಿವಸಗಳ ಕೆಳಗೆ ಇಂಡೋನೇಷ್ಯಾದ ಡಾ|| ಸುಕರ್ನೋರವರು ಮದ್ರಾಸಿನ 'ಹಿಂದೂ' ಪತ್ರಿಕೆಗೆ ಬರೆದ ಲೇಖನವೊಂದರಲ್ಲಿ ಇಂಡೋನೇಷಿಯಾದ ಪ್ರತಿಯೊಬ್ಬನ ರಕ್ತದಲ್ಲಿಯೂ ಭಾರತ ಸಂಸ್ಕೃತಿ ಇದೆ ಎಂದು ಹೇಳಿದ್ದಾರೆ. ಆದ್ದರಿಂದ ಭಾರತದ ಪ್ರತಿಯೊಬ್ಬನೂ ಆ ಪ್ರಾಚೀನ ಸಂಸ್ಕೃತಿಯನ್ನು ತನ್ನದೆಂದು ಹೇಳಿಕೊಂಡು, ಸ್ಫೂರ್ತಿಗೂ ಮಾರ್ಗದರ್ಶನಕ್ಕೂ ಆ ಸಂಸ್ಕೃತಿಯತ್ತ ನೋಡುವಂತಹ ಕಾಲ ಬರುವುದೆಂದು ಊಹಿಸುವುದು ಬಹಳ ಕಷ್ಟವೇನೂ ಅಲ್ಲ.

ನಾವು ನಮ್ಮ ನಿಜವಾದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಾಗ ನಮ್ಮ ಸಂಸ್ಕೃತಿಯಲ್ಲಿ ಶ್ರೀಕೃಷ್ಣನ ಪಾತ್ರವೇನೆಂಬುದೂ ಅರ್ಥವಾಗುತ್ತದೆ. ಮಹಾಭಾರತದ ಶ್ರೀಕೃಷ್ಣನು ಅದ್ಭುತ ತತ್ತ್ವವೇತ್ತ ನಾಗಿರುವಂತೆ ಮಹಾಕರ್ಮಯೋಗಿಯೂ ಆಗಿದ್ದಾನೆ. ಆದರೂ ಆತನು ಸಂಪೂರ್ಣ ಅನಾಸಕ್ತನಾಗಿದ್ದ ವನು. ಆತನು ನಾಡಿನ ಬಲಿಷ್ಠರು, ಋಷಿಗಳು, ಮಹಿಳೆಯರು, ಮಕ್ಕಳು, ರೈತರು ಮೊದಲಾದ ಪ್ರತಿಯೊಬ್ಬರ ಗೌರವಕ್ಕೂ ಪಾತ್ರನಾಗಿದ್ದನು.

## ೧೦. ಗೀತೆ—ಮಹಾಚಾರ್ಯನ ಮಹತ್ತರವಾದ ಸಂದೇಶ

ಅಂತಹ ಮಹಾ ಶಕ್ತಿವಂತನಾದ, ಚೈತನ್ಯಾತ್ಮಕವಾದ ವ್ಯಕ್ತಿಯ ಉಪದೇಶ, ಗೀತೆಯೆಂಬುದು. ಆತನು ತನ್ನ ಮಹತ್ ಶಕ್ತಿಯನ್ನೂ ಚೈತನ್ಯವನ್ನೂ ತನ್ನ ಉಪದೇಶಗಳಲ್ಲಿ ತುಂಬಿದ್ದಾನೆ. ಅಂತಹ ಚೈತನ್ಯಯುಕ್ತವಾದ ಉಪದೇಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಶಕ್ತಿಯಲ್ಲಿ ಸ್ವಲ್ಪವಾದರೂ ನಾವು ಪಡೆದಿದ್ದಾಗ ಮಾತ್ರ ಸಾಧ್ಯ. ಸಣ್ಣ ಜನ ಭವ್ಯ ಭಾವನೆಗಳನ್ನೆತ್ತಿಕೊಂಡಾಗ ಅದರ ಎತ್ತರಕ್ಕೆ ಅವರು ಏರಲಾರರಾದ್ದರಿಂದ ಅದನ್ನು ಅವರು ತಮ್ಮ ಸ್ವಂತ ಮಟ್ಟಕ್ಕೆ ಇಳಿಸುತ್ತಾರೆ. ಈಗ ಸಹಸ್ರ ವರ್ಷಗಳಿಂದಲೂ ನಾವು ಕೋಮಲ ಭಾವದ ಸಾಹಿತ್ಯವನ್ನು ಬಿಟ್ಟು ಬೇರಾವುದನ್ನೂ ಸೃಷ್ಟಿ ಮಾಡಿಲ್ಲ. ಸ್ವಾಮಿ ವಿವೇಕಾನಂದರು ಹೇಳುವಂತೆ ದೇಶವು ಕೋಮಲ ಭಾವಗಳನ್ನು ಬಯಸಿತು ; ಅದರ ಫಲವಾಗಿ ಕಳೆದ ಸಹಸ್ರ ವರ್ಷಗಳಲ್ಲಿ ಹುಟ್ಟಿದ ಸಾಹಿತ್ಯವೆಲ್ಲಾ ಬಹುಮಟ್ಟಿಗೆ, ಹಿಂಡಿದರೆ ಕಣ್ಣೀರನ್ನು ಮಾತ್ರ ಸುರಿಸುವಂತಹ ಸಾಹಿತ್ಯವಾಯಿತು. ಈ ಸಾಹಿತ್ಯ ಸೃಷ್ಟಿಕರ್ತರ ಕೈಲಿ ಗೀತೆಯೂ ತನ್ನ ಮಹತ್‌ಶಕ್ತಿಯನ್ನೂ ಕಳೆದುಕೊಂಡಿತು. ಶ್ರೀಕೃಷ್ಣನು ತನ್ನ ಉಪದೇಶದಲ್ಲಿ ಯಾವ ಬಗೆಯಾದ ದೌರ್ಬಲ್ಯಕ್ಕಾಗಲೀ, ಭಾವಾತಿರೇಕಕ್ಕಾಗಲಿ ಎಡೆಯಿತ್ತಿಲ್ಲ. ಅರ್ಜುನನನ್ನು ಛೀಗುಟ್ಟುವುದ ಕ್ಕಾಗಿ 'ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ' (ಈ ವಿಷಮ ಸಂದರ್ಭದಲ್ಲಿ ಇದೇನು ದೌರ್ಬಲ್ಯ

ನಿನಗೆ ?) ಎಂದು ಹೇಳುವುದು ಆರಂಭದ ಶ್ಲೋಕವಾಗಿದೆ. ಉಪನಿಷತ್ತುಗಳು ಮತ್ತು ಗೀತೆಯು ಶಕ್ತಿಯ ವಿಚಾರವನ್ನು ಮಾತ್ರ ಹೇಳುತ್ತವೆ. ಸ್ವಾಮಿ ವಿವೇಕಾನಂದರು 'ಉಪನಿಷತ್ತುಗಳು ಪ್ರತಿಯೊಂದು ಪುಟದಲ್ಲಿಯೂ ನನಗೆ ಶಕ್ತಿ, ಶಕ್ತಿ ಎಂದು ಹೇಳುತ್ತವೆ' ಎಂದು ಹೇಳುತ್ತಾರೆ. ದುರ್ಬಲವಾದ ಮನಸ್ಸುಗಳಿಗೆ ಮಹಾ ಬಲಯುಕ್ತವಾದ ಭಾವಗಳು ಅರ್ಥವಾಗುವುದಿಲ್ಲ, ಹಿಡಿಸುವು ದಿಲ್ಲ. ಅವುಗಳನ್ನು ನಿರೂಪಿಸಬೇಕೆಂಬ ಪ್ರಯತ್ನದಲ್ಲಿ ಅವರು ತಮ್ಮ ಸಣ್ಣತನದಿಂದ ಆ ಭಾವ ಗಳನ್ನು ನಿಸ್ಸಾರವಾಗಿ ಮಾಡುತ್ತಾರಷ್ಟೆ. ಆದರೆ ನಾವು ಸ್ವಲ್ಪ ಶಕ್ತಿಯನ್ನೂ ಮತ್ತು ಸತ್ತ್ವವನ್ನೂ ನಮ್ಮಲ್ಲಿ ಬೆಳಸಿಕೊಂಡುದಾದರೆ ಜೀವನದ ಪ್ರತಿಯೊಂದು ಸಂದರ್ಭದಲ್ಲಿಯೂ ನಮ್ಮನ್ನು ತಾಳ್ಮೆ ಯಿಂದ ನಿಲ್ಲಿಸುವ ಯಾವುದೋ ಒಂದನ್ನು ನಾವು ಗೀತೆಯಲ್ಲಿ ಕಂಡುಕೊಳ್ಳುತ್ತೇವೆ. ಕೇವಲ ನರಗಳಿಗೆ ಉಪಶಮನ ಬೇಕೆನ್ನುವವರಿಗೂ, ಜೀವನದಲ್ಲಿ ಕಷ್ಟಕರವಾದ ಘಟ್ಟಗಳನ್ನೂ ಇದಿರಿಸಲು ಭಯ ಪಡುವವರಿಗೂ ಪ್ರಿಯವಾದ ಸಾಮಗ್ರಿ ಪುರಾಣಗಳಲ್ಲಿ ಬೇಕಾದಷ್ಟಿದೆ. ಆದರೆ ಯಾರು ಕಷ್ಟ ದಿಂದ ಹೋರಾಡುತ್ತಾ, ಉತ್ತಮ ಜೀವನವನ್ನು ನಡೆಸುವುದಕ್ಕೆ ಅಗತ್ಯವಾದ ಚಾಲನಶಕ್ತಿ ಬೇಕೆನ್ನು ತ್ತಾರೆಯೋ, ಯಾರು ತಮ್ಮ ಹೊಣೆಹೊರೆಗಳನ್ನು ವಹಿಸಲು ಸಿದ್ಧವಾಗಿರುತ್ತಾರೆಯೋ ಅಂತಹವರಿಗೆ ಗೀತೆಯಲ್ಲಿ ಬೇಕಾದಷ್ಟು ಸಾಮಗ್ರಿ ಇದೆ. ಬಲಿಷ್ಠರಾದವರಿಗೆ ಮಾತ್ರ ಗೀತೆಯ ಬೆಲೆ ಅರ್ಥವಾಗ ಬಲ್ಲದು. ಸ್ವಾಮಿ ವಿವೇಕಾನಂದರು ಹೇಳುವಂತೆ 'ಆನೆಗೆ ಮಾತ್ರ ಸಿಂಹದ ಬಲ ಗೊತ್ತು, ಸೊಳ್ಳೆಗಲ್ಲ.' ಗೀತೆ ಇರುವುದು ನಮ್ಮನ್ನು ಲಾಲಿ ಹೇಳಿ ಮಲಗಿಸುವುದಕ್ಕಲ್ಲ ; ಆದರೆ ನಿದ್ರೆಯಿಂದ ಮತ್ತು ಸೋಮಾರಿತನದಿಂದ ನಮ್ಮನ್ನು ಬಡಿದೆಬ್ಬಿಸಿ ಮಹೋನ್ನತವಾದ ಆತ್ಮಸಾಕ್ಷಾತ್ಕಾರ ಮತ್ತು ಆತ್ಮಾಭಿವ್ಯಕ್ತತೆಯ ಕಡೆ ನಮ್ಮನ್ನು ಹುರಿದುಂಬಿಸಲಿಕ್ಕಾಗಿ. ಗೀತೆಯ ಶ್ಲೋಕಗಳಲ್ಲಿ ನಮ್ಮನ್ನು ಪುಷ್ಟಿಗೊಳಿಸುವ ಮತ್ತು ಹೊಸ ರೀತಿಯಲ್ಲಿ ನಾವು ಆಲೋಚಿಸುವಂತೆ ಮಾಡುವ ಶಕ್ತಿ ಇದೆ ; ಅವು ನಮ್ಮನ್ನು ಹಳೆಯ ಜಾಡಿನಲ್ಲಿ ಹೋಗಗೊಡುವುದಿಲ್ಲ.

## ೨. ಅರ್ಜುನನ ಶಿಷ್ಯವೃತ್ತಿಯ ಪ್ರಥಮ ಪಾಠಗಳು

### ೧೧. ಗೀತೆಯ ಮೊದಲ ಅಧ್ಯಾಯ ಕುರಿತು

ಹೋದ ಸಲ ಗೀತೋಪದೇಶದ ಸನ್ನಿವೇಶಕ್ಕೆ ಸಂಬಂಧಿಸಿದ ಕೆಲವು ಮುಖಗಳನ್ನು ಕುರಿತು ಮಾತ್ರವಲ್ಲದೆ ಹಿಂದೂಧರ್ಮಗ್ರಂಥಗಳಲ್ಲಿ ಗೀತೆಯ ಸ್ಥಾನವೇನೆಂಬುದನ್ನೂ ಕುರಿತು ನಾವು ವಿವೇಚಿಸಿದೆವು. ಆ ಸಂದರ್ಭದಲ್ಲಿ ಗೀತೋಪದೇಶದಲ್ಲಿರುವ ವಿಶೇಷ ಗುಣಗಳನ್ನೂ, ಅದನ್ನು ಬೋಧಿಸಿದ ಶ್ರೀಕೃಷ್ಣನ ವ್ಯಕ್ತಿತ್ವವನ್ನೂ ನಾನು ನಿಮ್ಮ ಗಮನಕ್ಕೆ ತಂದೆ. ಅದು ಕೇವಲ ಗೀತಾಧ್ಯಯನಕ್ಕೆ ಒಂದು ಮುನ್ನುಡಿ ರೂಪವಾಗಿ ಮಾತ್ರ ಇತ್ತು. ಇಂದು ನಾವು ವಿಷಯದೊಳಕ್ಕೇ ಪ್ರವೇಶಿಸೋಣ. ಆದರೆ ಹಾಗೆ ಮಾಡುವ ಮುನ್ನ ಇಡೀ ಪುಸ್ತಕಕ್ಕೆ ಒಂದು ಬಗೆಯ ಪ್ರಸ್ತಾವನೆ ಯಂತಿರುವ ಪ್ರಥಮಾಧ್ಯಾಯದಲ್ಲಿ ಸ್ವಲ್ಪ ತಂಗೋಣ.

ಪ್ರಥಮೋಧ್ಯಾಯದಲ್ಲಿ ಗೀತೋಪದೇಶ ಮಾಡಿದ ಸನ್ನಿವೇಶ ಬರುತ್ತದೆ. ಅದೊಂದು ನಾಟಕೀಯವಾದ ಹಿನ್ನೆಲೆಯನ್ನು ನಾವಲ್ಲಿ ನೋಡುತ್ತೇವೆ. ಪ್ರಾಚೀನ ಭಾರತದ ಇತಿಹಾಸದಲ್ಲಿ ಸುಪ್ರಸಿದ್ಧವಾಗಿರುವ ಕೌರವ ಪಾಂಡವರ ಮಧ್ಯೆ ನಡೆದ ಆ ಕುರುಕ್ಷೇತ್ರ ಮಹಾರಣರಂಗದಲ್ಲಿ ಯೋಧಾಗ್ರಣಿಯಾದ ಅರ್ಜುನನು ತನ್ನ ಸಾರಥಿಯಾದ ಶ್ರೀಕೃಷ್ಣನೊಡನೆ ಯುದ್ಧಸನ್ನದ್ಧವಾಗಿರುವ ಎರಡು ಸೈನ್ಯಗಳ ಮಧ್ಯದಲ್ಲಿ ನಿಂತು, ಎರಡೂ ಕಡೆಯ ಯೋಧರನ್ನು ನೋಡುತ್ತಾನೆ. ಆಗ ಇದ್ದಕ್ಕಿದ್ದಂತೆಯೇ ಉದ್ರೇಕಕರವಾದ ಒಂದು ಸನ್ನಿವೇಶವು ಹುಟ್ಟಿಕೊಳ್ಳುತ್ತದೆ. ತನ್ನ ಸ್ವಂತ ಬಂಧು ಬಾಂಧವರೇ ತನ್ನನ್ನು ಇದಿರಿಸುವವರಾಗಿರುವುದನ್ನು ಕಂಡು ಅರ್ಜುನನು ದುಃಖದಲ್ಲಿ ಮುಳುಗಿ

ಹೋಗುತ್ತಾನೆ. ಅವನ ನಾಡಿಗಳ ಮಿಡಿತ ಕುಗ್ಗುತ್ತದೆ. ತನ್ನ ಆತ್ಮೀಯರೊಡನೆ ಯುದ್ಧ ಮಾಡುವುದು ಬೇಡವೆಂದು ನಿರ್ಧರಿಸಿ, ತನ್ನ ಗಾಂಡೀವ ಮಹಾ ಧನುಸ್ಸನ್ನು ಅವನು ಕೆಳಗಿಡುತ್ತಾನೆ. ಅವನಿಗೆ ಒಂದು ಬಗೆಯ ಜುಗುಪ್ಸೆಯಾಗಿ, ತಾನು ಯುದ್ಧ ಮಾಡುವುದಿಲ್ಲವೆಂದು ನಿಶ್ಚೈಸುತ್ತಾನೆ. ತನ್ನ ಶತ್ರುಗಳೊಡನೆ ಯುದ್ಧ ಮಾಡಿ ಗೆಲ್ಲುವ ಪ್ರಯತ್ನವನ್ನು ಕೈಬಿಡುವುದೇ ಒಳ್ಳೆಯದು, ಅದೇ ಹೆಚ್ಚು ಧರ್ಮಯುಕ್ತವಾದುದು ; ಪ್ರತಿಭಟನೆಯನ್ನು ಮುರಿದು ಯುದ್ಧಕ್ಕೆ ಮುನ್ನುಗ್ಗುವುದಕ್ಕಿಂತಲೂ ಶತ್ರುವಿಗೆ ಸೋತು ಹತನಾಗುವುದು ಮೇಲು—ಎಂದು ಅವನು ಭಾವಿಸುತ್ತಾನೆ. ಇದು ಗೀತೆಯ ಪ್ರಥಮಾಧ್ಯಾಯದಲ್ಲಿ ಅತ್ಯಂತ ಪರಿಣಾಮಕಾರಿಯಾಗುವಂತೆ ಚಿತ್ರಿತವಾಗಿರುವ ಮರ್ಮಭೇದಕ ದೃಶ್ಯ. ಆವೇಶ-ಆದರ್ಶ, ಪ್ರೇಮ-ಕರ್ತವ್ಯ, ಇವುಗಳ ಒಂದು ಆಂತರಿಕ ಹೋರಾಟವದು. ಎಲ್ಲವೂ ಆಂತರಿಕ ಹೋರಾಟ ಮತ್ತು ಯುದ್ಧಗಳ ವಾತಾವರಣ—ಒಳಗೂ ಯುದ್ಧ, ಸುತ್ತಲೂ ಯುದ್ಧ.

ಇಂತಹ ಸನ್ನಿವೇಶ ಹುಟ್ಟಿಕೊಂಡಾಗಲೆಲ್ಲ ಪರಿಣಾಮಕಾರಿಯಾದ ಸಾಧ್ಯತೆಗಳು ಅದರಲ್ಲಿ ತುಂಬಿಕೊಂಡಿರುತ್ತವೆ. ಉತ್ಕಟ ಸ್ಥಿತಿಯು ಸೃಷ್ಟಿಯ ಮುನ್ಸೂಚಕ. ಅದಕ್ಕೆ ಒಳಗಾದವರು ಕಟ್ಟುನಿಟ್ಟಿನ ಸ್ವಭಾವದವರಾದರೆ ವಿಷಮತೆ ಉಗ್ರವಾದಷ್ಟೂ ಸೃಷ್ಟಿಯು ಶ್ರೇಷ್ಠತರವಾಗುತ್ತದೆ ; ಅದರಿಂದ ಸೃಜನಶೀಲವಾದ ಸತ್ಯವಚನ ಅಥವಾ ಶಕ್ತಿಯುತವಾದ ತತ್ತ್ವ ಹುಟ್ಟುತ್ತದೆ. ಗೀತಾ ಸಂದೇಶದಲ್ಲಿರುವ ಒತ್ತಡ ಶಕ್ತಿಗೆ ಕಾರಣವು ಇದರಿಂದ ಅರ್ಥವಾಗುತ್ತದೆ.

## ೧೨. ಸಂಕ್ಷೋಭೆ ಮತ್ತು ಸೃಜನಾತ್ಮಕತೆ

ಸಾಮಾನ್ಯ ಜನರು ಆಳವಾದ ಆವೇಶಗಳ ಒಳತೋಟಿಯನ್ನು ಅನುಭವಿಸುವುದು ಬಹಳ ಅಪರೂಪ. 'ಒಂದು ಕೆಲಸವನ್ನು ಮಾಡಬೇಕೇ ಅಥವಾ ಮಾಡಬಾರದೇ' ಎನ್ನುವಂತಹ ವಿರೋಧ ಭಾವನೆಗಳ ಭಯಂಕರ ಸೆಳೆತಕ್ಕೆ ಸಿಕ್ಕುವಂತಹ ಸನ್ನಿವೇಶಗಳು ಸಾಮಾನ್ಯವಾಗಿ ನಮಗೆ ಬರುವುದಿಲ್ಲ. ಆದರೆ ಮಹಾಪುರುಷರಾಗುವುದಕ್ಕಾಗಿಯೇ ಜನಿಸಿರುವವರಿಗೆ ಅಂತಹ ಸನ್ನಿವೇಶಗಳು ಹಲವಾರು ಸಲ ಬರುತ್ತವೆ. ಅಂತಹ ಸನ್ನಿವೇಶಗಳಲ್ಲಿ ಸಿಕ್ಕಿಕೊಂಡಾಗ ಅವರು ನ್ಯಾಯನಿಷ್ಠುರರಾಗಿ ಇರುವುದಕ್ಕಾಗಿ ಆಂತರಿಕ ಹೋರಾಟಕ್ಕೆ ಸಿಕ್ಕಬೇಕಾಗುತ್ತದೆ. ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ತ್ಯಜಿಸಬೇಕು ಎಂಬ ನಿಶ್ಚಯಕ್ಕೆ ಬರುವುದು ಅವರಿಗೆ ಬಹು ಕಷ್ಟವಾಗುತ್ತದೆ. ಧರ್ಮ ಜೀವನ ನಡೆಸಬೇಕೆಂಬ ಪ್ರತಿಯೊಬ್ಬ ಪ್ರಾಮಾಣಿಕ ಸತ್ಯಾನ್ವೇಷಿಗೂ ಈ ಬಗೆಯಾದ ಕರ್ತವ್ಯ ಘರ್ಷಣೆ ಸ್ವಲ್ಪ ಹೆಚ್ಚು ಕಡಿಮೆ ತೀವ್ರವಾಗಿ ಬಂದೇ ಬರುತ್ತದೆ. ಅಂತಹ ಸನ್ನಿವೇಶದಲ್ಲಿ ಮಾನವನ ಮನಸ್ಸಿಗೆ ಪರಿಣಾಮಕರವಾದ ಮಾರ್ಗದರ್ಶನವೊಂದು ಅತ್ಯಗತ್ಯವಾಗುತ್ತದೆ, ಅಂತಹ ಮಾರ್ಗ ದರ್ಶನವನ್ನು ಅನಿವಾರ್ಯವಾಗಿ ಪ್ರಾರ್ಥಿಸಬೇಕಾಗುತ್ತದೆ. ಶ್ರೀಕೃಷ್ಣನು ಗೀತೆಯ ದ್ವಿತೀಯ ಅಧ್ಯಾಯ ದಿಂದ ಮುಂದಕ್ಕೆ ನಮಗೆ ನೀಡುವುದು ಅಂತಹ ಮಾರ್ಗದರ್ಶನವನ್ನು.

ನಾವು ಮೊದಲನೆಯ ಅಧ್ಯಾಯವನ್ನು ಕೈಗೆತ್ತಿಕೊಂಡಾಗ, ಅದು ಅಂತಹ ಧರ್ಮ ಸಮಸ್ಯೆಯ ಐತಿಹಾಸಿಕ ನಿರೂಪಣೆಯಾಗಿದೆ—ಅದು ಧರ್ಮದ ಆಯ್ಕೆಯ ಪ್ರಶ್ನೆ, ಕರ್ತವ್ಯಗಳ ಘರ್ಷಣೆಯ ಸಮಸ್ಯೆ. ಈ ಸಮಸ್ಯೆ ಮತ್ತು ಅದರ ಚರ್ಚೆಯನ್ನು ನಮ್ಮ ಪ್ರಾಚೀನರು ಆಗಲೇ ಸಮಾಲೋಚಿಸಿ ದ್ದರು ; ಇಂತಹ ಸಮಾಲೋಚನೆಗಳು ಜಗತ್ತಿನಲ್ಲಿರುವ ಎಲ್ಲ ಬಗೆಯ ಧಾರ್ಮಿಕ ಚಿಂತನೆ ಯಲ್ಲಿಯೂ ಇದ್ದೇ ಇವೆ. ಗೀತೆಯು ಈ ವಿಷಯವನ್ನು ಎರಡನೆಯ ಅಧ್ಯಾಯದಲ್ಲಿ ಬರುವ ಉಚ್ಚ ಅಧ್ಯಾತ್ಮಶಾಸ್ತ್ರದ ಬೆಳಕಿನಲ್ಲಿ ಚರ್ಚಿಸಿದೆ. ಕರ್ಮ-ಅಕರ್ಮ, ತ್ಯಾಗ-ಕರ್ಮ, ಸನ್ಯಾಸ-ಕರ್ಮಯೋಗ, ಇತ್ಯಾದಿ ವಿಷಯಗಳನ್ನು ಕುರಿತು ಮುಂದಿನ ಅಧ್ಯಾಯಗಳಲ್ಲಿ ವ್ಯವಹರಿಸುವಾಗ ಇದನ್ನು ಇನ್ನೂ ಬೇರೆ ಬೇರೆ ರೀತಿಯಲ್ಲಿ ವಿವರಿಸಲಾಗಿದೆ. ಗೀತೆಯ ಮೊದಲ ಅಧ್ಯಾಯದಲ್ಲಿ

ಬಂದಿರುವ ಕರ್ತವ್ಯದ ವಿಷಯವು ಮುಂದಿನ ಅಧ್ಯಾಯಗಳಲ್ಲಿ ಅಧ್ಯಾತ್ಮ ತತ್ತ್ವ ಮತ್ತು ಧರ್ಮಗಳ ಭವ್ಯಭವನದ ನಿರ್ಮಾಣಕ್ಕೆ ತಳಹದಿಯನ್ನು ಒದಗಿಸಿದೆ. ಮೊದಲ ಅಧ್ಯಾಯದಲ್ಲಿ ನಾಟಕೀಯವಾದ ಒಂದು ಮೂಲವಸ್ತುವಿದೆ. ಅದು ಗೀತೆಯ ಸಂದೇಶಕ್ಕೆ ಅಪಾರವಾದ ಸೌಂದರ್ಯವನ್ನೂ ಭವ್ಯತೆಯನ್ನೂ ಒದಗಿಸಿದೆ. ಅದರಿಂದ ಗೀತೆಯ ಸಂದೇಶಕ್ಕೆ ಒಂದು ನೈಜತೆಯ ಬಣ್ಣ ಬಂದಿದೆ ; ಅಲ್ಲಿನ ಚರ್ಚೆಗೆ ತೀವ್ರಾಸಕ್ತಿಯ ಮಾರ್ಮಿಕತೆಯನ್ನು ಒದಗಿಸಿದೆ. ಇಲ್ಲಿನ ಚರ್ಚೆಯು ಕೇವಲ ಶುಷ್ಕ ಪಾಂಡಿತ್ಯದಿಂದ ಕೂಡಿದುದಲ್ಲ ; ಹಾಗೇನಾದರೂ ಆಗಿದ್ದರೆ ಅದು ನಿರರ್ಥಕವಾದುದಾಗಿ ಪ್ರಯೋಗಕ್ಕೆ ಸಂಬಂಧವಿಲ್ಲದುದಾಗುತ್ತಿತ್ತು. ಆದರೆ ಅದು ಆಂತರಿಕ ಘರ್ಷಣೆ ಮತ್ತು ಹೋರಾಟಗಳ ಅಗ್ನಿಯಲ್ಲಿ ಹುಟ್ಟಿದುದಾಗಿ, ಮಾನವನಿಗೆ ಶಾಶ್ವತ ಮೌಲ್ಯವನ್ನೊಳಗೊಂಡ ಸಂದೇಶರೂಪದಿಂದ ಹೊರ ಬಂದಿದೆ. ಇಲ್ಲಿ, ಉತ್ಕಟಸ್ಥಿತಿಯಲ್ಲಿರುವ ಪ್ರಾಮಾಣಿಕನಾದ ಸತ್ಯಾನ್ವೇಷಿಯೊಬ್ಬನು ಮಹಾಗುರುವೊಬ್ಬನಿಗೆ ಮುಖಾಮುಖಿಯಾಗಿ ನಿಂತಿದ್ದಾನೆ. ಈ ಸತ್ಯಾನ್ವೇಷಿಯು ಪ್ರಾಯೋಗಿಕವಾದ ಮಾರ್ಗದರ್ಶನವನ್ನು ಪ್ರಾರ್ಥಿಸುತ್ತಿದ್ದಾನೆ. ಸ್ವಾಭಾವಿಕವಾಗಿಯೇ ಅಂತಹ ಸನ್ನಿವೇಶದಲ್ಲಿ ಕೇವಲ ಪಾಂಡಿತ್ಯಪೂರ್ಣವಾದ ಉತ್ತರವೊಂದರಿಂದ ಆ ಸಮಸ್ಯೆಯನ್ನು ಬಗೆಹರಿಸುವುದಕ್ಕಾಗುವುದಿಲ್ಲ. ಎಲ್ಲ ವಾಸ್ತವಾಂಶಗಳನ್ನೂ ಗಮನದಲ್ಲಿಟ್ಟುಕೊಂಡು, ಅಲ್ಲಿಯೇ ಆಗಲೇ ಮಾರ್ಗದರ್ಶನ ನೀಡಬೇಕು. ಗೀತೆಯು ಮಹಾಗುರುವಾದ ಶ್ರೀಕೃಷ್ಣನ ಮೂಲಕ ಈ ಕಾರ್ಯವನ್ನು ಮಾಡಹೊರಟಿದೆ. ಈ ಅರ್ಥದಲ್ಲಿ ಶ್ರೀಕೃಷ್ಣನು ಯುದ್ಧರಂಗದಲ್ಲಿ ತಟಸ್ಥನಾಗಿರುವ ಪ್ರೇಕ್ಷಕ ಮಾತ್ರನಾಗಿಲ್ಲ, ಅದರಲ್ಲಿ ಭಾಗಿಯಾದವನಾಗಿದ್ದಾನೆ. ಈ ವಸ್ತುಸ್ಥಿತಿಯಿಂದ ಗೀತೆಯು ಆಧ್ಯಾತ್ಮಿಕ ಸಮಸ್ಯೆಯೊಂದರ ಪಂಡಿತ ಮಾನ್ಯವಾದ ಚರ್ಚೆಮಾತ್ರವಾಗದೆ ಇನ್ನೂ ಆಳವಾದ ತತ್ತ್ವವಿಚಾರವನ್ನೂ, ವ್ಯಾಪಕವಾದ ನೀತಿಯನ್ನೂ ನಿರೂಪಿಸತಕ್ಕುದಾಗಿದೆ. ಇದೇ ಅದರ ವಿಶಿಷ್ಟವಾದ ಆಕರ್ಷಣೆಯಾಗಿದೆ.

### ೧೩. ಅರ್ಜುನನ ಕ್ಲೈಬ್ಯ ಸಮರ್ಥನೆ

ಮೊದಲ ಅಧ್ಯಾಯದಲ್ಲಿ ಅರ್ಜುನನು ತನ್ನ ಬಂಧುಗಳು, ಸ್ನೇಹಿತರು, ಗುರುಗಳು ಇವರಿಂದ ಕೂಡಿದ ಸೈನ್ಯವನ್ನು ಎದುರಿಸಿ ನಿಂತಿರುವ ಚಿತ್ರ ಕಾಣಬರುತ್ತದೆ. ಅವನು ಕರುಣೆ ದುಃಖಗಳಿಂದ ಉದ್ವಿಗ್ನನಾಗಿ : 'ಇಂತಹ ಯುದ್ಧಮಾಡಿ ಏನು ಪ್ರಯೋಜನ ? ಈ ಯುದ್ಧದಲ್ಲಿ ತೊಡಗುವುದಕ್ಕಿಂತಲೂ ಸನ್ಯಾಸಿಯಾಗುವುದು ಮೇಲು' ಎಂದು ಹೇಳುತ್ತಾನೆ. ಅರ್ಜುನನು ತನ್ನ ಸ್ಥಿತಿಯನ್ನು ಮನಕರಗುವ ರೀತಿಯಲ್ಲಿ ಹೇಳಿಕೊಳ್ಳುತ್ತಾನೆ ; ಯುದ್ಧ ಮಾಡೆಂದು ತನ್ನನ್ನು ಪ್ರೇರೇಪಿಸುತ್ತಿರುವ ಶ್ರೀಕೃಷ್ಣನನ್ನು ಕಟುವಾಗಿ ಆಕ್ಷೇಪಿಸುತ್ತಾನೆ ಕೂಡ : 'ಇದರಿಂದ ಎಂತಹ ದುಃಖ ಪ್ರಾಪ್ತವಾಗುತ್ತದೆಂಬುದು ನಮಗೆ ಗೊತ್ತಿಲ್ಲವೆ? ಹಾಗೆ ಗೊತ್ತಿರುವುದರಿಂದ ನಾವು ಅಂತಹ ಯುದ್ಧದಿಂದ ಹಿಮ್ಮೆಟ್ಟುವುದೇ ಒಳ್ಳೆಯದು'. ತಾನು ಯುದ್ಧಮಾಡುವುದಿಲ್ಲವೆಂದು ಅರ್ಜುನನು ಸ್ಪಷ್ಟವಾಗಿ ತಿಳಿಸಿಬಿಡುತ್ತಾನೆ. ಮನಸ್ಸಿನಲ್ಲಿ ಭಾವನೆಗಳ ತಾಕಲಾಟ ಹೆಚ್ಚಾಗಿ ಅವನು ಮೂರ್ಛಿತನಾಗುತ್ತಾನೆ. ಬಿಲ್ಲು ಬಾಣಗಳು ಅವನ ಕೈಯಿಂದ ಜಾರಿ ಕೆಳಕ್ಕೆ ಬಿದ್ದುಹೋಗುತ್ತವೆ, ಅವನ ಧ್ವನಿ ಗದ್ಗದವಾಗುತ್ತದೆ, ಅವನು ತನ್ನ ರಥದಲ್ಲಿ ಕೆಳಗುರುಳುತ್ತಾನೆ.

ನಮ್ಮ ನಿಷ್ಠೆಯಲ್ಲಿ ತುಮುಲವೆದ್ದಾಗಲೆಲ್ಲ ಇಂತಹ ಸನ್ನಿವೇಶ ನಮಗೆ ಪ್ರಾಪ್ತವಾಗುತ್ತದೆ. ಇಂತಹ ಸನ್ನಿವೇಶಗಳಲ್ಲೆಲ್ಲಾ ನಮ್ಮ ಕರ್ತವ್ಯವೇನೆಂಬುದನ್ನು ನಾವು ನಿರ್ಧರಿಸಲಾರದೆ ಹೋಗಿ, ಆ ಸನ್ನಿವೇಶಗಳು ನಮ್ಮನ್ನು ಕಿಂಕರ್ತವ್ಯತಾಮೂಢರನ್ನಾಗಿ ಮಾಡಿದಾಗ ಅರ್ಜುನನು ವರ್ತಿಸಿದ ರೀತಿಯಲ್ಲಿಯೇ ನಾವೂ ವರ್ತಿಸುತ್ತೇವೆ. ನಮ್ಮ ಧೈರ್ಯ ಕುಗ್ಗುತ್ತದೆ ; ಆದರೆ ಅದನ್ನು ನಾವು ಕಂಡುಕೊಳ್ಳಲಾರೆವು. ನಮ್ಮ ವರ್ತನೆ ಸರಿಯೆಂದು ನಾವು ವಾದಿಸಹೊರಡುತ್ತೇವೆ. ಆದರೆ ನಮ್ಮ

ವಾದ ತಿರುಳಿಲ್ಲದುದು ; ತರ್ಕ ಮತ್ತು ತತ್ತ್ವಶಾಸ್ತ್ರಗಳ ಪರೀಕ್ಷೆಗೆ ಒಳಪಡಿಸಿದಾಗ ನಿಲ್ಲಲಾರದುದು. ಬಹು ಜನರಿಗೆ ದರ್ಶನಶಾಸ್ತ್ರವೆಂಬುದು ಬ್ರಾಡ್ಲೆ ಹೇಳುವಂತೆ ತನ್ನ ಸಹಜ ಪ್ರವೃತ್ತಿಯಿಂದ ಸತ್ಯವೆಂದು ನಿರ್ಧರಿಸಿಕೊಂಡಿರುವ ಅಭಿಪ್ರಾಯಗಳಿಗೆ ಕುತರ್ಕವನ್ನು ಸಹಾಯಕವಾಗಿ ಬಳಸುವುದು. ಇದೊಂದು ಕುತತ್ತ್ವ ದರ್ಶನ ; ಅದು ಯುಕ್ತಿಯಿಂದ ಉದ್ಭವವಾದುದೇ ಹೊರತು ತರ್ಕಬದ್ಧವಾದು ದಲ್ಲ. ಅರ್ಜುನನಿಗೆ ಆದದ್ದು ಹೀಗೆಯೇ. ಉತ್ಕಟ ಸ್ಥಿತಿಯಲ್ಲಿ ಅವನ ಅತಿಯಾದ ಆಸಕ್ತಿ, ಮೋಹ ಮತ್ತು ವಿಷಾದಗಳಿಂದ ಅವನ ಧೈರ್ಯವೂ ನಿರ್ಣಯ ಶಕ್ತಿಯೂ ಕುಗ್ಗಿ ಹೋಗುತ್ತದೆ. ಯುದ್ಧದಿಂದ ಹಿಮ್ಮೆಟ್ಟಲು ಅಹಿಂಸೆ, ಸತ್ಯಾಗ್ರಹ ಮತ್ತು ಭೂತದಯೆಗಳನ್ನು ಕಾರಣಗಳಾಗಿ ಆತನು ಮುಂದೊಡ್ಡುವುದು ಯುಕ್ತಿಯುಕ್ತವಾಗಿದೆ. ಯುದ್ಧ ಮಾಡಿ ಕೊಲ್ಲುವುದಕ್ಕಿಂತ ಹಿಮ್ಮೆಟ್ಟಿ ಸಾಯುವುದು ಮೇಲು ಎಂದು ಹೇಳುವಾಗ ಅರ್ಜುನನ ಭ್ರಾಂತ ಚೇತನಕ್ಕೆ ಅಹಿಂಸೆ, ಸತ್ಯಾಗ್ರಹಗಳನ್ನು ಸಹಾಯಕವಾಗಿ ಹಿಡಿತರಲಾಗಿದೆ. ತನ್ನ ವಾದಕ್ಕೆ ಬೆಂಬಲ ನೀಡುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸು ತ್ತಾನೆ. ಆದರೆ ಅನಿರೀಕ್ಷಿತವಾಗಿ ಅವನಿಗೆ ಬೆಂಬಲ ದೊರೆಯಲಿಲ್ಲ. ತತ್ತ್ವದರ್ಶನವು ಯುಕ್ತಿ ಪ್ರಮಾಣಕ್ಕೆ ಬೆಂಬಲ ಕೊಡಲಾರದು ; ಏಕೆಂದರೆ ಸಮಸ್ಯೆಗೆ ಪರಿಹಾರವನ್ನು ಸೂಚಿಸುವ ಮುನ್ನ ಅದರ ಸನ್ನಿವೇಶ ಸಂದರ್ಭಗಳನ್ನೆಲ್ಲಾ ಗಮನದಲ್ಲಿಟ್ಟುಕೊಂಡು, ಸಹಜಪ್ರಜ್ಞೆಯನ್ನೇ ಮೂಲಾಧಾರ ವಾಗಿವುಳ್ಳದ್ದು ತತ್ತ್ವದರ್ಶನ. ಹೀಗಾಗಿ, ಅರ್ಜುನನು, 'ನಾನು ಯುದ್ಧ ಮಾಡಲಾರೆ' ಎಂದು ಹೇಳಿ, ತನ್ನ ಕಾರ್ಯಕ್ಕೆ ಶ್ರೀಕೃಷ್ಣನ ನೆರವನ್ನು ಕೋರಿದಾಗ, ಅದು ತನಗೆ ದೊರೆಯದುದನ್ನು ಕಂಡು ಅವನು ಬೆಚ್ಚಿ ಬೀಳುತ್ತಾನೆ. ಇಲ್ಲಿ ಶ್ರೀಕೃಷ್ಣನು ತತ್ತ್ವಶಾಸ್ತ್ರಕ್ಕೆ ಒಂದು ಮಾದರಿಯಾಗಿದ್ದಾನೆ, ಅರ್ಜುನನು ನೈತಿಕ ಘರ್ಷಣೆ ಮತ್ತು ಅದರಿಂದ ಬರುವ ಗಲಿಬಿಲಿಗೆ ಮಾದರಿಯಾಗಿದ್ದಾನೆ. ಒಬ್ಬನು ಪ್ರಶಾಂತ ಸ್ಥಿರಚಿತ್ತ ನಾಗಿದ್ದರೆ, ಮತ್ತೊಬ್ಬನು ಯುದ್ಧ ಮಾಡಬೇಕೆಂಬ ತನ್ನ ನಿರ್ಧಾರದಿಂದ ಚ್ಯುತನಾಗಿ ಭಯದಿಂದ ಬರಿಯ ಗಲಿಬಿಲಿಯಲ್ಲಿ ಮುಳುಗಿ ಹೋಗಿದ್ದಾನೆ. ವ್ಯಾಸರು 'ಅರ್ಜುನ ವಿಷಾದಯೋಗ' ಎಂದು ಅರ್ಥಪೂರ್ಣವಾಗಿ ನಾಮಕರಣ ಮಾಡಿರುವ ಮೊದಲ ಅಧ್ಯಾಯವು ಹೀಗೆ ಪೂರ್ಣಗೊಳ್ಳುತ್ತದೆ. ತತ್ತ್ವದರ್ಶನದ ಪ್ರಶಾಂತ ತರ್ಕವು ಶಕ್ತಿಯುತ ಜೀವನದ ಅಸ್ತವ್ಯಸ್ತ ಕುತರ್ಕಕ್ಕೆ ಇದಿರುಬದಿರಾಗಿ ನಿಂತಿದೆ. ಗೀತೆಯ ಉಳಿದ ಹದಿನೇಳು ಅಧ್ಯಾಯಗಳಲ್ಲಿರುವ ಜೀವನ ದರ್ಶನವು ಈ ಹೋರಾಟ ದಿಂದ ಹುಟ್ಟಿದುದು.

## ೧೪. ಅರ್ಜುನನಿಗೆ ಮನಃ ಪುಷ್ಟಿ

ನಾವು ಎರಡನೆಯ ಅಧ್ಯಾಯಕ್ಕೆ ಬಂದಾಗ ನಿಜವಾದ ತತ್ತ್ವದರ್ಶನದ ಅರುಣೋದಯದಲ್ಲಿರು ತ್ತೇವೆ. ತತ್ತ್ವದರ್ಶನದ ಮೊಟ್ಟಮೊದಲ ಕೆಲಸವೆಂದರೆ ಶಿಷ್ಯನ ಮನಸ್ಸಿನಲ್ಲಿ ಧೈರ್ಯವನ್ನೂ ನಂಬಿಕೆ ಯನ್ನೂ ಹುಟ್ಟಿಸುವುದು. ಶ್ರೀಕೃಷ್ಣನು ಅರ್ಜುನನಿಗೆ ಮಾಡಿದುದು ಅದನ್ನೇ. ಎರಡನೆಯ ಅಧ್ಯಾಯದ ಎರಡನೆ ಮತ್ತು ಮೂರನೆ ಶ್ಲೋಕಗಳಲ್ಲಿ ಇರುವ ಭಾವ ಇದೇ.

> ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ;
> ಅನಾರ್ಯಜುಷ್ಟಂ ಅಸ್ವರ್ಗ್ಯಂ ಅಕೀರ್ತಿಕರಂ ಅರ್ಜುನ—

*ಇಂತಹ ವಿಷಮ ಸನ್ನಿವೇಶದಲ್ಲಿ, ಹೇ ಅರ್ಜುನ! ನಿನಗೆ ಇಂತಹ ಅನಾಚರಣೀಯವೂ, ಸ್ವರ್ಗಕ್ಕೆ ಪ್ರತಿಬಂಧಕವಾದುದೂ, ಅಕೀರ್ತಿಕರವಾದುದೂ ಆದ ಈ ಖಿನ್ನತೆ ಎಲ್ಲಿಂದ ಬಂದಿತು ?*

> ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪ ಪದ್ಯತೇ ;
> ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ

*ಹೇ ಕ್ಷತ್ರಿಯ ಪುತ್ರ! ಹೇಡಿತನವನ್ನು ಹೊಂದಬೇಡ; ಇದು ನಿನಗೆ ಯೋಗ್ಯವಾದುದಲ್ಲ. ಹೇ ಶತ್ರುನಾಶಕ! ತುಚ್ಛವಾದ ಈ ಹೃದಯ ದೌರ್ಬಲ್ಯವನ್ನು ಬಿಟ್ಟು, ಮೇಲಕ್ಕೇಳು.*

ಈ ಎರಡು ಶ್ಲೋಕಗಳಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಮಾನಸಿಕ ಶಕ್ತಿವರ್ಧಕವನ್ನು ಕೊಟ್ಟಿರುವುದು ಕಾಣಬರುತ್ತದೆ. ಉಪದೇಶವೇನಾದರೂ ಹಿಡಿಯಬೇಕಾದರೆ ಅದಕ್ಕೆ ಪೂರ್ವಭಾವಿಯಾಗಿ ಈ ಶಕ್ತಿವರ್ಧಕ ಅತ್ಯಗತ್ಯವಾಗಿತ್ತು. ಮನುಷ್ಯನು ದುಃಖದಿಂದ ತುಂಬಿ ಧೈರ್ಯವೆಲ್ಲ ಸೋರಿ ಹೋಗಿರುವಾಗ ಎಷ್ಟು ಉಪದೇಶ, ಬುದ್ಧಿವಾದವನ್ನು ಹೇಳಿದರೂ ಯಾವ ಪ್ರಯೋಜನವೂ ಆಗುವುದಿಲ್ಲ ; ತತ್ತ್ವದರ್ಶನವಂತೂ ಇನ್ನೂ ಅತ್ತತ್ತ. ಸ್ವಲ್ಪ ಮಟ್ಟಿನ ಶಾಂತಿ, ಚೈತನ್ಯಾತ್ಮಕವಾದ ಶಾಂತಿ (ಅದು ಬರಿಯ ಜಡತೆಯಾಗಬಾರದು) ಅತ್ಯಗತ್ಯ. ಇಡೀ ಗೀತೋಪದೇಶದ ಜೀವ ಜೀವಾಳವನ್ನು ಈ ಎರಡು ಶ್ಲೋಕಗಳಲ್ಲಿನ ಎರಡನೆಯದರಿಂದ ನಾವು ಪಡೆಯಬಹುದು. ಸ್ವಾಮಿ ವಿವೇಕಾನಂದರು ತಮ್ಮ 'ಗೀತೆಯ ಮೇಲಿನ ಭಾವನೆಗಳು' ಎಂಬ ಲೇಖನದಲ್ಲಿ (ಕೃತಿಶ್ರೇಣಿ ಸಂಪುಟ IV ಎಂಟನೇ ಆವೃತ್ತಿ ಪುಟ ೧೧೦) ಹೀಗೆ ಹೇಳಿದ್ದಾರೆ :

*ಕ್ಲೈಬ್ಯಂ... ಪರಂತಪ ಎಂಬ ಶ್ಲೋಕವನ್ನು ಓದುವುದರಿಂದ ಅಂಥ ಓದುಗನಿಗೆ ಇಡೀ ಗೀತೆಯನ್ನು ಓದುವುದರಿಂದ ಬರುವ ಫಲವೆಲ್ಲವೂ ಬರುತ್ತದೆ, ಏಕೆಂದರೆ ಈ ಒಂದು ಶ್ಲೋಕದಲ್ಲಿ ಇಡೀ ಗೀತೆಯ ಸಂದೇಶ ಹೆಪ್ಪುಗಟ್ಟಿ ಕುಳಿತಿದೆ.*

೧೫. ಮನಃಪುಷ್ಟಿಯ ಶೈಕ್ಷಣಿಕ ಮೌಲ್ಯ

ಅರ್ಜುನನಿಗೆ ಮಾತ್ರವೇ ಅಲ್ಲ, ಮುಂದೋರದೆ ಕುಳಿತ ಯಾವ ಮನುಷ್ಯನಿಗೇ ಆಗಲಿ ಇಲ್ಲಿನ ಉಪದೇಶವು ಚೈತನ್ಯದಾಯಕವಾಗಿದೆ. ಮನಸ್ಸಿಗೆ ಯಾವಾಗಲೂ ಮೈಮರೆತು ಮಲಗುವ ಪ್ರವೃತ್ತಿ ಇರುವುದರಿಂದ ನಮ್ಮನ್ನು ಮತ್ತೆ ಮತ್ತೆ ಎಚ್ಚರಗೊಳಿಸುವುದು ಅಗತ್ಯ. ಆದರೆ ಮನಸ್ಸನ್ನು ಬಡಿದೆಬ್ಬಿಸಿ ಜೀವನ ಸಂಗ್ರಾಮಕ್ಕೆ ಅಣಿಗೊಳಿಸುವ ಮತ್ತೊಂದು ಶಕ್ತಿಯೂ ಇದೆ ; ಈ ಶಕ್ತಿಯು ಬಹುಪಾಲು ಜನರಲ್ಲಿ ಕಾರ್ಯತಃ ಸುಪ್ತ ಸ್ಥಿತಿಯಲ್ಲಿರುತ್ತದೆ. ಈ ಶಕ್ತಿಯನ್ನು ವಿಕಸಿಸುವಂತೆ ಮಾಡಬೇಕು. ಅದನ್ನು ನಾವಾಗಿಯೇ ಮಾಡಿಕೊಳ್ಳಲು ಸಾಧ್ಯವಿಲ್ಲದಿದ್ದರೆ, ಬೇರೆ ಯಾರಾದರೊಬ್ಬರು ನಮಗಾಗಿ ಅದನ್ನು ಮಾಡಬೇಕಾಗುತ್ತದೆ. ಒಬ್ಬ ಮಹಾಗುರು, ಒಂದು ಧರ್ಮಗ್ರಂಥ ಅಥವಾ ಒಂದು ಆದರ್ಶ, ಅದನ್ನು ಮಾಡುತ್ತದೆ. ಅರ್ಜುನನ ವಿಚಾರದಲ್ಲಿ ಹೇಳುವುದಾದರೆ ಶ್ರೀಕೃಷ್ಣನು ಆ ಕಾರ್ಯವನ್ನು ನೆರವೇರಿಸಿದ. ಒಬ್ಬ ಮಹಾಪುರುಷನು ನಮಗಾಗಿ ಆ ಕಾರ್ಯವನ್ನು ಮಾಡಬೇಕಾಗುತ್ತದೆ. ಪ್ರತಿಯೊಬ್ಬ ಮಾನವನಲ್ಲಿಯೂ ಅನಂತವಾದ ಸಾಧನಸಂಪತ್ತುಗಳಿವೆಯೆಂದು ವೇದಾಂತ ಹೇಳುತ್ತದೆ. ಮಾನವನು ನಿಗೂಢವಾದ ದೈವಶಕ್ತಿಯುಳ್ಳವನು, ಆದರೆ ಅವನು ತನ್ನ ಆಂತರಿಕ ಶಕ್ತಿಗಳನ್ನು ತಟ್ಟಿ ಎಬ್ಬಿಸಬೇಕು; ಮಹಾಗುರುವಾದವನಿಗೆ ತನ್ನೊಳಗಿನಿಂದ ತನ್ನ ನಿಗೂಢ ಶಕ್ತಿಯನ್ನು ಹೊರಗೆಳೆಯುವಂತೆಯೇ ಇತರರಿಂದಲೂ ಹೊರಗೆಳೆಯುವ ಶಕ್ತಿ ಇರುತ್ತದೆ. ಮಹಾಗುರುವಿನ ಒಂದು ಸ್ಪರ್ಶವೇ ಸಾಕು, ನಮಗೆ ಆವರೆಗೆ ಗೊತ್ತೇ ಇಲ್ಲದಿದ್ದ ವೀರ್ಯ ಶೌರ್ಯಗಳನ್ನು ವ್ಯಕ್ತಪಡಿಸಲು ನಾವು ಪ್ರಾರಂಭಿಸುತ್ತೇವೆ. ಶ್ರೀಕೃಷ್ಣನು 'ನೈತತ್ ತ್ವಯ್ಯುಪಪದ್ಯತೇ'—ಇದು ನಿನಗೆ ಯೋಗ್ಯವಾದುದಲ್ಲ ಎಂಬ ಮಾತುಗಳಿಂದ ಅರ್ಜುನನಿಗೆ ಅಂತಹ ಮಾಂತ್ರಿಕ ಸ್ಪರ್ಶವೊಂದನ್ನು ನೀಡಿದನು.

ಸುಪ್ರಸಿದ್ಧವಾದ ಈ ಚಿಕ್ಕ ವಾಕ್ಯದಲ್ಲಿ ಹುದುಗಿರುವ ಭಾವಕ್ಕೆ ಪ್ರತಿಯೊಬ್ಬ ವ್ಯಕ್ತಿಯೂ ಉನ್ನತೋನ್ನತವಾಗಿ ಬೆಳೆದು, ತನ್ನೊಳಗೇ ಶಕ್ತಿಯ ಹೊಸ ಮೂಲಗಳನ್ನು ಕಂಡುಕೊಳ್ಳುವಂತಹ, ಮನಸ್ ಶಾಸ್ತ್ರಾನುಸಾರವಾದ ಒಂದು ಆಕರ್ಷಣ ಶಕ್ತಿ ಇದೆ. ಈ ಆಕರ್ಷಣೆಯ ಶೈಕ್ಷಣಿಕ ಮೌಲ್ಯ

ಅದ್ವಿತೀಯವಾದುದು. ಇನ್ನೊಬ್ಬನಿಗೆ ಸಹಾಯ ಮಾಡುವುದು ಹೇಗೆ, ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡುವುದು ಹೇಗೆ—ಎಂಬುದು ಮಹತ್ತಾದ ಒಂದು ಶೈಕ್ಷಣಿಕ ಸಮಸ್ಯೆ. ಮನುಷ್ಯನು ಉನ್ನತಿಗೇರಿ ತನ್ನ ಬಾಳನ್ನೂ ಶಕ್ತಿಗಳನ್ನೂ ಬೆಳೆಸಿಕೊಳ್ಳುವ ಮಾರ್ಗ ಮತ್ತು ರೀತಿಗಳನ್ನು ಕಂಡು ಕೊಳ್ಳುವಂತೆ ಮಾಡುವುದಕ್ಕಾಗಿ ಹೇಗೆ ಕಾರ್ಯೋನ್ಮುಖರಾಗಬೇಕು ? ಈ ಮಹತ್ತಾದ ಸಂದರ್ಭದಲ್ಲಿ ಈ ಸಮಾಲೋಚನೆ ಸುಸಂಗತವಾಗಿದೆ, ಏಕೆಂದರೆ ಶ್ರೀಕೃಷ್ಣನ ವಿವೇಕ ಬೋಧನೆ ಸರ್ವಮಾನ್ಯ ವಾದುದು. ಅದರಲ್ಲಿ ವಾಸ್ತವಿಕವಾದ ತಿರುಳಿದೆ. ಭಯವನ್ನು ಹುಟ್ಟಿಸುವುದರ ಮೂಲಕ ಮತ್ತೊಬ್ಬರ ನಡತೆಯನ್ನು ತಿದ್ದುವುದು ಬಹಳ ಹಳೆಯ ಪದ್ಧತಿ. ಮನುಷ್ಯನ ಸಾಮಾಜಿಕ ಮತ್ತು ಧಾರ್ಮಿಕ ಭಾವನೆಗಳನ್ನು ಉದ್ಬೋಧಿಸಿ ಆ ಭಯವನ್ನು ಹುಟ್ಟಿಸಬೇಕಾಗಿತ್ತು. ಆದರೆ ಹೀಗೆ ಭಯೋತ್ಪಾದನೆ ಮಾಡುವುದು ಅಪಾಯಕರ. ಅದರಲ್ಲಿ ಕ್ವಚಿತ್ತಾದ ಒಳ್ಳೆಯ ಗುಣದ ಜೊತೆಗೆ ಕೆಟ್ಟುದೂ ವಿಶೇಷವಾಗಿ ಸೇರಿಕೊಂಡಿರುತ್ತದೆ. ಪ್ರತಿಯೊಂದು ಜಾತಿಧರ್ಮದಲ್ಲಿಯೂ ವ್ಯಕ್ತಿಯ ನಡತೆಯನ್ನು ತಿದ್ದುವುದಕ್ಕಾಗಿ ನರಕ, ದೈವ, ಶಿಕ್ಷೆ ಮೊದಲಾದ ಭಯೋತ್ಪಾದಕ ತತ್ತ್ವಗಳಿರುವುದು ಕಂಡುಬರುತ್ತದೆ. ಮತಧರ್ಮ ದಲ್ಲಿ ಇದೊಂದು ಪುರಾತನ ಕಲ್ಪನೆ ; ಸ್ವರ್ಗದ ಭರವಸೆಯಿಂದಲೋ, ನರಕದ ಭಯದಿಂದಲೋ ಜನ ಸತ್ಕಾರ್ಯನಿರತರಾಗುತ್ತಾರೆ. ಅಥವಾ ದುಷ್ಕಾರ್ಯದಿಂದ ಹಿಮ್ಮೆಟ್ಟುತ್ತಾರೆ. ಸಾಮಾಜಿಕ ವಲಯಕ್ಕೆ ಬಂದರೆ, ಜನ ತಪ್ಪು ಮಾಡಲು ಹೆದರುವುದು ಪೊಲೀಸರ ಭಯದಿಂದ ಅಥವಾ ಸಮಾಜ ಬಹಿಷ್ಕಾರದ ಭಯದಿಂದ. ಪುರಾತನ ಸಮಾಜದಲ್ಲಿ ಅಥವಾ ಮತ ಧರ್ಮದಲ್ಲಿ, ನಾಗರಿಕ ಸಮಾಜ ದಲ್ಲಿ ಕೂಡ ಇರುವ ಪರಿಸ್ಥಿತಿ, ಇದು. ಈ ವಿಧದ ಬಲವಂತ ಮಾಘಸ್ನಾನದಿಂದ ವ್ಯಕ್ತಿಯಲ್ಲಿರುವ ಅತ್ಯುತ್ತಮ ಸ್ವಭಾವವನ್ನು ಹೊರಹೊಮ್ಮಿಸಿದಂತಾಗುವುದಿಲ್ಲ. ಏಕೆಂದರೆ ಆಶೆ, ಭಯಗಳಿಂದ ಮಮಕಾರಕ್ಕೆ ಪ್ರಚೋದನೆ ದೊರೆತಂತಾಗುತ್ತದೆ, ಅಷ್ಟೆ. ಮಾನವ ವಿಕಾಸದಲ್ಲಿ ಇವು ತಮ್ಮ ಕಾರ್ಯವನ್ನು ಆಗಲೇ ಮಾಡಿ ಮುಗಿಸಿವೆ. ಬಹುಶಃ ಯಾವುದೋ ಒಂದು ಘಟ್ಟದಲ್ಲಿ ಇವುಗಳ ಬಳಕೆ ಮಾನವನಿಗೆ ಅಗತ್ಯವಾಗಿತ್ತೇನೋ ! ಇವುಗಳ ಅಗತ್ಯವನ್ನು ಕುರಿತು ಹೆಚ್ಚೆಂದರೆ ಇಷ್ಟು ಮಾತ್ರ ಹೇಳಬಹುದು. ಆದರೆ, ಮನುಷ್ಯನ ನಡತೆಯನ್ನು ತಿದ್ದುವುದಕ್ಕೆ ಅವು ಅತ್ಯುತ್ತಮ ಸಾಧನಗಳಲ್ಲ ಎಂಬುದೇ ಅವುಗಳ ವಿಚಾರದಲ್ಲಿ ನಾವು ಹೇಳಬಹುದಾದ ಅತ್ಯಂತ ಕನಿಷ್ಠವಾದ ಮಾತು. ಮಾನವ ಜನಾಂಗವು ವಿಕಾಸದ ಬೇರೆ ಬೇರೆ ಘಟ್ಟದಲ್ಲಿರುವುದರಿಂದ, ಅವುಗಳನ್ನು ಸಂಪೂರ್ಣವಾಗಿ ಕೈಬಿಡಬೇಕೆಂದು ಹೇಳುವ ಸ್ಥಿತಿಯಲ್ಲಿ ನಾವಿಂದು ಇಲ್ಲದೆ ಇರಬಹುದು. ಅಲ್ಲದೆ, ಜನರ ಒಳ್ಳೆಯ ನಡತೆಗೆ ಭಯ ಅಥವಾ ಭೋಗ ಸುಖ ಮತ್ತು ಜನ ಮೆಚ್ಚಿಕೆಗಳೇ ಮೂಲಕಾರಣ ವೆಂದೇ ಬಹುಜನರ ಗ್ರಹಿಕೆಯಾಗಿರಬಹುದು. ಆದರೆ ಶೈಕ್ಷಣಿಕ ಮನಶ್ಶಾಸ್ತ್ರದ ಪ್ರಕಾರ ವ್ಯಕ್ತಿಗೆ ನಿಜವಾಗಿಯೂ ಯಾವುದು ಶ್ರೇಯಸ್ಕರ ಎಂಬ ಪ್ರಶ್ನೆಯನ್ನು ಎತ್ತಿಕೊಂಡರೆ, ಶ್ರೀಕೃಷ್ಣನು ಮಾಡಿದಂತೆ ವ್ಯಕ್ತಿಯ ಆತ್ಮಗೌರವವನ್ನು ಪ್ರಚೋದಿಸುವುದೇ ಅತ್ಯುತ್ತಮ ವಿಧಾನ. ಸುಸಂಸ್ಕೃತವಾದ ಸಂಸಾರ ಗಳಲ್ಲೆಲ್ಲಾ ಮಕ್ಕಳ ನಡತೆಯನ್ನು ತಿದ್ದುವುದು ಅವರ ಆತ್ಮಗೌರವದ ಮೇಲೆ ಪ್ರಭಾವವನ್ನು ಬೀರುವುದರಿಂದಲೇ ಹೊರತು ಭಯಪಡಿಸುವುದರಿಂದಲ್ಲ. ಅಸಂಸ್ಕೃತ ಸಮಾಜದಲ್ಲಿನ ತಾಯಿ ತಂದೆಗಳು ಭಯಕ್ಕೆ ಮೂಲವಾದ ದೆವ್ವಗಳು ಮತ್ತು ಕತ್ತಲನ್ನು ಆಧರಿಸಿ ಭಯವನ್ನು ಹುಟ್ಟಿಸುತ್ತಾರೆ. ಆದರೆ ಅಂತಹ ಸಂದರ್ಭಗಳಲ್ಲೆಲ್ಲಾ ನಾವು ಸಾಧಿಸುತ್ತಿರುವುದು ವ್ಯಕ್ತಿಯ ಶಿಕ್ಷಣ ಅಥವಾ ಬೆಳವಣಿಗೆಯನ್ನಲ್ಲ : ಆದರೆ ಅವನ ಅಂತರಂಗದಲ್ಲಿ ಕಳಂಕದ ಚಿರಮುದ್ರೆಯನ್ನೊತ್ತಬಹುದಾದ ಕ್ರಮವನ್ನು ಅನುಸರಿಸಿ ಅವನ ನಡತೆಯ ಹೊರನೋಟದಲ್ಲಿ ಮಾತ್ರ ತಾತ್ಕಾಲಿಕವಾದ ಬದಲಾವಣೆ ಯನ್ನು ತರುವುದು. ಶೈಕ್ಷಣಿಕ ಕ್ರಮವಾಗಿ ಇದು ಎಷ್ಟು ನಿಷ್ಪ್ರಯೋಜಕವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

## ೧೬. ಆತ್ಮಗೌರವದ ಬುನಾದಿಯ ಮೇಲೆ ಶೀಲ ನಿರ್ಮಾಣ

ವ್ಯಕ್ತಿಯ ಶಕ್ತಿವಿಶೇಷಗಳು ಹೆಚ್ಚುಹೆಚ್ಚಾಗಿ ಬೆಳೆದು, ಆ ವ್ಯಕ್ತಿಯು ಸ್ವಾವಲಂಬಿಯಾಗುವಂತೆ ರಚನಾತ್ಮಕವಾದ ಮತ್ತು ವಿಧಿವಿಹಿತವಾದ ಪ್ರಚೋದನೆಗಳನ್ನು ಅವನಲ್ಲಿ ನೆಲೆಗೊಳಿಸಬೇಕೆಂದು ನಾವು ಬಯಸುವುದಾದರೆ, ವ್ಯಕ್ತಿಯ ಆತ್ಮಗೌರವಪ್ರಜ್ಞೆಯ ಅಡಿಗಲ್ಲ ಮೇಲೆಯೇ ಅದು ಸ್ಥಾಪಿತವಾಗಬೇಕು. ನಾವು ಮಗುವನ್ನು ಕುರಿತು 'ಈ ನಿನ್ನ ನಡತೆ ನಿನಗೆ ಯೋಗ್ಯವಾದುದಲ್ಲ, ನೀನು ಇದಕ್ಕಿಂತಲೂ ಹೆಚ್ಚು ಯೋಗ್ಯನಾಗುವೆಯೆಂದು ನನ್ನ ನಿರೀಕ್ಷೆ. ನೀನು ಮಾಡುತ್ತಿರುವುದು ನಿನ್ನಿಂದ ನಿರೀಕ್ಷಿಸಿದ ಮಟ್ಟಕ್ಕೆ ಸರಿಯಾಗಿಲ್ಲ' ಎಂದು ಹೇಳಿದಾಗ ನಾವು ಮಗುವಿನ ವಾಸ್ತವ ಗುಣಕ್ಕೆ ಪ್ರಚೋದನೆ ನೀಡುತ್ತಿದ್ದೇವೆ. ಅದು ವಿಧಿವಿಹಿತವಾಗಿ, ರಚನಾತ್ಮಕವಾಗಿದೆ; ನಿಷೇಧಾರ್ಥಕವಾಗಿಲ್ಲ, ವಿನಾಶಕಾರಕವಾಗಿಲ್ಲ. ಆಧುನಿಕ ಮನಶ್ಶಾಸ್ತ್ರವು ಈ ಸಮಸ್ಯೆಯ ಮೇಲೆ ಬೇಕಾದಷ್ಟು ಬೆಳಕು ಚೆಲ್ಲುತ್ತದೆ.

ಆಧುನಿಕ ಮನಶ್ಶಾಸ್ತ್ರದ ಪ್ರಕಾರ ಆತ್ಮಾಭಿಮಾನ ಅಥವಾ ಆತ್ಮಗೌರವವು ಶೀಲ ನಿರ್ಮಾಣಕ್ಕೆ ತಳಹದಿ ಇದ್ದಂತೆ. ಮ್ಯಾಕ್‌ಡೊನಲ್ ಪ್ರಕಾರ ಇದು ಪ್ರಧಾನ ಚಿತ್ತವೃತ್ತಿ. ಆತ್ಮಾಭಿಮಾನವೆಂಬ ಪ್ರಧಾನ ಚಿತ್ತವೃತ್ತಿಯ ಸುತ್ತಲೂ ಬೇರೆ ಬೇರೆ ಚಿತ್ತವೃತ್ತಿಗಳು ಮತ್ತು ಭಾವಗಳು ವ್ಯವಸ್ಥಿತವಾಗಿ ಹೊಂದಿಕೊಳ್ಳುವುದರಿಂದ ಶೀಲ ಹುಟ್ಟುತ್ತದೆ. ಆತ್ಮಾಭಿಮಾನವು ತಳಹದಿಯಾಗದೆ ಯಾವ ಶೀಲವನ್ನೂ ಬೆಳೆಸುವುದಕ್ಕಾಗುವುದಿಲ್ಲ. ಮನುಷ್ಯನಲ್ಲಿರುವ ಆತ್ಮಾಭಿಮಾನವಷ್ಟನ್ನೂ ಕಿತ್ತುಹಾಕಿಬಿಡಿ, ಆಗ ಅವನನ್ನು ಮಾನವನನ್ನಾಗಿ ಮಾಡುವುದಕ್ಕಾಗಲೀ ತನ್ನ ಶೀಲವನ್ನು ಬೆಳೆಸಿಕೊಳ್ಳುವಂತೆ ಸಹಾಯಮಾಡುವುದಕ್ಕಾಗಲೀ ಎಂದೆಂದಿಗೂ ಸಾಧ್ಯವಾಗುವುದಿಲ್ಲ. ಮಾನವನಿಗೂ ಮೃಗಕ್ಕೂ ಇರುವ ವ್ಯತ್ಯಾಸವೆಂದರೆ ಈ ಆತ್ಮಾಭಿಮಾನ ಅಥವಾ ಆತ್ಮಗೌರವವೇ. ಸಾಮಾಜಿಕವಾದ ದಬ್ಬಾಳಿಕೆ ಅಥವಾ ಅಲಕ್ಷ್ಯಗಳಿಂದ ತಮ್ಮ ಆತ್ಮಾಭಿಮಾನವೆಂಬ ಅಮೂಲ್ಯ ಗುಣವು ಅಪಹೃತವಾದುದರ ಫಲವಾಗಿ ಜನರು ಮೃಗಗಳ ಮಟ್ಟಕ್ಕೇ ಇಳಿದು ಹೋಗಿದ್ದಾರೆ. ಒಬ್ಬ ಗುಲಾಮನನ್ನು ನೋಡಿ, ಅವನಲ್ಲಿ ಆತ್ಮಗೌರವವು ಸ್ವಲ್ಪವೂ ಉಳಿದಿಲ್ಲ; ಏಕೆಂದರೆ ಸಮಾಜವು ಉದ್ದಕ್ಕೂ ಅವನನ್ನು ತುಳಿದು ಅವನಲ್ಲಿರುವ ಆ ಗುಣವನ್ನು ಸಂಪೂರ್ಣವಾಗಿ ನಾಶಮಾಡಿದೆ. ಅಂತಹ ಮನುಷ್ಯನಲ್ಲಿ ಈ ಪ್ರಧಾನ ಗುಣವನ್ನು ತುಂಬುವುದು ಕಷ್ಟಕರವಾದ ಕೆಲಸ. ತಾವು ಸ್ವತಃ ಸ್ವತಂತ್ರರಾಗಿರುವುದರಿಂದ ಈ ಕೆಲಸವಾಗಬೇಕು. ಅವನು ಗುಲಾಮನಾಗಿ ತನ್ನ ನಿಜಸ್ವರೂಪವನ್ನು ಮರೆತಿದ್ದಾನಷ್ಟೇ ಹೊರತು ತನ್ನ ಹಕ್ಕನ್ನೇನೂ ಬಿಟ್ಟುಕೊಟ್ಟಿಲ್ಲ. ಆದ್ದರಿಂದ ಈ ಸದ್ಗುಣವನ್ನು ನಾವು ಅವನಲ್ಲಿ ಉತ್ತೇಜನಗೊಳಿಸಬಹುದು. ಆದ್ದರಿಂದ ಗುಲಾಮನಾದವನು ತನ್ನ ಆತ್ಮವಿಕಾಸಕ್ಕೆ ಮೊದಲ ಮೆಟ್ಟಿಲಾಗಿ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳಬೇಕು. ಹೀಗೆ, ಒಬ್ಬನು ಮತ್ತೊಬ್ಬನಿಗೆ ಮಾಡಬಹುದಾದ ಅತ್ಯಂತ ದೊಡ್ಡ ಕೆಡುಕೆಂದರೆ ಅವನ ಆತ್ಮವಿಶ್ವಾಸಕ್ಕೆ ಹಾನಿತರುವುದು. ನೀನು ಏನಾದರೂ ಮಾಡು, ಇನ್ನೊಬ್ಬರ ಆತ್ಮವಿಶ್ವಾಸಕ್ಕೆ ಧಕ್ಕೆ ತರಬೇಡ. ಹಾಗೆ ಮಾಡುವುದರಿಂದ ಅವನ ಸರ್ವನಾಶಕ್ಕೆ ಹೆದ್ದಾರಿ ಹಾಕಿ ದಂತಾಗುತ್ತದೆ. ಈ ಸೂತ್ರವು ಎಲ್ಲ ಸಾಮಾಜಿಕ ವ್ಯವಹಾರಗಳಲ್ಲಿಯೂ ನಿಸ್ಸಂದೇಹವಾದ ಮತ್ತು ಕೌಶಲ್ಯಪೂರ್ಣವಾದ ಮಾರ್ಗದರ್ಶನವಾಗಿರುತ್ತದೆ. ದುರದೃಷ್ಟವಶಾತ್ ಇದನ್ನು ಅನುಸರಿಸುವುದಕ್ಕಿಂತಲೂ ಉಲ್ಲಂಘಿಸುವುದೇ ಹೆಚ್ಚು; ಏಕೆಂದರೆ ಕಾರ್ಯದ ಜೊತೆಯಲ್ಲಿ ಚಿಂತನೆಯನ್ನೂ ಕಲಿಸಲು ನಮಗೆ ಯೋಗ್ಯತೆ ಇಲ್ಲ. ಒಡೆಯರಾದವರು ಆಳುಗಳನ್ನು ತಮ್ಮ ಒಂದು ನಿರ್ಜೀವ ಆಸ್ತಿ ಎಂಬಂತೆ ನಡೆಸಿಕೊಳ್ಳುತ್ತಿದ್ದಾರೆ. ಆಳು ಒಡೆಯನಿಗಾಗಿ ದುಡಿಯುತ್ತಾನೆ, ಆದರೆ ತನ್ನ ಆತ್ಮವನ್ನೇ ಆತನಿಗೆ ಮಾರಿಕೊಂಡಿಲ್ಲವಲ್ಲ. ಒಡೆಯನು ತನ್ನ ಅವಿವೇಕದಿಂದ ತನ್ನ

ಸೇವಕನ ಆತ್ಮಾಭಿಮಾನಕ್ಕೆ ಧಕ್ಕೆಯನ್ನುಂಟುಮಾಡುತ್ತಾನೆ. ಆದ್ದರಿಂದಲೇ ಸೂಕ್ಷ್ಮ ಮನಸ್ಸಿನ ಸೇವಕರು ತಮ್ಮ ಒಡೆಯನನ್ನು 'ನೀವು ನನ್ನನ್ನು ಹೊಡೆಯಬಹುದು, ಆದರೆ ದಯವಿಟ್ಟು ನನ್ನನ್ನೂ ನನ್ನ ಅಜ್ಜ ಮುತ್ತಜ್ಜರನ್ನೂ ಬೈಯಬೇಡಿ' ಎಂದು ಆಕ್ಷೇಪಿಸುತ್ತಾರೆ. ಏಕೆಂದರೆ ನಿಂದನೆಯು ವ್ಯಕ್ತಿಯ ಮರ್ಮಸ್ಥಾನವನ್ನು—ಅವನ ಆತ್ಮಾಭಿಮಾನವನ್ನು ಕೆಣಕುತ್ತದೆ. ನಾವು ಒಬ್ಬ ಮನುಷ್ಯನಿಗೆ ಶಿಕ್ಷಣವಿತ್ತು, ನಿಜವಾಗಿಯೂ ಅವನಿಗೆ ಒಳ್ಳೆಯದನ್ನು ಮಾಡುವುದಾದರೆ ಅವನಲ್ಲಿರುವ ಅಮೂಲ್ಯವಾದ ಸದ್ಗುಣವನ್ನು ಉಳಿಸಿ ಬೆಳೆಸಬೇಕು. ಆಧುನಿಕ ಶಿಕ್ಷಣ ತತ್ತ್ವಗಳು ಮಹೋದಾತ್ತವಾದ ಈ ಮನೋವೈಜ್ಞಾನಿಕ ಸತ್ಯದ ಮೇಲೆ ನಿಂತಿವೆ.

ನಡತೆಯನ್ನು ರೂಪಿಸುವುದರಲ್ಲಿ ಈ ಪ್ರಧಾನ ಚಿತ್ತವೃತ್ತಿಗಿರುವ ಅಸಾಧಾರಣ ಮಹತ್ವವನ್ನು ಮನಶ್ಶಾಸ್ತ್ರವು ಬೋಧಿಸುತ್ತದೆ. ಉಪಾಧ್ಯಾಯರೂ ತಾಯ್ತಂದೆಗಳೂ ತಮ್ಮ ಅವಿವೇಕದಿಂದ ತಮ್ಮ ಪಾಲನೆಗೊಳಪಟ್ಟವರಲ್ಲಿನ ಆತ್ಮವಿಶ್ವಾಸವನ್ನು ಹಾಳುಮಾಡಿದಲ್ಲಿ ಸಮಾಜದ್ರೋಹಿಗಳಾಗುತ್ತಾರೆ. ಮಕ್ಕಳೊಡನೆ ವ್ಯವಹರಿಸುವಾಗ ನಾವು ತಟ್ಟೆ ಬಟ್ಟಲುಗಳೊಡನೆ ವ್ಯವಹರಿಸುತ್ತಿಲ್ಲವೆಂಬುದು ಆಧುನಿಕ ಸಿದ್ಧಾಂತ. ನಾವು ಸೂಕ್ಷ್ಮವಾದ, ಸ್ಪಂದನಗೊಳ್ಳುತ್ತಿರುವ ಸಜೀವ ವ್ಯಕ್ತಿಗಳೊಡನೆ ವ್ಯವಹರಿಸುತ್ತಿದ್ದೇವೆ; ನಾವು ಮಾಡುವುದೆಲ್ಲಾ ಅಲ್ಲಿ ಮುದ್ರಿತವಾಗುತ್ತಿದೆ; ಆದ್ದರಿಂದ ಮಹತ್ತಾದ ಎಚ್ಚರಿಕೆ ಅತ್ಯಗತ್ಯ.

### ೧೭. ಮನುಷ್ಯನಲ್ಲಿ ಸ್ವತಃಸಿದ್ಧವಾಗಿರುವ ದೈವತ್ವ

ವೇದಾಂತದ ಸಾರಸರ್ವಸ್ವವು ಇದರಲ್ಲಿ ಅಡಕವಾಗಿದೆ. ಸ್ವಾಮಿ ವಿವೇಕಾನಂದರು ಇದನ್ನು ತಮ್ಮದೇ ಆದ ಚಿರಸ್ಮರಣೀಯವಾದ ನುಡಿಗಳಲ್ಲಿ ಹೀಗೆ ಹೇಳಿದ್ದಾರೆ (ಕೃತಿಶ್ರೇಣಿ ಪ್ರಥಮ ಸಂಪುಟ ಪುಟ ೧೨೪) :

> *ಪ್ರತಿಯೊಂದು ಜೀವವೂ ಮೂಲತಃ ದೈವಸ್ವರೂಪವಾದುದು. ನಮ್ಮ ಅಂತರಂಗ ಬಹಿರಂಗ ಪ್ರವೃತ್ತಿಯನ್ನು ಗೆಲ್ಲುವುದರ ಮೂಲಕ ನಮ್ಮೊಳಗಿರುವ ದೈವೀಶಕ್ತಿಯು ಅಭಿವ್ಯಕ್ತಗೊಳ್ಳುವಂತೆ ಮಾಡುವುದೇ ನಮ್ಮ ಹೆಗ್ಗುರಿ. ಕರ್ಮದಿಂದಲೋ, ಪೂಜೆಯಿಂದಲೋ, ಮನೋನಿಗ್ರಹದಿಂದಲೋ, ತತ್ತ್ವಶಾಸ್ತ್ರದಿಂದಲೋ—ಇವುಗಳಲ್ಲಿ ಒಂದರಿಂದಲೋ, ಎರಡರಿಂದಲೋ ಅಥವಾ ಎಲ್ಲದರಿಂದಲೋ—ಇದನ್ನು ಸಾಧಿಸು. ಇದೇ ಧರ್ಮಸರ್ವಸ್ವ. ಕರ್ಮಾಚರಣೆ, ಗ್ರಂಥಗಳು, ಗುಡಿಗಳು, ವಿಗ್ರಹಗಳು ಇವೆಲ್ಲವೂ ಅಮುಖ್ಯವಾದ ವಿವರಗಳು.*

ನಾವು ಒಬ್ಬ ವ್ಯಕ್ತಿಯೊಡನೆ ವ್ಯವಹರಿಸುವುದೆಂದರೆ ವಿಸ್ತಾರವಾದೊಂದು ಶಕ್ತಿಯ ಜಲಾಶಯದೊಡನೆ ವ್ಯವಹರಿಸುವಂತೆ; ಸದ್ಯಕ್ಕೆ ಅದು ಸುಪ್ತಸ್ಥಿತಿಯಲ್ಲಿದೆ. ಆದರೆ ಸರಿಯಾದ ತರಬಿಯತ್ತನ್ನು ಕೊಟ್ಟರೆ ಅದೊಂದು ಮಹತ್ತಾದ ಪ್ರವಾಹವಾಗಬಲ್ಲದು. ಸರಿಯಾದ ಶಿಕ್ಷಣ ಪಡೆದವನು ಸಮರ್ಥ ವ್ಯಕ್ತಿತ್ವವುಳ್ಳವನಾಗುತ್ತಾನೆ. ಕೀಳುಶಿಕ್ಷಣ ಪಡೆದವನು ಊನವಾದ ವ್ಯಕ್ತಿತ್ವವುಳ್ಳವನಾಗುತ್ತಾನೆ.

ಮನಶ್ಶಾಸ್ತ್ರದ ಈ ಮಹಾ ಸತ್ಯವು ಶ್ರೀಕೃಷ್ಣನಿಂದ ಅರ್ಜುನನಿಗೆ ಹೃದಯಂಗಮವಾಗಿ ಉಪದೇಶಿಸಲ್ಪಟ್ಟ 'ನೈತತ್ತ್ವಯ್ಯುಪಪದ್ಯತೇ—ಇದು ನಿನಗೆ ಯೋಗ್ಯವಲ್ಲ' ಎಂಬ ಬುದ್ಧಿವಾದದಲ್ಲಿ ಮೂರ್ತಿಮತ್ತಾಗಿದೆ. ಜಗತ್ತಿಗೆ ಅರ್ಜುನನಾರೆಂಬುದು ಹಲವಾರು ಯುದ್ಧಗಳಲ್ಲಿ ಹೋರಾಡಿ ವಿಜಯಿಯಾದವನೆಂಬುದು ಗೊತ್ತಿತ್ತು. ಅಂತಹವನು ಈಗ ಹೆದರಿ ಹತಾಶನಾಗಬೇಕೇ ? ಅವನು ತನ್ನ ಸ್ವಭಾವಸಹಜವಾದ ಧೈರ್ಯ, ಸಜ್ಜನಿಕೆಗಳಿಗೆ ಸವಾಲಾಗಿ ನಿಂತಿರುವ ಕ್ಲಿಷ್ಟಕರ ಸನ್ನಿವೇಶದಲ್ಲಿ ತನ್ನ ಸ್ವಭಾವಕ್ಕನುಗುಣವಾದ ಶಕ್ತಿ ಮತ್ತು ಪರಮಾದರ್ಶಗಳನ್ನು ಹೆಚ್ಚುಹೆಚ್ಚಾಗಿ ಬಳಸಿಕೊಂಡು ಸ್ಥಿರವಾಗಿ ನಿಲ್ಲಬಾರದೇ ? ಜೀವನದ ಕಠೋರ ಶಿಕ್ಷಣ ಶಾಲೆಯಲ್ಲಿ ಕಲಿಯಬೇಕಾದ ನಿಜವಾದ

ವಿದ್ಯೆ, ಇದು. ಈ ಮಹತ್ತರವಾದ ಶಿಕ್ಷಣ ಕಾರ್ಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಮಾರ್ಗದರ್ಶಕನಾಗಿದ್ದಾನೆ. ಅದು ಮಹೋನ್ನತವಾದ ತತ್ತ್ವಶಾಸ್ತ್ರದ ಅಡಿಗಲ್ಲ ಮೇಲೆ ನಿಂತಿರುವ ಶಿಕ್ಷಣ. ವೇದಾಂತ ಮತ್ತು ಆಧುನಿಕ ಶಿಕ್ಷಣ ತತ್ತ್ವಗಳು ಇದರಲ್ಲಿ ಸಂಪೂರ್ಣವಾಗಿ ಸಮನ್ವಯಗೊಂಡಿವೆ.

## ೧೮. ನೈತಿಕಪ್ರಜ್ಞೆ—ಆಧ್ಯಾತ್ಮಿಕ ಬೆಳವಣಿಗೆಯ ಉಪ-ಪರಿಣಾಮ

ಎರಡನೆಯ ಅಧ್ಯಾಯದ ಶ್ಲೋಕಗಳನ್ನು ಕುರಿತು ಚರ್ಚಿಸುವಾಗ ಈ ವೇದಾಂತ ಬೋಧೆಯ ನೈತಿಕ ಪರಿಣಾಮದ ವಿಚಾರಕ್ಕೆ ಬರೋಣ. ನಮ್ಮ ನೈಜಸ್ವಭಾವಕ್ಕೆ ಅನುಸಾರವಾಗಿ ನಡೆದುಕೊಂಡರೆ ನಾವು ಎಂದೆಂದಿಗೂ ಅಪರಾಧಿ ಅಥವಾ ಕೆಟ್ಟವರಾಗುವುದಕ್ಕೆ ಸಾಧ್ಯವಿಲ್ಲವೆಂದು ವೇದಾಂತ ತಿಳಿಸುತ್ತದೆ. ನಾವು ಪಾಪವನ್ನೋ ಅಥವಾ ಕೆಟ್ಟಕೆಲಸಗಳನ್ನೋ ಮಾಡುವಾಗ ನಮ್ಮ ಶುದ್ಧವಾದ ಮತ್ತು ಪರಮಾದರ್ಶರೂಪವಾದ ನೈಜಸ್ವಭಾವಕ್ಕೆ ತಕ್ಕಂತೆ ನಡೆಯುತ್ತಿಲ್ಲ ; ಅದಕ್ಕೆ ಬದಲಾಗಿ ಅಹಂಕಾರದಿಂದ ತುಂಬಿದ ನಮ್ಮ ಕೋರಿಕೆಯ ಸ್ವಭಾವಕ್ಕೆ ತಕ್ಕಂತೆ ನಡೆದುಕೊಳ್ಳುತ್ತೇವೆ. ವೇದಾಂತದ ಪ್ರಕಾರ ನೈತಿಕ ನಡವಳಿಕೆಯೇ ಮನುಷ್ಯನ ಸ್ವತಃಸಿದ್ಧವಾದ ನೈಜಸ್ವಭಾವ. ತನ್ನೊಳಗಿರುವ ದೈವಶಕ್ತಿಯನ್ನು ಅಭಿವ್ಯಕ್ತಗೊಳಿಸುವಾಗ ಅವನು ನೈಜ ಜೀವನವನ್ನು ಬಾಳುತ್ತಿದ್ದಾನೆ. ಸ್ವಾರ್ಥವು ನಮ್ಮ ನೈಜ ಜೀವನದ ಅಭಿವ್ಯಕ್ತಿಯಲ್ಲ ; ಅದು ಕೇವಲ ಅದರ ಮೇಲ್ಮೈ. ಈ ತೋರಿಕೆಯ ಸ್ವಭಾವವನ್ನು ಅಭಿವ್ಯಕ್ತಗೊಳಿಸಿದಾಗ ನೀನು ನಿನ್ನ ಸತ್ಯಸ್ವಭಾವವನ್ನು ಅಭಿವ್ಯಕ್ತಗೊಳಿಸುತ್ತಿಲ್ಲ. ನಾನು ನೈಜ ಜೀವನವನ್ನು ನಡೆಸುತ್ತಿರುವಾಗ ಮಾತ್ರ ನಾನು ಪರಿಪೂರ್ಣ. ಆಗಲೇ ನಾನು ನನ್ನ ನೈಜ ಸ್ವಭಾವವನ್ನು ಅಭಿವ್ಯಕ್ತಗೊಳಿಸುವುದು. ವೇದಾಂತದ ಪ್ರಕಾರ ಅದೇ ಅತ್ಯುನ್ನತವಾದ ನೀತಿ.

ಅರ್ಜುನನ ಕಾರ್ಯವನ್ನು ಕರ್ತವ್ಯ ಧರ್ಮದ ದೃಷ್ಟಿಯಿಂದ ಪರಿಶೀಲಿಸಬೇಕು ; ಅದರಲ್ಲಿಯೂ ಯಥಾರ್ಥವಾದ ಅಧ್ಯಾತ್ಮಶಾಸ್ತ್ರ ದೃಷ್ಟಿಯಿಂದ ನೋಡಬೇಕು. ಧರ್ಮತತ್ತ್ವದಿಂದ ಯಥಾರ್ಥತೆಯ ಸಮಸ್ಯೆ ಏಳುತ್ತದೆ, ಅದೇ ಅಧ್ಯಾತ್ಮಶಾಸ್ತ್ರ. ಗೀತೆ ಧರ್ಮವನ್ನು ಅಧ್ಯಾತ್ಮಶಾಸ್ತ್ರಕ್ಕೆ ಅಧೀನವಾಗಿ ಅದರ ಮಾರ್ಗದರ್ಶನದಂತೆ ನಡೆಯುವ ಹಾಗೆ ವಿಧಿಸುತ್ತದೆ. ಆಧುನಿಕ ಯುಗದಲ್ಲಿ ಅನೇಕ ವಿದ್ವಾಂಸರು ಧರ್ಮದಲ್ಲಿ ಯಥಾರ್ಥತೆಯ ಪ್ರಶ್ನೆಯನ್ನು ಎತ್ತಬಾರದೆಂದು ಹೇಳುತ್ತಾರೆ. ಪ್ರತ್ಯಕ್ಷ ಪ್ರಮಾಣವಾದಿಗಳು ಅನೇಕರು ಹಾಗೆ ಹೇಳುವವರಾಗಿದ್ದಾರೆ. ಆದರೆ ಈ ವಿಷಯವನ್ನು ಬಹು ಹಿಂದೆಯೇ ಈ ದೇಶದಲ್ಲಿ ಚರ್ಚಿಸಿ ಮೂಲ ಪ್ರಶ್ನೆಗಳನ್ನು ಎತ್ತಿಕೊಳ್ಳದೆ ಯಾವ ಸಮಸ್ಯೆಯನ್ನೂ ಕೂಲಂಕಷವಾಗಿ ಚರ್ಚಿಸುವುದು ಸಾಧ್ಯವಿಲ್ಲ ಎಂಬುದನ್ನು ಕಂಡುಕೊಂಡಿದೆ. ಯಾವ ಕಾರ್ಯವನ್ನು ಕೈಗೊಳ್ಳಬೇಕಾದರೂ 'ನಾನು ಅದನ್ನು ಏಕೆ ಮಾಡಬೇಕು ?' ಎಂಬ ಪ್ರಶ್ನೆ ಮಾಡಿಕೊಂಡರೆ ಚಿಂತನೆ ಚರ್ಚೆಗಳ ವಿಸ್ತೃತ ವಲಯವನ್ನು ಪ್ರವೇಶಿಸಬೇಕಾಗುತ್ತದೆ. ಗೀತೆಯ ಧರ್ಮವನ್ನು ಅಧ್ಯಾತ್ಮ ಶಾಸ್ತ್ರದ ಮಾರ್ಗದರ್ಶನಕ್ಕೆ ಅಧೀನಪಡಿಸಿದೆ ; ಈ ಅಧ್ಯಾತ್ಮಶಾಸ್ತ್ರ ಜೀವನವನ್ನು ಅಖಂಡವಾಗಿ ಕಂಡು ವ್ಯವಹರಿಸುತ್ತದೆ. ಗೀತೆಯ ಎರಡನೇ ಅಧ್ಯಾಯವು ವ್ಯಕ್ತಿಯ ನೈಜ ಸ್ವಭಾವವನ್ನೂ, ಅತ್ಯುನ್ನತವಾದ ಯಥಾರ್ಥಸತ್ಯವನ್ನೂ ಕುರಿತು ವಿವೇಚಿಸುತ್ತದೆ ; ಮತ್ತು ಈ ಜ್ಞಾನ ಮತ್ತು ವಿವೇಕಗಳ ಆಧಾರದಿಂದ ನಡತೆ ಮತ್ತು ಕಾರ್ಯಗಳ ಸ್ವರೂಪವನ್ನು ವಿಶ್ಲೇಷಿಸುತ್ತದೆ. ಅದು ಅರ್ಜುನನ ಆ ಕ್ಷಣದ ಸಮಸ್ಯೆಯ ಸುತ್ತ ಕರ್ಮದ ತತ್ತ್ವ ಮತ್ತು ಧರ್ಮಗಳನ್ನು ಹೆಣೆದು, ಇತರ ಜನರಿಗೆ ಜೀವನದ ಎಲ್ಲ ಸನ್ನಿವೇಶಗಳಲ್ಲೂ ಒಂದು ಮಾರ್ಗದರ್ಶನವನ್ನು ನೀಡುತ್ತದೆ.

ಹೀಗೆ ಎಲ್ಲ ಜನರಿಗೂ ಅನ್ವಯಿಸುವಂತಾಗುವುದೇ ತತ್ತ್ವಶಾಸ್ತ್ರದ ಫಲ. ಅರ್ಜುನನಿಗೆ ನೀಡಿದ ಉಪದೇಶದ ಹಿಂದೆ ತತ್ತ್ವಶಾಸ್ತ್ರವಿರದಿದ್ದರೆ ಆ ಬೋಧನೆಯು ಇತರರಿಗೆ ಅನ್ವಯಿಸುವಂತಹುದಾಗಿರುತ್ತಿರಲಿಲ್ಲ. ಆದ್ದರಿಂದ ಗೀತೆಯ ಬೋಧನೆ ಅರ್ಜುನನಿಗಾಗಿ ಮಾತ್ರ ಆದುದಲ್ಲ. ಅದರ

ವ್ಯಾಪ್ತಿ ಲೋಕೋವಿಶಾಲವಾದುದಾದ್ದರಿಂದಲೇ ಈಗ ಮೂರು ಸಹಸ್ರ ವರ್ಷಗಳಿಗಿಂತ ಹೆಚ್ಚು ಕಾಲವಾದ ಮೇಲೂ ಅದು ನಮಗೆ ಹಿಡಿಸುತ್ತದೆ. ಅದು ಕೇವಲ ಹೊತ್ತಿಗೆ ಮೂರು ಮೊಳ ನೆಯ್ಯು ವಂತಹ ಬುದ್ಧಿವಾದದ ಮಾರ್ಗದರ್ಶನವಾಗಿದ್ದರೆ ಅದು ಎಲ್ಲರಿಗೂ ಹಿಡಿಸುವಂತಹುದಾಗುತ್ತಿರ ಲಿಲ್ಲ. ಹೆಚ್ಚೆಂದರೆ ಅದೊಂದು ಸ್ವಾದು ಸಾಹಿತ್ಯವಾಗಿ ಉಳಿಯುತ್ತಿತ್ತೇ ಹೊರತು ತತ್ತ್ವಶಾಸ್ತ್ರದ ಆಕರ್ಷಣೆಯಾಗಿ ಉಳಿಯುತ್ತಿರಲಿಲ್ಲ. ಅದನ್ನು ತತ್ತ್ವಶಾಸ್ತ್ರ ನಿರೂಪಣೆಯಲ್ಲಿ ಮೂಡಿದ ಸಾಹಿತ್ಯ ವಾಗಿ ಗ್ರಹಿಸಿದಾಗ ಅದು ವಿಶ್ವವ್ಯಾಪಿಯಾದುದಾಗುತ್ತದೆ. ಶ್ರೀಕೃಷ್ಣನು ಗೀತೆಯ ವಿಚಾರದಲ್ಲಿ ಮಾಡಿರುವುದೂ ಅದನ್ನೇ.

### ೧೯. ತಾತ್ತ್ವಿಕ ಮಾರ್ಗದರ್ಶನದ ಸ್ವರೂಪ

ಶ್ರೀಕೃಷ್ಣನು ಗೀತೆಯ ದೀವಿಗೆಯನ್ನು ಜನರ ಹೃದಯದಲ್ಲಿ ಬೆಳಗಿಸಿ, ಅವರವರ ಸಮಸ್ಯೆಗಳನ್ನು ಅವರೇ ಬಗೆಹರಿಸಿಕೊಳ್ಳಲು ಅವಕಾಶ ನೀಡಿದ್ದಾನೆ. ಪ್ರತಿಯೊಬ್ಬ ವ್ಯಕ್ತಿಗಾಗಿಯೂ ತಾನು ಮಾಡು ತ್ತಿರುವ ಕಾರ್ಯವೆಂದರೆ ಆ ಪ್ರತಿಯೊಬ್ಬನ ಹೃದಯದಲ್ಲಿಯೂ ವಿವೇಕದ ಪುಟ್ಟ ಹಣತೆಯೊಂದನ್ನು ಹೊತ್ತಿಸಿ ಅದರ ಮೂಲಕ ತಾನೇ ಸತ್ಯವನ್ನು ಕಾಣುವಂತೆಯೂ ಅಸತ್ಯವನ್ನು ತ್ಯಜಿಸುವಂತೆಯೂ ಮಾಡುವುದು—ಎಂದು ಶ್ರೀಕೃಷ್ಣನು ಮುಂದಿನ ಒಂದು ಅಧ್ಯಾಯದಲ್ಲಿ ಹೇಳಬಯಸಿದ್ದಾನೆ. ಆತನು ನಮಗೆ ಹೀಗೆಯೇ ಮಾಡಬೇಕೆಂಬ ಕೊನೆಯ ತೀರ್ಮಾನವನ್ನೇನೂ ಕೊಡುವುದಿಲ್ಲ. ತತ್ತ್ವಶಾಸ್ತ್ರವು ನಮಗಾಗಿ ಯಾವ ಅಂತಿಮ ನಿರ್ಧಾರವನ್ನೂ ನೀಡುವುದಿಲ್ಲ ; ನಮಗೆ ಮಾರ್ಗ ದರ್ಶನವನ್ನು ಮಾತ್ರ ಅದು ನೀಡುತ್ತದೆ. ನಾವು ದಿನದ ಇಪ್ಪತ್ತನಾಲ್ಕು ಗಂಟೆಗಳಲ್ಲಿ ಪ್ರತಿನಿಮಿಷವೂ ಏನು ಮಾಡಬೇಕೆಂಬುದನ್ನು ವಿಧಿಸುವುದು ಸ್ಮೃತಿಗಳ ಕೆಲಸ. ಈ ಸೂಕ್ಷ್ಮ ವಿಧಿಗಳು ಕಾಲಕ್ರಮದಲ್ಲಿ ಆತ್ಮವಿನಾಶಕರಗಳಾಗುತ್ತವೆ. ಅವು ನಮ್ಮನ್ನು ಜೀತದ ಆಳುಗಳಾಗಿ, ಗುಲಾಮರಾಗಿ ಮಾಡುತ್ತವೆ. ತತ್ತ್ವಶಾಸ್ತ್ರವಾದರೋ ಮಾನವ ಜನಾಂಗವನ್ನು ಈ ಬಂಧನದಿಂದ ಮುಕ್ತಗೊಳಿಸುತ್ತದೆ. ಅದು ಕೇವಲ ಪ್ರಚೋದನೆಯನ್ನು ಮಾತ್ರ ನೀಡುತ್ತದೆ. ಅದು ನಮ್ಮ ಕೈಗೆ ದೀವಿಗೆಯನ್ನು ಕೊಡುತ್ತದೆ, ಅದರಿಂದ ನಮ್ಮ ಹಾದಿಯನ್ನು ನಾವೇ ಕಂಡುಕೊಳ್ಳಬಹುದು. ಇದಕ್ಕಿಂತಲೂ ಹೆಚ್ಚಾಗಿ ಏನು ಮಾಡಿದರೂ ಅದರಿಂದ ನಮ್ಮ ಉಪಕ್ರಮ ಶಕ್ತಿಯನ್ನು ಕಿತ್ತುಕೊಂಡಂತಾಗುತ್ತದೆ. ಮಾನವನು ದುರ್ಬಲ. ಅವನು 'ನನಗೆ ಎಲ್ಲ ಸಹಾಯವೂ ಬೇಕು. ಯಾರಾದರೂ ಬಂದು ನನ್ನ ಕೈಹಿಡಿದು ಕರೆದೊಯ್ಯಬೇಕು' ಎಂದೆನ್ನುತ್ತಾನೆ. ಆಗ ಸ್ಮೃತಿಗಳು ಅವನ ಸಹಾಯಕ್ಕೆ ಬರುತ್ತವೆ. ಅವುಗಳಲ್ಲಿರು ವುದು ನಿಜವಾದ ಧರ್ಮವಲ್ಲ, ದಿನನಿತ್ಯದ ನೀತಿ ನಿಯಮಗಳು. ಜೋತುಬೀಳುವುದಕ್ಕೆ ಯಾವುದಾದ ರೊಂದು ಆಧಾರ ಸಿಕ್ಕಿದಾಗ ಮನಸ್ಸಿಗೆ ಏನೋ ಒಂದು ಬಗೆಯ ತೃಪ್ತಿ. ನಿಜವಾದ ತತ್ತ್ವಜ್ಞಾನವು ಗ್ರಂಥಗಳ ದೊಡ್ಡ ರಾಶಿಯ ಭಾರವನ್ನಾಗಲೀ, ಕಠೋರನಿಯಮಗಳ ಕಟ್ಟನ್ನಾಗಲೀ ನಮ್ಮ ಮೇಲೆ ಹೊರಿಸುವುದಿಲ್ಲ. ಅದು ದೀಪದ ಬೆಳಕಿದ್ದಂತೆ—ಪ್ರಜ್ಞೆಯನ್ನು ನೀಡುವುದೆಷ್ಟೋ ಅಷ್ಟೆ. ತತ್ತ್ವ ಶಾಸ್ತ್ರದ್ದು ಅತ್ಯಂತ ಸರಳವಾದ ಮಾರ್ಗದರ್ಶನ. ತತ್ತ್ವಶಾಸ್ತ್ರವು ಜೀವನದ ಇತರ ವಿಷಯಗಳನ್ನೆಲ್ಲಾ ಅತ್ತ ತಳ್ಳೆಂದೇನೂ ನಮಗೆ ಹೇಳುವುದಿಲ್ಲ. ತತ್ತ್ವಜ್ಞಾನವನ್ನು ಅರ್ಥಮಾಡಿಕೊಳ್ಳುವುದಕ್ಕೆ ಹಲವಾರು ಪುಸ್ತಕಗಳ ಸಹಾಯವೇನೂ ಅಗತ್ಯವಿಲ್ಲ.

'ಕರ್ಮ ಮತ್ತು ಚಿಂತನೆಗಳು ಏಕಕಾಲದಲ್ಲಿಯೇ ನಡೆಯಲು ಸಾಧ್ಯವಿಲ್ಲ. ನಾನು ತತ್ತ್ವಚಿಂತನೆ ಮಾಡುವ ಹಾಗಿದ್ದರೆ ಕರ್ಮವನ್ನು ನಿಲ್ಲಿಸಬೇಕು. ಆದರೆ ನೀವು ತತ್ತ್ವಚಿಂತನೆ ಕರ್ಮಗಳನ್ನು ಒಟ್ಟುಗೂಡಿಸುವಂತೆ ಹೇಳುತ್ತೀರಿ, ಇದು ಅಸಾಧ್ಯ' ಎಂದು ಕೆಲವು ಜನ ಹೇಳುತ್ತಾರೆ. ಶ್ರೀಕೃಷ್ಣನು ತತ್ತ್ವಜ್ಞಾನವನ್ನೂ ಜೀವನವನ್ನೂ ಒಂದುಗೂಡಿಸುವಂತೆ ನಮಗೆ ತಿಳಿಸುತ್ತಾನೆ. ಏಕೆಂದರೆ ತತ್ತ್ವಶಾಸ್ತ್ರದ ಮಾರ್ಗದರ್ಶನ ಬೇಕಾಗಿರುವುದು ಬಾಳಿಗೆ. ಜೀವನವಿಲ್ಲದಿದ್ದರೆ ಮಾರ್ಗದರ್ಶನದ

ಅಗತ್ಯವೇ ಇಲ್ಲ. ಈ ಸಮಸ್ಯೆಯನ್ನು ಬಗೆಹರಿಸುವುದು ಹೇಗೆ? ಕೆಲವರು 'ಕರ್ಮವನ್ನು ಬಿಟ್ಟುಬಿಡಿ; ಜೀವಸವನ್ನು ನಿರ್ದಿಷ್ಟವಾದ ಒಂದು ಬಿಂದುವಿನಲ್ಲಿ ಘನೀಭವಿಸುವಂತೆ ಮಾಡಿ ; ಸಮಸ್ಯೆಗೆ ಅದೇ ಅತ್ಯುತ್ತಮವಾದ ಪರಿಹಾರ. ಲೌಕಿಕವನ್ನು ತೊರೆಯಿರಿ, ಏಕೆಂದರೆ ಎಲ್ಲ ಸಮಸ್ಯೆಗಳಿಗೂ ಅದೇ ಮೂಲ ಕಾರಣ' ಎಂದು ಹೇಳುತ್ತಾರೆ. ಆದರೆ, ಸಮಸ್ಯೆಯೇ ಇಲ್ಲದಿರುವಾಗ ಪರಿಹಾರವು ಪರಿಹಾರವೇ ಅಲ್ಲ. ಇನ್ನೊಬ್ಬರು ಬಂದು 'ಇದಕ್ಕೆ ಪರಿಹಾರವೇ ಇಲ್ಲ, ಆದ್ದರಿಂದ ಸಮಸ್ಯೆಯನ್ನು ಕುರಿತು ಒದ್ದಾಡುವುದು ಬೇಡ ; ಕರ್ಮ ಮಾಡುತ್ತಾ ಹೋಗಿ. ನಿಮಗೆಷ್ಟು ಸಾಧ್ಯವೋ ಅಷ್ಟು ಆಸಕ್ತಿಯನ್ನು ಕೂಡಿಸಿಕೊಂಡು ಜೀವಿಸುತ್ತಾ ಹೋಗಿ' ಎಂದು ಹೇಳುತ್ತಾರೆ. ಇಗೋ ಇಲ್ಲಿಯೇ ವೇದಾಂತ ನಮ್ಮ ಸಹಾಯಕ್ಕೆ ಬರುವುದು. ಧೈರ್ಯ ಸರ್ವಸ್ವದೊಡನೆ ಸಮಸ್ಯೆಯನ್ನು ದಿಟ್ಟತನದಿಂದ ಎದುರಿಸಿ ಅದು ನಮಗೆ ಪರಿಹಾರೋಪಾಯವನ್ನು ತಿಳಿಸುತ್ತದೆ. ವೇದಾಂತದ ಈ ಮುಖವನ್ನು ನಮ್ಮ ಜನರು ಕೂಡ ಅರ್ಥಮಾಡಿಕೊಂಡಿಲ್ಲದಿರುವುದು ದುರದೃಷ್ಟ. ನಮಗೆ ಅರ್ಥವಾಗುವುದು ಪುಸ್ತಕದ ವೇದಾಂತ, ವಿರಾಮಕಾಲದ ವೇದಾಂತ. ಆದರೆ ಇದು ಕೇವಲ ಪಾಂಡಿತ್ಯದ ವೇದಾಂತ. ಶ್ರೀಕೃಷ್ಣನು ಬೋಧಿಸಿದುದು ಈ ವೇದಾಂತವನ್ನಲ್ಲ. ಆತನು ಬೋಧಿಸಿದುದು ಯುದ್ಧರಂಗಕ್ಕಾಗಿ ವೇದಾಂತ. ಅದು ಕೇವಲ ವಿರಾಮಕಾಲದ ಹವ್ಯಾಸವಲ್ಲ. ಕಠಿಣವಾದ ಸನ್ನಿವೇಶಗಳ ಮಧ್ಯದಲ್ಲಿ, ಮತ್ತು ನಿತ್ಯ ಜೀವನದ ಹೋರಾಟದಲ್ಲಿ ಅತ್ಯಗತ್ಯವಾದ ಒಂದು ಅತ್ಯುತ್ತಮ ಹವ್ಯಾಸ. ನಮ್ಮ ದೇಶದಲ್ಲಿ ಇತ್ತೀಚೆಗೆ ಬೆಳೆದಿರುವ ಧರ್ಮ ಮತ್ತು ಮತಧರ್ಮಗಳಲ್ಲಿ ವೇದಾಂತದ ಈ ಮುಖವನ್ನು ಬಹು ಮಟ್ಟಿಗೆ ಅಲಕ್ಷಿಸಲಾಗಿದೆ. ಈಗ ನಾವು ಗೀತೆಯ ಈ ಮುಖವನ್ನು ಅದರ ಎಲ್ಲ ವ್ಯಾವಹಾರಿಕ ದೃಷ್ಟಿಯಿಂದಲೂ ಹೊರತರಬೇಕು.

## ೨೦. ಸತ್ಯ : ಸರಳತೆ ಮತ್ತು ಆಡಂಬರ

ಗೀತೆಯಲ್ಲಿ ಒಂದು ಸರಳತೆ ಇದೆ. ಅದನ್ನು ನಾವು ಅನೇಕ ವೇಳೆ ಗಮನಿಸುವುದಿಲ್ಲ. ನಮಗೆ ಜಟಿಲತೆ ಮೈಯುಂಡುಹೋಗಿದೆ, ಸರಳತೆಯನ್ನು ನಾವು ಮೆಚ್ಚಲಾರೆವು. ಮಾನವ ಮನಸ್ಸಿಗೆ ಧರ್ಮ ಮತ್ತು ಮತಗಳ ಹೆಸರಿನಲ್ಲಿ ಪುಸ್ತಕಗಳು, ವಸ್ತ್ರಧಾರಣೆ, ಧಾರ್ಮಿಕ ಕರ್ಮಗಳು ಇತ್ಯಾದಿ ರೂಪಗಳಲ್ಲಿ ಎದ್ದುಕಾಣುವ ಯಾವುದಾದರೊಂದು ಬೇಕು ; ಸರಳವಾದ ವ್ಯಕ್ತಿತ್ವ, ಸರಳವಾದ ಧಾರ್ಮಿಕ ಸ್ವಾರಸ್ಯಗಳು ಅಷ್ಟಾಗಿ ನಮಗೆ ಹಿಡಿಸುವುದಿಲ್ಲ. ಸರಳವಾದ ಸೌಂದರ್ಯವನ್ನು ಸರ್ವಸಾಮಾನ್ಯರಾದ ಜನ ಅರ್ಥಮಾಡಿಕೊಳ್ಳಲಾರರು. ಸರಳವಾದ ಸತ್ಯಕ್ಕೆ ವಿವಿಧ ರೀತಿಯ ಉಡಿಗೆ ತೊಡಿಗೆಗಳನ್ನು ಅಳವಡಿಸಬೇಕು. ಆಗ ನಾವು ಕಾಣುವುದು ನಗ್ನಸತ್ಯವನ್ನಲ್ಲ, ಆಡಂಬರದಿಂದ ಕೂಡಿದ ಸತ್ಯವನ್ನು. ಗೀತೆಯಲ್ಲಾದರೋ ಸತ್ಯವು ಸಂಪೂರ್ಣ ಸರಳರೂಪಿನಿಂದ ಕಾಣಿಸಿಕೊಳ್ಳುತ್ತದೆ. ಅದು ನಮ್ಮನ್ನು ಜೀವನ ಸಮಸ್ಯೆಗಳ ಮಧ್ಯೆ ಸುರಕ್ಷಿತವಾಗಿ ಸಾಗಿಹೋಗಲು ಸಹಾಯ ಮಾಡುತ್ತದೆ. ಸುಖದುಃಖಗಳ ಮೋಹದಿಂದ ಮುಕ್ತರಾಗಿ, ಕೇವಲ ಸತ್ಯದಲ್ಲಿ ಮಾತ್ರ ಅನುರಕ್ತರಾಗುವಂತೆ ಮಾಡುತ್ತದೆ. ಅದು ಬಹಿರಂಗ, ಅಂತರಂಗದ ಎಲ್ಲ ಉಪಾಧಿಗಳಿಂದ ನಮ್ಮನ್ನು ಮುಕ್ತರನ್ನಾಗಿ ಮಾಡಿ ಅಖಂಡ ಶಾಂತಿಯನ್ನೂ ಸ್ವಾತಂತ್ರ್ಯವನ್ನೂ ನೀಡುತ್ತದೆ. ನಮಗೆ ಇಂತಹ ಸ್ವಾವಲಂಬಿಯಾದ ವ್ಯಕ್ತಿ ಸ್ವಾತಂತ್ರ್ಯ ಬೇಕು. ಅದಕ್ಕಾಗಿ ಯಾವ ಬೆಲೆಯನ್ನು ತೆತ್ತರೂ ಚಿಂತೆಯಿಲ್ಲ. ತತ್ತ್ವಶಾಸ್ತ್ರವು ಜೀವನಕ್ಕೆ ನೀಡಬೇಕೆಂದಿರುವವರ ಇದೇ. ಇದೊಂದಿದ್ದರೆ ನಮಗಿನ್ನೇನು ಬೇಕು ? ಇದನ್ನು ಪಡೆದುಕೊಂಡವನು ಮುಪ್ಪುಬಂದರೂ ಲವಲವಿಕೆಯಿಂದ ಇರುತ್ತಾನೆ ; ಎಳೆಯ ಮಗುವಿನಂತಹ ಆ ಲವಲವಿಕೆಯನ್ನು ಸಾಯುವವರೆಗೂ ಉಳಿಸಿಕೊಳ್ಳುತ್ತಾನೆ. ತತ್ತ್ವಜ್ಞಾನವು ಮಾನವನಿಗೆ ಮಾರ್ಗದರ್ಶನ ಮಾಡಿಸುತ್ತದೆ. ಜೀವನದ ಹೋರಾಟದಲ್ಲಿ ಬೆಂದು ಹೋಗದೆ ಮುಂದುವರಿಯಲು ಮತ್ತು ಬಾಳ ಪಯಣದ

ಕೊನೆಯಲ್ಲಿಯೂ ಆರಂಭದಲ್ಲಿದ್ದಂತೆಯೇ ಲವಲವಿಕೆಯಿಂದಿರಲು ಅದು ಸಹಾಯ ಮಾಡಬೇಕು. ಅದು ತತ್ತ್ವಜ್ಞಾನವೆನ್ನುವುದಕ್ಕೆ ಇದೇ ನಿಜವಾದ ಪರೀಕ್ಷೆ.

## ೨೧. ಬಳಲಿದ ಮನಸ್ಸು ಸತ್ಯವನ್ನು ಗ್ರಹಿಸಲಾರದು

ಎರಡನೆಯ ಅಧ್ಯಾಯದ ಆರಂಭದಲ್ಲಿಯೇ ಶ್ರೀಕೃಷ್ಣನು ಈ ಪ್ರಾಣದಾಯಕವಾದ ಭಾವನೆಗಳನ್ನು ನೀಡಿದ್ದಾನೆ. ಅಗತ್ಯವಾದ ಧೈರ್ಯ ಮತ್ತು ಮನಶ್ಶಕ್ತಿಯಿಂದ ಸಜ್ಜಿತರಾದವರು ಗೀತೆಯ ನಿಜವಾದ ಉಪದೇಶವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರು. ದುಃಖತಪ್ತವಾದ ಅಥವಾ ಮೋಹಯುಕ್ತವಾದ ಮನಸ್ಸಿಗೆ ಈ ಮಹತ್ತಾದ ಭಾವಗಳು ಅರ್ಥವಾಗುವುದಿಲ್ಲ. ಬಳಲಿದ ಮನಸ್ಸಿಗೆ ಸತ್ಯ ಅರ್ಥವಾಗುವುದಿಲ್ಲ. ಬೋಧನೆ ಸ್ಥಿರವಾಗಿ ನಾಟಬೇಕಾದರೆ ಮನಸ್ಸು ಶಾಂತವಾಗಿ ಸಮರ್ಥವಾಗಿರಬೇಕು. ದುಃಖತಪ್ತನಾದ ಅರ್ಜುನನನ್ನು ಪ್ರಶಾಂತನಾಗುವಂತೆ ಸಮಾಧಾನಗೊಳಿಸಿ, ಆಮೇಲೆ ಸತ್ಯಜ್ಞಾನವನ್ನು ಉಪದೇಶಿಸಲಾಗಿದೆ. ದುಃಖತಪ್ತ ಸ್ಥಿತಿಯಲ್ಲಿರುವಾಗ ನಾವು ಎಲ್ಲವನ್ನೂ ಸಂಕುಚಿತ ದೃಷ್ಟಿಯಿಂದ ನೋಡುತ್ತೇವೆ. ಆದ್ದರಿಂದಲೇ ಅರ್ಜುನನು 'ನನಗೆ ಯಾವುದು ಶ್ರೇಯಸ್ಕರವೆಂಬುದನ್ನು ನನ್ನ ಮೋಹಯುಕ್ತವಾದ ಚಿತ್ತ ತಿಳಿಯಲಶಕ್ತವಾಗಿದೆ. ಆದ್ದರಿಂದ ಯಾವುದರಿಂದ ನನಗೆ ಶ್ರೇಯಸ್ಸಾಗುತ್ತದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸು ; ಯಾವುದು ಸರಿ ಎಂಬುದನ್ನು ನನಗೆ ಬೋಧಿಸು ; ನಾನೀಗ ನಿನ್ನ ಪಾದಗಳಲ್ಲಿ ಶರಣಾಗಿದ್ದೇನೆ' (ಅಧ್ಯಾಯ II, ಶ್ಲೋಕ ೭) ಎಂದು ಕೇಳಿಕೊಂಡನು.

ಹದಿನೆಂಟನೆಯ ಅಧ್ಯಾಯದಲ್ಲಿ ಉಪದೇಶವೆಲ್ಲಾ ಮುಗಿದ ಮೇಲೆ ಶ್ರೀಕೃಷ್ಣನು ಅರ್ಜುನನನ್ನು ಕುರಿತು 'ನಿನಗೆ ಸಮಾಧಾನವಾಯಿತೇ ? ನಿನ್ನ ಮನಸ್ಸು ಶಾಂತವಾಯಿತೆ ? ನಿನ್ನ ಸಂದೇಹ ನಿವಾರಣೆಯಾಯಿತೆ ?' (ಶ್ಲೋಕ ೭೨-೭೩) ಎಂದು ಕೇಳುತ್ತಾನೆ.

ಕಚ್ಚಿದೇತ ತ್ ಶ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ;
ಕಚ್ಚಿದಜ್ಞಾನಸಮ್ಮೋಹಃ ಪ್ರನಷ್ಟಸ್ತೇ ಧನಂಜಯ—

*ಹೇ ಪಾರ್ಥ ! ಇದನ್ನು (ನನ್ನ ಉಪದೇಶವನ್ನು ) ಏಕಾಗ್ರಚಿತ್ತದಿಂದ ಕೇಳಿದೆಯಲ್ಲವೆ ? ಹೇ ಧನಂಜಯ ! ನಿನ್ನ ಅಜ್ಞಾನಮೂಲವಾದ ಭ್ರಾಂತಿಯು ನಾಶವಾಯಿತೇನು ?*

ಇದಕ್ಕೆ ಅರ್ಜುನ ಉತ್ತರ ಕೊಡುತ್ತಾನೆ.

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್‌ಪ್ರಸಾದಾನ್ಮಯಾಚ್ಯುತ ;
ಸ್ಥಿತೋಽಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ—

*ಹೇ ಅಚ್ಯುತ! ನಿನ್ನ ಅನುಗ್ರಹದಿಂದ ನನ್ನ ಮೋಹವು ನಾಶವಾಯಿತು ; ನನ್ನ ನೆನಪನ್ನು ನಾನು ಪಡೆದಿದ್ದೇನೆ ; ನನ್ನ ಸಂದೇಹಗಳು ನಿವಾರಣೆಯಾಗಿ, ನಾನು ಸ್ಥಿರನಾಗಿದ್ದೇನೆ. ನಿನ್ನ ಮಾತನ್ನು ನಾನು ಪಾಲನೆ ಮಾಡುತ್ತೇನೆ.*

ಗೀತೆಯು ಬೆಳಕನ್ನು ನೀಡಿ ಸಂದೇಹದ ಕತ್ತಲನ್ನು ನಿವಾರಿಸುತ್ತದೆ. ಅದು ಅರ್ಜುನನ ಭ್ರಾಂತಿಯನ್ನು ನಿವಾರಣೆ ಮಾಡಿತು. ಅದೇ ಗೀತೆಯ ಮೂಲಗುಣ ಮತ್ತು ಶಕ್ತಿ. ನಮ್ಮೆಲ್ಲರ ವಿಚಾರದಲ್ಲಿಯೂ ಅಷ್ಟೆ. ಅದು ನಮ್ಮ ಭ್ರಾಂತಿ ಸಂದೇಹಗಳನ್ನು ನೀಗಿ, ಜೀವನವನ್ನು ದಿಟ್ಟತನದಿಂದಲೂ ಅಖಂಡವಾಗಿಯೂ ನೋಡಬಲ್ಲವರನ್ನಾಗಿ ಮಾಡಿದಾಗ ಮಾತ್ರವೇ ಅದರ ಉದ್ದೇಶ ಸಾರ್ಥಕವಾದಂತಾಗುತ್ತದೆ.

## ೩. ಶ್ರೀಕೃಷ್ಣ : ಆದರ್ಶ ಗುರು

### ೨೨. 'ಹೇಡಿತನಕ್ಕೆ ಬಲಿಯಾಗದಿರು !'

ಸುಪುಷ್ಟವಾದ ಆಶಾವಾದದ ನಾದ ತರಂಗಗಳೇಳುವಂತೆ ಶ್ರೀಕೃಷ್ಣನು ಅರ್ಜುನನಿಗೆ ತನ್ನ ದೌರ್ಬಲ್ಯವನ್ನು ಕೊಡವಿಕೊಂಡು ಸ್ಥಿರವಾಗಿ ನಿಲ್ಲುವಂತೆ ಅಪ್ಪಣೆ ಮಾಡಿದ. ತಾನು ಅರ್ಜುನನಿಗೆ ಯಾವುದಾದರೊಂದು ಬಗೆಯ ವಿವೇಕಜ್ಞಾನವನ್ನು ಬೋಧಿಸುವುದಕ್ಕೂ ಮೊದಲು ಅವನ ಮನಸ್ಸನ್ನು ಸ್ತಿಮಿತಗೊಳಿಸುವುದು ಶ್ರೀಕೃಷ್ಣನ ಉದ್ದೇಶವಾಗಿತ್ತು. ಏಕೆಂದರೆ, ದುಃಖಾಕ್ರಾಂತ ಮನಸ್ಸಿಗೆ ವಿವೇಕ ಬೋಧೆ ಸ್ವಲ್ಪವೂ ಹಿಡಿಸುವುದಿಲ್ಲ. ಖಿನ್ನಸ್ಥಿತಿಯಿಂದ ಮುಕ್ತರಾಗಿ ಪ್ರಶಾಂತಮನಸ್ಕರಾಗದ ಹೊರತು ನಮಗೆ ಉದಾತ್ತವಾದ ಉಪದೇಶ ಹಿಡಿಸುವುದು ಸಾಧ್ಯವಿಲ್ಲ. ಇದು ದಿನಬಳಕೆಯ ಅನುಭವದಲ್ಲಿ ಕಾಣಬರುತ್ತದೆ. ಆದ್ದರಿಂದ ಅಗತ್ಯವಾಗಿ ಮಾಡಲೇಬೇಕಾದ ಮೊದಲ ಕೆಲಸವೆಂದರೆ ಅರ್ಜುನನ ಮನಸ್ಸನ್ನು ಸಮಾಧಾನಗೊಳಿಸುವುದು. ಅದಾದ ಮೇಲೆಯೇ ಅವನು ತರ್ಕ ಮತ್ತು ಉಪದೇಶಗಳನ್ನು ಕೇಳುವುದಾಗಲೀ, ಅದರಿಂದ ಪ್ರಯೋಜನ ಪಡೆಯುವುದಾಗಲೀ ಸಾಧ್ಯವಿತ್ತು. ಆದ್ದರಿಂದ ಶ್ರೀಕೃಷ್ಣನು ಅರ್ಜುನನನ್ನು ಗಡುಸಾದ ಧ್ವನಿಯಿಂದಲೇ ಸಂಬೋಧಿಸುತ್ತಾನೆ, (ಗೀತೆ II-೩); 'ಹೇ ಅರ್ಜುನ ! ಈ ಬಗೆಯಾದ ದೌರ್ಬಲ್ಯಕ್ಕೆ ಬಲಿಯಾಗಬೇಡ, ಇದು ನಿನಗೆ ಯೋಗ್ಯವಾದುದಲ್ಲ. ಹೇ ಶತ್ರುನಾಶಕ ! ಕ್ಷುದ್ರವಾದ ಈ ಹೃದಯ ದೌರ್ಬಲ್ಯವನ್ನು ಬಿಟ್ಟು, ಮೇಲಕ್ಕೇಳು.'

ಈ ಬಗೆಯಾದ ಖಂಡನೆಯ ಫಲ ಬುದ್ಧಿಯನ್ನು ಹದಗೊಳಿಸುವುದಾಗಿತ್ತು ; ಆ ಖಂಡನೆಯು ಅರ್ಜುನನ ಮನಸ್ಸನ್ನು ಸ್ಥಿರಗೊಳಿಸಿತು. ನಾವು ಗೀತೆಯನ್ನು ಮುಂದಕ್ಕೆ ಓದಿದಂತೆಲ್ಲ ಅರ್ಜುನನು ಪ್ರಶಾಂತನಾಗುತ್ತ ಹೋಗಿರುವುದು ಕಾಣಬರುತ್ತದೆ. ಅವನು ಶ್ರೀಕೃಷ್ಣನೊಡನೆ ಮಾತನಾಡುವುದರಲ್ಲಿ ಒಂದು ಬಗೆಯಾದ ಸಮರ್ಥನೆ ಕಂಡುಬರುತ್ತದೆ. ಅವನು ತನ್ನ ಸಂದೇಹಗಳನ್ನು ವಿಶೇಷ ದುಃಖ ಉದ್ವೇಗಗಳಿಲ್ಲದೆ ಹೆಚ್ಚು ಯುಕ್ತಿಯುಕ್ತವಾಗಿ ಪ್ರತಿಪಾದಿಸಹೊರಡುತ್ತಾನೆ. ಆತನು 'ಈ ಹರಿತವಾದ ಬಾಣಗಳಿಂದ ಭೀಷ್ಮ, ದ್ರೋಣರೊಡನೆ ನಾನು ಹೇಗೆ ಯುದ್ಧ ಮಾಡಲಿ ? ಅವರು ನನಗೆ ಪೂಜಾರ್ಹರು ; ಅರ್ಥಕಾಮಿಗಳಾದ ಅವರನ್ನು ಕೊಂದು ನೆತ್ತರಂಟಿದ ಭೋಗಗಳನ್ನು ನಾನು ಸಂಪಾದಿಸಬೇಕಾಗುತ್ತದೆ' (ಗೀತೆ II-೪-೫) ಎಂದು ಹೇಳುತ್ತಾನೆ.

ಇದಾದ ಮೇಲೆ ಅರ್ಜುನನು ತನ್ನ ಗುರುವಿಗೆ ಶರಣಾಗುತ್ತಾನೆ (ಗೀತೆ II-೭) :

ಕಾರ್ಪಣ್ಯ ದೋಷೋಪಹತ ಸ್ವಭಾವಃ ।
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ ;
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಮ್ ॥

*ಅಜ್ಞಾನದ ದೋಷದಿಂದ ಹೊಡೆಯಲ್ಪಟ್ಟ ಸ್ವಭಾವವುಳ್ಳವನಾಗಿ, ಕರ್ತವ್ಯಧರ್ಮದ ವಿಚಾರದಲ್ಲಿ ಮೂಢ ಚೇತನನಾಗಿ ನಿನ್ನನ್ನು ಕೇಳಿಕೊಳ್ಳುತ್ತಿದ್ದೇನೆ; ಯಾವುದು ನಿಶ್ಚಯವಾಗಿ ಶ್ರೇಯಸ್ಕರವಾದುದೋ ಅದನ್ನು ತಿಳಿಸು ; ನಾನು ನಿನ್ನ ಶಿಷ್ಯನಾಗಿದ್ದೇನೆ. ನಿನ್ನನ್ನು ಮರೆ ಹೊಕ್ಕಿರುವ ನನಗೆ ಉಪದೇಶವನ್ನು ನೀಡು.*

### ೨೩. ಶ್ರೇಯಸ್ಸು, ಪ್ರೇಯಸ್ಸು

ತನ್ನ ಈ ಮಾತುಗಳ ಮೂಲಕ ಅರ್ಜುನನು ತನ್ನ ಸಮಸ್ಯೆಯನ್ನು ಶ್ರೀಕೃಷ್ಣನ ಮುಂದಿಟ್ಟು, ಆತನ ಮಾರ್ಗದರ್ಶನವನ್ನು ಬೇಡುತ್ತಾನೆ. ಹೊರಗಡೆ ಸನ್ನಿಹಿತವಾಗಿರುವ ಸರ್ವನಾಶ ; ಅಂತರಂಗ

ದಲ್ಲಿ ತುಮುಲ—ಇವುಗಳ ಮಧ್ಯೆ ಸಿಕ್ಕಿಕೊಂಡಿರುವ ಮನಸ್ಸು ಉನ್ನತ ಶಕ್ತಿಗೆ ಶರಣಾಗುತ್ತದೆ. ಅರ್ಜುನ ಅದೃಷ್ಟಶಾಲಿ. ಅವನಿಗೆ ದಾರಿ ತೋರಲು ಶ್ರೀಕೃಷ್ಣನಿದ್ದ. ಅವನು ತನ್ನ ಸಮಸ್ಯೆಯನ್ನು ಶ್ರೀಕೃಷ್ಣನ ಮುಂದಿಟ್ಟ ; 'ಯಾವುದು ಸರಿ, ಯಾವುದು ತಪ್ಪು ಎನ್ನುವ ವಿಚಾರದಲ್ಲಿ ನಾನು ಮುಂದೋರದವನಾಗಿದ್ದೇನೆ. ನಾನು ಉದ್ರೇಕಪೂರ್ಣವಾದ ಸನ್ನಿವೇಶದಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ. ನನಗೆ ನಿನ್ನ ಸಹಾಯ ಬೇಕು. ನನ್ನ ಸ್ವಭಾವಕ್ಕೆ ಸಂಕುಚಿತ ದೃಷ್ಟಿಯ ದಂಶನವಾಗಿದೆ. ಧರ್ಮವಾವುದು, ಅಧರ್ಮವಾವುದು ಎಂಬುದನ್ನು ನಿರ್ಧರಿಸಲು ನನಗೆ ಶಕ್ತಿಯಿಲ್ಲದಂತಾಗಿದೆ. ನನ್ನ ಶ್ರೇಯಸ್ಸಿನ ದೃಷ್ಟಿಯಿಂದ ಈಗ ನನ್ನ ಕರ್ತವ್ಯವೇನು ? ನನ್ನ ಸ್ಥಿತಿಗತಿಯ ಸನ್ನಿವೇಶವನ್ನೆಲ್ಲಾ ಸಂಪೂರ್ಣವಾಗಿ ಗಮನಿಸಿ ನೀನು ಉತ್ತರ ಕೊಡಬೇಕೆಂಬುದು ನನ್ನ ಅಪೇಕ್ಷೆ. ಎಲ್ಲ ಸಂದಿಗ್ಧ ಸನ್ನಿವೇಶಗಳಲ್ಲಿಯೂ ನಮಗೆ ನಿಜವಾದ ಶ್ರೇಯಸ್ಸನ್ನು ನೀಡುವ ಹಾದಿಯನ್ನು ಹುಡುಕಬೇಕೇ ಹೊರತು ನಮಗೆ ಅಪ್ಯಾಯಮಾನವಾದುದನ್ನಲ್ಲ, ನಮಗೆ ಶ್ರೇಯಸ್ಸಾದುದು ಬೇಕೇ ಹೊರತು ಪ್ರೇಯಸ್ಸಾದುದಲ್ಲ. ಕಠೋಪನಿಷತ್ತಿನಲ್ಲಿ ಯಮನು ನಚಿಕೇತನಿಗೆ ಹೇಳುವ ಮಾತುಗಳಿಂದ ನಮಗೆ ಇದು ಗೊತ್ತಾಗುತ್ತದೆ : (II-೧)

ಅನ್ಯತ್ ಶ್ರೇಯೋ ಅನ್ಯದುತೈವ ಪ್ರೇಯಃ<br>
ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ;<br>
ತಯೋಃ ಶ್ರೇಯ ಆದದಾನಸ್ಯ ಸಾಧುರ್ಭವತಿ<br>
ಹೀಯತೇ ಅರ್ಥಾತ್ ಯ ಉ ಪ್ರೇಯೋ ವೃಣೀತೇ ||

*ಶ್ರೇಯಸ್ಸು ಬೇರೆ, ಪ್ರೇಯಸ್ಸು ಬೇರೆ. ಭಿನ್ನ ಪ್ರಯೋಜನವುಳ್ಳವುಗಳಾಗಿ ಅವೆರಡೂ ಮಾನವನನ್ನು ಬಂಧಿಸುತ್ತವೆ. ಅವೆರಡರಲ್ಲಿ ಶ್ರೇಯಸ್ಸನ್ನು ಅನುಸರಿಸುವವನಿಗೆ ಒಳ್ಳೆಯದಾಗುತ್ತದೆ; ಪ್ರೇಯಸ್ಸನ್ನು ಅನುಸರಿಸುವವನು ಪುರುಷಾರ್ಥದಿಂದ ಚ್ಯುತನಾಗುತ್ತಾನೆ.*

ಅವಿವೇಕಿಯಾದವನು ಆಪ್ಯಾಯಮಾನವಾದುದನ್ನೇ ಅನುಸರಿಸಿ ಕಡೆಯಲ್ಲಿ ದುಃಖಕ್ಕೆ ಒಳಗಾಗುತ್ತಾನೆ. ಜೀವನದ ನಿಜವಾದ ಹೆಗ್ಗುರಿ ಅವನಿಗೆ ದಕ್ಕುವುದಿಲ್ಲ. ಕಠೋಪನಿಷತ್ತಿನ ಎರಡನೇ ಅಧ್ಯಾಯದಲ್ಲಿ ಧರ್ಮದ ಮುಖ್ಯ ಸಮಸ್ಯೆಯನ್ನು ಕುರಿತು ಯಮನು ಚರ್ಚಿಸಿರುವುದು ಹೀಗೆಯೇ. ಇಲ್ಲಿ "ಅರ್ಜುನನು 'ಯತ್‌ಶ್ರೇಯಃ... ಮೇ—ನನ್ನ ಶ್ರೇಯಸ್ಸಿಗೆ ಸಾಧನವಾದುದಾವುದು ?' ಎಂಬ ಪ್ರಶ್ನೆಯನ್ನು ಕೇಳುತ್ತಾನೆ. ಶ್ರೇಯಸ್ಸು ಮತ್ತು ಪ್ರೇಯಸ್ಸು ಈ ಎರಡರಲ್ಲಿ ಯಾವುದು ಮಂಗಳಕರವೆಂಬುದನ್ನು ದಯವಿಟ್ಟು ತಿಳಿಸು ; ನೀನು ಹೇಳಿದ ಹಾಗೆ ನಾನು ಮಾಡುತ್ತೇನೆ. ನನಗೆ ಯಾವುದು ಕ್ಷೇಮಕರವೆಂಬುದನ್ನು ನೀನೇ ನಿಶ್ಚಯಿಸು ; ನಾನು ಉದ್ವಿಗ್ನನಾಗಿದ್ದೇನೆ ; ಆದ್ದರಿಂದ ಯಾವುದು ಒಳ್ಳೆಯದೆಂದು ನನಗೆ ಗೊತ್ತಿಲ್ಲ. ನಾನು ನಿನ್ನ ಶಿಷ್ಯ, ನಿನ್ನ ತೀರ್ಮಾನವನ್ನು ನಾನು ಒಪ್ಪಿಕೊಳ್ಳುತ್ತೇನೆ. ನಿನ್ನನ್ನು ನನ್ನ ಗೆಳೆಯನೆಂದು, ಧರ್ಮಜ್ಞಾನಿಯೆಂದು, ಮಾರ್ಗದರ್ಶಕನೆಂದು ಸ್ವೀಕರಿಸಿದ್ದೇನೆ" ಎಂದು ಹೇಳುತ್ತಾನೆ.

ಹೀಗೆ, ಎರಡನೆ ಅಧ್ಯಾಯದ ಸುಂದರವಾದ ಏಳನೇ ಪದ್ಯವು ಗೀತೆಯ ಜ್ಞಾನವನ್ನು ಉಪದೇಶಿಸುವುದಕ್ಕೆ ಹೆದ್ದಾರಿಯನ್ನು ಹಾಕಿಕೊಡುತ್ತದೆ. ತಳಮಳಗೊಂಡು ಉದ್ವಿಗ್ನನಾಗಿರುವ ಅರ್ಜುನನು ಶ್ರೀಕೃಷ್ಣನಿಗೆ ಶರಣಾಗಿ ಮಾರ್ಗದರ್ಶನವನ್ನು ಬೇಡುತ್ತಾನೆ—ಉದ್ವಿಗ್ನವಾದ ಮನಸ್ಸು ಪ್ರಶಾಂತವಾದ ಧರ್ಮಜ್ಞಾನಕ್ಕೆ ಶರಣಾಗುತ್ತದೆ. ನಮ್ಮ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿ, ನಮ್ಮಲ್ಲಿರುವ ಅಲ್ಪ ಸ್ವಲ್ಪ ವಿವೇಕ ಜ್ಞಾನವನ್ನು ನಾಶಮಾಡುವ ವೆಂಕ ಶೀನ ನಾಣ ಇವರಿಗೆಲ್ಲ ಶರಣಾಗಬೇಕಾಗಿಲ್ಲ. ಕಠೋಪನಿಷತ್ತು ಈ ಅಪಾಯದಿಂದ ದೂರವಿರುವಂತೆ ನಮಗೆ ಎಚ್ಚರಿಕೆ ನೀಡುತ್ತದೆ (II-೫).

ಅವಿದ್ಯಾಯಾಂ ಅಂತರೇ ವರ್ತಮಾನಾಃ
ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।
ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ
ಅಂಧೇನೈವ ನೀಯಮಾನಾ ಯಥಾಂಧಾಃ ॥

*ಮೂಢರು ಅವಿದ್ಯೆಯ ಮಧ್ಯದಲ್ಲಿ ಇರುವವರಾಗಿ, ತಾವೇ ಧೀರರು ಪಂಡಿತರು ಎಂದು ತಿಳಿದುಕೊಂಡು, ವಕ್ರಗತಿಯಲ್ಲಿ ನಡೆಯುತ್ತಾ, ಕುರುಡನೇ ಕರೆದುಕೊಂಡು ಹೋಗುತ್ತಿರುವ ಕುರುಡರಂತೆ ತೊಳಲುತ್ತಿರುವರು.*

## ೨೪. ಆಚಾರ್ಯನಾಗಿ ಶ್ರೀಕೃಷ್ಣ

ನಮಗೆ ಈಗಾಗಿರುವ ಶ್ರೀಕೃಷ್ಣನ ಪರಿಚಯದಿಂದ ಆತನು ಜ್ಞಾನಿಯಾಗಿದ್ದನೆಂದೂ, ಆತನ ಸುತ್ತಿನ ಜಗತ್ತು ಆತನಿಂದ ಮಾರ್ಗದರ್ಶನವನ್ನು ಬಯುಸುತ್ತಿತ್ತೆಂದೂ ಅರ್ಥವಾಗುತ್ತದೆ. ಆದ್ದರಿಂದ ಅರ್ಜುನನು ಆತನಿಂದ ಮಾರ್ಗದರ್ಶನವನ್ನು ಬೇಡಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ನಾನು ಈ ಹಿಂದೆಯೇ ಸೂಚಿಸಿರುವಂತೆ ಕೃಷ್ಣನು ಯಾವಾಗಲೂ ಅನಾಸಕ್ತನಾಗಿದ್ದನು—ಕಾರ್ಯದಲ್ಲಿ ಮಗ್ನನಾಗಿದ್ದರೂ, ಆತನು ತನ್ನ ಮನಸ್ಸನ್ನು ಮಾತ್ರ ಊರ್ಧ್ವಮುಖವಾಗಿಡುತ್ತಿದ್ದನು. ಎಮರ್ಸನ್ನನು ಆದರ್ಶ ಜೀವನವನ್ನು ಕುರಿತು ವಿಚಾರ ಮಾಡುತ್ತಾ 'ಗುಂಪಿನಲ್ಲಿ ಗೋವಿಂದ ಎನ್ನುವುದಾಗಲೀ, ಏಕಾಂತದಲ್ಲಿ ಪ್ರಶಾಂತಿಯಿಂದಿರುವುದಾಗಲೀ ಬಹಳ ಸುಲಭ ; ಆದರೆ ಆದರ್ಶ ಪುರುಷನು ಸಮಾಜ ಮಧ್ಯದಲ್ಲಿದ್ದು ಕಾರ್ಯಮಗ್ನನಾಗಿರುವಾಗಲೂ ತನ್ನ ಬುದ್ಧಿಯನ್ನು ಏಕಾಂತವಾಗಿಯೇ ಇಟ್ಟು ಕೊಂಡಿರುತ್ತಾನೆ' ಎಂದು ಗೀತೆಯ ಸುಪ್ರಸಿದ್ಧ ಶ್ಲೋಕವೊಂದನ್ನು ಸರಳಾನುವಾದ ಮಾಡಿ ಹೇಳು ತ್ತಾನೆ. ಲೋಕದ ಆಣತಿಗೆ ತಕ್ಕಂತೆ ಅಳುವುದೂ, ಅದರ ಆಣತಿಗೆ ತಕ್ಕಂತೆ ನಗುವುದೂ ಸರ್ವಸಾಮಾನ್ಯವಾದ ಸಂಗತಿ ; ಆದರೆ, ಸಂತೆಯಲ್ಲಿರುವಾಗಲೂ ಮನಸ್ಸನ್ನು ಪ್ರಶಾಂತವಾಗಿಟ್ಟು ಕೊಂಡಾಗ ಮಾತ್ರ ಪರಿಪೂರ್ಣತೆಯ ಸಾಧನೆಯಾದಂತಾಗುತ್ತದೆ. ಇಲ್ಲದಿದ್ದರೆ, ಅದು ಏಕಮುಖ ವಾದ ಬೆಳವಣಿಗೆ ಮಾತ್ರ.

ಅರ್ಜುನನು ಉದ್ವಿಗ್ನನಾಗಿರುವಾಗ ಶ್ರೀಕೃಷ್ಣನು ಪ್ರಶಾಂತನಾಗಿ ಮುಗುಳ್ನಗುತ್ತಾ ಮಾತನಾಡು ತ್ತಾನೆ. ಅವನ ಉದ್ವಿಗ್ನತೆಯನ್ನು ಹೋಗಲಾಡಿಸಬಲ್ಲೆನೆಂಬುದು ಆತನಿಗೆ ಚೆನ್ನಾಗಿ ಗೊತ್ತಿದೆ. ಆದ್ದರಿಂದ ಅಂಥ ಮನುಷ್ಯರಲ್ಲಿ ಶರಣಾದರೆ ಉದ್ಧಾರವು ಶತಃಸಿದ್ಧ. ಇಲ್ಲಿ ಶಿಷ್ಯನು ಮಹಾತ್ಮ, ಗುರುವೂ ಮಹಾತ್ಮ. ಆದ್ದರಿಂದ ಮಹಾಶಿಷ್ಯನು ಮಹಾಗುರುವನ್ನು ಸಂಧಿಸಿದಾಗ ಅವರ ಭೇಟಿಯಿಂದ ಜೀವದಾಯಕವಾದ ಭಾವನೆಗಳಿಂದ ಕೂಡಿದ ಹೇಳಿಕೆಯು ಹೊರ ಹೊಮ್ಮುವುದೆಂದು ನಾವು ನಿರೀಕ್ಷಿಸುತ್ತೇವೆ. ಕಠೋಪನಿಷತ್ತು ಇದನ್ನು 'ಆಶ್ಚರ್ಯೋಽವಕ್ತಾ ಕುಶಲೋಽಸ್ಯಲಬ್ಧಾ । ಆಶ್ಚರ್ಯೋಽಜ್ಞಾತಾ ಕುಶಲಾನುಶಿಷ್ಟಃ—ಆಶ್ಚರ್ಯಕರನಾದ ಶಿಷ್ಯನೂ, ಆಶ್ಚರ್ಯಕರನಾದ ಗುರುವೂ ಪರಸ್ಪರ ಭೇಟಿಯಾದಾಗ ಮಹಾವಿವೇಕ ಜ್ಞಾನ ಉದಿಸುತ್ತದೆ' ಎಂಬ ಮಾತುಗಳಲ್ಲಿ ತಿಳಿಸುತ್ತದೆ. ಆದ್ದರಿಂದ ಅರ್ಜುನನು ಶ್ರೀಕೃಷ್ಣನನ್ನು ತನ್ನ ಮಾರ್ಗದರ್ಶಿಯಾಗಿ ಸ್ವೀಕರಿಸುತ್ತಾನೆ. ನಾವು ಒಬ್ಬ ಮನುಷ್ಯನ ಯೋಗ್ಯತೆಯನ್ನು ಎಲ್ಲ ಮುಖದಿಂದಲೂ ಪರೀಕ್ಷಿಸಿ, ಅವನು ಯೋಗ್ಯನೆಂದು ಸ್ಪಷ್ಟವಾದ ಮೇಲೆ ಅವನನ್ನು ಮರೆಹೊಕ್ಕರೆ, ಆಗ ನಾವು ಅವನ ಕೈಯಲ್ಲಿ ಸುರಕ್ಷಿತರಾಗುತ್ತೇವೆ. ಹಾಗೆ ಮಾಡುವುದಕ್ಕೆ ಬದಲಾಗಿ ವಿವೇಚನೆಯಿಲ್ಲದೆ ಸ್ವಾತಂತ್ರ್ಯವನ್ನು ಸಿಕ್ಕಿದವನ ಕೈಗೆ ಒಪ್ಪಿಸುವುದರಿಂದ ನಮ್ಮ ಸರ್ವನಾಶವಾಗುವ ಸಂಭವವುಂಟು. ಈ ದೇಶದಲ್ಲಿ ನಾವು ಇದರ ಕಡೆ ವಿಶೇಷ ಗಮನವನ್ನು ನೀಡಬೇಕಾಗಿದೆ. ಅನೇಕ ಗುರುಗಳಿದ್ದು ಶಿಷ್ಯರ ಸಂಖ್ಯೆ ಕಡಿಮೆಯಾಗಿದ್ದಾಗ ಯಾರನ್ನು

ಆಶ್ರಯಿಸಬೇಕೆಂಬುದೇ ಗೊತ್ತಾಗುವುದಿಲ್ಲ. ಶಂಕರಾಚಾರ್ಯರನ್ನು ಸ್ತುತಿಸುವ ಸುಂದರ ಶ್ಲೋಕವೊಂದಿದೆ ; ಅದರಲ್ಲಿ ಈ ಸ್ಥಿತಿಯನ್ನು ಕುರಿತ ವ್ಯಂಗ್ಯ ಟೀಕೆಯೊಂದಿದೆ :

ಗುರವೋ ಬಹವಃ ಸನ್ತಿ ಶಿಷ್ಯವಿತ್ತಾಪಹಾರಿಣಃ
ತಮೇಕಂ ಶಂಕರಂ ವಂದೇ ಶಿಷ್ಯಸಂತಾಪ ಹಾರಿಣಂ

*ಶಿಷ್ಯರ ಹಣವನ್ನು ಅಪಹರಿಸುವ ಗುರುಗಳೆಷ್ಟೋ ಜನರುಂಟು ; ಅಂತಹ ಗುರುಗಳಿಂದ ಬೇರೆಯವರಾಗಿ, ಶಿಷ್ಯರ ಸಂತಾಪವನ್ನು ಹೋಗಲಾಡಿಸುವ ಶಂಕರರನ್ನು ನಾನು ನಮಸ್ಕರಿಸುತ್ತೇನೆ.*

### ೨೫. ಸದ್ಗುರುವಿನ ಲಕ್ಷಣಗಳು

ಒಮ್ಮೆ ಅಂತಹ ಗುರುಗಳು ಸಿಕ್ಕ ಪಕ್ಷದಲ್ಲಿ ಅವರನ್ನು ನಾವು ಆಶ್ರಯಿಸುವುದರಲ್ಲಿ ಯಾವ ತೊಂದರೆಯೂ ಇಲ್ಲ. ಏಕೆಂದರೆ, ನಾವು ಆಶ್ರಯಿಸುವುದು ಯಾರೋ ಒಬ್ಬ ವ್ಯಕ್ತಿಯನ್ನಲ್ಲ, ಅವನಲ್ಲಿ ಆವಿರ್ಭವಿಸಿರುವ ಜ್ಞಾನವನ್ನು. ಹಾಗೆ ಮಾಡದೆ ನಾವು ಸಿಕ್ಕಸಿಕ್ಕವರನ್ನೆಲ್ಲಾ ಆಶ್ರಯಿಸಿದರೆ ಗುರು ಶಿಷ್ಯರಿಬ್ಬರಿಗೂ ಕೇಡು. ಶ್ರೀರಾಮಕೃಷ್ಣ ಪರಮಹಂಸರು ತಮ್ಮ ದೃಷ್ಟಾಂತ ಕಥೆಯೊಂದರಲ್ಲಿ ಹೀಗೆ ಹೇಳುತ್ತಾರೆ : 'ಒಂದು ಸಲ ನೀರುಹಾವೊಂದು ಕಪ್ಪೆಯನ್ನು ಹಿಡಿಯಿತು. ಆದರೆ ನುಂಗುವುದಕ್ಕಾಗಲಿಲ್ಲ. ಆ ಹಾವು ನುಂಗಲೂಲಾರದು, ಬಿಡಲೂ ಒಲ್ಲದು. ಆ ಕಪ್ಪೆ ನೋವಿನಿಂದ ಒಂದೇ ಸಮ ಅರಚುತ್ತಿದೆ. ಈ ನೀರುಹಾವಿಗೂ ತುಂಬ ಕಷ್ಟವಾಯಿತು. ಒಂದು ನಾಗರ ಹಾವೇನಾದರೂ ಕಪ್ಪೆಯನ್ನು ಹಿಡಿದಿದ್ದರೆ ಒಂದೆರಡು ಸಲ ಅರಚಿಕೊಳ್ಳುವುದರೊಳಗಾಗಿ ಅದರ ಬಾಯಿ ಕಟ್ಟಿಹೋಗುವಂತೆ ಮಾಡುತ್ತಿತ್ತು.' ಗುರುವು ಜ್ಞಾನಿಯಲ್ಲದಿದ್ದರೆ ಗುರುಶಿಷ್ಯರಿಬ್ಬರೂ ಸಂಕಟಪಡುತ್ತಾರೆ. ಗುರುವಾದವನು ತನ್ನ ಸ್ವಂತ ಸಂಕಟದ ಜೊತೆಗೆ ಶಿಷ್ಯನ ಸಂಕಟವನ್ನೂ ಅರಗಿಸಿಕೊಳ್ಳುವಂತಹ ಶಕ್ತನಾಗಬೇಕು. ಆತನು ಶಿಷ್ಯನನ್ನು ಉದ್ಧರಿಸಲು ಶಕ್ತನಾಗಿರಬೇಕು.

ವಿವೇಕಚೂಡಾಮಣಿಯಲ್ಲಿ (ಪದ್ಯ ೩೩) ಶಂಕರಾಚಾರ್ಯರು ನಿಜವಾದ ಗುರುವಿನ ಲಕ್ಷಣವನ್ನು ಕುರಿತು ಹೇಳುತ್ತಾರೆ :

ಶ್ರೋತ್ರಿಯೋಽವೃಜಿನೋ ಅಕಾಮಹತೋ ಯೋ ಬ್ರಹ್ಮವಿತ್ತಮಃ ;
ಬ್ರಹ್ಮಣ್ಯುಪರತಃ ಶಾಂತೋ ನಿರಿಂಧನ ಇವಾನಲಃ ;
ಅಹೈತುಕ ದಯಾಸಿಂಧುಃ ಬಂಧುರಾನಮತಾಂ ಸತಾಮ್

*ವೇದಪಾರಂಗತನಾಗಿರಬೇಕು, ಪಾಪದೂರನಾಗಿರಬೇಕು, ಅಕಾಮಹತನಾಗಿರಬೇಕು, ಪರಬ್ರಹ್ಮವನ್ನು ತಿಳಿದವನಾಗಿರಬೇಕು, ಬ್ರಹ್ಮದಲ್ಲಿ ಪ್ರಶಾಂತಿಯನ್ನು ಪಡೆದವನಾಗಿರಬೇಕು, ಸೌದೆಯನ್ನು ಸುಟ್ಟಮೇಲಿನ ಅಗ್ನಿಯಂತೆ ಶಾಂತನಾಗಿರಬೇಕು, ಯಾವ ಪ್ರತ್ಯಾಶೆಯೂ ಇಲ್ಲದೆಯೇ ದಯಾಸಾಗರನಾಗಿರಬೇಕು, ತನಗೆ ನಮಸ್ಕರಿಸುವ ಎಲ್ಲ ಸಜ್ಜನರಿಗೂ ಬಂಧುವಾಗಿರಬೇಕು.*

ಈ ಶ್ಲೋಕದಲ್ಲಿರುವ ಒಂದೊಂದು ಮಾತೂ ಅರ್ಥವತ್ತಾದುದು, ಪರಿಣಾಮಕಾರಿಯಾದುದು. ಶ್ರೋತ್ರಿಯ—ನಿಜವಾದ ಗುರುವು ಶ್ರುತಿಗಳ ಆಶಯವನ್ನು ಅರಿತವನಾಗಿರಬೇಕು ; ಕೇವಲ ಶಬ್ದಾರ್ಥವನ್ನಲ್ಲ, ಧರ್ಮಗ್ರಂಥಗಳ ಆಶಯವನ್ನು ಗ್ರಹಿಸಿರಬೇಕು ; ಶಾಸ್ತ್ರಗಳ ಬೋಧನೆಗೆ ಅನುಸಾರವಾಗಿ ಬಾಳಿದವನಾಗಿರಬೇಕು. ಅವೃಜಿನ: ಪಾಪದೂರನಾದವನು ಅಥವಾ ಪಾಪ ರಹಿತನಾದವನು ಮಾತ್ರ ಉದ್ಧಾರಶಕ್ತಿಯುಳ್ಳವನಾಗಿರುತ್ತಾನೆ ; ನೀತಿ, ಧರ್ಮಗಳಲ್ಲಿ ಪರಿಪೂರ್ಣತೆ

ಯನ್ನು ಸಾಧಿಸಿದವನಲ್ಲಿ ಮಾತ್ರ ಇದು ಇರುತ್ತದೆ. ಅಕಾಮಹತ : ಅವನು ಯಾವ ಆಶೆಗೂ ಬಲಿಯಾಗಿರಬಾರದು. ಸ್ವಾರ್ಥಪೂರ್ಣವಾದ ಆಶಾಪಾಶದಿಂದ ವಿಮುಕ್ತನಾಗಿರಬೇಕು. ಅವನ ಏಕೈಕ ಹೆಗ್ಗುರಿ ಇತರರಿಗೆ ಒಳ್ಳೆಯದನ್ನು ಮಾಡುವುದಾಗಿರಬೇಕು. ಬ್ರಹ್ಮವಿತ್ತಮ : ಅವನು ಬ್ರಹ್ಮನನ್ನು ತಿಳಿದವರಲ್ಲಿ ಅಗ್ರಗಣ್ಯನಾಗಿರಬೇಕು. ಸದಾ ಭಗವದ್ಭಾವನೆಯಲ್ಲಿ ಮಗ್ನನಾಗಿರುವ ಅವನು ಯಾವ ಮಟ್ಟದಲ್ಲಿಯೇ ವ್ಯವಹರಿಸಲಿ ದೈವಭಾವನೆಯೇ ಅವನಿಂದ ಹೊರಬರುತ್ತದೆ. ಶಾಂತ : ಅವನು ಅಖಂಡ ಶಾಂತನಾದವನು ; ತಾನೇ ಶಾಂತನಲ್ಲದಿದ್ದರೆ ಮತ್ತೊಬ್ಬನಿಗೆ ಶಾಂತಿಯನ್ನು ನೀಡು ವುದು ಸಾಧ್ಯವಿಲ್ಲ. ಆತನು ಶಾಸ್ತ್ರೋಕ್ತವಾಗಿ ಉಪದೇಶ ನೀಡುವುದು ಕೂಡ ಬೇಡ. ಆತನು ಇದ್ದಲ್ಲಿಯೇ ಒಂದು ಸಚೇತನವಾದ ದೇವಾಲಯವಾಗಿ, ಸಚೇತನವಾದ ಒಂದು ಕ್ರೈಸ್ತಮಂದಿರವಾಗಿ ಅಥವಾ ಸಚೇತನವಾದ ಮಸೀದಿಯಾಗಿ ಇರುತ್ತಾನೆ. ಏಕೆಂದರೆ ಅವನು ಭಗವಂತನ ಚರಣ ಕಮಲಗಳನ್ನು ಸ್ಪರ್ಶಿಸಿದವನಾಗಿದ್ದಾನೆ. ಅದನ್ನು ಆತನು ಹೇಗೆ ಸಾಧಿಸುತ್ತಾನೆ? ನಿರಿಂಧನ ಇವಾನಲ: ಕಾಷ್ಠವನ್ನು ಸುಟ್ಟಮೇಲಿನ ಅಗ್ನಿಯಂತೆ. ಇಲ್ಲಿ ಮಾನವನ ಮನಸ್ಸನ್ನು ಉರಿಯುವ ಬೆಂಕಿಗೆ ಹೋಲಿಸಿದೆ. ಏಕೆಂದರೆ ಆಶೆಗಳು ಉರಿಯುವ ಬೆಂಕಿಯಂತಿವೆ. ಆಶಾ ವಿಷಯಗಳು ಇಂಧನದಂತಿವೆ. ನಿಜವಾದ ಗುರುವು ಆಶೆಯ ಬೆಂಕಿ ಎಲ್ಲಾ ಉರಿದುಹೋದವನಾಗಿರುತ್ತಾನೆ. ಬೆಂಕಿಗೆ ಸೌದೆ ಹಾಕುವುದನ್ನು ನಿಲ್ಲಿಸಿದಾಗ ಅದು ಆರುತ್ತದೆ, ಎಲ್ಲವೂ ಶಾಂತವಾಗುತ್ತದೆ, ನಿಶ್ಶಬ್ದವಾಗುತ್ತದೆ. ಆತನ ಮನಸ್ಸು ಎಲ್ಲ ಆಶೆಗಳನ್ನೂ ಮೆಟ್ಟಿ ನಾಶಗೊಳಿಸಿರುತ್ತದೆ. ಅದು ಆಪ್ತಕಾಮ, ಆತ್ಮಕಾಮ ಮತ್ತು ಅಕಾಮವಾಗಿದೆ—"ಎಲ್ಲ ಆಶೆಗಳನ್ನೂ ತೃಪ್ತಿಗೊಳಿಸಿ, ಆತ್ಮವನ್ನೇ ಆಶಾವಸ್ತುವಾಗಿ ಪಡೆದು, ಉಳಿದೆಲ್ಲ ಅರ್ಥದಲ್ಲಿಯೂ ಆಶಾರಹಿತವಾಗಿದೆ," ಆ ಮನಸ್ಸು. ನಮಗೆ ಹಲವಾರು ಆಸೆಗಳಿವೆ. ಅವನ್ನು ತೃಪ್ತಿಪಡಿಸಲು ನಾವು ಬಯಸುತ್ತೇವೆ. ಆದರೆ ಗುರುವಿನ ಹೃದಯ ಪರಿಪೂರ್ಣವಾಗಿದೆ. ಆತನು ಹೇಗೆ ಪರಿಪೂರ್ಣನಾಗುತ್ತಾನೆ? ಹೇಗೆಂದರೆ, ಆತನ ಆಸೆಗಳೆಲ್ಲ ಆತ್ಮಕ್ಕೆ ಸಂಬಂಧಿಸಿದವು. ಆತ್ಮ ಕಾಮತ್ವೇಚ ಆಪ್ತ ಕಾಮತಾ—'ಆತ್ಮಕಾಮನೆಯಿಂದ ಮನುಷ್ಯನ ಆಸೆಗಳೆಲ್ಲ ಈಡೇರುತ್ತವೆ.' ಆತ್ಮಕಾಮನೆಯು ಇತರ ಆಸೆಗಳನ್ನೆಲ್ಲಾ ನಾಶಮಾಡುವ ಅನನ್ಯ ಪರಿಣಾಮ ಕ್ರಿಯಾಕಾರಕ.

## ೨೬. ಕಾಮನೆ ಮತ್ತು ಕಾಮನಾಶೂನ್ಯತೆ

ವ್ಯಕ್ತಿಯ ಮನಃಕಾಮನೆಯೆಂಬುದು, ಮನಶ್ಶಾಸ್ತ್ರದ ದೃಷ್ಟಿಯಿಂದ, ತೃಪ್ತಿಗಾಗಿ ಹಳಹಳಿಸುತ್ತಿರುವ ಒಂದು ಹುಟ್ಟುಗುಣ. ಪ್ರತಿಯೊಂದು ಕಾಮನೆಯೂ ನಮ್ಮ ಹೃದಯದ ಶೂನ್ಯದಿಂದ ಪ್ರಚೋದಿತವಾಗಿ, ಹೃದಯವು ಅದನ್ನು ಈಡೇರಿಸಿಕೊಳ್ಳಲು ಹಂಬಲಿಸುತ್ತದೆ. ಆದ್ದರಿಂದ ಪ್ರತಿಯೊಂದು ಕಾಮನೆಯೂ ನಮ್ಮ ಹೃದಯದಲ್ಲಿರುವ ಒಂದು ಶೂನ್ಯತೆಯನ್ನು ಸೂಚಿಸುತ್ತದೆ. ಆ ಕಾಮನೆಯನ್ನು ಈಡೇರಿಸಿಕೊಳ್ಳಲು ಬಹಿರಂಗವಾದ ಕ್ರಿಯೆಯೊಂದು ಅಗತ್ಯ. ಹೀಗೆ ನಮ್ಮ ಪ್ರತಿಯೊಂದು ಕ್ರಿಯೆಗೂ ಪೂರ್ವಭಾವಿಯಾಗಿ ಎರಡು ಘಟ್ಟಗಳಿರುತ್ತವೆ. ಮೊದಲನೆಯದಾಗಿ, ನಮ್ಮ ಮನಸ್ಸಿನಲ್ಲಿ ಒಂದು ಕಾಮವಾಸನೆ ಇದೆ, ಅದನ್ನು ಈಡೇರಿಸಿಕೊಳ್ಳಬೇಕೆಂಬ ಒಂದು ಪ್ರಚೋದನೆ ಇದೆ. ಈ ಪ್ರಚೋದನೆ ಒಂದು ಬಯಕೆಯ ರೂಪವನ್ನು ತಾಳಿ, ಆ ಬಯಕೆಗೆ ಅನುರೂಪವಾಗಿದ್ದು ತೃಪ್ತಿಯನ್ನು ನೀಡಬಲ್ಲ ವಸ್ತುವೊಂದನ್ನು ಅಪೇಕ್ಷಿಸುತ್ತದೆ. ಕಡೆಯದಾಗಿ ಈ ಪ್ರಚೋದನೆಯನ್ನು ತೃಪ್ತಿಪಡಿಸಬಲ್ಲ ಕ್ರಿಯೆ ನಡೆಯುತ್ತದೆ. ಮನಶ್ಶಾಸ್ತ್ರವು ಮಾನವನ ಹಸಿವೆ, ಪ್ರಣಯ ಇತ್ಯಾದಿ ಸುಮಾರು ಹದಿನಾಲ್ಕು ಮೂಲ ಭೂತ ಪ್ರೇರಣೆಗಳನ್ನು ಪಟ್ಟಿ ಮಾಡಿ ತಿಳಿಸುತ್ತದೆ. ಉದಾಹರಣೆಗಾಗಿ ನಮಗೆ ಚಿರಪರಿಚಿತವಾಗಿರುವ ಹಸಿವೆಯನ್ನು ತೆಗೆದುಕೊಳ್ಳೋಣ. ಕ್ರಮವಾಗಿ ಅದರ ಮೂರು ಘಟ್ಟಗಳೆಂದರೆ (೧) ಅಂತರಂಗ ಪ್ರೇರಣೆ (೨) ಹೊರಗಿನ ವಸ್ತುವೊಂದರ ಮೇಲಿನ ಆಸೆ ಮತ್ತು

(೩) ಅದನ್ನು ದಕ್ಕಿಸಿಕೊಳ್ಳುವುದಕ್ಕಾಗಿ ಮಾಡುವ ಪ್ರಯತ್ನ. ಹೊಟ್ಟೆ ತುಂಬಿದಾಗ ಹಸಿವೆ ಇಲ್ಲ, ಆಹಾರ ಬೇಕೆಂಬ ಆಸೆ ಇಲ್ಲ, ಆದ್ದರಿಂದ ಆ ಪ್ರೇರಣೆಯನ್ನು ತೃಪ್ತಿಪಡಿಸಬೇಕೆಂಬ ಅದಕ್ಕೆ ಸಂವಾದಿಯಾದ ಕ್ರಿಯೆಯೂ ಇಲ್ಲ. ಆದ್ದರಿಂದ ಕ್ರಿಯೆ ಎಂಬುದು ಅಂತರಂಗದ ಪ್ರೇರಣೆ ಮತ್ತು ಹೊರಗೆ ಅದಕ್ಕೆ ಸಂವಾದಿಯಾದ ವಸ್ತುವೊಂದರ ಬಯಕೆ—ಇವುಗಳಿಂದ ನಿಯಮಿತವಾದುದು. ಪ್ರೇರಣೆ ಇಲ್ಲದಾಗ ಬಯಕೆಯೂ ಇಲ್ಲ. ಕ್ರಿಯೆಯೂ ಇಲ್ಲ, ಜೀವನವೆಂಬುದು ಒಂದು ಕ್ರಿಯಾ ಪರಂಪರೆ. ಏಕೆಂದರೆ ಹೃದಯವು ಪ್ರೇರಣೆ ಪ್ರಲೋಭನೆಗಳ ಒಂದು ಅಗ್ನಿಪರ್ವತ. ನಾವು ಬದುಕಿರುವಾಗ ಈ ಪ್ರೇರಣೆ ಪ್ರಲೋಭನೆಗಳು ಇಲ್ಲದಂತಹ ಕಲ್ಪನಾ ಸ್ಥಿತಿಯೊಂದನ್ನು ಊಹಿಸಿಕೊಳ್ಳಲು ನಮಗೆ ಸಾಧ್ಯವಾದರೆ, ಪ್ರಲೋಭನಾಭರಿತವಾದ ಕ್ರಿಯೆಗಳಿಂದಲೂ ಮುಕ್ತವಾದ ಒಂದು ಸ್ಥಿತಿ ಸಾಧ್ಯವಾಗುತ್ತದೆ.

ವೇದಾಂತವು ಪ್ರೇರಣೆ, ಪ್ರಲೋಭನೆ ಮತ್ತು ಪ್ರಲೋಭನಾ ಪ್ರಚೋದಿತ ಕ್ರಿಯೆಗಳಿಂದ ಮುಕ್ತವಾದ ಒಂದು ಪರಿಪೂರ್ಣಸ್ಥಿತಿಯನ್ನು ತಿಳಿಸುತ್ತದೆ. ಈ ನಿಷ್ಕಾಮ-ಅಕಾಮತಾ ಎಂಬುದು ಆತ್ಮಕಾಮತಾ, ಎಂದರೆ, ಆತ್ಮನ ಮೇಲಿನ ಅಪೇಕ್ಷೆಯಿಂದ ಬರುತ್ತದೆ. ಈ ಸ್ಥಿತಿಯನ್ನು ಹೃದಯಶೂನ್ಯತೆ ಮತ್ತು ಮೃತ್ಯುವೆಂದು ನಾವು ತಪ್ಪು ತಿಳಿದುಕೊಳ್ಳಬಹುದಾದ್ದರಿಂದ, ವೇದಾಂತವು ಈ ಸ್ಥಿತಿಯ ಮೂರನೆಯ ಮುಖ್ಯವಾದ ವಿಶಿಷ್ಟ ಸ್ವರೂಪವೊಂದನ್ನು ಅದರ ಜೊತೆಗೆ ಸೇರಿಸಿ, ಜೀವಿಯ ಪರಿಪೂರ್ಣತೆಯನ್ನು 'ಆಪ್ತಕಾಮತಾ' ಎಂಬ ಹೊಸ ಹೆಸರಿನಿಂದ ಸೂಚಿಸುತ್ತದೆ. ಕಾಮನಾರಹಿತವಾಗಿ ಪ್ರಶಾಂತವಾಗಿರುವ ಮನಸ್ಸನ್ನು ತರಂಗರಹಿತವಾದ ಸುಂದರ ಪ್ರಶಾಂತ ಸರೋವರಕ್ಕೆ ಹೋಲಿಸುತ್ತಾರೆ. ಅದರೊಳಕ್ಕೆ ಒಂದು ಕಲ್ಲನ್ನೆಸೆದಾಗ ಸರೋವರದ ಪ್ರಶಾಂತತೆ ಹಾಳಾಗುತ್ತದೆ. ನಮ್ಮ ಮನಸ್ಸಿನ ಕಾಮನೆಗಳು ಅದರಲ್ಲಿ ಅಲೆಗಳನ್ನೆಬ್ಬಿಸುತ್ತವೆ. ನಿತ್ಯ ಜೀವನದಲ್ಲಿ ನಮ್ಮ ಮನಸ್ಸು ಗಾಢ ನಿದ್ರೆಯಲ್ಲಿದ್ದಾಗ ಹೊರತು, ಉಳಿದಂತೆ ಒಂದು ಕ್ಷಣವೂ ಪ್ರಶಾಂತವಾಗಿರುವುದಿಲ್ಲ. ಧ್ಯಾನ ಮತ್ತು ಆತ್ಮಸಂಯಮದ ಮೂಲಕ ಎಚ್ಚರದ ಸ್ಥಿತಿಯಲ್ಲಿಯೂ ಈ ಪ್ರಶಾಂತತೆಯನ್ನು ನಾವು ಸ್ವಾಧೀನಪಡಿಸಿಕೊಳ್ಳಬೇಕು. ಈ ಪ್ರಶಾಂತತೆಯ ಸಣ್ಣ ಅಂಶ ಕೂಡ ನಮ್ಮ ನಿತ್ಯ ಜೀವನದಲ್ಲಿ ಒಂದು ದೊಡ್ಡ ಆಸ್ತಿ ಇದ್ದಂತೆ. ಇನ್ನು, ಪರಿಪೂರ್ಣಾತ್ಮರಾದವರು ಸಾಧಿಸಿರುವ ಅಖಂಡ ಆನಂದದ ಬೆಲೆಯನ್ನಾಗಲೀ, ಶಕ್ತಿಯನ್ನಾಗಲೀ ಬಣ್ಣಿಸುವುದೆಂತು ? ಅಂತಹವನು ಪರಮ ಗುರು, ಅಕಾರಣ ಕರುಣಾಸಮುದ್ರ—ಅಹೇತುಕ ದಯಾಸಿಂಧು : ಆತನ ಕರುಣೆಯು ಜಗತ್ತನ್ನೆಲ್ಲಾ ಪ್ರಶಾಂತಗೊಳಿಸುವ ನಿತ್ಯಪ್ರವಾಹವಾಗಿ ಪ್ರವಹಿಸುತ್ತದೆ. ಅದಕ್ಕೆ ತಡೆಯಾಗುವ ಯಾವ ಸ್ವಾರ್ಥಾಭಿಲಾಷೆಯೂ ಇರುವುದಿಲ್ಲ. ಅದು ದಡಗಳನ್ನು ಮೀರಿಹರಿದು ಸುತ್ತಮುತ್ತಿನ ಇತರರ ಮನಸ್ಸನ್ನೂ ಪ್ರಶಾಂತಗೊಳಿಸಲು ಯತ್ನಿಸುತ್ತದೆ. ತನ್ನ ಸುತ್ತಮುತ್ತಿನ ಜನ ಭಯದಿಂದ ಮುಂಗಾಣದಂತಾಗಿರುವಾಗ ಅದು ತನ್ನ ಸತ್ವವನ್ನು ಅವರಿಗೆ ನೀಡಲು ಬಯಸುತ್ತದೆ. ಆತನ ಈ ಪ್ರೇಮ ಪ್ರವಾಹವು ನಮ್ಮ ಯಾವ ಕಾರ್ಯವನ್ನೂ ಅವಲಂಬಿಸಿಲ್ಲ. ಅದರಲ್ಲಿ ಕೃತಕವಾದ ಪ್ರಯತ್ನವಾವುದೂ ಇಲ್ಲ. ಅದು ಸುಮ್ಮನೆ ತುಂಬಿತುಳುಕುತ್ತದೆ. ಆ ಕರುಣೆಗೆ ಯಾವ ಬಗೆಯಾದ ಕೊಳು ಕೊಡುಗೆಯ ಸಂಬಂಧವೂ ಇಲ್ಲ. ಗುರುವು ಬಂಧುರಾನಮತಾಂ ಸತಾಂ : ತನ್ನ ಬಳಿ ಬಂದವರಿಗೆಲ್ಲಾ ಆತ ಬಂಧು. ಅಂತಹ ಗುರುವು ಎಂದೆಂದಿಗೂ ವಿಫಲವಾಗದ ಗೆಳೆಯನಾಗಿರುತ್ತಾನೆ, ಏಕೆಂದರೆ ಆತನು ಮಾಡುವುದೆಲ್ಲವೂ ಒಳ್ಳೆಯದಕ್ಕಾಗಿಯೇ.

ಅಂತಹ ವ್ಯಕ್ತಿ ಸಿಕ್ಕುವುದಾದರೆ ಆತನನ್ನು ಆಶ್ರಯಿಸಬೇಕೆಂದು ಶಂಕರರು ಅಪ್ಪಣೆ ಕೊಡಿಸುತ್ತಾರೆ. ಅಂತಹ ಗುರುವು ನಿಜವಾಗಿಯೂ ನಮ್ಮ ಉದ್ಧಾರಕ್ಕೆ ಸ್ವಲ್ಪ ಸಹಾಯಕನಾಗಬಲ್ಲನು. ಆದರೆ, ದುರದೃಷ್ಟದಿಂದ ಅಂತಹ ಗುರುಗಳು ವಿರಳ, ಅಪರೂಪ ; ಅಂತಹವರನ್ನು ಬಿಟ್ಟು, ಕೆಳಮಟ್ಟದವರನ್ನು

ಆಶ್ರಯಿಸುವುದು ಅಪಾಯಕರ. ಆದ್ದರಿಂದ, ಅಂತಹ ಮಾರ್ಗದರ್ಶಕರ ಆಶ್ರಯ ಸಿಕ್ಕುವವರೆಗೆ ನಮ್ಮನ್ನೇ ನಾವು ಅವಲಂಬಿಸುವುದನ್ನು ಕಲಿಯುವುದು ಒಳ್ಳೆಯದು. ನಾವು ಕೆಳಮಟ್ಟದ ಮಾರ್ಗ ದರ್ಶಕರಿಂದಲೂ ಸಹಾಯವನ್ನು ಪಡೆಯುವುದು ಸಾಧ್ಯ. ನಮಗೆ ಚೈತನ್ಯಪೂರ್ಣವಾದ ಮನಸ್ಸಿರುವ ಪಕ್ಷದಲ್ಲಿ ಯಾರಿಂದ ಬೇಕಾದರೂ ಜ್ಞಾನಾರ್ಜನೆಯನ್ನು ಮಾಡಬಹುದು. ಮನಸ್ಸು ಚೈತನ್ಯಪೂರ್ಣ ವಾಗಿದ್ದಾಗ ಪ್ರಕೃತಿಯಲ್ಲಿನ ಪ್ರತಿಯೊಂದರಿಂದಲೂ ಜ್ಞಾನಾರ್ಜನೆ ಸಾಧ್ಯ. ಅಂತಹ ಮನಸ್ಸುಳ್ಳ ಮನುಷ್ಯನಿಗೆ ಪ್ರತಿಯೊಂದು ಬೆಟ್ಟ, ಪ್ರತಿಯೊಂದು ಹೊಳೆಯೂ ಒಬ್ಬ ಗುರುವೇ. ಆದ್ದರಿಂದ ತನ್ನ ಸ್ವಂತವಾದ ಸ್ಪಷ್ಟ ವಿವೇಚನೆಯನ್ನು ಅವಲಂಬಿಸಲು ಕಲಿಯುವುದು ಅತ್ಯುತ್ತಮ. ಕೀಳುಮಟ್ಟದ ಗುರುಗಳಿಗೆ ತನ್ನ ಸ್ವಾತಂತ್ರ್ಯವನ್ನು ಧಾರೆ ಎರೆದುಕೊಡುವುದು ಶುದ್ಧ ಅವಿವೇಕತನ ; ವೇದಾಂತವು ಅದಕ್ಕೆ ಅವಕಾಶ ಕೊಡುವುದಿಲ್ಲ. ಅರ್ಜುನನಿಗೆ ಶ್ರೀಕೃಷ್ಣನಂತಹ ಲೋಕಗುರು ಸಿಕ್ಕಿದುದು ಅವನ ಭಾಗ್ಯ.

## ೨೭. ಅರ್ಜುನನ ಆತ್ಮಸಮರ್ಪಣೆ

ಅರ್ಜುನನು ಶ್ರೀಕೃಷ್ಣನನ್ನು ಆಶ್ರಯಿಸಿದ. ಆ ಶ್ರೀಕೃಷ್ಣನು ರಕ್ತಮಾಂಸಗಳಿಂದ ಕೂಡಿದ ದೇಹಧಾರಿಯಾಗಿ ಬಂದು, ನಮಗೆ ಅರ್ಥವಾಗುವ ಭಾಷೆಯಲ್ಲಿ ಉಪದೇಶ ನೀಡುವುದು ಸಾಧ್ಯವಿಲ್ಲದೆ ಇರಬಹುದು. ಆದರೇನು ? ಆತನ ಬೋಧನೆಯು ಸ್ಪಷ್ಟವಾದ ಉಚ್ಚಾರಣೆಯೊಡನೆ ನಮ್ಮನ್ನು ಮುಟ್ಟುತ್ತದೆ. ಸದೇಹವಾಗಿ ಆತ ನಮ್ಮೆದುರಿಗೆ ಇಲ್ಲವಷ್ಟೇ ಹೊರತು ನಾವು ಆತನ ಬೋಧನೆಯನ್ನು ಅವಲಂಬಿಸಬಹುದು ಮತ್ತು ಉಳಿದೆಲ್ಲ ಪ್ರಯೋಜನಗಳನ್ನೂ ಪಡೆಯಬಹುದು.

ಇನ್ನು, ಜ್ಞಾನಾರ್ಜನೆಗೆ ಬೇಕಾದ ಮುಖ್ಯವಾದ ನಿಯಮವೆಂದರೆ ನಮ್ರತೆ. ಲೌಕಿಕ ಜ್ಞಾನಾರ್ಜನೆಗೆ ಅದು ಅಷ್ಟು ಮುಖ್ಯವಲ್ಲದಿರಬಹುದಾದರೂ ಅಲ್ಲಿಯೂ ಸ್ವಲ್ಪಮಟ್ಟಿಗೆ ಅದು ಆವಶ್ಯಕ. ಆದರೆ, ಅಧ್ಯಾತ್ಮ ಜ್ಞಾನಾರ್ಜನೆಗೆ ಅದು ಅತ್ಯಗತ್ಯ, ಅನಿವಾರ್ಯ. ಅಲ್ಪಸ್ವಲ್ಪ ಅಹಂಕಾರವಿದ್ದರೆ ಅದೂ ಹೋಗಬೇಕು. ಅರ್ಜುನನಲ್ಲಿದ್ದ ನಮ್ರತೆ ಶಕ್ತಿಜನ್ಯವಾದುದು, ಆದ್ದರಿಂದ ಅವನ ನಮ್ರತೆ ವಾಸ್ತವವಾದ ನಮ್ರತೆ. ಇಂತಹ ಸನ್ನಿವೇಶಗಳು ಪ್ರತಿಯೊಬ್ಬರಿಗೂ ಬಂದೇಬರುತ್ತವೆ. ಆಗ ಗಂಡೇ ಆಗಲಿ, ಹೆಣ್ಣೇ ಆಗಲಿ, ಸನ್ನಿವೇಶಗಳ ಒತ್ತಡ ಮತ್ತು ಸಂಕಟಗಳಿಗೆ ಸಿಕ್ಕಿ, ಇಡೀ ವ್ಯಕ್ತಿತ್ವವೇ ಮಣಿದು, ಶರಣಾಗತ ಭಾವನೆಯಿಂದ, ಬುದ್ಧಿವಾದವನ್ನು ನೀಡುವಂತೆ ಬೇಡುತ್ತದೆ. ಅರ್ಜುನನು ತನಗೆ ಮಾರ್ಗದರ್ಶನ ನೀಡುವಂತೆ ಶ್ರೀಕೃಷ್ಣನನ್ನು ಅತ್ಯಂತ ವಿನಯದಿಂದ ಪ್ರಾರ್ಥಿಸಿದಾಗ ಅವನು ಅಂತಹ ಮನಸ್ಥಿತಿಯಲ್ಲಿದ್ದ. ಬೋಧನೆಯ ಬಿತ್ತು ಅಂಕುರಿಸಿ ಬೆಳೆದು ಫಲ ಬಿಡುವಂತಹ ಮನಸ್ಥಿತಿ ಯಲ್ಲಿದ್ದ, ಅರ್ಜುನ. ಧಾರ್ಮಿಕ ಮತ್ತು ಆಧ್ಯಾತ್ಮಿಕ ಅನ್ವೇಷಣಗಳಲ್ಲಿ ಈ ನಮ್ರತೆ ಮತ್ತು ಶ್ರದ್ಧೆಗಳಿಲ್ಲದೆ ಹೋದರೆ ಅವು ತಮ್ಮ ಫಲದಾಯಕ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಜಡವಾದ ಅನ್ವೇಷಣೆಗಳೆಲ್ಲ ನಿಷ್ಫಲ. ಒಬ್ಬ ಮನುಷ್ಯ ರಸ್ತೆ ಪಕ್ಕದಲ್ಲಿ ಹೋಗುತ್ತಾ "ದೇವರಿದ್ದಾನೆಯೇ" ಎಂಬ ಅಪ್ರಯೋಜಕ ಪ್ರಶ್ನೆಯೊಂದನ್ನು ಹಾರಿಸುತ್ತಾನೆ ; ಅದರ ಉತ್ತರಕ್ಕಾಗಿ ಕೂಡ ಅವನು ಕಾಯುವುದಿಲ್ಲ ; ಅವನಿಗೆ ಅದರಲ್ಲಿ ತಾತ್ಸಾರ. ಅವನಿಗೆ ಆ ಪ್ರಶ್ನೆ ಅರ್ಥವಿಲ್ಲದ್ದು. ದೇವರ ಮತ್ತು ಅಧ್ಯಾತ್ಮದ ವಿಚಾರವಾಗಿ ಪ್ರಶ್ನಿಸುವ ಜನರೆಲ್ಲಾ ಸಾಮಾನ್ಯವಾಗಿ ಈ ಜಾತಿಗೆ ಸೇರಿದವರೇ. ಶ್ರದ್ಧೆ ಇಲ್ಲದೆಯೇ ಕೇಳುವ ಪ್ರಶ್ನೆಗಳೂ ಮತ್ತು ಉತ್ತರಗಳೂ ತಮ್ಮ ಸತ್ವ ಮತ್ತು ಫಲದಾಯಕ ಶಕ್ತಿಗಳನ್ನು ಕಳೆದುಕೊಳ್ಳುತ್ತವೆ. ಜ್ಞಾನಾರ್ಜನೆಯಲ್ಲಿ ನಮಗಿರುವ ಶ್ರದ್ಧೆಯಿಂದ ಬೋಧನೆಯ ಬೆಲೆ ಹೆಚ್ಚುತ್ತದೆ. ಅರ್ಜುನನ ವಿಚಾರದಲ್ಲಿ ಹೇಳುವುದಾದರೆ, ಅವನಿಗೆ ಅದೊಂದು ಜ್ವಲಂತ ಸಮಸ್ಯೆಯಾಗಿತ್ತು. ಅವನ ಪ್ರಶ್ನೆ ನೈತಿಕ ಹೋರಾಟದ ಮೂಸೆಯಿಂದ ಮೂಡಿ ಬಂದುದು. ಈ ಪ್ರಶ್ನೆಯ ಸತ್ತ್ವವು

ಉತ್ತರದ ಸತ್ವವನ್ನು ಹತ್ತು ಪಾಲು ಹೆಚ್ಚಿಸುತ್ತದೆ.

### ೨೮. ಯಥಾರ್ಥಜ್ಞಾನದಿಂದ ಭ್ರಾಂತಿ, ಅಜ್ಞಾನಗಳ ನಿರ್ಮೂಲನ

ಭಗವದ್ಗೀತೆಯ ಉಪದೇಶ ಹೀಗೆ ಪ್ರಾರಂಭವಾಗುತ್ತದೆ. ನಮ್ಮ ಮುಂದಿರುವ ಸಮಸ್ಯೆ ನೈತಿಕ ಕರ್ತವ್ಯದ ಒಳತೋಟಿಯಿಂದ ಬಂದ ಮನೋವೈಕಲ್ಯದ ಸಮಸ್ಯೆ. ಇದಕ್ಕೆ ಉತ್ತರವಾಗಿ ನೀಡಿದ ಉಪದೇಶ ಈ ವೈಕಲ್ಯವನ್ನು ನಿವಾರಿಸುವುದಕ್ಕಾಗಿ ನೀಡಿದುದು. ಶ್ರೀಕೃಷ್ಣನ ಉಪದೇಶ ಅರ್ಜುನನ ಮನಸ್ಸಿನಲ್ಲಿ ಎದ್ದಿದ್ದ ಗಲಿಬಿಲಿಯನ್ನು ನಿವಾರಿಸಿತೆ? ಹಾಗೆ ನಿವಾರಿಸಿದ್ದರೆ ಮಾತ್ರ ನಾವು ಭಕ್ತಿಯಿಂದ ಸ್ವೀಕರಿಸಲು ಅದು ಯೋಗ್ಯವಾಗುತ್ತದೆ. ಅರ್ಜುನನ ವಿಚಾರದಲ್ಲಿ ಹೇಳುವುದಾದರೆ, ಶ್ರೀಕೃಷ್ಣನು ನೀಡಿದ ಉಪದೇಶವು ಅವನ ಮನಸ್ಸಿನ ಭ್ರಾಂತಿಯನ್ನು ಖಂಡಿತವಾಗಿಯೂ ಹೋಗಲಾಡಿಸಿತೆಂದು ನಾವು ಧೈರ್ಯವಾಗಿ ಹೇಳಬಹುದು. ಹದಿನೆಂಟನೆಯ ಅಧ್ಯಾಯದಲ್ಲಿ ಅರ್ಜುನನನ್ನು ಶ್ರೀಕೃಷ್ಣನು ಕೇಳುತ್ತಾನೆ (XVIII-೭೨) :

ಕಚ್ಚಿದೇತತ್‌ಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ;
ಕಚ್ಚಿದಜ್ಞಾನಸಮ್ಮೋಹಃ ಪ್ರನಷ್ಟಸ್ತೇ ಧನಂಜಯ—

*ಹೇ ಪಾರ್ಥ! ಏಕಾಗ್ರಮನಸ್ಸಿನಿಂದ ನೀನಿದನ್ನು ಕೇಳಿದೆಯಾ ? ಹೇ ಧನಂಜಯ ! ನಿನ್ನ ಅಜ್ಞಾನದ ಭ್ರಾಂತಿಯು ನಾಶವಾಯಿತೆ ?*

ಆಗ ಅರ್ಜುನನು ಹೀಗೆಂದು ಉತ್ತರ ಕೊಡುತ್ತಾನೆ *(XVIII-೭೩)* :

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್‌ಪ್ರಸಾದಾನ್ ಮಯಾಚ್ಯುತ
ಸ್ಥಿತೋಽಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ—

*ಹೇ ಅಚ್ಯುತ ! ನಿನ್ನ ಅನುಗ್ರಹದಿಂದ ನನ್ನ ಮೋಹವು ನಿವಾರಣೆಯಾಯಿತು. ನನಗೆ ನೆನಪು ಲಬ್ಧವಾಯಿತು, ನನ್ನ ಸಂದೇಹಗಳು ಹೋಗಿ ನಾನೀಗ ಸ್ಥಿರಚಿತ್ತನಾಗಿ ನಿಂತಿದ್ದೇನೆ, ನಿನ್ನ ಮಾತನ್ನು ಪಾಲಿಸುತ್ತೇನೆ.*

ಯಥಾರ್ಥಜ್ಞಾನವಿಲ್ಲದೆ ಸಂದೇಹಗಳು ಹೇಗೆ ನಿವಾರಣೆಯಾಗುತ್ತವೆ ? ಸೃಜನಶಕ್ತಿಯುಳ್ಳ ಸಂದೇಹವು ಎಲ್ಲ ಜ್ಞಾನಕ್ಕೂ ಮಾತೃರೂಪಿಯಾದುದು ; ಜ್ಞಾನೋದಯವಾಗುತ್ತಲೇ ಸಂದೇಹಗಳು ನಿವಾರಣೆಯಾಗುತ್ತವೆ. ಜೀವನಕ್ಕೆ ಸಂಬಂಧಪಟ್ಟಂತೆ ತತ್ತ್ವಶಾಸ್ತ್ರ ಮಾಡಬೇಕಾಗಿರುವ ಕೆಲಸ ಇದೇ. ಜೀವನವು ಹೆಜ್ಜೆ ಹೆಜ್ಜೆಗೂ ಸಮಸ್ಯೆಗಳನ್ನು ತಂದೊಡ್ಡುತ್ತದೆ ; ಸಂದೇಹ, ಭ್ರಾಂತಿಗಳು ಮನಸ್ಸನ್ನು ಆಕ್ರಮಿಸುತ್ತವೆ ; ಆಗ ನಾವು ಮಾರ್ಗದರ್ಶನಕ್ಕಾಗಿ ದೀಪವನ್ನು ಬಯಸುವಂತೆ, ವಿವೇಕ ಜ್ಞಾನಕ್ಕಾಗಿ ತತ್ತ್ವಶಾಸ್ತ್ರವನ್ನು ಆಶ್ರಯಿಸುತ್ತೇವೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಅಲ್ಪಸ್ವಲ್ಪ ವಿವೇಕವಿದ್ದೇ ಇದೆ. ಅದು ಜೀವನದ ಶಾಂತ ಜಲವನ್ನು ದಾಟಲು ಅವನಿಗೆ ಸಹಾಯ ಮಾಡುತ್ತದೆ. ಆದರೆ ಭಯಂಕರವಾದ ಬಿರುಗಾಳಿ ಮತ್ತು ಹಿಂಸೆಗಳು ಮುಸುಕಿದಾಗ ಈ ಅಲ್ಪಸ್ವಲ್ಪವಾದ ಜ್ಞಾನವಾಗಲೀ, ಬೆಳಕಾಗಲೀ ನಮಗೆ ಯಾವ ಸಹಾಯವನ್ನೂ ಮಾಡಲಾರದು. ಅಂತಹ ಸಂದರ್ಭದಲ್ಲಿ ಮಾನವನ ಮನಸ್ಸು ಇನ್ನೂ ಸುಸ್ಥಿರವಾದ ಬೆಳಕನ್ನು ಹುಡುಕುತ್ತಾ "ಇದಕ್ಕೂ ಉತ್ತಮವಾದ ಬೆಳಕೊಂದು ಇದೆಯೆ ? ಗಾಳಿಗೆ ಅಲುಗದೆ, ಎಂತಹ ಸನ್ನಿವೇಶದಲ್ಲಿಯೂ ಸಹಾಯಕ ವಾಗುವಂತಹ ಬೆಳಕೊಂದು ಇದೆಯೇ ?" ಎಂದು ಪ್ರಶ್ನೆ ಹಾಕಿಕೊಳ್ಳುತ್ತದೆ. ಜೀವನದ ಎಲ್ಲ ಸನ್ನಿವೇಶ ಗಳಲ್ಲಿಯೂ ನಮಗೆ ಆಸರೆಯಾಗಬಲ್ಲಂತಹ ಇನ್ನೂ ಸುಸ್ಥಿರವಾದ ಜ್ಞಾನವು ನಮಗೆ ಬೇಕು. ತಾನು ಸುಸ್ಥಿರವಾಗಿ ನಿಲ್ಲುವುದಲ್ಲದೆ ಜೀವನದ ಜಾರುಹಾದಿಯಲ್ಲಿ ನಮ್ಮ ಕಾಲುಗಳು ಜಾರದೆ ಸ್ಥಿರವಾಗಿ ನಿಲ್ಲುವಂತೆ

ಸಹಾಯ ಮಾಡಬಲ್ಲ ಜ್ಞಾನವಾವುದೋ ಅದನ್ನು ತತ್ತ್ವಶಾಸ್ತ್ರ ಅನ್ವೇಷಿಸುತ್ತದೆ. ಸನ್ನಿವೇಶಗಳ ಭಯಂಕರ ಬಿರುಗಾಳಿಯಲ್ಲಿ ಜೀವನದ ದೋಣಿಯನ್ನು ಸಲೀಸಾಗಿ ನಡೆಸಿಕೊಂಡು ಹೋಗಬಲ್ಲಂತಹ ನಿಶ್ಚಲ ಜ್ಞಾನದ ಮಾರ್ಗದರ್ಶನ ನಮಗೆ ಬೇಕು. ಇಂತಹ ಜ್ಞಾನವನ್ನು ನಮಗೆ ನೀಡಿ, ನಮ್ಮ ಪಾದಗಳು ಸ್ಥಿರವಾಗಿಯೂ, ತಲೆ ನಿರ್ವಿಕಾರವಾಗಿಯೂ ನಿಲ್ಲುವಂತೆ ಸಹಾಯ ಮಾಡ ಬಲ್ಲ ಶಕ್ತಿ ವೇದಾಂತಕ್ಕಿದೆ. ಶ್ರೀಕೃಷ್ಣನು ನಮಗೆ ಈ ಜ್ಞಾನವನ್ನು ನೀಡ ಹೊರಟಿದ್ದಾನೆ ; ಸಂದೇಹ-ಸಮ್ಮೋಹಗಳು ತೊಲಗಿ ಸುವ್ಯವಸ್ಥೆ ಮೂಡುವಂತಹ ಸುಜ್ಞಾನವನ್ನು ನಮಗೆ ಬೋಧಿಸಹೊರಟಿದ್ದಾನೆ. ಆ ಬೋಧನೆಯ ಫಲವಾಗಿ ತನ್ನ ಸಂದೇಹಗಳೆಲ್ಲಾ ನಿವಾರಣೆಯಾದುವೆಂದೂ, ಏನು. ಹೇಳಿದರೆ ಅದನ್ನು ಮಾಡಲು ತಾನು ಸಿದ್ಧನಾಗಿರುವೆನೆಂದೂ ಅರ್ಜುನನು ಹೇಳುತ್ತಾನೆ.

## ೨೯. "ಬುದ್ಧಿಯೋಗವನ್ನು ನಿನಗೆ ಕೊಟ್ಟಿದ್ದೇನೆ"

ಆದರೆ ಶ್ರೀಕೃಷ್ಣನು 'ಇದನ್ನು ಮಾಡು, ಅದನ್ನು ಮಾಡು' ಎಂದು ಅವನಿಗೆ ನಿರೂಪಣೆಯನ್ನೇನೂ ನೀಡುವುದಿಲ್ಲ. ಆತನು 'ಇಗೋ, ಸೂಕ್ಷ್ಮದಲ್ಲಿಯೂ ಸೂಕ್ಷ್ಮವಾದ ಜ್ಞಾನವನ್ನು ನಿನಗೆ ಉಪದೇಶಿಸಿದ್ದೇನೆ ; ಅದನ್ನು ಚೆನ್ನಾಗಿ ಪರೀಕ್ಷಿಸಿ ನಿನಗೆ ಯಾವುದು ಅತ್ಯಂತ ಸೂಕ್ತವೆಂದು ತೋರುತ್ತದೆಯೋ ಅದರಂತೆ ಮಾಡು ಎಂದು ಹೇಳುತ್ತಾನೆ. ಅತ್ಯುತ್ತಮರೆನಿಸಿದ ಗುರುಗಳು ತಮ್ಮ ಶಿಷ್ಯರಾದವರನ್ನು, ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳುವಂತೆ ತಯಾರು ಮಾಡಬೇಕೇ ಹೊರತು, ಸಿದ್ಧಪಡಿಸಿದ ತಮ್ಮ ಸ್ವಂತ ಪರಿಹಾರೋಪಾಯಗಳನ್ನು ಅವರ ತಲೆಯ ಮೇಲೆ ಹೇರಬಾರದು. ತಮ್ಮ ಶಿಷ್ಯರು ನ್ಯಾಯನಿರ್ಣಯದ ಸ್ವಾತಂತ್ರ್ಯವನ್ನು ತಮಗೇ ಒಪ್ಪಿಸಬೇಕೆಂದು ಅವರು ಎಂದೆಂದಿಗೂ ಬಯಸಬಾರದು. ಹಿರಿಯರೆಂದು ಕರೆದುದಕ್ಕೆ ತಮ್ಮ ನ್ಯಾಯನಿರ್ಣಯ ಸ್ವಾತಂತ್ರ್ಯವನ್ನೇ ಶಿಷ್ಯರು ಬಿಟ್ಟುಕೊಡುವುದರಲ್ಲಿ ಪರ್ಯವಸಾನವಾಗಬಾರದು. ಶ್ರೀಕೃಷ್ಣ, ಬುದ್ಧರೂ ಕೂಡ ಹೇಳುವುದು ಇದನ್ನೇ. ಅಷ್ಟೇಕೆ ? ಶ್ರೇಷ್ಠ ವರ್ಗಕ್ಕೆ ಸೇರಿದ ಪ್ರತಿಯೊಬ್ಬ ಗುರು ಹೇಳುವುದೂ ಇದನ್ನೇ. ತಾವು ಹೇಳುವುದನ್ನೆಲ್ಲಾ ತಲೆಕೆಳಗುಮಾಡಿ ಚೆನ್ನಾಗಿ ಪರೀಕ್ಷಿಸಬೇಕು, ಅಥವಾ ಕಠೋಪನಿಷತ್ತಿನಲ್ಲಿ ಯಮನು ಹೇಳಿರುವಂತೆ 'ಮತ್ತೆ ಮತ್ತೆ ಅದರ ಸುತ್ತಲೂ ಹೋಗಿ ಎಲ್ಲಾ ಪಕ್ಕಗಳಿಂದಲೂ, ಎಲ್ಲಾ ದೃಷ್ಟಿಕೋನಗಳಿಂದಲೂ ಅದನ್ನು ಚೆನ್ನಾಗಿ ಪರೀಕ್ಷಿಸಬೇಕು.' ಮೊದಲು ಗುರುವನ್ನೂ ಆತನ ಉಪದೇಶವನ್ನೂ ಪರೀಕ್ಷಿಸಿ ಆಮೇಲೆ ಆತನನ್ನು ಗುರುವಾಗಿ ಸ್ವೀಕರಿಸಬೇಕು. ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನು ಕುರಿತು 'ನಾಣ್ಯವನ್ನು ವಿನಿಮಯ ಮಾಡುವವರು ತಮ್ಮ ನಾಣ್ಯಗಳನ್ನು ಪರೀಕ್ಷಿಸುವಂತೆ ನನ್ನನ್ನು ಪರೀಕ್ಷಿಸಿರಿ' ಎಂದು ಹೇಳುತ್ತಿದ್ದರು. ಅವರು ಸ್ವಾಮಿ ವಿವೇಕಾನಂದರಿಗೆ ಹೇಳಿದುದು ಅದನ್ನೇ. ಗುರುಗಳನ್ನು ಪರೀಕ್ಷಿಸಬಲ್ಲ ಶಿಷ್ಯರೂ ಶಿಷ್ಯರ ಪರೀಕ್ಷೆಯನ್ನು ಎದುರಿಸಿ ನಿಲ್ಲಬಲ್ಲಂತಹ ಗುರುಗಳೂ ಎಷ್ಟು ಸ್ವಲ್ಪ ಜನ ! ಅವರಲ್ಲಿ ಎಷ್ಟು ಜನರು ಸಾಚಾ ಎಂಬುದನ್ನು ಪರೀಕ್ಷಿಸಿ ನೋಡಬೇಕು. ನಿಜವಾದ ಗುರುವಾದವನು 'ಇಗೋ ನಿಮ್ಮ ಕೈಗೆ ದೀವಿಗೆಯನ್ನು ನೀಡಲು ಬಂದಿದ್ದೇನೆ, ನಿಮ್ಮ ಹಾದಿಯನ್ನು ನೀವೇ ಕಂಡುಕೊಳ್ಳಿರಿ' ಎಂದು ಹೇಳಿಯಾನು. ತತ್ತ್ವಶಾಸ್ತ್ರವು ಒಂದು ದೀವಿಗೆ. ಅಜ್ಞಾನದ ಅರಣ್ಯದಲ್ಲಿ ನಿಮಗೆ ಹಾದಿ ದೀಪವಾಗುವಂತೆ ನೀವು ಅದನ್ನು ಹಿಡಿದುಕೊಳ್ಳಬಹುದು. ಹತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು 'ಸತ್ಯಾನ್ವೇಷಕರ ಹೃದಯ ದಲ್ಲಿ ಯತ್ಕಿಂಚಿತ್ ಜ್ಞಾನವನ್ನು ನಾನು ಇಟ್ಟಿದ್ದೇನೆ. ಅದರ ಸಹಾಯದಿಂದ ಅವರು ತಮ್ಮ ಹಾದಿಯನ್ನು ತಾವೇ ಕಂಡುಕೊಳ್ಳಬೇಕು. ನನ್ನ ಕಾರ್ಯವೇನಿದ್ದರೂ ದೀಪವನ್ನು ಹೊತ್ತಿಸುವುದೆಷ್ಟೋ ಅಷ್ಟೇ' ಎಂದು ಹೇಳುತ್ತಾನೆ. ನಮಗೆ ಹೊರಗಿನಿಂದ ಬರುವ ಅಲ್ಪ ಸಹಾಯ ಅಷ್ಟೇ ; ಆದರೆ, ಅದನ್ನು ಯೋಗ್ಯವಾಗಿ ಬಳಸಿಕೊಳ್ಳಬಲ್ಲೆವಾದರೆ ಅದೇ ಯಥೇಚ್ಛವಾಗುತ್ತದೆ.

ನಿಜವಾದ ಗುರುವು ತನಗೆ ಮಾತ್ರವಲ್ಲದೆ ತನ್ನ ಶಿಷ್ಯರಿಗೂ ಸ್ವಾತಂತ್ರ್ಯವಿರಬೇಕೆನ್ನುತ್ತಾನೆ. ಇಷ್ಟೆಲ್ಲಾ ಆದಮೇಲೂ ನಾವು ಶಿಷ್ಯರನ್ನು ತಯಾರು ಮಾಡುವುದು ನಮ್ಮ ಸ್ವಂತ ಅಚ್ಚಿನಲ್ಲಿ ಎಂಬುವನ್ನು ಮರೆಯುವಂತಿಲ್ಲ. ಗುರುವು ಚಿಕ್ಕ ಅಚ್ಚಾದರೆ ಅದರಲ್ಲಿ ಅಚ್ಚಾದ ಶಿಷ್ಯನೂ—ಅವನಲ್ಲಿ ಇನ್ನೂ ಮಹತ್ತಾದ ಶಕ್ತಿ ವಿಶೇಷಗಳಿದ್ದರೂ—ಮೂಲದ ಪ್ರತಿಕೃತಿಯಾಗುತ್ತಾನೆ. ತಾನೇ ಭ್ರಾಂತಿಗೆ ಒಳಗಾಗಿರುವ ಗುರು ಶಿಷ್ಯನಲ್ಲಿ ಇನ್ನೂ ಹೆಚ್ಚು ಭ್ರಾಂತಿಯನ್ನು ಹುಟ್ಟಿಸುತ್ತಾನೆ. ಆದ್ದರಿಂದ ವ್ಯಕ್ತಿಗೆ ಸ್ವಾತಂತ್ರ್ಯನಿರ್ಣಯವು ಅತ್ಯಗತ್ಯ.

## ೩೦. ಮುಕ್ತಾಯ

ಗೀತೆಯಲ್ಲಿರುವ ಎಲ್ಲ ಹದಿನೆಂಟು ಅಧ್ಯಾಯಗಳಲ್ಲಿಯೂ ಮಾನವನನ್ನು ಉದ್ಧರಿಸಬಲ್ಲ ಜ್ಞಾನೋಪದೇಶಗರ್ಭಿತವಾದ ತತ್ತ್ವಶಾಸ್ತ್ರವು ಪ್ರತ್ಯಕ್ಷವಾಗಿ ನಿಂತಿದೆ ; ಅದರಿಂದ ಜನ ತಮ್ಮ ಮೋಕ್ಷವನ್ನು ಗಳಿಸಿಕೊಳ್ಳಬಹುದು. ಇದು ಅದರ ಚೈತನ್ಯಾತ್ಮಕ ಸ್ವರೂಪ. ಈ ಜ್ಞಾನವನ್ನು ಗ್ರಹಿಸಿ ಅದರಿಂದ ಅಷ್ಟೋ ಇಷ್ಟೋ ಪ್ರಯೋಜನವನ್ನು ಪಡೆಯುವುದು ನಮ್ಮ ಸ್ವಪ್ರಯತ್ನವನ್ನು ಅವಲಂಬಿಸಿದೆ. ವೇದಾಂತದ ಅರ್ಥದಲ್ಲಿ ಗ್ರಹಿಸುವುದಾದರೆ, ತತ್ತ್ವಶಾಸ್ತ್ರವೆಂಬುದು ಕೇವಲ ಪಾಂಡಿತ್ಯ ಮತ್ತು ಚರ್ಚೆಗಳಿಗಾಗಿ ಮಾಡುವ ಅಧ್ಯಯನವಾಗದೆ, ಜೀವನಕ್ಕೂ ಅದರ ಸಮಸ್ಯೆಗಳಿಗೂ ನಿಕಟವಾದ ಸಂಬಂಧವುಳ್ಳದಾಗಿರಬೇಕು ; ಜೀವನದಿಂದ ಪುಷ್ಟಿಗೊಂಡು, ಜೀವನದ ಪುಷ್ಟಿಗೂ ಸಹಾಯಕವಾಗಬೇಕು. ಗೀತೆಯ ಮುಂದಿನ ಶ್ಲೋಕಗಳು ಬೋಧಿಸುವ ತತ್ತ್ವಜ್ಞಾನವು ಇದೇ.

ಅನು : ತ. ಸು. ಶಾಮರಾಯ

೭

# ಗೀತೆಯ ಕೇಂದ್ರ ತತ್ತ್ವ*

## ೧. ಪ್ರಸ್ತಾವನೆ

ಭಾರತ ದಿಗಂತದಲ್ಲಿ ಕಾಣಸಿಕೊಂಡಿರುವ ಚಿಂತನೆ ಮತ್ತು ಕರ್ಮಗಳ ಆಚಾರ್ಯ ಪದವಿಯನ್ನು ನಿರ್ವಹಿಸಬಲ್ಲವರಲ್ಲಿ ಚಿಂತನೆಯ ಉದಾತ್ತತೆಯಲ್ಲಾಗಲೀ, ವ್ಯಕ್ತಿತ್ವದ ಬಹುಮುಖ ಸಾಮರ್ಥ್ಯದಲ್ಲಿಯಾಗಲೀ ಭಗವದ್ಗೀತೆಯ ಮಹಾಚಾರ್ಯನಾದ ಭಗವಾನ್ ಶ್ರೀಕೃಷ್ಣನಷ್ಟು ವಿಶಿಷ್ಟನಾದವನು ಮತ್ತೊಬ್ಬನಿಲ್ಲ. ಆಧುನಿಕ ಯುಗದಲ್ಲಿ ಗೀತೆಯ ಮೇಲಿನ ಜನಾದರಣೆ ಹೆಚ್ಚುತ್ತಾ ಹೋದಂತೆ ಶ್ರೀಕೃಷ್ಣನ ವ್ಯಕ್ತಿತ್ವದ ಮೇಲೆ ಮೆಚ್ಚಿಗೆ ಬೆಳೆಯುತ್ತಾ ಹೋಗುತ್ತಿರುವುದು ಸುಸ್ಪಷ್ಟ ವಾಗಿಯೇ ಇದೆ. ಪಾಶ್ಚಾತ್ಯರಲ್ಲಿ ಕಾರ್‌ಲೈಲ್, ವಾಲ್ಟ್ ವಿಟ್‌ಮನ್ ಮತ್ತು ಎಮರ್ಸನ್ ಇವರು ಗೀತೆಯ ಆಧ್ಯಾತ್ಮಿಕ ಸ್ವಾರಸ್ಯವನ್ನೂ ಧರ್ಮದ ಗಾಂಭೀರ್ಯವನ್ನೂ ಮೊಟ್ಟಮೊದಲು ಕಂಡು ಪ್ರತಿಕ್ರಿಯೆ ತೋರಿದವರು. ಗೀತೆಯನ್ನು ಫ್ರೆಂಚ್ ಭಾಷೆಗೆ ಪರಿವರ್ತಿಸಿದ ಬರ್ನೌ 'ಮಾನವ ಹಸ್ತದಿಂದ ಇದಕ್ಕಿಂತಲೂ ಮಹತ್ತಾದ ಗ್ರಂಥ ಎಂದೂ ಬಂದಿಲ್ಲ' ಎಂದು ಹೇಳಿಲ್ಲವೆ ?

## ೨. ಮಹತ್ವಪೂರ್ಣವಾದ ಭವಿಷ್ಯವಾಣಿ

ಸರ್ ಚಾರ್ಲ್ಸ್ ವಿಲ್ಕಿನ್ಸನು ಬರೆದ ಗೀತೆಯ ಇಂಗ್ಲಿಷ್ ಭಾಷಾಂತರಕ್ಕೆ ಮುನ್ನುಡಿಯನ್ನು ಬರೆಯುತ್ತಾ ಭಾರತದ ಪ್ರಥಮ ಗವರ್ನರ್ ಜನರಲ್ಲಾದ ಹೇಸ್ಟಿಂಗ್ಸನು ಹೀಗೆ ಘೋಷಿಸಿದನು :

*ಭಾರತದಲ್ಲಿ ಬ್ರಿಟಿಷರ ವಸಾಹತು ತನ್ನ ಅಸ್ತಿತ್ವವನ್ನು ಕಳೆದುಕೊಂಡ ಬಹುಕಾಲದ ಮೇಲೂ, ಅದರಿಂದ ಬರುತ್ತಿದ್ದ ವರಮಾನ, ಅಧಿಕಾರಗಳ ಮೂಲಸ್ಥಾನಗಳೆಲ್ಲ ನೆನಪಿನಿಂದ ಅಳಿಸಿಹೋದ ಮೇಲೂ ಭಾರತದ ದಾರ್ಶನಿಕರು ಉಳಿದಿರುತ್ತಾರೆ.*

ಅಂದಿನಿಂದಲೂ ಪಾಶ್ಚಾತ್ಯ ದೇಶದ ಅನೇಕ ವಿವೇಚನಾಪರರೂ ಕವಿಗಳೂ ಗೀತೆಯ ಗುಣಗಾನ ಮಾಡಿದ್ದಾರೆ.

## ೩. ಯುಕ್ತಿಯುಕ್ತವಾಗಿರುವ ಜೀವನದರ್ಶನಕ್ಕೆ ಬೇಡಿಕೆ

ಆಧುನಿಕರ ಮನಸ್ಸಿನ ಆಕರ್ಷಣೆಯನ್ನು ಕಳೆದುಕೊಳ್ಳದಿರುವ ಜಗತ್ತಿನ ಕೆಲವೇ ಧರ್ಮಗ್ರಂಥ ಗಳಲ್ಲಿ ಗೀತೆಯೂ ಒಂದೆಂಬುದು ಗಮನಾರ್ಹವಾದುದು. ಆಧುನಿಕರ ಮನಸ್ಸಿಗೆ ಎಲ್ಲ ಧರ್ಮಗ್ರಂಥಗಳಲ್ಲಿಯೂ ಅಪನಂಬಿಕೆ ; ಸಾಂಪ್ರದಾಯಿಕವಾದ ಮತಧರ್ಮದ ಮೌಲ್ಯಗಳಲ್ಲಿ

*೧೯೩೪ರ ಡಿಸೆಂಬರ್‌ನಲ್ಲಿ ಮೈಸೂರಿನ ಶ್ರೀರಾಮಕೃಷ್ಣ ಆಶ್ರಮದಲ್ಲಿ ಆಚರಿಸಿದ ಗೀತಾ ಜಯಂತ್ಯುತ್ಸವದ ಸಂದರ್ಭದಲ್ಲಿ ಮಾಡಿದ ಭಾಷಣ.

ಯಾವ ನಿಶ್ಚಿತ ಶ್ರದ್ಧೆಯೂ ಅವರಿಗಿಲ್ಲ ಎಂಬುದನ್ನು ನಾವು ಗಮನಿಸಬೇಕು. ಆಧುನಿಕವಾದ ವೈಜ್ಞಾನಿಕ ವಿಮರ್ಶೆಯ ಅಖಂಡ ಜ್ವಾಲೆಯು ಜಗತ್ತಿನ ಎಲ್ಲ ಮತಗಳ ಮತ್ತು ಧರ್ಮಗ್ರಂಥಗಳತ್ತಲೂ ತನ್ನ ನಾಲಗೆಯನ್ನು ಚಾಚಿದೆ ; ಇದರ ಫಲವಾಗಿ ಇವೆರಡಕ್ಕೂ ಸಾಕಷ್ಟು ವಿಪತ್ತು ಸಂಭವಿಸಿದೆ. ಕೇವಲ ಶ್ರದ್ಧೆಯೊಂದರಲ್ಲಿಯೇ, ಅದರಲ್ಲಿಯೂ ಆ ಶ್ರದ್ಧೆಯು ಸತ್ಯದ ತಾರ್ಕಣೆಗೆ ನಿಲ್ಲದಿರುವಾಗ, ಬದುಕುವುದು ಹೆಚ್ಚು ಹೆಚ್ಚು ಕಷ್ಟವಾಗುತ್ತಾ ಬರುತ್ತದೆ. ಎಲ್ಲೆಲ್ಲಿಯೂ ಸಂದೇಹ ಸಮಸ್ಯೆಗಳು ತುಂಬಿಕೊಂಡಿವೆ. ವಿವಿಧ ಭಾವನೆಗಳ ಮತ್ತು ಅಭಿಪ್ರಾಯಗಳ ಒಳತೋಟಿಯ ಸುಳಿಯಲ್ಲಿ ಸಿಕ್ಕ ಇಂದಿನ ಮಾನವರಿಗೆ ಪ್ರಾಚೀನ ಪ್ರಶಾಂತಯುಗದಲ್ಲಿ ಮನಸ್ಸಿಗೆ ತೃಪ್ತಿಕೊಡುತ್ತಿದ್ದ ತತ್ತ್ವ ಮತ್ತು ಮತಗಳ ಶ್ರದ್ಧೆಯೆಲ್ಲಾ ಹಾರಿಹೋಗಿದೆ ; ಅವರು ತಮ್ಮ ಮನಸ್ಸಿಗೆ ಸ್ಥೈರ್ಯವನ್ನು ಕೊಡುವ ಸತ್ಯದ ಹೆಬ್ಬಂಡೆಯನ್ನು ಹುಡುಕುತ್ತಿದ್ದಾರೆ. ಮನುಷ್ಯನು ಬಹುಕಷ್ಟದಿಂದ ಸಂಪಾದಿಸಿರುವ ವಿಮರ್ಶನ ಶಕ್ತಿಯನ್ನು ತ್ಯಜಿಸಿಬಿಡಬೇಕೆಂದು ಬಲಾತ್ಕಾರ ಮಾಡದ ಜೀವನದರ್ಶನವೊಂದು ಈಗ ಅತ್ಯಗತ್ಯವಾಗಿದೆ. ಅಂತಹ ಮನಸ್ಸುಗಳಿಗೆ ಭಗವದ್ಗೀತೆಯು ನಂಬಿಕೆಯನ್ನೂ ಭರವಸೆಯನ್ನೂ ನೀಡುತ್ತದೆ. ವಾಸ್ತವವಾಗಿ ಹೇಳುವುದಾದರೆ, ಅದರ ಸಂದೇಶವು ಮಹತ್ವಪೂರ್ಣವಾಗಿರುವುದಕ್ಕೆ ಅದು ಅಂತಹ ಜೀವನ ದರ್ಶನವನ್ನು ನೀಡುವುದು ಮುಖ್ಯ ಕಾರಣವಾಗಿದೆ.

## ೪. ಭಾರತೀಯ ಸಂಪ್ರದಾಯದಲ್ಲಿ ಶ್ರೀಕೃಷ್ಣ

ಗೀತಾ ಸಂದೇಶವನ್ನು ಕುರಿತು ಸಮಾಲೋಚಿಸುವಾಗ ನಮ್ಮ ಗಮನವು ಅದರ ಉಪದೇಶವನ್ನು ಸ್ಫೂರ್ತಿದಾಯಕವಾಗಿ ನೀಡುವ ಶ್ರೀಕೃಷ್ಣನ ವ್ಯಕ್ತಿತ್ವದ ಕಡೆ ಅದಮ್ಯವಾಗಿ ಆಕರ್ಷಿತವಾಗುತ್ತದೆ. ಯಾರ ಅಮೂಲ್ಯವಾದ ಕೊಡುಗೆಗಳಿಂದ ಭಾರತ ಸಂಸ್ಕೃತಿಯು ತನ್ನ ವಿಶಿಷ್ಟ ಸ್ವರೂಪವನ್ನೂ, ಅದ್ವಿತೀಯತೆಯನ್ನೂ ಪಡೆದಿದೆಯೋ ಅಂತಹ ಪ್ರಾಚೀನ ಭಾರತದ ವಿವೇಚನಾಪರರೂ, ಜನ ನಾಯಕರೂ ಆದ ತೇಜೋಮೂರ್ತಿಗಳ ಸಾಲಿನಲ್ಲಿ ಶ್ರೀಕೃಷ್ಣನ ವ್ಯಕ್ತಿತ್ವವು ಮಹೋನ್ನತವಾದುದಾಗಿದೆ. ಆದ್ದರಿಂದಲೇ ಹಿಂದೂಗಳು ಆತನನ್ನು ಭಗವಂತನ ಪೂರ್ಣಾವತಾರವೆಂದು ಭಾವಿಸುತ್ತಾರೆ. ಶ್ರೀಸಾಮಾನ್ಯರಿಗಿಂತ ಎಲ್ಲ ವಿಧದಲ್ಲಿಯೂ ಶ್ರೇಷ್ಠನಾಗಿರುವ ಯಾವ ವ್ಯಕ್ತಿಗೇ ಆಗಲಿ ಕೊಡಬಹುದಾದ ಮಹತ್ ಗೌರವವಿದು. ಭಾರತದ ಜಾಯಮಾನಕ್ಕೆ ಇದು ಅರ್ಥ ಆಯಿತು ; ತನ್ನ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ನಾಯಕರಲ್ಲಿ ಅತ್ಯಂತ ಶ್ರೇಷ್ಠರಾದವರನ್ನು ಅದು ಭಗವಂತನ ಅವತಾರದ ಸ್ಥಾನಕ್ಕೆ ಏರಿಸಿತು. ಅಂತಹ ನಾಯಕರು ನೂತನ ಯುಗವೊಂದನ್ನು ನಿರ್ಮಾಣ ಮಾಡಿ, ರಾಷ್ಟ್ರದ ಮನಸ್ಸನ್ನು ರೂಪಿಸುತ್ತಾ, ರಾಷ್ಟ್ರೋದ್ಧಾರದ ಮುಂಚೂಣಿಯಲ್ಲಿ ನಿಂತಿರುತ್ತಾರೆ. ಶ್ರೀಕೃಷ್ಣನು ಅಂಥವನಾಗಿದ್ದ.

ಮಹಾಕಾವ್ಯವಾದ ಮಹಾಭಾರತದ ಮಹಾನಾಟಕದಲ್ಲಿ ಶ್ರೀಕೃಷ್ಣನ ಪಾತ್ರ ಅನೇಕ ಸಲ ರಂಗಸ್ಥಳದಲ್ಲಿ ಕಾಣಿಸಿಕೊಳ್ಳುತ್ತದೆ. ಆತನು ವಹಿಸುವ ಪಾತ್ರಗಳು ಹಲವು ರೀತಿಯವು. ಆದರೆ ಆತನ ಪಾರ್ಥಸಾರಥಿಯ (ಅರ್ಜುನನ ರಥ ನಡೆಸುವವನ) ಪಾತ್ರದಷ್ಟು ಮತ್ತಾವ ಪಾತ್ರವೂ ನಮ್ಮ ಗಮನವನ್ನು ಹಿಡಿದು ನಿಲ್ಲಿಸುವುದಿಲ್ಲ. ಏಕೆಂದರೆ ಇಲ್ಲಿ ಆತನು ಅತ್ಯಂತ ದಯಾಮಯನಾಗಿ, ದುಃಖತಪ್ತನಾದ ಅರ್ಜುನನ ಗೆಳೆಯನಾಗಿ, ಧರ್ಮನಿರೂಪಕನಾಗಿ, ಮತ್ತು ಮಾರ್ಗದರ್ಶಕನಾಗಿ ತನ್ನ ಪಾತ್ರವನ್ನು ವಹಿಸುತ್ತಾನೆ. ಮಹಾಭಾರತದಲ್ಲಿ ನಮಗೆ ಕಾಣಸುವ ಆತನ ವ್ಯಕ್ತಿತ್ವ ಇದು.

ಶ್ರೀಕೃಷ್ಣನು ಸಂದೇಶವನ್ನು ನೀಡುವ ಕಾರ್ಯ ದುಃಖಪೂರ್ಣವಾದ ಸನ್ನಿವೇಶವಾದುದರಿಂದ ಗೀತೋಪದೇಶಕ್ಕೆ ನೈಜತೆಯ ಬಣ್ಣ ಬಂದಿದೆ. ಯುದ್ಧವು ಪ್ರಾರಂಭವಾಗುವುದಕ್ಕೆ ಸ್ವಲ್ಪ ಮುಂಚೆ ಅರ್ಜುನನು ಯುದ್ಧಕ್ಕೆ ಅಣಿಯಾಗಿ ನಿಂತಿರುವ ಎರಡೂ ಸೈನ್ಯಗಳ ಮಧ್ಯದಲ್ಲಿ ತನ್ನ ರಥವನ್ನು

ನಿಲ್ಲಿಸುವಂತೆ ಶ್ರೀಕೃಷ್ಣನಿಗೆ ಹೇಳುತ್ತಾನೆ. ಆ ಪ್ರಧಾನ ಸ್ಥಾನದಿಂದ ಯುದ್ಧಭೂಮಿಯನ್ನೆಲ್ಲಾ ನೋಡಿ, ತಾನು ಯಾರೊಡನೆ ಯುದ್ಧ ಮಾಡಬೇಕಾಗಿರುವುದೆಂದು ವಿಚಾರ ಮಾಡುತ್ತಾನೆ. ಪೂಜ್ಯರಾದ ದ್ರೋಣರು, ಮಹಾನುಭಾವರಾದ ಭೀಷ್ಮರು ಇಂತಹ ತನ್ನ ಗುರುಹಿರಿಯರು ತನ್ನೊಡನೆ ಯುದ್ಧಕ್ಕೆ ಸನ್ನದ್ಧರಾಗಿರುವುದನ್ನು ಕಂಡು, ಅರ್ಜುನನ ಸ್ಥೈರ್ಯ ಕುಗ್ಗುತ್ತದೆ ; ಅವನು ವಿಷಣ್ಣನಾಗುತ್ತಾನೆ. ಗೀತೆಯ ಮೊದಲನೆ ಅಧ್ಯಾಯವು ಈ ದೃಶ್ಯವನ್ನು ವಿವರ ವಿವರವಾಗಿ ಚಿತ್ರಿಸುತ್ತದೆ. ಅತಿಯಾದ ಭಾವೋದ್ರೇಕವು ತನ್ನೆಲ್ಲ ಬಣ್ಣಗಳಿಂದ ಕಾಣಿಸಿಕೊಂಡು ಅರ್ಜುನನ ನಿರ್ಣಯ ಶಕ್ತಿಯನ್ನು ದುರ್ಬಲಗೊಳಿಸುತ್ತದೆ. ಕೇವಲ ಲೌಕಿಕ ಭೋಗಭಾಗ್ಯಗಳಿಗಾಗಿ ತನ್ನ ಸ್ವಂತ ಬಂಧುಗಳು ಮತ್ತು ಗುರುಗಳೊಡನೆ ಯುದ್ಧ ಮಾಡಿ ಅವರನ್ನು ಕೊಲ್ಲುವುದಿಲ್ಲವೆಂಬ ತನ್ನ ತೀರ್ಮಾನವನ್ನು ಕೃಷ್ಣನಿಗೆ ತಿಳಿಸುತ್ತಾನೆ. ಅಂತಹ ವಿಜಯದಿಂದ ಬರುವ ಸುಖಸಂತೋಷಗಳಿಗಿಂತಲೂ ಧರ್ಮದಿಂದ ನಡೆದು ಸನ್ಯಾಸಿಯಾಗುವುದು ಎಷ್ಟೋ ಮೇಲೆನ್ನುತ್ತಾನೆ. ಇನ್ನೂ ಹಲವು ಕಾರಣಗಳನ್ನು ಮುಂದೊಡ್ಡಿ ಅವನು ವಾದಿಸುತ್ತಾನೆ. ಅವನ ವಿಕೃತವಾದ ಮನಸ್ಸಿಗೆ, ಮತ್ತು ಭಿನ್ನಭಿನ್ನವಾದ ತೀರ್ಮಾನಕ್ಕೆ ತನ್ನ ವಾದ ಅತ್ಯಂತ ಸರಿಯೆಂದು ಕಾಣಿಸುತ್ತದೆ; ಅವನು ಕಂಪಿಸುತ್ತಾ ದುಃಖಾಕ್ರಾಂತ ಹೃದಯದಿಂದ ರಥದಲ್ಲಿ ಕುಸಿದು ಬೀಳುತ್ತಾನೆ; ಹಿಂದಿರುಗಬೇಕೆಂದು ಶ್ರೀಕೃಷ್ಣನಿಗೆ ನಿರ್ಣಾಯಕವಾಗಿ ತಿಳಿಸುತ್ತಾನೆ.

## ೫. "ಪಾರ್ಥ ! ಷಂಡತನ ನಿನಗೆ ಸಲ್ಲದು"

ಇಂತಹ ವಿಷಮ ಸಮಯದಲ್ಲಿ ಶ್ರೀಕೃಷ್ಣನ ಸತ್ವಯುಕ್ತವಾದ ಸಂದೇಶವು ಪರಿಣಾಮಕಾರಿಯಾದ ಮಾತುಗಳಲ್ಲಿ ವ್ಯಕ್ತವಾಗುತ್ತದೆ (*ಗೀತಾ II-೨*) :

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ;
ಅನಾರ್ಯಜುಷ್ಟಂ ಅಸ್ವರ್ಗ್ಯಂ ಅಕೀರ್ತಿಕರಂ ಅರ್ಜುನ—

*ಹೇ ಅರ್ಜುನ! ಆರ್ಯರಿಗೆ ಅಯೋಗ್ಯವೂ ಸ್ವರ್ಗಗತಿಗೆ ವಿರೋಧವೂ ಅಪಕೀರ್ತಿಕರವೂ ಆದ ಈ ಮೋಹವು ಇಂತಹ ವಿಷಮ ಸಮಯದಲ್ಲಿ ನಿನಗೆ ಹೇಗೆ ಬಂದಿತು ?*

ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ;
ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ—

*ಹೇ ಪಾರ್ಥ! ಷಂಡತನವನ್ನು ಹೊಂದಬೇಡ, ಇದು ನಿನಗೆ ಯೋಗ್ಯವಾದುದಲ್ಲ. ಎಲೈ ಶತ್ರುತಾಪನನೇ! ತುಚ್ಛವಾದ ಮನೋದೌರ್ಬಲ್ಯವನ್ನು ಬಿಟ್ಟು, ಮೇಲಕ್ಕೇಳು.*

ಶ್ರೀಕೃಷ್ಣನ ಮಾತುಗಳು ಅರ್ಜುನನ ವಿಷಣ್ಣಹೃದಯಕ್ಕೆ ಶಕ್ತಿವರ್ಧಕವಾದ ಔಷಧದಂತೆ ಪರಿಣಾಮವನ್ನು ಮಾಡಿರಬೇಕು. ಶ್ರೀಕೃಷ್ಣನು ಅವನ ಸಂಕಟದ ಸ್ಥಿತಿಯನ್ನು ಕಂಡು ತುಂಬ ಮರುಕ ಗೊಂಡಿರುವನಾದರೂ, ಅರ್ಜುನನ ನಿರೀಕ್ಷಣೆ ಎಲ್ಲಾ ತಲೆಕೆಳಗಾಗುವಂತೆ ಅವನ ವ್ಯಾಖ್ಯಾನವನ್ನು ಕೇಳಿ ಸ್ವಲ್ಪವೂ ಮರುಕವನ್ನು ತೋರುವುದಿಲ್ಲ. ಅರ್ಜುನನು ತನ್ನ ಹೃದಯ ಕರಗಿ, ತನ್ನ ಶತ್ರುಗಳಿಗೆ ಪ್ರೇಮ, ದಯೆ, ಔದಾರ್ಯ, ಕರುಣೆಗಳನ್ನು ತೋರಿಸುತ್ತಿರುವೆನೆಂದು ತನ್ನ ಮಟ್ಟಿಗೆ ತಾನಾದರೂ ಭಾವಿಸಿರುವ ಹಾಗೆ ತೋರುತ್ತದೆ. ಪ್ರಾಸಂಗಿಕವಾಗಿ ಅಹಿಂಸೆ, ಸತ್ಯಾಗ್ರಹಗಳನ್ನು ಮುಂದು ಮಾಡಿಕೊಂಡು ಅವನು ವಾದಿಸುತ್ತಾನೆ. ಇದೆಲ್ಲವೂ ಅದೇನು ಆಶ್ಚರ್ಯವೋ, ಶ್ರೀಕೃಷ್ಣನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಮಾಡುವುದಿಲ್ಲ. ಈ ಸಂದರ್ಭದಲ್ಲಿ ಶ್ರೀಕೃಷ್ಣನು ಆಶ್ಚರ್ಯಕರ ವಾದ ಮಾನಸಿಕ ಸೂಕ್ಷ್ಮಗ್ರಹಣಶಕ್ತಿಯನ್ನು ಪ್ರದರ್ಶಿಸುತ್ತಾನೆ ; ಅಲ್ಲೋಲ ಕಲ್ಲೋಲವಾಗಿರುವ ಅರ್ಜುನನ ಮನಸ್ಸನ್ನು ತಿಳಿಯಾಗಿ ಮಾಡಲು ಆಧುನಿಕ ಯುಗದಲ್ಲಿ ನಾವು ಮನೋವಿಶ್ಲೇಷಣೆ

ಎಂದು ಕರೆಯುವ ವಿಧಾನವನ್ನು ಆತನು ಅನುಸರಿಸುತ್ತಾನೆ. ಮನಸ್ಸಿನ ಸಮತೋಲನವನ್ನು ತಪ್ಪಿಸುವ ಆರಂಭ ದೆಸೆಯ ದೌರ್ಬಲ್ಯ ಮತ್ತು ವಾಗಾಡಂಬರದ ತರ್ಕ ಪರಂಪರೆಯಿಂದ ಮೂಡುವ ಮೊದಲ ತಪ್ಪು, ಪತ್ತೆ ಮಾಡುವುದಕ್ಕೂ ಕೂಡ ಸಾಧ್ಯವಿಲ್ಲದಷ್ಟು ಮಸುಕುಗೊಳಿಸುವುದು—ಸಂಗ್ರಹವಾಗಿ ಹೇಳುವುದಾದರೆ, ಅರ್ಜುನನ ಮನಸ್ಸನ್ನು ಶ್ರೀಕೃಷ್ಣನು ಅರ್ಥಮಾಡಿಕೊಂಡುದು ಹೀಗೆ. ಶತ್ರುಗಳ ಮೇಲೆ ತನಗಿರುವ ಪ್ರೇಮ, ಕರುಣೆ, ದಯೆ, ಔದಾರ್ಯ ಇತ್ಯಾದಿ ವಾದಗಳೆಲ್ಲ ಬಹುಮಟ್ಟಿಗೆ ಭಾವೋದ್ರೇಕವನ್ನು ಬಯಲಿಗೆ ಹಾಕಿ ವೀರ್ಯವತ್ತಾದ, ಆ ಸದ್ಗುಣಗಳಿಗಿಂತಲೂ ಅವನಲ್ಲಿ ಹುಟ್ಟಿಕೊಳ್ಳುತ್ತಿದ್ದ ತಾರ್ಕಿಕ ಮನೋಗತಿಯನ್ನು ಸ್ಪಷ್ಟಪಡಿಸಿದುವು. ಅರ್ಜುನನಿಗೆ ಹೇಗಾಯಿತೋ ಹಾಗೆಯೇ ನಮ್ಮಲ್ಲಿ ಬಹು ಜನರಿಗೆ ಸದ್ಗುಣವೆಂಬುದು ತಮ್ಮ ದೌರ್ಬಲ್ಯವನ್ನು ತಮ್ಮ ದೃಷ್ಟಿಯಿಂದ ಮುಚ್ಚಿಡುವುದಕ್ಕಾಗಿ ಹಾಕಿಕೊಂಡಿರುವ ಒಂದು ಮೋಸದ ಮುಖಪರದೆ. ನಮ್ಮ ಜೀವನ ಸಲೀಸಾಗಿ, ಸರಾಗವಾಗಿ ಸಾಗಿ ಹೋಗುತ್ತಿರುವಾಗ ನಾವು ಇದನ್ನು ಅರ್ಥಮಾಡಿಕೊಳ್ಳಲಾರೆವು. ಆದರೆ ಭಯಂಕರವಾದ ಆಂತರಿಕ ಹೋರಾಟ ಆರಂಭವಾಗಿ, ಜೀವನದ ಬಿರುಗಾಳಿ ಮತ್ತು ಸಂಕಟಗಳು ನಮ್ಮ ನಿರರ್ಗಳವಾದ ಭಾವನೆಗಳಿಗೆ ಹೊಸ ಮೌಲ್ಯಮಾಪನೆ ಮಾಡುವಂತಹ ಬಿಕ್ಕಟ್ಟನ್ನುಂಟು ಮಾಡಿದಾಗ ಮಾತ್ರ ನಮ್ಮ ಸದ್ಗುಣಗಳ ಬುಡವು ಭದ್ರವಿಲ್ಲೆಂದು ನಾವು ಕಂಡುಕೊಳ್ಳುತ್ತೇವೆ. ಈ ಸದ್ಗುಣದ ಮೇಲುಹೊದಿಕೆಯನ್ನು ತೆಗೆದುಹಾಕಿದಾಗ ಮಾತ್ರವೇ ನಾವು ಧರ್ಮಜೀವನಕ್ಕೆ ತಕ್ಕವರಾಗುತ್ತೇವೆ. ಆದರೆ ಇದಕ್ಕೆ ಧೀರನಾದವನ ಶಕ್ತಿ ಧೈರ್ಯಗಳು ಬೇಕು. ಆದ್ದರಿಂದಲೇ ಶ್ರೀಕೃಷ್ಣನು ಅರ್ಜುನನಿಗೆ 'ಹೇ ಧೀರ ! ತುಚ್ಛವಾದ ಈ ಮನೋದೌರ್ಬಲ್ಯವನ್ನು ಕೊಡವಿಕೊಂಡು ಮೇಲ್ಕೇಳು' ಎಂದು ಬೋಧಿಸುತ್ತಾನೆ.

## ೬. ಜ್ಞಾನ ಪ್ರಶಂಸೆ

ಮೇಲೆ ಕೊಟ್ಟಿರುವ ಎರಡು ಶ್ಲೋಕಗಳ ಶಕ್ತಿವರ್ಧಕವನ್ನು ಪಾನ ಮಾಡಿಸಿದ ಮೇಲೆ ಅದರ ಪ್ರಭಾವದಿಂದ ಅರ್ಜುನನ ಮನಸ್ಸು ಸ್ವಲ್ಪಮಟ್ಟಿಗೆ ಸ್ತಿಮಿತಕ್ಕೆ ಬಂದಿತು. ಆಗ ಶ್ರೀಕೃಷ್ಣನು ನಿತ್ಯ ಸತ್ಯದ ಜ್ಞಾನವನ್ನು ಉಪದೇಶಿಸುವುದರ ಮೂಲಕ ಅವನ ಸಂದೇಹಗಳನ್ನೂ ತಪ್ಪುಗಳನ್ನೂ ಹೋಗಲಾಡಿಸ ಹೊರಡುತ್ತಾನೆ. ಇದೇ ಜೀವನದಲ್ಲಿ ಅತ್ಯಂತ ಮಹತ್ತಾದ ಉದ್ಧಾರಕಾರ್ಯ. ಜೀವನದ ಎಲ್ಲ ಕೆಡಕುಗಳಿಗೂ ಜ್ಞಾನವೊಂದೇ ಶಾಶ್ವತವಾದ ಔಷಧ. ಇಷ್ಟೇ ಅಲ್ಲ, ನಾವು ಸಂದೇಹ ಮತ್ತು ಆಂತರಿಕ ಹೋರಾಟಗಳಿಗೆ ಸಿಕ್ಕಿ ನಜ್ಜುಗುಜ್ಜಿಯಾದಾಗ ಮಾತ್ರವೇ ಸತ್ಯದ ಜ್ಞಾನವನ್ನು ಅಥವಾ ಧರ್ಮತತ್ತ್ವವನ್ನು ಬಯಸುವುದಕ್ಕಾಗಲೀ, ಪಡೆಯುವುದಕ್ಕಾಗಲೀ ಯೋಗ್ಯರಾಗುತ್ತೇವೆ. ಅರ್ಜುನನು ಅಂತಹ ಸ್ಥಿತಿಯಲ್ಲಿದ್ದು ತನಗೆ ಬೆಳಕನ್ನು ನೀಡುವಂತೆ ಬೇಡಿಕೊಂಡುದರಿಂದ (ಗೀತಾ II-೭) ಶ್ರೀಕೃಷ್ಣನು ಅವನಿಗೆ ಜೀವನ ಧರ್ಮತತ್ತ್ವವೊಂದನ್ನು ಉಪದೇಶಿಸಿ, ಕೊನೆ ಮೊದಲಿಲ್ಲದ ಜೀವನ ಕಾರ್ಯಕಲಾಪಗಳಲ್ಲಿ ಮುಳುಗಿರುವವನ ಮನಸ್ಸು ಸ್ತಿಮಿತವಾಗಿಯೂ, ಪಾದ ಭದ್ರವಾಗಿಯೂ ನಿಲ್ಲುವಂತೆ ಸಹಾಯಮಾಡುವುದು ಯಥಾರ್ಥವಾಗಿಯೇ ಇತ್ತು. 'ಸತ್ಯದ ಜ್ಞಾನವನ್ನು ನಿನ್ನ ಸೆರಗಿಗೆ ಕಟ್ಟಿಕೊಂಡು ನೀನು ಬೇಕಾದ್ದನ್ನು ಮಾಡು' ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಶ್ರೀಕೃಷ್ಣನು ಅದನ್ನೇ ಮಾಡುತ್ತಾನೆ. ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಸಮಸ್ಯೆಗಳೇಳುತ್ತವೆ. ಅದರ ನಿವಾರಣೋಪಾಯವನ್ನು ಹುಡುಕುವುದು ತತ್ತ್ವಶಾಸ್ತ್ರದ ಕೆಲಸ. ಆದ್ದರಿಂದ, ತತ್ತ್ವಶಾಸ್ತ್ರವು ಜೀವನದ ಎಲ್ಲ ಸಮಸ್ಯೆಗಳಿಗೂ ಶಾಶ್ವತವಾದ ನಿವಾರಣೋಪಾಯವನ್ನು ಕೊಡಬಲ್ಲಂತಹ ಸತ್ಯದ ಜ್ಞಾನವನ್ನು ಮಾತ್ರ ಅನ್ವೇಷಿಸುತ್ತದೆ, ತತ್ತ್ವಶಾಸ್ತ್ರದ ಪರಿಹಾರವೆಂಬುದು ಜೀವನವೆಲ್ಲ ಕ್ಷಯಿಸಿ ಹೋದ ಮೇಲೆ ಆಶೋತ್ತರಗಳನ್ನು ಈಡೇರಿಸುವಂತಹ ಸ್ವರೂಪದ್ದಲ್ಲ.

ಸತ್ಯದ ಫಲವನ್ನು ಈ ಜನ್ಮದಲ್ಲಿಯೇ ಪಡೆಯಲಾಗದಿದ್ದರೆ ಅದರಿಂದ ಯಾವ ಪ್ರಯೋಜನವೂ ಇಲ್ಲ. ಸಮಸ್ಯೆಯೇ ಇಲ್ಲದಿದ್ದರೆ ಪರಿಹಾರವು ಪರಿಹಾರವೇ ಅಲ್ಲ. ಉಪನಿಷತ್ತುಗಳು ಹೇಳುವಂತೆ ಸತ್ಯದ ಫಲವನ್ನು ಈಗ, ಇಲ್ಲಿಯೇ ನಾವು ಅನುಭವಿಸಬೇಕು. ಕೇನೋಪನಿಷತ್ತು ಹೇಳುತ್ತದೆ (II.೫) :

ಇಹ ಚೇದವೇದೀದಥ ಸತ್ಯಮಸ್ತಿ ;
ನ ಚೇದಿಹಾವೇದೀನ್ಮಹತೀ ವಿನಷ್ಟಿಃ—

*ಇಲ್ಲಿಯೇ ಅರಿತುಕೊಂಡವನಿಗೆ ಸತ್ಯವುಂಟು, ಇಲ್ಲಿ ಅರಿತುಕೊಳ್ಳದವನಿಗೆ ದೊಡ್ಡ ವಿನಾಶವಾಗುತ್ತದೆ.*

ಸತ್ಯ ತುಂಬಾ ಸರಳವಾದುದು. ಜೀವನದಲ್ಲಿನ ಅದರ ಯಾವ ಅಂಶವನ್ನೂ ತಳ್ಳಿಹಾಕದೆ, ಮೌನವಾಗಿ ಜೀವನವನ್ನು ಪ್ರವೇಶಿಸಿ, ಸ್ವಲ್ಪವೂ ಗೊತ್ತಾಗದಂತೆ ಅದನ್ನು ಪರಿವರ್ತಿಸಬಲ್ಲದು. ನಾವು ಮುಂದೋರದೆ ಕುಳಿತಿರುವಾಗ ಶ್ರೀಕೃಷ್ಣನು ನಮಗೆ ನೀಡುವುದು ಇದನ್ನೇ ಹೊರತು, ಜೀರ್ಣಶೀರ್ಣವಾದ ಮತ್ತು ಅರ್ಥರಹಿತವಾದ ಮತಸೂತ್ರಗಳು, ಸಿದ್ಧಾಂತಗಳು, ನಿಶ್ಚಿತ ನಿಯಮಗಳು ಇವುಗಳ ಮೂಟೆಯನ್ನಲ್ಲ. ಆತನು ಹೀಗೆ ಮಾಡದೆ ಬೇರೆಯ ತರಹ ಮಾಡಿದ್ದರೆ ಅದರ ಪರಿಣಾಮ ಹಾಸ್ಯಾಸ್ಪದವಾಗುತ್ತಿತ್ತು. ಕ್ರಿಸ್ತನು ಸೊಗಸಾಗಿ ಹೇಳಿರುವಂತೆ :

*ತನ್ನ ಮಗ ಭಕ್ಷ್ಯ ಕೊಡೆಂದು ಕೇಳಿದರೆ ಅವನಿಗೆ ಕಲ್ಲನ್ನು ಕೊಡುವಂತಹ ಮನುಷ್ಯ ನಿಮ್ಮಲ್ಲಿ ಯಾವನಿದ್ದಾನೆ ? (ಮ್ಯಾಥ್ಯೂ VII-೯)*

ಜೀವನದಲ್ಲಿ ನಿಶ್ಚಲವಾಗಿ ನಡೆದು, ಅದರಲ್ಲಿ ಬರುವ ಅಡ್ಡಿ ಆತಂಕಗಳನ್ನೆಲ್ಲ ನಿವಾರಿಸಿಕೊಳ್ಳುವುದಕ್ಕೆ ಅಗತ್ಯವಾದುದೆಂದರೆ ಸ್ವಲ್ಪಮಟ್ಟಿನ ಆತ್ಮಪ್ರತ್ಯಯ, ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳುವುದಾದರೆ 'ದೇವರಲ್ಲಿ ನಂಬಿಕೆ ಹುಟ್ಟುವುದಕ್ಕೆ ಮೊದಲು ನಮ್ಮಲ್ಲಿ ನಮಗೆ ನಂಬಿಕೆ ಇರಬೇಕು.' ನಮ್ಮ ಯಥಾರ್ಥಸ್ವರೂಪವಾದ ಆತ್ಮಜ್ಞಾನವು ಎಲ್ಲ ಪುರುಷಪ್ರಯತ್ನ ಸಿದ್ಧಿಗಳಿಗೂ ತಳಹದಿ. ಈ ಗುರಿಯನ್ನು ತನ್ನ ದೃಷ್ಟಿಯಲ್ಲಿಟ್ಟುಕೊಂಡು ಶ್ರೀಕೃಷ್ಣನು ಅರ್ಜುನನಿಗೆ ತನ್ನ ನಿಜವಾದ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಹಾದಿಯನ್ನು ತೋರಿಸುತ್ತಾನೆ. ಆ ಮೂಲಕ ಪಡೆದ ಜ್ಞಾನ ಮತ್ತು ಶ್ರದ್ಧೆಗಳನ್ನು ಬಳಸಿಕೊಂಡು ತನ್ನ ಸಮಸ್ಯೆಗಳನ್ನು ತಾನೇ ಪರಿಹರಿಸಿಕೊಳ್ಳುವ ಕಾರ್ಯವನ್ನು ಅರ್ಜುನನಿಗೆ ವಹಿಸುತ್ತಾನೆ. ಹದಿನೆಂಟನೇ ಅಧ್ಯಾಯದ ಅರವತ್ತುಮೂರನೇ ಶ್ಲೋಕದಿಂದ ಇದು ಸ್ಪಷ್ಟವಾಗುತ್ತದೆ. ಅಲ್ಲಿ ಶ್ರೀಕೃಷ್ಣನು ಹೇಳುತ್ತಾನೆ :

ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾತ್ ಗುಹ್ಯತರಂ ಮಯಾ ;
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು—

*ಹೀಗೆ ರಹಸ್ಯಗಳಲ್ಲೆಲ್ಲ ರಹಸ್ಯವಾದ ಜ್ಞಾನವನ್ನು ನಾನು ನಿನಗೆ ತಿಳಿಯ ಹೇಳಿದ್ದೇನೆ. ಇದನ್ನು ಸಂಪೂರ್ಣವಾಗಿ ವಿಮರ್ಶಿಸಿ ನೀನು ಹೇಗೆ ಇಚ್ಛಿಸುವೆಯೋ ಹಾಗೆ ಮಾಡು.*

ಅದೇ ಅಧ್ಯಾಯದ ಎಪ್ಪತ್ಮೂರನೆಯ ಶ್ಲೋಕದಲ್ಲಿ ಅರ್ಜುನನು ಹೇಳಿರುವ ಮಾತುಗಳಿಂದಲೂ ಅವನ ಮುಂದಿನ ನಡತೆಯಿಂದಲೂ ಶ್ರೀಕೃಷ್ಣೋಪದೇಶದಿಂದ ಅವನ ಮನಸ್ಸಿನ ಮೇಲೆ ಉದ್ದಿಷ್ಟ ಪರಿಣಾಮವಾಗಿತ್ತೆಂದು ಸ್ಪಷ್ಟವಾಗುತ್ತದೆ.

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ ಪ್ರಸಾದಾತ್ ಮಯಾಚ್ಯುತ ;
ಸ್ಥಿತೋಽಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ—

*ಎಲೈ ಅಚ್ಯುತ ! ನಿನ್ನ ಅನುಗ್ರಹದಿಂದ ನನ್ನ ಮೋಹವು ನಷ್ಟವಾಯಿತು, ಸ್ಮೃತಿಯು ಉಂಟಾಯಿತು, ಸಂದೇಹಶೂನ್ಯನಾಗಿ ಇರುವೆನು. ನಿನ್ನ ಉಪದೇಶದಂತೆ ನಡೆಯುತ್ತೇನೆ.*

## ೨. ಆತ್ಮನ ಸ್ವರೂಪ

ಶ್ರೀಕೃಷ್ಣನ ಮನಸ್ಸನ್ನು ತುಂಬಿಕೊಂಡಿರುವ ಎರಡು ಮುಖ್ಯ ಸಮಸ್ಯೆಗಳೆಂದರೆ ಆತ್ಮನ ಸ್ವರೂಪ ಮತ್ತು ನಡತೆಯ ಸಮಸ್ಯೆ. ಇವುಗಳಲ್ಲಿ ಮೊದಲನೆಯದರ ಸಮಾಲೋಚನೆಯನ್ನು ಮೊದಲು ತೆಗೆದುಕೊಂಡು ಎರಡನೆಯದನ್ನು ಆಮೇಲೆ ತೀರ್ಮಾನಿಸುತ್ತಾನೆ.

ಅಹಂಕಾರವೇ ಮನುಷ್ಯನ ಎಲ್ಲ ತಪ್ಪುಗಳಿಗೂ ಕಾರಣ, ಎಲ್ಲ ಮೌಲ್ಯಮಾಪನೆಯ ದೋಷಕ್ಕೂ ಮೂಲ. ನಮ್ಮ ಅನುಭವದ ಪ್ರತಿಯೊಂದರ ವಿಚಾರದಲ್ಲೂ ನಮ್ಮ ತೀರ್ಮಾನವನ್ನು ನಾವು ಆ ಅಹಂಕಾರಕ್ಕೆ ಒಪ್ಪಿಸುತ್ತೇವೆ. ಅದು ಸ್ವತಃ ಮಿತಿಯುಳ್ಳದ್ದಾಗಿ, ಎಲ್ಲೆಕಟ್ಟುಗಳ ಪರಿಧಿಗೊಳಪಟ್ಟುದಾದ್ದರಿಂದ ಅದರ ತೀರ್ಮಾನ ತಪ್ಪಿಗವಕಾಶವಿಲ್ಲದಂತಿರುವುದು ಸಾಧ್ಯವಿಲ್ಲ. ಆದ್ದರಿಂದ ತಪ್ಪುಗಳಾಗುತ್ತವೆ. ಆ ಕಾರಣದಿಂದಲೇ ಸಂದೇಹಗಳು ಮೂಡುತ್ತವೆ. ಅವುಗಳನ್ನು ಇನ್ನೂ ಹೆಚ್ಚಾಗಿ ಸಮಾಲೋಚಿಸಬೇಕಾಗುತ್ತದೆ. ಹೀಗೆ ಆಳವಾಗಿ ಸಮಾಲೋಚಿಸಿದಾಗ ಈ 'ಅಹಂ'ನ ಸಂಪೂರ್ಣ ಅವಾಸ್ತವ ಗುಣ ವ್ಯಕ್ತವಾಗುತ್ತದೆ. ಆಗ ನಮ್ಮ ಆತ್ಮತ್ವವನ್ನು ಇನ್ನೂ ಆಳವಾದ ಯಥಾರ್ಥದತ್ತ ಬದಲಾಯಿಸಬೇಕಾಗುತ್ತದೆ. ಇಲ್ಲಿ ನಾವು ವೈದಿಕ ಕಲ್ಪನೆಯಾದ ಸಾಕ್ಷಿ (ಅಂತಿಮಪ್ರೇಕ್ಷಕ) ಯನ್ನು ಸಂಧಿಸುತ್ತೇವೆ. ಪಾಶ್ಚಾತ್ಯ ತತ್ತ್ವವೇತ್ತರಾರೂ ಇದನ್ನು ಗುರುತಿಸಿಲ್ಲ. ಆದರೆ ಮನಶ್ಶಾಸ್ತ್ರ ಮತ್ತು ಪ್ರಮಾಣ ಪ್ರಮೇಯ ತತ್ತ್ವಶಾಸ್ತ್ರ (epistemology)ಗಳ ಸಮಸ್ಯೆಗಳಿಗೆ ವೈಜ್ಞಾನಿಕ ವಿಧಾನ ವನ್ನು ಅಳವಡಿಸುವುದರ ಮೂಲಕ ಪಾಶ್ಚಾತ್ಯ ಸಮಾಲೋಚನೆಯು ದೃಢವಾದ ಹೆಜ್ಜೆಯನ್ನಿಡುತ್ತಾ, ನಿರ್ದೋಷವಾದ ರೀತಿಯಲ್ಲಿ ಅದರತ್ತ ಸಾಗುತ್ತಿದೆ. ಅಹಂಕಾರವೆಂಬುದು ಒಂದು ಮಾಯೆ. ಮನುಷ್ಯನ ವ್ಯಕ್ತಿತ್ವ ಅಥವಾ ಆತ್ಮತ್ವದಲ್ಲಿ ಅಹಂಕಾರವಿಲ್ಲ ಎಂಬುದು ಬೌದ್ಧ ಧರ್ಮದ ಕೇಂದ್ರ ಸತ್ಯ. ಆಧುನಿಕ ಜೀವ ವಿಜ್ಞಾನ ಮತ್ತು ಮನಶ್ಶಾಸ್ತ್ರಗಳೂ ಇದನ್ನೇ ಸೂಚಿಸುತ್ತವೆ. ಆಧುನಿಕ ಜೀವ ವಿಜ್ಞಾನದ ಬೃಹತ್ ಸಾರಸಂಗ್ರಹದಂತಿರುವ, ಎಚ್. ಜಿ. ವೆಲ್ಸ್, ಜಿ. ಬಿ. ವೆಲ್ಸ್ ಮತ್ತು ಜೂಲಿಯನ್ ಹಕ್ಸ್ಲೀ ಕೃತ The Science of Lifeನಲ್ಲಿ (ಪುಟ ೮೭೮-೭೯) ಹೀಗೆ ಹೇಳಿದೆ :

*ಏಕಾಂತವಾಗಿ, ರಾತ್ರಿಯ ಮೌನದಲ್ಲಿ, ಆಗಾಗ ಆಲೋಚನಾಮಗ್ನರಾದ ಸಮಯಗಳಲ್ಲಿ ನಮಗೆ ನಾವೇ ಹೀಗೆ ಪ್ರಶ್ನೆಮಾಡಿ ಕೊಂಡಿದ್ದೇವೆ: ಈ ಆತ್ಮ ವೆಂಬುದು ಇಷ್ಟು ಸ್ಪಷ್ಟವಾಗಿ ನಮ್ಮ ವಿಶ್ವಕ್ಕೆಲ್ಲಾ ಕೇಂದ್ರ ಸ್ವರೂಪದಲ್ಲಿದೆ, ಇಷ್ಟು ಆಶಾಮಯವಾಗಿ ಜಗತ್ತನ್ನೆಲ್ಲಾ ಆಕ್ರಮಿಸಿದೆ; ಇದು ಯಾವಾಗಲಾದರೂ ಇಲ್ಲದಂತಾಗುವುದೇ ? ಅದಿಲ್ಲದೆ ಖಂಡಿತವಾಗಿಯೂ ಜಗತ್ತೆಂಬುದೇ ಇಲ್ಲ. ಆದರೂ ಈ ಪ್ರಜ್ಞಾ ಪೂರ್ಣವಾದ ಆತ್ಮ ವು ರಾತ್ರಿ ನಾವು ಮಲಗಿದಾಗ ಸತ್ತುಹೋಗುತ್ತದೆ. ಅದು ತನ್ನ ಸ್ವಂತ ಅಸ್ತಿತ್ವದ ಪ್ರಜ್ಞಾವಸ್ಥೆಯನ್ನು ಯಾವ ಮೆಟ್ಟಲು ಮೆಟ್ಟಲಾಗಿ ಏರಿಬಂದು ನುಸುಳಿಕೊಳ್ಳುತ್ತದೆಯೋ ಆ ಮಜಲುಗಳನ್ನು ನಾವು ಗುರುತಿಸಲಾರೆವು.*

*ವ್ಯಕ್ತಿತ್ವ ಎಂಬುದು ಪ್ರಕೃತಿಯ ಕ್ರಮಾನುಸರಣೆಗಳಲ್ಲಿ ಯಾವುದೋ ಒಂದು ಮಾತ್ರವಾಗಿರಬಹುದು, ಸಾಕಷ್ಟು ಯುಕ್ತಿಯುತವಾದ, ಪ್ರಯೋಜನದಿಂದ ಕೂಡಿದ, ತತ್ಕಾಲಾನುಕೂಲವಾದ ಮಾಯೆಯಾಗಿರಬಹುದು.*

*ಮನುಷ್ಯನ ವಿಶ್ವಚಿತ್ರ ಎಷ್ಟೆಷ್ಟು ಹೆಚ್ಚು ಜಾಣ್ಮೆಯಿಂದ ಮತ್ತು ವ್ಯಾಪಕತೆಯಿಂದ ಕೂಡಿರುತ್ತದೆಯೋ ಅಷ್ಟೂ ಅಷ್ಟು, ಹೆಚ್ಚಾಗಿ ವೈಯಕ್ತಿಕ ಜೀವನವನ್ನು ಅದರ ಅನಿವಾರ್ಯವಾದ ಅಂತಿಮ ತಿರಸ್ಕಾರದೊಡನೆ, ಏಕಾಗ್ರತೆಯಿಂದ ಗಮನಿಸುವುದು ದುಸ್ಸಹವಾಗಿದೆ.*

*ಮಾನವನು ವಿಲೀನತೆಯಿಂದ (ಪರಮಾತ್ಮನಲ್ಲಿ ಅಭೇದಭಾವದಿಂದ ಸೇರಿಕೊಳ್ಳುವದು) ಅಹಂಕಾರಮುಕ್ತನಾಗಿ, ಅವನ ವ್ಯಕ್ತಿತ್ವವು ಮಹಾ ವ್ಯಕ್ತಿತ್ವದಲ್ಲಿ ವಿಲೀನವಾಗಿ ಹೋಗುವುದರಿಂದ, ಅಸಾಪಚರ್ಯದ ಫಲವಾಗಿ ವ್ಯಕ್ತಿಸ್ವರೂಪವಿಲ್ಲದ ಅಮರತ್ವವನ್ನು ಪಡೆಯುತ್ತಾನೆ. ಯೋಗರಹಸ್ಯದ ಬಹುಮಟ್ಟಿನ ತಿರುಳು ಇದೇಯೆ. ವ್ಯಕ್ತಿತ್ವದ ಜೀವಶಾಸ್ತ್ರ ವಿಭಜನೆಯು ಯೋಗಿಗಳ ಸ್ವರೂಪವನ್ನು ಬಹು ನಿಕಟವಾಗಿ ಹೋಲುತ್ತದೆಯೆಂಬುದು ಬಹು ಗಮನಾರ್ಹವಾದ ಸಂಗತಿ. ಈ ದ್ವಿತೀಯ ಶ್ರೇಣಿಯ ಚಿಂತನೆಯ ಪ್ರಕಾರ ವ್ಯಕ್ತಿಯು ತನ್ನತನವನ್ನು ನೀಗಿಕೊಳ್ಳುವುದರಿಂದ ತನ್ನ ಉದ್ಧಾರವನ್ನು ಸಾಧಿಸುತ್ತಾನೆ. ಯೋಗ ರಹಸ್ಯದ ಉಪದೇಶದಲ್ಲಿ ಜೀವನು ದೇವರಲ್ಲಿ ಒಂದಾಗಿ ಹೋಗುತ್ತಾನೆಂದು ಹೇಳಿದರೆ ಜೀವನದ ವೈಜ್ಞಾನಿಕ ವಿಭಜನೆಯಲ್ಲಿ ತಾನು ವೆಂಕ ಶೀನ ನಾಣಿ ಎಂಬುದನ್ನು ಮರೆತು, ತಾನು ಮಾನವನೆಂಬುದನ್ನು ಕಂಡುಕೊಳ್ಳುತ್ತಾನೆ. ಇದೇ ನಿಯತಿಯನ್ನು ಬೌದ್ಧರು ಪ್ರತಿಪಾದಿಸುವಾಗ, 'ವ್ಯಕ್ತಿ ಜೀವನವು ದುಃಖಕರವಾದ ಮಾಯೆ, ವೈಯಕ್ತಿಕ ಆಶೆಗಳನ್ನು ಗೆಲ್ಲುವುದರ ಮೂಲಕ ಜನ ಇದನ್ನು ನಿವಾರಿಸಿಕೊಳ್ಳಬಹುದು' ಎಂದು ಹೇಳುತ್ತಾರೆ. ಆಧುನಿಕ ವಿಜ್ಞಾನದಲ್ಲಿ ಮತ್ತು ದಿನದಿನವೂ ಬೋಧಿಸುವ ಪ್ರಾಯೋಗಿಕ ನೀತಿಯಲ್ಲಿ ತಮಗೆ ಒಪ್ಪಿಗೆಯಾಗುವಂತಹ ಸಮರ್ಥನೀಯಾಂಶಗಳನ್ನು ಪಾಶ್ಚಾತ್ಯ ಅನುಭಾವಿಗಳೂ ಮತ್ತು ಪ್ರಾಚ್ಯ ಋಷಿಗಳೂ ಕಾಣುತ್ತಾರೆ. ಇಬ್ಬರೂ ಸ್ವಾರ್ಥವನ್ನು ಅಪ್ರಧಾನವಾಗಿ ಕಾಣಬೇಕೆಂದು ಬೋಧಿಸುತ್ತಾರೆ; ಸ್ವಾರ್ಥವು ಒಂದು ಸಾಧನವೇ ಹೊರತು ಸಿದ್ಧಿಯಲ್ಲವೆನ್ನುತ್ತಾರೆ.*

ಸಂಪೂರ್ಣ ಶೂನ್ಯ ತತ್ತ್ವದ ತರ್ಕದೋಷವನ್ನು ತಪ್ಪಿಸಬೇಕಾದರೆ ಆಧುನಿಕ ಜೀವ ವಿಜ್ಞಾನ ಮತ್ತು ಮನಶ್ಶಾಸ್ತ್ರಗಳು ಮನುಷ್ಯನ ವ್ಯಕ್ತಿತ್ವ ಭಾವನೆಯನ್ನು ಇನ್ನೂ ಆಳವಾಗಿ ವಿಭಜಿಸಿ ಪರೀಕ್ಷಿಸಬೇಕು. ಭಾರತದ ತತ್ತ್ವಶಾಸ್ತ್ರವು ಪ್ರಕೃತಿಯ ನಿರಂತರ ಪ್ರವಾಹದ ಒಂದು ಅಂಶವಾದ ಅಹಂಕಾರದ ಹಿಂದೆ ಅಂತಿಮ ದ್ರಷ್ಟುವಿನ ಅಥವಾ ಸಾಕ್ಷಿಯೊಬ್ಬನ ಅಸ್ತಿತ್ವವನ್ನು ಕಂಡುಹಿಡಿದು ಅವನನ್ನು 'ಸಾಕ್ಷಿ' ಎಂದು ಕರೆಯಿತು. ಈ ಸಾಕ್ಷಿಯು ಚಿಂತನೆ ಮತ್ತು ವಸ್ತುಗಳ ಪ್ರಪಂಚದಲ್ಲಿ ನಡೆಯುತ್ತಿರುವ ಈ ಪ್ರವಾಹವನ್ನೂ, ಎಲ್ಲ ಬದಲಾವಣೆಗಳನ್ನೂ ನೋಡುತ್ತಿರುವ ಕಾಲಾತೀತವಾದ ಒಂದು ಜೀವಂತ ತತ್ತ್ವ–ಚಿತ್‌ಪ್ರಭೆ. ಇದರ ಅನಾವರಣದ ಆಧ್ಯಾತ್ಮಿಕ ಮಹತ್ತ್ವವನ್ನು ಇನ್ನೂ ಸಮಗ್ರವಾಗಿ ಗ್ರಹಿಸಬೇಕಾಗಿದೆ. ಆದರೂ, ಯಥಾರ್ಥವಾದ, ಎಲ್ಲ ಜ್ಞಾನವು ಮತ್ತು ತರ್ಕ ಅಥವಾ ಶಾಸ್ತ್ರಗಳಲ್ಲಿನ ಎಲ್ಲಾ ಪ್ರಮಾಣಭೂತವಾದ ತೀರ್ಮಾನಗಳೂ ಪ್ರಮಾತೃವನ್ನು (ಜ್ಞಾತೃ) ಅಹಂಕಾರದಿಂದ ಸಾಕ್ಷಿಗೆ ರೂಪಾಂತರಗೊಳಿಸಬೇಕೆಂದು ಅಸಂದಿಗ್ಧವಾಗಿ ಸೂಚಿಸುತ್ತವೆ. ವೈಯಕ್ತಿಕ ಸಮೀಕರಣವನ್ನು ಕೈಬಿಟ್ಟು, ವಸ್ತುಗಳ ಸ್ವಂತ ದೃಷ್ಟಿಯಿಂದಲೇ ವಿಷಯದ ಅಧ್ಯಯನ ನಡೆಯಬೇಕೆಂದು ವಿಜ್ಞಾನ ಪಟ್ಟುಹಿಡಿದಾಗ, ಅದರ ಅರ್ಥ—ಸಾಕ್ಷೀಭಾವವನ್ನೇ ಅಥವಾ ಸಾಕ್ಷೀ ದೃಷ್ಟಿಯನ್ನೇ ಒತ್ತಿ ಹೇಳುವುದಾಗಿದೆ ; ಏಕೆಂದರೆ, ಅಹಂಕಾರ ಪರಿಮಿತವೂ ಸೀಮಿತವೂ ಆದ ದೃಷ್ಟಿಯು ಶಾಸ್ತ್ರೀಯವಾದ ಅಥವಾ ಬೌದ್ಧಿಕವಾದ ಅನಾಸಕ್ತಿಯನ್ನು ಅಭ್ಯಸಿಸುವುದರ ಮೂಲಕ ಅಪರಿಮಿತವೂ ವಿಶ್ವವ್ಯಾಪಕವೂ ಆಗಿರುವ ಸಾಕ್ಷಿ ದೃಷ್ಟಿಗೆ ತನ್ನ ಸ್ಥಾನವನ್ನು ಬಿಟ್ಟುಕೊಡುತ್ತದೆ. ಸಾಮಾನ್ಯ ಜೀವನದಲ್ಲಿಯೂ ಕೂಡ ನಿಷ್ಪಕ್ಷಪಾತವಾದ ತೀರ್ಮಾನ ಅತ್ಯಗತ್ಯವೆಂದು ಪಟ್ಟು ಹಿಡಿದಾಗ ನಾವು ಸಾಧಿಸಬೇಕೆಂದಿರುವುದು ಈ ಅಹಂಕಾರ ವರ್ಜನೆಯನ್ನೇ. ಪ್ರೊ. ಜೆ. ಬಿ. ಎಸ್. ಹಾಲ್ಡೇನರು ತಮ್ಮ Possible Worldsನಲ್ಲಿ ಹೀಗೆ ಹೇಳುತ್ತಾರೆ :

*ನಾನು ತರ್ಕಬದ್ಧವಾಗಿ ಮತ್ತು ವೈಜ್ಞಾನಿಕವಾಗಿ ಮಾತನಾಡುವಾಗ, ಅಥವಾ ನೈತಿಕವಾಗಿ ನಡೆದುಕೊಳ್ಳುವಾಗ ನನ್ನ ಆಲೋಚನೆ ಮತ್ತು ಕಾರ್ಯಗಳು ನನ್ನದೇ ಆದ ಸ್ವಭಾವಕ್ಕೆ ಅನುಸಾರ*

*ವಾಗಿರುವುದು ನಿಂತು, ಅದೇ ಸ್ಥಾನದಲ್ಲಿರುವ ಜಾಣನ ಅಥವಾ ನೀತಿಯುತನೊಬ್ಬನಂತಿರು ತ್ತವೆ—ಎಂಬುದನ್ನು ನಾನು ಗಮನಿಸಿದ್ದೇನೆ. ಇದನ್ನೇ ಇನ್ನಷ್ಟು ಸ್ಪಷ್ಟವಾಗಿ ಹೇಳುವುದಾದರೆ, ನಾನಾಗಲೇ ಉಪಾಧಿರಹಿತವಾದ ಅಥವಾ ನಿಯಮಾತೀತವಾದ ಮನಸ್ಸಿನೊಡನೆ ನನ್ನ ಮನಸ್ಸನ್ನು ಐಕ್ಯಗೊಳಿಸಿದ್ದೇನೆ.*

*ನಾನು ಇದನ್ನು ಮಾಡುವುದರಿಂದ ಮಾತ್ರವೇ ನಾನು ಉಳಿದುಕೊಳ್ಳುವ ಸಂಭವವೆಂಬುದು ನನ್ನ ಭಾವನೆ. ನಾನು ಹಾಗೆ ಮಾಡುತ್ತಾ ಹೋದಷ್ಟೂ, ನನ್ನ ಖಾಸಗೀ ಕಾರ್ಯಗಳಲ್ಲಿ ನನ್ನ ಆಸಕ್ತಿ ಕಡಿಮೆಯಾಗುತ್ತದೆ; ನನ್ನ ವ್ಯಕ್ತಿತ್ವ ಅಮರವಾಗಬೇಕೆಂಬ ನನ್ನ ಆಸೆ ಕಡಿಮೆಯಾಗುತ್ತದೆ.*

'ಸಾಕ್ಷಿ'ಯ ಎರಡು ಮುಖ್ಯ ಲಕ್ಷಣಗಳೆಂದರೆ ಅನಾಸಕ್ತಿ ಮತ್ತು ಸರ್ವವ್ಯಾಪಕತೆ. ವ್ಯಕ್ತಿತ್ವನಿರಸನದ ಕಾರ್ಯಗತಿಯಲ್ಲಿ ಅದು ಪರಿಪೂರ್ಣತೆಯ ತುಟ್ಟತುದಿಯ ಗುರುತು. ಹೀಗೆ ಅದು ವೈಜ್ಞಾನಿಕ ಮನೋಭಾವ ಮತ್ತು ನಿರೀಕ್ಷೆಗಳ ಈಡೇರಿಕೆಯಾಗಿದೆ. ಅದು ನೀತಿಶಾಸ್ತ್ರದ ಮತ್ತು ಬಹುಮಟ್ಟಿಗೆ ಮತಧರ್ಮದ ಸಾಧನೆಯ ಪರಿಪೂರ್ಣತೆ ಮತ್ತು ಹೆಗ್ಗುರಿಯೂ ಆಗಿದೆ ಎಂಬುದನ್ನು ಮುಂದಿನ ಪ್ರಕರಣಗಳಲ್ಲಿ ತೋರಿಸಲಾಗುವುದು.

ಅರ್ಜುನನು ಶ್ರೀಕೃಷ್ಣನನ್ನು ಕುರಿತು, ಮನುಷ್ಯನ ನಿಜವಾದ ಆತ್ಮವೆಂಬುದಕ್ಕೆ ಹುಟ್ಟಿಲ್ಲ, ಸಾವಿಲ್ಲ ; ಅದು ಶಾಶ್ವತ—ಎಂದು ಹೇಳುವಾಗ (ಗೀತೆಯ II-೧೬, XIII-೨೨, XV-೧೦, XVIII-೧೭) ಈ ಸಾಕ್ಷಿಯನ್ನೇ ಸೂಚಿಸುತ್ತಿದ್ದಾನೆ.

ಯಥಾರ್ಥವೆಂಬುದು ಎಂದೆಂದಿಗೂ ವ್ಯತ್ಯಾಸವಾಗುವಂತಹುದಲ್ಲ ಎಂಬುದು ಗೀತೆಯಲ್ಲಿ ಕಾಣಬರುವ ಭಾವನೆ. ಅಹಂಕಾರವು ವ್ಯತ್ಯಾಸಕ್ಕೆ ಒಳಗಾಗುವುದರಿಂದ ಅದು ಯಥಾರ್ಥವಲ್ಲ ; ಅದರಂತೆಯೇ ಅದರ ಎಲ್ಲ ಉದ್ದೇಶಗಳೂ. ಆದ್ದರಿಂದಲೇ ಶ್ರೀಕೃಷ್ಣನು ಉಷ್ಣ-ಶೀತ, ದುಃಖ-ಸುಖ ಇತ್ಯಾದಿ ಅನುಭವಗಳಲ್ಲಿನ ದ್ವಂದ್ವವನ್ನು ಮೀರಿ, ಶಾಶ್ವತನೂ, ಅಭಿನ್ನನೂ ಆದ ಸಾಕ್ಷಿಯಲ್ಲಿ ಒಂದಾಗಿ ಸೇರಿಹೋಗುವಂತೆ ಹೇಳುತ್ತಾನೆ.

ಸಾಕ್ಷಿಯು ಮೂಲಭೂತವಾದ ಕರ್ತೃ ಅಥವಾ ಪ್ರೇಕ್ಷಕವಾದ್ದರಿಂದ ಅದನ್ನು ಯಥಾವತ್ತಾಗಿ ಅರ್ಥಮಾಡಿಕೊಳ್ಳುವುದು ಎಷ್ಟು ಕಷ್ಟವೆಂಬುದನ್ನು ಶ್ರೀಕೃಷ್ಣನು ಬಹು ಸೊಗಸಾಗಿ ಹೀಗೆ ಹೇಳುತ್ತಾನೆ (ಗೀತೆ II-೨೯) :

ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್
ಆಶ್ಚರ್ಯವತ್ ವದತಿ ತಥೈವ ಚಾನ್ಯಃ ;
ಆಶ್ಚರ್ಯವಚ್ಚೈನಂ ಅನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನಚೈವ ಕಶ್ಚಿತ್—

*ಕೆಲವರು ಆತ್ಮನನ್ನು ಆಶ್ಚರ್ಯದಂತೆ ನೋಡುತ್ತಾರೆ; ಮತ್ತೆ ಕೆಲವರು ಅದನ್ನು ಆಶ್ಚರ್ಯದಂತೆ ಹೇಳುತ್ತಾರೆ; ಮತ್ತೂ ಕೆಲವರು ಅದನ್ನು ಆಶ್ಚರ್ಯದಂತೆ ಕೇಳುತ್ತಾರೆ; ಇನ್ನೂ ಕೆಲವರು ಕೇಳಿದರೂ ಅದನ್ನು ತಿಳಿದುಕೊಳ್ಳುವುದೇ ಇಲ್ಲ.*

## ೮. ಆತ್ಮತತ್ತ್ವ ಮತ್ತು ಅದರ ನೈತಿಕ ಅರ್ಥ

ಹೀಗೆ ಶ್ರೀಕೃಷ್ಣನು ಅರ್ಜುನನಿಗೆ ಯಥಾರ್ಥವಾದ, ಆತ್ಮನನ್ನು ಕುರಿತ ತತ್ತ್ವಜ್ಞಾನವನ್ನು (ಸಾಂಖ್ಯಯೋಗವನ್ನು) ಬೋಧಿಸುತ್ತಾನೆ. ಅನಂತರ ಆತನು ತನ್ನ ಅಧ್ಯಾತ್ಮಶಾಸ್ತ್ರದ ಧಾರ್ಮಿಕ ಪರಿಣಾಮಗಳನ್ನು ವಿವರಿಸತೊಡಗುತ್ತಾನೆ. ತರ್ಕಬದ್ಧವಾದ ಧರ್ಮವು ಅತ್ಯುನ್ನತವಾದ

ಅಧ್ಯಾತ್ಮಶಾಸ್ತ್ರದ ಅಡಿಗಲ್ಲ ಮೇಲೆ ಸ್ಥಾಪನೆಯಾಗಬೇಕೆಂಬುದನ್ನು ಶ್ರೀಕೃಷ್ಣನು ಬಹು ಹಿಂದೆಯೇ ಅರ್ಥಮಾಡಿಕೊಂಡಿದ್ದನು. ಮಾನವ ಜನಾಂಗವು ಧಾರ್ಮಿಕ ಶಿಕ್ಷಣಕ್ಕೆ ಒಂದು ಅಧಿಕಾರ ಮುದ್ರೆಯನ್ನು ಹುಡುಕುತ್ತಾ ಇದೆ. ದೇವದೂತರೂ ತತ್ತ್ವಶಾಸ್ತ್ರಜ್ಞರೂ ಧಾರ್ಮಿಕ ಜೀವನದ ವಿಚಾರವಾಗಿ ಬೇರೆ ಬೇರೆ ಸೂತ್ರಗಳನ್ನು ನೀಡಿದ್ದಾರೆ. ನಿಸ್ವಾರ್ಥತೆಯು ಎಲ್ಲರಿಗೂ ಅತ್ಯಗತ್ಯವಾದ ಶ್ರೇಷ್ಠ ಸದ್ಗುಣವೆಂದು ಎಲ್ಲ ಮತಧರ್ಮಗಳೂ ತತ್ತ್ವಶಾಸ್ತ್ರಗಳೂ ಏಕಕಂಠದಿಂದ ಬೋಧಿಸುತ್ತವೆ. ಆದರೆ, ಮತಧರ್ಮಗಳು ಅದರ ವಿವರಣೆಯನ್ನು ದೈವಾವೇಶಗೊಂಡ ಸಂತನಲ್ಲಿಯೋ ಅಥವಾ ಅಪೌರುಷೇಯವಾದ ಪವಿತ್ರ ಗ್ರಂಥಗಳಲ್ಲಿಯೋ ಅರಸ ಹೊರಟರೆ ಕ್ಯಾಂಟನಂತಹ ತತ್ತ್ವಶಾಸ್ತ್ರವೇತ್ತರು ಅದನ್ನು ಅಸಂದಿಗ್ಧವಾದ ವಿಧಿರೂಪದಲ್ಲಿ ಕಾಣುತ್ತಾರೆ. ಇವೆರಡೂ ಅತೃಪ್ತಿಕರವಾಗಿವೆ. ಕ್ಯಾಂಟನ ಶುದ್ಧ ತರ್ಕ ಮತ್ತು ಅದರ ಅಧ್ಯಾತ್ಮಶಾಸ್ತ್ರದಿಂದ ಧರ್ಮಕ್ಕೆ ಯಾವ ತೀರ್ಮಾನವೂ ಸಿಕ್ಕುವುದಿಲ್ಲ. ಆತನು ಅಂತರ್ಬೋಧೆ ಮತ್ತು ಪ್ರಾಯೋಗಿಕ ತರ್ಕಗಳನ್ನು ಅವಲಂಬಿಸಿ ಎಲ್ಲ ಧಾರ್ಮಿಕ ಕಾರ್ಯಗಳಿಗೂ ಅಸಂದಿಗ್ಧ ವಿಧಿರೂಪವೇ ಮೂಲವೆಂದು ಕಂಡುಹಿಡಿದ. ಆದರೆ ತರ್ಕಬದ್ಧವಾದ ಧರ್ಮಾನ್ವೇಷಣೆ ಇನ್ನೂ ಆಗಬೇಕಾಗಿದೆ. ಕ್ಯಾಂಟನ ಅಸಂದಿಗ್ಧ ವಿಧಿರೂಪದ ಯಥಾರ್ಥ ಪ್ರಯೋಗವು ದಿವ್ಯದರ್ಶನವನ್ನು ಅವಲಂಬಿಸಿದ ಧರ್ಮಕ್ಕಿಂತ ಕೇಡಾಗಿಲ್ಲವಾದರೂ ಶ್ರೇಷ್ಠ ವಾಗಿಯೂ ಇಲ್ಲ. ವೇದಾಂತ ಮತ್ತು ಭಗವದ್ಗೀತೆಗಳಲ್ಲಿ ನಾವು ಕಾಣುವ ಅಧ್ಯಾತ್ಮಶಾಸ್ತ್ರದಲ್ಲಿ ಎಲ್ಲ ಧರ್ಮನೀತಿಗಳೂ ತರ್ಕಬದ್ಧವಾಗಿರುವುದನ್ನು ನಾವು ಕಾಣುತ್ತೇವೆ.

ವ್ಯಕ್ತಿ-ಸಮಾಜ, ಸ್ವಾರ್ಥ-ಪರಾರ್ಥ, ಈ ದ್ವಂದ್ವಗಳ ಆಶೋತ್ತರಗಳಲ್ಲಿ ಸ್ಪರ್ಧೆ ಹುಟ್ಟಿ ಪರಸ್ಪರ ತಿಕ್ಕಾಟ ಬಂದಾಗ ಅದನ್ನು ಧರ್ಮ ಪರಿಹರಿಸಬೇಕಾಗುತ್ತದೆ. ಧರ್ಮವು ಸ್ವಾರ್ಥವನ್ನು ಅಥವಾ ಅಹಂಕಾರವನ್ನು ಹತ್ತಿಕ್ಕುವುದು ನೈತಿಕ ಜೀವನದ ಸಾರ—ಎಂದು ಬೋಧಿಸುತ್ತದೆ. ಆಗ ಅದು ನಮಗೆ ಅವಾಸ್ತವವಾದುದನ್ನು ಮೀರಿ ಹೋಗಿ, ಯಥಾರ್ಥವಾದುದರಲ್ಲಿ ನಮ್ಮನ್ನು ಕಂಡುಕೊಳ್ಳಬೇಕೆಂದು ಬೋಧಿಸುತ್ತದೆ ಮಾತ್ರ. 'ನಾನೇಕೆ ನಿಸ್ವಾರ್ಥನಾಗಿರಬೇಕು?' ಎಂದು ಇಂದಿನ ತಾರ್ಕಿಕ ಪ್ರಶ್ನಿಸಿ, ಅದಕ್ಕೆ ತರ್ಕಬದ್ಧವಾದ ಉತ್ತರವನ್ನು ನಿರೀಕ್ಷಿಸುತ್ತಾನೆ. ಬುದ್ಧದೇವನು ಆ ಪ್ರಶ್ನೆಗೆ 'ಸ್ವಾರ್ಥ ಒಂದು ರೋಗ, ಅದೊಂದು ಮಾಯೆ' ಎಂದು ಉತ್ತರ ನೀಡಿದ್ದಾನೆ. ಸತ್ಯ ಸಾಕ್ಷಾತ್ಕಾರವಾಗಬೇಕಾದರೆ ಸಾಕ್ಷಿಗೆ ಇರಬೇಕಾದ ಅನಾಸಕ್ತ ದೃಷ್ಟಿ ಸಿದ್ಧಿಸಿರಬೇಕು. ಆದ್ದರಿಂದ ಧಾರ್ಮಿಕ ಶಿಕ್ಷಣದಲ್ಲಿ ವೈಜ್ಞಾನಿಕ ಮತ್ತು ಬೌದ್ಧಿಕ ಶಿಕ್ಷಣವನ್ನು ಸೇರಿಸಲೇಬೇಕು ; ಆಗ ಅದರ ಸಂಪೂರ್ಣ ಸಿದ್ಧಿಯಾಗುತ್ತದೆ. ಸತ್ಯಾನ್ವೇಷಣೆಗೆ ಅತ್ಯಗತ್ಯವೆಂದು ವಿಜ್ಞಾನವು ತಿಳಿಸುವ ಬೌದ್ಧಿಕ ಶಿಕ್ಷಣವನ್ನು ವ್ಯಕ್ತಿಯ ಜೀವಿತದ ಪ್ರತಿಯೊಂದು ಕ್ಷಣವನ್ನೂ ಒಳಗೊಂಡಿರುವಂತೆ ಇಡೀ ಜೀವನಕ್ಕೆಲ್ಲಾ ಅಳವಡಿಸಬೇಕು. ವೇದಾಂತದಲ್ಲಿಯೂ ಬೌದ್ಧಧರ್ಮದಲ್ಲಿಯೂ ಕಾಣಬರುವ ಯೋಗವೆಂಬುದು ಇದೇ. ಜೀವನವೆಂಬುದು ಕೊನೆ ಇಲ್ಲದ ಕಾರ್ಯಕಲಾಪಗಳಿಂದ ಕೂಡಿ, ವಿಲಕ್ಷಣವಾಗಿರುವ ಒಂದು ನಿರಂತರ ಹೋರಾಟ. ಜೀವನವನ್ನೂ ಮತ್ತು ಅದರ ಕಾರ್ಯಕಲಾಪಗಳನ್ನೂ ಯಥಾರ್ಥಜ್ಞಾನರೂಪದ ಫಲವನ್ನು ಕೊಡುವಂತೆ ಕ್ರಮಬದ್ಧಗೊಳಿಸುವುದು ಹೇಗೆ—ಎಂಬುದು ದೊಡ್ಡ ಸಮಸ್ಯೆ ; ಮತ್ತು ಇಡೀ ಮಾನವ ಜಾತಿಗೆ ಇರುವ ಅನಾಮಧೇಯವಾದ ಅನ್ವೇಷಣೆ. ವ್ಯಕ್ತಿ ಮತ್ತು ಸಮಾಜಗಳೆರಡಕ್ಕೂ ಶ್ರೇಯಸ್ಸಾಗುವಂತೆ ಕರ್ಮವನ್ನು ಅಳವಡಿಸುವುದು ಹೇಗೆ ? ಈ ನಿತ್ಯ ಸಮಸ್ಯೆಗೆ ಶ್ರೀಕೃಷ್ಣನು ನೀಡುವ ಪರಿಹಾರವು ಚಿಂತನೆಯ ಇತಿಹಾಸದಲ್ಲಿಯೇ ಏಕಕಾಲದಲ್ಲಿ ಮೂಲಭೂತವೂ ಐಕ್ಯಕವೂ ಆಗಿದೆ—ನಾನು ಹೇಳುತ್ತಿರುವುದು ಗೀತೋಪದೇಶದ ಕರ್ಮಯೋಗವನ್ನು.

ಅಶಿಕ್ಷಿತನಾದ ಮನುಷ್ಯನು ಸಮಾಲೋಚನೆಗೂ ಮುನ್ನ ತನ್ನ ಅಹಂಕಾರ ಅಥವಾ ಸ್ವಾರ್ಥವನ್ನೂ ಯಥಾರ್ಥವಾದುದೆಂದೇ ಭಾವಿಸಿ, ಎಲ್ಲ ಕಾರ್ಯಗಳನ್ನೂ ಘಟನೆಗಳನ್ನೂ ಆ ದೃಷ್ಟಿಯಿಂದಲೇ

ತೀರ್ಮಾನಿಸುತ್ತಾನೆ. ಈ ಘಟ್ಟದಲ್ಲಿ ಮನುಷ್ಯನು ಬಗೆಬಗೆಯ ಉದ್ದೇಶಗಳನ್ನಿಟ್ಟುಕೊಂಡು ಕರ್ಮವನ್ನು ಆಚರಿಸುತ್ತಾನೆ. ಅಂತಹ ಉದ್ದೇಶಗಳಲ್ಲಿ ಒಂದು, ಶ್ರೀಕೃಷ್ಣನ ಕಾಲಕ್ಕೆ, ಸ್ವರ್ಗಸಾಧನೆಯಾಗಿತ್ತು. ವೇದಯುಗದಲ್ಲಿ ಅದು ಒಂದು ಮತದ ಸ್ಥಾನಕ್ಕೆ ಏರಿತ್ತು. ಆದರೆ ಉಪನಿಷತ್ತುಗಳಲ್ಲಿ ಬರುವ ತಾತ್ತ್ವಿಕ ಪರಿಶೋಧನೆಯು, ಅಹಂಕಾರವು ಅಶಾಶ್ವತವೆಂದೂ ಅವಾಸ್ತವಿಕವೆಂದೂ ತೋರಿಸಿ, ಈ ತತ್ತ್ವವನ್ನು ಸಮೂಲವಾಗಿ ನಾಶಮಾಡಿತು. ಉಪನಿಷತ್ತುಗಳೂ ಬುದ್ಧನೂ ಆಶಾಪೂರಿತ ವಸ್ತುಗಳೆಲ್ಲವೂ—ಅವು ಲೌಕಿಕವಾಗಿರಲಿ, ಅಲೌಕಿಕವಾಗಿರಲಿ—ಅವಾಸ್ತವವೆಂದು ಬೋಧಿಸಿದರು. ಯಜ್ಞಗಳೂ ಮತೀಯ ಕರ್ಮಗಳೂ ಧಾರ್ಮಿಕ ಜೀವನದ ತಿರುಳಲ್ಲವೆಂದು ಶ್ರೀಕೃಷ್ಣ, ಬುದ್ಧರು ತೋರಿಸಿಕೊಟ್ಟರು. ಬಾಹ್ಯವಾದ ಉತ್ತಮ ಲೋಕಪ್ರಾಪ್ತಿಯಿಂದ ನೈತಿಕ ವಿಕಾಸವನ್ನು ಅಳೆಯಬಾರದು, ಅಹಂಕಾರ ನಿರಸನವಾಗುವಂತಹ ಅಂತರಂಗ ಪರಿಶೋಧನೆಯಿಂದ ಅಳೆಯಬೇಕು. ಜೀವನ ಮಾರ್ಗದರ್ಶನಕ್ಕೆ ಮತಧರ್ಮಕ್ಕೆ ಬದಲಾಗಿ ತತ್ತ್ವಶಾಸ್ತ್ರವನ್ನು ಆಶ್ರಯಿಸುವಂತೆ ಗೀತೆಯು ತನ್ನ ಕರ್ಮಯೋಗದ ಮೂಲಕ ನಿರೂಪಣೆಯನ್ನು ನೀಡಿತು (ಗೀತೆ II-೨-೩೯-೪೦) :

ಏಷಾ ತೇऽಭಿಹಿತಾ ಸಾಂಖ್ಯೆ ಬುದ್ಧಿರ್ಯೋಗೇ ತ್ವಿಮಾಂ ಶೃಣು ;
ಬುದ್ಧ್ಯಾಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ—

*ಹೇ ಪಾರ್ಥ ! ನಿನಗೆ ಆತ್ಮಸಾಕ್ಷಾತ್ಕಾರದ (ಸಾಂಖ್ಯ) ಜ್ಞಾನವನ್ನು ತಿಳಿಸಿದುದಾಗಿದೆ. ಈಗ ಯೋಗಜ್ಞಾನದ ವಿಷಯವನ್ನು ಕೇಳು. ಈ ಜ್ಞಾನದಿಂದ ಕೂಡಿದವನಾದರೆ ನೀನು ಕರ್ಮಬಂಧನವನ್ನು ತ್ಯಾಗ ಮಾಡುವೆ.*

ನೇಹಾಭಿಕ್ರಮನಾಶೋऽಸ್ತಿ ಪ್ರತ್ಯವಾಯೋ ನ ವಿದ್ಯತೇ ;
ಸ್ವಲ್ಪಮಪ್ಯಸ್ಯಧರ್ಮಸ್ಯ ತ್ರಾಯತೇ ಮಹತೋ ಭಯಾತ್—

*ಇದರಲ್ಲಿ (ಯೋಗ) ಪ್ರಾರಂಭಿಸಿದ ಕಾರ್ಯ ನಾಶವಾಗುವುದಿಲ್ಲ. ಪ್ರಾರಂಭಿಸಿ ಬಿಟ್ಟುದಕ್ಕಾಗಿ ಯಾವ ದೋಷವೂ ಅಂಟುವುದಿಲ್ಲ. ಈ ಧರ್ಮದ ಸ್ವಲ್ಪ ಅನುಷ್ಠಾನವೂ ಕೂಡ ಮಹಾ ಭಯದಿಂದ ಕಾಪಾಡುತ್ತದೆ.*

ಯಥಾರ್ಥವಾದ ಆತ್ಮ ಅಥವಾ ಸಾಕ್ಷಿಯ ಎರಡು ಲಕ್ಷಣಗಳನ್ನು ಕುರಿತು ಹಿಂದಿನ ಪ್ಯಾರಾದಲ್ಲಿಯೇ ನಾವು ಸಮಾಲೋಚನೆ ಮಾಡಿದ್ದೇವೆ—ಅವು (೧) ಅನಾಸಕ್ತಿ (೨) ಪರಿಮಿತವಾದ ಅಥವಾ ಎಲ್ಲೆಕಟ್ಟುಗಳಿಂದ ಕೂಡಿದ ಸಂಕುಚಿತ ದೃಷ್ಟಿಯಿಂದ ಸ್ವತಂತ್ರವಾಗಿರುವುದು. ವೈಜ್ಞಾನಿಕ ಪರಿಶೀಲನೆಯಿಂದ ಈ ಉದಾತ್ತ ದೃಷ್ಟಿಯನ್ನು ಪಡೆಯಲು ಹೇಗೆ ಸ್ವಲ್ಪಮಟ್ಟಿನ ಸಹಾಯವಾಗುತ್ತದೆ ಎಂಬುದನ್ನು ಈ ಹಿಂದೆಯೇ ನಾವು ನೋಡಿದ್ದೇವೆ. ಇದು ಸಾಂಗವಾಗಿ ನೆರವೇರುವುದರಿಂದ ಧಾರ್ಮಿಕ ಪ್ರಯತ್ನದಲ್ಲಿಯೂ ಅದರ ಅಭಿಪ್ರಾಯ ಸಮಗ್ರತೆಗಳನ್ನು ಹೇಗೆ ಪಡೆಯಲು ಸಾಧ್ಯ ಎಂಬುದನ್ನು ಈಗ ನಾವು ಪರಿಶೀಲಿಸಹೊರಡೋಣ. ಯಥಾರ್ಥವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕಾದರೆ, ಆತ್ಮದ ಆಭಾಸ ಅಥವಾ ಅಹಂಕಾರವನ್ನು ಗೆಲ್ಲುವುದಕ್ಕೆ ಒಮ್ಮುಖವಾದ ಆಜೀವ ಪ್ರಯತ್ನ ಅನಿವಾರ್ಯ.

### ೯. ಕರ್ತವ್ಯಪಾಲನೆ : ನೈತಿಕ ಶಿಕ್ಷಣದ ಮೊದಲ ಮಜಲು

ಇದನ್ನು ಸಾಧಿಸುವುದಕ್ಕಾಗಿ ಗೀತೆಯು ದ್ವಿಮುಖವಾದ ಸಲಹೆಯನ್ನು ನೀಡುತ್ತದೆ. ಮೊದಲನೆಯದಾಗಿ, ಹಿತವಾದುದಾಗಲೀ ಅಹಿತವಾದುದಾಗಲೀ, ಮಾಡುವ ಕೆಲಸಗಳನ್ನೆಲ್ಲ ಕರ್ತವ್ಯಭಾವನೆಯಿಂದ ಮಾಡಬೇಕು. ಇದು ಏನು ತೋರಿಸುತ್ತದೆ ? ಕೆಲಸದಲ್ಲಿ ಆಪಾತತಃ ಮೇಲು ಕೀಳು ಎಂಬುದೇನೂ

ಇಲ್ಲ. ಆದರೆ ಅಹಂಕಾರವು ತನ್ನ ಲಹರಿಗೆ ತಕ್ಕಂತೆ ಎಲ್ಲ ಕೆಲಸಗಳಿಗೂ ಮೌಲ್ಯಮಾಪನದ ಮುದ್ರೆಯನ್ನು ಒತ್ತುತ್ತದೆ. ಇಂತಹ ಸಂದರ್ಭದಲ್ಲಿಯೇ ಮಾನವನು ಸುಖಕರವಾದ ಜೀವನವನ್ನೂ, ಸುಖಕರವಾದ ಮತಧರ್ಮವನ್ನೂ ಹುಡುಕಿಕೊಂಡು ತಡಕಾಡುವುದು. ಈ ಅಹಂಕಾರವು ಬಾಳಿಗೂ ಕರ್ಮಕ್ಕೂ ಅಂಟಿರುವ ಅಸಂಬದ್ಧ ಮೌಲ್ಯಗಳನ್ನು ತಿರಸ್ಕರಿಸುವಂತೆ ಕರ್ತವ್ಯಜ್ಞಾನವು ನಮಗೆ ಎಚ್ಚರಿಕೆಯನ್ನು ನೀಡುತ್ತದೆ. ಅಹಂಕಾರ ಮತ್ತು ಅದರ ಮೌಲ್ಯಗಳನ್ನು ತಿರಸ್ಕರಿಸುವುದೂ ಕೂಡ ಅಹಂಕಾರದ ಒಂದು ರೂಪಾಂತರವೇ. ಇದು ಸಾಕ್ಷಿಯ ಎರಡನೆಯ ಗುಣವಾದ 'ಸಂಕುಚಿತ ದೃಷ್ಟಿಯಿಂದ ಬಿಡುಗಡೆ'ಯನ್ನು ಪಡೆಯಲು ಸಹಾಯಕವಾಗುತ್ತದೆ. (ವಿಶ್ವವ್ಯಾಪಕವಾದ ದೃಷ್ಟಿಯನ್ನು ಪಡೆಯುವುದೆಂದರೂ ಇದೇ ಅರ್ಥ) ಎರಡನೆಯದಾಗಿ, ನಮ್ಮ ಕರ್ಮಗಳಿಂದ ಬರುವ ಫಲದತ್ತ ಗಮನವಿಲ್ಲದೆ ಹೋದಾಗ ಅಥವಾ ಅವುಗಳನ್ನು ಅಂಟಿಸಿಕೊಳ್ಳದೆ ಹೋದಾಗ ಸಾಕ್ಷಿಯ ಮೊದಲನೆ ಗುಣವಾದ ಅನಾಸಕ್ತಿಯನ್ನು ಪಡೆಯುತ್ತೇವೆ. ನಾನಾಬಗೆಯ ಸ್ವಾರ್ಥೋದ್ದೇಶಗಳಿಂದ ಕರ್ಮ ಮಾಡುವವರನ್ನು ಅಲ್ಪಜ್ಞರೆಂದು ಗೀತೆಯು ಖಂಡಿಸುತ್ತದೆ ; ಕೃಪಣಾಫಲಹೇತವಃ ಎಂದು ಹೇಳುತ್ತದೆ. ಕರ್ಮಯೋಗವನ್ನು ಕಾರ್ಯದಲ್ಲಿ ಜಾಣ್ಮೆ—ಯೋಗಃ ಕರ್ಮಸು ಕೌಶಲಮ್—ಎಂದು ಸೂತ್ರರೂಪವಾಗಿ ಹೇಳುತ್ತದೆ. ಈ ಮನೋಭಾವವನ್ನು ಬಾಯ್ತುಂಬ ಹೊಗಳುತ್ತಾ ಹೀಗೆ ಹೇಳುತ್ತದೆ (II-೫೧) :

ಕರ್ಮಜಂ ಬುದ್ಧಿಯುಕ್ತಾಹಿ ಫಲಂ ತ್ಯಕ್ತ್ವಾಮನೀಷಿಣಃ ;
ಜನ್ಮಬಂಧ ವಿನಿರ್ಮುಕ್ತಾಃ ಪದಂಗಚ್ಛಂತ್ಯನಾಮಯಮ್—

*ಬುದ್ಧಿಯುಕ್ತರಾದ ಜ್ಞಾನಿಗಳು ಕರ್ಮದಿಂದ ಹುಟ್ಟಿದ ಫಲವನ್ನು ಬಿಟ್ಟು, ಜನ್ಮವೆಂಬ ಬಂಧನದಿಂದ ಬಿಡುಗಡೆಯನ್ನು ಹೊಂದಿ, ಕ್ಲೇಶಶೂನ್ಯವಾದ ಪರಮಪದವನ್ನು ಹೊಂದುತ್ತಾರೆ.*

## ೧೧. ಕರ್ತವ್ಯಾತೀತ ಮನುಷ್ಯನ ಬದುಕಿನಲ್ಲಿ ಸಹಜ ಸ್ಫೂರ್ತಿ

ಹೀಗೆ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣದಲ್ಲಿ ಕರ್ತವ್ಯಕರ್ಮವೆಂಬುದು ಮೊದಲ ಮಜಲು. ಜೀವನದಲ್ಲಿನ ಇನ್ನೂ ಉತ್ತಮವಾದ ಮಜಲೊಂದನ್ನು ಗೀತೆ ಬೋಧಿಸುತ್ತದೆ ; ಇದಕ್ಕೆ ಎಲ್ಲ ಮತಧರ್ಮಗಳ ಋಷಿಗಳು ಮತ್ತು ಸಂತರಲ್ಲಿಯ ಸಾಕ್ಷಿಗಳು ಇದ್ದಾರೆ. ಆದರೆ, ಭಾರತವನ್ನು ಬಿಟ್ಟು ಹೊರಗಿನ ಯಾವ ತತ್ತ್ವಶಾಸ್ತ್ರ ಸಮುದಾಯದಲ್ಲಿಯೂ ಇದನ್ನು ಶ್ರದ್ಧಾ ಪೂರ್ವಕವಾಗಿ ಪ್ರತಿಪಾದಿಸಿಲ್ಲ. ಕರ್ತವ್ಯಕರ್ಮವೆನ್ನುವುದು ಒಂದು ಕಠಿಣವಾದ ಪಾಠಶಾಲೆ. ಮಾನವನು ಅಲ್ಲಿ ತನ್ನ ಅಹಂಕಾರವನ್ನು ಶೂಲಕ್ಕೇರಿಸುವುದನ್ನು ಕಲಿಯುತ್ತಾನೆ. ಕೊನೆಯಿಲ್ಲದ ಹೋರಾಟ ಮತ್ತು ಉದ್ವೇಗಗಳು ಈ ಮಜಲಿನ ಲಕ್ಷಣ. ಆದರೆ, ಕೇಂದ್ರಬಿಂದುವನ್ನು ಅಹಂಕಾರ ಬಿಂದುವಿನಿಂದ ಸಾಕ್ಷಿಗೆ ಬದಲಾಯಿಸುವುದು ಒಂದು ಪಕ್ಷಕ್ಕೆ ಸಾಧ್ಯವಾಗುವುದಾದರೆ ಆಗ ಕರ್ತವ್ಯ ಕರ್ಮದ ಗುರಿ ಸಿದ್ಧಿಯನ್ನು ಮುಟ್ಟುತ್ತದೆ. ಹಾಗಾದಾಗ ವ್ಯಕ್ತಿಯು ಅತ್ಯುನ್ನತ ಸ್ಥಾನದಲ್ಲಿ ನಿಂತು ಕರ್ಮಪರನಾಗುತ್ತಾನೆ. ಬಂಧನಗಳನ್ನೆಲ್ಲಾ ಹರಿದುಹಾಕಿ ಸ್ವತಂತ್ರವಾದ ವಾತಾವರಣದಲ್ಲಿ ಹಾರಾಡಬೇಕೆಂಬ ಪ್ರೇರಣೆಯು ಮಾನವನನ್ನು ಉನ್ನತ ಸ್ಥಾನಕ್ಕೆ ಏರಿಸಿ, ಅವನು ಕರ್ತವ್ಯವೆಂಬುದರ ಕಲ್ಪನೆಯನ್ನೇ ಟೀಕಿಸಿ ಮೌಲ್ಯಮಾಪನ ಮಾಡುವಂತೆ ಬಲವಂತಪಡಿಸುತ್ತದೆ. ಕರ್ತವ್ಯಕರ್ಮ ವೆಂಬುದು ಭಾವೋದ್ರೇಕ ದುರಾಸೆಗಳ ಕ್ಷೇತ್ರಕ್ಕೆ ಹೋಲಿಸಿದಾಗ ಅದು ಉನ್ನತವಾದುದೇನೋ ನಿಜ. ನೀತಿಪರನಾದ ಮನುಷ್ಯ ಸಸ್ಯಪ್ರಾಯನಾದ ಮನುಷ್ಯನಿಗಿಂತಲೂ ಶ್ರೇಷ್ಠನೇ. ಆದರೆ ಅದರಲ್ಲಿ ಒಂದು ಬಲಾತ್ಕಾರದ ಅಂಶವಿದೆ. ನಾವು ಅದನ್ನು ಅಂತರಂಗದ ಬಲಾತ್ಕಾರ (ಅಸಂದಿಗ್ಧ ವಿಧಿರೂಪ - Categorical Imperative) ಎಂದೋ, ಬಹಿರಂಗದ ಬಲಾತ್ಕಾರ (ಶಾಸ್ತ್ರಗ್ರಂಥ ಅಥವಾ

ಅಧಿಕಾರವಾಣಿ ಮತ್ತು ನಿಷೇಧಾಜ್ಞೆ) ಎಂದೋ ಕರೆಯಬಹುದಾದರೂ, ಅದು ಬಲವಂತವೆಂಬುದಂತೂ ನಿಶ್ಚಯ. ಆದ್ದರಿಂದ ಅದನ್ನು ಮೀರಿ ಮುಂದುವರಿಯಲೇಬೇಕು. ಸ್ವಾತಂತ್ರ್ಯದ ಕರೆ ತ್ವರೆಗೊಳಿಸುತ್ತಿದೆ, ಬಂಧನಗಳನ್ನೆಲ್ಲಾ ಹರಿದು ಹಾಕಲೇ ಬೇಕು. ಕರ್ತವ್ಯಪರನಾದ ಮನುಷ್ಯ ಹೆಚ್ಚೆಂದರೆ ಒಬ್ಬ ಶಿಸ್ತಿನ ಸೇವಕ. ಆದ್ದರಿಂದ ಮಾನವನು ಈ ಕರ್ತವ್ಯ ಸ್ಥಾನಕ್ಕಿಂತಲೂ ಮೇಲಕ್ಕೇರಿ, ಸ್ವತಂತ್ರವಾಗಿ ಕರ್ಮಪರನಾಗಬೇಕೆಂದು ಗೀತೆಯು ಉಪದೇಶಿಸುತ್ತದೆ. ಶಾಸ್ತ್ರಗ್ರಂಥ ಅಥವಾ ಗುರುವಿನ ಅಪ್ಪಣೆಯಂತೆ ಮತ್ತೊಬ್ಬನನ್ನು ಪ್ರೀತಿಸುವುದೇನೋ ಒಳ್ಳೆಯದೇ ; ಅಂತರಂಗ ಪ್ರೇರಣೆಯ ಬಲವಂತಕ್ಕೊಳಗಾಗಿ ಹಾಗೆ ಮಾಡುವುದು ಅದಕ್ಕಿಂತಲೂ ಮೇಲು ; ಆದರೆ ಪ್ರೇಮವೆಂಬುದು ಅಖಂಡವ್ಯಕ್ತಿತ್ವದ ಸ್ವಾಭಾವಿಕ ಅಭಿವ್ಯಕ್ತಿಯಾದರೆ ಅದು ಅತ್ಯುತ್ತಮ. ಮೊದಲನೆಯ ಮತ್ತು ಎರಡನೆಯ ಘಟ್ಟಗಳಲ್ಲಿ ತಪ್ಪಾಗುವ ಮತ್ತು ಸ್ವಲ್ಪಮಟ್ಟಿಗೆ ಸ್ವಾರ್ಥ ಬೆರೆತಿರುವ ಸಂಭವವುಂಟು. ಆದರೆ, ಅಹಂಕಾರವನ್ನು ದಾಟಿ ಸ್ವಪ್ರೇಮವನ್ನು ಕಿತ್ತುಹಾಕಿದಾಗ ಜೀವನ ಮತ್ತು ಪ್ರೇಮಗಳು ಶಾಶ್ವತವಾದ ಮತ್ತು ಶುದ್ಧವಾದ ಸ್ವರೂಪವನ್ನು ಪಡೆಯುತ್ತವೆ. ಜೀವನವು ಸ್ವಾಭಾವಿಕವಾಗುತ್ತದೆ. ಪ್ರೇಮವು ಅನೈಚ್ಛಿಕವಾದುದಾಗುತ್ತದೆ. ಗುಲಾಬಿಯ ಹೂ ತನ್ನ ಸುವಾಸನೆಯನ್ನು ಹೇಗೆ ಹೊರಹೊಮ್ಮದಂತೆ ನಿಲ್ಲಿಸಲಾರದೋ ಹಾಗೆಯೇ ಅಂತಹ ಮನುಷ್ಯ ಪ್ರೇಮಿಸದೆ ಇರಲಾರ. ಏಕೆಂದರೆ ಅವನು ನಿಂತಿರುವುದು ಅಪ್ಪಣೆ ಅಥವಾ ಕಾನೂನುಗಳ ಮಟ್ಟದಲ್ಲಲ್ಲ. ಸ್ವಭಾವ ಮತ್ತು ಅಭಿವ್ಯಕ್ತಿಯ ಮಟ್ಟದಲ್ಲಿ. ಕರ್ತವ್ಯಾತೀತವಾದ ಈ ನಿಲುವನ್ನು ವರ್ಣಿಸುವುದಕ್ಕಾಗಿ ಗೀತೆಯು ಅನೇಕ ಶ್ಲೋಕಗಳನ್ನು ಬಳಸಿದೆ. ಬುದ್ಧರೂ, ಕ್ರಿಸ್ತರೂ ಬಾಳಿದುದು ಈ ಎತ್ತರದಲ್ಲಿಯೇ. (ಗೀತೆ II-೭೧, III-೧೭, IV-೧೮, VI-೧೮, XII-೧೩, ೧೪, ೧೮, ೧೯).

ಮಾನವನು ಸಾಕ್ಷಿಪ್ರಜ್ಞೆಯನ್ನು ಪಡೆದಾಗ ಅವನಿಗೆ ಜೀವನವು ಸಂಪೂರ್ಣ ಹೊಸರೂಪದಿಂದ ಕಾಣಬರುತ್ತದೆ. ಜೀವನಕ್ಕೂ ಅದರ ಕರ್ಮಗಳಿಗೂ ಅಹಂಕಾರವು ನೀಡಿದ್ದ ತಪ್ಪು ಮೌಲ್ಯಗಳೆಲ್ಲಾ ನಶಿಸಿ ಹೋಗಿ, ಅವು ತಮ್ಮ ನೈಜ ರೂಪದಿಂದ ಕಾಣಿಸಿಕೊಳ್ಳುತ್ತವೆ. ಅಂತಹ ಒಂದು ಜೀವನವು ಧರ್ಮಾದರ್ಶದ ಒಂದು ಶಿಖರವಾಗುತ್ತದೆ. ನಮ್ಮಲ್ಲಿ ಪ್ರತಿಯೊಬ್ಬರಿಗೂ ಬಾಳೆಂಬುದು ಹೋರಾಟ-ಸಂತೋಷ, ದ್ವೇಷ-ಸ್ಪರ್ಧೆ ಮತ್ತು ದುಃಖ-ಸಂಕಟಗಳು ಮಾತ್ರ. ಧರ್ಮಾದರ್ಶದ ಶಿಖರದಂತಿರುವ ಮನುಷ್ಯ ಇವುಗಳನ್ನೆಲ್ಲಾ ಹಿಂದೆಯೇ ಕಳೆದು ಬಂದವನಾಗಿ, ಜೀವನವೆಂಬುದನ್ನು ಭವ್ಯವಾದ ಒಂದು ಸ್ವರಮೇಳವಾಗಿ ಕಾಣಲು ಕಲಿಯುತ್ತಾನೆ ; ಎಲ್ಲವೂ ಉಳಿದೆಲ್ಲದರೊಡನೆ ಮತ್ತು ತನ್ನೊಡನೆಯೂ ಹೊಂದಿಕೊಂಡಿರುವುದನ್ನು ಕಾಣುತ್ತಾನೆ. ಆಗ ಅವನ ತುಟಿಗಳಿಂದ ಪ್ರೇಮಮಯವಾದ ಮಾತುಗಳು ಮಾತ್ರವೇ ಬರುತ್ತವೆ, ಅವನ ಯೋಚನೆಗಳೆಲ್ಲಾ ಲೋಕದ ಒಳಿತನ್ನೇ ಬಯಸುತ್ತವೆ, ಅವನ ಕಾರ್ಯಗಳೆಲ್ಲ ಇಡೀ ಮಾನವ ಜನಾಂಗದ ಕ್ಷೇಮಚಿಂತನೆಯನ್ನೇ ಮಾಡುತ್ತವೆ. ಗೀತೆಯ ಮಾತಿನಲ್ಲಿ ಹೇಳುವುದಾದರೆ ಅಂತಹ ಜನರು 'ಸರ್ವಭೂತಹಿತೆ ರತಾಃ' (ಎಲ್ಲ ಪ್ರಾಣಿಗಳ ಹಿತದಲ್ಲಿಯೇ ಸದಾ ಮಗ್ನರಾಗಿರುತ್ತಾರೆ) ಅವರ ಕಾರ್ಯ ಮತ್ತು ಚಿಂತನೆಗಳಿಗೆ ಒಂದೇ ಗಮನ-'ಲೋಕ ಸಂಗ್ರಹಾರ್ಥಮ್' (ಮಾನವ ಜನಾಂಗದ ಕ್ಷೇಮಚಿಂತನೆ). ಅಂತಹ ಮನುಷ್ಯನನ್ನು ಕುರಿತು ಜೀಸಸ್‌ನು 'ಅವರು ಮಣ್ಣಿನಲ್ಲಿರುವ ಉಪ್ಪು' ಎಂದು ಸತ್ಯವಾದುದನ್ನೇ ಹೇಳಿದ್ದಾನೆ.

## ೧೧. ಶ್ರೀಕೃಷ್ಣನ ಆಧ್ಯಾತ್ಮಿಕ ಸಮನ್ವಯ

ಈ ತತ್ತ್ವಜ್ಞಾನದಲ್ಲಿ ಮತ್ತು ಈ ಧರ್ಮಬೋಧೆಯಲ್ಲಿ ಜೀವನದ ಎಲ್ಲ ಕಾರ್ಯಕಲಾಪಗಳಿಗೂ ಅರ್ಥ ಮತ್ತು ವಿವರಣೆಗಳಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಗೀತಾ ಬೋಧನೆಯ ಬಹುಮುಖ್ಯವಾದ ಒಂದು ಲಕ್ಷಣವನ್ನು—ಅದರ ಸಮನ್ವಯ ಗುಣವನ್ನು—ತಿಳಿಸಲೇಬೇಕು.

ಶ್ರೀಕೃಷ್ಣನು ಸರ್ವವ್ಯಾಪಕವಾದ ತನ್ನ ತತ್ತ್ವದರ್ಶನದ ನಾಯಕತ್ವದಲ್ಲಿ ಅಧ್ಯಾತ್ಮ ಜೀವನದ ಎಲ್ಲ ಮುಖಗಳೂ—ಭರತಖಂಡದಲ್ಲಿ ಸ್ಥೂಲವಾಗಿ ಗೊತ್ತಿರುವ ಕರ್ಮಮಾರ್ಗ, ಭಕ್ತಿಮಾರ್ಗ, ಧ್ಯಾನಮಾರ್ಗ, ಜ್ಞಾನಮಾರ್ಗ ಮತ್ತು ಇನ್ನೇನು ಮಾರ್ಗಗಳಿವೆಯೋ ಆ ಎಲ್ಲ ಮಾರ್ಗಗಳ ವಿವಿಧ ಮುಖಗಳು—ಇವೆಲ್ಲವುಗಳ ಮುಖ್ಯ ಸ್ವಭಾವ ಸಾಮಾನ್ಯ ಲಕ್ಷಣಗಳೆಲ್ಲಾ ಪ್ರಾಧಾನ್ಯತೆಯನ್ನು ಪಡೆಯುವಂತೆ ಸಮನ್ವಯಗೊಳಿಸಿದ್ದಾನೆ. ದೇವರಲ್ಲಿ ಶರಣಾಗತರಾಗಬೇಕೆಂದೋ ಅಥವಾ ಯಾವ ಕಾಮನೆಯೂ ಇಲ್ಲದೆ ಕರ್ಮ ಮಾಡಬೇಕೆಂದೋ ಯಾರಾದರೂ ನಮಗೆ ತಿಳಿಸಿದಾಗ ; ಅಥವಾ ನಮ್ಮ ಮನಸ್ಸನ್ನು ಪ್ರಶಾಂತಗೊಳಿಸಬೇಕೆಂದೋ ಅಥವಾ ನಮ್ಮ ಭಾವನೆಗಳನ್ನು ವಿಶ್ಲೇಷಿಸಬೇಕೆಂದೋ ನಮಗೆ ತಿಳಿಸಿದಾಗ ನಾವು ಮಾಡಿ ಸಾಧಿಸಬೇಕಾಗಿರುವ ಸಾರಸರ್ವಸ್ವವೆಂದರೆ ನಮ್ಮ ಅಹಂಕಾರನಿರಸನ. ನಮ್ಮ ಪ್ರತಿಯೊಬ್ಬರಲ್ಲಿಯೂ ಸತ್ಯವು ಮುಸುಕುಹಾಕಿ ಕುಳಿತುಕೊಂಡಿರುವ ಹೊದಿಕೆಯೇ ಈ ಅಹಂಕಾರ. ನಾವು ಯಾವುದೇ ಮತಧರ್ಮವನ್ನು ಆಚರಿಸುತ್ತಿರಲಿ, ಜೀವನದ ಯಾವ ಸ್ಥಿತಿಯಲ್ಲಿಯೇ ಬಾಳುತ್ತಿರಲಿ ನಮ್ಮ ವ್ಯಕ್ತಿತ್ವದ ಕೇಂದ್ರಬಿಂದುವನ್ನು ಸಾಕ್ಷಿಗೆ ಬದಲಾಯಿಸಿಬಿಟ್ಟೆವೆಂದರೆ, ನಮ್ಮ ಎಲ್ಲ ದ್ವಂದ್ವಗಳನ್ನೂ ಜೀವನದ ಹೋರಾಟಗಳನ್ನೂ ದಾಟಿಬಿಡುತ್ತೇವೆ; ವಿಶ್ವವ್ಯಾಪಕವಾದಂತಹ ವಿಶಾಲ ದೃಷ್ಟಿಯನ್ನೂ ಉದಾರ ಹೃದಯವನ್ನೂ ಪಡೆಯುತ್ತೇವೆ. ಇಷ್ಟೇ ಅಲ್ಲ, ನಾವು ಜಗತ್ತಿನಲ್ಲಿ ಕಾಣುವ ಎಲ್ಲ ಪ್ರಮಾಣದ ಉದಾರ ಹೃದಯ ಮತ್ತು ದೃಷ್ಟಿಯ ವೈಶಾಲ್ಯಗಳೂ ವಿವಿಧ ಶ್ರೇಣಿಯಲ್ಲಿರುವ ಈ ಸಿದ್ಧಿಯನ್ನೇ ತಿಳಿಸುತ್ತವೆ.

ಗೀತಾ ಬೋಧನೆ ಮತ್ತು ಅದರ ಪರಿಣಾಮಗಳನ್ನು ಕುರಿತು ಒಂದು ಸ್ಥೂಲವಾದ ರೇಖಾಚಿತ್ರವನ್ನು ನಾವಿಲ್ಲಿ ಕೊಟ್ಟಿದ್ದೇವೆ. ಅದರ ಜಾತ್ಯತೀತ ಮತ್ತು ಮತಾತೀತವಾಗಿರುವ ಗುಣ ಇಲ್ಲಿ ಗಮನಾರ್ಹವಾದುದು. ನಾವು ಜೀವನದ ಯಾವ ಸ್ಥಾನದಲ್ಲಿಯೇ ಇರಲಿ, ಯಾವ ಜಾತಿ ಮತಕ್ಕೆ ಸೇರಿರಲಿ ಗೀತಾ ಬೋಧನೆಯು ಸರ್ವಸಮ್ಮತವಾಗುವಂತೆ ಅಪರಿಮಿತ ವ್ಯಾಪ್ತಿಯುಳ್ಳದ್ದು. ಅದು ನೀಡುವ ಒಂದೇ ಒಂದು ಸಂದೇಶವೆಂದರೆ ನಿರ್ಭಯದ ಸಂದೇಶ ; ಈ ಸಂದೇಶವು ಮಾನವನನ್ನು ಆತ್ಮಾಭಿವ್ಯಕ್ತತೆಯ ಉನ್ನತೋನ್ನತ ಮಟ್ಟಕ್ಕೆ ಏರಿಸುತ್ತದೆ. ಅದು ಯಹೂದ್ಯ ಮತಕ್ಕೆ ಸೇರಿದವನನ್ನು ಯಹೂದ್ಯೇತರ ಮತಕ್ಕಾಗಲೀ, ಕ್ರೈಸ್ತ ಅಥವಾ ಮಹಮ್ಮದೀಯನನ್ನು ಹಿಂದೂವನ್ನಾಗಿಯಾಗಲೀ, ಪಾಶ್ಚಾತ್ಯನನ್ನು ಪ್ರಾಚ್ಯನನ್ನಾಗಿಯಾಗಲೀ ಅಥವಾ ಇದಕ್ಕೆ ಪ್ರತಿಕ್ರಮವಾಗಿಯಾಗಲೀ ಮಾಡುವುದಕ್ಕೆ ಎಂದೆಂದಿಗೂ ಪ್ರಯತ್ನಿಸುವುದಿಲ್ಲ. ಪ್ರತಿಯೊಬ್ಬ ಸ್ತ್ರೀ ಪುರುಷನೂ ತನ್ನ ತನ್ನ ಸನ್ನಿವೇಶಗಳಿಗೆ ತಕ್ಕಂತೆ ಗೀತೋಪದೇಶವನ್ನು ಬಳಸಿಕೊಂಡು, ಸತ್ಯದ ಸುಭದ್ರವಾದ ಕೋಟೆಯತ್ತ ನಡೆಯುವಂತೆ ಉಪದೇಶಿಸುತ್ತದೆ. ಆದರೆ ಒಂದೇ ಒಂದು ಮುನ್ನೆಚ್ಚರಿಕೆ—ಹಾದಿಯಲ್ಲಿಯೇ ತೃಪ್ತಿಗೊಂಡು ತಂಗಿಬಿಡಬಾರದು. ಸತ್ಯಾನ್ವೇಷಣೆಯಲ್ಲಿ ತೊಡಗಿರುವವರನ್ನು ಕೂಗಿ ಕರೆಯುವ ಬಿಡದಿಗಳಾವುವೂ ಇಲ್ಲ.

## ೧೨. ಮುಕ್ತಾಯ

ಇಂದು ಇಡೀ ಜಗತ್ತೆಲ್ಲವೂ ತನ್ನ ಇತಿಹಾಸದಲ್ಲಿಯೇ ಕಾಣದಂತಹ ಅತ್ಯಂತ ಮಹತ್ತಾದ ಸಂಧಿಕಾಲದಲ್ಲಿ ಸಾಗುತ್ತಿದೆ. ಹಳೆಯ ಜಗತ್ತು, ಅದರ ಆಲೋಚನೆ, ಅಭಿಪ್ರಾಯ ಮತ್ತು ಸಂಸ್ಥೆಗಳೊಡನೆ ಕೂಡಿಕೊಂಡು ಬಹು ಬೇಗ ಕರಗಿಹೋಗುವ ಸ್ಥಿತಿಯಲ್ಲಿದೆ ; ಮುಂದೆ ಬರಲಿರುವುದರ ಸ್ವರೂಪವೆಂತಹುದೆಂದು ಯಾರಿಗೂ ಇನ್ನೂ ತಿಳಿಯುವಂತಿಲ್ಲ. ಸುಸ್ಥಿರವಾದ ನಾಗರಿಕತೆಯೊಂದನ್ನು ನಿರ್ಮಿಸಬೇಕೆಂಬ ಹೆಬ್ಬಯಕೆ ಆಧುನಿಕ ಪ್ರಜ್ಞೆಯಲ್ಲಿ ರೂಢಮೂಲವಾಗಿದೆ. ಪ್ರಾಚ್ಯ ಮತ್ತು ಪಾಶ್ಚಾತ್ಯ ವಿಚಾರಪರರು ಭವಿಷ್ಯತ್ ಜಗತ್ತಿನ ವ್ಯವಸ್ಥೆಯನ್ನು ಕುರಿತ ಮಾತು ಬಂದಾಗ ಇದು ಅತ್ಯಾವಶ್ಯಕ

ವೆಂದು ಅಭಿಪ್ರಾಯಪಡುತ್ತಾರೆ. ಜಗತ್ತಿನ ನಾಗರಿಕತೆಯೊಂದು ಭವಿಷ್ಯತ್ತಿನಲ್ಲಿ ಉದಯಿಸಬೇಕಾದರೆ ಅದನ್ನು ಪಡೆಯುವುದಕ್ಕಾಗಿ ಮಾನವ ಜನಾಂಗದ ಸಮಷ್ಟಿಜ್ಞಾನವನ್ನು ಬಳಸಬೇಕಾಗುತ್ತದೆ. ಇದಕ್ಕಾಗಿ ಮಹತ್ತಾದ ಕೊಡುಗೆ ಬರುವುದು ಜಾತಿಮತಗಳಿಂದಲ್ಲ, ಅಥವಾ ಪಕ್ಷಗಳಿಂದಲೂ ನಾಯಕರಿಂದಲೂ ಅಲ್ಲ ; ಆದರೆ, ಕೃಷ್ಣ, ಬುದ್ಧ, ಜೀಸಸ್, ಮಹಮ್ಮದ್ ಇಂತಹ ಮಾನವ ಜನಾಂಗದ ಅಧ್ಯಾತ್ಮ ದಾತೃಗಳಿಂದ. ಉಕ್ಕುತ್ತಿರುವ ಭಾವೋದ್ರೇಕ ಮತ್ತು ಮಹತ್ವಾಕಾಂಕ್ಷೆಗಳಿಂದ ತುಂಬಿರುವ ಇಂದಿನ ಜಗತ್ತಿನ ಸ್ಥಿತಿ ಮಹಾಭಾರತ ಕಾಲದಲ್ಲಿ ಭಾರತವಿದ್ದ ಸ್ಥಿತಿಯನ್ನೇ ಸ್ವಲ್ಪಮಟ್ಟಿಗೆ ಹೋಲುತ್ತದೆ. ಅಂದು ಗೀತಾ ಸಂದೇಶ ಹೊರಬಂದಿತು. ಇಂದಿನ ಹೋರಾಟ, ಘರ್ಷಣೆ ಮತ್ತು ಗಲಿಬಿಲಿಯಲ್ಲಿ ನಮಗೆ ಸ್ವಾತಂತ್ರ್ಯ, ಶಾಂತಿಗಳ ಮಾರ್ಗದರ್ಶನ ಮಾಡಿಸುವುದಕ್ಕೆ, ಈಗ ಮೂರು ಸಹಸ್ರ ವರ್ಷಗಳ ಕೆಳಗೆ ಶ್ರೀಕೃಷ್ಣನು ಗೀತೆಯಲ್ಲಿ ನೀಡಿದ ತರ್ಕಬದ್ಧವಾದ, ಸಾರ್ವತ್ರಿಕವಾದ ಮತ್ತು ವ್ಯಾಪಕವಾದ ಆಧ್ಯಾತ್ಮಿಕ ಸಂದೇಶಕ್ಕಿಂತಲೂ ಶ್ರೇಷ್ಠವಾದ ಮಾರ್ಗದರ್ಶನವಿನ್ನಿಲ್ಲ. ಅದು ಸಾಕ್ಷಾತ್ ಭಗವಂತನೇ ಮಾನವನಿಗೆ ನೀಡಿದ ಸಂದೇಶ. ಅದು ಶಾಶ್ವತ, ಪುರಾತನ ಮತ್ತು ಅಜರ. ಮಹತ್ಪರಿಣಾಮಕಾರಿಯಾದ ಸಮಸ್ಯೆಗಳು ನಮ್ಮನ್ನು ಇದಿರಿಸಿ ನಿಂತಿವೆ. ಜಗತ್ತಿನ ಅತ್ಯಂತ ದಿಟ್ಟನಾದ ಧೀಮಂತನನ್ನೂ ಕೂಡ ಇವು ನಡುಗಿಸುತ್ತವೆ. ಎಡ್ವಿನ್ ಆರ್ನಾಲ್ಡ್‌ನು 'ಸ್ವರ್ಗೀಯ ಸಂಗೀತ' ಎಂದು ಕರೆದ ಗೀತೆಯಲ್ಲಿ ಇಂದು ಅನೇಕ ಕಡೆಗಳಲ್ಲಿ ಕಾಣಬರುತ್ತಿರುವ ನೂತನ ಆಸಕ್ತಿಯ ಅಂಶಗಳಿವೆ ; ಅವು ವಿಶಾಲ ಜಗತ್ತಿನ ಜನಕ್ಕೆ ಯಥಾರ್ಥವಾದ ಮತ್ತು ಚಿರಂತನವಾದ ಪ್ರಯೋಜನವನ್ನು ನೀಡುವುದೆಂದು ನಾವು ಭರವಸೆಪಡೋಣ ಮತ್ತು ಪ್ರಾರ್ಥಿಸೋಣ.

ಅನು : ತ. ಸು. ಶಾಮರಾಯ

ಶ್ರೀಕೃಷ್ಣನು ಸರ್ವವ್ಯಾಪಕವಾದ ತನ್ನ ತತ್ತ್ವದರ್ಶನದ ನಾಯಕತ್ವದಲ್ಲಿ ಅಧ್ಯಾತ್ಮ ಜೀವನದ ಎಲ್ಲ ಮುಖಗಳೂ—ಭರತಖಂಡದಲ್ಲಿ ಸ್ಥೂಲವಾಗಿ ಗೊತ್ತಿರುವ ಕರ್ಮಮಾರ್ಗ, ಭಕ್ತಿಮಾರ್ಗ, ಧ್ಯಾನಮಾರ್ಗ, ಜ್ಞಾನಮಾರ್ಗ ಮತ್ತು ಇನ್ನೇನು ಮಾರ್ಗಗಳಿವೆಯೋ ಆ ಎಲ್ಲ ಮಾರ್ಗಗಳ ವಿವಿಧ ಮುಖಗಳು—ಇವೆಲ್ಲವುಗಳ ಮುಖ್ಯ ಸ್ವಭಾವ ಸಾಮಾನ್ಯ ಲಕ್ಷಣಗಳೆಲ್ಲಾ ಪ್ರಾಧಾನ್ಯತೆಯನ್ನು ಪಡೆಯುವಂತೆ ಸಮನ್ವಯಗೊಳಿಸಿದ್ದಾನೆ. ದೇವರಲ್ಲಿ ಶರಣಾಗತರಾಗಬೇಕೆಂದೋ ಅಥವಾ ಯಾವ ಕಾಮನೆಯೂ ಇಲ್ಲದೆ ಕರ್ಮ ಮಾಡಬೇಕೆಂದೋ ಯಾರಾದರೂ ನಮಗೆ ತಿಳಿಸಿದಾಗ ; ಅಥವಾ ನಮ್ಮ ಮನಸ್ಸನ್ನು ಪ್ರಶಾಂತಗೊಳಿಸಬೇಕೆಂದೋ ಅಥವಾ ನಮ್ಮ ಭಾವನೆಗಳನ್ನು ವಿಶ್ಲೇಷಿಸ ಬೇಕೆಂದೋ ನಮಗೆ ತಿಳಿಸಿದಾಗ ನಾವು ಮಾಡಿ ಸಾಧಿಸಬೇಕಾಗಿರುವ ಸಾರಸರ್ವಸ್ವವೆಂದರೆ ನಮ್ಮ ಅಹಂಕಾರನಿರಸನ. ನಮ್ಮ ಪ್ರತಿಯೊಬ್ಬರಲ್ಲಿಯೂ ಸತ್ಯವು ಮುಸುಕುಹಾಕಿ ಕುಳಿತುಕೊಂಡಿರುವ ಹೊದಿಕೆಯೇ ಈ ಅಹಂಕಾರ. ನಾವು ಯಾವುದೇ ಮತಧರ್ಮವನ್ನು ಆಚರಿಸುತ್ತಿರಲಿ, ಜೀವನದ ಯಾವ ಸ್ಥಿತಿಯಲ್ಲಿಯೇ ಬಾಳುತ್ತಿರಲಿ ನಮ್ಮ ವ್ಯಕ್ತಿತ್ವದ ಕೇಂದ್ರಬಿಂದುವನ್ನು ಸಾಕ್ಷಿಗೆ ಬದಲಾಯಿಸಿಬಿಟ್ಟೆವೆಂದರೆ, ನಮ್ಮ ಎಲ್ಲ ದ್ವಂದ್ವಗಳನ್ನೂ ಜೀವನದ ಹೋರಾಟಗಳನ್ನೂ ದಾಟಿ ಬಿಡುತ್ತೇವೆ; ವಿಶ್ವವ್ಯಾಪಕವಾದಂತಹ ವಿಶಾಲ ದೃಷ್ಟಿಯನ್ನೂ ಉದಾರ ಹೃದಯವನ್ನೂ ಪಡೆಯುತ್ತೇವೆ. ಇಷ್ಟೇ ಅಲ್ಲ, ನಾವು ಜಗತ್ತಿನಲ್ಲಿ ಕಾಣುವ ಎಲ್ಲ ಪ್ರಮಾಣದ ಉದಾರ ಹೃದಯ ಮತ್ತು ದೃಷ್ಟಿಯ ವೈಶಾಲ್ಯಗಳೂ ವಿವಿಧ ಶ್ರೇಣಿಯಲ್ಲಿರುವ ಈ ಸಿದ್ಧಿಯನ್ನೇ ತಿಳಿಸುತ್ತವೆ.

ಗೀತಾ ಬೋಧನೆ ಮತ್ತು ಅದರ ಪರಿಣಾಮಗಳನ್ನು ಕುರಿತು ಒಂದು ಸ್ಥೂಲವಾದ ರೇಖಾ ಚಿತ್ರವನ್ನು ನಾವಿಲ್ಲಿ ಕೊಟ್ಟಿದ್ದೇವೆ. ಅದರ ಜಾತ್ಯತೀತ ಮತ್ತು ಮತಾತೀತವಾಗಿರುವ ಗುಣ ಇಲ್ಲಿ ಗಮನಾರ್ಹ ವಾದುದು. ನಾವು ಜೀವನದ ಯಾವ ಸ್ಥಾನದಲ್ಲಿಯೇ ಇರಲಿ, ಯಾವ ಜಾತಿ ಮತಕ್ಕೆ ಸೇರಿರಲಿ ಗೀತಾ ಬೋಧನೆಯು ಸರ್ವಸಮ್ಮತವಾಗುವಂತೆ ಅಪರಿಮಿತ ವ್ಯಾಪ್ತಿಯುಳ್ಳದ್ದು. ಅದು ನೀಡುವ ಒಂದೇ ಒಂದು ಸಂದೇಶವೆಂದರೆ ನಿರ್ಭಯದ ಸಂದೇಶ ; ಈ ಸಂದೇಶವು ಮಾನವನನ್ನು ಆತ್ಮಾಭಿವ್ಯಕ್ತತೆಯ ಉನ್ನತೋನ್ನತ ಮಟ್ಟಕ್ಕೆ ಏರಿಸುತ್ತದೆ. ಅದು ಯಹೂದ್ಯ ಮತಕ್ಕೆ ಸೇರಿದವನನ್ನು ಯಹೂದ್ಯೇತರ ಮತಕ್ಕಾಗಲೀ, ಕ್ರೈಸ್ತ ಅಥವಾ ಮಹಮ್ಮದೀಯನನ್ನು ಹಿಂದೂವನ್ನಾಗಿಯಾಗಲೀ, ಪಾಶ್ಚಾತ್ಯನನ್ನು ಪ್ರಾಚ್ಯನನ್ನಾಗಿಯಾಗಲೀ ಅಥವಾ ಇದಕ್ಕೆ ಪ್ರತಿಕ್ರಮವಾಗಿಯಾಗಲೀ ಮಾಡುವುದಕ್ಕೆ ಎಂದೆಂದಿಗೂ ಪ್ರಯತ್ನಿಸುವುದಿಲ್ಲ. ಪ್ರತಿಯೊಬ್ಬ ಸ್ತ್ರೀ ಪುರುಷನೂ ತನ್ನ ತನ್ನ ಸನ್ನಿವೇಶಗಳಿಗೆ ತಕ್ಕಂತೆ ಗೀತೋಪದೇಶವನ್ನು ಬಳಸಿಕೊಂಡು, ಸತ್ಯದ ಸುಭದ್ರವಾದ ಕೋಟೆಯತ್ತ ನಡೆಯುವಂತೆ ಉಪದೇಶಿಸುತ್ತದೆ. ಆದರೆ ಒಂದೇ ಒಂದು ಮುನ್ನೆಚ್ಚರಿಕೆ—ಹಾದಿಯಲ್ಲಿಯೇ ತೃಪ್ತಿಗೊಂಡು ತಂಗಿಬಿಡಬಾರದು. ಸತ್ಯಾನ್ವೇಷಣೆಯಲ್ಲಿ ತೊಡಗಿರುವವರನ್ನು ಕೂಗಿ ಕರೆಯುವ ಬಿಡದಿಗಳಾವುವೂ ಇಲ್ಲ.

## ೧೨. ಮುಕ್ತಾಯ

ಇಂದು ಇಡೀ ಜಗತ್ತೆಲ್ಲವೂ ತನ್ನ ಇತಿಹಾಸದಲ್ಲಿಯೇ ಕಾಣದಂತಹ ಅತ್ಯಂತ ಮಹತ್ತಾದ ಸಂಧಿಕಾಲದಲ್ಲಿ ಸಾಗುತ್ತಿದೆ. ಹಳೆಯ ಜಗತ್ತು, ಅದರ ಆಲೋಚನೆ, ಅಭಿಪ್ರಾಯ ಮತ್ತು ಸಂಸ್ಥೆ ಗಳೊಡನೆ ಕೂಡಿಕೊಂಡು ಬಹು ಬೇಗ ಕರಗಿಹೋಗುವ ಸ್ಥಿತಿಯಲ್ಲಿದೆ ; ಮುಂದೆ ಬರಲಿರುವುದರ ಸ್ವರೂಪವೆಂತಹುದೆಂದು ಯಾರಿಗೂ ಇನ್ನೂ ತಿಳಿಯುವಂತಿಲ್ಲ. ಸುಸ್ಥಿರವಾದ ನಾಗರಿಕತೆಯೊಂದನ್ನು ನಿರ್ಮಿಸಬೇಕೆಂಬ ಹೆಬ್ಬಯಕೆ ಆಧುನಿಕ ಪ್ರಜ್ಞೆಯಲ್ಲಿ ರೂಢಮೂಲವಾಗಿದೆ. ಪ್ರಾಚ್ಯ ಮತ್ತು ಪಾಶ್ಚಾತ್ಯ ವಿಚಾರಪರರು ಭವಿಷ್ಯತ್ ಜಗತ್ತಿನ ವ್ಯವಸ್ಥೆಯನ್ನು ಕುರಿತ ಮಾತು ಬಂದಾಗ ಇದು ಅತ್ಯಾವಶ್ಯಕ

ವೆಂದು ಅಭಿಪ್ರಾಯಪಡುತ್ತಾರೆ. ಜಗತ್ತಿನ ನಾಗರಿಕತೆಯೊಂದು ಭವಿಷ್ಯತ್ತಿನಲ್ಲಿ ಉದಯಿಸಬೇಕಾದರೆ ಅದನ್ನು ಪಡೆಯುವುದಕ್ಕಾಗಿ ಮಾನವ ಜನಾಂಗದ ಸಮಷ್ಟಿಜ್ಞಾನವನ್ನು ಬಳಸಬೇಕಾಗುತ್ತದೆ. ಇದಕ್ಕಾಗಿ ಮಹತ್ತಾದ ಕೊಡುಗೆ ಬರುವುದು ಜಾತಿಮತಗಳಿಂದಲ್ಲ, ಅಥವಾ ಪಕ್ಷಗಳಿಂದಲೂ ನಾಯಕರಿಂದಲೂ ಅಲ್ಲ ; ಆದರೆ, ಕೃಷ್ಣ, ಬುದ್ಧ, ಜೀಸಸ್, ಮಹಮ್ಮದ್ ಇಂತಹ ಮಾನವ ಜನಾಂಗದ ಅಧ್ಯಾತ್ಮ ದಾತೃಗಳಿಂದ. ಉಕ್ಕುತ್ತಿರುವ ಭಾವೋದ್ರೇಕ ಮತ್ತು ಮಹತ್ವಾಕಾಂಕ್ಷೆಗಳಿಂದ ತುಂಬಿರುವ ಇಂದಿನ ಜಗತ್ತಿನ ಸ್ಥಿತಿ ಮಹಾಭಾರತ ಕಾಲದಲ್ಲಿ ಭಾರತವಿದ್ದ ಸ್ಥಿತಿಯನ್ನೇ ಸ್ವಲ್ಪಮಟ್ಟಿಗೆ ಹೋಲುತ್ತದೆ. ಅಂದು ಗೀತಾ ಸಂದೇಶ ಹೊರಬಂದಿತು. ಇಂದಿನ ಹೋರಾಟ, ಘರ್ಷಣೆ ಮತ್ತು ಗಲಿಬಿಲಿಯಲ್ಲಿ ನಮಗೆ ಸ್ವಾತಂತ್ರ್ಯ, ಶಾಂತಿಗಳ ಮಾರ್ಗದರ್ಶನ ಮಾಡಿಸುವುದಕ್ಕೆ, ಈಗ ಮೂರು ಸಹಸ್ರ ವರ್ಷಗಳ ಕೆಳಗೆ ಶ್ರೀಕೃಷ್ಣನು ಗೀತೆಯಲ್ಲಿ ನೀಡಿದ ತರ್ಕಬದ್ಧವಾದ, ಸಾರ್ವತ್ರಿಕವಾದ ಮತ್ತು ವ್ಯಾಪಕವಾದ ಆಧ್ಯಾತ್ಮಿಕ ಸಂದೇಶಕ್ಕಿಂತಲೂ ಶ್ರೇಷ್ಠವಾದ ಮಾರ್ಗದರ್ಶನವಿನ್ನಿಲ್ಲ. ಅದು ಸಾಕ್ಷಾತ್ ಭಗವಂತನೇ ಮಾನವನಿಗೆ ನೀಡಿದ ಸಂದೇಶ. ಅದು ಶಾಶ್ವತ, ಪುರಾತನ ಮತ್ತು ಅಜರ. ಮಹತ್ಪರಿಣಾಮಕಾರಿಯಾದ ಸಮಸ್ಯೆಗಳು ನಮ್ಮನ್ನು ಇದಿರಿಸಿ ನಿಂತಿವೆ. ಜಗತ್ತಿನ ಅತ್ಯಂತ ದಿಟ್ಟನಾದ ಧೀಮಂತನನ್ನೂ ಕೂಡ ಇವು ನಡುಗಿಸುತ್ತವೆ. ಎಡ್ವಿನ್ ಆರ್ನಾಲ್ಡ್‌ನು 'ಸ್ವರ್ಗೀಯ ಸಂಗೀತ' ಎಂದು ಕರೆದ ಗೀತೆಯಲ್ಲಿ ಇಂದು ಅನೇಕ ಕಡೆಗಳಲ್ಲಿ ಕಾಣಬರುತ್ತಿರುವ ನೂತನ ಆಸಕ್ತಿಯ ಅಂಶಗಳಿವೆ ; ಅವು ವಿಶಾಲ ಜಗತ್ತಿನ ಜನಕ್ಕೆ ಯಥಾರ್ಥವಾದ ಮತ್ತು ಚಿರಂತನವಾದ ಪ್ರಯೋಜನವನ್ನು ನೀಡುವುದೆಂದು ನಾವು ಭರವಸೆಪಡೋಣ ಮತ್ತು ಪ್ರಾರ್ಥಿಸೋಣ.

ಅನು : ತ. ಸು. ಶಾಮರಾಯ

೮

# ಅವತಾರ ಪುರುಷ—ಇತಿಹಾಸದ ಜನಕ*

## ೧. ಪ್ರಸ್ತಾವನೆ

ತಾರ್ಕಿಕವಾದ ಮನೋವೃತ್ತಿ ಮತ್ತು ಮಾರ್ಗಗಳೂ, ಪಾರಮಾರ್ಥಿಕ ಗುರಿ ಮತ್ತು ಉದ್ದೇಶಗಳೂ, ಜಾತಿ ಮತಗಳೆಂಬ ಭೇದಗಳಿಲ್ಲದೆ ಕೇವಲ ಮಾನವನೆಂಬ ಕಾರಣದಿಂದಲೇ ಕ್ಷೇಮ ಚಿಂತನೆಯನ್ನು ಮಾಡಬೇಕೆಂಬ ಅನುರಾಗವೂ, ಇವೆಲ್ಲಕ್ಕೂ ಹೆಚ್ಚಾಗಿ ಸಮನ್ವಯ ಮತ್ತು ಸೋದರ ಭಾವಗಳ ಪ್ರವೃತ್ತಿ—ಇವು ಉಪನಿಷತ್ತಿನ ಧರ್ಮ ಮತ್ತು ತತ್ತ್ವಶಾಸ್ತ್ರದ ಕೆಲವು ಪ್ರಧಾನ ಲಕ್ಷಣ ಗಳು ; ಇವು ಭಾರತದ ಪಾರಮಾರ್ಥಿಕ ಪರಂಪರೆಯ ಮೇಲೆ ಶಾಶ್ವತವೂ ಸಾರ್ವಕಾಲಿಕವೂ ಆದ ಮುದ್ರೆಯನ್ನು ಒತ್ತಿವೆ.

## ೨. ಭಾರತದ ಆಧ್ಯಾತ್ಮಿಕ ಸಂಪ್ರದಾಯದ ನೇಪಥ್ಯದಲ್ಲಿರುವ ಅಪೌರುಷೇಯದ ಶಕ್ತಿ

ಈ ಸಂಪ್ರದಾಯದ ಅತ್ಯಂತ ಪ್ರಾಚೀನವೂ ವ್ಯಾಪಕವೂ ಆದ ಪ್ರತಿಪಾದನೆ ಎಂದರೆ ಭಗವದ್ಗೀತೆ ; ಉಪನಿಷತ್ತುಗಳನ್ನು ಬಿಟ್ಟರೆ ಇದೇ ಭಾರತದಲ್ಲಿ ಅತ್ಯಂತ ಮಹತ್ವವುಳ್ಳ ಪ್ರಮಾಣಗ್ರಂಥ. ಉಪನಿಷತ್ತುಗಳಲ್ಲಿ ನಾವು ತೀವ್ರವಾದ, ಅಪೂರ್ವವಾದ ಮತ್ತು ಶುದ್ಧವಾದ ಚಿಂತನೆಯ ಪ್ರಾಂತ್ಯ ದಲ್ಲಿ ಸಂಚರಿಸುತ್ತೇವೆ ; ಆ ವಾತಾವರಣದಲ್ಲಿ ವಿವೇಚನಾಪರರಾದ ಮಹಾಪುರುಷರ ವ್ಯಕ್ತಿತ್ವಗಳೂ ಕೂಡ ಕರಗಿ ಹೋಗಿ ಅಮೂರ್ತವಾಗುತ್ತವೆ ; ತೆಳುವಾದ, ವಿರಳವಾದ ಗಾಳಿಯ ಮೇಲೆ ತೇಲಿಹೋಗುತ್ತಿದ್ದ ಋಷಿಗಳು ಅಥವಾ ಮುನಿಗಳು ತಮ್ಮ ಪಾದದ ಗುರುತುಗಳು ಕೂಡ ಕಾಣುವಂತೆ ಬಿಟ್ಟುಹೋಗಿಲ್ಲ ; ಅವರ ವ್ಯಕ್ತಿತ್ವವು ಅವರ ಚಿಂತನೆಯಲ್ಲಿ ಅಂತರ್ಗತವಾಗಿ ಹೋಗಿದೆ. ನಮಗೆ ಸಿಕ್ಕುವುದೆಲ್ಲಾ ಅಪೌರುಷೇಯ ಅಥವಾ ಅಮೂರ್ತ ಸತ್ಯಗಳ ಸಮೂಹ. ಇವು ಅನುಭವದಿಂದ ಸ್ವೀಕೃತವಾದುವು ಮತ್ತು ಅನುಭವದ ಪರೀಕ್ಷೆಗೆ ಒಳಗಾದುವು. ಇಂತಹ ವ್ಯಕ್ತಿಸ್ವರೂಪವಿಲ್ಲದ ಪ್ರಾರಂಭವು ಭಾರತದ ಧಾರ್ಮಿಕ ಪರಂಪರೆಗೆ ಭದ್ರವಾದ ಕಲ್ಲಿನ ತಳಹದಿಯಂತಿದೆ. ಇದು ಮುಂದಿನ ಶತಮಾನಗಳಲ್ಲಿ ಜಗತ್ತಿನ ಏಳನೇ ಒಂದರಷ್ಟು ಜನರ ಜೀವನಕ್ಕೆ ವಿಸ್ತಾರವಾದ ಮತ್ತು ಉನ್ನತವಾದ ಸಂಸ್ಕೃತಿ ಹರ್ಮ್ಯವನ್ನು ನಿರ್ಮಿಸಲು ಸಹಾಯಕವಾಗಿದೆ. ಹಾಗೆ ಹಾಕಿದ ತಳಹದಿಯು ಈ ಭವ್ಯ ಭವನಕ್ಕೆ ಭದ್ರತೆಯನ್ನೂ ಪುನಶ್ಚೇತನ ಶಕ್ತಿಯನ್ನೂ ನೀಡಿದೆ ; ಉದ್ರೇಕವನ್ನು ಎದುರಿಸುವ ಜಿಗುಟು ತನವೂ ಸಂಕಷ್ಟವನ್ನೂ ಎದುರಿಸುವ ದಾರ್ಢ್ಯತೆಯೂ, ಎಲ್ಲವನ್ನೂ ಒಳಗೊಳ್ಳಬಲ್ಲ ಶಕ್ತಿಯಿಂದ ಜಗತ್ತಿನ ಇತಿಹಾಸದಲ್ಲಿಯೇ ಒಂದು ಪವಾಡದಂತಿರುವ ಅವಿಚ್ಛಿನ್ನತೆಯೂ ಈ ಭವನಕ್ಕೆ ಸುಭದ್ರತೆ ಯನ್ನು ನೀಡಿವೆ. ಅದರ ಐದು ಸಹಸ್ರ ವರ್ಷಗಳ ಇತಿಹಾಸದಲ್ಲಿ ಅದರ ಮೇಲೆ ಹಲವು ಸಲ

---

*೧೯೫೦ರ ಮಾರ್ಚ್ ೩ರಂದು ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ

ಬಿರುಗಾಳಿಗಳು ಬೀಸಿವೆ, ಹಲವು ಆಕ್ರಮಣಗಳು ಅದನ್ನು ಅಪ್ಪಳಿಸಿವೆ, ಪರಾಧೀನತೆಯು ಅದನ್ನು ಅವಮಾನಗೊಳಿಸಿದೆ, ಕ್ರಾಂತಿಗಳು ಅದನ್ನು ಕ್ಷೋಭಗೊಳಿಸಿವೆ ; ಅಂತಹ ಆಘಾತದ ಒಂದು ಅಂಶ ದಷ್ಟು ಹೊಡೆತದಿಂದ ಉಳಿದ ಕಡೆ ಮಹಾ ಮಂದಿರಗಳು ಹಿಂದೆ ಉರುಳಿ ಹೋಗಿವೆ, ಇಂದೂ ಅಂತಹ ಆಘಾತಗಳು ನಡೆಯುತ್ತಿವೆ. ಆದರೆ ಭಾರತದ ಈ ಭವನವು ಅವುಗಳನ್ನೆಲ್ಲಾ ತಡೆದುಕೊಂಡು ನಿಂತಿರುವುದು ಮಾತ್ರವೇ ಅಲ್ಲ, ಆಘಾತಕ್ಕೆ ಸಿಕ್ಕ ಪ್ರತಿಯೊಂದು ಬಾರಿಯೂ ಹೆಚ್ಚು ಶಕ್ತಿಯುತವಾಗಿ ಪುನಶ್ಚೇತನಗೊಂಡು ಹೊಸ ಚೇತನದಿಂದ ಕಳಕಳಿಸುತ್ತಾ ಜಗತ್ತನ್ನು ಎದುರುಗೊಳ್ಳುತ್ತದೆ. ಭಾರತವು ಸದಾ ವಯೋವೃದ್ಧಿಯನ್ನು ಪಡೆಯುತ್ತಿದೆಯಾದರೂ ಎಂದೆಂದಿಗೂ ಮುಪ್ಪಾಗಿಲ್ಲವೆಂಬುದನ್ನು ಇತಿಹಾಸ ಸ್ಪಷ್ಟಪಡಿಸುತ್ತದೆ.

ಐದು ಸಹಸ್ರ ವರ್ಷಗಳಾದ ಮೇಲೆಯೂ ಕೂಡ ಭಾರತದ ಜನ ಇಂದು ಯೌವನದ ಉತ್ಸಾಹ ಮತ್ತು ಶಕ್ತಿಗಳಿಂದ ತುಂಬಿಕೊಂಡವರಾಗಿ, ನಾಳೆ ಬರಬಹುದಾದ ಹೋರಾಟ ಮತ್ತು ಸಾಧನೆಗಳ ಯುಗವನ್ನು ನಿರೀಕ್ಷಿಸುವ ಮನೋಭಾವವುಳ್ಳವರಾಗಿದ್ದಾರೆ ; ಭಾರತರಾಷ್ಟ್ರಜೀವನದ ಪ್ರಪ್ರಾರಂಭ ದಲ್ಲಿಯೇ ಇದಕ್ಕೆ ಸ್ಥಿರವಾದ ಒಂದು ತಳಹದಿಯನ್ನು ಹಾಕಿದ ಉಪನಿಷತ್ತಿನ ಋಷಿಗಳಿಗೆ ಇದರ ಪ್ರಶಸ್ತಿ ಸಲ್ಲಬೇಕು. ಆ ಋಷಿಗಳನ್ನು ನಾವಿಂದು ನೆನೆದು, ಅವರ ಉಪದೇಶವನ್ನು ಗ್ರಹಿಸಿ, ನಮಗೂ ಜಗತ್ತಿಗೂ ಅವರು ಮಾಡಿರುವ ಮಹದುಪಕಾರಕ್ಕಾಗಿ ಅವರನ್ನು ಭಕ್ತಿಯಿಂದ ನಮಿಸಬೇಕು.

### ೩. ಅಮೂರ್ತ–ಮೂರ್ತಸ್ವರೂಪದ ಗರ್ಭ

ಉಪನಿಷತ್ತುಗಳ ವಾತಾವರಣ ತನ್ನಷ್ಟಕ್ಕೆ ತಾನು ಅಮೂರ್ತವಾಗಿರುವುದಾದರೂ ಮುಂದಿನ ಯುಗಗಳಲ್ಲಿ ಭಾರತದ ಆಕಾಶವನ್ನು ಕಾಂತಿಮಯವಾಗಿ ಮಾಡಿದ ಜೀವಜ್ಯೋತಿಗಳನೇಕರು ಅದರ ಗರ್ಭದಲ್ಲಿದ್ದರು. ಅಂಥವರಲ್ಲಿ ಮೊದಲನೆಯವನು ವಾಲ್ಮೀಕಿ ರಾಮಾಯಣದ ಶ್ರೀರಾಮಚಂದ್ರ. ಎರಡನೆಯವನು ವ್ಯಾಸಮಹಾಭಾರತದ ಗೀತಾಚಾರ್ಯ ಶ್ರೀಕೃಷ್ಣ. ಈ ಮಹಾಪುರುಷರಿಬ್ಬರೂ ಮುಂದಿನ ಯುಗಗಳಲ್ಲೆಲ್ಲಾ ಅತ್ಯಂತ ಪ್ರಧಾನರಾದ ಮತ್ತು ಅತ್ಯಂತ ಫಲದಾಯಕರಾದ ವ್ಯಕ್ತಿತ್ವ ವುಳ್ಳವರಾದ್ದರಿಂದ ಭಾರತದ ಸಾಂಸ್ಕೃತಿಕ ಇತಿಹಾಸದ ಪುಟಗಳಲ್ಲಿ ಪ್ರಮುಖರಾಗಿದ್ದಾರೆ. ಉಪನಿಷತ್ತುಗಳಲ್ಲಿನ ಅಮೂರ್ತ ಭಾವನೆಗಳು ಇವರ ರೂಪದಿಂದ ವ್ಯಕ್ತಿ ಮತ್ತು ವ್ಯಕ್ತಿತ್ವಗಳ ಸ್ಪಷ್ಟ ರೂಪವನ್ನು ತಳೆಯುತ್ತವೆ ; ಮಾತು ಮಾನವರೂಪವನ್ನು ತಳೆಯುತ್ತದೆ. ಋಷಿಗಳ ವ್ಯಕ್ತಿತ್ವ ವಿಚಾರವನ್ನು ಗಮನಿಸದೆಯೇ ಉಪನಿಷತ್ತುಗಳನ್ನು ಅಧ್ಯಯನ ಮಾಡುವುದು ಸಾಧ್ಯ. ಆದರೆ ರಾಮ ಮತ್ತು ಕೃಷ್ಣ ಮೊದಲಾದ ವ್ಯಕ್ತಿಗಳ ಬೋಧನೆಯನ್ನು ಹಾಗೆ ಮಾಡುವುದಕ್ಕಾಗುವುದಿಲ್ಲ. ಇಲ್ಲಿ ಗುರುವಿಗೂ ಆತನ ಬೋಧನೆಗೂ ನಿಕಟವಾದ ಒಂದು ಆಂತರಿಕ ಸಂಬಂಧವಿದೆ ; ಈ ಗುರುಗಳು ಬರಿಯ ವ್ಯಕ್ತಿಗಳು ಮಾತ್ರವಲ್ಲ, ಜಗತ್‌ಚಾಲಕ ಶಕ್ತಿಗಳು ; ಅವರ ಆದರ್ಶಗಳೇ ಘನೀಭೂತ ವಾದಂತೆ ಇರುವವರು. ಬುದ್ಧ, ಶಂಕರ, ರಾಮಕೃಷ್ಣ, ವಿವೇಕಾನಂದರ ವಿಚಾರದಲ್ಲಿಯೂ ಹೀಗೆಯೇ ತಿಳಿಯಬೇಕು. ವ್ಯಕ್ತ-ಅವ್ಯಕ್ತಗಳೆರಡೂ ಸಮರಸವಾಗಿ ಸೇರಿರುವುದನ್ನು ಪ್ರತಿನಿಧಿಸುವ ಅಗ್ರಗಣ್ಯ ಆದರ್ಶ ವ್ಯಕ್ತಿಗಳವರು ; ಅವರಲ್ಲಿ ಆಗಿನ ಕಾಲದ ಧಾರ್ಮಿಕ ಮತ್ತು ನೈತಿಕ ಪ್ರೇರಣೆಗಳೂ ಶ್ರದ್ಧೆಗಳೂ ಕೇಂದ್ರೀಕೃತವಾಗಿದ್ದುವು. ಇವರು ಭಾರತ ಇತಿಹಾಸದ ಧಾರ್ಮಿಕ ಕ್ರಿಯಾಶಕ್ತಿಯೇ ಮೂರ್ತಿವೆತ್ತಂತೆ ಬಾಳುತ್ತಿದ್ದು ಯುಗಕರ್ತರಾದವರು. ಭಾವನೆಯ ನಿರ್ದಿಷ್ಟರೂಪವೇ ವ್ಯಕ್ತಿ ; ವ್ಯಕ್ತಿತ್ವದ ಪರಿಭಾಷೆಯಲ್ಲಿ ವ್ಯಕ್ತಿಯು ಒಂದು ನಿರ್ದಿಷ್ಟ ರೂಪ. ಉಪನಿಷತ್ತಿನ ಗರ್ಭದಲ್ಲಿರುವ ಭಾವನೆಗಳು ಈ ವ್ಯಕ್ತಿಗಳಲ್ಲಿ ಅಸಾಧಾರಣ ಲಕ್ಷಣಗಳಾಗಿ ವ್ಯಕ್ತಗೊಳ್ಳುತ್ತಿರುವಂತಿವೆ. ಶ್ರೀಕೃಷ್ಣನು ಈ ಸಿದ್ಧಾಂತ ಸಮನ್ವಯಕ್ಕೆ ಅತ್ಯುತ್ತಮ ಉದಾಹರಣೆಯಾಗಿದ್ದಾನೆ ; ಪ್ರೇಮಮಯನಾಗಿಯೂ

ಉಲ್ಲಾಸಪೂರ್ಣನಾಗಿಯೂ ಸತ್ಯಯುಕ್ತನಾಗಿಯೂ ಮತ್ತು ದಯಾಮಯನಾಗಿಯೂ ಇರುವ ವ್ಯಕ್ತಿತ್ವವುಳ್ಳವನಾದರೂ ಆತನು ಕೇವಲ ಅನಾಸಕ್ತ. ಮಾನವೇತಿಹಾಸದ ಸಂದರ್ಭವನ್ನು ದೃಷ್ಟಿಯಲ್ಲಿಟ್ಟುಕೊಂಡು ಪರ್ಯಾಲೋಚಿಸಿದಾಗ ಈ ಅಸಾಧಾರಣ ಮಹಾಪುರುಷರನ್ನು ಅವತಾರ ಪುರುಷರೆಂದು ಹೆಸರಿಸುವುದು ಅವರ ವ್ಯಕ್ತಿತ್ವದ ಔನ್ನತ್ಯ ಮತ್ತು ಮಹತ್ವಗಳಲ್ಲಿನ ಈ ವಿಶಿಷ್ಟ ಗುಣಕ್ಕಾಗಿಯೇ ಎಂದು ಅರ್ಥವಾಗುತ್ತದೆ. ಅವತಾರವೆಂಬುದು ಅಮೂರ್ತ-ಮೂರ್ತಗಳ, ದೇವತ್ವ ಮಾನವತ್ವಗಳ ಒಂದು ಸಿದ್ಧಾಂತ ಸಮನ್ವಯ ; ಏಕಕಾಲದಲ್ಲಿಯೇ ಆತನು ವ್ಯಷ್ಟಿಯೂ ನಿಜ, ಸಮಷ್ಟಿಯೂ ನಿಜ.

### ೪. ಚೈತನ್ಯಶಕ್ತಿಯ ಕೇಂದ್ರವಾಗಿ ಅವತಾರ

ಅವತಾರ ಭಾವನೆಯ ಒಂದು ಮುಖ್ಯ ಲಕ್ಷಣವು, ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಅತ್ಯಂತ ಅರ್ಥಪೂರ್ಣವಾದುದು ಎಂದರೆ ಆ ಮಾತಿಗೆ ಸೇರಿಕೊಂಡಿರುವ ಒಂದು ಚೈತನ್ಯಾತ್ಮಕ ಗುಣ. ಅವತಾರಪುರುಷನು ಸಾಮಾನ್ಯ ಸಂತನಂತೆ ಜಡವಾಗಿ ಮಾರ್ಗದರ್ಶನ ಮಾಡಿಸುವ ಒಂದು ಬೆಳಗುಗಂಬದಂತಿರುವುದಿಲ್ಲ ; ಶ್ರೀರಾಮಕೃಷ್ಣರು ಹೇಳುವಂತೆ ಸಹಸ್ರಾರು ಜನರನ್ನು ಭವಸಾಗರದಿಂದ ದಾಟಿಸಬಲ್ಲ ಒಂದು ದೊಡ್ಡ ಹಡಗಿನಂತಿರುತ್ತಾನೆ (ಶ್ರೀರಾಮಕೃಷ್ಣ ಉವಾಚ, ಪು. ೨೨೪). ಶ್ರೀಕೃಷ್ಣನು ಗೀತೆಯಲ್ಲಿ (IV ೭-೮) ಹೇಳಿರುವಂತೆ ಆತನು ಧರ್ಮಸಂಸ್ಥಾಪನೆಗಾಗಿ ಜಗದ್‌ರಂಗದಲ್ಲಿ ಕಾಣಿಸಿಕೊಳ್ಳುತ್ತಾನೆ. ಭಗವಾನ್ ಬುದ್ಧನು ತನ್ನ ಪ್ರಥಮೋಪದೇಶದಲ್ಲಿ ಅವತಾರ ಪುರುಷನು ಧರ್ಮಚಕ್ರವನ್ನು ಚಾಲನೆ ಮಾಡುತ್ತಾನೆಂದು ಹೇಳುತ್ತಾನೆ. ಇಬ್ಬರ ಚಾಲನಶಕ್ತಿಯೂ ಒಂದೇ– ಲಕ್ಷಾಂತರ ಜನರ ಸುಖ ಸಂರಕ್ಷಣೆ ; 'ಸರ್ವಭೂತಹಿತ' ಅಥವಾ 'ಬಹುಜನಹಿತ' ಮತ್ತು ಬಹುಜನಸುಖ. ಮೇಲುನೋಟಕ್ಕೆ ಅದೊಂದು ವಿರೋಧಾಭಾಸದಂತೆ ಕಾಣಬಹುದಾದರೂ ಅವರ ವ್ಯಕ್ತಿತ್ವಗಳ ಶ್ರೀಮಂತಿಕೆ, ಸಮಗ್ರತೆಗಳು ಅವರ ಅನಾಸಕ್ತಿ ಮನೋಭಾವದಿಂದ (ಅವರ ಜೀವನ ಮತ್ತು ಕರ್ಮಗಳ ಹಿಂದಿರುವ ಚಾಲನಶಕ್ತಿಯೂ ಅದೇ) ಬಂದವುಗಳು. ಶ್ರೀಕೃಷ್ಣನು ಗೀತೆಯಲ್ಲಿ (III-೨೨-೨೫) 'ಹೇ ಅರ್ಜುನ ! ಮೂರು ಲೋಕದಲ್ಲಿಯೂ ನಾನು ಗಳಿಸಬೇಕಾದುದು ಏನೂ ಇಲ್ಲ. ಆದರೂ ನಾನು ಜಗತ್ತಿನ ಹಿತಕ್ಕಾಗಿಯೂ, ಮಾನವರಿಗೆ ಉದಾಹರಣೆಯಾಗುವುದಕ್ಕಾಗಿಯೂ ಎಡೆಬಿಡದೆ ದುಡಿಯುತ್ತೇನೆ' ಎಂದು ಹೇಳುತ್ತಾನೆ. ವ್ಯಕ್ತಿತ್ವದ ಔನ್ನತ್ಯವು ಅದರ ಅವ್ಯಕ್ತತ್ವದ ಆಳಕ್ಕೆ ಸಮನಾಗಿರುತ್ತದೆ— ಎಂಬ ನೈತಿಕ ತತ್ತ್ವವನ್ನು ಸಮರ್ಥನೆ ಮಾಡುವುದಕ್ಕೆ ಅವರ ಬಾಳು ಸೊಗಸಾದ ಉದಾಹರಣೆ ; ಬಾಳನ್ನು ತಿಳಿದುಕೊಳ್ಳಬೇಕಾದರೆ ಮೊದಲು ಅದನ್ನು ತ್ಯಜಿಸಬೇಕು (ಮ್ಯಾಥ್ಯೂ XVI-೨೫).

### ೫. ಜಗತ್ತಿನ ಅರ್ಥವಿವರಣೆಗೆ ಪ್ರತಿವಾದಿಯಾಗಿ ಜಗತ್ತಿನ ರೂಪಾಂತರ

ಭಾರತದಲ್ಲಿ ಅರ್ಥಮಾಡಿಕೊಂಡಿರುವ ರೀತಿಯಲ್ಲಿ ಹೇಳುವುದಾದರೆ ಅವತಾರಿ ಎಂಬುವನು ಒಬ್ಬ ಯುಗಪ್ರವರ್ತಕ. ಅವನು ಒಂದು ಪಾರಮಾರ್ಥಿಕ ವಿದ್ಯುಜ್ಜನಕಯಂತ್ರ. ಅದರಿಂದ ಮಾನವನನ್ನು ರೂಪಿಸುವ ಮತ್ತು ರಾಷ್ಟ್ರವನ್ನು ರೂಪಿಸುವ ಶಕ್ತಿವಿಶೇಷಗಳು ಉದಯಿಸುತ್ತವೆ. ಭಾವರೂಪವಾದ ತತ್ತ್ವಜ್ಞಾನವು ಸಂಕಲ್ಪರೂಪವಾದ, ಉದ್ದೇಶರೂಪವಾದ ಮತ್ತು ಪ್ರಯತ್ನ ರೂಪವಾದ ತತ್ತ್ವಜ್ಞಾನವಾಗಿ ರೂಪಾಂತರಗೊಳ್ಳುತ್ತದೆ ; ಭಾವರೂಪದ ತತ್ತ್ವಜ್ಞಾನದಲ್ಲಿ ಜಗತ್ತಿನ ಅರ್ಥವಿವರಣೆಯೇ ಪ್ರಮುಖವಾಗಿರುತ್ತದೆ ; ಸಂಕಲ್ಪರೂಪವಾದ ಮತ್ತು ಉದ್ದೇಶರೂಪವಾದ ತತ್ತ್ವಜ್ಞಾನದಲ್ಲಿ ಅದರ ಭಾವಗಳಿಗೆ ತಕ್ಕಂತೆ ಅದನ್ನು ರೂಪಾಂತರಗೊಳಿಸಬೇಕೆಂಬ ಆಳವಾದ

ಆಸಕ್ತಿ ಇರುತ್ತದೆ. ಯುಗಪ್ರವರ್ತಕನಾಗಿರುವ ಅವತಾರಪುರುಷನು ಭಾವ, ಕಲ್ಪನೆ ಮತ್ತು ಪ್ರಯತ್ನಗಳ ಮುಪ್ಪುರಿಯಾಗಿರುತ್ತಾನೆ. ಈಶ್ವರ ಅಥವಾ ದೇವರು ಎಂಬುದಕ್ಕೆ ವೇದಾಂತದಲ್ಲಿ ಇರುವ ಸೂತ್ರವೂ ಇದೇ—ಅವನು ಜ್ಞಾನ, ಶಕ್ತಿ ಮತ್ತು ಕ್ರಿಯೆಗಳ ಸಮನ್ವಯನಾಗಿರುತ್ತಾನೆ. ಪ್ರಭಾವಪೂರ್ಣರಾದ ಪುರುಷರೆಲ್ಲರೂ ಸ್ವಲ್ಪ ಹೆಚ್ಚುಕಡಿಮೆ ಅಂತಹ ಸಮನ್ವಯದ ವಿದ್ಯುತ್ ಜನಕಯಂತ್ರಗಳೇ ; ಆದರೆ ಅವರ ಶಕ್ತಿಸಾಮರ್ಥ್ಯಗಳ ವ್ಯಾಪ್ತಿ ಪರಿಮಿತವಾದುದು ಮತ್ತು ಅವರ ವ್ಯಕ್ತಿತ್ವದ ಮಿತಿಯಿಂದ ಸರ್ವಸ್ವಾತಂತ್ರ್ಯವಿಲ್ಲದೆ ಅಭಿಪ್ರಾಯಗಳು ಪರಿಮಿತಿಗೊಳಪಟ್ಟಿರುತ್ತವೆ. ಅವತಾರಪುರುಷನಾದರೋ ಅವರಂತೆ ಮಿತಿಗೊಳಗಾಗದೆ, ಇಡೀ ಯುಗದ ಮೇಲೆಲ್ಲಾ ಪ್ರಭಾವವನ್ನು ಬೀರುವಂತಹ ಸಾಮರ್ಥ್ಯ ಮತ್ತು ಲೋಕಕಲ್ಯಾಣಗಳಿಗೆ ಜ್ವಲಂತ ಮೂಲ ಸ್ಥಾನವಾಗಿದ್ದುಕೊಂಡು ಕಾರ್ಯತತ್ಪರನಾಗುತ್ತಾನೆ. ಅಲ್ಲಿಂದ ಮುಂದೆಯೂ ಕೂಡ ಆತನು ಎಂದೆಂದಿಗೂ ಸಾಮಾನ್ಯ ಸ್ಫೂರ್ತಿಮೂಲವಾಗಿ ಮುಂದುವರಿಯುತ್ತಾನೆ.

ಜಗತ್ತಿನ ಅರ್ಥವಿವರಣೆಯನ್ನು ಮಾತ್ರ ಮಾಡುವ ತತ್ತ್ವಶಾಸ್ತ್ರಜ್ಞರೆಂದೂ ಅದನ್ನು ರೂಪಾಂತರಗೊಳಿಸುವ ತತ್ತ್ವಶಾಸ್ತ್ರಜ್ಞರೆಂದೂ ಎರಡು ಭಾಗವಾಗಿ ಮಾಡುವ ಮಾರ್ಕ್ಸ್‌ನ ವಾದವು ಭಾರತಕ್ಕೆ ಬಹುಕಾಲದಿಂದಲೂ ಗೊತ್ತಿದೆ ಮತ್ತು ಅದನ್ನು ಪ್ರಯೋಗಿಸಿಕೊಂಡು ಬಂದಿದ್ದಾರೆ. ಈ ವಿಚಾರದಲ್ಲಿ ನಾವು ಮಾರ್ಕ್ಸ್‌ನ ತತ್ತ್ವಶಾಸ್ತ್ರವು ಯೂರೋಪು ದೇಶದಲ್ಲಿ ಹುಟ್ಟುವುದಕ್ಕೆ ಬಹಳ ಮುಂಚಿನಿಂದಲೇ ಮಾರ್ಕ್ಸ್‌ವಾದದ ಅನುಯಾಯಿಗಳಾಗಿದ್ದೆವು. ಭಾರತೀಯರ ಪರ್ಯಾಲೋಚನೆಯ ಪ್ರಕಾರ ಅವತಾರಪುರುಷನು ಜಗತ್ತಿನ ಪರಿವರ್ತನಕರ್ತ. ಅವನಿಂದ ಭಾವವು ಕಲ್ಪನೆ ಉದ್ದೇಶ ಮತ್ತು ಕಾರ್ಯಗಳ ಹೊಣೆಯನ್ನು ವಹಿಸಬೇಕಾಗುತ್ತದೆ. ಆತನು ಜಗತ್ತನ್ನು ಕುರಿತು ಪರ್ಯಾಲೋಚನೆ ಮಾಡುವುದು ಮಾತ್ರವೇ ಅಲ್ಲ, ಅದನ್ನು ಪರಿವರ್ತಿಸಬೇಕೆಂಬ ದೃಷ್ಟಿಯಿಂದ ದುಡಿಯುತ್ತಾನೆ. ಬಲಪ್ರಯೋಗ ಮತ್ತು ದ್ವೇಷಗಳಿಂದ ಕೂಡಿದ ಲೌಕಿಕ ತತ್ತ್ವಜ್ಞಾನ ಮತ್ತು ಕಾರ್ಯಮಾರ್ಗವನ್ನು ಅನುಸರಿಸುವ ಮಾರ್ಕ್ಸ್‌ವಾದಕ್ಕೂ, ಮಾನವನಲ್ಲಿ ಅಂತರ್ಗತವಾಗಿರುವ ಒಳ್ಳೆಯತನ ಮತ್ತು ಶೈಕ್ಷಣಿಕ ಸಾಧ್ಯತೆಯ ನಂಬಿಕೆಯುಳ್ಳ ಭಾರತ ಚಿಂತನೆಯ ಆಧ್ಯಾತ್ಮಿಕ ಜ್ಞಾನ ಮತ್ತು ಮಾರ್ಗಗಳಿಗೂ ಮೂಲ ಉದ್ದೇಶಗಳು ಒಂದೇ ಆದರೂ ಕಾರ್ಯವಿಧಾನದಲ್ಲಿ ಮತ್ತು ಫಲದಲ್ಲಿ ಅವೆರಡಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಡಾ|| ರಾಧಾಕೃಷ್ಣನ್‌ರವರು ತಮ್ಮ (Religion and Society, p. 25) ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ :

> *ಬಡವರೂ ದಲಿತರೂ ಆದವರಲ್ಲಿ ಅದಕ್ಕಿರುವ ಕಳಕಳಿ, ಐಶ್ವರ್ಯವನ್ನೂ ಅವಕಾಶಗಳನ್ನೂ ಇನ್ನೂ ಹೆಚ್ಚು ಸಮಾನ ರೀತಿಯಿಂದ ಹಂಚಬೇಕೆಂಬ ಅದರ ನಿರ್ಬಂಧ ಮತ್ತು ನ್ಯಾಯಸಮ್ಮತವಾದ ಸಮಾನತೆ ಇರಬೇಕೆಂಬ ಆಗ್ರಹ—ಇವುಗಳ ಮೂಲಕ ಅದು ನೀಡುವ ಸಾಮಾಜಿಕ ಸಂದೇಶವನ್ನು ಉದಾತ್ತಧ್ಯೇಯರೆಲ್ಲರೂ ಒಪ್ಪುತ್ತಾರೆ. ಆದರೆ ನಮ್ಮ ಜೀವನದಲ್ಲಿ ಮಾರ್ಕ್ಸ್‌ವಾದದ ಸಿದ್ಧಾಂತಗಳನ್ನೂ, ಅದರ ನೀತಿಯೇ ಪರತತ್ತ್ವವೆಂಬ ಭಾವನೆಯನ್ನೂ ಮಾನವನ ವಿಚಾರದ ಪ್ರಾಕೃತಿಕ ದೃಷ್ಟಿಯನ್ನೂ, ವ್ಯಕ್ತಿತ್ವದ ಪಾವಿತ್ರ್ಯ ನಿರಾಕರಣೆಯನ್ನೂ ಒಳಗೊಂಡ ಆ ಸಾಮಾಜಿಕ ಕಾರ್ಯಕ್ರಮವನ್ನು ನಾವು ಒಪ್ಪಲೇಬೇಕೆಂದೇನೂ ಇಲ್ಲ.*

ಮಾನವನ ಮೇಲ್ಮೆಗಾಗಿ ಮಾರ್ಕ್ಸ್‌ವಾದದಲ್ಲಿ ಕಾಣಬರುವ ಆಸಕ್ತಿಯನ್ನು ವೇದಾಂತವು ಅರ್ಥಮಾಡಿಕೊಂಡು ಮೆಚ್ಚುಗೆಯನ್ನು ಸೂಚಿಸುತ್ತದೆ. ನಾವು ಅದರ ಉದ್ದೇಶಗಳ ತಾತ್ತ್ವಿಕ ಸಿದ್ಧಾಂತಗಳನ್ನೇ ಆಗಲಿ ಅಥವಾ ಅದರ ಆದರ್ಶಪೂರ್ಣವಾದ ಪ್ರಾಯೋಗಿಕ ಕಾರ್ಯಗಳನ್ನೇ ಆಗಲಿ ಪರೀಕ್ಷಿಸಿ ನೋಡಿದರೆ ಈ ದರ್ಶನದಲ್ಲಿ ಇರುವ ಮಾನವೀಯಾಂಶವು ನಮಗೆ ಕಾಣದೆ ಹೋಗುವುದಿಲ್ಲ. ಈ ದರ್ಶನ ತತ್ತ್ವದಲ್ಲಿ ಮಾನವ ಸುಖ ಸಂರಕ್ಷಣೆಗೆ ಅತ್ಯಂತ ಸಹಾಯಕವಾದ

ಸತ್ಯಾನ್ವೇಷಣೆ ಇದೆ ; ಅದರ ಸತ್ಯಾಸತ್ಯತೆಯನ್ನು ಜೀವನದಲ್ಲಿಯೂ ಸಮಾಜದಲ್ಲಿಯೂ ತಾಳೆ ಹಾಕಿ ನೋಡಬೇಕೆಂಬ ಆಳವಾದ ಆಸಕ್ತಿ ಇದೆ. ಆ ಸತ್ಯವನ್ನು ಅದು ಬಾಳಿನ ಐಕ್ಯತೆ ಮತ್ತು ಅಖಂಡತೆಗಳಲ್ಲಿ ಕಾಣುತ್ತದೆ.

೬. ಮುಕ್ತಾಯ

ವೇದಾಂತದ ಸಾಮಾಜಿಕ ದೃಷ್ಟಿ ಮತ್ತು ಕಾರ್ಯಕ್ರಮಗಳು ಈ ಸತ್ಯದಿಂದ ಹೊರಟು, ಕಾಲಕಾಲಕ್ಕೆ ತನ್ನ ಮಹತ್ ಮಾದರಿಗಳಂತಿರುವ ಅವತಾರಪುರುಷರಿಂದ ಚಾಲನೆಗೊಳ್ಳುತ್ತವೆ. ಇದರಿಂದ ಸ್ವಾಭಾವಿಕವಾಗಿಯೇ ಸ್ವಾತಂತ್ರ್ಯ, ಸಮಾನತೆ ಮತ್ತು ವ್ಯಕ್ತಿ ಪಾವಿತ್ರ್ಯವನ್ನು ಒತ್ತಿ ಹೇಳುವುದರ ಮೂಲಕವೂ ಹೆಚ್ಚು ಸಮಾಜ ಶಕ್ತಿಯನ್ನು ನೀಡುವ ಆಧ್ಯಾತ್ಮಿಕ ಗತಿಯ ಮೂಲಕವೂ ಸಮಾಜದಲ್ಲಿನ ಬಿಕ್ಕಟ್ಟುಗಳನ್ನೂ ಘರ್ಷಣೆಗಳನ್ನೂ ಶಮನಗೊಳಿಸಲು ಸಹಾಯಕವಾಗಿದೆ. ಹೀಗೆ ಅವತಾರ ಪುರುಷನು ಒಂದು ಯುಗದಲ್ಲಿ ಸಮರ್ಥನಾದ ಧಾರ್ಮಿಕ ನಾಯಕನಾಗಿರುತ್ತಾನೆ. ಆತನು ಸೃಜನಶೀಲವಾದ ಸಾಮಾಜಿಕ ಕಾರ್ಯಗತಿಗೆ ಚಾಲಕಶಕ್ತಿಯ ಮೂಲವಾಗಿಯೂ, ಅಜ್ಞಾನದಿಂದ ತುಂಬಿದ ಸಮಾಜಕ್ಕೆ ರಕ್ಷಕ ಮತ್ತು ಮಾರ್ಗದರ್ಶಕನಾಗಿಯೂ ದುಡಿಯುತ್ತಾನೆ.

ಅನು : ತ. ಸು. ಶಾಮರಾಯ

೯

# ಅವತಾರದ ದಿವ್ಯತ್ವ*

## ೧. ಪ್ರಸ್ತಾವನೆ

ಯಾವ ಐತಿಹಾಸಿಕ ಮಹಾಪುರುಷನ ಮಹತ್ತೇ ಆಗಲಿ ಆತನು ಬಾಳಿದ ಬಾಳು ನೀಡಿದ ಅಭಿಪ್ರಾಯಗಳಿಂದ ಉದ್ಭವಿಸುತ್ತದೆ. ಒಂದು ಜನಾಂಗದ ಜನ ತಮ್ಮ ನಾಯಕನ ಜೀವನ ಮತ್ತು ನಡತೆಗಳಲ್ಲಿ ಬೌದ್ಧಿಕವಾಗಿ ಮತ್ತು ಹಾರ್ದಿಕವಾಗಿ ಭಾಗಿಗಳಾಗುತ್ತಾ, ತಲೆಮಾರಿನಿಂದ ತಲೆಮಾರಿಗೆ ಆ ತಮ್ಮ ನಾಯಕನ ಅಭಿಪ್ರಾಯಗಳನ್ನು ವ್ಯಾಖ್ಯಾನ ಮಾಡಿಕೊಳ್ಳುತ್ತಾ ಹೋಗುತ್ತಾರೆ. ಈ ಐತಿಹಾಸಿಕ ಕಾರ್ಯಗತಿಯಲ್ಲಿ ಆ ಮಹಾಪುರುಷನ ವ್ಯಕ್ತಿತ್ವವು ವಿಕಸನಗೊಂಡು, ಎತ್ತರ ಬಿತ್ತರಗಳಲ್ಲಿ ಬೆಳೆಯುತ್ತಾ ಹೋಗುವಂತೆ ತೋರುತ್ತದೆ. ಸ್ವಾಮಿ ವಿವೇಕಾನಂದರ ಮಾತುಗಳಲ್ಲಿ ಹೇಳುವುದಾದರೆ (ಕೃತಿಶ್ರೇಣಿ, ಸಂಪುಟ ೩, ಪುಟ ೩೧೩) :

*ಪ್ರಾಚೀನಕಾಲದ ಪ್ರವಾದಿಗಳ ಮೇಲಿನ ನಮ್ಮ ಪ್ರೇಮ ಸಹಸ್ರಾರು ವರ್ಷಗಳ ಕುಸುರಿ ಕೆಲಸದಿಂದ ರೂಪುಗೊಂಡು ನಮ್ಮ ಬಳಿಗೆ ಬರುತ್ತದೆ.*

## ೨. ಅವತಾರ ಮತ್ತು ಐತಿಹಾಸಿಕ ಪ್ರಕ್ರಿಯೆ

ಆ ಮಹಾಪುರುಷನು ಅತ್ಯಂತ ಅಪೂರ್ವ ರೀತಿಯವನಾಗಿದ್ದು ತನ್ನ ಜೀವಿತಕಾಲದಲ್ಲಿಯೇ ಸ್ವಲ್ಪ ಹೆಚ್ಚು ಕಡಿಮೆ ಅವ್ಯಕ್ತ ಮತ್ತು ವ್ಯಕ್ತಗಳ ಐಕ್ಯತೆಯನ್ನು ಸಾಧಿಸಿದವನಾಗಿರಬೇಕು,ಆತನಿಗೂ ಆತನ ಜನರಿಗೂ ಕ್ರಿಯಾತ್ಮಕವಾದ ಒಂದು ಆಧ್ಯಾತ್ಮಿಕ ಬಾಂಧವ್ಯವಿರಬೇಕು, ಅವರಿಬ್ಬರಿಗೂ ಸಮಾನವಾಗಿರುವ ಅಧ್ಯಾತ್ಮ ನಿಯಂತ್ರಿತ ಪರಿಸರವಿರಬೇಕು—ಹೀಗಿದ್ದಾಗ ಮಾತ್ರ ಆತನ ಅಭಿಪ್ರಾಯದ ವ್ಯಾಖ್ಯಾನವು ನಡೆಯುತ್ತದೆ. ಹೀಗೆ ಅವರೆಲ್ಲರೂ ಒಂದೇ ಆಧ್ಯಾತ್ಮಿಕ ತೊಡುಗೆಯಿಂದ ಕೂಡಿದ್ದರೂ ಒಬ್ಬೊಬ್ಬರಿಗೂ ಆ ಅಧ್ಯಾತ್ಮದೊಡನೆ ಇರುವ ಸಂಬಂಧ ಬೇರೆಬೇರೆಯಾಗಿರುತ್ತದೆ. ಮಹಾಪುರುಷನೊಬ್ಬನ ಚೈತನ್ಯಾತ್ಮಕ ಶಕ್ತಿಯು ಎಳೆದುಕೊಂಡು ಹೋಗದ ಹೊರತು ಸಾಮಾನ್ಯ ಜನರು ಸ್ವಲ್ಪ ಹೆಚ್ಚು ಕಡಿಮೆ ಜಡತೆಯ ಕೇಂದ್ರಗಳಾಗಿರುತ್ತಾರೆ ; ಈ ಸನ್ನಿವೇಶದಲ್ಲಿ ಆ ಮಹಾಪುರುಷನು ಚಿಂತನೆ ಮತ್ತು ಚಳವಳಿಗಳ ಒಂದು ಸುಳಿಯಂತೆ, ತನ್ನ ಸುತ್ತುಮುತ್ತಿನ ಪಾರಮಾರ್ಥಿಕ ಶಕ್ತಿ ಮತ್ತು ಮೌಲ್ಯಗಳನ್ನು ಒಳಗೊಂಡ ವಿದ್ಯುತ್ ಸಂಗ್ರಾಹಕ ಮತ್ತು ಶಾಖ ಪ್ರಸಾರಕಗಳೆರಡೂ ಸೇರಿ ಒಂದಾಗಿರುವ ಯಂತ್ರದಂತೆ ಭಾಸವಾಗುತ್ತಾನೆ. ಜೀವ ಜಗತ್ತಿನಲ್ಲಿ ಒಬ್ಬ ವ್ಯಕ್ತಿಯನ್ನು ಮಹಾಪುರುಷನನ್ನಾಗಿ ಮಾಡುವ ಗುಣವಿಶೇಷವೂ ಇದೇ.

---

*೧೯೫೦ರ ಮಾರ್ಚ್ ೧೭ರಂದು ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ.

ಆದರೆ ಇಂತಹ ನಾಯಕರಲ್ಲಿ ಅವತಾರಪುರುಷನೆಂದು, ಅಂದರೆ ಭಗವಂತನೇ ಕೆಳಗಿಳಿದು ಬಂದಿರುವನೆಂದು ಜಗತ್ತು ಭಾವಿಸುವಂತಹ ವ್ಯಕ್ತಿಯು ಒಂದು ವಿಶೇಷ ಗುಂಪಿಗೆ ಸೇರುತ್ತಾನೆ. ಸಾಮಾನ್ಯ ರೀತಿಯ ನಾಯಕನು ತನ್ನ ಅಭಿಪ್ರಾಯ ವ್ಯಾಖ್ಯಾನಕ್ಕೆ ಹೆಚ್ಚು ಗಮನ ಕೊಡುವುದಿಲ್ಲ. ಅವನ ವ್ಯಕ್ತಿತ್ವ ಕಾಲಗತಿಯಲ್ಲಿ ಬೆಳೆಯುವುದಿಲ್ಲ. ಆ ಕಾಲದ ನೆಲದಲ್ಲಿ ಇಂತಹ ಜೀವಿಗಳನ್ನು ಪೋಷಿಸುವ ಸಾಮಗ್ರಿ ಇರುವುದಿಲ್ಲವೆಂದು ತೋರುತ್ತದೆ. ಹಾಗಾಗುವುದಕ್ಕೆ ಬದಲಾಗಿ ಕಾಲ ಮುಂದುವರಿದಂತೆ ಆತನ ವ್ಯಕ್ತಿತ್ವ ಹೆಚ್ಚುಹೆಚ್ಚಾಗಿ ಕುಗ್ಗುತ್ತಾ ಹೋಗುತ್ತದೆ. ಆದರೆ, ಈ ಕಾಲ ಪ್ರವಾಹ ಅವರೆಲ್ಲರಲ್ಲಿಯೂ ಒಂದೇ ಬಗೆಯಾಗಿ ವರ್ತಿಸುವುದಿಲ್ಲ. ಕೆಲವರ ವಿಚಾರದಲ್ಲಿ ಅವರ ಜೀವಿತಕಾಲದಲ್ಲಿಯೇ ಅದು ನಿಷ್ಕರುಣೆಯಾಗಿರುತ್ತದೆ, ಇನ್ನೂ ಕೆಲವರಿಗೆ ಕೆಲಕಾಲ ಕ್ಷಮೆ ದೊರೆಯುತ್ತದೆ. ಸ್ವರ್ಗ ಸಾಮ್ರಾಜ್ಯಕ್ಕೆ ಹೇಗೋ ಹಾಗೆ ಮಹತ್ತಿನ ದೇವಾಲಯಕ್ಕೂ ಆಹ್ವಾನಿತರಾಗುವವರು ಹಲವರಾದರೂ, ಅವರಲ್ಲಿ ಆಯ್ಕೆಯಾಗುವವರು ಕೇವಲ ಕೆಲವು ಮಂದಿ ಮಾತ್ರ. ಅಪೂರ್ವ ರೀತಿಯ ನಾಯಕನೊಬ್ಬನನ್ನು ಕಾಲವು ಆಯ್ಕೆ ಮಾಡುತ್ತದೆ, ಅಂತಹವನಿಗೆ ಭಾರತವು ಅವತಾರ ಪುರುಷನೆಂದು ನಾಮಕರಣ ಮಾಡುತ್ತದೆ ; ಆತನಿಗೆ ವಿಕಾಸಗೊಳ್ಳುತ್ತಾ ಹೋಗುವ ಮಹತ್ ಪಾತ್ರವನ್ನು ಕಾಲವು ಕಾಯ್ದಿರಿಸುತ್ತದೆ ; ಉಳಿದ ರೀತಿಯ ನಾಯಕರಿಗೆಲ್ಲಾ ಅವರ ಕೀರ್ತಿಯು ಸಂಕುಚಿತವಾಗುತ್ತಾ ಹೋಗುವ ಪಾತ್ರವನ್ನು ನೀಡುತ್ತದೆ. ಹೀಗೆ ಆಯ್ಕೆ ಮಾಡುವ ಕಾರ್ಯದಲ್ಲಿ ನಿರ್ಧಾರಕವಾದ ಒಂದೇ ಒಂದು ಮುಖ್ಯಾಂಶವಿದೆ—ಆ ಮುಖ್ಯಾಂಶವೇ ಆ ಪಾತ್ರದ ಪರಿಪೂರ್ಣತೆ, ಅದರ ವ್ಯಕ್ತಿತ್ವದ ಸಮಗ್ರ ವಿಕಸನ. ವ್ಯಕ್ತಿತ್ವ ಎಷ್ಟು ಪರಿಪೂರ್ಣವಾಗಿದ್ದರೆ ಅದರ ಕೀರ್ತಿ ಅಷ್ಟು ಕಾಲ ನಿಲ್ಲುತ್ತದೆ. ನಾವು ಎಲ್ಲರನ್ನೂ ಮೋಸ ಮಾಡಬಹುದು, ಎಲ್ಲರಿಗೂ ಭ್ರಮೆ ಬರಿಸಬಹುದು ; ಆದರೆ ಕಾಲಕ್ಕೆ ಮಾತ್ರ ಹಾಗೆ ಮಾಡಲು ಸಾಧ್ಯವಿಲ್ಲ. ಅದು ಜಗತ್ತಿನ ಪರ್ವತಗಳನ್ನೂ ಬೆಟ್ಟಗಳನ್ನೂ ಹೇಗೆ ಕ್ರಮಬದ್ಧವಾಗಿ ಕರಗಿಸುತ್ತದೆಯೋ ಹಾಗೆಯೇ ಲೌಕಿಕ ಮಹತ್ತನ್ನೆಲ್ಲಾ ಕ್ರಮಬದ್ಧವಾಗಿ ನುಂಗಿ ನೊಣೆಯುತ್ತದೆ. ಆದರೆ ಅಲೌಕಿಕ ಮಹತ್ತನ್ನು ಇದಿರುಗೊಂಡಾಗ ಅದು ಥಟ್ಟನೆ ನಿಂತು ತನ್ನ ಹೆಜ್ಜೆಯನ್ನು ಹಿಂದಿರುಗಿಸುತ್ತದೆ—ಆ ಮಹತ್ತನ್ನು ಪೋಷಿಸುವುದು ದೇಹ ಮನಸ್ಸುಗಳಲ್ಲ, ಮಾನವನಲ್ಲಿರುವ ಪರಮಾರ್ಥತತ್ತ್ವ, ಮಾನವನಲ್ಲಿರುವ ದೈವತ್ವದ ಕಾಲಾತೀತ ಯಥಾರ್ಥತೆಯೆಂಬ ರಸ. ಅವತಾರಪುರುಷನು ಸಂಪೂರ್ಣ ಸಮಗ್ರವಾಗಿರುವ ವ್ಯಕ್ತಿ, ಆದರೆ ಸಂತರೂ ಪ್ರವಾದಿಗಳೂ ಮತ್ತು ಇತರ ನಾಯಕಪುರುಷರು ವಿವಿಧ ರೀತಿಯ ಅಂಶಾವತಾರಿಗಳಾಗಿರುತ್ತಾರೆ. ಮಾನವನಲ್ಲಿ ಅವ್ಯಕ್ತವಾಗಿರುವ ದೈವದ ಬಿತ್ತು ಮತ್ತು ನಾಯಕನಲ್ಲಿ ಆವಿರ್ಭಾವವಾಗಲು ಹೋರಾಡುವ ಶಕ್ತಿ ಇವು ಅವತಾರಪುರುಷನಲ್ಲಿ ಸಮಗ್ರವಾಗಿ ವಿಕಸಿತವಾಗುತ್ತವೆ. ಆಗ ಮಾನವನು ತನ್ನ ವ್ಯಕ್ತಿತ್ವದ ಸಂಪೂರ್ಣವಾದ ಔನ್ನತ್ಯ ಮತ್ತು ಮಹತ್ವಗಳನ್ನು ಪಡೆಯುತ್ತಾನೆ.

## ೩. ಅವತಾರ : ಮೂರ್ತೀಭವಿಸಿದ ಶಕ್ತಿ ಹಾಗೂ ಅನುಗ್ರಹ

ಈ ಸಾಧನೆಯಿಂದ ಅವತಾರವಪುರುಷನ ವ್ಯಕ್ತಿತ್ವದಲ್ಲಿ ಅದ್ಭುತವಾದ ಸತ್ವ ಮತ್ತ ಪರಹಿತ ಶಕ್ತಿಗಳು ಸಂಕುಚಿತವಾಗುತ್ತವೆ. ಇವೆಲ್ಲವೂ ಆತನ ದೇಹ ಮನಸ್ಸುಗಳ ಎಲ್ಲೆಯಲ್ಲಿಯೇ ರೂಪುಗೊಳ್ಳುತ್ತವೆ. ಅವನ ಪಾರ್ಥಿವ ಜೀವನವೂ ಮತ್ತು ಅವನ ಜೀವನಯಾತ್ರೆ, ಅದರ ಕಾಲ ಸಂಬಂಧಿಗಳಾದ ಇಷ್ಟು ವರ್ಷಗಳು ಎಂಬುದೂ, ದೇಶಸಂಬಂಧಿಗಳಾದ ಇಷ್ಟು ಎತ್ತರ ಇಷ್ಟು ಭಾರ ಎಂಬ ವಿಷಯಗಳೂ ಮತ್ತು ಸ್ಪಷ್ಟವಾಗಿ ಸೂತ್ರೀಕರಿಸಿ ಹೇಳಲಾರದಂತಹ ವ್ಯಕ್ತಿ ಸಂಬಂಧಿಗಳಾದ ಪ್ರೇಮ, ಜ್ಞಾನ ಇತ್ಯಾದಿಗಳೂ—ಇವೆಲ್ಲ ಅವನ ದೇಶಕಾಲಾತೀತವಾದ ಜೀವ ಮಹತ್ವವನ್ನು ಮುಚ್ಚಿಡುವ ಮಹಾ ಮೋಸದ ತೆರೆಗಳಾಗಿರುತ್ತವೆ. ಅಣುವನ್ನು ಭೇದಿಸುವ ಸೈಕ್ಲೋಟ್ರಾನ್‌ನಂತಿರುವ

ಅವನ ವ್ಯಕ್ತಿತ್ವದಿಂದ ಹೊರಡುವ ಶಕ್ತಿಯನ್ನು ಆ ವ್ಯಕ್ತಿತ್ವದ ಎತ್ತರ, ಭಾರಗಳಿಂದ ಅಳೆಯು ಹೊರಡುವದು ತಪ್ಪು. ಸಾಮಾನ್ಯ ಮಾನವನ ವಿಷಯದಲ್ಲಿಯೂ ಕೂಡ ಚರ್ಮವೇ ಅವನ ವ್ಯಕ್ತಿತ್ವದ ಎಲ್ಲೆಯೇನೂ ಅಲ್ಲ. ತ್ರಿಃಪ್ರಮಾಣ ಜಗತ್ತಿನಲ್ಲಿ ಚಿರಪರಿಚಿತವಾಗಿರುವ ಅವನ ಭೌತ ವ್ಯಕ್ತಿತ್ವವು ತ್ರಿಪ್ರಮಾಣ ಅಖಂಡ ದ್ರವ್ಯಕ್ಕಿಂತಲೂ ಹೆಚ್ಚಾದ ಬೌದ್ಧಿಕ ಮತ್ತು ಭಾವುಕವಾದ ವ್ಯಕ್ತಿತ್ವದಿಂದ ಆಚ್ಛಾದಿತವಾಗಿ ತುಂಬಿಕೊಂಡಿರುತ್ತದೆ. ಅವನ ಚಿತ್ತವೃತ್ತಿ-ಮನೋಭಾವಗಳೂ, ಆಸಕ್ತಿ-ಮನೋಭಾವಗಳೂ, ಸ್ವಲ್ಪದರಲ್ಲಿ ಹೇಳುವುದಾದರೆ ಅವನ ಬುದ್ಧಿ ಮನಸ್ಸುಗಳ ಸ್ಥಿತಿಯು ಅಭೌತಿಕ ಜಗತ್ತಿಗೆ ಸೇರಿದ ಮಹಾಸಮಷ್ಟಿಚೇತನದಲ್ಲಿ ಸಾಮಾನ್ಯ ಮಾನವನು ಒಂದು ಅಣುವಾಗಿರುವುದನ್ನು ವ್ಯಕ್ತಪಡಿಸುತ್ತದೆ.

ಅಸಮಗ್ರನಾಗಿ ಮತ್ತು ಸಜ್ಜಾಗದೆ ಇರುವ ಸಾಮಾನ್ಯ ಮನುಷ್ಯನು ಕೂಡ ತನ್ನ ಭೌತಿಕ ವ್ಯಕ್ತಿತ್ವಕ್ಕಿಂತ ಹಿರಿಯನಾಗಿರುವನೆಂದಾದರೆ ಜಗತ್ತೆಲ್ಲವೂ ತಮ್ಮ ನಾಯಕನೆಂದು ಕರೆಯುವ ಸಮಗ್ರ ಪಾತ್ರಗಳು ಇನ್ನೆಷ್ಟು ದೊಡ್ಡವಾಗಿರಬಹುದು. ಅವರಲ್ಲೆಲ್ಲಾ ಪರಿಪೂರ್ಣ ಸಮಗ್ರತೆಯನ್ನು ಪಡೆದು ಅವತಾರಪುರುಷರೆಂದು ಕರೆಸಿಕೊಳ್ಳುವ ಕೆಲವೇ ಜನರೋ ? ಮಾನವನು ಒಂದು ಜಗತ್ತಿನ ಜೀವಿಯಲ್ಲ, ಹಲವು ಜಗತ್ತುಗಳ ಜೀವಿ ; ಆ ಜಗತ್ತುಗಳ ಅನುಭವವು ಅವನ ಸುತ್ತಲೂ ಮತ್ತು ಅವನ ಒಳಗೂ ಪದರಪದರವಾಗಿ ಮಡಿಕೆ ಮಡಿಕೆಯಾಗಿ ತುಂಬಿಕೊಂಡಿರುತ್ತವೆ. ಅವನ ನಿಜ ಚೇತನಕ್ಕೆ ಅವೆಲ್ಲವುಗಳ ಸಂಬಂಧವೂ ಇದೆ. ಆದರೆ ಅವನ ಪ್ರಜ್ಞಾ ಚೇತನವು ಅವುಗಳಲ್ಲಿ ಒಂದೆರಡನ್ನು ಮಾತ್ರ ಅಭಿವ್ಯಕ್ತಮಾಡಬಲ್ಲದು. ಚೇತನ, ಪ್ರಜ್ಞೆಗಳು ಒಂದೇ ಅಲ್ಲ ; ಪ್ರಜ್ಞೆಯು ಚೇತನದ ಒಂದು ಅಂಶ ಮಾತ್ರ ; ಆದ್ದರಿಂದ ಪ್ರಜ್ಞಾಜೀವಿಯು ಕೇವಲ ಪರಿಮಿತವಾಗಿ, ಒಂದು ಎಲ್ಲೆಯೊಳಗೆ ಮಾತ್ರ ಮೇಲೆ ಮೇಲೆ ಕಾಣಿಸಿಕೊಳ್ಳುತ್ತದೆ. ತನ್ನ ಚೇತನದಿಂದ ಹೆಚ್ಚು ಹೆಚ್ಚು ಪ್ರಜ್ಞೆಯನ್ನು ಸಂಗ್ರಹಿಸುವ ಶಕ್ತಿಯಿಂದ ಒಂದು ವ್ಯಕ್ತಿತ್ವಕ್ಕೆ ಮಹತ್ವವೂ ಸಾಮರ್ಥ್ಯವೂ ಬರುತ್ತದೆ. ಹೀಗೆ, ಪ್ರಜ್ಞೆ ಬೆಳೆದಷ್ಟೂ ವ್ಯಕ್ತಿತ್ವ ಶ್ರೀಮಂತವಾಗುತ್ತದೆ. ಪ್ರಜ್ಞೆಯು ಚೇತನದೊಡನೆ ಸಮವ್ಯಾಪಕವಾಗಿ ಅದರೊಡನೆ ಒಂದಾದಾಗ ವ್ಯಕ್ತಿತ್ವದ ವಿಕಾಸ ಮಹೋನ್ನತವಾಗುತ್ತದೆ. ಇದೇ ಚೇತನದ ಪರಿಪೂರ್ಣ ಸಾಧನೆ, ವ್ಯಕ್ತಿತ್ವದ ವಿಕಸನ, ಪಾತ್ರದ ಪರಿಪೂರ್ಣ ಸಮಗ್ರತೆ. ಆದ್ದರಿಂದ ತಾತ್ವಿಕವಾಗಿ ಹೇಳುವುದಾದರೆ ವ್ಯಕ್ತಿತ್ವದ ಸೈಕ್ಲೋಟ್ರಾನ್‌ನಿಂದ ಉದಿಸಿ ಬಂದ ಇಂತಹ ಶಕ್ತಿಯು ವ್ಯಾಪ್ತಿಯಲ್ಲಿಯೂ ಸಾಮರ್ಥ್ಯದಲ್ಲಿಯೂ ಅಪಾರವಾದುದಾಗಿರಬೇಕು.

## ೪. ಮಾನವಶಕ್ತಿ ಸಂಪನ್ಮೂಲದಲ್ಲಿ ಪ್ರಮಾಣ ಹಾಗೂ ಗುಣಮಟ್ಟ

ಒಬ್ಬ ಸಾಮಾನ್ಯ ವ್ಯಕ್ತಿಯು ಅತ್ಯಂತ ಕೆಳಮಟ್ಟದ ಚೇತನವಾಗಿದ್ದುಕೊಂಡು ಜೀವಿಸುತ್ತಿದ್ದರೆ, ಅವನ ವ್ಯಕ್ತ ಶಕ್ತಿ ಅತ್ಯಂತ ಪರಿಮಿತವಾಗಿದ್ದು ಅವ್ಯಕ್ತ ಶಕ್ತಿಯು ಅವನೊಳಗೆ ಅಪಾರವಾಗಿ ಸೇರಿಕೊಂಡಿದೆ ಎಂದು ನಾವು ಭಾವಿಸಬಹುದು. ಈಗ ಅವನಲ್ಲಿರುವ ಶಕ್ತಿಯು ಬಹುಮಟ್ಟಿಗೆ ಅವನ ಮಾಂಸಖಂಡಗಳಲ್ಲಿ ನಡೆದ ರಾಸಾಯನಿಕ ಸಂಯೋಗದಿಂದಲೂ, ಕೊಂಚಮಟ್ಟಿಗೆ ಗೂಢವಾದ ಮಾನಸಿಕ ಸಂಯೋಗದಿಂದಲೂ ಹುಟ್ಟಿದುದೆಂದು ಹೇಳಬಹುದು. ಅದೇ ಮನುಷ್ಯನೇ ನಾಯಕನಾದಾಗ ಅವನ ವ್ಯಕ್ತಿತ್ವದಲ್ಲಿ ಮಹತ್ತಾದ ಶಕ್ತಿ ಸಂಚಾರವಾಗುತ್ತದೆ. ಆದರೆ ಅವನ ಮಾಂಸಖಂಡಗಳಲ್ಲಿ ರಾಸಾಯನಿಕ ಸಂಯೋಗ ಕ್ರಿಯೆ ಅಷ್ಟೇನೂ ಹೆಚ್ಚು ಪ್ರಮಾಣದಲ್ಲಿ ಆಗಿಲ್ಲದಿರಬಹುದು, ಅಲ್ಲ ಅಲ್ಲ, ನಿರ್ದಿಷ್ಟವಾದ ಕೆಲವು ರೀತಿಯಲ್ಲಿ ಅದರ ಮೌಲ್ಯ ಕೆಳಕ್ಕಿಳಿದು ಅದಕ್ಕೆ ಸಮನಾಗುವಷ್ಟು ಮನೋವಲಯದಲ್ಲಿ ಹೆಚ್ಚಾಗಿರಬಹುದು. ಹೀಗೆ ಶಕ್ತಿಸಂಚಾರದ ಪ್ರಮಾಣವು ಶಕ್ತಿಮೂಲದ ಗುಣವನ್ನು ಅವಲಂಬಿಸುತ್ತದೆ. ಸುಕ್ಷ್ಮಾತಿಸೂಕ್ಷ್ಮವಾದ ಶಕ್ತ್ಯಾದಿ ಮೂಲದೊಡನೆ

ನಾವು ಕಾರ್ಯಪ್ರವೃತ್ತರಾದಷ್ಟೂ ಶಕ್ತಿಸಂಚಾರದ ಪ್ರಮಾಣ ಮತ್ತು ಶಕ್ತಿಮೂಲದ ಪ್ರಮಾಣಗಳಿಗೆ ಅರ್ಥಾರ್ಥ ಸಂಬಂಧವಿಲ್ಲದಂತಾಗುತ್ತದೆ. ಮಾಂಸಖಂಡಗಳಿಗೆ ಇಂಧನವನ್ನು ಒದಗಿಸಲು ಅಗತ್ಯವಾದ ಆಹಾರ ಪ್ರಮಾಣವು ನರಗಳಿಗೂ ಮನಸ್ಸಿಗೂ ಅಗತ್ಯವಾಗಿರುವುದಕ್ಕಿಂತ ಯಾವಾಗಲೂ ಹೆಚ್ಚಾಗಿರುತ್ತದೆ. ನರ ಮತ್ತು ಮನಸ್ಸುಗಳ ಶಕ್ತಿಮೂಲ ಉಚ್ಚತರ ಗುಣವುಳ್ಳದ್ದು. ಶಕ್ತಿಮೂಲದ ಪ್ರಮಾಣಕ್ಕೆ ಹೋಲಿಸಿದರೆ ಶಕ್ತಿ ಸಂಚಾರ ಹೆಚ್ಚಾಗಿರುತ್ತದೆ. ಸಾಮಾನ್ಯ ಪಚನ ಕ್ರಿಯೆಯು ಒಂದು ರಾಸಾಯನಿಕ ಸಂಯೋಗಕ್ರಿಯೆ. ಮಾನಸಿಕ ಪಚನಕ್ರಿಯೆ ಇನ್ನೂ ಉನ್ನತ ಮಟ್ಟದಲ್ಲಿ ನಡೆಯ ತಕ್ಕದ್ದು. ಅದಕ್ಕೂ ದೈಹಿಕ ಪಚನಕ್ಕೂ ಇರುವ ಸಂಬಂಧವು ವಿದ್ಯುತ್ ಸಂಚರಣೆಗೂ ರಾಸಾಯನಿಕ ಶಕ್ತಿ ಸಂಚರಣೆಗೂ ಇರುವಂತಹುದು. ಇನ್ನೂ ಉನ್ನತವಾದ ಮೂರನೆಯ ಪಚನಕ್ರಿಯೆಯೂ ಒಂದುಂಟು. ಅದು ಆಧ್ಯಾತ್ಮಿಕ ಪಚನಕ್ರಿಯೆ. ಅದರಲ್ಲಿ ಆದರ್ಶಗಳೂ ಮೌಲ್ಯಗಳೂ ಸಮರಸವಾಗಿ ಬೆರೆತು ಹೋಗುತ್ತವೆ. ಇದರಿಂದ ಮಾನವನು ಆ ಮಾತಿನ ಸಂಪೂರ್ಣ ಅರ್ಥದಲ್ಲಿ ಮೂರ್ತಿ ಮತ್ತಾದ ಮೌಲ್ಯವಾಗುತ್ತಾನೆ ಅಥವಾ ಮೂರ್ತಿಮತ್ತಾದ ಆದರ್ಶವಾಗುತ್ತಾನೆ. ಅಣುವಿಜ್ಞಾನದ ಬೆಳವಣಿಗೆಯಿಂದ ಭೌತ ಜಗತ್ತಿನಲ್ಲಿ ಶಕ್ತಿಯ ಹೊಸದೊಂದು ಮೂಲ ಮಾನವನಿಗೆ ಗೊತ್ತಾದಂತಾಗಿದೆ. ಅದೇ ಅಣು ಕೇಂದ್ರ. ಅದನ್ನು ಒಡೆಯುವುದರಿಂದ ಹಾಗೆಯೇ ಐಕ್ಯಗೊಳಿಸುವುದ ರಿಂದ ಉದಿಸಿ ಬರುವ ಶಕ್ತಿಯ ಮೌಲ್ಯ ಪ್ರಮಾಣಕ್ಕೂ, ಅದರ ಸೂಕ್ಷ್ಮಾತಿಸೂಕ್ಷ್ಮ ಶಕ್ತಿ ಮೂಲ ಪ್ರಮಾಣಕ್ಕೂ ಅರ್ಥಾರ್ಥ ಸಂಬಂಧವಿಲ್ಲ. ಪರಿಮಾಣವನ್ನು ಗುಣಕ್ಕೆ ರೂಪಾಂತರಿಸುವ ಕಾರ್ಯ ಇಲ್ಲಿ ಪರಿಪೂರ್ಣವಾಗಿದೆ. ಅಣುಶಕ್ತಿಗೆ ಐನ್‌ಸ್ಟೀನನು ನೀಡಿರುವ ಸಂಕೇತ ಸೂತ್ರ $E = MC^2$ವನ್ನು ನಿಶ್ಶೇಷ ಸ್ಥಿತಿ ಎಂದು—ಭೌತ ಜಗತ್ತಿನಲ್ಲಿ ವಸ್ತುಸ್ಥಿತಿಯು ಶಕ್ತಿಸ್ಥಿತಿಯಾಗಿ ಸಂಪೂರ್ಣ ಪರಿವರ್ತನೆ ಯಾಗುವ ಸ್ಥಿತಿ ಎಂದು ತಿಳಿದುಕೊಳ್ಳಬಹುದು.

ಮೇಲಿನ ಪರ್ಯಾಲೋಚನೆಗಳು ಮಾನವನಲ್ಲಿರುವ ಶಕ್ತಿಯ ಸ್ವರೂಪ ಮತ್ತು ಮೂಲ ಗಳನ್ನೂ, ಅವುಗಳ ತರತಮ ಭೇದ ಮತ್ತು ವೈವಿಧ್ಯಗಳನ್ನೂ ಸ್ಪಷ್ಟವಾದ ಯಥಾಸ್ಥಿತಿಯ ದೃಷ್ಟಿಯಲ್ಲಿ ಸ್ಥಾಪಿಸಲು ಸಹಾಯಕವಾಗುತ್ತವೆ. ಪ್ರತಿಯೊಬ್ಬ ವ್ಯಕ್ತಿಯೂ ಅಪಾರ ಶಕ್ತಿಯ ಅವ್ಯಕ್ತ ಕೇಂದ್ರವೆಂದು ವೇದಾಂತ ಹೇಳುವುದು ಒಂದು ಆಶಾಜನಕವಾದ ಸಂದೇಶವನ್ನೊಳಗೊಂಡ ಸ್ಥಿಮಿತ ಸತ್ಯವೆಂದು ನಮಗೆ ಭಾಸವಾಗುತ್ತದೆ. ಮಾನವ ಮಾನವನಿಗೆ ವ್ಯತ್ಯಾಸವಿರುವುದು ಅವನಿರುವ ಸ್ಥಿತಿಯಲ್ಲಲ್ಲ; ಅವನಿಗಿರುವ ಯೋಗ್ಯತೆಯಲ್ಲಿ, ಅವನ ಅಭಿವ್ಯಕ್ತಿಯಲ್ಲಿ. ದಡ್ಡನ ದಡ್ಡತನವೂ, ಕುಶಲನ ಕೌಶಲವೂ ಅವುಗಳನ್ನು ಕೆರಳಿಸುವ ಶಕ್ತಿಮೂಲಗಳಲ್ಲಿರುವ ವ್ಯತ್ಯಾಸದಿಂದ ಬಂದ ಅಭಿವ್ಯಕ್ತತೆಯ ವ್ಯತ್ಯಾಸಗಳು ಮಾತ್ರ. ಈ ಶಕ್ತಿ ಮೂಲಗಳು ಭೌತವಸ್ತುಗಳಲ್ಲಿ ಹೇಗೋ ಹಾಗೆ ಮಾನವನ ವಿಚಾರದಲ್ಲಿಯೂ ಉತ್ಕೃಷ್ಟ ಮತ್ತು ಸೂಕ್ಷ್ಮ, ಅಂತರದೃಷ್ಟಿ ಮತ್ತು ಪರಿಶುದ್ಧತೆ ಇವುಗಳ ಏರಿಕೆಯ ಶ್ರೇಣಿಯಲ್ಲಿರು ತ್ತವೆ ; ಅವು ದೇಹ ಮತ್ತು ಅದರ ಪರಿಸರಗಳಿಂದ ಹಿಡಿದು ಚೇತನದ ಕೇಂದ್ರ ಅಥವಾ ಜೀವಕಣ, ಆತ್ಮ ಅಥವಾ ಮಾನವನ ಯಥಾರ್ಥ ಸ್ವರೂಪ, ಎಲ್ಲ ಸೂಕ್ಷ್ಮತೆ, ಉತ್ಕೃಷ್ಟತೆ ಮತ್ತು ಅಂತರ್‌ದೃಷ್ಟಿ ಗಳ ಅಂತಿಮ ಮೌಲ್ಯಗಳೊಡನೆ ಕೊನೆಯಾಗುತ್ತದೆ. ಶಂಕರರು ತಮ್ಮ ಕಠೋಪನಿಷತ್ತಿನ ವ್ಯಾಖ್ಯಾನದಲ್ಲಿ ಹೇಳಿರುವಂತೆ (III-೧೧) :

*ಆತ್ಮವು ಶುದ್ಧ ಜ್ಞಾನದ ರಾಶಿ, ಅದಕ್ಕಿಂತಲೂ ಶ್ರೇಷ್ಠವಾದ ಸತ್ಯವಸ್ತು ಇಲ್ಲ ; ಆದ್ದರಿಂದ ಆತ್ಮವೆಂಬುದು ಎಲ್ಲ ಮಟ್ಟದ ಸೂಕ್ಷ್ಮತೆ, ಮಹತ್ತು ಮತ್ತು ಅಂತಃಶಕ್ತಿಗಳ ಮೂಲ, ಪರಾಕಾಷ್ಠತೆ.*

## ೫. ಅನುಭವದ ಕೇಂದ್ರ ಹಾಗೂ ಸೃಷ್ಟಿಯ ಕೇಂದ್ರ

ಚೇತನ ಕೇಂದ್ರವು ನಕ್ಷತ್ರಖಚಿತವಾದ ಬಾಹ್ಯ ಜಗತ್ತಿನ ಆಕಾಶದಲ್ಲಾಗಲೀ, ಮಂಜು ಮಂಜಾದ

ಪ್ರಾಚೀನ ಅಥವಾ ಭವಿಷ್ಯತ್ತಿನ ಕಾಲದಲ್ಲಾಗಲೀ ಇದೆ ಎಂದು ಹುಡುಕಹೊರಡುವುದು ನಿಷ್ಫಲವಾದ ಕಾರ್ಯವೆಂದು ವೇದಾಂತ ತಿಳಿಸುತ್ತದೆ. ಕಾಲ ಮತ್ತು ದೇಶಗಳನ್ನು ಬೆಸೆದು, ಕಾಲದೇಶೈಕ್ಯ ವಾಗುವಂತೆ ಮಾಡಿ ಸೃಷ್ಟಿಯನ್ನೂ ಅದರಲ್ಲಿನ ಪ್ರತಿಯೊಂದನ್ನು ಆ ಕಾಲದೇಶದ ಘಟನೆ ಎಂದೋ ರೂಪವೆಂದೋ ಹೇಳುವ ಒಂದು ವಿಜ್ಞಾನದ ಅಭಿಪ್ರಾಯವೂ ಶುದ್ಧ ಅರ್ಥವಿಹೀನವಾದ ಸಾಹಸದ ನುಡಿಯೆಂದು ಕಾಣುತ್ತದೆ. ವೇದಾಂತದ ಪ್ರಕಾರ ಅನುಭವದ ಕೇಂದ್ರವು ಭೌತಿಕ ಮತ್ತು ಅಭೌತಿಕ ಸೃಷ್ಟಿಯ ಕೇಂದ್ರವೇ ಆಗಿದೆ ; ಈ ಅತ್ಯಂತ ಶ್ರೇಷ್ಠವಾದ ಕೇಂದ್ರವೇ ಮನುಷ್ಯನ ನಿಜವಾದ ಆತ್ಮ. ಪ್ರಕೃತಿ ಪುರುಷರಿಂದ ಕೂಡಿ ಸದಾ ಪರಿವರ್ತನಾಶೀಲವಾಗಿರುವ ವಿಶ್ವದಲ್ಲಿ ಈ ಆತ್ಮವು ಸ್ಥಿರ ಮೂಲವಾದುದು. ಕಾರಣಾತೀತವಾದ್ದರಿಂದ ಇದು ಕಾಲಾತೀತವಾದುದೂ ಆಗಿದೆ ; ಇದು ದೇಶ-ಕಾಲ ಘಟನೆಗಳಿಗೆ ಸಾಕ್ಷೀಭೂತವಾದುದು ; ಅದರ ಮೌನದ ಅಗಾಧ ರೂಪದಲ್ಲಿ ಕಾಲ-ದೇಶ ಮತ್ತು ಅದರ ಸಾಕ್ಷಿಗಳೂ, ದ್ರವ್ಯ ಮತ್ತು ಕರ್ತೃಗಳೂ, ಅನಾತ್ಮ ಮತ್ತು ಆತ್ಮಗಳೂ ಎಂಬ ವ್ಯತ್ಯಾಸಗಳು ಅಖಂಡ ಅದ್ವೈತವೆಂಬ ಅಂತಿಮ ಸತ್ಯದಲ್ಲಿ ಅತೀತವಾಗಿ ಹೋಗುತ್ತವೆ. ಈ ಉಜ್ವಲ ಸತ್ಯದ ವೈಭವವನ್ನು ಭಾಗವತವು ಸ್ಮರಣೀಯವಾದ ಈ ಮಾತುಗಳಲ್ಲಿ (VIII-೩-೩) ಹಾಡುತ್ತದೆ :

ಯಸ್ಮಿನ್ ಇದಂ ಯತಶ್ಚೇದಂ ಯೇನೇದಂ ಯಂ ಇದಂ ಸ್ವಯಮ್ ;
ಯೋ ಅಸ್ಮಾತ್ ಪರಸ್ಮಾತ್ ಚ ಪರಃ ತಂ ಪ್ರಪದ್ಯೇ ಸ್ವಯಂಭುವಮ್—

*ಈ ಜಗತ್ತು ಯಾರಲ್ಲಿದೆಯೋ, ಈ ಜಗತ್ತು ಯಾರಿಂದ ಬಂದಿತೋ, ಯಾರಿಂದ ಈ ಜಗತ್ತು ನಿಂತಿದೆಯೋ, ತಾನೇ ಯಾರು ಈ ಜಗತ್ತಾಗಿದ್ದಾನೆಯೋ, ಯಾರು ಪರಿಚಿತವಾದ ಕಾರ್ಯಜಗತ್ತಿಗೂ ಮತ್ತು ಪರಿಚಿತವಾದ ಕಾರಣ ಜಗತ್ತಿಗೂ ಅತೀತನಾಗಿದ್ದಾನೆಯೋ ಅಂತಹ ಸ್ವಯಂಭುವಿನಲ್ಲಿ ನಾನು ಶರಣಾಗುತ್ತೇನೆ.*

### ೬. ಅವತಾರಪುರುಷನ ದಿವ್ಯತೆ

ಅವತಾರಿಯು ತನ್ನ ಪ್ರಜ್ಞೆಯಲ್ಲಿ ವಿಲೀನಗೊಳಿಸಿಕೊಳ್ಳುವುದು ಈ ಸತ್ಯವನ್ನೇ. ಈ ಸತ್‌ಸ್ವರೂಪವು ಮೂರು ಅಥವಾ ನಾಲ್ಕು ಆಯಾಮಗಳ ಭೌತವಿಶ್ವದ ಕೇಂದ್ರ ಮಾತ್ರವಲ್ಲ, ಸಮಸ್ತ ಅನುಭವ ಜಗತ್ತಿನ ಕೇಂದ್ರವೂ ಅದೇ. ಅದನ್ನು ಹೀಗೆ ವಿವರಿಸಬಹುದು : ಒಂದೊಂದೂ ಅನಂತತೆಯ ಮೌಲ್ಯವುಳ್ಳ ಬಹು-ಆಯಾಮಗಳ ವಿಶ್ವದ ಆಯಾಮ ರಹಿತ ಕೇಂದ್ರ. ಈ ಅ-ದ್ವಯ ಸತ್ಯದ ಸ್ವರೂಪವನ್ನು ವೇದದ ಒಂದು ಮಂತ್ರವು (ಬೃದಾರಣ್ಯಕ ಉಪನಿಷತ್ತು V. 11) ಹೀಗೆ ಸೂಚಿಸಿದೆ. ಅದು ಕಾರಣವೂ ಸೇರಿದಂತೆ ಎಲ್ಲ ಸಂಬಂಧಗಳ ವ್ಯಾಪ್ತಿಯನ್ನೂ ಮೀರಿದ್ದು, ತನ್ನನ್ನು ಹಿಡಿದಿಡುವ ಎಲ್ಲ ಚಿಂತನೆ ಮತ್ತು ಮಾತನ್ನೂ ಮೀರಿದ್ದು. ಮಂತ್ರ ಹೀಗಿದೆ :

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ;
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾಶಿಷ್ಯತೇ—

*ಸತ್ಯವು ಅನಂತ (ಪೂರ್ಣ) ; ಈ ವಿಶ್ವವು ಅನಂತ (ಪೂರ್ಣ) ; ಅನಂತದಿಂದ ಅನಂತವು ಬಂದಿದೆ. ಅನಂತದಿಂದ ಅನಂತವನ್ನು ತೆಗೆದುಹಾಕಿದರೆ ಉಳಿಯುವುದು ಅನಂತವೇ.*

ಅವತಾರಪುರುಷನ ಅತ್ಯಂತ ಸೂಕ್ಷ್ಮವಾದ ಭೌತಿಕ ಮತ್ತು ಮಾನಸಿಕ ವ್ಯಕ್ತಿತ್ವದಲ್ಲಿ ವ್ಯಾಪಿಸಿ ಪ್ರಕಾಶಿಸುತ್ತಿರುವುದು ಈ ಸತ್ಯವೇ. ಆತನಿಗೆ ವಿಶ್ವದಲ್ಲಿರುವ ಯಾವುದೂ ಅಗೋಚರವಲ್ಲ. ಮಹತ್ತಾದ ಆತನ ಜ್ಞಾನದ ಸ್ಪಂದನ ತರಂಗಗಳು ಜಗತ್ತಿನ ಭೌತಿಕ ಬಾಹ್ಯಾಂತರಗಳನ್ನು ಮಾತ್ರವೇ ಅಲ್ಲ ಅದರ ಅಂತರಂಗ ಮತ್ತು ರಹಸ್ಯಗಳನ್ನು ಕೂಡ ತೂರಿಹೋಗಬಲ್ಲದು. ಮಹತ್ ರೀತಿಯ

ಈ ಜ್ಞಾನಸ್ವರೂಪವನ್ನು ಮಾಂಡೂಕ್ಯಕಾರಿಕೆಯು ತನ್ನ ಒಂದು ಸೊಗಸಾದ ಶ್ಲೋಕದಲ್ಲಿ ಹೀಗೆ ವಿವರಿಸುತ್ತದೆ (IV-೧) :

ಜ್ಞಾನೇನಾಕಾಶ ಕಲ್ಪೇನ ಧರ್ಮಾನ್ ಯೋ ಗಗನೋಪಮಾನ್ ;
ಜ್ಞೇಯಾಭಿನ್ನೇನ ಸಂಬುದ್ಧಃ ತಂ ವಂದೇ ದ್ವಿಪದಾಂ ವರಮ್—

*ಅಪರಿಮಿತಸ್ವರೂಪವುಳ್ಳದ್ದೂ, ಜ್ಞೇಯದಿಂದ ಭಿನ್ನವಲ್ಲದುದೂ ಆದ ತನ್ನ ಜ್ಞಾನದ ಮೂಲಕ ಅಪಾರವಾಗಿರುವ ಧರ್ಮಗಳನ್ನು ಸಾಧಿಸುವ ಮಾನವಾಗ್ರಣಿಗೆ ನಾನು ನಮಸ್ಕರಿಸುತ್ತೇನೆ.*

## ೭. ಭೌತಿಕಶಕ್ತಿಗೆ ಪ್ರತಿವಾದಿಯಾಗಿ ಆಧ್ಯಾತ್ಮಿಕ ಶಕ್ತಿ

ಒಂದು ಸೈಕ್ಲೋಟ್ರಾನ್‌ನಿಂದ ಬಿಡುಗಡೆಯಾದ ಪರಮಾಣು ಶಕ್ತಿಯು ಜಗತ್ತಿನಲ್ಲಿ ಈಗ ಬಳಕೆಯಲ್ಲಿರುವ ನಿರ್ದಿಷ್ಟ ಶಕ್ತಿಗಳೊಡನೆ ತುಲನೆ ಮಾಡಿದಾಗ, ಅದು ಬಹು ಅಪಾರವಾದುದು ; ಆದರೆ ಅವತಾರ ಪುರುಷನು ತನ್ನ ಅಂತರಂಗದಲ್ಲಿ ನಿರ್ಮಿಸುವ ಅಪಾರ ಶಕ್ತಿಯ ಮುಂದೆ ವಿಸ್ತಾರದಲ್ಲಿಯಾಗಲೀ ಸಾಮರ್ಥ್ಯದಲ್ಲಿಯಾಗಲೀ ಅದು ಅತ್ಯಲ್ಪವೆನಿಸುತ್ತದೆ. ಇಜ್ಜಲು ಒಲೆಯು ವಿದ್ಯುತ್ತಿನ ಒಲೆಯ ಮುಂದೆ, ಅವೆರಡೂ ಅಣುಶಕ್ತಿಯ ಕುಲುಮೆಯ ಮುಂದೆ ತುಚ್ಛವೆನಿಸುವಂತೆ, ಒಬ್ಬ ಸಾಮಾನ್ಯ ಮನುಷ್ಯನು ಒಬ್ಬ ನಾಯಕಪುರುಷನ ಮುಂದೆ, ಅವರಿಬ್ಬರೂ ಅವತಾರಪುರುಷನ ಸಾನ್ನಿಧ್ಯದಲ್ಲಿ ತುಚ್ಛರಾಗುತ್ತಾರೆ. ಅವತಾರಪುರುಷನ ಮಾನವ ಪ್ರೇಮ ಮತ್ತು ಉದ್ಧಾರದ ಅಸಾಧಾರಣ ಶಕ್ತಿಯನ್ನು ಕಂಡ ಜನ ಆತನನ್ನು ಅಚ್ಚರಿಯಿಂದಲೂ ಭಕ್ತಿಯಿಂದಲೂ ಕಾಣುತ್ತಾರೆ. ಆತನ ಈ ಅದ್ಭುತ ಶಕ್ತಿಯ ಸ್ವರೂಪ ಮತ್ತು ವ್ಯಾಪ್ತಿಗಳು ವಿಜ್ಞಾನದಿಂದ ಸಾಧಿತವಾಗಿರುವ ಅಣುಶಕ್ತಿ ಮತ್ತಿತರ ಶಕ್ತಿಗಳಿಂದ ಭಿನ್ನವಾದುದು ; ಈ ಶಕ್ತಿಗಳು ಕೈಗಾರಿಕೆಗಳ ಒಂದು ಪರಂಪರೆಯನ್ನೇ ನಿರ್ಮಿಸಬಹುದು ಅಥವಾ ಒಂದು ಪಟ್ಟಣವನ್ನೇ ಧ್ವಂಸಮಾಡಬಹುದು ; ಆದರೆ ಶಕ್ತಿಯನ್ನು ಸೃಷ್ಟಿಸಿ, ಅದನ್ನು ಉಪಯೋಗಿಸುವ ಅಥವಾ ದುರುಪಯೋಗಪಡಿಸುವ ವಿತರಣ ಶಕ್ತಿಯುಳ್ಳ ಮನಸ್ಸು ಮತ್ತು ಹೃದಯಗಳ ಸೂಕ್ಷ್ಮ ಯಥಾರ್ಥತೆಯ ಎದುರಿನಲ್ಲಿ ಅದು ನಿಷ್ಪ್ರಯೋಜಕವಾದುದು. ಅಣುಶಕ್ತಿ ಅಥವಾ ಅದಕ್ಕಿಂತಲೂ ಅತ್ಯಂತ ಕಡಿಮೆ ಶಕ್ತಿ ಕೂಡ ಅವತಾರಪುರುಷನ ಭೌತಿಕಾಕೃತಿಯನ್ನು ನಾಶಮಾಡಬಹುದೆಂಬುದು ನಿಸ್ಸಂದೇಹ ; ಆದರೆ ಅದು ಅವನ ಚೈತನ್ಯದ ಅತ್ಯಂತ ಕನಿಷ್ಠಾಂಶ. ಆತನ ಶಕ್ತಿಯಾದರೋ ಜಗತ್ತಿನ ಅಣುಶಕ್ತಿ ಮತ್ತು ಇತರ ಶಕ್ತಿಗಳನ್ನು ಉತ್ಪಾದಿಸಿ ಅದನ್ನು ಅಂಕೆಯಲ್ಲಿಟ್ಟುಕೊಂಡಿರುವ ಮಾನವನ ಮನಸ್ಸು ಮತ್ತು ಹೃಯಗಳನ್ನೇ ಪ್ರವೇಶಿಸಿ ಅವುಗಳನ್ನು ಅಂಕೆಯಲ್ಲಿಟ್ಟುಕೊಳ್ಳಬಲ್ಲುದು. ಅದು ಮಾನವ ಹೃದಯದ ಅಜ್ಞಾನ, ಕೊಳಕು, ರಾಗ ದ್ವೇಷಗಳನ್ನು ಸುಟ್ಟು, ಮಾನವನಿಗೆ ಸಮಗ್ರವೂ ಉದಾರವೂ ಆದ ಜೀವನವನ್ನು ಕರುಣಿಸಬಲ್ಲ ಶಕ್ತಿಯನ್ನೊಳಗೊಂಡಿದೆ. ಅಂತರಂಗವನ್ನು ಭೇದಿಸಿಕೊಂಡು ಹೋಗಿ, ಶಾಂತಿಯನ್ನು ನೀಡಬಲ್ಲ ಅದರ ಶಕ್ತಿಯನ್ನು ಅಣುಶಕ್ತಿ ಮತ್ತಿತರ ಶಕ್ತಿಗಳೊಡನೆ ಹೋಲಿಸಿದರೆ ಅದರ ಮಹತ್ತು ಸ್ಪಷ್ಟವಾಗುತ್ತದೆ. ಈ ಶಕ್ತಿ ಮಹತ್ತಾದುದಾದರೂ ಪ್ರಶಾಂತವಾದುದು, ಸೌಮ್ಯವಾದುದು, ಲೋಕಕಲ್ಯಾಣಕಾರಕವಾದುದು. ಶ್ರೀರಾಮಕೃಷ್ಣರ ಮಾತಿನಲ್ಲಿ ಹೇಳುವುದಾದರೆ 'ಹೊಳೆಯುವ ರತ್ನದಂತೆ ಶಾಖವಿಲ್ಲದ ಬೆಳಕನ್ನು' ಪ್ರಸಾರ ಮಾಡುತ್ತದೆ. ಅವತಾರಪುರುಷನ ಹೃದಯವು ನಿಜವಾಗಿಯೂ ಅತ್ಯದ್ಭುತವಾದುದು ; ಸೂಕ್ಷ್ಮವೂ ಜಟಿಲವೂ ಆದ ಅದರ ಯಂತ್ರಸಂಯೋಜನೆ ಸುಡುವ ತಾಪವನ್ನು ಪ್ರಶಾಂತವಾದ ಬೆಳಕನ್ನಾಗಿಯೂ, ದುಃಖ ಸಂಕಟಗಳನ್ನು ಸುಖಸಂತೋಷಗಳನ್ನಾಗಿಯೂ, ಮನೋವಿಕಾರವನ್ನು ವಿಕಾರರಹಿತವಾದುದನ್ನಾಗಿಯೂ, ದ್ವೇಷವನ್ನು ಪ್ರೇಮ

ವನ್ನಾಗಿಯೂ, ಕಂಪನಗೊಳಿಸುವ ನಿರಾಶೆಯ ಬಿರುಗಾಳಿಯನ್ನು ಭರವಸೆಯ ಮಂದಮಾರುತ ವನ್ನಾಗಿಯೂ ಮತ್ತು ಮೃತ್ಯುಕಾರಕ ವಿಷವನ್ನು ಅಮರತೆಯನ್ನು ನೀಡುವ ಅಮೃತವನ್ನಾಗಿಯೂ ರೂಪಾಂತರಿಸಬಲ್ಲದು.

## ೮. ಅವತಾರ : ಮಾನವಾಗ್ರಣಿಯಾಗಿ

ಭಾರತದ ಆಧ್ಯಾತ್ಮಿಕ ಚಿಂತನೆಯಲ್ಲಿ ಅವತಾರವೆಂಬುದರ ಕಲ್ಪನೆ ಇದು ; ಆತನು, ಮೇಲೆ ಹೇಳಿದ ಮಾಂಡೂಕ್ಯಕಾರಿಕೆಯ ಮಾತುಗಳಲ್ಲಿ ಹೇಳುವುದಾದರೆ 'ದ್ವಿಪದಾಂ ವರಮ್'—ಮಾನವ ವರ್ಗಕ್ಕೆ ಸೇರಿದವರಲ್ಲಿ ಅತ್ಯುತ್ತಮನಾದವನು, ಅತ್ಯುಚ್ಚನಾದವನು. ಅವತಾರ ಎಂಬ ಮಾತು ಜ್ಞಾನ, ಶಕ್ತಿ, ಲೋಕಕಲ್ಯಾಣಗಳು ಏಕತ್ರ ಸೇರಿಕೊಂಡಿರುವ ವ್ಯಕ್ತಿತ್ವವನ್ನು ನಿರ್ದೇಶಿಸುತ್ತವೆ. ಅದರಲ್ಲಿ ಕಣ್ಣಿಗೆ ಕಾಣುವ ಭಾಗವಾದ ಅವನ ಭೌತಿಕ ಜೀವನ ಹಾಗೂ ಅದರ ಆವರಣಗಳು ಸೈಕ್ಲೋಟ್ರನ್‌ನಲ್ಲಿ ಹೇಗೋ ಹಾಗೆ ಒಳಹುರುಳಿನ ಪರಿಮಾಣವನ್ನು ಮರೆಮಾಡಿರುವ ಮಹಾಕಪಟದ ತೆರೆಗಳಾಗಿವೆ. ಅದ್ಭುತ ಶಕ್ತಿಯ ವ್ಯಕ್ತಿಯೊಬ್ಬನಲ್ಲಿ ಲೋಕಕಲ್ಯಾಣಕಾರಕವಾದ ಶಕ್ತಿಯು ಅಕಸ್ಮಾತ್ತಾಗಿ ಕೇಂದ್ರೀಕೃತ ವಾಗುವುದಕ್ಕೆ ಒಂದೇ ಒಂದು ಐತಿಹಾಸಿಕ ಉದ್ದೇಶವಿದೆ—ಮಾನವ ಜನಾಂಗದ ಧಾರ್ಮಿಕ ವಿಕಾಸ ವನ್ನು ವೇಗವಾಗಿ ಮುಂದುವರಿಸುವುದು. ತಾನು ಕೂಡಿಹಾಕಿದುದನ್ನು ಆತ ಹಂಚಿಬಿಡುತ್ತಾನೆ ; ಆಗ ಮಾನವರ ವ್ಯವಹಾರದಲ್ಲಿ ಒಂದು ಉಬ್ಬರವೇಳುತ್ತದೆ. ಆಗ ಅದಕ್ಕಾಗಿಯೇ ಸಿದ್ಧವಾಗಿ ಕಾದಿರುವ ಧಾರ್ಮಿಕ ಶೀಘ್ರಗ್ರಾಹಿಗಳು ಆ ಉಬ್ಬರದ ಪ್ರವಾಹವನ್ನು ಸ್ವೀಕರಿಸಿ, ಆಧ್ಯಾತ್ಮಿಕವಾಗಿ ಮುಂದುವರೆಯುತ್ತಾರೆ; ಉಳಿದವರೆಲ್ಲಾ ಅಲ್ಪ ಸ್ವಲ್ಪ ಪರೋಕ್ಷವಾಗಿ ಅದನ್ನು ಸ್ವೀಕರಿಸುತ್ತಾರೆಯೇ ಹೊರತು ಅವರು ನಿರ್ಬಾಧಿತರಾಗಿ ಉಳಿಯುತ್ತಾರೆ. ಅವತಾರಪುರುಷನು ನಡತೆ ಮತ್ತು ಧರ್ಮ ಪ್ರಜ್ಞೆಗಳ ದೊಡ್ಡ ತೆರೆಯೊಂದನ್ನು ಮಾನವ ಜನಾಂಗಕ್ಕೆ ಸಂಪಾದಿಸಿಕೊಟ್ಟವನಾಗುತ್ತಾನೆ; ಆತನು ದೈವಶಕ್ತಿಯಿಂದ ಪ್ರಜ್ವಲಿಸುತ್ತಾನೆ; ವಿವೇಚನಾಶಕ್ತಿಯುಳ್ಳ ಕೆಲವರು ಮಾತ್ರ ಇದನ್ನು ಗ್ರಹಿಸುತ್ತಾರೆ ; ಆದರೆ ಅವನ ಭೌತಿಕ ಆವರಣದಿಂದ ಜನಜಂಗುಳಿಗೆ ಅದು ಅರ್ಥವಾಗುವುದಿಲ್ಲ ; ಗೀತೆಯು ಸುಪ್ರಸಿದ್ಧವಾದ ನಾಲ್ಕು ಶ್ಲೋಕಗಳಲ್ಲಿ ಈ ವಿಷಯವನ್ನು ತಿಳಿಸುತ್ತದೆ (IX-೧೧, ೧೩) (IV-೯) :

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ :
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥

*ಸರ್ವಭೂತಗಳಿಗೂ ಮಹೇಶ್ವರವಾದ ನನ್ನ ಪರಭಾವವನ್ನು ಅರಿಯದ ಮೂಢರು ಮನುಷ್ಯದೇಹವನ್ನು ಆಶ್ರಯಿಸಿರುವ ನನ್ನನ್ನು ತಿರಸ್ಕರಿಸುತ್ತಾರೆ :*

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ
ಭಜಂತ್ಯನನ್ಯ ಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥

*ಎಲೈ ಅರ್ಜುನ! ದೈವೀಸ್ವಭಾವವನ್ನು ಆಶ್ರಯಿಸಿದ ಮಹಾತ್ಮರು ಸರ್ವ ಭೂತಗಳಿಗೂ ಕಾರಣನೂ ಅವ್ಯಯನೂ ಆದ ನನ್ನನ್ನು ತಿಳಿದು ಅನನ್ಯಮನಸ್ಕರಾಗಿ ಭಜಿಸುತ್ತಾರೆ.*

ಜನ್ಮ ಕರ್ಮಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥

*ಎಲೈ ಅರ್ಜುನ ! ಯಾವನು ಹೀಗೆ ನನ್ನ ದಿವ್ಯವಾದ ಅವತಾರವನ್ನೂ ಕರ್ಮವನ್ನೂ ಯಥಾರ್ಥವಾಗಿ ತಿಳಿಯುತ್ತಾನೆಯೋ, ಅವನು ದೇಹವನ್ನು ತ್ಯಾಗ ಮಾಡಿದ ಮೇಲೆ ಪುನರ್ಜನ್ಮ ವನ್ನು ಹೊಂದುವುದಿಲ್ಲ ; ನನ್ನನ್ನೇ ಹೊಂದುತ್ತಾನೆ.*

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ :
ಬಹುವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ

*ಆಸಕ್ತಿ ಭಯ ಕ್ರೋಧಗಳಿಲ್ಲದವರಾಗಿ, ನನ್ನಲ್ಲಿಯೇ ಮನಸ್ಸುಳ್ಳವರಾಗಿ, ನನ್ನನ್ನೇ ಆಶ್ರಯಿಸಿದವರಾಗಿ ಅನೇಕರು ಜ್ಞಾನರೂಪವಾದ ತಪಸ್ಸಿಂದ ಪವಿತ್ರರಾಗಿ ನನ್ನ ಭಾವವನ್ನು ಹೊಂದಿರುತ್ತಾರೆ.*

## ೯. ಮುಕ್ತಾಯ

ಇದೇ, ಈ ಸಾರವತ್ತಾದ ಮತ್ತು ಗಾಢವಾದ ಜೀವಶಕ್ತಿಯೇ ಉಳಿದೆಲ್ಲ ಶಕ್ತಿಗಳನ್ನೂ ಸಮೆಸಿ ಸಾಯಿಸುವಂತಹ, ಕಾಲವನ್ನು ಕೂಡ ಧಿಕ್ಕರಿಸುವಂತಹ ಶಕ್ತಿಯನ್ನು ಅವತಾರಪುರುಷನಿಗೆ ನೀಡಿ, ಆ ಕಾಲವು ಆತನಿಗಾಗಿ ಹಿಮ್ಮುಖವಾಗಿ ಹರಿಯುವಂತೆ ಮಾಡುತ್ತದೆ. ಇತಿಹಾಸದ ವ್ಯಾಖ್ಯಾನ ಕಾರ್ಯಗತಿಯು ಆತನ ವಿಚಾರದಲ್ಲಿ ವ್ಯಾಖ್ಯಾನಕ್ಕೆ ಸಾಕಷ್ಟು ಸಾಮಗ್ರಿಗಳನ್ನು ಪಡೆದಿರುತ್ತದೆ. ಆತನು ಲೋಕಕಲ್ಯಾಣಕಾರಕವಾದ ಶಕ್ತಿ ತರಂಗಗಳನ್ನು ಚಾಲನೆ ಮಾಡುತ್ತಾನೆ; ಅವು ಆ ಯುಗದ ಕ್ಷೋಭೆಯನ್ನೆಲ್ಲಾ ಉಪಶಮನಗೊಳಿಸಲು ಎಡೆತಡೆಯಿಲ್ಲದೆ ಹರಿಯುತ್ತವೆ. ಮಾನವ ಜನಾಂಗವು ತನ್ನ ಇಂದ್ರಿಯಾತೀತವಾದ ಪ್ರೇಮ, ನಿಷ್ಠೆಗಳಿಗೆ ಒಂದು ಕೇಂದ್ರ ಬಿಂದುವನ್ನೂ, ಆಶೆ ಆಕಾಂಕ್ಷೆಗಳಿಗೆ ಒಂದು ಭರವಸೆಯನ್ನೂ ಆತನಲ್ಲಿ ಕಂಡುಕೊಳ್ಳುತ್ತವೆ. ಆತನ ವ್ಯಕ್ತಿತ್ವವು ಜಗತ್ತಿನಲ್ಲಿ ತಲೆಮಾರಿನಿಂದ ತಲೆಮಾರಿಗೆ ಬೆಳೆಯುತ್ತಾ ಹೋಗುತ್ತದೆ. ಆತನು ಬಾಳಿದ ಜೀವನ ಮತ್ತು ಐತಿಹಾಸಿಕ ವ್ಯಾಖ್ಯಾನಗಳು—ಇವುಗಳ ಪರಸ್ಪರ ಪೋಷಣೆಯಿಂದ ಆದ ಸಂಘಟನೆಯು ತನ್ನ ತಲೆಮಾರಿನ ಜನರಿಂದ ಹೆಚ್ಚು ವ್ಯತ್ಯಾಸವೇನೂ ಇಲ್ಲದೆ ಸರ್ವಸಾಮಾನ್ಯನಂತಿದ್ದ ಒಬ್ಬ ವ್ಯಕ್ತಿಯನ್ನು ಕಾಲಕ್ರಮದಲ್ಲಿ ದೈತ್ಯಶಕ್ತಿಯ ವ್ಯಕ್ತಿಯನ್ನಾಗಿ ಮಾಡಿ, ಆ ವ್ಯಕ್ತಿತ್ವವು ಮುಂದಿನ ತಲೆಮಾರಿನವರನ್ನು ನಿಯಂತ್ರಿಸುವ ಶಿರಃಪ್ರಾಯನನ್ನಾಗಿ ಮತ್ತು ಹೃದಯಪ್ರಾಯನನ್ನಾಗಿ ಮಾಡುತ್ತದೆ. ಭಾರತದ ಸ್ತ್ರೀಪುರುಷರು ಇಂತಹವನೊಬ್ಬನ ವ್ಯಕ್ತಿತ್ವದಲ್ಲಿ ತಮ್ಮ ಆಳವಾದ ಆಧ್ಯಾತ್ಮಿಕ ಆಶೋತ್ತರದ ಸಜೀವ ಮೂರ್ತಿಯನ್ನೂ ಪರತತ್ವದ ಆವಿರ್ಭಾವವನ್ನು—ನಮ್ಮ ಬುದ್ಧಿಗೆ ಎಂದೆಂದಿಗೂ ಗೋಚರವಾಗದಷ್ಟು ಸ್ಪಷ್ಟವಾಗಿಯೂ ಪುಷ್ಟವಾಗಿಯೂ—ಕಾಣಕಲಿತಿರುವುದು ಆಶ್ಚರ್ಯವೇನೂ ಅಲ್ಲ. ಅಂತಹ ಜನರು ನಮ್ಮ ದೇಶದವರಾಗಿರಲಿ ಅಥವಾ ಪರದೇಶದವರಾಗಿರಲಿ ಅವರಿಗೆ ನಮ್ಮ ಜನ ದೈವಕ್ಕೆ ನೀಡುವ ಗೌರವವನ್ನು ನೀಡಿ ಭಕ್ತಿಯಿಂದ ಪೂಜಿಸುತ್ತಾರೆ. ಅಂತಹ ಮನೋಭಾವ ಮತ್ತು ಪೂಜೆಗಳಲ್ಲಿ ಮಾನವ ಧರ್ಮ ದೈವಿಕ ಧರ್ಮಗಳೆರಡೂ ಸಂಗಮವಾಗಿ, ಧರ್ಮವನ್ನು ಹೆಚ್ಚು ಮಾನವೀಯವಾಗಿಯೂ ಮಾನವನನ್ನು ಹೆಚ್ಚು ದೈವಿಕವಾಗಿಯೂ ಆಗುವಂತೆ ಮಾಡುತ್ತವೆ.

ಅನು : ತ. ಸು. ಶಾಮರಾಯ

# ೧೦

# ಶ್ರೀಕೃಷ್ಣನ ವ್ಯಕ್ತಿತ್ವ*

## ೧. ಪ್ರಸ್ತಾವನೆ

ಉಪನಿಷತ್ತುಗಳಿಂದ ಎದ್ದ ಸತ್ಯ-ಸೌಂದರ್ಯಗಳ, ಸಜ್ಜನಿಕೆ-ಪ್ರೇಮಗಳ ನಾದತರಂಗಗಳು ಮುಂದಿನ ಯುಗದ ಮಹಾ ವ್ಯಕ್ತಿತ್ವವೆಂಬ ವಿದ್ಯುತ್‌ಸಂಗ್ರಾಹಕವೊಂದರಲ್ಲಿ ಸಂಗ್ರಹವಾಯಿತು. ಆ ವ್ಯಕ್ತಿತ್ವವು ಸುಮಾರು ಕ್ರಿ.ಪೂ. ಸಾವಿರದ ನಾನ್ನೂರರ ತನ್ನ ಜೀವಿತಕಾಲದಲ್ಲಿ ಆಧ್ಯಾತ್ಮಿಕವಾಗಿಯೂ ರಾಜಕೀಯವಾಗಿಯೂ ಭಾರತವನ್ನು ಚಕಿತಗೊಳಿಸಿತು ; ಅದರ ನಾದವು ಇಂದೂ ನಮ್ಮನ್ನು ಚಚ್ಚರಗೊಳಿಸುತ್ತಿದೆ. ಗೀತೆಯ ಕರ್ತೃವಾದ ಶ್ರೀಕೃಷ್ಣನು ಭಾರತದ ಚಿಂತನ ಮತ್ತು ಜೀವನಗಳ ಮೇಲೆ ಎಷ್ಟು ಅದ್ಭುತವಾದ ರೀತಿಯಲ್ಲಿ ಪ್ರಭಾವವನ್ನು ಬೀರಿದ್ದಾನೆಂದರೆ ಭಾರತದಲ್ಲಿಯಾಗಲೀ ಬೇರೆ ಕಡೆಯಲ್ಲಾಗಲೀ ಅದಕ್ಕೆ ಸಮಾನವಾದುದು ಮತ್ತೊಂದಿಲ್ಲ. ಆತನ ಪ್ರಭಾವ ಆಳವಾಗಿವೆ, ವಿಸ್ತಾರವಾಗಿದೆ. ಭಾರತದ ಪಿತ್ರಾರ್ಜಿತದಲ್ಲಿ ಕೃಷ್ಣಾಂಶವನ್ನು ಕಳೆದರೆ ಉಳಿಯುವುದು ಅತ್ಯಲ್ಪ. ಆತನು ನಮ್ಮ ಮತ ಧರ್ಮ-ತತ್ತ್ವದೃಷ್ಟಿ, ಅಧ್ಯಾತ್ಮಯೋಗ-ಕಾವ್ಯ, ಚಿತ್ರ-ಶಿಲ್ಪ, ಸಂಗೀತ-ನರ್ತನ ಮತ್ತು ಸಂಸ್ಕೃತಿ-ನಾಗರೀಕತೆಗಳು—ಇವುಗಳಲ್ಲಿ ಮುಂದುವರಿದ ನಮ್ಮ ಜನಜೀವನದ ವೈವಿಧ್ಯತೆಗೆ ಸಂಬಂಧಿಸಿರುವುದರಲ್ಲೆಲ್ಲಾ ಪ್ರವೇಶಿಸಿದ್ದಾನೆ. ಎಲ್ಲ ರೀತಿಯ, ಎಲ್ಲ ಮಟ್ಟದ ಜನರೂ ಆತನ ವ್ಯಕ್ತಿತ್ವಕ್ಕೆ ಮಾರುಹೋಗಿದ್ದಾರೆ. ಆತನು ಭಾರತೀಯರ ಹೃದಯ ಬುದ್ಧಿಗಳನ್ನು ಆಕರ್ಷಿಸುವ ಸಾರ್ವಕಾಲಿಕ ಕಿಂದರಿಜೋಗಿಯಾಗಿ, ನಮ್ಮ ಹುಡುಗ-ಹುಡುಗಿಯರು, ಋಷಿ-ಮುನಿಗಳು, ಪಂಡಿತ-ಕಲಾವಿದರು, ರಾಜಕೀಯನಿಪುಣರು-ವ್ಯವಹಾರಚತುರರು—ಈ ಎಲ್ಲರನ್ನೂ ತನ್ನತ್ತ ಆಕರ್ಷಿಸಿದ್ದಾನೆ, ಈಗಲೂ ಆಕರ್ಷಿಸುತ್ತಿದ್ದಾನೆ. ಆತನಿಂದ ಮುಂದಿನ ಯುಗಕ್ಕೆ ಸೇರಿದ ಭಾಗವತ ಪುರಾಣವು ಶ್ರೀಕೃಷ್ಣನನ್ನು ಸಾಕ್ಷಾತ್ ಭಗವಂತನೇ ಎಂದೂ, ಇತರ ಅವತಾರಗಳಂತೆ ಭಗವಂತನ ಅಂಶಭೂತನಲ್ಲವೆಂದೂ ಹೇಳಿ ಅನೇಕ ತಲೆಮಾರಿನವರನ್ನು ದಂಗುಬಡಿಸಿತು. (I-೩-೨೮). ಶ್ರೀಕೃಷ್ಣನ ಮಾಂತ್ರಿಕಶಕ್ತಿಗೆ—ಇಡೀ ಜನತೆಯ ಪ್ರೇಮ ದೃಢ ಭಕ್ತಿಯ ಈ ಆಕರ್ಷಣ ಕೇಂದ್ರಕ್ಕೆ—ಆ ಮಹಾಪುರುಷನ ಶೀಲ ಪ್ರಭಾವಗಳೂ ಮತ್ತು ಆತನ ಜನತೆಯ ಸ್ವಭಾವವೂ ಹೊರತು ಬೇರೇನು ಕಾರಣವನ್ನು ತರೋಣ ?

## ೨. ಮನೋಹರವಾದ ಆತನ ಶೈಶವ ಮತ್ತು ಬಾಲ್ಯ

ಮಹಾಭಾರತ ಮತ್ತು ಭಾಗವತದ ಪುಟಗಳಿಂದ ಆಯ್ದ ಶ್ರೀಕೃಷ್ಣನ ಜೀವನ ಘಟನೆಗಳಿಂದ ಆತನು ಅಪೂರ್ವಯೋಗ್ಯತೆಯ ನಾಯಕನೂ, ಗುರುವೂ, ನಾಗರಿಕನೂ, ಸಂತನೂ ಆಗಿದ್ದನೆಂದು·

---

* ೧೯೫೧ ಮಾರ್ಚ್‌ನಲ್ಲಿ ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ.

ವ್ಯಕ್ತಪಡುತ್ತದೆ. ಆತನ ಶೈಶವ ಬಾಲ್ಯಗಳು ಮಥುರೆಗೆ ಸಮೀಪದಲ್ಲಿದ್ದ ವ್ರಜವೆಂಬ ಹಳ್ಳಿಯ ಮನೆಯಲ್ಲಿ ಮತ್ತು ಅದರ ಸುತ್ತುಮುತ್ತಿನ ದಿವ್ಯ ಮನೋಹರ ಪ್ರಕೃತಿಯ ಮಧ್ಯದಲ್ಲಿ ಕಳೆದುವು. ಮಥುರಾ ನಗರದ ಪ್ರಕ್ಷುಬ್ಧ ರಾಜಕೀಯದಿಂದ ಅದರ ಸುತ್ತಮುತ್ತಿನ ಗ್ರಾಮಾಂತರ ಪ್ರದೇಶದವೆಲ್ಲಾ ದುಃಖ, ಭಯಗಳೆಂಬ ಮೋಡಗಳಿಂದ ಆಚ್ಛಾದಿತವಾಗಿದ್ದರೂ, ತನ್ನ ಪ್ರೀತಿಯ ತಾಯ್ತಂದೆಗಳ ಲಾಲನೆ ಪಾಲನೆಗಳಲ್ಲಿಯೂ ಅಲ್ಲಿನ ಸರಳಜೀವಿಗಳಾದ ಗೊಲ್ಲರ ಮಧ್ಯದಲ್ಲಿಯೂ ಪ್ರಕೃತಿ ಮತ್ತು ಪ್ರಾಣಿ ಜಗತ್ತಿನೊಡನೆಯೂ ಮಾನವನು ಹೇಗೆ ಸಮರಸವಾಗಿ ಬಾಳಬಲ್ಲ ಎಂಬುದನ್ನು ಪ್ರದರ್ಶಿಸುವಂತಿದ್ದ ಆತನ ಬಾಳು ಸಂತೋಷ ಸೌಕುಮಾರ್ಯಗಳ ಒಂದು ಸಾಹಸದ ಕಥೆಯಾಗಿತ್ತು. ಪವಿತ್ರವಾದ ಯಮುನಾ ನದಿಯ ದಡದಲ್ಲಿ ದಟ್ಟವಾಗಿ ನೆರಳಿನಿಂದ ತುಂಬಿದ್ದ ಉದ್ಯಾನವನಗಳು, ಜಿಂಕೆ, ನವಿಲು ಮತ್ತು ಇತರ ಹಕ್ಕಿಗಳಿಂದ ಜೀವಪೂರ್ಣವಾಗಿ ಕಳಕಳಿಸುತ್ತಿತ್ತು ; ವ್ರಜದ ಮಕ್ಕಳಿಗೆ ಅದೊಂದು ಜಾನಪದ ಗೀತದ ಹಿನ್ನೆಲೆಯನ್ನು ಒದಗಿಸಿತ್ತು ; ತಮ್ಮ ಸ್ವಾತಂತ್ರ್ಯವನ್ನು ಅನುಭವಿಸುವುದಕ್ಕೂ, ವ್ಯಕ್ತಿತ್ವವನ್ನು ಹೊರಹೊಮ್ಮಿಸುವುದಕ್ಕೂ ತಕ್ಕುದಾದ ಕಿಂಡರ್ ಗಾರ್ಟನ್ ಶಾಲೆಯಂತಿತ್ತು. ಭಾಗವತದಲ್ಲಿ ಕೊಟ್ಟಿರುವ ಬಾಲಕೃಷ್ಣನ ಚಿತ್ರವು—ಕೊಳಲನ್ನೂದುತ್ತಾ ದನಕಾಯುವ, ತನ್ನ ಹಳ್ಳಿಯ ಸಂಗಾತಿಗಳೊಡನೆ ಅವರ ನಾಯಕನಾಗಿ ವಿನೋದ ಪರಿಹಾಸ್ಯಗಳಿಂದ, ಸಂತೋಷ ಸಾಹಸಗಳಿಂದ ಕಾಲ ಕಳೆಯುತ್ತಿದ್ದ ಚಿತ್ರ—ಮುಂದಿನ ತಲೆಮಾರಿನವರಿಗೆ ಅತ್ಯಂತ ಕಾವ್ಯಮಯವಾದ ಭಾವಗೀತೆಗಳಿಗೂ, ಆಧ್ಯಾತ್ಮಿಕ ರಹಸ್ಯಾರ್ಥ ರೂಪಕ ಕಥೆಗಳಿಗೂ ವಸ್ತುವನ್ನು ಒದಗಿಸಿದೆ. ತನ್ನ ಶೈಶವದಲ್ಲಿಯೇ ಆತನು ಅಸಾಧಾರಣವಾದ ಚಾಕಚಕ್ಯತೆ, ಅಕಾಲ ಪ್ರೌಢಿಮೆ, ಧೈರ್ಯ, ಚಿತ್ತಸ್ವಾಸ್ಥ್ಯ ಮೊದಲಾದ ಗುಣಗಳನ್ನು ಪ್ರದರ್ಶಿಸಿದನು. ಪರಾನುಕಂಪ, ಸೂಕ್ಷ್ಮಗ್ರಹಣ ಶಕ್ತಿ, ವಿನೋದ ಮತ್ತು ಪರಿಹಾಸ್ಯಗಳು ಆತನು ಹುಟ್ಟುಗುಣಗಳಾಗಿದ್ದವು. ಈ ಗುಣಗಳೊಡನೆ ಬೆಳೆದ ಆತನು ಪ್ರೇಮಮಯನೂ ದಯಾಭರಿತನೂ ಆದ ವ್ಯಕ್ತಿಯಾದನು. ಪ್ರಸನ್ನವಾದ ಮುಗುಳು ನಗೆ ಆತನ ಮುಖಭಾವದಲ್ಲಿ ಸದಾ ನೆಲೆಸಿರುತ್ತಿತ್ತು. ಆ ಮುಗುಳ್ನಗೆಯು ಮಾನವ ಹೃದಯದ ಸಂದೇಹ-ನಿರಾಶೆಗಳನ್ನೂ ರಾಗ-ದ್ವೇಷಗಳನ್ನೂ ನೀಗಿಸಬಲ್ಲ ಸ್ಥಿರ ಬುದ್ಧಿ ಮತ್ತು ಮೃದು ಹೃದಯಗಳ ಸಂಕೇತವಾಗಿತ್ತು. ಬಾಲಕನಾಗಿದ್ದಾಗಲೇ ಆತನಿಗೆ ತಾನು ಯಾವ ಹೆಗ್ಗುರಿಯನ್ನು ಸಾಧಿಸುವುದಕ್ಕಾಗಿ ಜನಿಸಿದ್ದೇನೆ, ತಾನು ಬಾಳಿನಲ್ಲಿ ಯಾವ ಮಹತ್ಕಾರ್ಯವನ್ನು ಮಾಡಿ ಮುಗಿಸಬೇಕು—ಎಂಬುದು ಗೊತ್ತಿತ್ತು. ಈ ಹೆಗ್ಗುರಿಯ ಸಾಧನೆಗಾಗಿ ಆತನು ತನ್ನ ಹರೆಯದ ಪ್ರಾರಂಭದಲ್ಲಿಯೇ ತನ್ನ ಹುಟ್ಟೂರಾದ ವ್ರಜದ ಸುಂದರ ಸನ್ನಿವೇಶಕ್ಕೂ, ಪ್ರೇಮಪೂರ್ಣರಾದ ಅಲ್ಲಿನ ಜನರಿಗೂ ಶರಣು ಹೇಳಿ ಹೊರಟು ಹೋಗುವ ಅಗತ್ಯವಿತ್ತು. ಆತನು ತನ್ನ ಉಳಿದ ಆಯುಷ್ಯವನ್ನೆಲ್ಲಾ ಮೊದಲು ಮಥುರೆಯ ಸಮೀಪದಲ್ಲಿಯೂ ಆಮೇಲೆ ಗುಜರಾತಿನ ಸಮುದ್ರ ತೀರದಲ್ಲಿ ಹೊಸದಾಗಿ ನಿರ್ಮಿಸಿದ ದ್ವಾರಕಾನಗರಿಯಲ್ಲಿಯೂ ಹೋರಾಟದ ಸುಳಿಗೆ ಸಿಕ್ಕಿ ಕಳೆಯಬೇಕಾಯಿತು. ಅಲ್ಲಿರುವಾಗ ತನ್ನ ಜೀವಿತಕಾರ್ಯವನ್ನು ನೆರವೇರಿಸುವುದಕ್ಕಾಗಿ ಆತನು ಅಂದಿನ ಇಂದ್ರಪ್ರಸ್ಥವಾಗಿದ್ದ ದೆಹಲಿಗೂ ಅದರ ಸೋದರ ನಗರವಾದ ಹಸ್ತಿನಾಪುರಕ್ಕೂ ಹೋಗಿ, ಪಾಂಡವರ ಮತ್ತು ಅವರ ಅನುಯಾಯಿಗಳ ಜೊತೆಯಲ್ಲಿ ಆತ್ಮೀಯ ಸ್ನೇಹವನ್ನು ಬೆಳೆಸಬೇಕಾಯಿತು. ತನ್ನ ಉಳಿದ ಜೀವಿತಕಾಲವನ್ನೆಲ್ಲಾ ಇಂದ್ರಪ್ರಸ್ಥ ಮತ್ತು ದ್ವಾರಕೆಯ ಮಧ್ಯೆ ಕಳೆಯಬೇಕಾಯಿತು.

೩. ಆತನ ತಾರುಣ್ಯದ ಭವ್ಯತೆ

ಮಹಾಕಾವ್ಯವಾದ ಮಹಾಭಾರತವು ಭರತಖಂಡದ ಪೌರುಷಯುಕ್ತವಾದ ರಚನಾತ್ಮಕ ಯುಗವೊಂದನ್ನು ಬೆಳಗುತ್ತಿದೆ. ಪ್ರಭಾವಯುತರಾದ ಅದರ ನಾಯಕರಲ್ಲಿ ಪ್ರೇಮಪಾತ್ರರು-ದ್ವೇಷಿಗಳು, ಧರ್ಮಪರರು-ದುರ್ಮಾರ್ಗರು, ಮೃದು ಸ್ವಭಾವದವರು-ಕ್ರೂರಿಗಳು,

ಗೌರವಾರ್ಹರು—ಜುಗುಪ್ಸಾರ್ಹರು ಇತ್ಯಾದಿ ಲೆಕ್ಕವಿಲ್ಲದಷ್ಟು ತಂಡಗಳನ್ನು ಮಾಡಬಹುದು. ಈ ಪ್ರಭಾ ರಾಶಿಯಲ್ಲಿ ತನ್ನ ಶಕ್ತಿ ಮತ್ತು ರೂಪ ಮೋಹಕತೆಯಂತೆಯೇ ತನ್ನ ಉದಾತ್ತ ಗುಣ ಮತ್ತು ಪ್ರತಿಭೆಗಳಿಂದ ಎದ್ದು ಕಾಣುವ ವ್ಯಕ್ತಿತ್ವವೆಂದರೆ ಶ್ರೀಕೃಷ್ಣನದು. ಆತನನ್ನು ಋಷಿಗಳು ಗೌರವಿಸುತ್ತಾರೆ, ಜನರು ಪ್ರೀತಿಸುತ್ತಾರೆ ; ದುಷ್ಟರು ಹೆದರುತ್ತಾರೆ, ಸಜ್ಜನರು ಅರಸುತ್ತಾರೆ ; ಸ್ತ್ರೀಯರ ಮತ್ತು ಜನ ಜಂಗುಳಿಯ ಕ್ಷೇಮಚಿಂತನೆಗಾಗಿ ಮತ್ತು ಗೌರವಾರ್ಹರಾದವರಿಗೆ ಗೌರವ ಸಲ್ಲಿಸುವುದಕ್ಕಾಗಿ ದಯಾಮಯನಾದ ಆತನಿಗೆ ತುಂಬ ಉತ್ಸಾಹ—ಇಂತಹ ಅಪೂರ್ವ ನಾಯಕನಾಗಿ ಶ್ರೀಕೃಷ್ಣನನ್ನು ಚಿತ್ರಿಸುತ್ತದೆ, ಮಹಾಭಾರತ. ಆತನು ಏಕ ಕಾಲದಲ್ಲಿಯೇ ಮಾನವನೂ.ದೇವನೂ ಆಗಿ, ಒಂದು ಕಡೆ ಕೊನೆಯಿಲ್ಲದ ಕಾರ್ಯರಂಗ, ಮತ್ತೊಂದು ಕಡೆ ಪ್ರಶಾಂತವಾದ ನಿರಾಸಕ್ತಿ—ಈ ವೈಶಿಷ್ಟ್ಯದಿಂದ ಕೂಡಿದ ತನ್ನ ಸುದೀರ್ಘ ಜೀವನಕಾಲದಲ್ಲಿ ಭಾರತದ ಅಂತರಂಗ ಬಹಿರಂಗಗಳನ್ನು ತಿದ್ದಿ ರೂಪಿಸುವುದರಲ್ಲಿ ಆತನು ಮಗ್ನನಾಗಿದ್ದನು. ಇಂದ್ರಪ್ರಸ್ಥ ಮತ್ತು ಹಸ್ತಿನಾಪುರದ ಜನರು ತಮ್ಮ ನಾಯಕನಾದ ಶ್ರೀಕೃಷ್ಣನು ಅಪರೂಪವಾಗಿ ರಾಜಧಾನಿಗೆ ಭೇಟಿಯಿತ್ತಾಗ ಆತನಿಗೆ ನೀಡುತ್ತಿದ್ದ ರಾಷ್ಟ್ರೀಯ ಸ್ವಾಗತದ ಸಂಭ್ರಮ ಚಿತ್ರಗಳನ್ನು ಮಹಾಭಾರತವು ಬಹು ಸುಂದರವಾಗಿ ವರ್ಣಿಸಿದೆ.

## ೪. 'ದಿವ್ಯ ಗೀತೆ'

ಆತನ ದೀರ್ಘ ಜೀವನದಲ್ಲಿ ಅತ್ಯಂತ ಕಾರ್ಯಶೀಲವಾದ ಮತ್ತು ಪರಿಣಾಮಕಾರವಾದ ಕಾಲವು ಇಂದ್ರಪ್ರಸ್ಥದ ಮತ್ತು ಅದರ ಸುತ್ತುಮುತ್ತಿನ ರಾಜಕೀಯ ಮುಖಂಡರೊಡನೆ ಮತ್ತು ಆಧ್ಯಾತ್ಮಿಕ ತೇಜಸ್ವಿಗಳ ಜೊತೆಯಲ್ಲಿ ಮಾತ್ರವೇ ಅಲ್ಲದೆ ಆ ಕಾಲದ ಸರ್ವಸಾಧಾರಣ ಗಂಡು ಹೆಣ್ಣುಗಳ ಮಧ್ಯದಲ್ಲಿಯೂ ಕಳೆಯಿತು. ಕೌರವರಿಗೆ ವಿರುದ್ಧವಾಗಿ ಪಾಂಡವರ ಧರ್ಮ ಪಕ್ಷವನ್ನು ವಹಿಸಿದ ಆತನು ಆ ಕಾಲದ ರಾಷ್ಟ್ರೀಯ ರಾಜಕೀಯಕ್ಕಿಳಿದು, ಒಮ್ಮೆ ಸಲಹೆಗಾರನಾಗಿ, ಮತ್ತೊಮ್ಮೆ ರಾಯಭಾರಿಯಾಗಿ, ಸದಾ ಧರ್ಮಪರರಾದವರ, ಸದ್ಗುಣಶೀಲರಾದವರ, ದಲಿತರಾದವರ ಮತ್ತು ದಿಕ್ಕಿಲ್ಲದವರ ಸ್ನೇಹಿತನಾಗಿ ಬಹುಮುಖ ಪಾತ್ರಗಳನ್ನು ನಿರ್ವಹಿಸಬೇಕಾಯಿತು. ಆತನ ರಾಜಕೀಯ ಜೀವನದಲ್ಲಿ ಕಡೆಯದಾದ, ಅಂತೆಯೇ ಶಿಖರಪ್ರಾಯವಾದ ಕಾರ್ಯವೆಂದರೆ ಕುರುಕ್ಷೇತ್ರದ ಯುದ್ಧ ಭೂಮಿಯಲ್ಲಿ ಆತನು ಅರ್ಜುನನಿಗೆ ಶಸ್ತ್ರಸನ್ಯಾಸ ಮಾಡಿದ ಸಾರಥಿಯಾಗಿ ವಹಿಸಿದ ಪಾತ್ರ ; ಆಗಲೇ ವಿಷಾದಭರಿತನಾದ ಅರ್ಜುನನ ವ್ಯಾಜದಿಂದ ಆತನು ಜ್ಞಾನಬೋಧಾರೂಪದ ಅಮೃತಮಯ ಆಸ್ತಿಯನ್ನು ಮುಂದಿನ ಜನಾಂಗಕ್ಕೆ ನೀಡಿದುದು. ಶ್ರೀಕೃಷ್ಣನು ಪಾರ್ಥಸಾರಥಿಯಾಗಿದ್ದಾಗ ಅರ್ಜುನನ ಬುದ್ಧಿ ಮನಸ್ಸುಗಳು ಸ್ಥಿಮಿತಗೊಳ್ಳುವುದಕ್ಕಾಗಿ ಆತನು ಹಾಡಿದ ಆ ದಿವ್ಯಗೀತೆ, ಭಗವದ್ಗೀತೆಯು ಆತನ ಮೂರ್ತಿಯನ್ನು ಚಿತ್ತಾಕರ್ಷಕವಾಗಿ ಅಮರವಾಗುವಂತೆ ಮಾಡಿದೆ. ಆತನ ವ್ಯಕ್ತಿತ್ವ ಮತ್ತು ಆ ಸಂಗೀತಗಳು ಅಂದಿನಿಂದಲೂ ಲಕ್ಷೋಪಲಕ್ಷ ಗಂಡು ಹೆಣ್ಣುಗಳಿಗೆ ಜೀವನ ಮಹಾ ಸಂಗ್ರಾಮದಲ್ಲಿ ಸಾರಥ್ಯದ ಪಾತ್ರವನ್ನು ವಹಿಸಿ ಉತ್ತೇಜನವನ್ನು ನೀಡುತ್ತಿವೆ.

ಭಗವದ್ಗೀತೆಯಲ್ಲಿ ಪ್ರತಿಪಾದಿತವಾಗಿರುವ ಜೀವನ ತತ್ತ್ವವು ಆ ತತ್ವಬೋಧನೆಯಂತೆ ಬಾಳಿ ಅದಕ್ಕೆ ಉದಾಹರಣೆಯಂತಿದ್ದ ಗುರುವಿನ ನಿಶ್ಚಿತಾಭಿಪ್ರಾಯಗಳನ್ನು ತಿಳಿಸುತ್ತದೆ. ಅದು ಮಾನವನ ಜೀವನೋತ್ಸಾಹಕ್ಕೆ ಧಕ್ಕೆಯಾಗದಂತೆ ಜ್ಞಾನಬೋಧೆ ಮಾಡುವ ತತ್ತ್ವಜ್ಞಾನ. ಅದು ಮಾನವನನ್ನು ಅತ್ಯಂತ ಶ್ರೇಷ್ಠನಾಗಿ ಬಾಳಿ, ಅತ್ಯುತ್ತಮನಾಗಿ ಕಾರ್ಯನಿರತನಾಗುವಂತೆ ಮಾಡುತ್ತದೆ. ಸಾಮಾನ್ಯ ಜೀವನದಲ್ಲಿ ನಾವು ತೋರುವ ಉತ್ಸಾಹ ನಮ್ಮ ಸ್ವಾರ್ಥಕ್ಕೆ ಅಂಟಿಕೊಂಡುದಾಗಿರುತ್ತದೆ. ನಮ್ಮ ಕಾರ್ಯಕಲಾಪಗಳು, ನಮ್ಮ ಕಳವಳ ಪ್ರದರ್ಶನ, ನಮ್ಮ ಪ್ರೇಮ, ನಮ್ಮ ಭಾವೋದ್ರೇಕ ಮತ್ತು

ನಮ್ಮ ಆತ್ಮಾನುಕಂಪ—ಎಲ್ಲವೂ ಹಾಗೆಯೇ. ನಮ್ಮ ಸ್ವಾರ್ಥಕ್ಕೆ ತಕ್ಕಂತೆ ಲಾಭವಾಗದಿದ್ದರೆ ನಾವು ಜೀವನದಲ್ಲಿ ಉತ್ಸಾಹ ಮತ್ತು ಪ್ರೇಮಗಳನ್ನು ಕಳೆದುಕೊಳ್ಳುತ್ತೇವೆ. ಆಗ ನಮ್ಮ ಕಾರ್ಯಕಲಾಪಗಳ ಚಾಲಕ ಶಕ್ತಿಯನ್ನೇ ಕಳೆದುಕೊಂಡು, ಅಂತರಂಗದಲ್ಲಿ ಕಳವಳವೂ ಬಹಿರಂಗದಲ್ಲಿ ಜಡತನವೂ ಸೇರಿಕೊಂಡಿರುವ ಉದಾಸೀನ ಮನೋವೃತ್ತಿಗೆ ಇಳಿಯುತ್ತೇವೆ. ನಾವು ಅನಾಸಕ್ತರಾಗಿದ್ದಾಗಲೂ ಉತ್ಸಾಹಪೂರ್ಣರಾಗಿ ಸ್ವಲ್ಪವೂ ಕಳವಳಗೊಳ್ಳದೆ ಕಾರ್ಯಮಗ್ನರಾಗಿರುವುದು ಹೇಗೆ ಸಾಧ್ಯ ಎಂಬುದನ್ನು ಶ್ರೀಕೃಷ್ಣನು ತನ್ನ ತತ್ತ್ವಬೋಧೆ ಮತ್ತು ಉದಾಹರಣೆಗಳ ಮೂಲಕ ನಮಗೆ ತೋರಿಸುತ್ತಾನೆ. ಸ್ವಾರ್ಥಮೂಲವಾದ ಆಶೆ ಮತ್ತು ಭಾವೋದ್ರೇಕಗಳಿಂದ ಮುಕ್ತರಾದಾಗ ನಾವು ಸರ್ವೋತ್ಕೃಷ್ಟವಾಗಿ ಕೆಲಸ ಮಾಡಲು ಸಾಧ್ಯ. ಇದೇ ನಿಜವಾದ ಅಧ್ಯಾತ್ಮ, ನೈತಿಕ ಕಾರ್ಯಗತಿಯ ಫಲ, ಸೌಜನ್ಯ ಮತ್ತು ಕಾರ್ಯಸಾಧನೆಗಳು ಒಟ್ಟಿಗೆ ಸೇರಿ ಆಗುವ ಸಿದ್ಧಿ, ತಿಳಿಯಾದ ಬುದ್ಧಿ, ಸ್ಥಿರವಾದ ಮನಸ್ಸು ಮತ್ತು ಬಿಗಿಯಾದ ಮುಷ್ಟಿ ಇವುಗಳ ಸಂಯೋಜನೆ. ಮಾರ್ದವದೊಡನೆ ಶಕ್ತಿ, ಪ್ರೇಮದೊಡನೆ ನಿರ್ಭಯ, ನಮ್ರತೆಯೊಡನೆ ಮಹತ್ತು ಸಂಗಮಗೊಂಡಿರುವ ವ್ಯಕ್ತಿತ್ವವೊಂದನ್ನು ಅದು ನಿರ್ದೇಶಿಸುತ್ತದೆ. ಗೀತಾಚಾರ್ಯನು ಜೀವನದಲ್ಲಿ ಆಚರಿಸಿದುದನ್ನೂ ಆತನ ನಡವಳಿಕೆ ಯನ್ನೂ ಗೀತೆಯು ಮಾತುಗಳಲ್ಲಿ ಪ್ರತಿಪಾದಿಸುತ್ತದೆ.

ಶ್ರೀಕೃಷ್ಣನ ವ್ಯಕ್ತಿತ್ವದ ಈ ಗುಣಾತಿಶಯ ಮತ್ತು ಬಹುಮುಖ ಶಕ್ತಿಗಳೇ ಆ ವ್ಯಕ್ತಿತ್ವವನ್ನೂ ಪ್ರಶಾಂತವಾದ ತತ್ತ್ವಬೋಧನೆ ಮತ್ತು ಸಮತೂಕದ ಇತಿಹಾಸಗಳಿಗೆ ಮಾತ್ರವಲ್ಲದೆ ವಿಪುಲವಾದ ಮತ್ತು ವೈವಿಧ್ಯಮಯವಾದ ಕಾಲ್ಪನಿಕ ಕಥೆಗಳಿಗೂ ಪುರಾಣಗಳಿಗೂ ಕೇಂದ್ರವಸ್ತುವನ್ನಾಗಿ ಮಾಡಿದ. ಒಂದು ಜನಾಂಗದ ಕಲ್ಪನೆಯನ್ನು ಅಗಾಧವಾಗಿ ಕೆರಳಿಸಬಲ್ಲ ಮಹಾಪುರುಷರು ತಮ್ಮ ಐತಿಹಾಸಿಕ ಜೀವನದ ರೇಖಾಚಿತ್ರವನ್ನು ಇದ್ದುದಿದ್ದಂತೆಯೇ ಉಳಿಸಿಕೊಳ್ಳುವುದಕ್ಕಾಗುವುದಿಲ್ಲ. ಅವರ ವ್ಯಕ್ತಿತ್ವವು ರಾಷ್ಟ್ರ ಮಹಾಪುರುಷರ ಪಟ್ಟಕ್ಕೇರುತ್ತದೆ; ವ್ಯಷ್ಟಿಪ್ರಜ್ಞೆಯಂತೆ ಇಡೀ ಜನತೆಯ ಸಮಷ್ಟಿ ಪ್ರಜ್ಞೆಗೂ ಅವರು ಚಿತ್ತಾಕರ್ಷಕವಾದ ಕಥಾವಸ್ತುವಾಗುತ್ತಾರೆ. ಮಹಾಪುರುಷನೊಬ್ಬನ ಜೀವನದಲ್ಲಿ ಕಾಲ್ಪನಿಕ ಮತ್ತು ಪುರಾಣ ಕಥೆಗಳ ಬಣ್ಣವು ವಸ್ತುಸ್ಥಿತಿ ಮತ್ತು ಇತಿಹಾಸಗಳ ರಚನೆಯಲ್ಲಿ ಹೊಂದಿಕೊಂಡಿತೆಂದರೆ, ಅವೆರಡೂ ಪರಸ್ಪರ ಪುಷ್ಟಿಗೊಂಡು, ಆ ಮಹಾಪುರುಷನ ಮತ್ತು ಆತನ ಅನುಯಾಯಿಗಳ ವ್ಯಕ್ತಿತ್ವಗಳು ಮಹೋನ್ನತಿಗೇರುವ ಅಸದೃಶ ಮಹದ್ಘಟನೆಯನ್ನು ನಾವು ಕಾಣುತ್ತೇವೆ.

## ೫. ಮುಕ್ತಾಯ : ಪುರಾಣಪುರುಷ ಶ್ರೀಕೃಷ್ಣನ ಸಮ್ಮೋಹನಶಕ್ತಿ

ಪುರಾಣ ಇತಿಹಾಸಗಳು ಸೇರಿ ಆಗಿರುವ ಶ್ರೀಕೃಷ್ಣನು ಇಂತಹ ಒಂದು ಇಂದ್ರಜಾಲ. ಆತನಿಗೂ ಆತನ ಜನತೆಗೂ ಮಧ್ಯೆ ವಸ್ತುವಿನ ಏಕತೆ ಇದೆ. ಭಾರತ ಜನತೆಯ ಪ್ರತಿಯೊಂದು ಆಧ್ಯಾತ್ಮಿಕವಾದ ಮತ್ತು ಲೌಕಿಕವಾದ ಆಶೋತ್ತರಕ್ಕೂ ಈ ಮಹಾವ್ಯಕ್ತಿಯ ಬಹುಮುಖ ಜೀವನ ಯಾತ್ರೆಯಲ್ಲಿ ಮತ್ತು ನಾನಾಮುಖವಾದ ಬೋಧನೆಯಲ್ಲಿ ಪರಸ್ಪರ ಹೊಂದಿಕೆಯಾಗುವಂತಹ ಮಾರ್ದನಿ ಕೇಳಿಬಂದಿದೆ. ಆತನ ಘನ ಧ್ವನಿಯ ಮಾರ್ದನಿ ಮತ್ತು ದೈತ್ಯಾಕಾರದ ನೆರಳು—ಇವುಗಳನ್ನು ಪ್ರಾಚೀನ ಗ್ರೀಸ್ ಮತ್ತು ಮಧ್ಯ ಏಷ್ಯದ ಜನರ ಇತಿಹಾಸದಲ್ಲಿ ಕಾಣಬಹುದು. ಈ ಬಗೆಯ ಅನ್ವೇಷಣೆ ಸ್ವಾರಸ್ಯಕರವಾಗಿ ಇರುವುದಾದರೂ ಆತನಲ್ಲಿ ಐಕ್ಯವಾಗಿದ್ದ ಮತ್ತು ಆತನು ಐಕ್ಯಮಾಡಿ ಕೊಂಡಿದ್ದ ಭಾರತ ಮತ್ತು ಅದರ ಜನತೆಯ ಸಜೀವ ಸಂಪ್ರದಾಯಗಳಲ್ಲಿ ಆತನನ್ನು ಅನ್ವೇಷಿಸ ಹೊರಡುವುದು ಹೆಚ್ಚು ಬೋಧಪ್ರದ, ಹೆಚ್ಚು ಲಾಭಕರ. ಶ್ರೀಕೃಷ್ಣನು ನಮಗೆ ಬರಿಯ ಐತಿಹಾಸಿಕ ನೆನಪು ಮಾತ್ರವಲ್ಲ, ಸಜೀವವಾದ ಸತ್ಯಸಂಗತಿ; ಕಾಲ ಕಳೆದಂತೆಲ್ಲಾ ಆತನ ದನಿ ಮತ್ತು ಆಕಾರಗಳಿಗೆ

ಹೊಸ ಹೊಸ ಮಹತ್ವವೂ ಶಕ್ತಿಯೂ ಸೇರಿಕೊಳ್ಳುತ್ತಲೇ ಇವೆ. ಭಾರತವು ತನ್ನ ಸಂಪ್ರದಾಯಗಳಲ್ಲಿ ಪ್ರಾಚೀನ ಆದರ್ಶದೊಡನೆ ಕಾಲ್ಪನಿಕ ಸಾಹಸವನ್ನೂ, ತನ್ನ ಆಶೋತ್ತರಗಳಲ್ಲಿ ತತ್ತ್ವಜ್ಞಾನದೊಡನೆ ಮತಧರ್ಮವನ್ನೂ ಸಮನ್ವಯಗೊಳಿಸುವ ಕಾರ್ಯವನ್ನು ಆತನ ಮೂಲಕ ಸಾಧಿಸಿದೆ. ಇಂತಹ ಆಧ್ಯಾತ್ಮಿಕ ಸಮನ್ವಯದ ಮಹೋನ್ನತಿಯನ್ನು ಪ್ರಾಚೀನ ಅಥವಾ ಆಧುನಿಕ ಜಗತ್ತಿನ—ಗ್ರೀಕರೋ, ರೋಮನರೋ, ಫ್ರೆಂಚರೋ, ಜರ್ಮನರೋ, ಯಾವ ಜನತೆಯೇ ಆಗಲಿ ಸಾಧಿಸಲು ಸಮರ್ಥ ವಾಗಿಲ್ಲ. ಆ ಜನತೆಯಲ್ಲೆಲ್ಲಾ ಪ್ರಾಚೀನಾದರ್ಶ ಮತ್ತು ಕಾಲ್ಪನಿಕ ಸಾಹಸಗಳಿಗೂ , ತತ್ತ್ವಜ್ಞಾನ ಮತ್ತು ಮತಧರ್ಮಗಳಿಗೂ ಪರಸ್ಪರ ತಿಕ್ಕಾಟ ಯಾವಾಗಲೂ ಇದ್ದುದೇ. ಕೆಲವು ಸಲ ಅದು ಭಯಂಕರವಾಗಿ ಕೆರಳುತ್ತದೆ, ಉಳಿದಂತೆ ಅದು ಸದಾ ಸೂಕ್ಷ್ಮವಾಗಿ ಇದ್ದೇ ಇರುತ್ತದೆ. ಭಾರತೀಯರ ಮನಸ್ಸಿನಲ್ಲಿ ನಿಜವಾದ ರಾಷ್ಟ್ರೀಯತೆಯ ವಿಕಾಸವು ಆರಂಭವಾದುದು ಶ್ರೀಕೃಷ್ಣನಿಂದ, ಆತನು ಸಾಧಿಸಿದ ಸಮನ್ವಯದ ಪ್ರಭಾವದಿಂದ. ತಾನು ಶಾಂತವಾಗಿದ್ದು ಜಗತ್ತಿನೊಡನೆಯೂ ಶಾಂತವಾಗಿ ರುವ ಇನ್ನೂ ದೊಡ್ಡ ಸಮನ್ವಯವು ಭಗವಾನ್ ಬುದ್ಧನಿಂದ, ಆತನ ಕಾರ್ಯಕಲಾಪಗಳಿಂದ ಆರಂಭವಾಯಿತು. ಈ ಸಮನ್ವಯವು ಭಾರತೀಯರ ಮನಸ್ಸಿನ ನಿರಂತರ ಧ್ಯೇಯ. ಅದನ್ನು ಮೊಟ್ಟಮೊದಲು ಪ್ರಚೋದಿಸಿದವನು ಶ್ರೀಕೃಷ್ಣ.

ಅನು : ತ. ಸು. ಶಾಮರಾಯ

೧೧

# ಶ್ರೀಕೃಷ್ಣನ ವಿಶ್ವ ಸಂದೇಶ*

## ೧. ಪ್ರಸ್ತಾವನೆ

ಶ್ರೀಕೃಷ್ಣನು ಯಾವಾಗ ಹುಟ್ಟಿದನೆಂಬುದನ್ನು ಇದಮಿತ್ಥಂ ಎಂದು ಹೇಳುವುದು ಕಷ್ಟ. ಆದರೂ ನಮ್ಮ ಇತಿಹಾಸದಲ್ಲಿ ಈ ಮಹದ್ಘಟನೆ ಈಗ ಮೂರು ಸಹಸ್ರ ವರ್ಷಗಳಿಗೂ ಪೂರ್ವದಲ್ಲಿಯೇ ನಡೆಯಿತೆಂಬುದು ನಿಸ್ಸಂದೇಹ. ಈಗ ಉಪಲಬ್ಧವಾಗಿರುವ ಆತನ ಜೀವನ ಯಾತ್ರೆಯ ಘಟನೆಗಳಿಂದ ಆತನ ಬಾಳು ಸುದೀರ್ಘವಾಗಿಯೂ, ಅತ್ಯಂತ ವಿಸ್ತಾರವಾಗಿ, ಆಳವಾಗಿ, ಜನಹಿತಸಾಧಕವಾಗಿಯೂ ಇದ್ದು, ಆತನು ತುಂಬು ಜೀವನವನ್ನು ಬಾಳಿದಂತೆ ಕಂಡುಬರುತ್ತದೆ. ಭಾರತದ ಜಾನಪದ ಕ್ಷೇತ್ರದಿಂದ ಉದಿಸಿ ಬಂದ ವ್ಯಕ್ತಿ, ಆತ. ಆತನು ತನ್ನ ಶೈಶವ, ಪೂರ್ವ ಬಾಲ್ಯಗಳನ್ನು ಮಥುರೆಯ ಬಳಿಯಲ್ಲಿರುವ ಯಮುನಾ ನದೀ ತೀರದ ಒಂದು ಹಳ್ಳಿಯಲ್ಲಿ, ಅಲ್ಲಿನ ಜನರ ಪ್ರಾಣಿಗಳ ಮತ್ತು ಪ್ರಕೃತಿಯ ನಿಕಟ ಸಹವಾಸದಲ್ಲಿ ಕಳೆದನು. ಜೀವನಾರಂಭದಲ್ಲಿ ಆದ ಈ ಅನುಭವಗಳು ಚಿತ್ತಾಕರ್ಷಕವಾದ ಆತನ ವ್ಯಕ್ತಿತ್ವದಲ್ಲಿ ಗಾಢವಾದ ಮಾನವೀಯತೆ ಮತ್ತು ವಿಶ್ವಾದರಣೀಯವಾದ ವಿಶಿಷ್ಟ ಗುಣಗಳನ್ನು ರೂಪಿಸುವುದರಲ್ಲಿ ವಹಿಸಿರುವ ಪಾತ್ರ ಅಲ್ಪವಾದುದೇನೂ ಅಲ್ಲ. ಆತನ ಪಾತ್ರದಲ್ಲಿ ಸದಾ ನೆಲೆಸಿರುವ ಪ್ರಸನ್ನತೆ ಮಾನವೀಯತೆಗಳ ಜೊತೆಗೆ ಆಳವಾದ ಅಧ್ಯಾತ್ಮ ಜ್ಞಾನ, ಪ್ರಖರವಾದ ಬುದ್ಧಿಶಕ್ತಿ, ರಾಜಕೀಯ ಮತ್ತು ಸಾಮಾಜಿಕ ಪರಿಜ್ಞಾನಗಳು ಸೇರಿ ಅದರಿಂದ ಭಾರತಕ್ಕೆ ಒಬ್ಬ ಮಹಾಪುರುಷನ ಸೇವೆ ದೊರೆತಂತಾಯ್ತು. ಆತನು ತನ್ನ ಜೀವಿತಕಾಲದಲ್ಲಿಯೇ ನಮ್ಮ ಜನರನ್ನು ಸಚೇತನರನ್ನಾಗಿ ಮಾಡಿದನು. ಅಂದಿನಿಂದಲೂ ಆತನು ನಮ್ಮ ಚಿಂತನೆಯಲ್ಲಿಯೂ ಜೀವನದಲ್ಲಿಯೂ ಅದ್ಭುತ ರೀತಿಯ ಪ್ರಭಾವವನ್ನು ಬೀರುತ್ತಾ ಬಂದಿದ್ದಾನೆ.

## ೨. ಮಹಾ ಆಚಾರ್ಯರ ವಿಶಿಷ್ಟ ಲಕ್ಷಣಗಳು

ಮಹಾಗುರುವಾದವನು ಮಾನವನನ್ನು ಮಾನವನೆಂದು ಮಾತ್ರ ಲೆಖ್ಖ ಹಾಕುತ್ತಾನೆ ಹೊರತು, ಅವನು ಯಾವ ಜಾತಿ, ಯಾವ ಧರ್ಮಾನುಯಾಯಿ, ಯಾವ ನಿರ್ದಿಷ್ಟ ಸಂಪ್ರದಾಯಕ್ಕೆ ಸೇರಿದವನೆಂದು ನೋಡಿ ಮಣೆ ಹಾಕುವುದಿಲ್ಲ ; ಅದಕ್ಕೆ ಬದಲಾಗಿ ಆ ಸಿದ್ಧಾಂತ, ಸಂಪ್ರದಾಯಗಳನ್ನು ಮಾನವ ದೃಷ್ಟಿಯಿಂದ ನೋಡುತ್ತಾನೆ. ಇದು ಮಹಾಗುರುವಾದವನ ಮುಖ್ಯಲಕ್ಷಣ. ವ್ರತಾಚರಣೆ ಇರುವುದು ಮಾನವನಿಗಾಗಿಯೇ ಹೊರತು ಮಾನವನಿರುವುದು ವ್ರತಾಚರಣೆಗಾಗಿ ಅಲ್ಲ—ಎಂಬುದು ಆತನ ಉಪದೇಶ ವಾಕ್ಯ. ಮಾನವನನ್ನು ಸಂಕುಚಿತವಾದ ಸಂಕೇತ, ಸಮಯಗಳಿಗೂ ಬಿಕ್ಕಟ್ಟಾದ ರಾಜಕೀಯ ವ್ಯವಸ್ಥೆಗಳಿಗೂ ತಕ್ಕಂತೆ ಹೊಂದಿಕೊಳ್ಳಲು ನಿರ್ಬಂಧಪಡಿಸಿ, ಆ ಮೂಲಕ ಅವನ

* ೧೯೫೭ರ ಮಾರ್ಚ್ ೨೪ರಂದು ಆಕಾಶವಾಣಿ ದೆಹಲಿಯಿಂದ ಪ್ರಸಾರಿತವಾದ ಭಾಷಣ.

ವ್ಯಕ್ತಿತ್ವದ ಬೆಳವಣಿಗೆಯನ್ನು ಕುಂಠಿತಗೊಳಿಸುವಂತಹ ಜನನಾಯಕರೂ ಚಳವಳಿಗಳೂ ಇತಿಹಾಸದಲ್ಲಿ ಕಂಡುಬರುತ್ತಾರೆ. ಮತಧರ್ಮ ಮತ್ತು ರಾಜಕೀಯಗಳಲ್ಲಿ ಪಂಥಾಭಿಮಾನವೂ ಉದಿಸಿ, ಆಯಾ ಪಂಥದ ಪೂರ್ವಗ್ರಹ ಮತ್ತು ಹಕ್ಕುಗಳ ಹಿತದತ್ತ ಗಮನಿಸುತ್ತದೆಯೇ ಹೊರತು ಮಾನವನ ಅಖಂಡ ವ್ಯಕ್ತಿತ್ವದಿಂದ ಯಾವ ಸಾಧನೆಯಾಗಬಹುದೆಂಬುದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ; ಇದರಿಂದ ಅವನ ಜೀವನ ಮತ್ತು ಚಿಂತನೆಗಳಲ್ಲಿರುವ ವಿಶ್ವವ್ಯಾಪಕಶಕ್ತಿಯು ಇಣಿಕಿಹಾಕದಂತೆ ಪ್ರಬಲವಾದ ತಡೆಯುಂಟಾಗುತ್ತದೆ. ಆದರೂ ಆ ವಿಶ್ವ ವ್ಯಾಪಕ ಶಕ್ತಿಯು ಮೇಲೆದ್ದು ಕಾಣಿಸಿಕೊಳ್ಳಲು ಚಡಪಡಿಸಿತ್ತದೆ. ಈ ಚಡಪಡಿಕೆಯಿಂದ ಜಗತ್ತಿನಲ್ಲಿ ಎಲ್ಲೋ ಅಲ್ಲೊಬ್ಬ ಇಲ್ಲೊಬ್ಬರಂತಿರುವ ಅಪೂರ್ವ ಜಾತಿಯ ಗಂಡುಹೆಣ್ಣುಗಳು ಮೇಲೆದ್ದು, ತಮ್ಮ ಬಾಳಿನಲ್ಲಿ ವಿಶ್ವವ್ಯಾಪಕವೂ ಮಾನವೀಯವೂ ಆದ ಸಂದೇಶವನ್ನು ನೀಡುತ್ತಾರೆ. ಈ ಚಡಪಡಿಕೆಯ ಘಟನೆಗಳನ್ನು ಬರೆದಿಟ್ಟರೆ ಅವು ಮಾನವ ಇತಿಹಾಸದಲ್ಲಿ ಅತ್ಯಂತ ರಸವತ್ತಾದ ಅಧ್ಯಾಯಗಳಾಗುತ್ತವೆ.

### ೩. ಶ್ರೀಕೃಷ್ಣನ ಬಹುಮುಖ ವ್ಯಕ್ತಿತ್ವ

ಭಾರತದ ಸುದೀರ್ಘ ಇತಿಹಾಸದಲ್ಲಿ ಅಂತಹ ಉಜ್ವಲ ಮಹಿಮೆಯ ಅಧ್ಯಾಯಗಳಲ್ಲಿ ಮೊದಲನೆಯದು ಶ್ರೀಕೃಷ್ಣನ ಜೀವನ ಮತ್ತು ಸಂದೇಶಗಳನ್ನು ಕುರಿತು ಬರೆದುದು. ಆತನ ಜೀವನ ಚರಿತ್ರೆಯು ಬಹುಮುಖವಾದ ಆತನ ವ್ಯಕ್ತಿತ್ವ ಮತ್ತು ಆಸಕ್ತಿಗಳನ್ನು ನಮಗೆ ತಿಳಿಸುತ್ತದೆ. ಗೀತೆಯಲ್ಲಿರುವ ಆತನ ಸಂದೇಶದಲ್ಲಿ ಆತನ ವ್ಯಕ್ತಿತ್ವದ ಈ ಮುಖವು ಸ್ಪಷ್ಟವಾಗಿ ಪ್ರತಿಬಿಂಬಿತವಾಗಿದೆ. ವಿಶ್ವವ್ಯಾಪಿಯಾದ ಸಂದೇಶವನ್ನು ನೀಡಬೇಕಾದರೆ ಆತನು ವಿಶ್ವವ್ಯಾಪಿಯಾದವನೇ ಆಗಿರಬೇಕು. ಈ ವಿಶ್ವವ್ಯಾಪಕತೆಯು ಬಹುಕಾಲ ನಿಲ್ಲತಕ್ಕದ್ದೂ, ಚೈತನ್ಯಾತ್ಮಕವೂ ಆಗಬೇಕಾದರೆ ಅದರ ತಿರುಳು ಆಳವಾಗಿರುವಷ್ಟೇ ವಿಸ್ತಾರವಾಗಿರಬೇಕು, ತೀವ್ರವಾಗಿರುವಷ್ಟೇ ವ್ಯಾಪಕವಾಗಿರಬೇಕು. ನಡವಳಿಕೆಯಲ್ಲಿ ಹೊರ ನೋಟದಲ್ಲಿ ಅಗ್ಗದ ಧರ್ಮಸಮಾನತೆ ಕಂಡುಬಂದ ಮಾತ್ರಕ್ಕೆ ಅದು ನಿಜವಾದ ವಿಶ್ವವ್ಯಾಪಕತೆಯನ್ನು ಸೂಚಿಸುವುದಿಲ್ಲ. ತನ್ನ ಅಧ್ಯಾತ್ಮ ಜ್ಞಾನದ ತಳದಲ್ಲಿ ನೆಲೆಸಿರುವ ಮೌಲ್ಯಗಳಿಗೆ ತನ್ನ ಬಾಳಿನಲ್ಲಿಯೂ ಒಂದು ವಾಸ್ತವ ರೂಪವನ್ನು ಕೊಟ್ಟಿದ್ದರೆ ಮಾತ್ರ ಆ ಮನುಷ್ಯನು ಯಥಾರ್ಥವಾದ ಮತ್ತು ಚಿರಕಾಲ ನಿಲ್ಲಬಲ್ಲ ವಿಶ್ವವ್ಯಾಪಕತೆಯನ್ನು ಸಾಧಿಸಿದಂತಾಗುತ್ತದೆ. ಶಾಂತವೂ ಪರಿಮಿತವೂ ಆದ ವೈಯಕ್ತಿಕತೆಯ ಹಿಂದೆ ಅನಂತವೂ ಅಪರಿಮಿತವೂ ಆದ ಅಮೂರ್ತತ್ವವಿದೆ. ಮಾನವ ಜೀವನದ ತಳದಲ್ಲಿರುವ ಈ ಅಮೂರ್ತತ್ವವನ್ನು ಸಾಧಿಸಿದಾಗ ಮಾತ್ರವೇ ಆತನ ವ್ಯಕ್ತಿತ್ವವು ನಿರಾತಂಕವಾದ ಪ್ರೇಮ, ಕರುಣೆಗಳಿಂದ ತುಂಬಿ ಶ್ರೀಮಂತವಾಗುತ್ತದೆ ; ಮಾನವ ಮತ್ತು ಪ್ರಕೃತಿಗಳಲ್ಲಿರುವ ವಿಶ್ವವ್ಯಾಪಕ ದೃಷ್ಟಿಯನ್ನು ಪಡೆಯುತ್ತದೆ. ಮನುಷ್ಯನ ವ್ಯಕ್ತಿತ್ವದ ಔನ್ನತ್ಯ ಅವನ ಅಮೂರ್ತಿತ್ವದ ಆಳದಷ್ಟೇ ಉನ್ನತವಾಗಿರುತ್ತದೆ. ಜೀವನವನ್ನು ತಿಳಿದುಕೊಳ್ಳಬೇಕಾದರೆ ನಾವು ಅದನ್ನು ಮೊದಲು ನಿರಸನ ಮಾಡಿಕೊಳ್ಳಬೇಕು.

### ೪. ಗೀತೆಯಲ್ಲಿ ಶ್ರೀಕೃಷ್ಣನ ವಿಶ್ವ ಸಂದೇಶ

ಗೀತೆಯ ಕರ್ತೃ ತನ್ನ ಜೀವನ ಮತ್ತು ಕರ್ಮಗಳಲ್ಲಿ ಏನನ್ನು ಅಭಿವ್ಯಕ್ತಗೊಳಿಸಿದನೋ ಅದನ್ನೇ ಗೀತೆಯು ಮಾತುಗಳಲ್ಲಿ ಪ್ರತಿಪಾದಿಸುತ್ತದೆ. ಅದು ಮಾನವನ ಜಾತಿ, ಸಮಾಜ, ರಾಜಕೀಯ ಪಕ್ಷಗಳನ್ನು ಪರಿಗಣಿಸದೆ ವಿನಯದಿಂದ ಅವನ ಕೈಹಿಡಿದು, ಜೀವನದಲ್ಲಿ ಅತ್ಯುಚ್ಚವಾದುದನ್ನೂ ಅತ್ಯುತ್ತಮವಾದುದನ್ನೂ ಸಾಧಿಸುವತ್ತ ಹೆಜ್ಜೆ ಹೆಜ್ಜೆಯಾಗಿ ಕರೆಯೊಯ್ಯುತ್ತದೆ. ಭಾರತೀಯರ

ಆಧ್ಯಾತ್ಮಿಕ ಭಾವನೆಯ ಪ್ರಕಾರ ಜೀವನದಲ್ಲಿ ಅತ್ಯುಚ್ಚವಾದುದೂ ಅತ್ಯುತ್ತಮ ವಾದುದೂ ಎಂದರೆ ಮೋಕ್ಷ. ಅಥವಾ ಬಾಹ್ಯಾಭ್ಯಂತರ ಬಂಧನಗಳೆಲ್ಲದರಿಂದ ಬಿಡುಗಡೆ. ಗೀತೆಯು ಈ ಮಹೋನ್ನತ ಶ್ರೇಯಸ್ಸಿನ ನಾಲ್ಕು ಉಪಸಿದ್ಧಾಂತಗಳನ್ನು ಗುರುತಿಸುತ್ತದೆ.

ಮೊದಲನೆಯದಾಗಿ, ಮುಕ್ತಿಯ ಪ್ರಯೋಜನವೇ ಜೀವನದ ಉಳಿದೆಲ್ಲ ಮೌಲ್ಯಗಳಿಗೂ ಒಂದು ಅರ್ಥವನ್ನು ಕೊಡುವುದು ; ಎರಡನೆಯದಾಗಿ, ಮನುಷ್ಯನು ವೈಯಕ್ತಿಕವಾಗಿಯೂ ಸಂಘಜೀವಿಯಾಗಿಯೂ ಬಾಳುತ್ತಾ ಸಾಧಿಸುವ ಪ್ರಗತಿಯನ್ನು ಅಳೆಯಬೇಕಾದರೆ ಬಾಹ್ಯಾಭ್ಯಂತರ ಬಂಧಮುಕ್ತತೆಯು ಕ್ರಮಕ್ರಮವಾಗಿ ಹೇಗೆ ಸಾಧಿತವಾಗುತ್ತಿದೆ ಎಂಬ ಪ್ರಯೋಜನಾಂಶವನ್ನು ಆಧಾರವಾಗಿಟ್ಟುಕೊಳ್ಳಬೇಕು ; ಮೂರನೆಯದಾಗಿ ಈ ಪ್ರಯೋಜನವನ್ನು ಅಖಂಡವಾಗಿ ಸಾಧಿಸುವುದೇ ಆಧ್ಯಾತ್ಮಿಕ ಪರಿಪೂರ್ಣತೆ; ನಾಲ್ಕನೆಯದಾಗಿ, ಈ ಪರಿಪೂರ್ಣತೆಯು ನಮ್ಮ ಸ್ವಭಾವದ ಆಳದಲ್ಲಿಯೇ ಹುದುಗಿರುವುದರಿಂದ ಅದನ್ನು ಇಲ್ಲಿಯೇ, ಈಗಲೇ ಪಡೆಯುವುದು ಸಾಧ್ಯ, ಸತ್ತು ಮತ್ತಾವುದೋ ಜನ್ಮದಲ್ಲಿಯೇನೂ ಅಲ್ಲ.

ಮನುಷ್ಯನು ಮುಕ್ತಿಗಾಗಿ ಹೋರಾಡಬೇಕೆಂದಾಗ, ಆ ಮುಕ್ತಿಗೆ ಅಡ್ಡಿಯಾದ ಕೆಲವು ಆತಂಕಗಳಿವೆ ಎಂದಾಯಿತು. ಸರಳಜೀವಿಯಾದ ಅನಾಗರಿಕ ಮನುಷ್ಯನಿಂದ ಹಿಡಿದು, ಅಷ್ಟೇಕೆ ಅತ್ಯಂತ ಸರಳ ಜೀವಿಯಾದ ಪ್ರಾಣಿವರ್ಗದಿಂದ ಹಿಡಿದು ಯಂತ್ರಜ್ಞಾನದಲ್ಲಿ ನಿಷ್ಣಾತನಾದ ನಾಗರಿಕ ಮನುಷ್ಯ ಮತ್ತು ಆಧ್ಯಾತ್ಮಿಕವಾಗಿ ಅತ್ಯಂತ ಮುಂದುವರಿದ ಸಂತನವರೆಗೆ—ಎಲ್ಲರೂ ಮುಕ್ತಿ ಸಾಧನೆಯಲ್ಲಿ ತೊಡಗಿದ್ದಾರೆ. ಅವರೆಲ್ಲರೂ ಒಂದಲ್ಲ ಒಂದು ಬಗೆಯ ಅಡ್ಡಿ ಆತಂಕಗಳೊಡನೆ ಹೋರಾಡು ತ್ತಿದ್ದಾರೆ. ಈ ಅಡ್ಡಿ ಆತಂಕಗಳು ಪ್ರಾರಂಭದೆಸೆಯಲ್ಲಿ ಪರಿಸರಕ್ಕೆ ಸಂಬಂಧಿಸಿದವುಗಳಾಗಿರುತ್ತವೆ, ಕಡೆಗೆ ಅಂತರಂಗಕ್ಕೆ ಸಂಬಂಧಿಸಿದವುಗಳಾಗುತ್ತವೆ. ಇವೆರಡರ ಮಧ್ಯೆ ಮನಸ್ಸು ಪರಿಸರಗಳೆರಡೂ ಸೇರಿಕೊಂಡ ಎಷ್ಟೋ ಬಗೆಯ ಅಡ್ಡಿ ಆತಂಕಗಳಿರುತ್ತವೆ. ಕ್ರಿ.ಶ. ೧೮೯೧ರಲ್ಲಿ ಖೇತ್ರಿಯ ಮಹಾರಾಜರು 'ಜೀವನವೆಂದರೆ ಏನು ?' ಎಂದು ಪ್ರಶ್ನಿಸಿದಾಗ ಸ್ವಾಮಿ ವಿವೇಕಾನಂದರು ವೇದಾಂತಾನುಸಾರಿಯಾದ ಈ ಕೆಳಗಿನ ಉತ್ತರವನ್ನಿತ್ತರು (ಸ್ವಾಮಿ ವಿವೇಕಾನಂದರ ಜೀವನಚರಿತ್ರೆ—ಪ್ರಾಚ್ಯಪಾಶ್ಚಾತ್ಯ ಶಿಷ್ಯರಿಂದ, ಅದ್ವೈತಾಶ್ರಮ, ೧೯೪೯, ಪು. ೨೨೦) :

*ಕೆಳಕ್ಕೆ ತುಳಿಯುತ್ತಿರುವಂತಹ ಸನ್ನಿವೇಶಗಳಲ್ಲಿ ಬಾಳುತ್ತಿರುವ ಒಬ್ಬ ವ್ಯಕ್ತಿಯು ವಿಕಾಸಗೊಂಡು ಬೆಳೆಯುವುದೇ ಜೀವನ.*

ದಿಟ್ಟತನದ ಈ ಹೇಳಿಕೆಯ ಮಹದ್ವ್ಯಾಪಕವಾದ ಮುಷ್ಟಿಯಲ್ಲಿ ಸಾಮಾಜಿಕ ಸುಭದ್ರತೆ, ರಾಜಕೀಯ ಸ್ವಾತಂತ್ರ, ಬೌದ್ಧಿಕವಾದ ಏಳಿಗೆ, ಕಲಾತ್ಮಕವಾದ ಕುಶಲತೆ, ನೈತಿಕವಾದ ಸ್ಥೈರ್ಯ, ಆಧ್ಯಾತ್ಮಿಕವಾದ ಪರಿಪೂರ್ಣತೆ—ಮಾನವನ ಈ ಎಲ್ಲ ಆಶೋತ್ತರಗಳೂ, ಹೋರಾಟಗಳೂ ಅಡಕವಾಗಿವೆ. ಈ ಎಲ್ಲ ಕಾರ್ಯಗತಿಯು ಗೀತೆಯಲ್ಲಿ ಸೂತ್ರೀಕರಿಸಿರುವಂತೆ ಧರ್ಮದ ವ್ಯಾಪ್ತಿಗೆ ಒಳಪಡುತ್ತದೆ. ಅಭ್ಯುದಯ-ಸಾಮಾಜಿಕ ಸೌಖ್ಯವನ್ನು ಪಡೆಯುವುದಕ್ಕಾಗಿ ನಡೆಸುವ ಹೋರಾಟ, ನಿಶ್ರೇಯಸ—ಆಧ್ಯಾತ್ಮಿಕ ಪರಿಪೂರ್ಣತೆಗಾಗಿ ನಡೆಸುವ ಹೋರಾಟ ಈ ಎರಡನ್ನೂ ಅದು ಒಳಗೊಂಡಿದೆ.

## ೫. ಅಭ್ಯುದಯ ಮತ್ತು ನಿಃಶ್ರೇಯಸ

ಭಾರತೀಯ ಚಿಂತನೆಯು ಮಾನವೀಯವಾದ ಎಲ್ಲ ಆಶೋತ್ತರಗಳನ್ನೂ ಮತ್ತು ಹೋರಾಟಗಳನ್ನೂ ಈ ಅಭ್ಯುದಯ (ಸಾಮಾಜಿಕ ಸೌಖ್ಯ) ಮತ್ತು ನಿಃಶ್ರೇಯಸ (ಆಧ್ಯಾತ್ಮಿಕ ಪರಿಪೂರ್ಣತೆ) ಎಂದು ಎರಡು ಗುಂಪುಗಳಾಗಿ ವಿಂಗಡಿಸಿದೆ. ಗೀತೆಯು ತನ್ನ ಸಂದೇಶವನ್ನು ನೀಡುವಾಗ ಮಾನವ

ಜನಾಂಗವನ್ನು ಕುಲ, ಬುಡಕಟ್ಟು, ಜಾತಿ, ಮತ, ರಾಜಕೀಯ ಇತ್ಯಾದಿ ಭಿನ್ನಭಾವನೆಗಳಿಂದ ನೋಡುವುದಿಲ್ಲ ; ಅಂತಹ ಜಡ ವಿಭಿನ್ನತೆಗಳನ್ನೆಲ್ಲಾ ಖಂಡಿಸುವ ಮೇಲಿನ ಎರಡು ಪ್ರಕಾರಗಳಲ್ಲಿ ಒಂದಕ್ಕೆ ಸೇರಿದುದಾಗಿ ಮಾತ್ರ ನೋಡುತ್ತದೆ. ಪ್ರತಿಯೊಂದು ಸಮಾಜದಲ್ಲಿಯೂ ಬಹುಜನ ಅರಸುವುದು ಅಭ್ಯುದಯ ಅಥವಾ ಸಾಮಾಜಿಕ ಕ್ಷೇಮವನ್ನೇ ; ಅವರು ಅರ್ಹರಾಗಿರುವುದೂ ಅಷ್ಟಕ್ಕೇನೇ. ಕೇವಲ ಬಹು ಸ್ವಲ್ಪ ಜನ ಮಾತ್ರ ನಿಶ್ರೇಯಸ ಅಥವಾ ಆಧ್ಯಾತ್ಮಿಕ ಪರಿಪೂರ್ಣತೆಯನ್ನು ಬಯಸುತ್ತಾರೆ ; ಅವರು ಅದಕ್ಕೆ ಅರ್ಹರಾಗಿಯೂ ಇರುತ್ತಾರೆ. ಮತಧರ್ಮಗಳೂ ಪಂಥಗಳೂ ಈ ಮೂಲಭೂತವಾದ ವಿಷಯವನ್ನು ಧಿಕ್ಕರಿಸಿ ತಮ್ಮ ಅನುಯಾಯಿಗಳಿಗೆ ನಿಶ್ರೇಯಸದ ಆದರ್ಶವನ್ನೇ ಯಾವುದೋ ಒಂದು ಬಗೆಯ ಅಲೌಕಿಕರೂಪದಲ್ಲಿ ನೀಡಿದಾಗ, ಆ ಅನುಯಾಯಿಗಳು ಅದನ್ನು ಅರಗಿಸಿಕೊಂಡು ರಕ್ತಗತಮಾಡಿಕೊಳ್ಳಲಾರದೆ ಒಂದು ಕಡೆ ತಮ್ಮ ಪಂಥದ ನಿಷ್ಠೆ ಮತ್ತು ಪ್ರತ್ಯೇಕತೆಗಳಿಗೆ ತಕ್ಕಂತೆ ಅದನ್ನು ತಮ್ಮದೇ ಆದ ಲೌಕಿಕ ಮಟ್ಟಕ್ಕೆ ಕೆಳಗೆಳೆಯುತ್ತಾರೆ ; ಮತ್ತೊಂದು ಕಡೆ ಪಂಥಾಭಿಮಾನದಿಂದ ಮತ್ತಷ್ಟು ದ್ವೇಷ ಅಸಹನೆಗಳನ್ನು ಬೆಳೆಸುತ್ತಾರೆ. ವಿಕಸನಗೊಳ್ಳುತ್ತಿರುವ ಆತ್ಮಕ್ಕೆ ಬೇರೆ ಬೇರೆ ಪಂಥಗಳು ಅಗತ್ಯವೆಂಬುದನ್ನು ಗೀತೆ ಒಪ್ಪುತ್ತದೆ ; ಆದರೆ ಪಂಥಾಭಿಮಾನದಲ್ಲಿ ಕೆಡುಕೇ ವಿನಹ ಮತ್ತೇನೂ ಇಲ್ಲವೆನ್ನುತ್ತದೆ. ಪಂಥಾಭಿಮಾನದಿಂದ ಹುಟ್ಟುವ ಪ್ರತ್ಯೇಕತಾ ಮನೋಭಾವ ಮತ್ತು ಅಸಹನೆಗಳು ಆಧ್ಯಾತ್ಮಿಕ ಪ್ರತಿಷ್ಠಾಪೂಜನದಿಂದ ಅಂಕುರಿಸಿದ ಕೆಡಕುಗಳು ; ಅವು ಆತ್ಮಕ್ಕೆ ಭಯಂಕರವಾದ ಬಂಧನಗಳು. ಆತ್ಮವು ತನ್ನ ಅಂತರಂಗಜನ್ಯವಾದ ಸ್ವಾತಂತ್ರ್ಯ ಪರಿಪೂರ್ಣತೆಗಳನ್ನು ಸಾಧಿಸುವ ಮಾರ್ಗವನ್ನು ಹಿಡಿದು ಬೆಳೆಯಬೇಕು, ಬೆಳೆದು ವಿಕಾಸಗೊಳ್ಳಬೇಕು—ಎಂದು ಗೀತೆಯು ಒತ್ತಿ ಒತ್ತಿ ಹೇಳುತ್ತದೆ. ಇಷ್ಟೇ ಅಲ್ಲ, ಸಾಮಾಜಿಕ, ರಾಜಕೀಯ ಅಥವಾ ಮತಧರ್ಮದ ಪ್ರತಿಯೊಂದು ಬಗೆಯ ಸಾಧನೆ ಮತ್ತು ಶಿಕ್ಷಣವನ್ನೂ ಈ ಗುರಿ ಮತ್ತು ಉದ್ದೇಶಗಳ ಬೆಳಕಿನಲ್ಲಿಯೇ ವಿಮರ್ಶಿಸಿ ತೀರ್ಮಾನಿಸುತ್ತದೆ. ಮನುಷ್ಯನ ಪ್ರಗತಿಗೆ ಪಂಥದ ನಿಯಮ ಪಾಲನೆಯು ಸಹಾಯಕ ವಾಗುವುದಾದರೂ ಅದೇ ಪಂಥದ ದುರಭಿಮಾನವು ಪ್ರಗತಿಗೆ ಕಂಟಕವಾಗಿ, ವ್ಯಕ್ತಿತ್ವವನ್ನು ಕುಂಠಿತ ಗೊಳಿಸಿ ವಕ್ರವಾಗಿ ಮಾಡುತ್ತದೆ.

ಶಂಕರಾಚಾರ್ಯರು ತಮ್ಮ ಗೀತೆಯ ಭಾಷ್ಯದಲ್ಲಿ ಗೀತೆಯು ಪ್ರತಿಪಾದಿಸುತ್ತಿರುವ ವೈದಿಕ ಧರ್ಮವು ವಿಶ್ವವ್ಯಾಪ್ತಿವುಳ್ಳುದೆಂದು ಒತ್ತಿ ಹೇಳುತ್ತಾರೆ ; 'ದ್ವಿವಿಧೋಹಿ ವೇದೋಕ್ತೋ ಧರ್ಮಃ ಪ್ರವೃತ್ತಿ ಲಕ್ಷಣೋ ನಿವೃತ್ತಿ ಲಕ್ಷಣಶ್ಚ ಜಗತಃ ಸ್ಥಿತಿಕಾರಣಮ್, ಪ್ರಾಣಿನಾಂ ಸಾಕ್ಷಾತ್ ಅಭ್ಯುದಯ ನಿಃಶ್ರೇಯಸಹೇತುಃ—ವೈದಿಕ ಧರ್ಮವು ಪ್ರವೃತ್ತಿ (ಕರ್ಮ) ಮಾರ್ಗ, ನಿವೃತ್ತಿ (ಅಕರ್ಮ) ಮಾರ್ಗ ಎಂದು ಎರಡು ವಿಧವಾಗಿದೆ. ನಿಜವಾದ ಸಾಮಾಜಿಕ ರಕ್ಷಣೆ ಮತ್ತು ಆಧ್ಯಾತ್ಮಿಕ ಪರಿಪೂರ್ಣತೆಗಳನ್ನು ನೀಡುವುದರಿಂದ ಅವೆರಡೂ ಸೇರಿ ಜಗತ್ತಿನ ಜೀವಿಗಳು ಸುರಕ್ಷಿತವಾಗಿರುವುದಕ್ಕೆ ಕಾರಣವಾಗುತ್ತವೆ.

## ೬. ಮಾನವನ ಆಧ್ಯಾತ್ಮಿಕ ಶಿಕ್ಷಣದ ಎರಡು ಹಂತಗಳು

ಈ ಹಾದಿಯನ್ನು ಹಿಡಿದು ಹೊರಟಿರುವ ಗೀತೆಯು ತನ್ನ ಆಧ್ಯಾತ್ಮಿಕ ಧರ್ಮಬೋಧನೆಯಲ್ಲಿ ಸಮಾಜ ಜೀವನದ ಸುಖ ಸೌಭಾಗ್ಯಗಳ ಅನ್ವೇಷಣೆಯನ್ನೂ ಸಂಪಾದನೆಯನ್ನೂ ಧರ್ಮಸಮ್ಮತವೆಂದು ಸ್ವೀಕರಿಸಿದೆ ; ಅಂತಹ ಸುಖ ಸಂತೋಷಗಳು ಶನಿಸೃಷ್ಟಿ ಎಂದು ಹೇಯವಾಗಿ ಪರಿಗಣಿಸಿಲ್ಲ. ಜಗತ್ತಿನಲ್ಲಿ ಜೀವಿಸವುದೇ ಲೌಕಿಕವೆಂದೇನೂ ಆಗುವುದಿಲ್ಲ ; ಇಂದ್ರಿಯಸುಖದಲ್ಲಿ ಸಿಕ್ಕಿಹಾಕಿಕೊಂಡು, ಅಲ್ಲಿಂದ ಮೇಲಕ್ಕೇಳುವುದೇ ಬೇಡವೆನ್ನುವುದು ಲೌಕಿಕ. ಇದು ಅಪಾಯಕರವಾದುದು. ಏಕೆಂದರೆ ವ್ಯಕ್ತಿಯು ತನ್ನ ಉನ್ನತಿಯನ್ನು ಸಮಗ್ರವಾಗಿ ಸಾಧಿಸಲು ಇದು ಅಡ್ಡಿಯಾಗುತ್ತದೆ. ಧಾರ್ಮಿಕ ಮೌಲ್ಯಗಳನ್ನು ಹೆಚ್ಚುಹೆಚ್ಚಾಗಿ ಸಾಧಿಸುವುದರಿಂದ ತನ್ನ ಬಾಳು ವಿಶಾಲವೂ

ಪರಿಪೂರ್ಣವೂ ಆಗುವಂತೆ ಮಾಡಿಕೊಂಡು, ಜಗತ್ತಿನಲ್ಲಿ ಬಾಳುತ್ತಾ ಕರ್ಮಪ್ರವೃತ್ತನಾಗಿದ್ದುಕೊಂಡೇ ಲೌಕಿಕದ ವಿಷಯ ವಾಸನೆಯನ್ನು ಮಾನವ ಗೆಲ್ಲಬಹುದು. ಒಂದು ಸಂಸಾರದಿಂದ ಹಿಡಿದು ಅಂತರ ರಾಷ್ಟ್ರೀಯ ಸಮಾಜದವರೆಗೆ ಎಲ್ಲ ಬಗೆಯ ಮಾನವ ಸಂಘಗಳೂ ಈ ಧಾರ್ಮಿಕ ಶಿಕ್ಷಣಕ್ಕೆ ನೆರವಾಗು ತ್ತವೆ. ಹಾಬ್ಸನು 'ಕ್ಷಣಿಕ, ಹೊಲಸು, ಪಾಶವೀಯ' ಎಂದು ಕರೆಯುವ (Leviathan Part I, Chap 13) ಇಂದ್ರಿಯಪ್ರಯೋಜನ ಮತ್ತು ವಿಷಯಸುಖಗಳಿಗಾಗಿ ಸ್ವಾರ್ಥಿಯಾಗಿ ಬಾಳುವ ಮನುಷ್ಯನು ಸ್ವತಂತ್ರ ಸಮಾಜವೊಂದರಲ್ಲಿ ಪರಸ್ಪರಾವಲಂಬನದ ಸಂತೋಷದಿಂದ ಕೂಡಿ, ಧಾರ್ಮಿಕ ಜೀವನದ ವೈಶಾಲ್ಯತೆ ಮತ್ತು ಪರಿಪೂರ್ಣತೆಗಳುಳ್ಳಂತಹ ವಿಕಾಸವನ್ನು ಪಡೆಯುತ್ತಾನೆ. ಇದು ಅವನ ಆಧ್ಯಾತ್ಮಿಕ ಶಿಕ್ಷಣದ ಸ್ವರೂಪ. ಮೊದಮೊದಲು ಈ ಶಿಕ್ಷಣವನ್ನು ಪಡೆಯಲು ಸಮಾಜದ ಒತ್ತಡ ಬೇಕಾಗುತ್ತದೆ. ಧಾರ್ಮಿಕ ದೃಷ್ಟಿಯು ವೃದ್ಧಿಯಾದ ಮೇಲೆ ಇದನ್ನು ಪಡೆಯುವುದ ಕ್ಕಾಗಿ ತಾನೇ ಸ್ವತಂತ್ರವಾಗಿ ಮತ್ತು ಸಂತೋಷದಿಂದ ಅದನ್ನು ಸಂಪಾದಿಸಹೊರಡುತ್ತಾನೆ. ಬಾಹ್ಯ ಪರಿಸರ ವನ್ನು ಹಿಡಿತದಲ್ಲಿಟ್ಟುಕೊಂಡು ನಿರ್ವಹಿಸುವುದರ ಮೂಲಕ ಮನುಷ್ಯನು ಸಾಧಿಸುವ ಸ್ವಾತಂತ್ರ್ಯವೇ ನಾಗರಿಕತೆ. ಆದರೆ ನಾಗರಿಕತೆಯೇ ಮಾನವನ ಸ್ವಾತಂತ್ರ ಹೋರಾಟದ ಹೆಗ್ಗುರಿಯಲ್ಲ. ಈ ಹೋರಾಟವನ್ನು ಮುಂದುವರೆಸಿ ಅಂತರಂಗದ ಪರಿಸರವನ್ನು, ಎಂದರೆ ತನ್ನ ಮನಸ್ಸು ಮತ್ತು ಹೃದಯಗಳ ಶಕ್ತಿಯನ್ನು (ಇವೇ ಅವನ ಬಾಹ್ಯಜೀವನ ಮತ್ತು ಸ್ವಾತಂತ್ರ್ಯಗಳ ಸಂತೋಷಗಳನ್ನು ನೀಡತಕ್ಕುವು) ಸ್ವಾಧೀನಪಡಿಸಿಕೊಂಡು ನಿರ್ವಹಿಸುವುದರಿಂದ ಮಾತ್ರವೇ ವಿಮೋಚನೆಯ ಸಂಪೂರ್ಣಾರ್ಥವನ್ನು ಮೆಚ್ಚಿ, ತನ್ನ ಸ್ವಂತ ವ್ಯಕ್ತಿತ್ವದ ಗಂಭೀರ ನಿಲುವನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳಲು ಪ್ರಾರಂಭಿಸುತ್ತಾನೆ. ಅವನ ಈ ಆಂತರಿಕ ಹೋರಾಟವು ತಾನು ಬಹುಕಾಲದಿಂದ ಪೋಷಿಸಿ ಕೊಂಡು ಬಂದಿದ್ದ ವಿಷಯೇಂದ್ರಿಯ ಸ್ವಭಾವದ ಪ್ರಚೋದನೆಗಳಿಗೆ ವಿರುದ್ಧವಾದುದಾಗಿದೆ; ಆದರೆ ಈಗ ತನ್ನ ವ್ಯಕ್ತಿತ್ವದಲ್ಲಿ ಹೊರಹೊಮ್ಮಲು ಚಡಪಡಿಸುತ್ತಿರುವ ಒಂದು ಶ್ರೇಷ್ಠ ಮೌಲ್ಯಕ್ಕಾಗಿ ಅವನು ಆ ವಿಷಯೇಂದ್ರಿಯ ಸ್ವಭಾವವನ್ನು ತಡೆಯುವುದು ಕರ್ತವ್ಯವೆಂಬ ಭಾವನೆಯನ್ನು ಪಡೆದಿದ್ದಾನೆ.

## ೨. ಬುದ್ಧಿಯ ಅಥವಾ ಯುಕ್ತಿಯ ಪ್ರಶಂಸೆ

ಇಂದ್ರಿಯಗಳ ಮತ್ತು ಕುರುಡು ಪ್ರೇರಣೆಗಳ ದಾಸ್ಯದಿಂದ ಮುಕ್ತಿಹೊಂದಿದ ಈ ವಿವೇಕವನ್ನು ಗೀತೆಯು ಬುದ್ಧಿ ಎಂದು ಕರೆಯುತ್ತದೆ. ತನ್ನ ಅಂತರಂಗದಲ್ಲಿರುವ ಈ ಬುದ್ಧಿಮೌಲ್ಯವನ್ನು ವೃದ್ಧಿಗೊಳಿಸುವುದೇ ಮನುಷ್ಯನ ಧಾರ್ಮಿಕ ಪ್ರಯತ್ನಗಳ ಉದ್ದೇಶ ಮತ್ತು ಗುರಿ. ಅದರ ಅಸ್ತಿತ್ವವು ಜ್ಞಾನಕ್ಕೆ ಸ್ಥಿರತೆಯನ್ನೂ, ವ್ಯಕ್ತಿತ್ವಕ್ಕೆ ಭದ್ರತೆಯನ್ನೂ, ನಡತೆಗೆ ಶಕ್ತಿಯನ್ನೂ ನೀಡುತ್ತದೆ. ಬುದ್ಧಿಯ ಮಟ್ಟವನ್ನು ಮುಟ್ಟಿದ ಜೀವನವೇ ನಿಜವಾದ ವಿಮೋಚನೆ, ಸಂತೋಷ. ಗೀತೆಯು ತನ್ನ ಅನೇಕ ಶ್ಲೋಕಗಳಲ್ಲಿ ಅದನ್ನು ಸ್ತುತಿಸುತ್ತದೆ. (II, ೪೮-೫೧) :

*ಹೇ ಅರ್ಜುನ ! ಆಸಕ್ತಿಯನ್ನು ಬಿಟ್ಟು, ಸಿದ್ಧಿ-ಅಸಿದ್ಧಿಗಳಲ್ಲಿ ಸಮಭಾವವುಳ್ಳವನಾಗಿ, ಯೋಗ(ಬುದ್ಧಿಯ)ದಲ್ಲಿದ್ದುಕೊಂಡು ಕರ್ಮವನ್ನು ಮಾಡು ; ಈ ಸಮತ್ವವೇ ಯೋಗವೆನಿಸು ವುದು.*

*ಎಲೈ ಅರ್ಜುನ ! ಕಾಮ್ಯಕರ್ಮವು ಬುದ್ಧಿಯೋಗಕ್ಕಿಂತಲೂ ಅತ್ಯಂತ ತುಚ್ಛವಾದುದು. (ಆದ್ದರಿಂದ) ಬುದ್ಧಿಯಲ್ಲಿ ಆಶ್ರಯವನ್ನು ಪಡೆ. ಫಲಾಕಾಂಕ್ಷಿಗಳಾದ ಜನರು ದೀನರು.*

*ಬುದ್ಧಿಯಿಂದ ಯುಕ್ತನಾದವನು ಪಾಪಪುಣ್ಯಗಳೆರಡನ್ನೂ ಇಲ್ಲಿಯೆ ಬಿಟ್ಟುಬಿಡುತ್ತಾನೆ. ಆದ್ದರಿಂದ ಯೋಗಕ್ಕಾಗಿ ಪ್ರಯತ್ನ ಮಾಡು. ಯೋಗ ಎಂದರೆ ಕರ್ಮದಲ್ಲಿ ಕೌಶಲ್ಯ ತೋರಿಸುವುದು.*

*ಬುದ್ಧಿಯುಕ್ತರಾದ ಜ್ಞಾನಿಗಳು ಕರ್ಮದಿಂದ ಹುಟ್ಟಿದ ಫಲವನ್ನು ಬಿಟ್ಟು, ಜನ್ಮವೆಂಬ ಬಂಧನದಿಂದ ಬಿಡುಗಡೆಯನ್ನು ಹೊಂದಿ, ಕ್ಲೇಶಶೂನ್ಯವಾದ ಪರಮಪದವನ್ನು ಹೊಂದುತ್ತಾರೆ.*

### ೮. ಶ್ರೀಕೃಷ್ಣನ ಸಂದೇಶ : ಅದರ ಸ್ವೋಪಜ್ಞತೆ

ಜೀವನದಲ್ಲಿನ ಸಂಯಮದ ಮೂಲಕವೇ ಬರುವ ಜೀವನದಲ್ಲಿನ ಸ್ವಾತಂತ್ರ್ಯವನ್ನು ಜೀವನದ ಶಕ್ತಿವಿಶೇಷಗಳನ್ನು ದಕ್ಷತೆಯಿಂದ ನಿರ್ವಹಿಸುವುದರ ಮೂಲಕ ಸಾಧಿಸಬಹುದು. ಗೀತೆಯಲ್ಲಿ ಶ್ರೀಕೃಷ್ಣನು ಹೇಳುವ ಮೂಲ ಸಂದೇಶವು ಇದೇ ಆಗಿದೆ—ಆತ್ಮಸಾಕ್ಷಾತ್ಕಾರವನ್ನೂ ಸ್ಥಿರ ಪ್ರಜ್ಞೆಯನ್ನೂ ಜೀವನ ಮತ್ತು ಕರ್ಮಗಳಿಂದ ಪಡೆಯಬೇಕು ; ಅದು (ಗೀತಾ ಸಂದೇಶವು) ಶಕ್ತಿ ಮತ್ತು ಶಾಂತಿಗಳ ಪರಿಪೂರ್ಣತೆಯನ್ನು ಸೂಚಿಸುತ್ತದೆ. ಮುಕ್ತಜೀವಿಯ ಈ ಜ್ಞಾನವನ್ನು ಕುರಿತು ಎರಡನೇ ಅಧ್ಯಾಯದ ಎರಡು ಶ್ಲೋಕಗಳು (೬೭, ೬೪) ಬಹು ಸುಂದರವಾಗಿ ಪ್ರತಿಪಾದಿಸುತ್ತವೆ.

*ಚಲಿಸುತ್ತಿರುವ ಇಂದ್ರಿಯಗಳನ್ನು ಯಾವ ಮನಸ್ಸು ಅನುಸರಿಸುತ್ತದೆಯೋ ಅದು ನೀರಿನಲ್ಲಿರುವ ದೋಣಿಯನ್ನು (ಪ್ರತಿಕೂಲವಾದ) ಗಾಳಿಯು ಹೊಡೆದುಕೊಂಡು ಹೋಗುವಂತೆ ಇವನ ಪ್ರಜ್ಞೆಯನ್ನು ಅಪಹರಿಸುತ್ತದೆ.*

*ಆದರೆ ರಾಗದ್ವೇಷಗಳಿಂದ ಬಿಡುಗಡೆಯನ್ನು ಹೊಂದಿ ತನ್ನ ವಶದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುತ್ತಿರುವ ಸಂಯತ ಚಿತ್ತವುಳ್ಳ ಮನುಷ್ಯನು ಪ್ರಸನ್ನತೆಯನ್ನು ಹೊಂದುವನು.*

### ೯. ಶ್ರೀಕೃಷ್ಣನ ಸಂದೇಶ : ಅದರ ವಿಶ್ವವ್ಯಾಪಕತೆ

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಇರುವ ಪರಿಪೂರ್ಣತೆಯನ್ನು ಆವಿರ್ಭಾವಗೊಳಿಸುವುದರ ಮೂಲಕ ಶುದ್ಧವೂ ಸ್ಥಿರವೂ ಸಮರ್ಥವೂ ಮತ್ತು ಉದಾರವೂ ಆದ ಆಧ್ಯಾತ್ಮಿಕ ಸ್ವಭಾವವನ್ನು ಬೆಳೆಸುವುದೇ ಈ ಸಂದೇಶದ ಹೆಗ್ಗುರಿ. ಸ್ವಾಮಿ ವಿವೇಕಾನಂದರು 'ಮತ ಧರ್ಮವೆಂದರೆ ಮಾನವನಲ್ಲಿ ಆಗಲೇ ಅಂತರ್ಗತವಾಗಿರುವ ದೈವಶಕ್ತಿಯನ್ನು ಆವಿರ್ಭಾವ ಗೊಳಿಸುವುದು'—ಎನ್ನುತ್ತಾರೆ. ಜೀಸಸ್‌ನು 'ಸ್ವರ್ಗದ ಸಾಮ್ರಾಜ್ಯ ನಿನ್ನೊಳಗೆ ಇದೆ' ಎನ್ನುತ್ತಾನೆ (ಲ್ಯೂಕ್ XVII-೨೧). ಮಾನವನ ಆಧ್ಯಾತ್ಮಿಕ ಶಿಕ್ಷಣಕ್ಕೆ ಗೀತೆಯು ಸೂಚಿಸುವ ವಿಶ್ವವ್ಯಾಪಕತೆಯು ಇಗೋ ಇಲ್ಲಿದೆ. ಅದು ಜಗತ್ತಿನ ಮತಧರ್ಮಗಳಲ್ಲಿರುವ ಪಂಥೀಯ ಮತ್ತು ಪ್ರಾದೇಶಿಕಾಂಶಗಳನ್ನು ಬಿಟ್ಟು, ಅವುಗಳಲ್ಲಿ ಪ್ರತಿಪಾದಿತವಾಗಿರುವ ಕ್ರಮ ಮತ್ತು ರೀತಿಗಳ ಮುಖ್ಯ ಲಕ್ಷಣಗಳನ್ನೇ ಒತ್ತಿ ಹೇಳುತ್ತದೆ.

ನಿಜವಾದ ಆಧ್ಯಾತ್ಮಿಕ ಪುರುಷನು ಇಡೀ ಮಾನವ ಜನಾಂಗದ ಕ್ಷೇಮಸಾಧನೆಗಾಗಿ ಶ್ರಮಿಸುತ್ತಾನೆ ; ಲೋಕದ ಕಲ್ಯಾಣವೇ ಆತನ ಜೀವನದ ಏಕೈಕ ಚಿಂತನೆ—ಎಂದು ಗೀತೆ ತಿಳಿಸುತ್ತದೆ (III-೨೫).

*ಎಲೈ ಅರ್ಜುನ ! ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳು ಹೇಗೆ (ಕರ್ಮವನ್ನು) ಮಾಡುತ್ತಾರೆಯೋ ಹಾಗೆಯೇ (ಕರ್ಮದಲ್ಲಿ) ಅನಾಸಕ್ತನಾದ ಜ್ಞಾನಿಯು ಲೋಕಸಂಗ್ರಹವನ್ನು ಇಚ್ಛಿಸುತ್ತಾ ಕರ್ಮವನ್ನು ಮಾಡಬೇಕು.*

ಅದರ ವಿಶ್ವವ್ಯಾಪಕತೆಯ ಮತ್ತೊಂದು ಕುರುಹೆಂದರೆ ಆಧ್ಯಾತ್ಮಿಕ ಪರಿಪೂರ್ಣತೆಗೆ ಬೇರೆ ಬೇರೆ ಮಾರ್ಗಗಳಿವೆ ಎಂಬುದನ್ನು ಸ್ವೀಕರಿಸುವುದು. ಇದೊಂದು ಭಾರತೀಯರಿಂದ ಅಂಗೀಕೃತವಾದ ಭಾವನೆ. ಗೀತೆಯೂ ಗೀತಾಚಾರ್ಯನೂ ಇದರ ಮಹಾ ಪ್ರಚೋದಕರು. ಇದರಲ್ಲಿ ಅಂತರ್ಗತವಾಗಿರುವ ತರ್ಕವೂ ಭಾರತೀಯರ ಅನುಭವದಲ್ಲಿ ಅದಕ್ಕೆ ದೊರೆತಿರುವ ಮನ್ನಣೆಯೂ ಅದನ್ನು ಆಧುನಿಕ

ಜಗತ್ತಿನಲ್ಲಿ ಹೆಚ್ಚುಹೆಚ್ಚಾಗಿ ಪುರಸ್ಕರಿಸಿ ಸ್ವೀಕರಿಸುವಂತೆ ಮಾಡಿವೆ. ಮತಧರ್ಮದ ಸ್ವರೂಪವು ಬೇರೆ ಬೇರೆ ತಂಡಗಳಾಗಿ ವ್ಯವಸ್ಥಿತವಾದಾಗ ಅದು ಸಾಮಾಜಿಕ ಅಥವಾ ರಾಜಕೀಯ ಸ್ವರೂಪದಷ್ಟೇ ವಕ್ರವಾಗಿ ಹೋಗುತ್ತದೆ. ಗೀತೆಯು ಮತಧರ್ಮದ ಮನೋಭಾವ ಮತ್ತು ಪ್ರವೃತ್ತಿಗಳಿಂದ ಹೊರಹೊಮ್ಮುವ ವಿವಿಧ ರೂಪಗಳನ್ನು ಸಮಾಲೋಚಿಸಿ, ಅವುಗಳನ್ನು ಶಾಸ್ತ್ರಬದ್ಧವಾದ ನಾಲ್ಕು ಪ್ರಸಿದ್ಧ ಮಾರ್ಗಗಳಾಗಿ ವಿಂಗಡಿಸುತ್ತದೆ : ೧. ಕರ್ಮಯೋಗ—ನಿಸ್ವಾರ್ಥವಾದ ಕರ್ಮಮಾರ್ಗ, ೨. ಭಕ್ತಿಯೋಗ—ಪ್ರೇಮದ ಮಾರ್ಗ, ೩. ರಾಜಯೋಗ—ಮನಸ್ಸಿನ ಏಕಾಗ್ರತೆಯ ಮಾರ್ಗ ಮತ್ತು ೪. ಜ್ಞಾನಯೋಗ—ತರ್ಕಸಮ್ಮತವಾದ ವಿವೇಚನಾ ಮಾರ್ಗ. ಜಗತ್ತಿನಲ್ಲಿ ಇರುವ ಎಲ್ಲ ಮತಗಳೂ ಈ ನಾಲ್ಕು ಮಾರ್ಗಗಳಲ್ಲಿ—ಅವುಗಳಲ್ಲಿ ಯಾವುದಾದರೂ ಒಂದು ರೂಪದಲ್ಲಿಯೋ ಅಥವಾ ವಿವಿಧ ರೀತಿಯಲ್ಲಿ ಸಂಯೋಜನೆಗೊಂಡ ಒಂದು ರೂಪದಲ್ಲಿಯೋ—ಅಂತರ್ಗತವಾಗಿವೆ. ಆಧ್ಯಾತ್ಮಿಕ ಪರಿಪೂರ್ಣತೆಯ ಸಾಧನೆಗಾಗಿ ತನ್ನ ಆರಾಧ್ಯ ದೈವದಲ್ಲಿ ಅಥವಾ ಅದರ ಹಲವು ಅವತಾರಗಳ ಪೈಕಿ ಒಂದರಲ್ಲಿ ಶ್ರದ್ಧೆ, ಪ್ರೇಮ, ಆರಾಧನೆಗಳನ್ನುಳ್ಳದು ಭಕ್ತಿಮಾರ್ಗ. ಇಲ್ಲಿಯೂ ಕೂಡ ತನ್ನ ಮನ ಬಂದುದನ್ನು ಆಯ್ದುಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯವನ್ನು ವ್ಯಕ್ತಿಗೆ ನೀಡುತ್ತದೆ, ಗೀತೆ. ಇದರ ಜೊತೆಯಲ್ಲಿಯೇ ಇತರರ ಸ್ವಾತಂತ್ರ್ಯವನ್ನು ಗೌರವಿಸುವಂತೆಯೂ ಪ್ರಬೋಧಿಸುತ್ತದೆ. ಏಕೆಂದರೆ ದೇವನೊಬ್ಬ ನಾಮ ಹಲವು ; ಅವನ ಬಳಿಗೆ ಹೋಗಲು ಇರುವ ಮಾರ್ಗಗಳು ಅನೇಕ. ಶ್ರೀಕೃಷ್ಣನು ಗೀತೆಯಲ್ಲಿ ಇದನ್ನು ಘಂಟಾಘೋಷವಾಗಿ ಹೇಳುತ್ತಾನೆ (VII-೨೧) : 'ಯಾವ ಯಾವ ಭಕ್ತನು ಯಾವ ಯಾವ ದೇವತಾಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುತ್ತಾನೋ ಅವನವನಿಗೆ ಅಚಲವಾದ ಶ್ರದ್ಧೆಯನ್ನು ನಾನು ಕೊಡುವೆನು'.

ಪಾರಮಾರ್ಥಿಕ ಅಹಂಕಾರ ಮತ್ತು ಅನ್ಯಮತದ ಅಸಹನೆಗಳು ಮತಧರ್ಮವನ್ನು ಜಾತೀಯತೆಯ ದೃಷ್ಟಿಯಿಂದ ಅನುಸರಿಸ ಹೊರಡುವುದರ ದುಷ್ಫಲ. ಇದರಿಂದ ಔದಾರ್ಯ ಸೋದರ ವಾತ್ಸಲ್ಯಗಳನ್ನು ನೀಗಿಕೊಂಡು ಮತಶ್ರದ್ಧೆಯನ್ನು ಗಳಿಸಿಕೊಳ್ಳಲಾಗುತ್ತದೆ. ಆಧ್ಯಾತ್ಮಿಕ ಜೀವನದಲ್ಲಿ ಗಾಢವಾದ ಶ್ರದ್ಧಾದರ್ಶವನ್ನು ಗೀತೆ ಪುರಸ್ಕರಿಸುತ್ತದೆ ; ಆದರೆ ಆ ಗಾಢತೆಯ ಜೊತೆಗೆ ಸ್ವೀಕಾರ ಮನೋಭಾವ ಸಾಹಚರ್ಯಗಳೂ ಅಗತ್ಯವೆಂದು ಬೋಧಿಸುತ್ತದೆ. ಇದು ಸಾಧ್ಯ ; ಏಕೆಂದರೆ, ಭಗವತ್ ಸಾಕ್ಷಾತ್ಕಾರ ಅಥವಾ ಆಧ್ಯಾತ್ಮಿಕ ಪರಿಪೂರ್ಣತೆಯ ಸಾಧನೆ ಎಂಬುದು ಮತಧರ್ಮಾನ್ವೇಷಣೆಯ ಒಂದು ಪರಮ ಗುರಿ ; ಅಷ್ಟೇ ಹೊರತು ಅದು ಮತದ ಸಿದ್ಧಿಯಾಗಲೀ ಅಥವಾ ನಿಷ್ಠೆಯ ಸಿದ್ಧಿಯೇ ಆಗಲಿ ಅಲ್ಲ—ಎಂಬುದು ಗೀತೆಯ ಮತ. ಆತ್ಮನು ಪ್ರಗತಿಪಥದಲ್ಲಿ ಮುಂದುವರೆಯುವಾಗ ಮತ, ಜಾತಿ, ದೇವಾಲಯಗಳೆಂಬುವು ತಮ್ಮ ಶಿಕ್ಷಣಕಾರ್ಯವನ್ನು ಮುಗಿಸಿದ ಮೇಲೆ ಕೈಬಿಡಬೇಕಾದುವುಗಳು. 'ಸ್ವರ್ಗದಲ್ಲಿರುವ ಭಗವಂತನು ಹೇಗೆ ಪರಿಪೂರ್ಣನೋ ಹಾಗೆಯೇ ನೀನೂ ಪರಿಪೂರ್ಣನಾಗಿರು' ಎಂಬುದು (ಮ್ಯಾಥ್ಯೂ V-೪೮) ಜೀಸಸ್‌ನ ಬುದ್ಧಿವಾದ. ಸ್ವರ್ಗ ಸಾಮ್ರಾಜ್ಯದಲ್ಲಿ ಜಾತಿಗಳೂ ಮೇಲು ಕೀಳುಗಳೂ ಇಲ್ಲ. ಆದ್ದರಿಂದ ಗೀತೆಯು ಸ್ವಾತಂತ್ರ್ಯದ ದೈವಿಕ ಗುಣವನ್ನು ಹೀಗೆ ಘೋಷಿಸುತ್ತದೆ (IV-೧೧) :

ಯಾರು ಹೇಗೆ ನನ್ನನ್ನು ಆಶ್ರಯಿಸುತ್ತಾರೋ ಹಾಗೆಯೇ ಅವರನ್ನು ನಾನು ಅನುಗ್ರಹಿಸುತ್ತೇನೆ ; ಎಲೈ ಅರ್ಜುನ ! ಮನುಷ್ಯರು ಸರ್ವಪ್ರಕಾರಗಳಿಂದಲೂ ನನ್ನ ಪಥವನ್ನೇ ಅನುಸರಿಸುತ್ತಾರೆ.

## ೧೦. ಮುಕ್ತಾಯ

ಭೂಮಿಯ ಮೇಲೆ ನಡೆಯುತ್ತಿರುವ ಮಾನವ ಜೀವನ ವ್ಯಾಪಾರವನ್ನು ತನ್ನ ವ್ಯಾಪಕ ದೃಷ್ಟಿಯಿಂದ ಗಮನಿಸುತ್ತಿರುವ ಗೀತೆಯು ಆ ಜೀವನ ವ್ಯಾಪಾರದ ಉದ್ದೇಶ, ಗುರಿಗಳ ಭಾವನೆಯನ್ನು—

ಆಧ್ಯಾತ್ಮಿಕ ಸ್ವಾತಂತ್ರ್ಯ ಮತ್ತು ಪರಿಪೂರ್ಣತೆಗಳನ್ನು—ಮಾನವನಿಗೆ ತಿಳಿಸಲು ಸದಾ ಪ್ರಯತ್ನಿಸುತ್ತಿದೆ ; ಜಡವಾದ ಜಾತಿ–ಮತ ಸಿದ್ಧಾಂತಗಳ ಚೌಕಟ್ಟಿನಲ್ಲಿ ಅವನು ಸಿಕ್ಕಿಹಾಕಿಕೊಳ್ಳುವುದನ್ನು ತಪ್ಪಿಸಿ ಇನ್ನೂ ಪ್ರಗತಿಪರವಾಗಿ ಬೆಳೆದು ವೃದ್ಧಿಯಾಗಬೇಕೆಂದು ಬುದ್ಧಿ ಹೇಳುತ್ತದೆ ; ಮಾರ್ಗಗಳು ಹಲವಾದರೂ ಗುರಿಯೊಂದೇ ಎಂಬುದನ್ನು ನಯವಾಗಿ ತಿಳಿಸಿ ಪರಮತಸಹಿಷ್ಣುತೆ ಮತ್ತು ಸಾಹಚರ್ಯಗಳ ಉತ್ಸಾಹಗಳನ್ನು ಪ್ರೇರಿಸುತ್ತದೆ. ಆಧುನಿಕ ಜಗತ್ತು ಇಂದಿನ ಜೀವನ ಮೌಲ್ಯ ಗುರಿಗಳ ಗೊಂದಲ ಸ್ಥಿತಿಯಲ್ಲಿ ಗೀತೆಯ ಆದರ್ಶವನ್ನು ಅರ್ಥಮಾಡಿಕೊಂಡು, ವೈದಿಕ ಶಾಂತಿಪಾಠದಲ್ಲಿ ರಮ್ಯವಾಗಿ ಹೇಳಿರುವಂತೆ ಅಸತ್ತಿನಿಂದ ಸತ್ಯಕ್ಕೆ, ಕತ್ತಲಿನಿಂದ ಬೆಳಕಿಗೆ, ಮೃತ್ಯುವಿನಿಂದ ಅಮೃತತ್ವಕ್ಕೆ ತನ್ನ ಹಾದಿಯನ್ನು ಬದಲಾಯಿಸಿಕೊಳ್ಳಬೇಕು (ಬೃಹದಾರಣ್ಯಕೋಪನಿಷತ್ (I-೩-೨೮).

ಅಸತೋಮಾ ಸದ್ಗಮಯ ;
ತಮಸೋಮಾ ಜ್ಯೋತಿರ್ಗಮಯ ;
ಮೃತ್ಯೋರ್ಮಾಽ ಮೃತಂಗಮಯ—

*ಅಸತ್ಯವಾದುದರಿಂದ ಸತ್ಯಕ್ಕೆ ನನ್ನನ್ನು ಕರೆದೊಯ್ಯಿ, ಕತ್ತಲಿನಿಂದ ಬೆಳಕಿಗೆ ನನ್ನನ್ನು ಕರೆದುಕೊಂಡು ಹೋಗು, ಸಾವಿನಿಂದ ಅಮೃತತ್ವಕ್ಕೆ ನನ್ನನ್ನು ಕರೆದೊಯ್ಯಿ.*

ಅನು : ತ. ಸು. ಶಾಮರಾಯ


5

೧೨

# ಭಾರತೀಯರ ಆಧ್ಯಾತ್ಮಿಕ ಜೀವನ*

## ೧. ಪ್ರಸ್ತಾವನೆ

'ಭಾರತೀಯರ ಆಧ್ಯಾತ್ಮಿಕ ಜೀವನ'ವನ್ನು ಕುರಿತು ಮಾತನಾಡುವಂತೆ ನನ್ನನ್ನು ಕೇಳಿದ್ದೀರಿ. ಜಪಾನಿನವರಾದ ನೀವು ನಿಮ್ಮ ಆಧ್ಯಾತ್ಮಿಕ ಜೀವನದ ಬಹುಭಾಗವನ್ನು ಭಾರತದಿಂದಲೇ ಪಡೆದವರಾದ್ದರಿಂದ ಆ ದೇಶದ ಜನಜೀವನ, ಚಿಂತನೆಗಳನ್ನು ನಿಕಟವಾಗಿ ತಿಳಿಯಬೇಕೆಂಬ ನಿಮ್ಮ ಆಳವಾದ ಬಯಕೆ ಈ ವಿಷಯವನ್ನು ಆಯ್ದುಕೊಂಡಿರುವುದರಿಂದಲೇ ಸೂಚಿತವಾಗುತ್ತದೆ. ನಿಮ್ಮ ಈ ಉದ್ದೇಶ ಸಾಧನೆಗೆ ಇದಕ್ಕಿಂತಲೂ ಉತ್ತಮವಾದ ವಸ್ತುವನ್ನು ಆಯ್ದುಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಭಾರತದ ರಾಷ್ಟ್ರ ಜೀವನದ ಸಂಗೀತಕ್ಕೆ ಧರ್ಮವೇ ಮುಖ್ಯ ಸ್ವರವಾಗಿದ್ದುಕೊಂಡು ಬಂದಿದೆ, ಈಗಲೂ ಇದೆ. ಆದ್ದರಿಂದ ಆ ದೇಶದ ಜನರ ಆಧ್ಯಾತ್ಮಿಕ ಜೀವನವನ್ನು ಆಳವಾಗಿ ತಿಳಿದ ಹೊರತು ಭಾರತವನ್ನು ಸಾಕಷ್ಟು ಅಥವಾ ಸರಿಯಾಗಿ ತಿಳಿದಂತಾಗುವುದಿಲ್ಲ. ಈಗ ನಾನಿಲ್ಲಿ ನನ್ನ ದೇಶದ ಜನರ ಆಧ್ಯಾತ್ಮಿಕ ಆಶೋತ್ತರಗಳ ಮತ್ತು ಕಾರ್ಯಕಲಾಪಗಳ ಚಿತ್ರವನ್ನು ನಿಮಗೆ ಪರಿಚಯ ಮಾಡಿಕೊಡಲು ಪ್ರಯತ್ನಿಸುತ್ತೇನೆ.

## ೨. ಭಾರತ : ಅದರ ಬೃಹತ್ತು ಮತ್ತು ವೈವಿಧ್ಯ

ನೀವು ಸದಾ ಎರಡು ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕೆಂದು ನಾನು ನಿಮ್ಮನ್ನು ಪ್ರಾರ್ಥಿಸುತ್ತೇನೆ. ಒಂದು, ವಿಸ್ತೀರ್ಣ ಮತ್ತು ಜನಸಂಖ್ಯೆಯಲ್ಲಿ ಭಾರತದ ಬೃಹತ್ತು ; ಎರಡನೆಯದು, ಐದು ಸಹಸ್ರಕ್ಕೂ ಹೆಚ್ಚು ವರ್ಷಗಳಷ್ಟು ಕಾಲ ಬೆಳೆದು ಬಂದಿರುವ ಅದರ ಸುದೀರ್ಘ ಇತಿಹಾಸ. ಈ ಎರಡು ವಿಷಯಗಳು ಭಾರತ ಸಂಸ್ಕೃತಿ ಮತ್ತು ಅದರ ಜೀವನಕ್ಕೆ ಅಚ್ಚರಿಯನ್ನುಂಟು ಮಾಡುವ ಒಂದು ವೈವಿಧ್ಯವನ್ನು ಒದಗಿಸಿವೆ. ರಾಷ್ಟ್ರದ ಉತ್ತರ ದಿಕ್ಕಿನ ಗಡಿಯಲ್ಲಿ ಹಿಮಾಚ್ಛಾದಿತ ಶಿಖರ ಶೇಖರವಾದ ಹಿಮಾಲಯ ಪರ್ವತಗಳಿಂದ ಹಿಡಿದು ದಕ್ಷಿಣದ ಗಡಿಯಲ್ಲಿ ಹಿಂದೂ ಸಾಗರದ ದಂಡೆಯಲ್ಲಿರುವ ಕನ್ಯಾಕುಮಾರಿಯವರೆಗೆ, ಸುಮಾರು ಎರಡು ಸಹಸ್ರ ಮೈಲಿಗಳಷ್ಟು ಉದ್ದಳತೆ ; ಪೂರ್ವದಲ್ಲಿ ಬರ್ಮದ ಗಡಿಯಲ್ಲಿರುವ ಅಸ್ಸಾಮಿನ ದಟ್ಟವಾದ ಅರಣ್ಯಗಳಿಂದ ಹಿಡಿದು ಪಶ್ಚಿಮದಲ್ಲಿ ಪಾಕೀಸ್ತಾನದ ಗಡಿಯಲ್ಲಿರುವ ರಾಜಾಸ್ಥಾನದ ಮರುಭೂಮಿ ಮತ್ತು ಕಾಶ್ಮೀರದ ಸುಂದರ ಕಣಿವೆಗಳವರೆಗೆ ಸಾವಿರದ ಎಂಟುನೂರಕ್ಕೂ ಹೆಚ್ಚು ಮೈಲಿಗಳಷ್ಟು ಅಗಲ—ಇರುವ ಈ

* ೧೯೫೮ರ ಸೆಪ್ಟೆಂಬರ್ ೩೦ರಂದು ಜಪಾನಿನ ಟೋಕ್ಯೋ ವಿಶ್ವವಿದ್ಯಾನಿಲಯದಲ್ಲಿ ಮತ್ತು ಜೆಕೊಸ್ಲೊವೇಕಿಯಾದ ನಾಪ್ರಸ್ಟೆಕ್ ಮ್ಯುಸಿಯಂ ಹಾಲಿನಲ್ಲಿ ೧೯೬೧ರ ಜೂನ್ ೨೩ರಂದು ನೀಡಿದ ಉಪನ್ಯಾಸ.

ಭಾರತದಲ್ಲಿ ಹವ, ಸಸ್ಯ, ಪ್ರಾಣಿವರ್ಗ, ಸಂಸ್ಕೃತಿ, ಭಾಷೆ, ಮಾನವವರ್ಗ ಇತ್ಯಾದಿಗಳಲ್ಲಿ ಬೇಕಾದಷ್ಟು ವೈವಿಧ್ಯ ಇದೆ. ಈ ವಿಸ್ತಾರವಾದ ದೇಶ ಮತ್ತು ಜನಗಳ ಹಿನ್ನಲೆಯಲ್ಲಿ ಐದು ಸಹಸ್ರ ವರ್ಷಗಳಿಗೂ ಮೀರಿದ ಇತಿಹಾಸ ಮತ್ತು ಸಂಪ್ರದಾಯ ಪರಂಪರೆಯ ಪ್ರಭಾವ ಅಥವಾ ಪ್ರೇರಣೆ ಇದೆ. ಸುದೀರ್ಘ ಇತಿಹಾಸದ ಈ ಕಾಲದಲ್ಲಿ ರಾಷ್ಟ್ರದ ಮನಸ್ಸಿಗೆ ಹಲವು ಕೋನಗಳಿಂದ, ಹಲವು ಮಟ್ಟಗಳಿಂದ ಉಚ್ಛ್ರಾಯ ಸ್ಥಿತಿ-ಅಧೋಗತಿ, ಜಯ-ಅಪಜಯ, ಸ್ವತಂತ್ರ-ಪರತಂತ್ರ, ಜ್ಞಾನ-ಅಜ್ಞಾನ, ಬೆಳಕು-ಕತ್ತಲೆ ಇತ್ಯಾದಿ ಜೀವನಾನುಭವಗಳನ್ನು ಪಡೆಯಲು ಅವಕಾಶವಿತ್ತು. ತಮ್ಮ ಪ್ರಪ್ರಾಚೀನ ಕಾಲದ ಮಹಾಪುರುಷರೂ ಪ್ರತಿಭಾಶಾಲಿಗಳೂ ನಮ್ಮ ಜನರಿಗೆ ಒಂದು ದೊಡ್ಡ ಪಾಠವನ್ನು ಕಲಿಸಿದ್ದರು. ಜೀವನದ ಗುರಿ ಸುಖ ಅಥವಾ ದುಃಖವಲ್ಲ, ಅವೆರಡನ್ನೂ ನಿರ್ವಿಕಾರವಾಗಿ ಅಧ್ಯಯನ ಮಾಡುವುದರಿಂದ ಬರುವ ಜ್ಞಾನ—ಎಂಬುದೇ ಅದರ ಪಾಠ.

### ೩. ಭಾರತೀಯರ ಆಧ್ಯಾತ್ಮಿಕ ಮನಃ ಪರಿಪಾಕ

ಭಾರತದ ಜನರಲ್ಲಿ ಚಿಂತನಾಪರರಾದವರು ಹೆಚ್ಚಾಗಿಯೂ ಸಾಮಾನ್ಯ ಜನರು ಕಡಿಮೆಯಾಗಿಯೂ ಸ್ವಲ್ಪ ಹೆಚ್ಚು ಕಡಿಮೆ ಈ ಮನೋವೃತ್ತಿಯವರು. ಈ ಕಾರಣದಿಂದ ಹೊರನಾಡುಗಳಲ್ಲಿ ಈ ದೇಶವು ತತ್ತ್ವಜ್ಞಾನಿಗಳ ನಾಡೆಂದು ಪ್ರಸಿದ್ಧವಾಯಿತು. ಏಕೆಂದರೆ ಅಂತಹ ಮನೋಭಾವವು ವೈಜ್ಞಾನಿಕ ಮತ್ತು ದಾರ್ಶನಿಕ ಮನಸ್ಸಿನ ವಿಶಿಷ್ಟ ಲಕ್ಷಣ. ಆ ಬಗೆಯ ಮನಸ್ಸು ಮತ್ತು ಮನಃ ಪರಿಪಾಕಗಳಿಂದ ಕೂಡಿದ ಮಾನವನು ತನ್ನ ಬಾಳು ದೀರ್ಘವಾದಷ್ಟೂ, ಅನುಭವ ವೈವಿಧ್ಯಮಯವಾದಷ್ಟೂ ಹೆಚ್ಚು ಮಹತ್ತಾದ ಮತ್ತು ಆಳವಾದ ಜ್ಞಾನ ಪರಿಣತೆಯನ್ನೂ ಉದಾತ್ತ ದೃಷ್ಟಿಯನ್ನೂ ಸಾಧಿಸುತ್ತಾನೆ. ಈ ಚಿಂತನಾತ್ಮಕವಾದ ಮನಃಪರಿಪಾಕ ಇಲ್ಲದಿದ್ದರೆ ದೀರ್ಘ ಜೀವನವೆಂಬುದು ಬರಿಯ ಬದುಕಿರುವುದೆಷ್ಟೋ ಅಷ್ಟೇ ಹೊರತು ಇನ್ನೇನೂ ಪ್ರಯೋಜನವಿಲ್ಲ ; ಅಂಥವನಲ್ಲಿ ಮೊದಲ ಅನುಭವವು ಪುನರಾವೃತ್ತಿಯಾಗುತ್ತಾ ಹೋಗುತ್ತದೆಯೇ ಹೊರತು ಮನೋಭಾವದ ಪರಿಣತಿಯಾಗಲೀ ಮನಸ್ಸು ಹೃದಯಗಳನ್ನು ಹದಕ್ಕೆ ತರುವುದಾಗಲೀ ಸಾಧ್ಯವಾಗುವುದಿಲ್ಲ.

ವರ್ಡ್ಸ್‌ವರ್ತ್ ಕವಿಯು ತನ್ನ ಲೈನ್ಸ್ ಎಬೌ ಟಿಂಟರ್ನ್ ಅಬೇ (Lines above Tintern Abbey) ಎಂಬ ಕವನದಲ್ಲಿ ಹಾಡಿರುವುದು ಈ ಮನಃಪಾರಿಪಾಕದ ಕಾರ್ಯಗತಿಯನ್ನು ಕುರಿತೇ.

> *ಹಿಂದು ಮುಂದನ್ನು ತಿಳಿಯದ ಯೌವನ ಕಾಲದಲ್ಲಿ ಇದ್ದ ಹಾಗಿರದೆ(ಹೊಸ ನೋಟದಿಂದ) ಪ್ರಕೃತಿಯನ್ನು ಕಾಣಲು ಈಗ ಕಲಿತಿದ್ದೇನೆ ; ಆದರೆ ಆಗಾಗ ಮಾನವ ಜನಾಂಗದ ಮೌನವಾದ ಶೋಕ ಗೀತವನ್ನು ಕೇಳಿ, ನಾನು ಅವರನ್ನು ಹದಗೊಳಿಸಿ ನಿಗ್ರಹಿಸಲು ಶಕ್ತನಾಗಿದ್ದರೂ ಕಠೋರ ಕರ್ಕಶನಾಗಿರಲಾರೆ.*

ಇದು ವ್ಯಕ್ತಿಗಳ ವಿಚಾರದಲ್ಲಿ ಮಾತ್ರವೇ ಅಲ್ಲ, ರಾಷ್ಟ್ರಗಳ ಮತ್ತು ಸಂಸ್ಕೃತಿಗಳ ವಿಚಾರದಲ್ಲೂ ಸತ್ಯ. ಹಿಂಸಾಚಾರಗರ್ಭಿತವಾದ ಸಂಸ್ಕೃತಿಯು ದಾರ್ಶನಿಕ ಮನೋವೃತ್ತಿಯ ಪರಿಣತಿಯನ್ನು ಆಕ್ರಮಿಸಲು ಸಾಧ್ಯವಿಲ್ಲ. ಭಾರತದ ಪುಣ್ಯವಿಶೇಷದಿಂದ ಉಪನಿಷತ್ತಿನ ಮಹರ್ಷಿಗಳು ಮತ್ತು ಇತಿಹಾಸಪೂರ್ವದ ರಾಮ, ಕೃಷ್ಣರಿಂದ ಹಿಡಿದು ಇತಿಹಾಸ ಕಾಲದ ಬುದ್ಧ ಶಂಕರರು ಮತ್ತು ನಮ್ಮ ಕಾಲದ ರಾಮಕೃಷ್ಣ, ವಿವೇಕಾನಂದರವರೆಗೆ ನಮ್ಮ ಗುರುಗಳೂ ನಾಯಕರೂ ಆದವರೆಲ್ಲಾ ನಮ್ಮ ಜನರಿಗೆ ಈ ಮನೋಭಾವ ಮತ್ತು ಮನಃಪರಿಪಾಕ ಸ್ಥಿತಿಗಳು ಹಿಡಿಸುವಂತೆ ಸಹಾಯ ಮಾಡಿದ್ದಾರೆ.

ನಮ್ಮ ಸಂಸ್ಕೃತಿಯಲ್ಲಿ ಕರುಣೆ, ಮಾನವೀಯತೆಗಳು ನೆಲೆಸಿರುವುದಕ್ಕೂ, ಪರಮತ ಸಹಿಷ್ಣುತೆ ಮತ್ತು ಶಾಂತಸ್ವಭಾವಗಳನ್ನು ನಾನು ಪಡೆದಿರುವುದಕ್ಕೂ ಕಾರಣವೇನೆಂಬುದು ಇದರಿಂದ ಗೊತ್ತಾಗುತ್ತದೆ.

## ೪. ಉಪನಿಷತ್ತುಗಳು ಮತ್ತು ಧರ್ಮವಿಜ್ಞಾನ

ಮಾನವನ ಪಾರಮಾರ್ಥಿಕ ಜೀವನದ ವಿಜ್ಞಾನ ದರ್ಶನಗಳನ್ನು ಮೊಟ್ಟಮೊದಲು ಪ್ರತಿಪಾದಿಸಿದವರು ಉಪನಿಷತ್ತುಗಳ ಮಹರ್ಷಿಗಳು. ಈ ಕಾರ್ಯ ನಡೆದುದು ಬುದ್ಧನಿಗಿಂತಲೂ ಸುಮಾರು ಐನೂರರಿಂದ ಸಾವಿರ ವರ್ಷಗಳ ಹಿಂದೆ. ಉಪನಿಷತ್ತುಗಳಿಗಿಂತಲೂ ಹಿಂದೆ ವೇದಗಳ ಕಾಲದಲ್ಲಿ, ಅದಕ್ಕೂ ಪೂರ್ವದ ಮಹೆಂಜೊದಾರೋ ಕಾಲದಲ್ಲಿ ಕೂಡ ಪೂಜೆ ಮತ್ತು ಧಾರ್ಮಿಕ ಆಚರಣೆಗಳೂ, ಐತಿಹ್ಯ ಪುರಾಣಗಳ ನಂಬಿಕೆಗಳೂ ಬಳಕೆಯಲ್ಲಿದ್ದವು. ಇನ್ನೂ ಹೇಳುವುದಾದರೆ ಅಂತಹ ಧಾರ್ಮಿಕ ಆಚರಣೆಗಳು ಮಾನವ ಅಸ್ತಿತ್ವದೊಡನೆಯೇ ಸೇರಿಕೊಂಡಿರುತ್ತವೆ. ಅನಾಗರಿಕರಿಂದ ಹಿಡಿದು ಪ್ರಗತಿಪರರವರೆಗೆ ಎಲ್ಲರ ಜೀವನದಲ್ಲಿಯೂ ಕಾಣಬರುವ ಒಂದು ವಿಶಿಷ್ಟ ಲಕ್ಷಣ, ಅದು. ಆದರೆ ಆ ಧಾರ್ಮಿಕಾಚರಣೆ, ನಿಷ್ಠೆಗಳನ್ನು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿ ಸಾದೃಶ್ಯ ವೈದೃಶ್ಯಗಳ ಮೂಲಕ ಅವುಗಳಿಗೆ ಒಂದು ಅರ್ಥವನ್ನು ಕಲ್ಪಿಸುವುದೂ, ಅವುಗಳಲ್ಲಿರುವ ಪಾರಮಾರ್ಥಿಕ ತತ್ತ್ವಗಳಿಗೆ ತಕ್ಕಂತೆ ತರತಮ ಶ್ರೇಣಿಗಳಾಗಿ ಅವುಗಳನ್ನು ವಿಂಗಡಿಸುವುದೂ—ಸ್ವಲ್ಪದರಲ್ಲಿ ಹೇಳುವುದಾದರೆ ಧರ್ಮದ ಶಾಸ್ತ್ರವೊಂದನ್ನೂ ಧರ್ಮದ ಸಮಗ್ರ ಮನಶ್ಶಾಸ್ತ್ರವನ್ನೂ ಮತ್ತು ಧರ್ಮದ ದರ್ಶನ ಶಾಸ್ತ್ರವನ್ನು ಬೆಳೆಸುವುದು—ಇವು ಮೊಟ್ಟಮೊದಲು ಉಪನಿಷತ್ತುಗಳಲ್ಲಿ ಅಥವಾ ವೇದಾಂತದಲ್ಲಿಯೂ, ಆಮೇಲೆ ಬೇರೆ ಬೇರೆ ಇತರ ತತ್ತ್ವ ಸೂತ್ರಗಳಲ್ಲಿಯೂ ಸಾಧಿತವಾದುವು.

ಕಣ್ಣುಗಳನ್ನು ಮುಚ್ಚಿಕೊಂಡು, ಮನಸ್ಸನ್ನು ಅಂತರ್ಮುಖವಾಗಿ ಮಾಡಿ ಧ್ಯಾನ ಮಾಡುವ ಪದ್ಧತಿ ಈಗ ಐದು ಸಹಸ್ರ ವರ್ಷಗಳ ಕೆಳಗೆ ಮಹೆಂಜೊದಾರೋ ಕಾಲದಲ್ಲಿಯೇ ಭಾರತದಲ್ಲಿ ಬಳಕೆಯಲ್ಲಿತ್ತು. ಅಲ್ಲಿನ ಭೂ ಶೋಧನೆಯಿಂದ ದೊರೆತಿರುವ ಒಂದು ದೇವರ ವಿಗ್ರಹ ಕಣ್ಣು ಮುಚ್ಚಿಕೊಂಡು, ಮನಸ್ಸನ್ನು ಅಂತರ್ಮುಖವಾಗಿ ಮಾಡಿಕೊಂಡು ಯೋಗಮುದ್ರೆಯಲ್ಲಿ ಕುಳಿತಿದೆ. ಮುಂದಿನ ಯುಗಗಳಲ್ಲಿ ಶಿವನೆಂದು ಕರೆಯುವ ವಿಗ್ರಹದಂತೆಯೇ ಇರುವ ಆ ವಿಗ್ರಹದ ಸುತ್ತಲೂ ಸಾಧುವಾಗಿರುವ ವನ್ಯಮೃಗಗಳಿವೆ. ಋಗ್ವೇದವು ಪ್ರಕೃತಿ, ದೇವರು ಮತ್ತು ಮಾನವರಲ್ಲಿರುವ ನಿಕಟ ಬಾಂಧವ್ಯವನ್ನು ಹೇಳುವ ಸಂದರ್ಭದಲ್ಲಿ ತನ್ನ ಸರ್ವದೇವತಾಲಯದಲ್ಲಿರುವ ಬೇರೆ ಬೇರೆ ದೇವರುಗಳ ಪೂಜೆ, ಪ್ರಾರ್ಥನೆ ಮತ್ತು ಸಂಕೀರ್ತನೆಯ ಧರ್ಮವನ್ನು ವಿಶೇಷವಾಗಿ ನಿರೂಪಿಸುತ್ತದೆ. ಅದು ಸಮಾಜಜೀವಿಯಾದ ಮಾನವನ ಆರೋಗ್ಯ, ಭಾಗ್ಯ ಮತ್ತು ಸಂರಕ್ಷಣೆಗಳೇ ಗುರಿಯಾಗಿ ಉಳ್ಳ ಐಹಿಕ ಮತಧರ್ಮ ; ಪೂಜೆ ಮಾಡುವವನು ತನ್ನ ಕಣ್ಣುಗಳನ್ನು ತೆರೆದುಕೊಂಡೇ ಆಕಾಶದಲ್ಲಿರುವ ವಾಯು, ಪರ್ಜನ್ಯ, ಸೂರ್ಯ ಮೊದಲಾದ ದೇವತೆಗಳಿಗೆ ಪೂಜೆಯನ್ನು ಅರ್ಪಿಸುತ್ತಾನೆ. ಅದರ ಸರಳತೆ, ಸ್ವಯಂಪ್ರೇರಣೆಗಳು ಗಮನಾರ್ಹವಾದುವು. ಧರ್ಮದ ಈ ಎರಡು ರೂಪಗಳನ್ನೂ ಧಾರ್ಮಿಕ ಪ್ರವೃತ್ತಿಗಳ ಸಪ್ರಮಾಣವಾದ ಎರಡು ಬಗೆಯ ಅಭಿವ್ಯಕ್ತತೆಯೆಂದು ವೇದಾಂತ ಅಂಗೀಕರಿಸಿದೆ. ಜಗತ್ತಿನ ಎಲ್ಲ ಶ್ರೇಷ್ಠ ಧರ್ಮಗಳಲ್ಲಿಯೂ ಈ ಎರಡು ಮುಖಗಳೂ ಇದ್ದೇ ಇವೆ. ಅನೇಕ ವೇಳೆ ಇವೆರಡೂ ಪರಸ್ಪರ ಹೊಂದಿಕೊಳ್ಳದೆ, ಬೇರೆಬೇರೆಯಾಗಿದ್ದುಕೊಂಡು, ಇಹಜಗತ್ತಿನಿಂದ ಪರಲೋಕವು ಸಂಪೂರ್ಣ ಭಿನ್ನವಾದುದೆಂಬ ನಿಲುವನ್ನು ತಾಳುತ್ತವೆ. ಯಹೂದ್ಯಮತ, ಕ್ರೈಸ್ತಮತ, ಇಸ್ಲಾಂಮತ, ಜರತೂಷ್ಟ್ರಮತ, ಬೌದ್ಧಮತ, ಹಿಂದೂಮತ—ಇವುಗಳಲ್ಲೆಲ್ಲಾ ಸಾಮಾಜಿಕ ಮತ್ತು ಸಮಾಜಾತೀತ ಅಥವಾ ಇಂದ್ರಿಯಾತೀತ ಎಂಬ ಎರಡು ಅಂಶಗಳೂ ಬೇರೆ ಬೇರೆ ಪ್ರಮಾಣಗಳಲ್ಲಿ ಸೇರಿಕೊಂಡಿದ್ದು, ತಮ್ಮತಮ್ಮಲ್ಲಿಯೇ 'ಕೈತೂಕ ಬಾಯಿ ಬಣ್ಣ'ದ ಹೊಂದಿಕೆಯನ್ನು ಪಡೆಯುತ್ತವೆ. ಈ ಎರಡು ಅಂಶಗಳ ಪ್ರಾಧಾನ್ಯಕ್ಕೆ ಅನುಸಾರವಾಗಿ ಜಗತ್ತಿನ ಮತಧರ್ಮಗಳನ್ನೆಲ್ಲಾ ಇಂದ್ರಿಯಾತೀತ ಮತ್ತು ಅನಿಂದ್ರಿಯಾತೀತ ಎಂದು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಹಿಂದೂ ಧರ್ಮ, ಬೌದ್ಧ ಧರ್ಮ ಮತ್ತು ಕ್ರೈಸ್ತ ಧರ್ಮಗಳು ಇಂದ್ರಿಯಾತೀತದ

ಗುಂಪಿಗೆ ಸೇರುತ್ತವೆ ; ಯಹೂದ್ಯಮತ, ಇಸ್ಲಾಂಮತ, ಜರತೂಷ್ಟ್ರ ಮತಗಳು ಅನಿಂದ್ರಿಯಾತೀತ ವರ್ಗಕ್ಕೆ ಸೇರುತ್ತವೆ. ಒಂದೇ ದೇಶದಲ್ಲಿಯೇ ಎರಡೂ ಬಗೆಯ ಮತಧರ್ಮಗಳಿರಬಹುದು. ಉದಾಹರಣೆಗೆ ಜಪಾನಿನಲ್ಲಿ ಷಿಂಟೋ ಮತ ಮತ್ತು ಬೌದ್ಧ ಮತಗಳೂ, ಚೀನಾದಲ್ಲಿ ಕನ್‌ಫ್ಯೂಷಿಯಸ್ ಮತ, ಟಾವೋ ಮತಗಳೂ ಇವೆ. ಇವು ಆಧ್ಯಾತ್ಮಿಕ ಅಗತ್ಯಕ್ಕಿಂತಲೂ ಹೆಚ್ಚಾಗಿ ಸಾಮಾಜಿಕ ಔಚಿತ್ಯಕ್ಕೆ ತಕ್ಕಂತೆ ಹೊಂದಿಕೊಂಡು ಹೋಗುತ್ತವೆ.

### ೫. ಮಾನವನಲ್ಲಿ ಸಹಜವಾಗಿರುವ ದೇವತ್ವ

ಹೊರಗೆ ಸ್ಪಷ್ಟವಾಗಿ ತೋರುವ ಜೀವಾತ್ಮನ ಹಿಂದೆ ಯಥಾರ್ಥವಾದ ಆತ್ಮವೊಂದು ಅಡಗಿದೆ ಎಂದು ಉಪನಿಷತ್ತುಗಳು ಕಂಡುಹಿಡಿದ ಮೇಲೆ ಅವು ಇಂದ್ರಿಯಾತೀತ ಮತಧರ್ಮವನ್ನು ಶಿಖರ ಪ್ರಾಯವಾಗಿ ಬೆಳೆಸಿದವು ; ಆತ್ಮವೆಂಬುದು ಅವಿನಾಶಿ, ಸದಾಶುದ್ಧ, ಸರ್ವತಂತ್ರ ಸ್ವತಂತ್ರ ; ಜೀವಾತ್ಮವು ಸಾಂತ, ಮರ್ತ್ಯ ಮತ್ತು ಬಂಧಿತ. ಮಾನವನು ಪರಬ್ರಹ್ಮ ಸ್ವರೂಪಿ ಎಂಬ ಮಹಾ ಸತ್ಯವನ್ನು ಉಪನಿಷತ್ತುಗಳು ಘೋಷಿಸಿದವು ; ಅನಂತರ ಶತಮಾನಗಳಾದ ಮೇಲೆ ಬುದ್ಧನು 'ನಿರ್ವಾಣವೆಂಬುದು ಪ್ರತಿಯೊಬ್ಬನ ಆಜೀವಸಿದ್ಧ ಹಕ್ಕು' ಎಂದೂ, ಆತನಿಗಿಂತಲೂ ಈಚೆಗೆ ಹೊಸ ಒಡಂಬಡಿಕೆಗಳಲ್ಲಿ 'ಸ್ವರ್ಗ ಸಾಮ್ರಾಜ್ಯ ನಿನ್ನೊಳಗೇ ಇದೆ' ಎಂದೂ ಘೋಷಿಸಿ ಉಪನಿಷತ್ತುಗಳ ಮರುದನಿಯನ್ನೇ ನೀಡಿದ್ದಾರೆ. ದೇವತ್ವವೆಂಬುದು ಮಾನವನಲ್ಲಿರುವ ಗೂಢಾತ್‌ಗೂಢ ವಸ್ತು ; ಭೋಗವಸ್ತುಗಳಿಂದ ಇಂದ್ರಿಯಗಳನ್ನೂ ಮನಸ್ಸನ್ನೂ ತಪ್ಪಿಸಿ, ಅವುಗಳ ಶಕ್ತಿಯನ್ನೆಲ್ಲಾ ಏಕಾಗ್ರತೆಯ ಮಹತ್ ಪ್ರಯತ್ನದಿಂದ ಅಂತರಂಗದತ್ತ ತಿರುಗಿಸಿದರೆ ಅದನ್ನು ಪಡೆಯಬಹುದು. ಅಂತರ್ಮುಖ ವಾದ ಇಂತಹ ತೀಕ್ಷ್ಣದೃಷ್ಟಿಯಿಂದ ಮನುಷ್ಯನು ತಾನು ಅದ್ವೈತ, ಅಮರ, ಅಭಿನ್ನ ಎಂಬ ತನ್ನ ನಿಜವಾದ ಸ್ವರೂಪ ಜ್ಞಾನವನ್ನೂ ಶುದ್ಧನಾದ ಆತ್ಮನು ಭಿನ್ನರೂಪದಿಂದ ಕಾಣುವ ತನ್ನ ಬಾಹ್ಯ ವ್ಯಕ್ತಿತ್ವದ ಹಿನ್ನೆಲೆಯಲ್ಲಿದ್ದಾನೆಂಬುದನ್ನೂ ಅರ್ಥಮಾಡಿಕೊಳ್ಳಲು ಶಕ್ತನಾಗುತ್ತಾನೆ. ಇದು ವೇದಾಂತ ದಲ್ಲಿ ನಿರೂಪಿತವಾಗಿರುವ ಸುಪ್ರಸಿದ್ಧ ಯೋಗಸಿದ್ಧಾಂತ. ಬುದ್ಧನು ಇದಕ್ಕೆ ಅತ್ಯುತ್ತಮವಾದ ಉದಾಹರಣೆ.

### ೬. ಆಧ್ಯಾತ್ಮಿಕವಾಗಿ ಬಾಹ್ಯಾಭ್ಯಂತರಗಳ ಐಕ್ಯತೆ

ಆದರೆ ಉಪನಿಷತ್ತುಗಳು ಅಲ್ಲಿಗೆ ನಿಲ್ಲಲಿಲ್ಲ ; ಬಾಹ್ಯ ಪ್ರಪಂಚದ ನಿಜಸ್ವರೂಪವನ್ನು ಕುರಿತು ಮುಖ್ಯವಾದ ಪ್ರಶ್ನೆಯೊಂದನ್ನು ಅವು ಎತ್ತಿದವು. ಅವರ ಅಂತರಂಗದ ದಿವ್ಯ ಜ್ಞಾನವು ಬಹಿರಂಗ ಪ್ರಪಂಚದ ಸ್ವರೂಪವನ್ನೂ ಆಳವಾಗಿ ವಿವೇಚಿಸಲು ಅವರಿಗೆ ಸಹಾಯಕವಾಯಿತು. ಏಕೆಂದರೆ, ಎಡಿಂಗ್‌ಟನ್ನನು ಹೇಳುವಂತೆ ಬಾಹ್ಯಪ್ರಪಂಚದ ವಿಚಾರದಲ್ಲಿ ನಮಗಿರುವ ಜ್ಞಾನದ ಎಲ್ಲೆಯನ್ನು ದಾಟಿದ ಮೇಲೆ ನಮಗಾಗುವ ಅನುಭವಗಳಲ್ಲೆಲ್ಲಾ ಅಂತಃಪ್ರಜ್ಞೆಯೇ ಮೊದಲನೆಯದೆಂದೂ, ನೇರವಾದುದೆಂದೂ ನಾವು ಅರ್ಥಮಾಡಿಕೊಳ್ಳುತ್ತೇವೆ ; ಉಳಿದುದೆಲ್ಲವೂ ದೂರದ ಅನುಮಿತಿ, ಅಥವಾ ಜೀನ್ಸ್ ಹೇಳುವಂತೆ ಕೊನೆಯ ಉಪಾಯವಾಗಿ ನಾವು ಬೆಳಕಿನ ಅಲೆಗಳೆಂದು ಕರೆಯುವ ಅಲೆಗಳು. ನಾವು ಫೋಟಾನ್, ಎಲೆಕ್ಟ್ರಾನ್, ಪ್ರೋಟಾನ್‌ಗಳೆಂದು ವರ್ಣಿಸುವ ಇತರ ಅಲೆಗಳೂ ಕೂಡ ಕ್ರಮವಾಗಿ ಫೊಟಾನ್ಸ್ ಎಲೆಕ್ಟ್ರಾನ್ಸ್ ಮತ್ತು ಪ್ರೋಟಾನ್ಸ್‌ಗಳ ಜ್ಞಾನದಿಂದ ತುಂಬಿರುತ್ತವೆ'. ಈ ಸಮಸ್ಯೆಗೆ ಉಪನಿಷತ್ತುಗಳು ಕಂಡುಕೊಂಡ ಉತ್ತರವು ವೇದಾಂತ ಚಿಂತನೆಯನ್ನು ಮಹೋನ್ನತ ವಾದ ಆಧ್ಯಾತ್ಮಿಕ ಮಟ್ಟಕ್ಕೆ ಏರಿಸಿತು. ದೇವತ್ವವು ಮಾನವನ ಆತ್ಮದ ತಿರುಳೆಂದು ಈ ಹಿಂದೆಯೇ ಅವು ಕಂಡುಹಿಡಿದಿದ್ದವು; ಈಗ ಆ ದೇವತ್ವವು ಜಗತ್ತಿನ ತಿರುಳೆಂದೂ ಕಂಡುಹಿಡಿದವು. ಉಪನಿಷತ್ತು ಗಳ ವಿಶುದ್ಧ ದೃಷ್ಟಿಗೆ ವಿಶ್ವವು ಆಮೂಲಾಗ್ರವಾಗಿ ದೈವಸ್ವರೂಪವೆಂದು ಗೋಚರಿಸಿತು. ಪ್ರಕೃತಿ

ದೈವಸ್ವರೂಪ, ಮಾನವನೂ ದೈವಸ್ವರೂಪ ; ಹೀಗೆ ದೈವವೆಂಬುದು ಮಾನವ ಮತ್ತು ಪ್ರಕೃತಿಗಳ ಏಕತ್ವವಾಯಿತು. ಅವುಗಳ ದ್ವೈತವೇನಿದ್ದರೂ ಇಂದ್ರಿಯಗಳ ಮತ್ತು ಇಂದ್ರಿಯಬದ್ಧವಾದ ಮನಸ್ಸುಗಳ ಪ್ರಿಸಂನ ಮೂಲಕ ಗೋಚರವಾಗುವ ಅಂಶಜ್ಞಾನಕ್ಕೆ, ಪರಿಮಿತ ಜ್ಞಾನಕ್ಕೆ ಆರೋಪಿಸಲಾಯಿತು. ಈ ಮಾನವ ಪರಿಮಿತಿಯನ್ನು ಮೀರಿ ಅವಲೋಕಿಸಿದಾಗ ಜಗತ್ತು ದೈವ ಸ್ವರೂಪವಾಗುತ್ತದೆ. ಉಪನಿಷತ್ತುಗಳು ಅತ್ಯಂತ ಸಾರವತ್ತಾದ ಮತ್ತು ಗಂಭೀರವಾದ ತಮ್ಮ ವಾಣಿಯಲ್ಲಿ 'ಸರ್ವಂಖಲು ಇದಂ ಬ್ರಹ್ಮ—ಇದೆಲ್ಲವೂ ಬ್ರಹ್ಮವೇ ನಿಜ' ; 'ಏಕಂ ಏವ ಅದ್ವಿತೀಯಮ್—ಎರಡಿಲ್ಲದ ಒಂದೇ ಒಂದು' ; 'ನೇಹ ನಾನಾಸ್ತಿಕಿಂಚನ—ಇಲ್ಲಿ ನಾನಾತ್ವ ಎಂಬುದು ಇಲ್ಲವೇ ಇಲ್ಲ' ; 'ಅಯಂ ಆತ್ಮಾ ಬ್ರಹ್ಮ—ಈ ಆತ್ಮನೇ ಪರಬ್ರಹ್ಮ' ; 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ—ಬ್ರಹ್ಮನು ಸತ್ಯ, ಜ್ಞಾನ ಮತ್ತು ಅನಂತ' ; 'ಬ್ರಹ್ಮೇವೇದಂ ಅಮೃತಮ್—ಈ ಜಗತ್ತೆಲ್ಲವೂ ಅಮೃತವಾದ ಬ್ರಹ್ಮ'—ಎಂಬ ಈ ಸಿದ್ಧಾಂತವನ್ನು ಹುದುಗಿಸಿಟ್ಟಿದೆ.

## ೭. ಯೋಗವು ಅಧ್ಯಾತ್ಮ ಜೀವನದ ಶಾಸ್ತ್ರ ಮತ್ತು ಕಲೆ

ಹೀಗೆ ಉಪನಿಷತ್ತುಗಳು ಇಡೀ ಬ್ರಹ್ಮಾಂಡದ ಐಕ್ಯತೆಯನ್ನು ಘೋಷಿಸುವುದರ ಮೂಲಕ ಮಾನವನಿಗೂ ಪ್ರಕೃತಿಗೂ ಇದ್ದ ಕಂದರಕ್ಕೆ ಸೇತುವೆಯನ್ನು ಕಲ್ಪಿಸಿದುವು. ಈ ಒಂದು ಮಹತ್ ಭಾವನೆಯು ಇಹಲೋಕ—ಪರಲೋಕ, ರಹಸ್ಯಾತ್ಮಕವಲ್ಲದ ತತ್ತ್ವ-ರಹಸ್ಯಾತ್ಮಕ ತತ್ತ್ವ, ತರ್ಕ-ಶ್ರದ್ಧೆ, ಜೀವನ-ಧರ್ಮ, ಇವುಗಳಲ್ಲಿ ಮಾತ್ರವೇ ಅಲ್ಲದೆ ಧರ್ಮ-ಧರ್ಮಗಳಲ್ಲಿಯೂ ಮತ್ತು ಶ್ರದ್ಧೆ-ಶ್ರದ್ಧೆಗಳಲ್ಲಿಯೂ ಪರಸ್ಪರ ಇರಬಹುದಾದ ಹಲವಾರು ಸೂಕ್ಷ್ಮ ವ್ಯತ್ಯಾಸಗಳನ್ನು ನಿವಾರಿಸಿದೆ. ಕೆಲವು ಶತಮಾನಗಳಾದ ಮೇಲೆ ಈ ತೋರಿಕೆಯ ವ್ಯತ್ಯಾಸಗಳುಳ್ಳ ಧಾರ್ಮಿಕಾಂಶಗಳನ್ನೆಲ್ಲಾ ಶ್ರೀಕೃಷ್ಣನು ತನ್ನ ಭಗವದ್ಗೀತೆಯಲ್ಲಿ ವಿಸ್ತೃತ ಆಧ್ಯಾತ್ಮಿಕಸ್ವರೂಪದ ಸರ್ವಸಮನ್ವಯವನ್ನಾಗಿ ಮಾಡಿ ಒಂದೆಡೆ ಸೇರಿಸಿದನು. ಗೀತೆಯು ಎಲ್ಲ ಧರ್ಮಗಳ ರಹಸ್ಯಾತ್ಮಕವಾದ ಮತ್ತು ರಹಸ್ಯಾತ್ಮಕ ವಲ್ಲದ ಧಾರ್ಮಿಕ ತತ್ತ್ವಾಂಶಗಳನ್ನೂ—ಪ್ಲೆಟೋ ಮತ್ತು ಬೌದ್ಧಮತಾಂಶಗಳನ್ನೂ ಉಪನಿಷತ್ತುಗಳ ಅಧ್ಯಾತ್ಮಶಾಸ್ತ್ರವನ್ನವಲಂಬಿಸಿದ ಒಂದು ವ್ಯಾಪಕವಾದ ಪರಮಾರ್ಥದಲ್ಲಿ ಸಮನ್ವಯಗೊಳಿಸುತ್ತದೆ. ಇದೇ ಪಾತಂಜಲ ಮತ್ತು ಇತರ ಯೋಗಗಳಿಂದ ಭಿನ್ನವಾಗಿರುವ ಗೀತೆಯಲ್ಲಿನ ಯೋಗ. ಗೀತೆ ಯಲ್ಲಿರುವ ಯೋಗವು ಪಾರಮಾರ್ಥಿಕ ಜೀವನದ ಶಾಸ್ತ್ರ ಮತ್ತು ಕಲೆ. ಈ ಪರಿಪೂರ್ಣ ದೃಷ್ಟಿಯಿಂದ ಗೀತೆಯು ಪಾರಮಾರ್ಥಿಕ ಜೀವನದ ಬೇರೆ ಬೇರೆ ಎರಡು ಆವಿರ್ಭಾವಗಳನ್ನು ಕಂಡುಹಿಡಿಯಿತು ; ಒಂದು ಸಮಾಜ ನೀತಿಯ ಸ್ವರೂಪವುಳ್ಳದು, ಇದನ್ನು ಗೀತೆ ಸ್ಥೂಲವಾಗಿ 'ಧರ್ಮ' ಎಂದು ಕರೆಯು ತ್ತದೆ; ಮತ್ತೊಂದು ಸಮಾಜಾತೀತವಾದ ಪಾರಮಾರ್ಥಿಕ ಸ್ವರೂಪದ್ದು, ಇದನ್ನು ಗೀತೆಯು 'ಅಮೃತ' ಎಂದು ಕರೆಯುತ್ತದೆ. ಮೊದಲನೆಯದರಲ್ಲಿ ಮಾನವನು ತನ್ನ ಸಂಸಾರದ ಮತ್ತು ಸಮಾಜದ ಹೊಣೆ ಹೊರೆಗಳನ್ನು ನಿರ್ವಹಿಸುವುದರ ಮೂಲಕ ತನ್ನ ಭಾವನೆಗಳನ್ನೂ ಚಿಂತನೆಗಳನ್ನೂ ತಿದ್ದಿ ಹದಕ್ಕೆ ತರುವುದನ್ನು ಕಲಿಯುತ್ತಾನೆ ; ಹಾಗೆ ಮಾಡುವುದರ ಮೂಲಕ ಲೌಕಿಕ ಸುಖಾನುಭವವನ್ನು ಹೊಂದು ತ್ತಾನೆ. ಈ ಪಾರಮಾರ್ಥಿಕ ಶಿಕ್ಷಣದಿಂದ ತನ್ನ ಸಾಮಾಜಿಕ ಜೀವನದ ಆವರಣದಲ್ಲಿಯೇ ಆತನಿಗೆ ಸ್ವಾರ್ಥಾತೀತವಾದ-ಸಾಂತದಿಂದ ಮೇಲೇರುವ ಮತ್ತು ಅಂಶರೂಪವಾದ 'ಅಹಂ'ನಿಂದ ಸಾಮಾಜಿಕ ವ್ಯಕ್ತಿತ್ವದ ವ್ಯಾಪಕವೂ ಪರಿಪೂರ್ಣವೂ ಆದ ಸ್ಥಿತಿಗೆ ವಿಕಾಸಗೊಳ್ಳುವ—ಅನುಭವವಾಗುತ್ತದೆ. ಈ ಮಟ್ಟದಲ್ಲಿರುವಾಗ ಆತನು ವಹಿಸಬೇಕಾಗಿರುವ ಒಂದೇ ಒಂದು ಕಠಿಣವ್ರತವೆಂದರೆ ಆತನು ತನ್ನ ಆಸಕ್ತಿಯನ್ನೂ ಪ್ರೇಮವನ್ನೂ ವ್ಯಾಪಕವಾಗಿ ಬೆಳೆಸಿಕೊಳ್ಳಬೇಕು. ಅದು ಪ್ರೇಮ ಮತ್ತು ಸೇವೆ ಗಳನ್ನು ಒಳಗೊಂಡ ವ್ರತ ; ಸುಖಸಂತೋಷಗಳ ಸಂದರ್ಭದಲ್ಲೆಲ್ಲಾ ಅದನ್ನು ಆಶ್ರಯಿಸಬೇಕಾಗು

ತ್ತದೆ. ಅಂತಹ ವ್ಯಕ್ತಿಯು ಕಾರ್ಯತಃ ಸದ್ಗುಣಾಚರಣೆಯನ್ನು ಇಟ್ಟುಕೊಳ್ಳಬೇಕು. ಏಕೆಂದರೆ ಈ ವಲಯದಲ್ಲಿ ಮನುಷ್ಯತ್ವವನ್ನು ಸಾಧಿಸುವುದೇ ಹೆಗ್ಗುರಿಯಾಗಿರುತ್ತದೆ.

ಒಬ್ಬನ ಸಾಮಾಜಿಕ ವ್ಯಕ್ತಿತ್ವವು ಸಂಪೂರ್ಣವಾಗಿ ವಿಕಸಿತವಾದ ಮೇಲೆ, ಎಂದರೆ, ಅವನು ಮಾನವತ್ವವನ್ನು ಸಾಧಿಸಿದ ಮೇಲೆ ಪಾರಮಾರ್ಥಿಕ ಶಿಕ್ಷಣದ ಮುಂದಿನ ಘಟ್ಟವನ್ನು ಮುಟ್ಟಬೇಕಾಗುತ್ತದೆ. ತನ್ನ ಅಂತರಂಗದಲ್ಲಿರುವ ದೈವಸ್ವರೂಪವನ್ನು ಆತನು ನೇರವಾಗಿ ಸಂಧಿಸಬೇಕಾಗುತ್ತದೆ. ಹಿಂದಿನ ಘಟ್ಟದಲ್ಲಿ ಮಾನವತ್ವವನ್ನು ಸಾಧಿಸಿರುವುದರಿಂದ ಈ ಕ್ಲಿಷ್ಟಮಾರ್ಗದಲ್ಲಿ ಮುಂದುವರೆಯುವುದು ಸುಲಭವಾಗುತ್ತದೆ. ಕಾರ್ಯರಂಗವು ಬದಲಾಗಿರುವುದರಿಂದ ಇಲ್ಲಿನ ರೀತಿನೀತಿಗಳಲ್ಲಿಯೂ ಪ್ರಯೋಗತಂತ್ರಗಳಲ್ಲಿಯೂ ವ್ಯತ್ಯಾಸವಾಗುತ್ತದೆ. ತನ್ನ ಅಂತರಂಗದ ತಿರುಳನ್ನು ಭೇದಿಸಲು ಮನಸ್ಸನ್ನು ಹದಗೊಳಿಸುವುದಕ್ಕಾಗಿ ಆತನು ತನ್ನ ಬಾಹ್ಯವಾದ ಸನ್ನಿವೇಶ ಸಂದರ್ಭಗಳನ್ನೆಲ್ಲಾ ಪ್ರಶಾಂತನಾಗಿ ತಾಳಿಕೊಳ್ಳುವ ಸದ್ಗುಣವನ್ನು ಬಳಸಬೇಕಾಗುತ್ತದೆ. ಇದಾದ ಮೇಲೆ ಆತನು ಕ್ರಿಯಾತ್ಮಕ ಸದ್ಗುಣಗಳಿಂದ ಜಡಸದ್ಗುಣಗಳಿಗೆ, ಕರ್ಮದಿಂದ ಧ್ಯಾನಕ್ಕೆ ಮತ್ತು ಸಮಾಜ ಪ್ರೇಮದಿಂದ ಏಕಾಂತ ಪ್ರೇಮಕ್ಕೆ ಎಂದರೆ ಸಮಾಜವೆಂದರೆ ದ್ವೇಷವೇನೂ ಇರುವುದಿಲ್ಲ) ತಾನು ನೀಡಬೇಕಾದ ಅಗ್ರಮಾನ್ಯತೆಯನ್ನು ಬದಲಾಯಿಸಬೇಕಾಗುತ್ತದೆ. ಈ ಶಿಕ್ಷಣದಿಂದ ಮಾನವರ ವ್ಯಕ್ತಿತ್ವಕ್ಕೆ ಒಂದು ಗಾಂಭೀರ್ಯವು ಅವನ ನಡತೆಗೆ ಸ್ಥೈರ್ಯ ಸಾಮರ್ಥ್ಯಗಳೂ, ಅವನ ವರ್ತನೆಗೆ ಪ್ರಶಾಂತತೆ ಸಮತ್ವಗಳೂ ಬರುತ್ತವೆ ; ಏಕೆಂದರೆ ಈಗ ಆತನು ತನ್ನೊಳಗಿರುವ ಶಕ್ತಿಸಾಮರ್ಥ್ಯಗಳ ಕೇಂದ್ರವಾದ ತನ್ನ ಆತ್ಮವನ್ನೇ ಸೇರುತ್ತಾನೆ. ಈ ನಿಟ್ಟಿನಲ್ಲಿ ಅವನು ಮುಂದುವರಿಯುವ ಒಂದೊಂದು ಹೆಜ್ಜೆಯೂ ಆತನನ್ನು ಹೆಚ್ಚು ಪ್ರಶಾಂತನನ್ನಾಗಿ, ಸಂತೋಷಭರಿತನನ್ನಾಗಿ, ಕರುಣಾಮಯನನ್ನಾಗಿ ಮತ್ತು ದಕ್ಷನನ್ನಾಗಿ ಮಾಡುತ್ತದೆ. ಕಟ್ಟಕಡೆಯಲ್ಲಿ ಆತ್ಮಸಾಕ್ಷಾತ್ಕಾರವಾದಾಗ ಆತನ ಹೃದಯ ಬಂಧನವೆಲ್ಲಾ ಕ್ಷಯಿಸಿ ಹೋಗಿ ಆತನು ಸಾಂತಕ್ಕೆ ಅತೀತನಾಗಿ ತೊಳಗಿ ಬೆಳಗುತ್ತಾನೆ. ಈಗ ಆತನು ಅನಂತವಾದ ವ್ಯಕ್ತಿತ್ವವನ್ನು ಸಾಧಿಸಿರುತ್ತಾನೆ ; ಸಾಮಾಜಿಕ ನೀತಿಯ ಮೂಲಕ ಪ್ರಾರಂಭವಾದ ಆತನ ಶಿಕ್ಷಣ ಕ್ರಮವು ಇಲ್ಲಿ ಕೊನೆಯ ಘಟ್ಟವನ್ನು ಮುಟ್ಟುತ್ತದೆ. ಇಲ್ಲಿಗೆ 'ಮಾನವ, ನಿನ್ನನ್ನು ನೀನು ಅರ್ಥ ಮಾಡಿಕೋ' ಎಂಬ ರಹಸ್ಯ ಪ್ರಬೋಧನೆಯ ಸಂಪೂರ್ಣಾರ್ಥವನ್ನು ಸಾಧಿಸಿದಂತಾಗುತ್ತದೆ. ಗೀತೆಯು 'ಎಲ್ಲೆಲ್ಲಿಯೂ ಸಮದರ್ಶಿಯಾಗಿರುವ ಯೋಗ ಯುಕ್ತಾತ್ಮನು ಆತ್ಮನನ್ನು ಸರ್ವಭೂತಗಳಲ್ಲಿಯೂ ಸರ್ವಭೂತಗಳನ್ನು ಆತ್ಮನಲ್ಲಿಯೂ ಕಾಣುತ್ತಾನೆ' (VI-೨೯) ಎಂದು ಹೇಳುತ್ತದೆ. 'ಆತ್ಮನನ್ನು ಸರ್ವಭೂತಗಳಲ್ಲಿಯೂ ಸರ್ವಭೂತಗಳನ್ನು ಆತ್ಮನಲ್ಲಿಯೂ ಕಾಣಬಲ್ಲವನು ಅಂತಹ ತನ್ನ ಸಾಧನೆಯ ಫಲವಾಗಿ ಯಾರನ್ನೂ ದ್ವೇಷಿಸುವುದಿಲ್ಲ ; ಅಥವಾ ಇಲ್ಲದ ನಟನೆಯನ್ನು ಮಾಡುವುದಿಲ್ಲ. ಅಂತಹ ಉನ್ನತ ಯೋಗಸಿದ್ಧಿಯನ್ನು ಪಡೆದ ಮಹರ್ಷಿಗೆ ಎಲ್ಲ ಜೀವಿಗಳೂ ಆತ್ಮನೇ ಆಗಿರುವಾಗ ಯಾವ ಭ್ರಾಂತಿ ಅಥವಾ ಯಾವ ದುಃಖವು ತಾನೇ ಸಂಕಟ ಪಡಿಸಬಲ್ಲದು ?' ಎಂದು ಈಶೋಪನಿಷತ್ತು ಹೇಳುತ್ತದೆ (VI, VII).

## ೮. ಕರ್ಮ ಮತ್ತು ಧ್ಯಾನಗಳ ಐಕ್ಯತೆ

ಹೀಗೆ ಗೀತೆಯಲ್ಲಿ ವೈದಿಕ ಧರ್ಮದ ಎರಡು ಮುಖಗಳು ಸೇರಿಕೊಂಡಿವೆ ; ಮಾನವನ ಪಾರಮಾರ್ಥಿಕ ಜೀವನದ ವ್ಯಾಪಕ ನಿರೂಪಣೆಯಲ್ಲಿ ಸಾಮಾಜಿಕ ಮತ್ತು ಸಮಾಜಾತೀತ ಅಥವಾ ರಹಸ್ಯಾತ್ಮಕ ತತ್ತ್ವ, ಧರ್ಮ ಮತ್ತು ಅಮೃತ ಎಂಬ ಎರಡೆರಡು ಮುಖಗಳಿರುತ್ತವೆ ; ವೈದಿಕ ಧರ್ಮವು ಎಲ್ಲ ಧರ್ಮಗಳ ಈ ಎರಡು ಮುಖಗಳನ್ನು ಪ್ರತಿನಿಧಿಸುತ್ತದೆ. ವೇದಾಂತವು ಜಗತ್ತಿನ ಎಲ್ಲ ಮತ ಧರ್ಮಗಳ ಈ ಎರಡು ಸ್ವರೂಪಗಳಿಗೆ 'ಪ್ರವೃತ್ತಿ ಧರ್ಮ' (ಸಾಮಾಜಿಕ ಕರ್ಮದ

ಧರ್ಮ). 'ನಿವೃತ್ತಿ ಧರ್ಮ' (ಅಂತರಂಗ ಧ್ಯಾನದ ಧರ್ಮ) ಎಂಬ ಎರಡು ಸಾರ್ಥಕವಾದ ಹೆಸರುಗಳನ್ನು ಕೊಟ್ಟಿದೆ. ಆಧ್ಯಾತ್ಮಿಕ ಪರಿಪೂರ್ಣತೆಯನ್ನು ಪಡೆಯಬೇಕಾದರೆ ಪ್ರತಿಯೊಬ್ಬ ಸ್ತ್ರೀ ಪುರುಷನೂ ಈ ಎರಡು ಧರ್ಮಗಳ ನಿಯಮಗಳನ್ನು ಅತ್ಯಗತ್ಯವಾಗಿಯೂ ಆಚರಿಸಬೇಕೆಂದು ವೇದಾಂತ ತಿಳಿಸುತ್ತದೆ. ಸಮಗ್ರವಾದ ಆಧ್ಯಾತ್ಮಿಕ ಶಿಕ್ಷಣದಲ್ಲಿ ಸಾಮಾಜಿಕ ನೀತಿ ಮತ್ತು ಆಧ್ಯಾತ್ಮಿಕ ಯೋಗಗಳು ಕ್ರಮವಾಗಿ ಒಂದಾದ ಮೇಲೊಂದು ಬರತಕ್ಕವುಗಳಾಗಿವೆ. ವೇದಾಂತದ ದೃಷ್ಟಿಯಲ್ಲಿ ಇವೆರಡಕ್ಕೆ ಯಾವ ವಿರೋಧವೂ ಇಲ್ಲ, ಇರುವುದಕ್ಕೆ ಎಂದೆಂದಿಗೂ ಸಾಧ್ಯವಿಲ್ಲ. ಮಾನವ ಜೀವನದ ವ್ಯಾಪ್ತಿಯಲ್ಲಿ ಒಂದು ಪರಿಮಿತ ದೃಷ್ಟಿಯನ್ನು ಅಳವಡಿಸಿಕೊಂಡಾಗ ಮಾತ್ರ, ಅಥವಾ ಬಾಳಿನ ಅಭಿವ್ಯಕ್ತಿಯು ಉನ್ನತ ಮಟ್ಟಕ್ಕೆ ಏರಲು ನಿರಾಕರಿಸಿದಾಗ ಮಾತ್ರ ಅವುಗಳಲ್ಲಿ ವಿರೋಧ ತಲೆದೋರುತ್ತದೆ. ಒಂದು ಮಾತಿನಲ್ಲಿ ಹೇಳುವುದಾದರೆ, ಯಾವುದಾದರೂ ನಿರ್ದಿಷ್ಟವಾದ ಮಟ್ಟದಲ್ಲಿ ಪ್ರಗತಿ ಕುಂಠಿತವಾದಾಗ ಅವುಗಳಲ್ಲಿ ಪರಸ್ಪರ ವಿರೋಧ ಹುಟ್ಟಿಕೊಳ್ಳುತ್ತದೆ.

ಉಪನಿಷತ್ತುಗಳು ಜೀವನವನ್ನು ಚೈತನ್ಯಾತ್ಮಕವಾದ ಒಂದು ಚಲನೆ ಎಂದು ವರ್ಣಿಸಿದ್ದಾರೆ. ಅದರ ಈ ಚೈತನ್ಯಾತ್ಮಕ ಸ್ವಭಾವವನ್ನು ಸ್ಪಷ್ಟಪಡಿಸುವುದಕ್ಕಾಗಿ ಕುದುರೆ ಮತ್ತು ಸಾರಥಿಗಳಿಂದ ಕೂಡಿದ ರಥವೊಂದನ್ನು ಅದಕ್ಕೆ ಸಂಕೇತವಾಗಿ ಹೇಳುತ್ತಾರೆ. ದೈಹಿಕ, ಸಾಮಾಜಿಕ ಮತ್ತು ಧಾರ್ಮಿಕವಾದ ಎಲ್ಲ ಚಲನೆಗಳಿಗೂ ಒಂದು ಹೆಗ್ಗುರಿಯನ್ನು ಕಂಡುಹಿಡಿದು ಆ ಗುರಿಯನ್ನು ಮೋಕ್ಷಸಾಧನೆ, ಪರಿಪೂರ್ಣತೆ, ಆತ್ಮಸಾಕ್ಷಾತ್ಕಾರ, ದೈವಸಾಕ್ಷಾತ್ಕಾರ ಎಂಬ ಹೆಸರುಗಳಿಂದ ಕರೆದರು.

ಭರತಖಂಡದ ಅತ್ಯಂತ ದೊಡ್ಡ ತತ್ತ್ವಜ್ಞಾನಿಗಳಾದ ಶಂಕರರು (ಕ್ರಿ.ಶ. ಸು. ೭೮೮ರಿಂದ ೮೨೦) ತಮ್ಮ ಭಗವದ್ಗೀತಾ ಭಾಷ್ಯದ ಪ್ರಸ್ತಾವನೆಯಲ್ಲಿ ಧರ್ಮದ ಈ ಎರಡು ಮುಖಗಳನ್ನು ಪ್ರಸ್ತಾಪಿಸಿದ್ದಾರೆ.

> *'ವೈದಿಕಧರ್ಮವು ಪ್ರವೃತ್ತಿ (ಸಾಮಾಜಿಕ ಕರ್ಮ) ನಿವೃತ್ತಿ, (ಅಂತರಂಗ ಧ್ಯಾನ) ಎಂದು ಸ್ಪಷ್ಟವಾದ ಎರಡು ಭಾಗವಾಗಿ, ಜಗತ್ತಿನಲ್ಲಿ ಒಂದು ಕ್ರಮಬದ್ಧತೆಯನ್ನು ಸಾಧಿಸುವುದಕ್ಕಾಗಿ, ಯೋಜಿಸಲಾಗಿದೆ. ದ್ವಿಮುಖವಾದ ಈ ಧರ್ಮವು ಯಥಾರ್ಥವಾದ ಸಾಮಾಜಿಕ ಹಿತಸಾಧನೆಯನ್ನೂ ಸಮಸ್ತ ಜೀವಿಗಳ ಆಧ್ಯಾತ್ಮಿಕ ವಿಮೋಚನೆಯನ್ನೂ ದೃಷ್ಟಿಯಲ್ಲಿಟ್ಟು ಕೊಂಡಿದೆ.*

## ೯. ನಾಲ್ಕು ಯೋಗಗಳು

ಧರ್ಮವನ್ನು ಪ್ರವೃತ್ತಿ ಮತ್ತು ನಿವೃತ್ತಿ ಎಂದು ವಿಭಾಗ ಮಾಡಿದುದು ಮಾನವ ಹೃದಯದಲ್ಲಿರುವ ಆಸಕ್ತಿ, ಅಪೇಕ್ಷೆಗಳ ಆಧಾರದಿಂದ. ಮನುಷ್ಯನ ಮನೋಭಾವ ಮತ್ತು ಪ್ರವೃತ್ತಿಗಳ ಆಧಾರದಿಂದ ವೇದಾಂತವು ಧರ್ಮವನ್ನು ಬೇರೊಂದು ರೀತಿಯಲ್ಲಿಯೂ ವಿಭಾಗಿಸುತ್ತದೆ. ಇದು ಸುಪ್ರಸಿದ್ಧವಾದ ಜ್ಞಾನ, ಭಕ್ತಿ, ರಾಜ, ಕರ್ಮ ಎಂಬ ನಾಲ್ಕು ಯೋಗಗಳಾಗಿ ಮಾಡಿರುವ ವಿಭಾಗಗಳು. ಬೌದ್ಧಮತದ 'ಥೇರಾ ವಾದ' ರೂಪವೂ ಮತ್ತು ವೇದಾಂತದ ಕೆಲವು ನಿರ್ದಿಷ್ಟ ಮುಖಗಳೂ ಜ್ಞಾನಮಾರ್ಗಕ್ಕೆ ಸೇರುತ್ತವೆ. ಕ್ರೈಸ್ತಧರ್ಮ, ಸಾಮಾನ್ಯ ಬಳಕೆಯ ಹಿಂದೂ ಧರ್ಮ, ಇಸ್ಲಾಂ, ಯಹೂದ್ಯಮತ, ಜರತುಷ್ಟ್ರಮತ, ಮಹಾಯಾನ ಬೌದ್ಧ ಮತ—ಇವು ಭಕ್ತಿಮಾರ್ಗಕ್ಕೆ ಸೇರಿದವು, ರಾಜಯೋಗ, ಕರ್ಮಯೋಗಗಳು ಮೇಲಿನ ಎರಡು ವಿಭಾಗಗಳಲ್ಲೇ ಸಾಮಾನ್ಯ ರೀತಿಯಲ್ಲಿ ಸೇರಿಕೊಳ್ಳುತ್ತವೆ. ಆದರೆ ಅವು ಹಿಂದಿನ ಮತ್ತು ಇಂದಿನ ಎರಡು ಕಾಲಗಳಲ್ಲಿಯೂ ನಿರ್ದಿಷ್ಟವಾದ ಕೆಲವು ಸತ್ಯಾನ್ವೇಷಿಗಳಲ್ಲಿ ತಮ್ಮ ಸುಸ್ಪಷ್ಟ ರೂಪದಿಂದ ಕಾಣಿಸಿಕೊಳ್ಳದೆ ಹೋಗಿಲ್ಲ. ಅತಿ ಧರ್ಮಾಚರಣೆಯ ಅಥವಾ ಅತಿ ತಾತ್ತ್ವಿಕ ಚಿತ್ತವೃತ್ತಿಯುಳ್ಳ ಉತ್ಸಾಹಶೀಲರು (ಗಂಡು ಹೆಣ್ಣುಗಳು) ಕರ್ಮಯೋಗದ

ಶುದ್ಧಾಚರಣೆಯನ್ನು ಯಾವಾಗಲೂ ಅಂಗೀಕರಿಸಿಕೊಂಡು ಬಂದಿದ್ದಾರೆ ; ಅವರಂತೆಯೇ ಅತಿ ಧರ್ಮಾಚರಣೆ ಅಥವ ಅತಿ ತಾತ್ತ್ವಿಕ ಚಿತ್ತ ವೃತ್ತಿಯುಳ್ಳವರಾಗಿ ಧ್ಯಾನ ಶೀಲರಾದ ಗಂಡು ಹೆಣ್ಣುಗಳು ರಾಜಯೋಗದ ಪ್ರಯೋಗಶೀಲತೆಗೆ ಯಾವಾಗಲೂ ಆಕರ್ಷಿತರಾಗಿರುತ್ತಾರೆ.

ಈ ಬಗೆಯಾದ ವಿಭಜನೆಯು ಒಂದು ವಿಂಗಡನೆಯೇನೂ ಅಲ್ಲ, ಆದರೆ ನಿರ್ದಿಷ್ಟವಾದ ಒಂದು ಚಿತ್ತವೃತ್ತಿ ಮತ್ತು ಒಲವುಗಳ ಪ್ರಾಧಾನ್ಯತೆಯನ್ನು ಅವಲಂಬಿಸಿದುದು ಎಂದು ವೇದಾಂತವು ತಿಳಿಸುತ್ತದೆ. ಇವುಗಳ ಸಂಖ್ಯೆಯನ್ನು ತಗ್ಗಿಸಿ ವೇದಾಂತ ಮತ್ತು ಗೀತಗಳು ಜ್ಞಾನಯೋಗ, ಭಕ್ತಿಯೋಗ ಎಂಬ ಎರಡೇ ಯೋಗಗಳನ್ನು ತಿಳಿಸುತ್ತವೆ. ಕರ್ಮ ಮತ್ತು ರಾಜಯೋಗಗಳು ಭಕ್ತಿಯಲ್ಲಿ ಸೇರಿ ಹೋಗುತ್ತವೆ.

## ೧೦. ಭಕ್ತಿಯ ಸರ್ವೋತ್ಕೃಷ್ಟತೆ

ಮೇಲಿನ ಎರಡರಲ್ಲಿ ಭಕ್ತಿಯೋಗವೆಂಬುದು ಬಹುಮಟ್ಟಿನ ಸ್ತ್ರೀ-ಪುರುಷರಿಗೆಲ್ಲಾ ಆಧ್ಯಾತ್ಮದ ರಾಜಮಾರ್ಗವೆಂದೂ, ದೃಷ್ಟಿವೈಶಾಲ್ಯ, ವ್ಯಕ್ತಿಸಾಮರ್ಥ್ಯ ಮತ್ತು ಕರ್ಮಸಾಫಲ್ಯಗಳನ್ನು ನೀಡುವ ಪ್ರಾಯೋಗಿಕ ಅಧ್ಯಾತ್ಮದ ಕ್ರಮವನ್ನು ಒದಗಿಸುವುದೆಂದೂ ಗೀತೆಯು ತಿಳಿಸುತ್ತದೆ. ಆದರೆ ಜ್ಞಾನ ಮತ್ತು ತತ್ತ್ವದರ್ಶನದ ಮಾರ್ಗದರ್ಶನವು ಅದರ ಹಿನ್ನೆಲೆಯಲ್ಲಿ ಅತ್ಯಗತ್ಯವಾಗಿಯೂ ಇರಬೇಕು. ಇಲ್ಲಿ ಭಕ್ತನು ಪರಮಾತ್ಮನಲ್ಲಿ—ಎಲ್ಲ ಪ್ರಾಣಿಗಳ ಅಂತರಾತ್ಮನಾಗಿ ಪ್ರಕೃತಿಯಲ್ಲೆಲ್ಲಾ ನೆಲೆಸಿರುವ ಪರಮಾತ್ಮನಲ್ಲಿ—ಪ್ರೇಮದಿಂದ ನಡೆದುಕೊಳ್ಳುತ್ತಾನೆ ; ಪ್ರೇಮರೂಪಿಯಾದ ಆ ಪರಮಾತ್ಮನಿಗೆ ಅವನು ತನ್ನ ಪ್ರಾಣ ಕರ್ಮಗಳನ್ನು ಮುಡುಪಾಗಿಡುತ್ತಾನೆ ; ಪ್ರಾರ್ಥನೆ, ಸ್ತೋತ್ರ ಮತ್ತು ಧ್ಯಾನಗಳ ಮೂಲಕ ಅವನು ಆ ಪರಮಾತ್ಮನೊಡನೆ ವ್ಯವಹರಿಸಲು ಪ್ರಯತ್ನಿಸುತ್ತಾನೆ ; ಆತನ ಸೃಷ್ಟಿಯಲ್ಲೆಲ್ಲಾ ಆತನ ಸೇವೆಯನ್ನು ಸಲ್ಲಿಸಲು ಪ್ರಯತ್ನಿಸುತ್ತಾನೆ.

ಭಾರತೀಯರಲ್ಲಿ ಬಹುಜನರ ಧಾರ್ಮಿಕ ಮನೋಭಾವ ಮತ್ತು ಚಿತ್ತವೃತ್ತಿಯ ವಿಶಿಷ್ಟ ಲಕ್ಷಣ ವಿದು ; ಜಗತ್ತಿನಲ್ಲಿರುವ ಧರ್ಮನಿಷ್ಠರಲ್ಲಿ ಬಹು ಭಾಗದವರ ಮನೋಭಾವ ಮತ್ತು ಚಿತ್ತವೃತ್ತಿಗಳು ಈ ವಿಶಿಷ್ಟ ಲಕ್ಷಣಗಳುಳ್ಳವುಗಳೇ.

## ೧೧. ವೈವಿಧ್ಯತೆಯಲ್ಲಿ ಏಕತೆ

ಆದರ್ಶಯುತವಾದ ಈ ಹಿನ್ನೆಲೆಯನ್ನಿಟ್ಟುಕೊಂಡೇ ನಾವು ಭಾರತೀಯರ ಅಧ್ಯಾತ್ಮ ಜೀವನವನ್ನು ಗಮನಿಸಬೇಕು. ನಮಗೆ ಮೊಟ್ಟಮೊದಲು ಹೊಳೆಯುವುದೆಂದರೆ ಅದರ ಅಭಿವ್ಯಕ್ತತೆಯ ಅಪಾರ ವೈವಿಧ್ಯತೆ. ಭಾರತವು ಧರ್ಮ ಅಥವಾ ಸಂಸ್ಕೃತಿಯಲ್ಲಿ ಏಕರೂಪತೆಯ ಮಾದರಿಯು ಸರಿಯೆಂದು ಭಾವಿಸಲಿಲ್ಲ. ವಿವಿಧ ಅಭಿವ್ಯಕ್ತತೆಯನ್ನು ಏಕತೆಯ ಕೇಂದ್ರ ಸೂತ್ರದಲ್ಲಿ ನಿಲ್ಲಿಸುವುದನ್ನು ಅದು ಸರಿ ಎಂದುಕೊಂಡಿತು.

ಈ ಭಾವನೆಯು ಅದರ ಅಧ್ಯಾತ್ಮಜನ್ಯವಾದುದು ; ವೈವಿಧ್ಯತೆಯಲ್ಲಿ ಏಕತೆಯೇ ಸೃಷ್ಟಿಯ ರಚನಾ ವಿಧಾನ ; ಬೇಜಾರು ತರಿಸುವಂತಹ ಜಡಏಕರೂಪತೆಯಲ್ಲ ಎಂದು ಅದು ನಂಬುತ್ತದೆ. ಭಗವಂತನನ್ನು ಅರಸುವುದೆಂದರೆ ಅನೇಕತೆಯಲ್ಲಿ ಏಕತೆಯನ್ನು ಅರಸಿದಂತೆ. ಸೊನ್ನೆ ಅಥವಾ ಸೊನ್ನೆಗಳ ಹಿಂದಿನ ಒಂದು ಹೇಗೋ ಹಾಗೆ ಆ ಏಕತೆ ಎಂಬುದು ಅನೇಕತೆಗೆ ಒಂದು ಅರ್ಥವನ್ನೂ ಮಹತ್ತನ್ನೂ ಕಲ್ಪಿಸುತ್ತದೆ. ಆದ್ದರಿಂದ 'ಗುರಿ ಒಂದು, ಆದರೆ ಹಾದಿಗಳು ಹಲವು' ಎಂಬ ಭಾವನೆ ಯನ್ನು ಭಾರತವು ತನ್ನ ಧರ್ಮದಲ್ಲಿ ತಪ್ಪದೆ ಎತ್ತಿ ಹಿಡಿದಿದೆ.

## ೧೨. ಕ್ರಿಯಾತ್ಮಕವಾದ ಪರಮತಸಹಿಷ್ಣುತೆಯ ಸತ್ವ

ಆದ್ದರಿಂದ ಭಾರತೀಯರಿಗೆ ಬೇರೆ ಬೇರೆ ರೂಪದ ನಿಷ್ಠೆ ಮತ್ತು ಸಂಸ್ಕೃತಿಗಳನ್ನೂ, ನಂಬಿಕೆ ಮತ್ತು ಆಚರಣೆಗಳನ್ನೂ ಸ್ವೈರಣೆಯಿಂದ ಸಹಿಸುವುದು ಅವರ ದೃಷ್ಟಿ ಮತ್ತು ದರ್ಶನಗಳ ಸ್ವಾಭಾವಿಕ ಪರಿಣಾಮಗಳಾಗಿವೆ. ಶ್ರೀಕೃಷ್ಣನು ಗೀತೆಯಲ್ಲಿ 'ಜನರು ಯಾವ ಹಾದಿಯಲ್ಲಿಯೇ ನನ್ನ ಬಳಿಗೆ ಬರಲಿ, ಆಯಾ ಮಾರ್ಗಗಳಿಂದಲೇ ನಾನು ಅವರನ್ನು ಸ್ವೀಕರಿಸುತ್ತೇನೆ; ಹೇ ಅರ್ಜುನ ! ಎಲ್ಲ ಮಾರ್ಗಗಳೂ ನನ್ನ ಬಳಿಗೆ ಕರೆತರುತ್ತವೆ' ಎಂದು ಮಾಡಿರುವ ಘೋಷಣೆಯು ಭಾರತೀಯರ ನರ ನಾಡಿಗಳಲ್ಲಿಯೂ ಪ್ರವೇಶಿಸಿ, ಪರಮತಸಹಿಷ್ಣುತೆ ಅಥವಾ ಸಾರ್ವತ್ರಿಕ ಸ್ವೀಕಾರಭಾವವು ಅವರ ಸುದೀರ್ಘ ಇತಿಹಾಸದ ಉದ್ದಕ್ಕೂ ಸಂಗಮಗೊಂಡು ಒಂದಾಗಿ ಹೋಗುವಂತೆ ಮಾಡಿದುವು.

ಭಾರತವು ಧರ್ಮವನ್ನು ಒಂದು ಅನುಭವವೆಂದು ಸೂತ್ರೀಕರಿಸುತ್ತದೆಯೇ ಹೊರತು ಅದನ್ನು ವಿಗ್ರಹಗಳು, ಮತಾಚರಣೆಗಳು ಅಥವಾ ತತ್ತ್ವನಿಯಮಗಳು ಎಂದು ಹೇಳುವುದಿಲ್ಲ. ಇವುಗಳೇನಿದ್ದರೂ ಸಾಧನಗಳಾಗಿ ಸರಿ ಎನಿಸಬಹುದೇ ಹೊರತು ಇವೇ ಸಿದ್ಧಿಗಳಲ್ಲ. ಎರಡನೆಯದಾಗಿ, ಭಾರತವು ಧಾರ್ಮಿಕ ಪಾಂಡಿತ್ಯವನ್ನು ಪಾರಮಾರ್ಥಿಕಕ್ಕೆ ಸಮಾನವೆಂದು ಭಾವಿಸುವುದಿಲ್ಲ. ಧಾರ್ಮಿಕ ನಿಯಮಗಳ ಜ್ಞಾನವೇ ಧರ್ಮವಲ್ಲ. ಅಂತಹ ಜ್ಞಾನಕ್ಕೆ ಒಂದು ಬೆಲೆ ಇದೆ ; ಆದರೆ ಆ ಬೆಲೆಯು ಸಾಧನೆಯಾಗಿಯೇ ಹೊರತು ಸಿದ್ಧಿಯಾಗಿ ಅಲ್ಲ. ಜ್ಞಾನವು ಅನುಭವವೇದ್ಯವಾಗಬೇಕು. ಕ್ರಿಸ್ತನ ಅನುಕರಣ (Imitation of Christ)ದಲ್ಲಿ ಹೇಳುವಂತೆ 'ನಾನು ಸೂತ್ರಗಳಲ್ಲಿ ಜ್ಞಾನಾರ್ಜನೆ ಮಾಡುವುದಕ್ಕಿಂತಲೂ ಪಶ್ಚಾತ್ತಾಪಪಡಲು ಇಚ್ಛಿಸುತ್ತೇನೆ.' ಎಂದು ಹೇಳಿರುವುದು ಇದೇ ಅರ್ಥದಲ್ಲಿಯೇ. ಮೂರನೆಯದಾಗಿ, ಸೆಮೆಟಿಕ್ ಮತಗಳಲ್ಲಿ (ಯಹೂದ್ಯ, ಅರಬ್ ಇತ್ಯಾದಿ) ಇರುವಂತೆ ಭಾರತದಲ್ಲಿನ ನಿರೀಶ್ವರವಾದವು ಅಂತಹ ಹಿಂಸಾಕರವಾದ ವಿಷಯವೇನೂ ಅಲ್ಲ ; ಏಕೆಂದರೆ ಇಲ್ಲಿರುವುದು ಏನಿದ್ದರೂ ಕೇವಲ ತಾರ್ಕಿಕವಾದ ಸ್ವೀಕಾರ ಅಥವಾ ತಿರಸ್ಕಾರಗಳು ಮಾತ್ರ. ದೈವಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಹೃತ್ಪೂರ್ವಕ ಪ್ರಯತ್ನ ಒಂದರಲ್ಲಿ ವಿನಹ ಉಳಿದಂತೆ ಭಾರತದ ದೃಷ್ಟಿಯಲ್ಲಿ ಈಶ್ವರವಾದಿಯಾದವನ ಸ್ವೀಕಾರದಲ್ಲಿಯಾಗಲೀ ನಿರೀಶ್ವರವಾದಿಯಾದವನ ತಿರಸ್ಕಾರದಲ್ಲಾಗಲೀ ಹೆಚ್ಚು ವ್ಯತ್ಯಾಸವೇನೂ ಕಂಡುಬರುವುದಿಲ್ಲ.

ಇದೂ ಅಲ್ಲದೇ, ಪಟ್ಟುಹಿಡಿದು ಒಂದೇ ಸಮನಾಗಿ ನಾಸ್ತಿಕನಾಗಿರುವುದು ಅಸಾಧ್ಯವೆಂದು ಭಾರತದ ಭಾವನೆ. ಏಕೆಂದರೆ ಅದು ಉಪದೇಶಿಸುವ ಭಗವತ್‌ಸ್ವರೂಪವು ಪ್ರತ್ಯೇಕವಾದ ವಿಶ್ವ ಚಾಲಕ ಶಕ್ತಿಯನ್ನೇನೂ ಅಲ್ಲ ; ಆದರೆ ಆಸ್ತಿಕ-ನಾಸ್ತಿಕ, ಜ್ಞಾನಿ-ಅಜ್ಞಾನಿ ಇತ್ಯಾದಿ ಎಲ್ಲರ ಹೃದಯದಲ್ಲಿಯೂ ನೆಲೆಸಿರುವ ದಿವ್ಯಾತ್ಮನನ್ನು. ಅಂತಹ ದೇವನನ್ನು ಇಲ್ಲವೆಂದು ಹೇಳಬೇಕಾದರೆ ತನ್ನನ್ನು ತಾನೇ ಇಲ್ಲವೆಂದು ಹೇಳಿಕೊಳ್ಳಬೇಕಾಗುತ್ತದೆ; ಅದಕ್ಕೆ ಬದಲಾಗಿ ತನ್ನ ಸ್ವಂತ ಅಸ್ತಿತ್ವವನ್ನು ಒಪ್ಪದ ಹೊರತು ಅಂತಹ ದೇವನೊಬ್ಬನಿರುವನೆಂಬುದನ್ನು ಯಾರೂ ದೃಢವಾಗಿ ಹೇಳುವಂತಿಲ್ಲ.

ಈ ಅಭಿಪ್ರಾಯದ ಫಲವಾಗಿ ಭಾರತದ ಇತಿಹಾಸದಲ್ಲಿ ಪಾಷಂಡಿಗಳನ್ನು ಬೇಟೆಯಾಡುವ ಕೆಲಸ ಅಷ್ಟಾಗಿ ಕಂಡುಬರುವುದಿಲ್ಲ. ಭಾರತದ ಪರಮತ ಸಹಿಷ್ಣುತೆಯು ಆಸ್ತಿಕರಾದ ಬೇರೆ ಬೇರೆ ಜಾತಿಯವರ ಮೇಲೆ ಮಾತ್ರವೇ ಅಲ್ಲ, ದೇವರಲ್ಲಿ ಯಾವ ನಿಷ್ಠೆಯನ್ನೂ ತೋರದ ನಾಸ್ತಿಕನ ಮೇಲೆ ಕೂಡ ತನ್ನ ಪ್ರಭಾವವನ್ನು ಬೀರಿದೆ.

## ೧೩. ಸನಾತನ ಧರ್ಮ

ಭಾರತದ ಬಹುಪಾಲು ಜನ ಈ ರಾಷ್ಟ್ರದ ಪ್ರಾಚೀನ ಧರ್ಮವಾದ ವೇದಾಂತದ ಹಲವು ಶಾಖೆಗಳಲ್ಲಿ ಒಂದಲ್ಲ ಒಂದಕ್ಕೆ ಸೇರಿದವರಾಗಿದ್ದಾರೆ. ಅದಕ್ಕೆ ಸನಾತನ ಧರ್ಮ ಅಥವಾ ಅಕ್ಷರ

ಧರ್ಮ ಎಂಬ ಅರ್ಥವತ್ತಾದ ಮತ್ತೊಂದು ಹೆಸರೂ ಇದೆ. ಭಾರತೀಯರು ತಮ್ಮ ಧರ್ಮಕ್ಕೆ ಕೊಟ್ಟ ಹೆಸರು, ಇದು. ಇದಕ್ಕೆ ಉಪನಿಷತ್ತುಗಳೇ ಆಧಾರ ; ಬೇರೆ ಬೇರೆ ಋಷಿಗಳು ಬೇರೆ ಬೇರೆ ಕಾಲಗಳಲ್ಲಿ ಕಂಡು ಹಿಡಿದ ಅಮೂರ್ತ ತತ್ತ್ವಗಳನ್ನು ಉಪನಿಷತ್ತುಗಳಲ್ಲಿ ಒಟ್ಟುಗೂಡಿಸಲಾಗಿದೆ ; ಈ ಉಪನಿಷತ್ತುಗಳೇ ಸನಾತನಧರ್ಮಕ್ಕೆ ಆಧಾರ. ಹೀಗಿರುವುದರಿಂದ, ಸನಾತನ ಧರ್ಮವು ಯಾವ ಒಬ್ಬ ಮೂಲಪುರುಷನ ಅಧಿಕಾರವಾಣಿಯಿಂದಲೂ ಪ್ರಾರಂಭವಾದುದಲ್ಲ.

ಉಪನಿಷತ್ತಿನ ಋಷಿಗಳು ಧರ್ಮದ ಸತ್ಯಗಳನ್ನು ಕಂಡುಹಿಡಿದವರು. ಆ ಕಾರಣಕ್ಕಾಗಿ ಆ ಋಷಿಗಳು ಗೌರವಾನ್ವಿತರಾಗಿದ್ದಾರೆ. ಆದರೆ ಆ ಸತ್ಯಗಳು ಮಾತ್ರ ಸಾರ್ವಕಾಲಿಕವಾದುವು ; ಯಾರು ಬೇಕಾದರೂ, ಯಾವ ಕಾಲದಲ್ಲಿ ಬೇಕಾದರೂ ಅವುಗಳನ್ನು ತಾವೇ ಕಂಡುಕೊಳ್ಳಬಹುದು. ವಾಸ್ತವವಾಗಿ ಸನಾತನಧರ್ಮವು ಹೇಳುವುದು ಇಷ್ಟೆ ; ಸತ್ಯವನ್ನು ತಾನಾಗಿಯೇ ಒಬ್ಬನು ಕಂಡುಕೊಳ್ಳುವ ಈ ತದ್ವತ್ ಪ್ರಯತ್ನ ಮತ್ತು ಅದರ ಸಾಕ್ಷಾತ್ಕಾರವನ್ನೇ ಧರ್ಮವೆಂದು ಕರೆಯುವುದು ; ಅಷ್ಟೇ ಹೊರತು ದೇವರು ಅಥವಾ ಆತ್ಮವಿಚಾರವಾದ ಮತ ಅಥವಾ ತತ್ತ್ವಗಳನ್ನು ನಂಬುವ ಪ್ರಯತ್ನವೇನೂ ಅಲ್ಲ.

ಈ ಅಮೂರ್ತವೇ ಆಧಾರವಾಗಿರುವ ಭಾರತದ ಮತಧರ್ಮಗಳು, ಮತಸ್ಥಾಪಕನೊಬ್ಬನ ವೈಯಕ್ತಿಕ ಅಧಿಕಾರವಾಣಿಯ ಆಧಾರವುಳ್ಳ ಜಗತ್ತಿನ ಇತರ ಮತಧರ್ಮಗಳಿಂದಲೂ ಭಿನ್ನವಾಗಿವೆ. ಪ್ರಾಚೀನ ಬೌದ್ಧಧರ್ಮವು ಅಮೂರ್ತಧರ್ಮವಾಗಿತ್ತು ; ಬುದ್ಧನು ಸತ್ಯವನ್ನು ಕಂಡುಕೊಂಡು ಇತರರಿಗೆ ಸತ್ಯದ ಹಾದಿಯನ್ನು ತೋರಿಸಿದನು. ಆತನು ತನ್ನನ್ನು ತಥಾಗತ (ಮಾರ್ಗಾನ್ವೇಷಕ) ಎಂದು ವರ್ಣಿಸಿಕೊಂಡು, ಬುದ್ಧತ್ವವೆಂಬುದು ಒಂದು ಸ್ಥಿತಿಯೇ ಹೊರತು ವ್ಯಕ್ತಿಯಲ್ಲವೆಂದೂ, ಎಲ್ಲರೂ ಅದನ್ನು ಪಡೆಯಬಹುದೆಂದೂ ಘೋಷಿಸಿದನು.

ಈ ವಿಚಾರದಲ್ಲಿ ಆತನು ಸನಾತನ ಧರ್ಮದ ಆಚಾರ್ಯನಾಗಿದ್ದನು. ಆತನ ಉಪದೇಶವು ಉಪನಿಷತ್ತಿನ ಧೋರಣೆಗೆ ನಿಕಟವಾಗಿತ್ತು. ಮುಂದೆ ಆತನನ್ನು ನಿರ್ದಿಷ್ಟವಾದ ಮತವೊಂದರ ವೈಯಕ್ತಿಕ ಸ್ಥಾಪಕನನ್ನಾಗಿ ಪರಿವರ್ತಿಸಿದ ಮೇಲೆ ಪ್ರತ್ಯೇಕತೆಯ ಧೋರಣೆ ಬೆಳೆದುಕೊಂಡಿತು. ವೇದಾಂತದಂತೆ ಸನಾತನಧರ್ಮವಾಗಿದ್ದ ಅದು ಇತಿಹಾಸದೊಡನೆ ಒಂದು ಮತವಾಗಿ ಪರಿವರ್ತಿತವಾಯಿತು. ಇದರಿಂದ ಅಧಿಕಾರವಾಣಿಯ ಆಧಾರವಿಲ್ಲದ ವ್ಯಾಖ್ಯಾನದಿಂದ ಈಗ ಆ ಮತ ನಿಲ್ಲುವಂತಿಲ್ಲ.

ಅದರ ವ್ಯಾಪ್ತಿಯ ಈ ಸಂಕೋಚನದಿಂದಲೇ ಅದು ಮುಂದೆ ಭಾರತದಿಂದ ನಾಮರೂಪಗಳಲ್ಲಿ (ಖಂಡಿತವಾಗಿಯೂ ತಿರುಳಿನಲ್ಲಲ್ಲ) ಲುಪ್ತವಾಗಿ ಹೋಗಲು ಕಾರಣವಾಯಿತು. ಭಾರತದ ಇತಿಹಾಸದಲ್ಲಿ ಇಂತಹ ಕಾರ್ಯ ನಡೆದಿರುವುದು ಇದೊಂದಕ್ಕೆ ಸೀಮಿತವಾಗಿಯೇನೂ ಇಲ್ಲ.

ವೇದಾಂತ ಅಥವಾ ಸನಾತನ ಧರ್ಮವೆಂದರೆ ಹಿಂದೂಧರ್ಮವೆಂದು ಅರ್ಥವಲ್ಲ. ಹಿಂದೂ ಮತ್ತು ಹಿಂದೂ ಧರ್ಮಗಳೆಂಬ ಹೆಸರುಗಳನ್ನು ಭಾರತದ ಜನರು ತಮಗಾಗಲೀ ತಮ್ಮ ಮತಕ್ಕಾಗಲೀ ಸೃಷ್ಟಿಮಾಡಿಕೊಂಡ ಮಾತುಗಳೇನೂ ಅಲ್ಲ. ಮೇಲೆಯೇ ಹೇಳಿರುವಂತೆ, ಅವರು ತಮ್ಮ ಮತ ಧರ್ಮವನ್ನು ಸನಾತನ ಧರ್ಮವೆಂಬ ಹೆಸರಿನಿಂದ ಕರೆದುಕೊಂಡರು. 'ಹಿಂದೂ' ಎಂಬ ಮಾತನ್ನು ಸೃಷ್ಟಿಸಿದವರು ಪರದೇಶಿಯರು, ಅದರಲ್ಲಿಯೂ ಮುಖ್ಯವಾಗಿ ಪ್ರಾಚೀನ ಪಾರ್ಸಿಕರು. ಅವರು ಭಾರತೀಯರನ್ನು ದೇಶದ ಅರ್ಥದಲ್ಲಿ ಹಾಗೆ ಕರೆದರು ; ಸಿಂಧೂ ನದಿಯ ಪೂರ್ವಕ್ಕೆ ವಾಸಮಾಡುವವರು ಎಂದು ಮಾತ್ರ ಅದಕ್ಕೆ ಅರ್ಥ. 'ಸ' ಎಂಬುದನ್ನು ಅವರು 'ಹ' ಎಂದು ಉಚ್ಚರಿಸುತ್ತಿದ್ದರು. ಇದರಿಂದ ಸಂಸ್ಕೃತದ 'ಸಿಂಧು' ಹಿಂದೂ ಎಂದಾಯಿತು. ಅವರ ರಾಜ್ಯ ಹಿಂದೂಸ್ತಾನವಾಯಿತು. ಗ್ರೀಕರು ಸಹ ಎರಡನ್ನೂ ಬಿಟ್ಟು, 'ಇಂಡೋ'ಗಳೆಂದು ಉಚ್ಚರಿಸಿದರು. ಇದರಿಂದ 'ಇಂಡಿಯ'

ಎಂಬುದು ಬಂದಿತು. ಹೀಗೆ 'ಹಿಂದೂಧರ್ಮ' ಎಂಬುದಕ್ಕೆ ಮೂಲತಃ ಹಿಂದೂಸ್ತಾನದ ಜನರ ಮತಧರ್ಮ ಎಂದಾಗುತ್ತಿತ್ತು. ಆದರೆ ವಸ್ತುತಃ ಭಾರತದಲ್ಲಿರುವುದು ಒಂದು ಮತವಲ್ಲ, ಅನೇಕ ಮತಗಳು. ಭಾರತಕ್ಕೆ ಅದರ ಸುದೀರ್ಘ ಇತಿಹಾಸದಲ್ಲಿ ಹೊರಗಿನಿಂದ ಬಂದ ಯಹೂದ್ಯ, ಕ್ರೈಸ್ತ, ಜರತೂಷ್ಟ್ರ, ಇಸ್ಲಾಂ (ಇವೆಲ್ಲವೂ ಮೂರ್ತ ಮತಸ್ಥಾಪಕನನ್ನು ಅಥವಾ ಮತಸ್ಥಾಪಕನ ಅಧಿಕಾರವಾಣಿಯನ್ನು ಆಧರಿಸಿದವುಗಳು) ಮತಗಳ ಜೊತೆಗೆ ಇಲ್ಲಿಯವೇ ಆದ ಹಲವು ಮತಗಳಿವೆ. ಇವುಗಳಲ್ಲಿ ಪ್ರತಿಯೊಂದೂ ಸ್ವಸಂಪೂರ್ಣವಾದುದು. ಆದರೆ ಅವೆಲ್ಲವನ್ನೂ ಹಿಂದೂಮತ ಎಂಬ ಒಂದೇ ಹೆಸರಿನಿಂದ ಸ್ವೇಚ್ಛೆಯಾಗಿ ಕರೆಯುತ್ತಾರೆ.

## ೧೪. ಭಾರತದ ಸಾಮಾನ್ಯ ಮತಧರ್ಮಗಳ ಮೇಲೆ ವೇದಾಂತದ ಪ್ರಭಾವ

ಈ ದೇಶೀಯ ಮತಧರ್ಮಗಳಲ್ಲಿ ತಮ್ಮ ಅಧ್ಯಾತ್ಮತತ್ತ್ವ, ಮತ ನಿಯಮಗಳು, ಸುದೀರ್ಘ ಇತಿಹಾಸ ಮತ್ತು ಅವುಗಳಿಗೆ ಸೇರಿರುವ ಜನಬಲ—ಈ ಕಾರಣಗಳಿಂದ ಅತ್ಯಂತ ಮುಖ್ಯವಾಗಿರುವುವು ನಿರ್ದಿಷ್ಟವಾಗಿ ಮೂರು ಮಾತ್ರ. ಅವು ಕ್ರಮವಾಗಿ ವಿಷ್ಣು ಅಥವಾ ಆತನ ಅವತಾರಗಳಾದ ರಾಮ, ಕೃಷ್ಣಾದಿ ದೇವರುಗಳನ್ನು ಆರಾಧಿಸುವ ವೈಷ್ಣವ ಮತ, ಶಿವನನ್ನು ದೇವರೆಂದು ಆರಾಧಿಸುವ ಶೈವಮತ, ದೇವಮಾತೃಸ್ವರೂಪಗಳಾದ ಶಕ್ತಿಯನ್ನು ಮೂಲ ದೈವಶಕ್ತಿಯೆಂದು ಆರಾಧಿಸುವ ಶಾಕ್ತಮತ.

ಇವುಗಳಲ್ಲಿ ಶೈವಮತ ಮತ್ತು ಶಾಕ್ತ ಮತಗಳು ವಸ್ತುತಃ ಒಂದೇ. ಏಕೆಂದರೆ ಆ ಎರಡು ದೇವಮೂರ್ತಿಗಳ ಒಂದೊಂದರಲ್ಲಿಯೂ ಎರಡಕ್ಕೂ ಪೂಜೆ ಸಲ್ಲುತ್ತದೆ. ಈ ದೇವತೆಗಳೂ ಅವತಾರಗಳೂ ಭಾರತದ ಲಕ್ಷಾಂತರ ಜನಗಳಿಗೆ ಈಗ ಸುಮಾರು ಎರಡರಿಂದ ಹಿಡಿದು ಐದು ಸಾವಿರ ವರ್ಷಗಳಷ್ಟು ಕಾಲದಿಂದಲೂ ಪೂಜಾಮೂರ್ತಿಗಳಾಗಿವೆ. ಈ ಮತಗಳು ಇತಿಹಾಸದ ಈ ಸುದೀರ್ಘ ಕಾಲದಲ್ಲಿ ಇದ್ದಂತೆಯೇ ಏಕಪ್ರಕಾರವಾಗಿ ನಡೆದುಕೊಂಡು ಬಂದಿಲ್ಲ. ಅವುಗಳ ಮತೀಯ ಸಂಯೋಜನೆಯಂತೆ ಅವು ತಮ್ಮ ಪುರಾಣ, ಆಚರಣೆ ಇತ್ಯಾದಿ ಎಲ್ಲ ಮುಖಗಳಲ್ಲಿಯೂ ವ್ಯತ್ಯಾಸವನ್ನು—ಮಹತ್ತಾದ ವ್ಯತ್ಯಾಸವನ್ನು ಪಡೆಯುತ್ತಾ ಹೋಗಿವೆ.

ಉಪನಿಷತ್ತುಗಳ ತರ್ಕಬದ್ಧವಾದ ತಾತ್ವಿಕ ದರ್ಶನದ ಸಂಪರ್ಕವು ಮತಧರ್ಮದಲ್ಲಿನ ಬದಲಾವಣೆಗೆ ಕಾರಣವಾಗಿದೆ. ಈ ಬದಲಾದ ಪರಿಸ್ಥಿತಿಗೆ ತಕ್ಕಂತೆ ಅವುಗಳ ಪುರಾಣ ಮತ್ತು ಆಚರಣೆಗಳಲ್ಲಿಯೂ ವ್ಯತ್ಯಾಸಗಳಾಗಿವೆ. ಮಹೋನ್ನತವಾದ ಆಧ್ಯಾತ್ಮಿಕ ತತ್ತ್ವಗಳ ಭಾವನೆಯಿಂದ ಪ್ರಚೋದನೆಗೊಂಡುದರಿಂದಲೂ, ವ್ಯತ್ಯಸ್ತಗೊಳ್ಳುವ ಸಾಂಸ್ಕೃತಿಕ ಸಂದರ್ಭಗಳಿಗೆ ಹೊಂದಿಕೊಳ್ಳ ಬೇಕಾಗಿದ್ದುದರಿಂದಲೂ ಭಾರತದ ಈ ಮತಗಳು ಪ್ರಶಾಂತ ರೀತಿಯಿಂದ ವಿಕಾಸಗೊಂಡ ಕಥೆಯು ಧರ್ಮದ ಇತಿಹಾಸದಲ್ಲಿಯೇ ಅತ್ಯಂತ ಪರಿಣಾಮಕಾರಕ ಅಧ್ಯಾಯಗಳಲ್ಲಿ ಒಂದಾಗಿದೆ. ಈ ಕಾರ್ಯಗತಿಯ ಮೂಲಕ ಧರ್ಮದ ಅನಾಗರಿಕ ರೂಪಗಳು ಅವಕ್ಕಿಂತಲೂ ಹೆಚ್ಚು ಮುಂದುವರಿದಿದ್ದ ಮತಗಳಿಂದ ಉಸಿರುಕಟ್ಟಿ ಸಾಯುವುದಕ್ಕೆ ಬದಲಾಗಿ ಮಹತ್ತಾದ ಆಧ್ಯಾತ್ಮಿಕ ಧರ್ಮಗಳಾಗಿ ಬೆಳೆದು ವೃದ್ಧಿಗೊಳ್ಳಲು ಅವಕಾಶವನ್ನು ಪಡೆದವು.

## ೧೫. ಶಾಕ್ತಮತದ ವಿಕಾಸ

ಈ ಸಂದರ್ಭದಲ್ಲಿ ಶಾಕ್ತಮತದ ಇತಿಹಾಸ ಅರ್ಥವತ್ತಾದುದು. ಭರತಖಂಡದ ಪರ್ವತ ಪ್ರಾಂತ, ಸಮತಟ್ಟಾದ ಪ್ರದೇಶ ಮೊದಲಾದ ವ್ಯತ್ಯಾಸವಿಲ್ಲದೆ ಎಲ್ಲ ಭಾಗಗಳಲ್ಲಿಯೂ ಇದ್ದ ಅನಾಗರಿಕ ಜನರ ತಂಡಗಳು ಸ್ಫೂರ್ತಿಯುತರಾಗಿ ಮಾತೃದೇವತೆಯನ್ನು ಪೂಜಿಸುತ್ತಿದ್ದರು. ಇದರಿಂದ ಪ್ರಾರಂಭವಾದ ಶಾಕ್ತಮತವು ವೇದಾಂತದ ಪ್ರಭಾವದಿಂದ ನಿಧಾನವಾಗಿ ವಿಕಾಸಗೊಂಡು, ಈಗ

ಅನೇಕ ಶತಮಾನಗಳ ಹಿಂದೆಯೇ ಆಳವಾದ ತತ್ತ್ವಜ್ಞಾನ, ಅದ್ಭುತವಾದ ಅನುಭಾವ ಮತ್ತು ಆಕರ್ಷಕವಾದ ಕರ್ಮಾಚರಣೆಗಳೊಡನೆ ಒಂದು ಸಮಗ್ರವಾದ ಮತಧರ್ಮವಾಯಿತು.

ಮಹಾ ತತ್ತ್ವಶಾಸ್ತ್ರಜ್ಞರಾದ ಶಂಕರರೂ ಸೇರಿದಂತೆ ಭಾರತ ಇತಿಹಾಸದ ಮಹಾಪುರುಷರಲ್ಲಿ ಹಲವರು ಈ ಮತದ ಅನುಯಾಯಿಗಳಾಗಿದ್ದರು. ಜಗತ್ತಿನ ಮಾತೃದೇವತೆಯೆಂದು ಭಾವಿಸಿ ದೇವಿ, ದುರ್ಗ, ಭಗವತಿ, ಕಾಳಿ, ಭವಾನಿ, ಅನ್ನಪೂರ್ಣ, ಮೀನಾಕ್ಷಿ ಇತ್ಯಾದಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತ ಇದ್ದ ಈ ದೇವತೆಯ ವಿಸ್ತಾರವಾದ ಭರತಖಂಡದಲ್ಲಿ ಮಾತೃದೇವತಾ ಪೂಜೆಯ ಇಡೀ ಪಂಥದವರನ್ನೆಲ್ಲಾ ತನ್ನಲ್ಲಿ ಕೇಂದ್ರೀಕರಿಸಿಕೊಂಡಿತು. ಭಾರತದ ಅತ್ಯಂತ ಭವ್ಯವಾದ ಕಾವ್ಯಗಳು ಮತ್ತು ಯೋಗ ರಹಸ್ಯಗಳಲ್ಲಿ ಕೆಲವು ಆಕೆಯ ಸ್ತೋತ್ರಕ್ಕಾಗಿ ಮೀಸಲಾಗಿವೆ. ಶಾಕ್ತಮತದ ತತ್ತ್ವ ದರ್ಶನವು ಸ್ವಲ್ಪ ಹೆಚ್ಚು ಕಡಿಮೆ ವೇದಾಂತದ ತತ್ತ್ವದರ್ಶನವೇ ಆಗಿಹೋಗಿದೆ.

ಆಧುನಿಕ ಯುಗದಲ್ಲಿ ಈ ಮತಧರ್ಮವು ಶ್ರೀರಾಮಕೃಷ್ಣರ ಹೆಸರಿನೊಡನೆ ಸಂಬಂಧವನ್ನು ಪಡೆಯಿತು. ಅವರು ಕಲ್ಕತ್ತದ ಬಳಿಯಿರುವ ದಕ್ಷಿಣೇಶ್ವರದ ಗುಡಿಯಲ್ಲಿ ಈ ದೇವಿಯನ್ನು ಕಾಳಿ ಎಂಬ ಹೆಸರಿನಿಂದ ಪೂಜಿಸುತ್ತಿದ್ದರು. ವೇದಾಂತದ ಬ್ರಹ್ಮ ಮತ್ತು ಮಾಯೆಗಳು ಒಂದೇ ; ಅವು ಪರಬ್ರಹ್ಮದ ನಿಶ್ಚಲ ಮತ್ತು ಚಾಲನರೂಪಗಳು—ಎಂದು ಸ್ವೀಕರಿಸಲಾಯಿತು. ಶಕ್ತಿ ಮತ್ತು ಕಾಳಿಯು ವಿಶ್ವದ ಸೃಷ್ಟಿ ಮತ್ತು ವಿಕಾಸಗಳನ್ನು ತನ್ನಿಂದಲೇ ಆವಿರ್ಭವಿಸುವಂತೆ ಮಾಡಿ, ಕಟ್ಟ ಕಡೆಗೆ ಅದನ್ನು ತನ್ನೊಳಗೇ ಎಳೆದುಕೊಳ್ಳುತ್ತಾಳೆ. ಆ ಜಡ ಎಂಬ ಸ್ಥಿತಿಯನ್ನು ಬ್ರಹ್ಮವು ಪ್ರತಿನಿಧಿಸುತ್ತದೆ.

## ೧೬. ದೇವರ ಅವತಾರಗಳ ಪೂಜೆ

ಸನಾತನಧರ್ಮವೆಂಬುದು ನಿರ್ಗುಣ ತತ್ತ್ವಗಳನ್ನು ಅವಲಂಬಿಸಿದ್ದರೂ ಸಗುಣಕ್ಕೂ ಅದು ಸಾಕಷ್ಟು ಅವಕಾಶವನ್ನು ಕಲ್ಪಿಸಿದೆ. ಈ ತತ್ತ್ವಗಳ ಉದಾಹರಣೆಗಳಂತೆ ಸಗುಣದೈವಗಳು ಈ ಧರ್ಮದಲ್ಲಿ ಕಾಣಿಸಿಕೊಳ್ಳುತ್ತವೆ. ಹೀಗೆ ಉಪನಿಷತ್ತುಗಳ ಯುಗವಾಗುತ್ತಲೇ ಭಾರತದಲ್ಲಿ ಶಿಖರ ಪ್ರಾಯರಾದ ಇಬ್ಬರು ಮಹಾಪುರುಷರು ರಾಮ ಮತ್ತು ಕೃಷ್ಣರು ಕಾಣಿಸಿಕೊಳ್ಳುತ್ತಾರೆ. ಭಾರತದ ಸಮಗ್ರ ಸಂಸ್ಕೃತಿ, ಧರ್ಮ, ಕಾವ್ಯ, ಕಲೆ ಮತ್ತು ಜೀವನಗಳ ಮೇಲೆ ಅವರ ಪ್ರಭಾವವು ಅತ್ಯಂತ ಆಳವಾಗಿ, ವ್ಯಾಪಕವಾಗಿ ಆಗಿದೆ. ಅವರ ಪ್ರಭಾವದ ಪ್ರಸರಣವಾಗಿರುವುದು ಬರಿಯ ಭಾರತದ ಮೇಲೆ ಮಾತ್ರವೇ ಅಲ್ಲ, ಆಗ್ನೇಯ ಏಷ್ಯದ ದೇಶದ ಮೇಲೆಲ್ಲಾ ಆಗಿದೆ. ಭಾರತ ಸಂಸ್ಕೃತಿಯು ಕ್ರಿಸ್ತಶಕದ ಮೊದಲ ಹತ್ತು ಶತಮಾನಗಳ ಕಾಲ ಅಲ್ಲಿಗೆ ನುಗ್ಗಿ ಹೋಗಿ, ಅದರ ಫಲವಾಗಿ ಅಲ್ಲಿಯ ದೇಶೀಯ ಸಂಸ್ಕೃತಿಗಳು ಸುಂದರವಾಗಿ ಅರಳುವಂತಾಯಿತು. ಸನಾತನಧರ್ಮವು ರಾಮ, ಕೃಷ್ಣರನ್ನು ಭೂಮಿಯ ಮೇಲೆ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಬಂದ ಅವತಾರಪುರುಷರೆಂದು ಪರಿಗಣಿಸಬೇಕಾಗುತ್ತದೆ. ಸನಾತನಧರ್ಮವು ಬುದ್ಧನಿಗೂ ಅದೇ ಸ್ಥಾನವನ್ನು ನೀಡಿದೆ.

ಭಗವಂತನ ಈ ಅವತಾರಗಳ ಪೂಜೆಯು ಪರಮಾರ್ಥಸಾಧನೆಗೆ ಅತ್ಯಂತ ಪರಿಣಾಮಕಾರಿಯಾದ ಸಹಾಯವೆಂದು ಬಹುಕಾಲದಿಂದ ಭಾರತದಲ್ಲಿ ನಂಬಲಾಗಿದೆ. ಆದ್ದರಿಂದ ಅದು ಭಾರತದ ಭಕ್ತಿ ಪಂಥದ ಬಹುಮುಖ್ಯ ಭಾಗವಾಗಿದೆ. ಇನ್ನೂ ಹೇಳಬೇಕೆಂದರೆ ಭಾರತದ ಧರ್ಮಜೀವನದಲ್ಲಿ ರಾಮ, ಕೃಷ್ಣರ ಪೂಜೆಯೇ ಪ್ರಧಾನಭಾಗವಾಗಿದೆ. ಈ ದೇಶದಲ್ಲಿರುವ ಗುಡಿಗಳಲ್ಲಿ ಬಹುಪಾಲು ಅವರ ಪೂಜೆಗಾಗಿಯೇ ಮೀಸಲಾಗಿವೆ. ಬದುಕಿರುವ ವ್ಯಕ್ತಿಗಳಿಗೆ ಹೇಗೆ ಪರಿಚರ್ಯೆಯನ್ನು ಎಸಗುತ್ತಾರೆಯೋ ಹಾಗೆ, ಮತ್ತು ಅದೇ ಮನೋಭಾವದಿಂದ ಗುಡಿಯಲ್ಲಿರುವ ಇವರ ಮೂರ್ತಿಗಳಿಗೆ ಅನೇಕ ಪೂಜಾಕರ್ಮಗಳನ್ನೂ ಸೇವಾಕಾರ್ಯಗಳನ್ನೂ ನಡೆಸುತ್ತಾರೆ. ಭಕ್ತಾದಿಗಳು ಈ ಪೂಜೆಯಲ್ಲಿ, ಅದರಲ್ಲಿಯೂ ಮುಖ್ಯವಾಗಿ ಸಂಜೆಯ ಪೂಜೆಯಲ್ಲಿ, ಒಟ್ಟಿಗೆ ಸೇರಿ, ದೇವರಿಗೆ ಆರತಿ ಎತ್ತಿ

ಅದರ ಮುಂದೆ ಅನೇಕ ವೇಳೆ ಸಾಮೂಹಿಕ ಭಜನೆಯನ್ನು ಮಾಡುತ್ತಾರೆ. ಸಾಮೂಹಿಕವಾಗಿ ಹಾಡುವ ರಾಮನ ಸ್ತುತಿರೂಪದ ಸಂಸ್ಕೃತ ಸಂಗೀತ ರಚನೆಯನ್ನು ರಾಮನಾಮವೆಂದು ಕರೆಯುತ್ತಾರೆ. ಅದು ಇಡೀ ಭಾರತದಲ್ಲಿ ಅತ್ಯಂತ ಜನಪ್ರಿಯವಾದುದಾಗಿದೆ. ಮಹಾತ್ಮ ಗಾಂಧಿಯವರಿಗೆ ಈ ಸಾಮೂಹಿಕ ಭಜನೆಯಲ್ಲಿ ಬಹು ಪ್ರೀತಿಯಿತ್ತು. ಪ್ರಾರ್ಥನಾ ಸಭೆಗಳಲ್ಲಿ ಅವರು ಅದನ್ನು ತಪ್ಪದೆ ನಡೆಸುತ್ತಿದ್ದರು. ಅದು ಕಿವಿಗೆ ಹಿತ, ಹೃದಯಕ್ಕೆ ಉತ್ಕರ್ಷಕ.

ಶ್ರೀಕೃಷ್ಣನನ್ನು ಕುರಿತ ಹಾಡುಗಳನ್ನು ಸಂಗ್ರಹಿಸಿದರೆ ಅವು ಹಲವು ಸಂಪುಟಗಳಷ್ಟಾಗುತ್ತವೆ. ಶ್ರೀಕೃಷ್ಣನನ್ನು ಪ್ರೇಮಾಧಿದೇವತೆಯ ಸಾಕಾರಮೂರ್ತಿ ಎಂದು ಪೂಜಿಸುತ್ತಾರೆ. ಆತನನ್ನು ಬಾಲಕೃಷ್ಣ ನನ್ನಾಗಿಯೂ ಪೂಜಿಸುತ್ತಾರೆ. ಈ ಪೂಜೆ ಅದಕ್ಕೆ ಸಂಗತವಾದ ಹಾಡು, ಸಂಗೀತ ಮತ್ತು ಯೋಗ ರಹಸ್ಯಗಳಿಂದ ಕೂಡಿ ಅತ್ಯಂತ ಶ್ರೀಮಂತವಾಗಿದೆ. ಭಾವಗೀತಾತ್ಮಕವಾದ ಮಾಧುರ್ಯ ಮತ್ತು ಶುದ್ಧ ಪಾರಮಾರ್ಥಿಕಗಳಲ್ಲಿ ಅದು ಅಸದೃಶವಾದುದು. ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಬರುವ ರಾಮನವಮಿ ಮತ್ತು ಆಗಸ್ಟ್-ಸೆಪ್ಟೆಂಬರ್ ತಿಂಗಳಲ್ಲಿ ಬರುವ ಕೃಷ್ಣಜನ್ಮಾಷ್ಟಮಿ—ಇವು ಭಾರತದ ಧಾರ್ಮಿಕ ಪಂಚಾಂಗದಲ್ಲಿ ಮಹತ್ತರವಾದ ಘಟನೆಗಳು.

### ೧೭. ಶಿವ ಮತ್ತು ಬುದ್ಧ

ಭಾರತದ ಆರಾಧನೆಗಳಲ್ಲಿ ಶಕ್ತಿ ಅಥವಾ ಮಾತೃದೇವತಾ ಪೂಜೆಯನ್ನು ಬಿಟ್ಟರೆ ಶಿವಾರಾಧನೆಯೇ ಅತ್ಯಂತ ಪ್ರಾಚೀನವೆಂದು ಕಾಣುತ್ತದೆ. ಶಿವನು ಯೋಗಿಗಳ ಅಥವಾ ಧ್ಯಾನಪರರಾದವರ ಆರಾಧ್ಯದೈವವೆಂದು ಭಾವಿಸಲಾಗಿದೆ. ಆ ದೇವನು ಹಿಮಾಚ್ಛಾದಿತ ಹಿಮಾಲಯವನ್ನೇ ತನ್ನ ಸ್ವಾಭಾವಿಕ ವಾಸಸ್ಥಾನವಾಗಿ ಮಾಡಿಕೊಂಡಿರುವ ಬೈರಾಗಿ. ಬುದ್ಧನು ಸಾಕ್ಷಾತ್ಕಾರ ಮಾಡಿಕೊಂಡ ಜ್ಞಾನ ಸ್ಥಿತಿಯನ್ನು, ಎಂದರೆ ಬೋಧಿ ಸ್ಥಿತಿಯನ್ನು—ಆತ್ಮವು ತನ್ನದೇ ಆದ ದೈವಸ್ವರೂಪದ ಆನಂದಾನುಭವ ಸ್ಥಿತಿಯನ್ನು—ಶಿವನು ಪ್ರತಿನಿಧಿಸುತ್ತಾನೆ. ಆದರೆ ಆತನು ಕರುಣಾಮಯನೂ ಆಗಿದ್ದಾನೆ. 'ಶಿವ' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಪವಿತ್ರ, ಮಂಗಳ ಎಂದರ್ಥ. ಆತನು ತನ್ನ ದೈವಿಕ ಧ್ಯಾನಮಗ್ನತೆಯಿಂದ ತನ್ನನ್ನು ಅರಸುತ್ತಿರುವ ಸಾಧಕನಿಗಾಗಿ, ದುಃಖದಲ್ಲಿರುವ ಆತ್ಮವನ್ನು ಉದ್ಧಾರ ಮಾಡುವುದಕ್ಕಾಗಿ ಅವತರಿಸಿ ಬರುತ್ತಾನೆ. ಹೀಗೆ ಶಿವನು ಒಂದು ಅಮೂರ್ತ ಸ್ಥಿತಿಯೂ ನಿಜ, ದೇವತಾ ಮೂರ್ತಿಯೂ ನಿಜ, ಎರಡನೆಯದು ಮೊದಲನೆಯದರ ಸಂಕೇತ. ಆತನು ಭಾರತದ ಋಷ್ಯಾಶ್ರಮಕ್ಕೆ ವಿಶಿಷ್ಟವಾದ ದೈವವೂ ಆಗಿದ್ದಾನೆ.

ಬುದ್ಧ ಮತ್ತು ಆತನ ಮತಕ್ಕೆ ಶಿವನೊಡನಿರುವ ನಿಕಟ ಬಾಂಧವ್ಯವು ಮುಂದೆ ಬೌದ್ಧ ಮತದಲ್ಲಾದ ವಿಕಾಸದಲ್ಲಿ ಅವೆರಡೂ ಹಲವಾರು ರೀತಿಯಲ್ಲಿ ಐಕ್ಯಗೊಳ್ಳುವಂತೆ ಮಾಡಿತು.

### ೧೮. ಶಿವ ಮತ್ತು ಶಕ್ತಿ

ಶಿವಾರಾಧನೆಯು ಗಾಂಭೀರ್ಯ ಮತ್ತು ನಿಷ್ಠುರ ನಿಷ್ಠೆಗಳಿಗೆ ಹೆಸರಾದುದು. ಈ ಪೂಜೆಯು ಶಕ್ತಿಯ ಅಥವಾ ಕಾಳಿ, ದುರ್ಗಾ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ಮಾತೃದೇವತಾ ಪೂಜೆಗೆ ನಿಕಟ ಸಂವಾದಿಯಾಗಿದೆ. ಜನಪ್ರಿಯವಾಗಿರುವ ಹಿಂದೂ ಧರ್ಮದ ಸಾಂಕೇತಿಕ ಭಾಷೆಯಲ್ಲಿ ಶಕ್ತಿಯು ಶಿವನ ಹೆಂಡತಿ. ಅವರಿಬ್ಬರೂ ಅಖಂಡ ಬ್ರಹ್ಮಾಂಡದ ಜನನೀ-ಜನಕರೆಂದು ಭಾವಿಸಲಾಗಿದೆ. ಹೀಗೆ ಶಿವ-ಶಕ್ತಿಯರು ಜಗತ್ತಿನ ತಂದೆ ತಾಯಿಗಳೆಂಬ ಭಾವನೆಯು ಭಾರತದಲ್ಲಿರುವ ಕವಿ ದಾರ್ಶನಿಕರನ್ನೂ ಕಲಾವಿದ-ಅನುಭಾವಿಗಳನ್ನೂ ಸಂತ-ಭಕ್ತರನ್ನೂ ನೂರಾರು ವರ್ಷಗಳಿಂದ ಸ್ಫೂರ್ತಿಗೊಳಿಸುತ್ತಾ ಬಂದಿದೆ. ರಾಷ್ಟ್ರಮಹಾಕವಿ ಕಾಳಿದಾಸನು ತನ್ನ ರಘುವಂಶ ಮಹಾಕಾವ್ಯದ ಮೊದಲ ಶ್ಲೋಕದಲ್ಲಿ ಅವರನ್ನು 'ಶಬ್ದ ಮತ್ತು ಅರ್ಥಗಳು ಹೇಗೋ ಹಾಗೆ ಅವಿನಾಭಾವದಿಂದ ಕೂಡಿರುವ ಜಗದೀಶ್ವರ

ನಾದ ಶಿವ ಮತ್ತು ದೇವಮಾತೆಯಾದ ಪಾರ್ವತಿ ಇವರನ್ನು ಶಬ್ದಾರ್ಥ ಪ್ರತಿಪತ್ತಿಗಾಗಿ ನಮಸ್ಕರಿಸುತ್ತೇನೆ' ಎಂದು ಸ್ತೋತ್ರ ಮಾಡಿದ್ದಾನೆ.

ಪಾರ್ವತಿ ಎಂಬುದಕ್ಕೆ ಪರ್ವತನ ಅಂದರೆ ಹಿಮಾಲಯನ ಮಗಳು ಎಂದು ವಾಚ್ಯಾರ್ಥ. ಆಕೆಯ ದುರ್ಗಾ, ಗೌರಿ ಎಂಬ ಮತ್ತೆರಡು ಹೆಸರುಗಳೂ ಪರ್ವತ ಸಂಬಂಧದ ವಾಚಕಗಳೇ.

ಶಿವ ಮತ್ತು ಪಾರ್ವತಿ ಅಥವಾ ಶಕ್ತಿಯರ ಮದುವೆ ಎಂಬುದು ಜಡವಾದ ಬ್ರಹ್ಮ ಮತ್ತು ಕ್ರಿಯಾತ್ಮಕವಾದ ಸೃಷ್ಟಿಶಕ್ತಿ—ಇವುಗಳ ಐಕ್ಯತೆಯ ಸಂಕೇತ. ಇವು ಸಮಷ್ಟಿ ಶಕ್ತಿಯ ಸ್ಥಿತ್ಯಾತ್ಮಕ ಮತ್ತು ಚರಣಾತ್ಮಕ ಸ್ವರೂಪಗಳೂ ಸೃಷ್ಟಿಯ ಭೌತಿಕ ಮತ್ತು ಆಧ್ಯಾತ್ಮಿಕತೆಗಳೂ ಆಗಿವೆ. ಇವೆರಡೂ ಸದಾ ಏಕದೇಹ ನ್ಯಾಯಿಗಳು.

ಶಿವ ಶಿವೆಯರ ವಿವಾಹವು ಕಾಳಿದಾಸನ ಮತ್ತೊಂದು ದೀರ್ಘ ಮಹಾಕಾವ್ಯವಾದ ಕುಮಾರ ಸಂಭವದ ಕಥಾವಸ್ತುವಾಗಿದೆ. ಪ್ರಕೃತಿಮಾತೆಯು ಭೌತಿಕ, ಜೈವಿಕ, ಮಾನಸಿಕ, ಆಧ್ಯಾತ್ಮಿಕ ಮೊದಲಾದ ತನ್ನೆಲ್ಲ ಮುಖಗಳಲ್ಲಿಯೂ ಐಕ್ಯಗೊಳಿಸಿಕೊಂಡಿರುವ ಶಕ್ತಿವಿಶೇಷಗಳ ಪ್ರತೀಕವೇ ಶಕ್ತಿ ದೇವತೆ. ಇದು ಇಂದು ಭೌತವಿಜ್ಞಾನವು ನೀಡಬಹುದಾದುದಕ್ಕಿಂತಲೂ ಎಷ್ಟೋ ಮಹತ್ತಾದ ನಿಸರ್ಗ ಶಕ್ತಿಗಳ ಸಾಮಾನ್ಯೀಕರಣವನ್ನು ಪ್ರತಿನಿಧಿಸುತ್ತದೆ. ಶಕ್ತಿದೇವತೆ ಎಂದರೆ ಪ್ರಕೃತಿಯ ಭೌತ ಮತ್ತು ಅಭೌತ ಶಕ್ತಿಗಳೆಲ್ಲದರ ಐಕ್ಯತೆ. ಅದನ್ನು 'ಚಿತ್‌ಶಕ್ತಿ' ಅಥವಾ ಪ್ರಜ್ಞಾಶಕ್ತಿ ಎಂದು ಕರೆಯುತ್ತಾರೆ. ಇದರಿಂದ ಪ್ರಜ್ಞಾಪ್ರಜ್ಞೆಗಳ ಅಸ್ತಿತ್ವದಿಂದ ಕೂಡಿದ ಅಖಂಡ ಬ್ರಹ್ಮಾಂಡವೇ ಹುಟ್ಟಿಬರುತ್ತದೆ. ಅದನ್ನು ಸ್ತ್ರೀವಾಚಕವಾಗಿ ಪರಿಗಣಿಸುತ್ತಾರೆ. ಅದು ಜಗತ್ತನ್ನು ಸೃಷ್ಟಿಸಿದುದು ಬಾಹ್ಯವಸ್ತುಗಳಿಂದಲ್ಲ, ತನ್ನೊಳಗಿನಿಂದಲೇ ಅದಕ್ಕೆ ಜನ್ಮವಿತ್ತಿತು. ಆದ್ದರಿಂದ ಅದು ಎಲ್ಲಕ್ಕೂ ದೈವಸ್ವರೂಪಳಾದ ಮಾತೆ. ಹಾಗೆಯೇ ಶಿವನು ಎಲ್ಲದರ ದೇವ ಪಿತೃ. ಅವರಿಬ್ಬರಿಗೂ ಅವಿನಾಭಾವದ ಐಕ್ಯತೆ. ಅವರು ಒಂದೆ ಪರಬ್ರಹ್ಮದ ಎರಡು ಮುಖಗಳು—ಮುಂದೆ ಆಗುವುದರ ಇಂದಿರುವುದರ ಒಂದು ಐಕ್ಯತೆ. ಬುದ್ಧನು ಬೋಧಿ ಅಥವಾ ನಿರ್ವಾಣವೆಂಬ ನಿಶ್ಚಲ ಸ್ಥಿತಿಯನ್ನು ಅನುಭವಿಸಿದುದು ಶಿವ ಸ್ವರೂಪ ವನ್ನೇ ಪ್ರತಿನಿಧಿಸುತ್ತದೆ. ಬುದ್ಧನು ಸಾರ್ವಜನಿಕವಾದ ಉಪದೇಶದಲ್ಲಿ ಉತ್ಸಾಹದಿಂದ ತೊಡಗಿದ್ದುದು ಶಕ್ತಿಸ್ವರೂಪವನ್ನು ಪ್ರತಿನಿಧಿಸುತ್ತದೆ.

## ೧೯. ಭಾರತದ ಶಕ್ತಿಗೆ ಪ್ರತಿವಾದಿಯಾಗಿ ಜಪಾನಿನ ಕಾಮಿ

ಈ ಶಕ್ತಿಯ ಭಾವನೆಯೂ ಮತ್ತು ಪರ್ವತದೊಡನೆ ಅದಕ್ಕಿರುವ ಸಂಬಂಧವೂ ಜಪಾನೀ ಧರ್ಮದ ಕಾಮಿಗಳು ಅಥವಾ ದೇವರುಗಳೊಡನೆ, ಅದರಲ್ಲಿಯೂ ಬಹುಮುಖ್ಯವಾಗಿ ಕಾಮಿವರೇಣ್ಯವಾದ ಅಮತೇರಸು ಓಮಿಕಾಮಿಯೊಡನೆ ನಿಕಟವಾದ ಬಾಂಧವ್ಯವನ್ನು ಪಡೆದಿದೆ. ಆದರೆ ಭಾರತದ 'ಶಕ್ತಿ'ಭಾವವು ವೇದಾಂತ ದರ್ಶನದಿಂದ ಪಡೆದಿರುವ ಅಂಗೀಕಾರವನ್ನು ಜಪಾನೀಯರ 'ಕಾಮಿ' ಭಾವವು ದಾರ್ಶನಿಕವಾಗಿ ಪಡೆದಿಲ್ಲ. ಶಕ್ತಿಯ ಭಾವನೆಗೆ ದಾರ್ಶನಿಕ ಪೋಷಣೆ ದೊರೆತಿರುವುದರಿಂದ ಭಾರತದ 'ಕಾಮಿ'ಮತವನ್ನು ಅತ್ಯಂತ ಚೈತನ್ಯಪೂರ್ಣವಾದ ಆಧ್ಯಾತ್ಮಿಕಾನುಭಾವದ ಮಹೋನ್ನತಿಗೆ ಏರಿಸಿದೆ. ಶಕ್ತಿದೇವತೆಯು ಧ್ಯಾನಶೀಲರಾದ ಮತ್ತು ಪರಮಪವಿತ್ರರಾದ ಭಕ್ತರಿಗೆ ಮಾತ್ರ ಆರಾಧ್ಯ ದೈವವಾಗಿರದೆ ಯೋಧರ ಮತ್ತು ಕರ್ಮಶೀಲರ ದೇವತೆಯಾಗಿಯೂ ಇದೆ. ಈಗ ಹಲವು ಶತಮಾನಗಳಿಂದಲೂ ಅದರ ಭಾವನೆ ಮತ್ತು ಪೂಜೆಗಳು ವಿಕಾಸಗೊಂಡು ಅದರಲ್ಲಿಯೂ ಮುಖ್ಯವಾಗಿ ನಮ್ಮ ಕಾಲದಲ್ಲಿಯೇ ಇದ್ದ ಶ್ರೀರಾಮಕೃಷ್ಣ (೧೮೩೬-೧೮೮೬)ರಿಂದ ಚೈತನ್ಯಾತ್ಮಕವಾಗಿ ರೂಪುಗೊಂಡು ಅದು ಲಕ್ಷ ಲಕ್ಷ ಭಾರತೀಯರ ಹೃದಯವನ್ನು ಸೂರೆಗೊಳ್ಳುತ್ತಿದೆ ; ಏಕೆಂದರೆ ಚೈತನ್ಯಪೂರ್ಣವಾದ ಸಾಮಾಜಿಕ ನೀತಿ ಜಡವಾದ ಧ್ಯಾನಕ್ಕೂ, ತರ್ಕ ಮತ್ತು ನಿಷ್ಠೆಗೂ, ಲೌಕಿಕ ಜ್ಞಾನ ಮತ್ತು ಪಾರಮಾರ್ಥಿಕ ಜ್ಞಾನಕ್ಕೂ ಇರುವ ದೊಡ್ಡ ಕಮರಿಗೆ ಸೇತುವೆ ಕಟ್ಟುವ ಶಕ್ತಿ ಅದಕ್ಕಿದೆ.

### ೨೦. ಅಧ್ಯಾತ್ಮ ಜೀವನ : ಅದರ ಮೂರು ಮಜಲುಗಳು

ಮಾನವನ ಅಧ್ಯಾತ್ಮಿಕ ಜೀವನದ ಅಭಿವ್ಯಕ್ತಿಯಲ್ಲಿ ಭಾರತವು ಮೂರು ಮಜಲುಗಳನ್ನು ಗುರುತಿಸುತ್ತದೆ. ಮೊದಲ ಮಜಲಿನಲ್ಲಿ ಮನುಷ್ಯನ ಧಾರ್ಮಿಕ ಆಕಾಂಕ್ಷೆ, ಪೂಜೆ, ಆರಾಧನೆಗಳ ಬಾಹ್ಯಕರ್ಮದಲ್ಲಿ ಅದು ವ್ಯಕ್ತಗೊಳ್ಳುತ್ತದೆ; ಅಂತಹವನ ದೇವರು ಅವನಿಂದ ಪ್ರತ್ಯೇಕವಾಗಿರುತ್ತದೆ. ಆಗ ಆತನು ದೇವಾಲಯ-ಚರ್ಚುಗಳನ್ನೂ, ವಿಗ್ರಹ-ಪ್ರತೀಕಗಳನ್ನೂ, ವೇದಪಠನ-ನಾಮ ಸಂಕೀರ್ತನಗಳನ್ನೂ, ಉಪವಾಸ-ತೀರ್ಥಯಾತ್ರೆಗಳನ್ನೂ ಆಶ್ರಯಿಸುತ್ತಾನೆ. ಇದು ಪ್ರತಿಯೊಂದು ಮತಧರ್ಮದ ಮೊದಲ ಮಜಲು ; ಇಲ್ಲಿ, ಇಂದ್ರಿಯಗೋಚರವಾದ ಮತ್ತು ಸ್ಥೂಲವಾದುದರ ಮೂಲಕವಾಗಿ ನಿತ್ಯವಾದುದನ್ನು ಸಾಧಿಸುವ ಪ್ರಯತ್ನ ನಡೆಯುತ್ತದೆ. ಈ ಮಜಲಿನ ನೇಮ ನಿಷ್ಠೆಗಳು ಸಾಧಕನನ್ನು ಎರಡನೆಯ ಮಜಲಾದ ಅಂತರಂಗ ಧ್ಯಾನಕ್ಕೆ ಕೊಂಡೊಯ್ಯಬೇಕು. ಈ ಮಜಲಿನಲ್ಲಿ ಆತನು ಅಂತರಂಗದಲ್ಲಿಯೇ ನಿಕಟವಾಗಿ ಭಗವಂತನಿರುವನೆಂಬುದನ್ನು ಅನುಭವಿಸಲು ಕಲಿತಿರುತ್ತಾನೆ. ಇಲ್ಲಿ ಬಹಿರಂಗದ ತೋರಿಕೆ ಸ್ವಲ್ಪವೂ ಇಲ್ಲ ; ಮೊದಲ ಮಜಲಿನಲ್ಲಿದ್ದ, ಪ್ರದರ್ಶನಗಳಾವುವೂ ಇಲ್ಲ. ಹಾಗೆ ನೋಡುವುದಾದರೆ ನಿಜವಾದ ಧರ್ಮ ಪ್ರಾರಂಭವಾಗುವುದು ಈ ಮಜಲಿನಲ್ಲಿಯೇ ; ಮೊದಲನೆಯದೇನಿದ್ದರೂ ಧರ್ಮದ ಶೈಶವ ಶಿಕ್ಷಣ ಮಾತ್ರ. ಹೃದಯವು ಪರಿಶುದ್ಧವಾಗುತ್ತಾ ಆಗುತ್ತಾ ಹೋದಂತೆ ಅಂತರಂಗದ ದೈವಶಕ್ತಿಯ ಆಕರ್ಷಣೆಯನ್ನು ಅನುಭವಿಸಲು ಸಾಧ್ಯವಾಗುತ್ತದೆ; ಆಗ ಧರ್ಮವು ಆತ್ಮ-ದೈವಗಳ ಸಂಯೋಗದಿಂದ ಬಂದ ಒಂದು ಆನಂದವಾಗುತ್ತದೆ ; ಧ್ಯಾನ ಕಾರ್ಯವು ಆನಂದದಾಯಕವಾಗುತ್ತದೆ. ಈ ಮಜಲಿನಲ್ಲಿ ಸಾಧನೆಯನ್ನು ತುಂಬಾ ಮುಂದುವರಿಸಿದಾಗ ಅದು ದೈವಕೃಪೆಯನ್ನು ಕೆಳಕ್ಕೆ ಆಕರ್ಷಿಸುತ್ತದೆ. ಹೀಗಾದಾಗ ಆತ್ಮವು ಮೂರನೆಯ ಮಜಲನ್ನು ಪ್ರವೇಶಿಸಿ ಸಂಪೂರ್ಣ ಸಾಕ್ಷಾತ್ಕಾರವನ್ನು ಪಡೆಯುತ್ತದೆ. ಸಾಧಕನು ಧ್ಯಾನದಲ್ಲಿರುವಾಗ ತನ್ನ ಅಂತರಂಗದಲ್ಲಿಯೂ, ಕರ್ಮರಂಗದಲ್ಲಿರುವಾಗ ಬಹಿರಂಗದಲ್ಲಿಯೂ ಭಗವಂತನನ್ನು ಕಾಣುತ್ತಾನೆ. ಭಾರತವು ಇದನ್ನು ಅಧ್ಯಾತ್ಮ ಸಾಧನೆಯೆಲ್ಲದರ ಹೆಗ್ಗುರಿ ಎಂದು ಭಾವಿಸುತ್ತದೆ. ಭಾರತದ ಪ್ರತಿಯೊಬ್ಬ ಸಾಧಕನೂ(ಳೂ) ಇದನ್ನು ತನ್ನ ಪಾರಮಾರ್ಥಿಕ ಹೆಗ್ಗುರಿ ಎಂದು ಪರಿಗಣಿಸುತ್ತಾನೆ(ಳೆ). ಆದರೆ ಇದನ್ನು ಒಂದು ಜನ್ಮದಲ್ಲಿ ಸಾಧಿಸುವುದು ಕಷ್ಟವೆಂದೂ ಆದರೂ ಎಂದಾದರೊಂದು ದಿನ ಸಾಧಿಸುತ್ತೇವೆಂದೂ ಭಾರತದ ಪ್ರತಿಯೊಬ್ಬ ಗಂಡು ಹೆಣ್ಣಿಗೂ ಗೊತ್ತು. ಶ್ರೀಕೃಷ್ಣನು ಗೀತೆಯಲ್ಲಿ ಹೇಳುವಂತೆ (VII-೩) :

*ಸಹಸ್ರಾರು ಜನರಲ್ಲಿ ಮುಕ್ತಿಗಾಗಿ ಕಷ್ಟಪಡುವವರು ಬಹು ಸ್ವಲ್ಪ ಜನ; ಹಾಗೆ ಕಷ್ಟಪಡುವ ಸಹಸ್ರಾರು ಜನರಲ್ಲಿ ಸ್ವಸ್ವರೂಪವನ್ನು ತಿಳಿಯುವವರು ಮತ್ತೂ ಸ್ವಲ್ಪ ಜನ. (VII-೧೯).*

*ಅನೇಕ ಜನ್ಮಗಳಲ್ಲಿ ಹೋರಾಡಿ ಜ್ಞಾನಿಗಳಾದವರು ನಾನು ಎಲ್ಲ ಜೀವಿಗಳಲ್ಲಿಯೂ ಇರುವನೆಂಬುದನ್ನು ಅರ್ಥಮಾಡಿಕೊಳ್ಳುತ್ತಾರೆ ; ಅಂತಹ ಮಹಾತ್ಮರು ದೊರೆಯುವುದು ಅಪೂರ್ವ.*

### ೨೧. ಜಪ ಮತ್ತು ಧ್ಯಾನ

ಮೇಲಿನ ಮಜಲುಗಳ ಪರಿಜ್ಞಾನವನ್ನು ದೃಷ್ಟಿಯಲ್ಲಿಟ್ಟುಕೊಂಡು, ಭಾರತದ ಭಗವದಾರಾಧಕನು ಬಹಿರಂಗದ ಪೂಜಾಕ್ರಮವನ್ನು ಕೈಗೊಳ್ಳುವುದು ಮಾತ್ರವೇ ಅಲ್ಲದ ಜಪ ಅಥವಾ ನಾಮಸ್ಮರಣೆಯ ಸಹಾಯದಿಂದ ಅಂತರಂಗದ ಧ್ಯಾನವನ್ನು ಅಭ್ಯಾಸಮಾಡುತ್ತಾನೆ. ಇಂತಹ ಭಗವಂತನ ನಾಮ ಸ್ಮರಣೆಯು ಭಾರತದ ಭಕ್ತಿಪಂಥದವರಲ್ಲಿ ಸಾರ್ವತ್ರಿಕವಾಗಿರುವ ಅಭ್ಯಾಸವಾಗಿರುತ್ತದೆ. ಇದು ಯಾವುದೋ ಒಂದು ರೂಪದಲ್ಲಿ ಜಗತ್ತಿನ ಎಲ್ಲ ಮತಧರ್ಮದಲ್ಲಿಯೂ ಇರುತ್ತದೆ.

ಈ ಜಪ ಮತ್ತು ಧ್ಯಾನಗಳು ಭಾರತೀಯರ ಆಧ್ಯಾತ್ಮಿಕ ಸಾಧನೆಯಲ್ಲಿ ಕೇಂದ್ರದ ತಿರುಳಿನಂತಿವೆ. ಒಬ್ಬ ಭಕ್ತನು ನಿರ್ದಿಷ್ಟವಾದ ಯಾವುದೋ ಒಂದು ದೇವರನ್ನು ಅಥವಾ ದೇವರ ಅವತಾರವನ್ನು ತನ್ನ ಇಷ್ಟದೈವವಾಗಿ ಆರಿಸಿಕೊಳ್ಳುತ್ತಾನೆ. ಈ ವಿಚಾರದಲ್ಲಿ ಭಾರತವು ವ್ಯಕ್ತಿಗೆ ಆಯ್ಕೆಯ ಸಂಪೂರ್ಣ ಸ್ವಾತಂತ್ರವನ್ನು ನೀಡುತ್ತದೆ. ಏಕೆಂದರೆ ಸತ್ಯವು ಒಂದೇ, ಅರ್ಥಮಾಡಿಕೊಂಡು ಅನುಸರಣೆ ಮಾಡುವುದರ ಅನುಕೂಲಕ್ಕಾಗಿ ಬೇರೆ ಬೇರೆ ಹೆಸರಿನಿಂದ ಮತ್ತು ಬೇರೆ ಬೇರೆ ರೂಪವಾಗಿ ಭಾವಿಸಬಹುದು ಎಂದು ವೇದಾಂತ ಬೋಧಿಸುತ್ತದೆ. ಆಧುನಿಕ ಕಾಲದಲ್ಲಿ, ಶ್ರೀರಾಮಕೃಷ್ಣಪರಮಹಂಸರು ಹಿಂದೂಗಳ ಮತ್ತು ಹಿಂದೂಗಳಲ್ಲದವರ ಬೇರೆ ಬೇರೆ ಆರಾಧನಾ ವಿಧಾನಗಳನ್ನು ಕೈಗೊಂಡು ಭಗವಂತನ ಸಾಕ್ಷಾತ್ಕಾರವನ್ನು ಮಾಡಿಕೊಂಡರಾದುದರಿಂದ, ಅವರ ಕಾರುಣ್ಯಮಯ ಪ್ರಭಾವದ ಫಲವಾಗಿ ಈವರೆವಿಗೂ ಹಿಂದೂಧರ್ಮಕ್ಕೆ ಮಾತ್ರ ಸೇರಿದ್ದ ಹಲವು ನಿರ್ದಿಷ್ಟ ದೈವಗಳನ್ನೋ ಅಥವಾ ಅವತಾರಗಳನ್ನೋ ಮಾತ್ರವೇ ಆರಾಧ್ಯದೈವವಾಗಿ ಆಯ್ದುಕೊಳ್ಳುತ್ತಿದ್ದ ಪದ್ಧತಿ ಮುಂದುವರಿದು ರಾಮ, ಕೃಷ್ಣರಂತೆ ಕ್ರಿಸ್ತ, ಬುದ್ಧರನ್ನೂ ಅವತಾರಪುರುಷರೆಂದು ಭಾವಿಸಿ ಅವರನ್ನು ಆರಾಧ್ಯದೈವವಾಗಿ ಸ್ವೀಕರಿಸು ತ್ತಿದ್ದಾರೆ.

### ೨೨. ತೀರ್ಥಯಾತ್ರೆಗಳು

ಭಾರತದ ಅಧ್ಯಾತ್ಮ ಜೀವನದಲ್ಲಿ ತೀರ್ಥಯಾತ್ರೆಗೆ ಒಂದು ಪ್ರಮುಖ ಸ್ಥಾನವಿದೆ. ಭಾರತದ ಮುಖ್ಯ ತೀರ್ಥಕ್ಷೇತ್ರಗಳು ಅದರ ಉದ್ದಗಲಕ್ಕೂ ಹರಡಿಕೊಂಡಿವೆ. ಅತ್ಯಂತ ಪವಿತ್ರವೆನಿಸಿದ ಕೆಲವು ತೀರ್ಥಸ್ಥಳಗಳು ಹಿಮಾಲಯದ ಒಳಪ್ರದೇಶದಲ್ಲಿವೆ. ತಿಬೆಟ್ಟಿನಲ್ಲಿರುವ ಶಿವನ ವಾಸಸ್ಥಾನ ವಾದ ಕೈಲಾಸಪರ್ವತವು ಅಂತಹ ತೀರ್ಥಸ್ಥಾನಗಳಲ್ಲಿ ಒಂದು ; ಅದು ಹಿಂದೂಗಳಿಗೂ ತಿಬೆಟ್ಟಿನ ಬೌದ್ಧರಿಗೂ ಸಮಾನವಾಗಿಯೇ ಪವಿತ್ರವಾಗಿದೆ. ಭಾರತದ ತೆಂಕಣ ತುದಿಯಲ್ಲಿ ರಾಮೇಶ್ವರ, ಕನ್ಯಾಕುಮಾರಿಗಳಿವೆ. ಇನ್ನೆರಡು ಮುಖ್ಯ ಕೇಂದ್ರಗಳೆಂದರೆ ಭಾರತದ ಪಶ್ಚಿಮ ಮತ್ತು ಪೂರ್ವದ ಸಮುದ್ರದಂಡೆಯಲ್ಲಿರುವ ದ್ವಾರಕ ಮತ್ತು ಪುರಿಗಳು.

### ೨೩. ಗಂಗೆಯ ಪಾವಿತ್ರ್ಯತೆ

ಭಾರತದಲ್ಲಿ ಗಂಗಾನದಿಯು ವಿಶೇಷ ಪೂಜ್ಯವಸ್ತುವೆನಿಸಿದೆ. ಅದರ ನೀರು ಸಾಕ್ಷಾತ್ ಭಗವಂತನ ಪ್ರತೀಕವೆಂದು ಭಾವಿಸಲಾಗಿದೆ. ಭಾರತದಲ್ಲಿ ಗಂಗೆಗೆ ಇರುವ ಪೂಜ್ಯತೆಯು ಜಗತ್ತಿನ ಮತ್ತಾವ ನದಿಗೂ ಇಲ್ಲ. ಇದು ಬೌದ್ಧಮತಕ್ಕಿಂತಲೂ ಪೂರ್ವದಿಂದ ನಡೆದುಕೊಂಡು ಬಂದಿದೆ. ಪ್ರತಿವರ್ಷವೂ ಲಕ್ಷಾಂತರ ಜನರು ಅದರಲ್ಲಿ ಸ್ನಾನಮಾಡಿ ಅದರ ನೀರನ್ನು ತಾಮ್ರದ ಗಿಂಡಿಗಳಲ್ಲಿಯೂ, ಕೊಡಗಳಲ್ಲಿಯೂ ಹೊರದೇಶಗಳಿಗೆ ಕೂಡ ಕೊಂಡೊಯ್ದು, ಪ್ರತಿದಿನವೂ ಅಥವಾ ವಿಶೇಷ ದಿನಗಳಲ್ಲಿ ಅದರ ಕೆಲವು ತೊಟ್ಟುಗಳನ್ನು ಕುಡಿಯುತ್ತಾರೆ. ಪವಿತ್ರ ಗಂಗಾತೀರ್ಥದ ಕೆಲವು ತೊಟ್ಟುಗಳನ್ನು ಸಾಯುವವರ ಬಾಯಲ್ಲಿ ಅವರ ಬಂಧುಗಳು ಹಾಕುತ್ತಾರೆ. ಗಂಗೆಯ ದಡದ ಮೇಲೆ ಸಹಸ್ರಾರು ಜನ ಧ್ಯಾನ, ತಪಸ್ಸುಗಳನ್ನು ಆಚರಿಸುತ್ತಾರೆ ; ಅದರ ಪವಿತ್ರ ವಾತಾವರಣದಿಂದ ಸ್ಫೂರ್ತಿಯನ್ನು ಪಡೆಯುತ್ತಾರೆ. ಭಾರತ ಸಂಸ್ಕೃತಿಯ ಪ್ರಭಾತ ಸಮಯದಲ್ಲಿ ಗಂಗೆಯೂ ಅದರ ಪವಿತ್ರತೆಯೂ ಲಂಕಾ ಮತ್ತು ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲೆಲ್ಲಾ ಪ್ರಚಾರವಾಯಿತು. ಇವುಗಳಲ್ಲಿ ಕೆಲವು ರಾಷ್ಟ್ರಗಳು ಪ್ರತಿಯೊಂದು ನದಿಯನ್ನೂ ಗಂಗೆ ಎಂದೇ ಕರೆಯುತ್ತವೆ.

ಇದು ಸ್ವರ್ಗದ ನದಿಯೆಂದೂ ಪ್ರಾಚೀನ ಭಾರತದ ಸಾರ್ವಭೌಮನಾದ ಭಗೀರಥನು ಇದನ್ನು ಭೂಮಿಗೆ ತಂದನೆಂದೂ ನಂಬಲಾಗಿದೆ. ಈ ಐತಿಹಾಸಿಕ-ಪೌರಾಣಿಕ ಸಂಗತಿಯು ವಿಪುಲವಾದ ಸಾಹಿತ್ಯ

ಮತ್ತು ಕಲೆಗಳಿಗೆ ವಸ್ತುವನ್ನು ನೀಡಿದೆ. ಗಂಗಾ ನದಿಯು ಸ್ವರ್ಗದಿಂದ ಹೊರಟು ಹಿಮಾಲಯದ ಹಿಮಾವೃತ ಶಿಖರದಲ್ಲಿ ಧ್ಯಾನಮಗ್ನನಾಗಿ ಕುಳಿತಿದ್ದ ಶಿವನ ತಲೆಯ ಜಟಾಜೂಟದ ಮೇಲೆ ಬಿತ್ತು ; ಆಮೇಲೆ ದಟ್ಟವಾದ ಪರ್ವತಕಂದರಗಳಲ್ಲಿ ವಕ್ರಗತಿಯ ಪ್ರವಾಹವಾಗಿ ಹರಿದು ಕಟ್ಟಕಡೆಗೆ ಹರಿದ್ವಾರದ ಹತ್ತಿರ (ದೆಹಲಿಯಿಂದ ನೂರಿಪ್ಪತ್ತು ಮೈಲಿ ದೂರದಲ್ಲಿರುವ ಬಹು ಪ್ರಾಚೀನ ವಾದ ಪವಿತ್ರ ತೀರ್ಥಯಾತ್ರಾ ಕೇಂದ್ರ) ಮೈದಾನವನ್ನು ಪ್ರವೇಶಿಸಿ, ಭಾರರತದ ಲೌಕಿಕ ಮತ್ತು ಪಾರಲೌಕಿಕ ತುಷ್ಟಿ ಪುಷ್ಟಿಗಳನ್ನು ನೀಡುವ ಮಹಾ ನದಿಯಾಗುತ್ತದೆ. ಈ ನದಿಯನ್ನು ಮೈದಾನದಲ್ಲಿ ಹರಿಸಿ, ತೃಪ್ತಿಪಟ್ಟುಕೊಳ್ಳುವಲ್ಲಿ ಭಗೀರಥನು ಅನಂತ ಕಷ್ಟಗಳನ್ನೂ ದೈಹಿಕ ಶೋಷಣೆಯನ್ನೂ ಅನುಭವಿಸ ಬೇಕಾಯಿತಂತೆ ! ಈಗ ಭಾರತ ಸಂಸ್ಕೃತಿಯಲ್ಲಿ ಭಗೀರಥನೆಂಬ ಹೆಸರು, ಗ್ರೀಕ್ ಸಂಸ್ಕೃತಿಯಲ್ಲಿ ಪ್ರೊಮಿಥಿಯಸ್ಸಿನ ಹೆಸರಿನಂತೆ ಶ್ರಮಸಾಧ್ಯವಾದ ಪವಿತ್ರ ಕಾರ್ಯಗಳಿಗೆಲ್ಲಾ ಪ್ರತೀಕ ವಾಗಿದೆ.

## ೨೪. ಭಾರತೀಯರ ಸಂನ್ಯಾಸಾಶ್ರಮ ಜೀವನ

ನಾನು ಮುಗಿಸುವ ಮುನ್ನ ಭಾರತದ ಸಂನ್ಯಾಸಾಶ್ರಮ ಜೀವನವನ್ನು ಕುರಿತು ಕೆಲವು ಮಾತು ಗಳನ್ನಾಡಲು ಬಯಸುತ್ತೇನೆ. ಅದು ಭಾರತದ ಪಾರಮಾರ್ಥಿಕ ಜೀವನದಲ್ಲಿ ಅರ್ಥವತ್ತಾದ ಅಭಿವ್ಯಕ್ತತೆ. ಅದೊಂದು ಅತ್ಯಂತ ಪ್ರಾಚೀನವಾದ ಮತ್ತು ಗೌರವ ಸ್ಥಾನವುಳ್ಳ ಸಂಸ್ಥೆ. ಅದು ಬುದ್ಧನ ಕಾಲಕ್ಕಾಗಲೇ ಪ್ರಾಚೀನವಾದುದಾಗಿ ಸುಸ್ಥಿರವಾಗಿ ಸ್ಥಾಪಿತವಾಯಿತು. ಬುದ್ಧನು ಅದರ ಅತ್ಯಂತ ಶ್ರೇಷ್ಠ ಪ್ರತಿನಿಧಿಗಳಲ್ಲಿ ಒಬ್ಬನಾಗಿದ್ದನು. ಸಂನ್ಯಾಸಿಯು ಸರ್ವತಂಗಪರಿತ್ಯಾಗಿಯಾಗಿ ವೈಯಕ್ತಿಕವಾದ ಮತ್ತು ಸಾಮಾಜಿಕವಾದ ಸಂಬಂಧ ಬಂಧನಗಳಿಂದ ಮುಕ್ತನಾದವನಾದ್ದರಿಂದ ಭಾರತದಲ್ಲಿ ಆತನನ್ನು ದೇವರಂತೆ ಭಕ್ತಿ ಗೌರವಗಳಿಂದ ಕಾಣುತ್ತಾರೆ. ಈ ವರ್ಗಕ್ಕೆ ಸೆರಿದವರಲ್ಲಿ ಶ್ರೇಷ್ಠತಮರಾದವರು ಅಂತಹ ರಾಷ್ಟ್ರ ಗೌರವಕ್ಕೆ ಸಂಪೂರ್ಣ ಅರ್ಹರೂ ನಿಜ. ಬುದ್ಧ, ಶಂಕರ, ಚೈತನ್ಯ, ರಾಮಕೃಷ್ಣ, ವಿವೇಕಾನಂದ—ಇವೆಲ್ಲರೂ ಈ ಆಶ್ರಮ ಸಂಪ್ರದಾಯದ ಅವಿಚ್ಛಿನ್ನ ಪರಂಪರೆಗೆ ಸೇರಿದವರೇ. ಈ ಪರಂಪರೆಯು ಶುಕ, ಯಾಜ್ಞವಲ್ಕ್ಯ, ಸನತ್ಕುಮಾರ ಮೊದಲಾದವರ ಇತಿಹಾಸಪೂರ್ವದ ಕಾಲದವರೆಗೂ ಹಿಮ್ಮುಖವಾಗಿ ಹೋಗುತ್ತದೆ. ಅನೇಕ ಸಂನ್ಯಾಸ ವರ್ಗಗಳಲ್ಲಿ ಸಂನ್ಯಾಸ ದೀಕ್ಷೆಯನ್ನು ಕೊಡುವುದಕ್ಕೆ ಮುನ್ನ ಒಂದು ಹೋಮ (ಜಪಾನಿ ಭಾಷೆಯಲ್ಲಿ ಅದರ ಹೆಸರು ಗೋಮ)ವೆಂಬ ಅಗ್ನಿಕಾರ್ಯವನ್ನು ಆಚರಿಸಬೇಕಾಗುತ್ತದೆ ; ಅದರಲ್ಲಿ ಹುಟ್ಟಿದಂದಿ ನಿಂದಲೂ ಬ್ರಹ್ಮಚಾರಿಯಾದವನು ಅಥವಾ ಗೃಹಸ್ಥ ಸ್ಥಿತಿಯಿಂದ ಮುಕ್ತನಾಗಿ ಬ್ರಹ್ಮಚರ್ಯವನ್ನು ಮಂತ್ರಪೂರ್ವಕ ಸ್ವೀಕರಿಸಿದವನು ಪರಬ್ರಹ್ಮದ ಸಂಕೇತವಾಗಿರುವ ಅಗ್ನಿಜ್ವಾಲೆಯಲ್ಲಿ ತನ್ನ ಆಶೆಗಳನ್ನೂ ಇಂದ್ರಿಯ ಮನಸ್ಸುಗಳನ್ನೂ ಅಹಂಕಾರವನ್ನೂ ಆಹುತಿ ರೂಪದಿಂದ ಹೋಮ ಮಾಡಿ, ತಾನು ಲೌಕಿಕದ ವಾಸನೆಯೇ ಇಲ್ಲದ ಶುದ್ಧಾತ್ಮನಾದೆನೆಂದು ಭಾವಿಸಿಕೊಳ್ಳುತ್ತಾನೆ. ಆಗ ಆತನಿಗೆ ಹೊಸ ಹೆಸರನ್ನು ಕೊಡುತ್ತಾರೆ, ಹೊಸ ಬಟ್ಟೆಗಳನ್ನು (ಕಾವಿ ಬಣ್ಣದವು) ಕೊಡುತ್ತಾರೆ. ತಾನು ದೈಹಿಕವಾಗಿ ಸತ್ತುದನ್ನೂ, ಆಧ್ಯಾತ್ಮಿಕವಾಗಿ ಹುಟ್ಟಿದುದನ್ನೂ ಇದು ಸೂಚಿಸುತ್ತದೆ. ಮನೆ ಇಲ್ಲದವ ನಾಗಿ, ತನ್ನದಾದುದಾವುದೂ ಇಲ್ಲದವನಾಗಿ ಅವನು ಪ್ರಾಯೋಗಿಕವಾದ ಹೊಸ ಧರ್ಮ ಜೀವನವನ್ನು ನೇರವಾಗಿ ಆರಂಭಿಸುತ್ತಾನೆ. ಏಕೈಕನಾಗಿ ಏಕೈಕನಲ್ಲಿಗೆ ಪಯಣ ಬೆಳೆಸುತ್ತಾನೆ, ತರತಮಭಾವ ವಾವುದೂ ಇಲ್ಲದೆ ಎಲ್ಲರನ್ನೂ ಪ್ರೀತಿಸುವವನಾಗಿ, ಸೇವೆ ಮಾಡುವವನಾಗಿ ಹೊರಡುತ್ತಾನೆ.

## ೨೫. ಕಡೆಯ ಮಾತು

ಭಾರತವು ಧರ್ಮದ ಅಥವಾ ಸಂನ್ಯಾಸಾಶ್ರಮದ ನಿಯಮಪಾಲನೆಯನ್ನು ನಿಷ್ಠುರವಾಗಿ ನಿಯಂತ್ರಿಸುವ ಒಂದು ಕೇಂದ್ರ ಚರ್ಚ್ ಅಥವಾ ಧಾರ್ಮಿಕ ಸಂಸ್ಥೆಯು ಅಗತ್ಯವೆಂದು ಭಾವಿಸುವ

ದಿಲ್ಲ. ಭಾರತದ ಹೊಸ ಸಾಮಾಜಿಕ ವ್ಯವಸ್ಥೆಯು ಸುಖೀ ರಾಜ್ಯವಾಗಿ ವಿಕಾಸಗೊಂಡಾಗ ಸಂನ್ಯಾಸಾಶ್ರಮ ವ್ಯವಸ್ಥೆಯು ಭಾರತದಲ್ಲಿಯೂ ಅದರ ಹೊರಗೂ ಮಾನವ ಸುಖ ಸಂರಕ್ಷಣೆಗಳ ಸೃಜನಶೀಲ ಶಕ್ತಿಯಾಗಿ ಪರಿಣಮಿಸುತ್ತದೆ. ಏಕೆಂದರೆ 'ಬಹು ಜನ ಹಿತಾಯ, ಬಹು ಜನ ಸುಖಾಯ' ಎಂದು ಬುದ್ಧದೇವನು ತನ್ನ ಪಂಥದವರನ್ನು ಸ್ಫೂರ್ತಿಗೊಳಿಸುವುದಕ್ಕಾಗಿ ಮಾಡಿದ ಸುಮಧುರ ಧ್ವನಿಯನ್ನೇ ಸ್ವಾಮಿ ವಿವೇಕಾನಂದರು ತಮ್ಮ ಅನುಯಾಯಿಗಳಲ್ಲಿ ಆಧುನಿಕ ಭಾರತದ ಸಂನ್ಯಾಸ ವರ್ಗವನ್ನು ಸ್ಫೂರ್ತಿಗೊಳಿಸುವುದಕ್ಕಾಗಿ ಧ್ವನಿ ಮಾಡಿದ್ದಾರೆ; 'ತ್ಯಾಗ ಮತ್ತು ಸೇವೆ'ಗಳ ದಿವ್ಯಾದರ್ಶವನ್ನು ಅವರ ಮುಂದಿಟ್ಟಿದ್ದಾರೆ. ಸ್ವಾಮಿ ವಿವೇಕಾನಂದರ ಮತ್ತು ಅವರ ದಿವ್ಯ ಗುರುಗಳಾದ ಶ್ರೀರಾಮಕೃಷ್ಣರ ಉಪದೇಶಗಳು ಆಧುನಿಕ ಭಾರತದ ಲೌಕಿಕರನ್ನೂ ಸಂನ್ಯಾಸಿಗಳನ್ನೂ ಆಧುನಿಕ ಜಗತ್ತಿನ ಆಶೋತ್ತರಗಳಿಗೂ ಉದ್ದೇಶಗಳಿಗೂ ಹೊಂದಿಕೊಳ್ಳುವಂತಹ ನೂತನ ರೀತಿಯ ಆಧ್ಯಾತ್ಮಿಕ ಜೀವನವನ್ನು ವಿಕಾಸಗೊಳಿಸುವುದಕ್ಕೆ ಸಹಾಯಕವಾಗುವಂತೆ, ಅತ್ಯಂತ ಚೈತನ್ಯಪೂರ್ಣವಾದ ಆಧ್ಯಾತ್ಮಿಕ ಶಕ್ತಿಯುಳ್ಳವಾಗಿವೆ.

ಅನು : ತ. ಸು. ಶಾಮರಾಯ

೧೩

# ಭಕ್ತ್ಯುಪಾಸನೆಯು ಶ್ರೀಮದ್ ಭಾಗವತದ ಕೇಂದ್ರ ತತ್ತ್ವ*

## ೧. ಪ್ರಸ್ತಾವನೆ

ಶೌನಕಾದಿ ಋಷಿಗಳು ಸೂತಪುರಾಣಿಕನನ್ನು ಕೇಳುವ ಮುಖ್ಯ ಪ್ರಶ್ನೆಯೊಂದರಿಂದ ಶ್ರೀಮದ್ ಭಾಗವತವು ಪ್ರಾರಂಭವಾಗುತ್ತದೆ (೧-೧-೯) :

ತತ್ರ ತತ್ರಾಂಜಸಾಽಽಯುಷ್ಮನ್ ಭವತಾ ಯದ್ವಿನಿಶ್ಚಿತಮ್ ।
ಪುಂಸಾಮೇಕಾಂತತಃ ಶ್ರೇಯಃ ತನ್ನಃ ಶಂಸಿತುಮರ್ಹಸಿ ॥

*ಹೇ ಆಯುಷ್ಮನ್! ಮಾನವನಿಗೆ ಅತ್ಯುತ್ತಮವಾದ ಶ್ರೇಯಸ್ಸು ಯಾವುದರಿಂದ ಉಂಟಾಗುತ್ತದೆ ಎಂಬುದನ್ನು ಜ್ಞಾನ ಮತ್ತು ಅನುಭವಗಳಿಂದ ಉದಿಸಿರುವ ನಿನ್ನ ನಿಶ್ಚಯ ಬುದ್ಧಿಯಿಂದ ನಮಗೆ ತಿಳಿಸುವವನಾಗು.*

## ೨. ಇಂದ್ರಿಯಾಧೀನತೆಯಿಂದ ಆಧ್ಯಾತ್ಮದೆಡೆಗೆ

ಮಾನವನೆಂದರೆ ಏನು ? (ಮಾನವತ್ವದ) ಅಳತೆಗೋಲಿನ ಅತ್ಯಂತ ಕೆಳಮಟ್ಟದಲ್ಲಿ ಅವನೊಬ್ಬ ದುರ್ಬಲನಾಗಿ, ಇಂದ್ರಿಯಾಧೀನನಾಗಿ ನಿಸ್ಸಹಾಯಕನಾಗಿರುವವನು ; ಅತ್ಯಂತ ಉನ್ನತ ಮಟ್ಟದಲ್ಲಿ ಅವನು ಅನಂತ ಜ್ಞಾನ, ಪ್ರೇಮ, ಕರುಣೆ, ನಿರ್ಭಯಗಳು ಹೊರ ಹೊಮ್ಮುವ ದೈವಾಂಶ ಸಂಭೂತನಾಗಿ ನಮಗೆ ಕಾಣಿಸುತ್ತಾನೆ. ಎಲ್ಲ ಜೀವಿಗಳ ಹೃದಯದಲ್ಲಿಯೂ ಆತ್ಮಸ್ವರೂಪನಾಗಿ ನೆಲಸಿರುವ ಭಗವಂತನು ಮಾನವನ ಮಿತಿಯನ್ನೂ ಭಯವನ್ನೂ ನಿವಾರಿಸಲು ತಾನೇ ಮಾನವನಾಗಿ ಅವತರಿಸುತ್ತಾನೆ. ಭಗವಂತ ಮತ್ತು ಆತನ ಹೆಸರು—ನಾಮಿ ಮತ್ತು ನಾಮ—ಬೇರೆ ಬೇರೆಯಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಭಗವಂತನ ನಾಮಕ್ಕೆ ಶರಣಾದವನು ಆತನಿಗೆ ಶರಣಾದಂತೆಯೇ. ಲೌಕಿಕವಾದ ಹವ್ಯಾಸ, ಸುಖ, ಕಷ್ಟಗಳಲ್ಲಿ ಮಗ್ನನಾದ ಮಾನವನಲ್ಲಿ 'ಭಗವಂತನು ಪ್ರೇಮ ಸಮುದ್ರ, ಆತನು ಅವತಾರ ಮಾಡಿ ಬರುತ್ತಾನೆ' ಎಂಬ ಆಸ್ತಿಕತೆ ಎಚ್ಚರಗೊಂಡರೆ ಅವನು ಪ್ರಾಪಂಚಿಕ ವ್ಯಕ್ತಿ ಅಥವಾ ಸಂಸಾರಿಯಾಗಿ ಉಳಿಯುವುದಿಲ್ಲ ; ಅವನು ಭಕ್ತನಾಗಿ, ತನ್ನ ಪಾರಮಾರ್ಥಿಕ ಜೀವನವನ್ನು ಪ್ರಾರಂಭಿಸುತ್ತಾನೆ. ಇದೇ ಉಪಾಸನಾ, ಪೂಜೆ. ಇದರಿಂದ ಆತನು ತನ್ನ ಜೀವನದಲ್ಲಿ ಉಪಾಸಕ ಅಥವಾ ಪೂಜಕನಾಗಿ ಹೊಸ ಅಧ್ಯಾಯವೊಂದನ್ನು ಪ್ರಾರಂಭಿಸುತ್ತಾನೆ. ಶ್ರೀಮದ್ಭಾಗವತ ಹೇಳುತ್ತದೆ (೧-೧-೧೪) :

---

* ೧೯೬೮ರ ಉಪಾಸನಾ—ಇದು ಹಿಂದೂ ಪತ್ರಿಕೆ ಕಲ್ಯಾಣ್ ಎಂಬುದರ ವಿಶೇಷಾಂಕ—ಎಂಬುದಕ್ಕೆ ನೀಡಿದ ಲೇಖನ.

ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್ ।
ತತಃ ಸದ್ಯೋ ವಿಮುಚ್ಯೇತ ಯದ್ಬಿಭೇತಿ ಸ್ವಯಂ ಭಯಮ್ ॥

*ಭಯಂಕರವಾದ ಸಂಸಾರ ಸಾಗರದಲ್ಲಿ ಬಿದ್ದು ನಿಸ್ಸಹಾಯಕನಾದ ಮಾನವ ಭಯಕ್ಕೇ ಭಯಂಕರನಾದ ಆತನ (ಭಗವಂತನ) ನಾಮಸ್ಮರಣೆ ಮಾಡುತ್ತಾ ಹೋದರೆ ಒಡನೆಯೇ ಉದ್ಧಾರವಾಗುತ್ತಾನೆ.*

## ೩. ಭಗವಂತನಲ್ಲಿರಿಸುವ ಅಹೇತುಕೀ ಭಕ್ತಿಯ ಮಹತ್ತು

ಪ್ರೇಮಸಾಗರನೂ, ನಮ್ಮ ಆತ್ಮಗಳ ಆತ್ಮನೂ ಆದ ಇಷ್ಟದೈವವೊಂದರಲ್ಲಿ ಪ್ರೇಮಮಯವಾದ ಭಕ್ತಿಯನ್ನಿಡುವುದು, ಆತನ ಅವತಾರದ ಲೀಲಾಕಾರ್ಯಗಳಲ್ಲಿ ಆನಂದಪಡುವುದು, ಸದಾ ಆತನನ್ನು ಸ್ಮರಿಸುತ್ತಾ, ಆತನ ನಾಮವನ್ನು ಜಪಿಸುವುದು, ತನ್ನ ಕಾರ್ಯಗಳನ್ನೆಲ್ಲ ಆತನ ಪೂಜೆಯೆಂದು ಭಾವಿಸಿ ಮಾಡುವುದು, ಆತನ ಪೂಜೆ ಎಂಬ ಭಾವನೆಯಿಂದ ಎಲ್ಲ ಜೀವಿಗಳನ್ನೂ ಸೇವೆ ಮಾಡುವುದು—ಇವೆಲ್ಲವೂ ವ್ಯವಹಾರ ಜೀವನದಿಂದ ಅಧ್ಯಾತ್ಮ ಜೀವನಕ್ಕೆ ಕಾಲಿಡುತ್ತಿದ್ದಂತೆಯೇ ಉಪಾಸನೆಯ ನಾನಾ ರೂಪಗಳಾಗಿ ಏರ್ಪಡುತ್ತವೆ. ದೈವಪ್ರೇಮವನ್ನು ಸ್ವಲ್ಪವಾದರೂ ರುಚಿ ನೋಡಿರುವ ಅಧ್ಯಾತ್ಮಸಾಧಕನಿಗೆ ಭಗವಂತನು ಶಕ್ತಿಯುತವಾದ ಒಂದು ಸೂಜಿಗಲ್ಲಾಗಿ ಕೆಲಸ ಮಾಡುತ್ತಾನೆ. ಅದರ ಆಕರ್ಷಣ ಶಕ್ತಿಯು ಆಯಾ ವ್ಯಕ್ತಿ ತನ್ನ ಹೃದಯ ದೌರ್ಬಲ್ಯವನ್ನು ಎಷ್ಟರ ಮಟ್ಟಿಗೆ ಅಣಗಿಸಬಲ್ಲನೋ ಅದಕ್ಕನುಸಾರವಾಗಿರುತ್ತದೆ ; ಸಾಧಕನ ಭಗವತ್‌ಪ್ರೇಮದ ಆರಂಭ ದೆಸೆಯಲ್ಲಿ ಅಷ್ಟಿಷ್ಟು ಹೆಚ್ಚೋ ಕಡಿಮೆಯೋ ಆಗಿ ಸೇರಿಕೊಂಡಿರಬಹುದಾದ ಲೌಕಿಕತೆಯನ್ನು ಹೋಗಲಾಡಿಸಿ ಮನಶ್ಶುದ್ಧಿಯನ್ನು ನೀಡುವುದರಲ್ಲಿ ಭಗವಂತನ ಸ್ಮರಣೆ ನಾಮ ಜಪಗಳ ಪ್ರಾಮುಖ್ಯತೆಯನ್ನು ಶ್ರೀಮದ್ ಭಾಗವತವು ಒತ್ತಿ ಹೇಳುತ್ತದೆ. ಶೌನಕನ ಪ್ರಶ್ನೆಗೆ ಸೂತನು ನೀಡುವ ಉತ್ತರವು ಸಂಪೂರ್ಣ ಶುದ್ಧವಾದ ಭಕ್ತಿಯ ಮಹತ್ತನ್ನು ಸಾರುತ್ತದೆ (೧-೨-೬) :

ಸ ವೈ ಪುಂಸಾಂ ಪರೋಧರ್ಮೋ ಯತೋ ಭಕ್ತಿರಧೋಕ್ಷಜೇ ।
ಅಹೈತುಕೀ ಅಪ್ರತಿಹತಾ ಯಯಾ ಆತ್ಮಾ ಸಂಪ್ರಸೀದತಿ ॥

*ಭಗವಂತನ ಪ್ರೇಮವನ್ನು ಪಡೆಯಬಲ್ಲುದಾವುದೋ ಅದೇ ನಿಜವಾದ ಧರ್ಮ. (ಈ ಸಂದರ್ಭದಲ್ಲಿ ಅವನ ಅವತಾರವಾಗಿರುವ ಶ್ರೀಕೃಷ್ಣ)—ಫಲಾಪೇಕ್ಷೆಯಿಲ್ಲದ ಮತ್ತು ಆತಂಕ ವಿಲ್ಲದ ಪ್ರೇಮ—(ಪ್ರೇಮಕ್ಕಾಗಿಯೇ ಪ್ರೇಮ ಎಂಬ ಅತ್ಯಂತ ಪರಿಶುದ್ಧವಾದ ರೂಪದಲ್ಲಿ ಕಾಣಿಸಿಕೊಳ್ಳುವುದು) ಇದರಿಂದ ಮಾನವ ಹೃದಯವು ಮಹೋನ್ನತ ಶ್ರೇಯಸ್ಸನ್ನು ಪಡೆಯುತ್ತದೆ.*

## ೪. ಶುದ್ಧಪ್ರೇಮವನ್ನು ಬೆಳೆಸುವುದು ಹೇಗೆ ?

ಈ ಶುದ್ಧಪ್ರೇಮವನ್ನು ಬೆಳೆಸುವುದೇ ಉಪಾಸನೆಯ ಉದ್ದೇಶ. ಇದನ್ನು ಪಡೆಯಲು ಶ್ರೀಮದ್ ಭಾಗವತವು ಈ ಕೆಳಗಿನ ಶಕ್ತಿಯುತ ಮಾರ್ಗವನ್ನು ನಿರೂಪಿಸುತ್ತದೆ (೧-೨-೧೬) :

ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾ ರುಚಿಃ ।
ಸ್ಯಾತ್ ಮಹತ್ ಸೇವಯಾ ವಿಪ್ರಾಃ ಪುಣ್ಯತೀರ್ಥ ನಿಷೇವಣಾತ್ ॥

*ಎಲೈ ಮಹರ್ಷಿಗಳೇ, ಶ್ರದ್ಧಾನ್ವಿತರಾಗಿ, ಅಧ್ಯಾತ್ಮವನ್ನು ಕೇಳಲೆಳಸುವ ಸಾಧಕರು ಪುಣ್ಯ ತೀರ್ಥಗಳ ಯಾತ್ರೆ ಮತ್ತು ವಿಪ್ರರ ಸೇವೆಯಿಂದ ವಾಸುದೇವ ಕಥನದಲ್ಲಿ ಅಭಿರುಚಿಯನ್ನು ಪಡೆಯುತ್ತಾರೆ.*

ಈ ಅಭಿರುಚಿಯನ್ನು ಗೂಢಿಸಿಕೊಂಡಾಗ ಭಕ್ತನ ಹೃದಯವು ಅದ್ಭುತರೀತಿಯಲ್ಲಿ ಪರಿಶುದ್ಧ ಗೊಳ್ಳುವುದೆಂದು ಭಾಗವತದ ಮುಂದಿನ ಪದ್ಯವು ತಿಳಿಸುತ್ತದೆ.

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯ ಶ್ರವಣ ಕೀರ್ತನಃ ।
ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥ ೧-೨-೧೭

*ಶ್ರವಣ ಕೀರ್ತನೆಗಳಿಗೆ ಪುಣ್ಯಕರವಾದ ಶ್ರೀಕೃಷ್ಣನ ಸ್ವಕಥನ(ಮಾತು)ವನ್ನು ಕೇಳುವವರ ಹೃದಯದಲ್ಲಿ ಅವನು(ಶ್ರೀಕೃಷ್ಣ) ಹೃದಯಸ್ಥನಾಗಿದ್ದುಕೊಂಡು, ಅಮಂಗಳವನ್ನೆಲ್ಲಾ (ಪಾಪ ವನ್ನೆಲ್ಲ) ಕಳೆಯುತ್ತಾನೆ ; ಏಕೆಂದರೆ ಅವನು ಸಜ್ಜನರ ಸ್ನೇಹಿತನು.*

೫. ಮಾನವನ ಆಧ್ಯಾತ್ಮಿಕ ಬೆಳವಣಿಗೆಯ ಮೂರು ಮಜಲುಗಳು

ಮುಂದಿನ ನಾಲ್ಕು ಗಮನಾರ್ಹವಾದ ಶ್ಲೋಕಗಳಲ್ಲಿ (೧೮-೨೨) ಭಾಗವತವು ಮನುಷ್ಯನ ಆಧ್ಯಾತ್ಮಿಕ ಬೆಳವಣಿಗೆ ಮತ್ತು ಪ್ರಗತಿಯಲ್ಲಿ ಧಾರ್ಮಿಕ ಸ್ವಾತಂತ್ರ್ಯ ಮತ್ತು ಮೋಕ್ಷಕ್ಕೆ ಕರೆದೊಯ್ಯುವ ಮೂರು ಘಟ್ಟಗಳನ್ನು ತಿಳಿಸುತ್ತದೆ.

ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತ ಸೇವಯಾ ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥

*ಸದಾ ಭಾಗವತ ಸೇವೆಯಿಂದ ಹೃದಯದ ಪಾಪಗಳೆಲ್ಲ ಸಮೂಲವಾಗಿ ನಾಶವಾದಾಗ ಮಾನವನು ಅತ್ಯುತ್ತಮವಾದ ನೈಷ್ಠಿಕೀ (ಸ್ಥಿರವಾದ) ಪ್ರೇಮವನ್ನು ಪಡೆದವನಾಗುತ್ತಾನೆ.*

ಆಧ್ಯಾತ್ಮ ಜೀವನದ ಆರಂಭ ದೆಸೆಯಲ್ಲಿ ನಮ್ಮ ಭಗವತ್ ಪ್ರೇಮ (ಭಕ್ತಿ) ದುರ್ಬಲವಾಗಿ ಅನುತ್ಸಾಹಕರವಾಗಿರುತ್ತದೆ. ಲೌಕಿಕ ಮೋಹಕ್ಕೆ ಸಿಕ್ಕಿ ಅದು ಒಂದು ಉದ್ರೇಕ ರೂಪದಲ್ಲಿ ಆಕಸ್ಮಿಕ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಹೃದಯ ಪರಿಶುದ್ಧವಾಗುತ್ತಾ ಆಗುತ್ತಾ ಹೋದಂತೆ ಭಗವತ್ ಪ್ರೇಮ ಹೆಚ್ಚು ಹೆಚ್ಚು ದೃಢವಾಗುತ್ತಾ ಹೋಗುತ್ತದೆ. ಅಖಂಡ ದಾರ್ಢ್ಯ ಮತ್ತು ಅಖಂಡ ಪರಿಶುದ್ಧತೆಗಳು ಭಗವಂತನ ಸಾಕ್ಷಾತ್ಕಾರವಾದ ಮೇಲೆ ಮಾತ್ರ ಸಾಧ್ಯ. ಇದು ಮೂರನೇ ಶ್ಲೋಕದ ತಿರುಳು. ಏತನ್ಮಧ್ಯೆ ಎರಡನೆ ಶ್ಲೋಕವು ನೈಷ್ಠಿಕೀ ಭಕ್ತಿಯ ಪ್ರವೇಶದಿಂದ ಅಂತರಂಗದಲ್ಲಾಗುವ ರೂಪಾಂತರಗಳನ್ನು ತಿಳಿಸುತ್ತದೆ.

ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ ।
ಚೇತ ಏತೈರನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ ॥ ೧೯ ॥

*ಆಗ ಮನಸ್ಸು ರಜಸ್ ಮತ್ತು ತಮೋಗುಣಗಳ ಭಾವಗಳಾದ ಕಾಮ ಲೋಭಗಳಿಗೆ ವಶವಾಗದೆ ಸ್ಥಿರಗೊಂಡು ಸತ್ತ್ವಗುಣದ ಪ್ರಶಾಂತ ಸ್ಥಿತಿಯನ್ನು ಪಡೆಯುತ್ತದೆ.*

ಈಗ ಹೃದಯವು ಭಗವಂತನ ಸಾಕ್ಷಾತ್ಕಾರಕ್ಕೆ ಸಿದ್ಧವಾಗಿದೆ—

ಏವಂ ಪ್ರಸನ್ನ ಮನಸೋ ಭಗವದ್ಭಕ್ತಿಯೋಗತಃ ।
ಭಗವತ್ತತ್ತ್ವ ವಿಜ್ಞಾನಂ ಮುಕ್ತ ಸಂಗಸ್ಯ ಜಾಯತೇ ॥

*ಹೀಗೆ ಭಕ್ತಿ ಯೋಗಾಭ್ಯಾಸದಿಂದ ಪ್ರಶಾಂತ ಮನಸ್ಸುಳ್ಳವನಾಗಿ, ಎಲ್ಲ ಬಂಧನಗಳಿಂದಲೂ ಮುಕ್ತನಾದ ಅವನಲ್ಲಿ ಈಗ ಭಗವಂತನ ಸತ್ಯ ಸಾಕ್ಷಾತ್ಕಾರವಾಗುತ್ತದೆ.*

ಮುಂಡಕ ಉಪನಿಷತ್ತಿನ ಸುಪ್ರಸಿದ್ಧ ಶ್ಲೋಕ (II, ೨, ೮)ವನ್ನು ಆಧರಿಸಿರುವ ಈ ಮುಂದಿನ ಶ್ಲೋಕವು ಸಾಕ್ಷಾತ್ಕಾರದ ಫಲವಾಗಿ ಮಾನವನಿಗೇನಾಗುತ್ತದೆಂಬುದನ್ನು ತಿಳಿಸುತ್ತದೆ.

ಭಿದ್ಯತೇ ಹೃದಯ ಗ್ರಂಥಿಃ-ಛಿದ್ಯಂತೇ ಸರ್ವಸಂಶಯಾಃ ।
ಕ್ಷಿಯಂತೇ ಚಾಸ್ಯ ಕರ್ಮಾಣಿ-ತಸ್ಮಿನ್ ದೃಷ್ಟ ಏವಾತ್ಮನೀಶ್ವರೇ ॥

*ಆತ್ಮಸ್ವರೂಪಿಯಾದ ಭಗವಂತನು ಹೃದಯದಲ್ಲಿ ಸಾಕ್ಷಾತ್ಕಾರವಾಗುತ್ತಲೇ ಸಿಕ್ಕುಸಿಕ್ಕಾದ ಹೃದಯದ ಗಂಟುಗಳು ಹರಿದುಹೋಗುತ್ತವೆ; ಸರ್ವ ಸಂಶಯಗಳೂ ನಿವಾರಣೆಯಾಗುತ್ತವೆ, ಕರ್ಮಗಳು ನಾಶವಾಗುತ್ತವೆ.*

## ೬. ಆಧ್ಯಾತ್ಮಿಕ ಜೀವನದ ಶಾಸ್ತ್ರ ಮತ್ತು ಕಲೆಯಾಗಿ ಭಕ್ತಿ

ವೇದಾಂತವು ಬೋಧಿಸಿರುವಂತೆ ಸಾಕಾರ-ನಿರಾಕಾರನಾದ ಭಗವಂತನ ಸಾಕಾರಮೂರ್ತಿಯಲ್ಲಿ ಭಕ್ತಿ ಮಾರ್ಗಾನುಸಾರವಾದ ಅಧ್ಯಾತ್ಮಜೀವನದ ವಿಜ್ಞಾನ ಕಲೆಗಳೆಡರನ್ನೂ ಇಲ್ಲಿ ಸ್ಪಷ್ಟವಾಗಿಯೂ ಖಚಿತವಾಗಿಯೂ ನಿರೂಪಿಸಲಾಗಿದೆ. ದೇವ ಒಬ್ಬ, ಆದರೆ ಅವನನ್ನು ಸೇರಲು ಇರುವ ಮಾರ್ಗಗಳು ಹಲವು. ಈ ಮಾರ್ಗಗಳನ್ನು ವೇದಾಂತವು ಸ್ಥೂಲವಾಗಿ ನೇತಿ-ಆಸ್ತಿ ಎಂಬ ಎರಡು ಮಾರ್ಗಗಳಾಗಿ ವಿಭಾಗಿಸಿದೆ. ಮೊದಲನೆಯದು ಜ್ಞಾನಯೋಗ, ರಾಜಯೋಗಗಳಿಂದಾಗಿದೆ. ಎರಡನೆಯದು ಭಕ್ತಿಯೋಗ, ಕರ್ಮಯೋಗಗಳಿಂದಾಗಿದೆ. ಆದರೆ ಶ್ರೀಮದ್ಭಾಗವತದ ಭಕ್ತಿಯು ಭಕ್ತಿ, ಜ್ಞಾನ ಗಳೆರಡರ ಜೊತೆಗೆ ರಾಜ ಮತ್ತು ಕರ್ಮಯೋಗಗಳ ತಿರುಳನ್ನೂ ಒಳಗೊಂಡಿದೆ. ಶ್ರೀರಾಮಕೃಷ್ಣರು ಶ್ರೀಮದ್ ಭಾಗವತದ ಮಧುರ ಗುಣವನ್ನು ಹಾಲಿನ ಕೆನೆಯಿಂದ ಮಾಡಿದ ಮಿಠಾಯಿ, 'ಪಂತಾ'ಗೆ ಹೋಲಿಸುತ್ತಾ ಅದನ್ನು 'ಜ್ಞಾನದ ಬೆಣ್ಣೆಯಲ್ಲಿ ಕರಿದು, ಭಕ್ತಿಯ ಪಾಕದಲ್ಲಿ ನೆನೆಹಾಕಿದೆ' ಎಂದು ಹೇಳುತ್ತಾರೆ. ಜ್ಞಾನ ವೈರಾಗ್ಯ ಯುಕ್ತಯಾ ಭಕ್ತ್ಯಾ'—ಜ್ಞಾನ ವೈರಾಗ್ಯಗಳಿಂದ ಕೂಡಿದ ಭಕ್ತಿ—ಎಂಬುದು ಈ ಮಹಾ ಅಧ್ಯಾತ್ಮ ಗ್ರಂಥದಲ್ಲಿ ಆಗಾಗ ಬರುವ ಮಾತುಗಳು. ನಿರಾಕಾರ-ಸಾಕಾರ ದೈವದ ಐಕ್ಯತೆ ಜ್ಞಾನಿಯ ದೇವರು ಮತ್ತು ಭಕ್ತನ ದೇವರು ಎಂಬ ಇಲ್ಲಿನ ಸಂದೇಶ ಅದರಲ್ಲಿನ ಸುಪ್ರಸಿದ್ಧ ಶ್ಲೋಕವೊಂದರಲ್ಲಿ (೧-೨-೧೧) ಹೊಳೆಯುತ್ತಿದೆ.

ವದಂತಿ ತತ್ ತತ್ತ್ವವಿದಃ ತತ್ತ್ವಂ ಯತ್ ಜ್ಞಾನಮದ್ವಯಮ್ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನ್ ಇತಿ ಶಬ್ದ್ಯತೇ ॥

*(ವೇದಾಂತಿಗಳು) ಬ್ರಹ್ಮವೆಂದು, (ಅನುಭಾವಿಗಳು) ಪರಮಾತ್ಮನೆಂದು, (ಭಕ್ತರು) ಭಗವಂತನೆಂದು—ಹೇಳುವುದು ಅವ್ಯಯ ಜ್ಞಾನದ ಒಂದೇ ತತ್ತ್ವವನ್ನು ಎಂದು ತತ್ತ್ವವೇದಿಗಳು ಹೇಳುತ್ತಾರೆ.*

ವ್ಯತ್ಯಾಸವಿರುವುದು ಹೆಸರಿನಲ್ಲಿ ಮಾತ್ರ, ದೃಷ್ಟಿಕೋನದಿಂದ ಹೆಸರು ಬರುತ್ತದೆ. 'ಶಬ್ದ್ಯತೇ' ; ಅದು ಹುಟ್ಟುವುದು (ಭಗವತ್ ಸಾನ್ನಿಧ್ಯಕ್ಕೆ ಅನುಸರಿಸುವ) ಬೇರೆ ಬೇರೆ ವಿಧಾನಗಳಿಂದ ; ಮಾರ್ಗಗಳು ಹಲವು, ಗುರಿಯೊಂದೇ—ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ.

## ೭. ಕಡೆಯ ಮಾತು

ಭಕ್ತಿ ಉಪಾಸನೆಯು ಕೇಂದ್ರ ವಸ್ತುವಾಗಿರುವ ಈ ಪುಟ್ಟ ಲೇಖನವನ್ನು ಮುಗಿಸುವ ಮುನ್ನ ಶ್ರೀಮದ್ ಭಾಗವತದಲ್ಲಿ ಬರುವ ಮತ್ತೊಂದು ತುಂಬ ಸುಂದರ ಮಧುರವಾದ ಶ್ಲೋಕವನ್ನು ಪ್ರಸ್ತಾಪಿಸುವುದಕ್ಕಿಂತಲೂ ಉತ್ತಮವಾದ ಮಾರ್ಗ ನನಗೆ ಕಾಣಿಸುತ್ತಿಲ್ಲ. ಮಾನವನು ದುರ್ಗತಿಯಿಂದ ಸದ್ಗತಿಗೆ ಹೋಗುವ ಮಾರ್ಗವನ್ನು ಘೋಷಿಸುತ್ತದೆ. (II, ೨-೩೭) ಅದು ;

ಪಿಬಂತಿ ಯೇ ಭಗವತ ಆತ್ಮನಃ ಸತಾಮ್
ಕಥಾಮೃತಂ ಶ್ರವಣ ಪುಟೇಷು ಸಂಭೃತಮ್ ।

ಪುನಂತಿ ತೇ ವಿಷಯ ವಿದೂಷಿತಾಶಯಮ್
ವ್ರಜಂತಿ ತಚ್ಚರಣಸರೋರುಹಾಂತಿಕಮ್ ॥

*ಭಗವಂತನ ಕಥಾಮೃತವನ್ನು ಕಿವಿಗಳಲ್ಲಿ ಯಾವ ಭಾಗವತರು ಕುಡಿಯುತ್ತಾರೆಯೋ, ಯಾವ ಸಂತರು ಆತನನ್ನು ತಮ್ಮ ಆತ್ಮನೆಂದು ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೆಯೋ, ಅವರು ವಿಷಯಗಳ ಆಸೆಯಿಂದ ದೂಷಿತವಾದ ಅಂತಃಕರಣವನ್ನು ಪರಿಶುದ್ಧವಾಗಿ ಮಾಡಿಕೊಂಡು, ಆತನ ಪಾದ ಕಮಲಗಳನ್ನು ಸೇರುತ್ತಾರೆ.*

ಅನು : ತ. ಸು. ಶಾಮರಾಯ

೧೪

# ವಿಜ್ಞಾನ ಮತ್ತು ಧರ್ಮ*

## ೧. ಪೀಠಿಕೆ

*ವಿಜ್ಞಾನ, ಸಮಾಜ* ಮತ್ತು *ವೈಜ್ಞಾನಿಕ ಮನೋಧರ್ಮ* ಎಂಬ ಉಪನ್ಯಾಸ ಮಾಲಿಕೆಯಲ್ಲಿ ಮೊದಲನೆಯದಾಗಿ *ವಿಜ್ಞಾನ* ಮತ್ತು *ಧರ್ಮ* ಎಂಬ ವಿಷಯದ ಮೇಲೆ ಉಪನ್ಯಾಸ ನೀಡಲು ನನ್ನನ್ನು ಆಹ್ವಾನಿಸಿದುದಕ್ಕಾಗಿ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೂ ಅದರ ಉಪಕುಲಪತಿಗಳಾದ ಡಾ. ಎಚ್. ನರಸಿಂಹಯ್ಯನವರಿಗೂ ನಾನು ಕೃತಜ್ಞನಾಗಿದ್ದೇನೆ.

## ೨. ವೈಜ್ಞಾನಿಕ ಮನೋಧರ್ಮವನ್ನು ಪೋಷಿಸುವ ಅಗತ್ಯ

ಆಧುನಿಕ ಪರಿಸರದ ಸಮಸ್ಯೆಗಳು ತಂತ್ರಜ್ಞಾನ ಅಥವಾ ಅತಿಹೆಚ್ಚಿನ ತಂತ್ರಜ್ಞಾನವನ್ನು, ಅದರಲ್ಲೂ ಮುಂದುವರಿದ ದೇಶಗಳಲ್ಲಿ, ಜನರು ಇಷ್ಟಪಡದಂತೆ ಮಾಡಿರುವುದು ಸಾಧ್ಯ. ಆದರೆ *ಶುದ್ಧ ವಿಜ್ಞಾನವು ಸತ್ಯ ಮತ್ತು ಜನರ ಮಂಗಳವನ್ನು ತೀವ್ರವಾಗಿ ಬಯಸುತ್ತಿರುವುದರಿಂದ ಅದು ಮಾನವನ ಅತ್ಯಂತ ಉದಾತ್ತ ವೃತ್ತಿಗಳಲ್ಲಿ ಒಂದು ಎಂದು ಎಂದೆಂದೂ ಪರಿಗಣಿಸಲ್ಪಡುತ್ತದೆ.* ಭೌತವಿಜ್ಞಾನಗಳು, ಧರ್ಮ ಮತ್ತು ತತ್ವಶಾಸ್ತ್ರಗಳ ಕ್ಷೇತ್ರಗಳಲ್ಲಿ ಹಿಂದಿನಿಂದಲೂ ಸತ್ಯವನ್ನು ಪ್ರೀತಿಸಿ ಅದನ್ನು ಅನ್ವೇಷಿಸುತ್ತಾ ಬಂದಿವೆಯಷ್ಟೆ. ಅದನ್ನು ಈ ಆಧುನಿಕ ಯುಗದಲ್ಲಿ ಎಲ್ಲ ಕ್ಷೇತ್ರಗಳಲ್ಲಿಯೂ ಪೋಷಿಸುತ್ತಾ ಹೋಗಬೇಕು. ಭಾರತದಲ್ಲಿ ಉಪನಿಷತ್ತುಗಳ ಪರಂಪರೆಯಿಂದ ದೊರೆತ ಧರ್ಮ ಮತ್ತು ದರ್ಶನ ಶಾಸ್ತ್ರಗಳು ಇಂದ್ರಿಯಗಳ ಮಟ್ಟದಿಂದ ಸೌಂದರ್ಯಮೀಮಾಂಸೆ, ನೈತಿಕತೆ ಮತ್ತು ಆಧ್ಯಾತ್ಮಿಕ ಅನುಭೂತಿಗಳ ಮಟ್ಟದವರೆಗೆ ಸತ್ಯಕ್ಕಾಗಿ ನಡೆದಿರುವ ವೈಜ್ಞಾನಿಕ ಶೋಧನೆ ಎಂಬುದನ್ನು ಈ ಉಪನ್ಯಾಸದಲ್ಲಿ ನಾನು ಪ್ರತಿಪಾದಿಸಹೊರಟಿದ್ದೇನೆ. ತನ್ನ ವಿದ್ಯಾರ್ಥಿಗಳಲ್ಲಿ, ಅಧ್ಯಾಪಕರಲ್ಲಿ ಹಾಗೂ ಇತರ ನಾಗರಿಕರಲ್ಲಿ ವೈಜ್ಞಾನಿಕ ಮನೋಭಾವವು ಮೂಡಲು ಬೆಂಗಳೂರು ವಿಶ್ವವಿದ್ಯಾನಿಲಯವು ನಡೆಸುತ್ತಿರುವ ಮಾರ್ಗದರ್ಶಕ ಪ್ರಯತ್ನ ನನಗೆ ತುಂಬ ಇಷ್ಟವಾಗಿದೆ. *ಆದರೆ ಈ ವೈಜ್ಞಾನಿಕ ಮನೋಭಾವವು ಜನರಲ್ಲಿ ರೂಢವಾಗುವಂತೆ ಮಾಡುವ ಪ್ರಯತ್ನವು ಪ್ರಾಥಮಿಕ ಶಿಕ್ಷಣದ ಹಂತದಿಂದಲೇ ಆರಂಭವಾಗಬೇಕು ಎಂಬುದು ನನ್ನ ಅಭಿಪ್ರಾಯ.* ನಮ್ಮ ದೇಶದ ಆಧ್ಯಾತ್ಮಿಕ ಪರಂಪರೆಯಲ್ಲಿ ಅಡಗಿರುವ ಅಶುದ್ಧವೂ, ದುರ್ಬಲಕಾರಿಯೂ,

---

*ಬೆಂಗಳೂರು ವಿಶ್ವವಿದ್ಯಾನಿಲಯವು "ವಿಜ್ಞಾನ, ಸಮಾಜ ಮತ್ತು ವೈಜ್ಞಾನಿಕ ಮನೋಭಾವ ಎಂಬ ಶೀರ್ಷಿಕೆಯಲ್ಲಿ ಏರ್ಪಡಿಸಿದ್ದ ೧೭ ಉಪನ್ಯಾಸಗಳಲ್ಲಿ ೧೯೭೮ರ ಆಗಸ್ಟ್ ೫ ರಂದು ನೀಡಿದ ಮೊದಲ ಉಪನ್ಯಾಸ ; ಮೂಲ ಉಪನ್ಯಾಸದ ಪರಿಷ್ಕೃತ ರೂಪ.

ಶತಮಾನಗಳಷ್ಟು ಹಳೆಯದಾದ ಯಕ್ಷಿಣೀ ವಿದ್ಯೆ ಮತ್ತು ಮೂಢನಂಬಿಕೆಗಳನ್ನು ಹೋಗಲಾಡಿಸಿ ಅದನ್ನು ವೈಚಾರಿಕವನ್ನಾಗಿ ಮಾಡುವುದಕ್ಕೆ ಇರುವ ದಾರಿ ಅದೊಂದೇ.

೩. ವಿಜ್ಞಾನ ಮತ್ತು ಧರ್ಮಗಳ ಬಾಂಧವ್ಯ : ಒಂದು ಹೊಸ ದೃಷ್ಟಿ

ಆಧುನಿಕ ಯುಗದಲ್ಲಿ ವಿಜ್ಞಾನ ಮತ್ತು ಧರ್ಮಗಳು ಮಾನವನಿಗೆ ಹೆಚ್ಚು ಹೆಚ್ಚು ಮುಖ್ಯವಾಗಿ ಪರಿಣಮಿಸಿವೆ. ಅವುಗಳಲ್ಲಿ ಒಂದೊಂದನ್ನೂ ಪ್ರತ್ಯೇಕವಾಗಿ ಅವಲಂಬಿಸಿದರೆ ನಿರೀಕ್ಷಿಸಿದ ಫಲಕ್ಕೆ ವ್ಯತಿರಿಕ್ತವಾದುದನ್ನು ನೀಡುತ್ತವೆ ಎಂಬುದೂ, ಅವನ್ನು ಸಮರಸಗೊಳಿಸಿದರೆ ಮಾನವ ಪ್ರತಿಭೆಯ ಪೂರ್ಣ ಅಭಿವ್ಯಕ್ತಿಗೂ, ಪೂರ್ಣತಾ ಸಿದ್ಧಿಗೂ ನೆರವಾಗುತ್ತದೆ ಎಂಬುದೂ ಭಾರತೀಯ ವಿವೇಕಕ್ಕೆ ಗೋಚರವಾಗಿದೆ. ಆದರೆ ದುರದೃಷ್ಟವಶಾತ್, ಕಳೆದ ಕೆಲವು ಶತಮಾನಗಳಲ್ಲಿ, ಪಶ್ಚಿಮದ ಸಂದರ್ಭದಲ್ಲಿ ಮಾತ್ರವಲ್ಲದೆ, ಎಲ್ಲ ಕಡೆಯೂ ಪಶ್ಚಿಮದ ಸಂಸ್ಕೃತಿಯ ಪ್ರಭಾವದಿಂದಾಗಿ ಧರ್ಮ ಮತ್ತು ವಿಜ್ಞಾನಗಳ ಸಂಬಂಧ ಅಷ್ಟು ಮಧುರವಾಗಿಲ್ಲ. ಆದರೆ, ಇಪ್ಪತ್ತನೆಯ ಶತಮಾನದಲ್ಲಿ ಒಂದು ಹೊಸ ದೃಷ್ಟಿ ಮೂಡಿರುವುದು ಸ್ಪಷ್ಟವಾಗುತ್ತದೆ. ವಿಜ್ಞಾನ ಮತ್ತು ಧಾರ್ಮಿಕ ಕ್ಷೇತ್ರಗಳ ಪ್ರಮುಖ ಚಿಂತಕರು ಅವೆರಡರ ನಡುವೆ ಆತ್ಮೀಯವಾದ ಸಂಬಂಧವಿರುವುದನ್ನು ಗಮನಿಸುತ್ತಿದ್ದಾರೆ. ವಿಜ್ಞಾನ ಮತ್ತು ಧರ್ಮಗಳು ತಮ್ಮ ತತ್ತ್ವಗಳಿಗೆ ಧಕ್ಕೆ ಬಾರದಂತೆ ಅನ್ಯೋನ್ಯ ಸಂಬಂಧವನ್ನು ಹೊಂದಿರಬಲ್ಲವು ಎಂಬ ಅಭಿಪ್ರಾಯವನ್ನು ತಾಳುತ್ತಿದ್ದಾರೆ. ಧರ್ಮವು ಹೆಚ್ಚು ಶಕ್ತಿಯುತವಾಗಲು ವಿಜ್ಞಾನದಿಂದ ಪಡೆಯಬಹುದಾದ ಅಂಶಗಳು ಇವೆ ಎಂಬುದನ್ನೂ ವಿಜ್ಞಾನವು ಹೆಚ್ಚು ಆಳವೂ ಸತ್ವಪೂರ್ಣವೂ ಆಗಲು ಧರ್ಮದಿಂದ ತಾನು ಪಡೆಯಬಹುದಾದ ಅಂಶಗಳು ಇವೆ ಎಂದೂ ಎರಡೂ ಪಕ್ಷಗಳು ಒಪ್ಪುತ್ತಿದೆ. ಅವೆರಡರ ನಡುವೆ ಇರುವ ವೈಷಮ್ಯಗಳನ್ನೂ, ಸಾಮ್ಯಗಳನ್ನೂ ತೋರಿಸಲು ನಾನು ಇಲ್ಲಿ ಪ್ರಯತ್ನಿಸುತ್ತಿದ್ದೇನೆ. ಎಲ್ಲ ಮಾನವ *ವಿಜ್ಞಾನವೂ ಸಮಗ್ರವಾದದ್ದು ಎಂಬ ಭಾರತೀಯ ದಾರ್ಶನಿಕ ಮತ್ತು ಆಧ್ಯಾತ್ಮಿಕ ಪರಂಪರೆಯ ಬೆಳಕಿನಲ್ಲಿ ಈ ಎರಡೂ ಶಾಸ್ತ್ರಗಳ ವಿಧಿ ವಿಧಾನಗಳನ್ನೂ ಅವುಗಳು ಪಡೆಯಲು ಬಯಸುವ ಫಲಗಳನ್ನೂ ನಾನು ಚರ್ಚಿಸಹೊರಟಿದ್ದೇನೆ.*

೪. ವೈಜ್ಞಾನಿಕ ಮನೋಧರ್ಮ

ಇಂದು ಯಾವ ನಾಗರೀಕತೆಯಲ್ಲಿ ನಾವು ಬಾಳುತ್ತಿದ್ದೇವೆಯೋ ಅದು ಆಧುನಿಕ ವಿಜ್ಞಾನ ಎಂದು ಕರೆಸಿಕೊಳ್ಳುವ ಮನೋಧರ್ಮದಿಂದ ಉತ್ಪನ್ನವಾದದ್ದು. ಇದರ ಸಾಧನೆಗೆ ಮಹಾನ್ ವಿಜ್ಞಾನಿಗಳು ಅನುಸರಿಸಿದ ಹಾದಿಯನ್ನೇ ನಾವೂ ಅನುಸರಿಸಿದರೆ ಈ ಶಾಖೆಗೆ ಎರಡು ಮುಖಗಳಿರುವುದು ನಮಗೂ ಗೋಚರವಾಗುತ್ತದೆ. ಮೊದಲನೆಯದು *ಶುದ್ಧ ವಿಜ್ಞಾನ*—ಪ್ರಕೃತಿಯ ಸತ್ಯವನ್ನು ನಿರ್ವಿಕಾರವಾದ ಮನೋಭಾವದಿಂದ ಅರ್ಥಮಾಡಿಕೊಳ್ಳಲು ಶ್ರದ್ಧೆಯಿಂದ ಪ್ರಯತ್ನಿಸುತ್ತಿರುವ ವಿಜ್ಞಾನ. ಇನ್ನೊಂದು *ಅನ್ವಯಿಕ ವಿಜ್ಞಾನ* ಅದರಲ್ಲಿ ಶುದ್ಧ ವಿಜ್ಞಾನವು ಕಂಡುಹಿಡಿದ ಸತ್ಯವು ತಾಂತ್ರಿಕ ಆವಿಷ್ಕಾರಗಳಾಗಿ ರೂಪತಳೆದು ಮಾನವ ಜೀವನದ ಸತ್ಯವನ್ನು ಹೆಚ್ಚಿಸಿ ಅದನ್ನು ಶ್ರೀಮಂತಗೊಳಿಸಲು ಪ್ರಯತ್ನಿಸುತ್ತದೆ. ಈ ಎರಡು—ವಿಜ್ಞಾನ ಜ್ಯೋತಿ ಮತ್ತು ವಿಜ್ಞಾನ ಫಲ—ಪರಸ್ಪರ ಸಂಬಂಧವುಳ್ಳವು. ಜ್ಞಾನವು ಶಕ್ತಿಯನ್ನು ದೊರಕಿಸಿಕೊಡುತ್ತದೆ. ಶಕ್ತಿಯು ಪ್ರಕೃತಿಯ ಶಕ್ತಿಗಳನ್ನು ಹತೋಟಿಯಲ್ಲಿ ಇಟ್ಟುಕೊಂಡು, ಮಾನವನು ತನ್ನ ಬದುಕನ್ನು, ಅದರ ಪರಿಸರವನ್ನು ಇಚ್ಛಾಪೂರ್ವಕವಾಗಿ ನಿಯಂತ್ರಿಸಲು ನೆರವಾಗುತ್ತದೆ. ಶುದ್ಧ ವಿಜ್ಞಾನದಲ್ಲಿ ನಡೆಯುವ ಪ್ರತಿಯೊಂದು ಹೊಸ ಆವಿಷ್ಕಾರವೂ ಒಂದಲ್ಲ ಒಂದು ಹಂತದಲ್ಲಿ ಅನ್ವಯಿಕ ವಿಜ್ಞಾನವಾಗಿ ಪರಿವರ್ತನೆ ಹೊಂದಿ ಪ್ರಕೃತಿಯ ಶಕ್ತಿಗಳನ್ನು ನಿಯಂತ್ರಿಸಿ, ಇಚ್ಛೆಬಂದಂತೆ ಬಳಸುವುದಕ್ಕೆ ಸಹಾಯಕವಾಗುತ್ತದೆ. ಅದರ ಪರಿಣಾಮವೋ—ಇತ್ತೀಚಿನ ದಿನಗಳಲ್ಲಿ ನಾವು ಕಂಡಂತೆ ಜಗತ್ತಿನಾದ್ಯಂತ ನೆಲೆಗೊಂಡಿರುವ ತಾಂತ್ರಿಕ ನಾಗರಿಕತೆ.

ಮಾನವ ಮನಸ್ಸು, ಈ ಶುದ್ಧ ವಿಜ್ಞಾನ ಶಾಖೆಯ ಶಿಸ್ತಿನಲ್ಲಿ ಬೆಳೆದ ಮಾನವ ಬುದ್ಧಿಶಕ್ತಿ ಪ್ರಕೃತಿಯು ತನ್ನಲ್ಲಿ ರಹಸ್ಯವಾಗಿ ಇರಿಸಿಕೊಂಡು, ಎಚ್ಚರಿಕೆಯಿಂದ ಕಾಪಾಡಿಕೊಂಡ ಸತ್ಯಗಳನ್ನು ಒಂದಾದ ಮೇಲೊಂದರಂತೆ ಹಿರಿದು ಈ ಪರಮಾಣು ವಿಜ್ಞಾನ ಮತ್ತು ಗಗನ ಗಮನಗಳ ಆಧುನಿಕ ಯುಗವನ್ನು ಅಸ್ತಿತ್ವಕ್ಕೆ ತಂದಿರುವುದನ್ನು ತಿಳಿಯುವುದೇ ಅತ್ಯಂತ ಸ್ವಾರಸ್ಯಕರವಾದ ಅಧ್ಯಯನವಾಗುತ್ತದೆ.

ಈ ರೀತಿಯ ಅದ್ಭುತ ಫಲಗಳನ್ನು ಕಾಣಲು ಮಾನವ ಮತಿಯು ಕೈಗೊಂಡ ಸಾಧನೆಯ ಸ್ವರೂಪ ಎಂಥದು ? ಚಿಂತನೆ ಎಂಬುದರ ಸಂದರ್ಭದಲ್ಲಿ 'ಆಧುನಿಕ' ಎಂದರೇನು ? ಚಿಂತನೆಯ ಸ್ಫೋಟಕಾರಿಯೂ, ಕ್ರಾಂತಿಕಾರಿಯೂ ಆಗುವಂತೆ ಮಾಡಿರುವ ಆಧುನಿಕ ವಿಜ್ಞಾನದ ವಿಶೇಷ ಗುಣ ಯಾವುದು ? ಈ ಪ್ರಶ್ನೆಗಳಿಗೆ ದೊರಕುವ ಉತ್ತರವು, ಇತರ ಮಾನವ ಜ್ಞಾನ ಶಾಖೆಗಳಾದ ಧರ್ಮ, ನೈತಿಕತೆ, ಕಲೆ, ರಾಜಕಾರಣ ಮತ್ತು ಅರ್ಥಶಾಸ್ತ್ರ ಇವೇ ಮುಂತಾದ ಮಹಾನ್ ವಿಷಯಗಳು ವಹಿಸುವ ಪಾತ್ರ ಏನೆಂಬುದನ್ನು ಮತ್ತೆ ತುಲನೆಮಾಡಲು ನೆರವಾಗುತ್ತವೆ.

ಆಧುನಿಕ ಜಗತ್ತಿನ ರೂವಾರಿ ವಿಜ್ಞಾನ. ಆಧುನಿಕ ಚಿಂತನೆ ಎಂದರೆ ವೈಜ್ಞಾನಿಕ ಚಿಂತನೆ. ವಿಜ್ಞಾನದ ಗುರಿ ಪ್ರಕೃತಿಯನ್ನೂ ಮಾನವನ ಅನುಭವವನ್ನೂ ವಸ್ತುನಿಷ್ಠವಾಗಿ ಅಧ್ಯಯನ ಮಾಡುವುದು. ಕಾರ್ಲ್ ಪಿಯರ್‌ಸನ್ (Grammar of Science, 1900. p.6) ಹೇಳುತ್ತಾನೆ :

> *ವಾಸ್ತವಾಂಶಗಳನ್ನು ವರ್ಗೀಕರಿಸುವುದು, ಅವುಗಳ ಕ್ರಮಬದ್ಧ ಹಂತಗಳನ್ನೂ ಅವುಗಳ ಪರಸ್ಪರ ಅರ್ಥಗಳನ್ನೂ ಕಂಡುಹಿಡಿದುಕೊಳ್ಳುವುದು, ಅವುಗಳನ್ನು ಅನುಸರಿಸಿ ವೈಯಕ್ತಿಕ ಭಾವನೆಗಳಿಗೆ ಎಡೆಗೊಡದೆ ಒಂದು ನಿರ್ಣಯಕ್ಕೆ ಬರುವ ಅಭ್ಯಾಸಗಳನ್ನು ರೂಢಿಸಿಕೊಳ್ಳುವುದು—ಇವನ್ನು ವೈಜ್ಞಾನಿಕ ಮನೋಧರ್ಮ ಎಂದು ಕರೆಯುತ್ತೇವೆ.*

ವೈಜ್ಞಾನಿಕ ಮನಸ್ಸಿನ ಗುಣಮಟ್ಟ, ಅದು ಒಂದು ವಿಷಯವನ್ನು ಪರಿಶೀಲಿಸಲು ಹೊರಟಾಗ ಅದು ಇರುವ ಸ್ಥಿತಿ ಇವುಗಳ ನೆನಪಿನಿಂದ ವಿಜ್ಞಾನವು ಪ್ರಕೃತಿಯಿಂದ ಅದರ ರಹಸ್ಯಗಳನ್ನು ಒಂದು ಕ್ಷೇತ್ರವಾದ ಮೇಲೆ ಮತ್ತೊಂದರಿಂದ ಹೊರಕ್ಕೆ ಹಿರಿಯಲು ಪ್ರಕೃತಿಯ ಶಕ್ತಿಗಳು ಮಾನವನ ಸೇವೆಗೆ ಸಿದ್ಧವಾಗಿರುವಂತೆ ಮಾಡಲು ಸಮರ್ಥವಾಗಿದೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತ , ಖಗೋಳ ವಿಜ್ಞಾನ, ಸಸ್ಯಶಾಸ್ತ್ರ ಮತ್ತು ಮನಃಶಾಸ್ತ್ರ, ಇವಲ್ಲದೆ ಅವುಗಳ ಇನ್ನಿತರ ಶಾಖೋಪಶಾಖೆಗಳಲ್ಲಿ ಈಗ ನಡೆದಿರುವ ಸಾಧನೆ ಅದ್ಭುತವಾದದ್ದು. ಇದೇ ಕ್ಷೇತ್ರಗಳಲ್ಲಿ ಸಾವಿರಾರು ವರ್ಷಗಳಲ್ಲಿ ನಡೆದಿರುವ ಸಾಧನೆ ಏನೇನೂ ಅಲ್ಲ ಅನ್ನಿಸುವಂಥದ್ದು.

## ೫. ವಿಜ್ಞಾನ ಮತ್ತು ವಿಜ್ಞಾನ ವಿಭಾಗಗಳು

ಹೀಗೆ ನಾವು ಅರ್ಥಮಾಡಿಕೊಂಡ ವಿಜ್ಞಾನವು ಯಾವುದೇ ಒಂದು ನಿರ್ದಿಷ್ಟ ತಥ್ಯಾಂಶಗಳ ಶಾಖೆಗೆ ಬದ್ಧವಾಗಿಲ್ಲ. ಜೆ. ಅರ್ಥರ್ ಥಾಂಸನ್ ಎನ್ನುವ ಸಸ್ಯವಿಜ್ಞಾನಿಯ ಮಾತುಗಳಲ್ಲಿ ಹೇಳುವುದಾದರೆ (Introduction to Science, Home University Library Edition, 1934, p. 58) :

> *ವಿಜ್ಞಾನವು ಯಾವುದೇ ನಿರ್ದಿಷ್ಟ, ಬಂಧಿಸಲ್ಪಟ್ಟಿಲ್ಲ. ಅದರ ಲಕ್ಷಣ ಬೌದ್ಧಿಕ ಮನೋಧರ್ಮವು. ಯಾವುದೇ ನಿರ್ದಿಷ್ಟ ಅನ್ವೇಷಣಾ ವಿಧಾನಗಳಿಗೂ ಅದು ಬದ್ಧವಾಗಿಲ್ಲ. ಸಾಕ್ಷ್ಯಗಳನ್ನು ಅವಲಂಬಿಸಿದ ಸಿದ್ಧಾಂತಗಳನ್ನು ಮಾತ್ರ ಒಪ್ಪಿಕೊಳ್ಳುವ ಪ್ರಾಮಾಣಿಕ ವಿಮರ್ಶಾತ್ಮಕ ಚಿಂತನೆ ಅದು. ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿರುವ ವ್ಯಾಪಾರಿಯಿಂದ, ಸಾಕ್ಷ್ಯಗಳನ್ನು ಪರಿಶೀಲಿಸುತ್ತಿರುವ ವಕೀಲನಿಂದ, ಒಂದು ರಚನಾತ್ಮಕ*

*ಮಸೂದೆಯನ್ನು ರಚಿಸುತ್ತಿರುವ ರಾಜ್ಯಶಾಸ್ತ್ರತಜ್ಞನಿಂದ ನಾವು ವೈಜ್ಞಾನಿಕ ವಿಧಾನದ ವಿಷಯದಲ್ಲಿ ಒಳ್ಳೆಯ ಪಾಠವನ್ನು ಕಲಿಯುವುದು ಸಾಧ್ಯ.*

ಚಿಂತನೆ ಮತ್ತು ಉಕ್ತಿ ಇವೆರಡರಲ್ಲೂ ವಸ್ತುನಿಷ್ಠತೆ ಮತ್ತು ನಿಷ್ಪಕ್ಷತೆ ಇವು ವೈಜ್ಞಾನಿಕ ವಿಧಾನದ ಎರಡು ಮುಖ್ಯ ಲಕ್ಷಣಗಳು. ಕ್ಷೇತ್ರ ಯಾವುದೇ ಆಗಿರಲಿ ಈ ಲಕ್ಷಣಗಳನ್ನೊಳಗೊಂಡ ಅಧ್ಯಯನವು ವಿಜ್ಞಾನ ಎನ್ನಿಸಿಕೊಳ್ಳುತ್ತದೆ. ವಿಜ್ಞಾನದ ಶಾಖೆಗಳಾದ ಭೌತಶಾಸ್ತ್ರ, ರಸಾಯನಶಾಸ್ತ್ರ, ಸಮಾಜಶಾಸ್ತ್ರ ಮುಂತಾದವು ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ವಾಸ್ತವಾಂಶಗಳಿಗೆ ಬದ್ಧವಾಗಿದ್ದರೂ ವಿಜ್ಞಾನ ಎಂಬುದು ಅಂಥ ವಾಸ್ತವಾಂಶಗಳಿಗೆ ಬದ್ಧವಾಗಿರುವುದಿಲ್ಲ. ಭೌತಶಾಸ್ತ್ರಾದಿಗಳು ವ್ಯಾಪ್ತಿಯ ಮಿತಿಯುಳ್ಳವು. ಆದರ ವಿಜ್ಞಾನದ ವ್ಯಾಪ್ತಿಗೆ ಮಿತಿ ಎಂಬುದಿಲ್ಲ. ತಮ್ಮ ವಿಶಿಷ್ಟ ಕ್ಷೇತ್ರಗಳ ಅಧ್ಯಯನ ವನ್ನು ಆರಂಭಿಸಿದ ಈ ವಿಜ್ಞಾನಶಾಖೆಗಳು ತಮ್ಮ ಅಧ್ಯಯನದಲ್ಲಿ ಮುಂದುವರಿದಂತೆ ತಮ್ಮ ವ್ಯಾಪ್ತಿಯ ವಲಯವನ್ನು ಮೀರಿ ಇತರ ಶಾಖೆಗಳ ವಲಯಗಳ ಪರಿಧಿಯನ್ನು ಮುಟ್ಟಿ, ಅದನ್ನೂ ದಾಟಿ ಒಂದರೊಡನೊಂದು ಮಿಲನಗೊಂಡು ಸಮಗ್ರ ಅನುಭವದ ಅರ್ಥವನ್ನು ಹುಡುಕತೊಡಗು ತ್ತವೆ. *ಈ ವಿಸ್ತಾರಗೊಂಡ ಸಂದರ್ಭದಲ್ಲಿ ಧರ್ಮವಿಜ್ಞಾನದ ಕಲ್ಪನೆಯು ಕೂಡ ದೂರವ್ಯಾಪ್ತಿ ಯುಳ್ಳ ವಿಜ್ಞಾನದ ಅಧ್ಯಯನವಾಗಿ ಪರಿಣಮಿಸುತ್ತದೆ. ಅದು ಮಾನವನ ಅಂತರಂಗ ಜಗತ್ತಿನ ವಾಸ್ತವಾಂಶಗಳ ವಿಜ್ಞಾನ. ಪ್ರಾಚೀನ ಭಾರತೀಯ ಚಿಂತನೆಯು ಅದನ್ನು ಎತ್ತಿ ಹಿಡಿದಿದೆ. ಈ ಆಧುನಿಕ ಯುಗದಲ್ಲಿ ಸ್ವಾಮಿ ವಿವೇಕಾನಂದರು ಅದನ್ನು ವಿವರಿಸಿ, ಪ್ರತಿಪಾದಿಸಿದ್ದಾರೆ.*

### ೬. ಅನ್ವೇಷಣಾ ಮನೋಭಾವ

ಅನನ್ಯವಾದ ಈ ಆಧುನಿಕ ಸಿದ್ಧಿಯ ಹಿಂದೆ ಇರುವ ಚಾಲನಶಕ್ತಿ ಎಂದರೆ ಆಧುನಿಕ ವಿಜ್ಞಾನದ ಲಕ್ಷಣವಾದ ಮುಕ್ತ ಅನ್ವೇಷಣಾ ಮನೋಭಾವ. ಗಂಭೀರವಾದ ಉದ್ದೇಶದಿಂದ ಪ್ರಶ್ನಿಸುವ, ಹಾಗೆ ಪ್ರಶ್ನಿಸಿ ತಾನು ಪಡೆಯುವ ಉತ್ತರಗಳನ್ನು ಪರೀಕ್ಷಿಸಿ ತಾಳೆನೋಡುವ ಮನಸ್ಸಿಗೆ ಒಂದು ಕ್ರಿಯಾತ್ಮಕ ಗುಣ ಇರುತ್ತದೆ. ಅದರ ಬಲದಿಂದ ಮನಸ್ಸಿಗೆ ಚಿಂತನೆ ಮತ್ತು ವಸ್ತುಗಳ ಜಗತ್ತಿನಲ್ಲಿ ಮುನ್ನುಗ್ಗುವುದು ಸಾಧ್ಯವಾಗುತ್ತದೆ. ಹಾಗೆ ಮುನ್ನುಗ್ಗುವಾಗ ಅದು ಹಾದಿಬದಿಯ, ಪರೀಕ್ಷೆಗೆ ಒಳಪಡಿಸಿಲ್ಲದ ಸಿದ್ಧಾಂತಗಳನ್ನು, ಹಾಯಾದ ನಂಬಿಕೆಗಳನ್ನು, ಧರ್ಮದೊಂದಿಗೆ ಸೇರಿಸಿ ಅದಕ್ಕೆ ಕೆಟ್ಟಹೆಸರು ತಂದಿರುವ ಯಕ್ಷಿಣಿ, ಪವಾಡ, ಮೂಢನಂಬಿಕೆ ಮುಂತಾದವುಗಳನ್ನು ಅಲುಗಾಡಿಸುತ್ತಾ ಹೋಗುತ್ತದೆ. ವಿಜ್ಞಾನವೆಂದರೆ ಪರೀಕ್ಷೆಗೊಳಪಟ್ಟ ಜ್ಞಾನ. ಪರೀಕ್ಷೆಗೆ ಒಳಪಡಿಸಿಲ್ಲದ ಸಿದ್ಧಾಂತಗಳ ಸಮೂಹ, ಊಹಾಪೋಹಗಳು, ನಂಬಿಕೆಗಳು. ಯಕ್ಷಿಣಿ, ಪವಾಡ ಮತ್ತು ಮೂಢನಂಬಿಕೆ ಇವುಗಳಿಗೆ ವಿರುದ್ಧವಾಗಿ ಪರೀಕ್ಷಿತವಾದ ಜ್ಞಾನದ ಫಲವಾಗಿ ಬಂದದ್ದೇ ಆಧುನಿಕ ವೈಜ್ಞಾನಿಕ ಚಿಂತನೆ. ಮೊದಲನೆಯ ಗುಂಪಿನವು ವೈಜ್ಞಾನಿಕ ಅನ್ವೇಷಣೆಯನ್ನು ಮೊದಲು ಅದರ ಹುಟ್ಟಿನಲ್ಲೇ, ಅನಂತರ ಅದರ ಪ್ರಗತಿಯ ಪ್ರತಿಯೊಂದು ಹಂತದಲ್ಲಿಯೂ ನಿರ್ನಾಮಗೊಳಿಸಲು ವ್ಯವಸ್ಥಿತವಾದ ರೀತಿಯಲ್ಲಿ ಪ್ರಯತ್ನಿಸಿದವು. ಆದರೆ ಅನ್ವೇಷಣೆ ಅದು ತರುವ ಬೆಳಕು ಇವುಗಳ ಪ್ರಬಲವಾದ ಅಲೆಗಳ ಹೊಡೆತಕ್ಕೆ ಅಜ್ಞಾನ ಮತ್ತು ಪೂರ್ವ ಕಲ್ಪನೆಗಳ ಕೋಟೆ ಗೋಡೆಗಳು ಒಂದಾದಮೇಲೊಂದರಂತೆ ಉರುಳುತ್ತಾ ಹೋದುವು. ಹಾಗೆ ಮಾಡಿ ಉಪನಿಷತ್ತಿನ ಈ ಹೇಳಿಕೆಯನ್ನು ಸತ್ಯವೆಂದು ಸಾರಿದುವು (ಮುಂಡಕ ಉಪನಿಷತ್, III 1.6) :

ಸತ್ಯಮೇವ ಜಯತೇ ನಾನೃತಂ—ಸತ್ಯವೇ ಗೆಲ್ಲುವುದು. ಅಸತ್ಯವಲ್ಲ.

ಇತ್ತೀಚಿನ ಶತಮಾನಗಳಲ್ಲಿ ವಿಜ್ಞಾನದ ಇತಿಹಾಸವೆಂದರೆ ಕೇವಲ ಅಭಿಪ್ರಾಯ, ಅಪರೀಕ್ಷಿತ ನಂಬಿಕೆ, ಪೂರ್ವಗ್ರಹ ಮತ್ತು ಆದೇಶಿತ ಸಿದ್ಧಾಂತ (ಪರೀಕ್ಷೆಗೆ ಒಳಪಡದೆ, ಮತ ಅಥವಾ

ಸಂಪ್ರದಾಯವು ಹೇರಿದ ಸಿದ್ಧಾಂತ) ಇವುಗಳ ಮೇಲೆ ಮುಕ್ತ ವಿಚಾರವು ಸಾಧಿಸಿದ ಜಯ. ಮಾನಸಿಕವಾಗಿ ಮಾತ್ರವಲ್ಲದೆ, ಭೌತಿಕವಾಗಿಯೂ ಭಾರೀ ಪ್ರಮಾಣಧ ಫಲಗಳನ್ನು ನೀಡಿರುವ ಇದು ಮಾನವ ಚೇತನವು ಪ್ರದರ್ಶಿಸಿದ ಮಹತ್ತಾದ ಸಾಹಸ. ವಿಜ್ಞಾನವು ಹರಿದು ಆವಿಷ್ಕಾರಗಳ ಭಾರೀ ಸುಗ್ಗಿಯನ್ನು ನೀಡಿದೆ. ಪರಿಣಾಮವಾಗಿ ನಾವು ವಾಸಿಸುತ್ತಿರುವ ಜಗತ್ತು ಗುರುತಿಸಲಾರದಷ್ಟು ಬದಲಾವಣೆಯನ್ನು ಹೊಂದಿದೆ.

## ೭. ಆದೇಶಿತ ಸಿದ್ಧಾಂತದಿಂದ ಬಂಧಿತವಾದ ಧರ್ಮಕ್ಕೆ ಹಿಡಿದ ಗ್ರಹಣ

ವಿಜ್ಞಾನದ ವಿಜಯ ಎಂದರೆ ಅದರ ಪ್ರತಿಕಕ್ಷಿಗೆ ಅಪಜಯ ಎಂದೇ ಅರ್ಥ. ವಿಜ್ಞಾನ ಮತ್ತು ಅದರ ಅನ್ವೇಷಣಾ ಮನೋಭಾವಕ್ಕೆ ಧರ್ಮದ ಕಡೆಯಿಂದಲೇ ಪೂರ್ವಗ್ರಹ ಮತ್ತು ಅಂಧ ಶ್ರದ್ಧೆಗಳ ವ್ಯವಸ್ಥಿತ ಪ್ರತಿಭಟನೆ ಬಂದದ್ದು ಇತಿಹಾಸದ, ಅದರಲ್ಲೂ ಆಧುನಿಕ ಯೂರೋಪಿನ ಇತಿಹಾಸದ ದುರದೃಷ್ಟಕರ ಘಟನೆಗಳಲ್ಲಿ ಒಂದು. ಅದರಲ್ಲೂ ವಿಜ್ಞಾನದ ಉಸಿರಾದ ವಿಚಾರಶೀಲತೆಯನ್ನು ಧರ್ಮದ ಮರಣಸೂಚಕ ಘಂಟಾನಾದ ಎಂದು ಭಾವಿಸಲಾದದ್ದು ಇನ್ನೂ ದುರದೃಷ್ಟಕರವಾದದ್ದು. ಕಳೆದ ಶತಮಾನದ ಕೊನೆಯ ಭಾಗದವೇಳೆಗೆ ವಿಜ್ಞಾನಕ್ಕೆ ಉನ್ನತವಾದ ಅಧಿಕಾರ ಮತ್ತು ಗೌರವಗಳ ಸ್ಥಾನ ದೊರಕಿತ್ತು. ಧರ್ಮವಾದರೋ ಮೊದಲು ಅಪಾಯಕಾರಿಯಾದ ದೋಷ ಎಂದೂ, ಅನಂತರ ನಿರಪಾಯಕಾರಿಯಾದ ಭ್ರಮೆ ಎಂದೂ ಜನರ ನಂಬಿಕೆಯನ್ನು ಕಳೆದುಕೊಂಡಿತು.

ಹೀಗೆ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗವು, ಪಶ್ಚಿಮದಲ್ಲಿ, ಧರ್ಮವು ರಾಹುಗ್ರಸ್ತವಾದುದನ್ನು ಕಂಡಿತು. ಆದರೆ ಅನೇಕ ಚಿಂತನಶೀಲರ ಹೃದಯದಲ್ಲಿ ಮಾನವನಿಗೂ ಅವನ ನಾಗರಿಕತೆಗೂ ಅಮೂಲ್ಯವಾದ ಯಾವುದೋ ಒಂದು ನಷ್ಟಕ್ಕೆ ಗುರಿಯಾಗಿದೆ ಎಂಬ ಭಾವನೆ ಸುಳಿದು ಅದನ್ನು ಕಲಕಿತ್ತು. ಧರ್ಮದ ಅರ್ಥ ಮತ್ತು ವ್ಯಾಪ್ತಿಯನ್ನು ಪುನರ್ಪರಿಶೀಲನೆಗೆ ಒಳಪಡಿಸಿ ಅದು ವಿಜ್ಞಾನದ ಮನೋಭಾವಕ್ಕೆ ಹೊಂದುವಂತೆ ಮಾಡಲು ಅವರು ಪ್ರಯತ್ನಿಸಿದರು. ಮಾನವನನ್ನು *ಸಮಗ್ರವಾಗಿ ಗ್ರಹಿಸಿ, ಆಧ್ಯಾತ್ಮಿಕ ಜೀವನದ ನಿಜವಾದ ಕಲ್ಪನೆಯನ್ನು ಪಡೆದು, ಶ್ರದ್ಧೆ ಮತ್ತು ವೈಚಾರಿಕತೆಗಳ ನಡುವಣ ಕಂದರವನ್ನು ತೊಡೆದುಹಾಕಿ, ಆಧುನಿಕ ಮಾನವನ ಮಾನಸಿಕ ಜೀವನವನ್ನು ಪುನಾರಚಿಸುವುದರಲ್ಲಿ ಭಾರತೀಯ ಚಿಂತನೆಯ ಕೊಡುಗೆಯು ಅನನ್ಯವೂ ಶಾಶ್ವತವೂ ಆಗಿದೆ.*

## ೮. ವಿಚಾರ ಮತ್ತು ಧರ್ಮಗಳನ್ನು ಕುರಿತು ವಿವೇಕಾನಂದರು

ಪಶ್ಚಿಮದಲ್ಲಿ ವಿಜ್ಞಾನ ಮತ್ತು ಧರ್ಮಗಳ ನಡುವೆ ಪದೇ ಪದೇ ಘರ್ಷಣೆಗಳು ನಡೆಯುತ್ತಿದ್ದುದನ್ನೂ, ಅವಕ್ಕೆ ಕಾರಣ ವೈಚಾರಿಕವೂ ಪ್ರಯೋಗಾತ್ಮಕವೂ ಆದ ದೃಷ್ಟಿಯ ಅಭಾವ ಎಂಬುದನ್ನೂ ಗಮನಿಸಿ ಸ್ವಾಮಿ ವಿವೇಕಾನಂದರು ಹೇಳಿದರು (ವಿವೇಕಾನಂದರ ಕೃತಿ ಶ್ರೇಣಿ ಸಂಪುಟ ೨. ಪು. ೪೩೩) :

> *ಆಧುನಿಕ ಖಗೋಳ ವಿಜ್ಞಾನಿಗಳು ಮತ್ತು ಭೌತ ವಿಜ್ಞಾನಿಗಳ ಪ್ರಕಾರ ಈ ವಿಶ್ವವನ್ನು ಕುರಿತ ಪ್ರಮೇಯಗಳೇನು ಎಂಬುದೆಲ್ಲ ನಮಗೆ ಗೊತ್ತು. ಅದು ಯೂರೋಪಿನ ಮತಧರ್ಮ ಶಾಸ್ತ್ರವನ್ನೆಲ್ಲಾ ಹೇಗೆ ಬುಡಮೇಲು ಮಾಡಿದುವು ಎಂಬುದೂ ನಮಗೆ ಗೊತ್ತು. ಆ ಶಾಸ್ತ್ರದ ಭದ್ರವಾದ ಕೋಟೆಗೆ ವೈಜ್ಞಾನಿಕ ಆವಿಷ್ಕಾರಗಳು ಬಾಂಬುಗಳಾದುವು. ಧರ್ಮಶಾಸ್ತ್ರಗಳು ಹೊಸ ವೈಜ್ಞಾನಿಕ ಸಂಶೋಧನೆಗಳನ್ನು ಅಡಗಿಸಲು ನಡೆಸಿದ ಪ್ರಯತ್ನಗಳನ್ನು ನಾವು ಬಲ್ಲೆವು.*

ಧರ್ಮವು ವಿಚಾರದ ನೆರವನ್ನು ಪಡೆಯಲು ನಿರಾಕರಿಸಿದರೆ ಅದು ತನ್ನನ್ನು ತಾನು ದುರ್ಬಲಗೊಳಿಸಿಕೊಳ್ಳುತ್ತದೆ. ೧೯೫೦ರಲ್ಲಿ ಇಂಗ್ಲೆಂಡಿನಲ್ಲಿ "ವಿಚಾರ ಮತ್ತು ಧರ್ಮ" ಎನ್ನುವ

ವಿಷಯದ ಮೇಲೆ ಉಪನ್ಯಾಸ ನೀಡುತ್ತಾ ಸ್ವಾಮಿ ವಿವೇಕಾನಂದರು ಹೇಳಿದರು (ಕೃತಿಶ್ರೇಣಿ. ಸಂ. ೭ ಪು. ೩೭೯) :

*ಧರ್ಮದ ಆಸ್ತಿಭಾರಗಳನ್ನೆಲ್ಲ ಅಲುಗಾಡಿಸಲಾಗಿದೆ. ಆಧುನಿಕ ಮಾನವನು, ಬಹಿರಂಗವಾಗಿ ತಾನು ಏನೇ ಹೇಳಲಿ, ಅಂತರಂಗದಲ್ಲಿ ತಾನು ಇನ್ನು 'ನಂಬು'ವುದು ಸಾಧ್ಯವಿಲ್ಲ ಎಂಬುದನ್ನು ಅರಿತಿದ್ದಾನೆ. ಕೆಲವು ವಿಷಯಗಳನ್ನು ಪುರೋಹಿತವರ್ಗ ಹೇಳುತ್ತದೆ ಎಂದಾಗಲಿ, ಕೆಲವು ಪುಸ್ತಕಗಳಲ್ಲಿ ಬರೆದಿದೆ ಎಂದಾಗಲಿ, ಜನ ತಾನು ನಂಬಬೇಕು ಎಂದು ಬಯಸುತ್ತಾರೆ ಎಂಬ ಕಾರಣಕ್ಕಾಗಲಿ ತಾನು ಯಾವುದನ್ನಾದರೂ ನಂಬುವುದು ಅಸಾಧ್ಯ ಎಂದು ಆಧುನಿಕ ಮಾನವನು ತಿಳಿದುಕೊಂಡಿದ್ದಾನೆ. ಅನೇಕರು ಜನಪ್ರಿಯ ನಂಬಿಕೆಗಳನ್ನು ಹೊಂದಿದ್ದಾರೆ ಎಂಬುದನ್ನು ನಾವು ಬಲ್ಲೆವು. ಇದನ್ನೂ ನಾವು ಬಲ್ಲೆವು—ಅವರು ಯೋಚನೆಯನ್ನೇ ಮಾಡುವುದಿಲ್ಲ ಎಂದು. ನಂಬಿಕೆ ಎನ್ನುವುದನ್ನು ಕುರಿತಂತೆ ಅವರ ಕಲ್ಪನೆ ಏನು ಎಂಬುದನ್ನು ಹೀಗೆ ಅನುವಾದಿಸ ಬಹುದು : "ವಿವೇಚನಾರಹಿತ ಅಸಡ್ಡೆ."*

ಧರ್ಮದ ಕ್ಷೇತ್ರದಲ್ಲೂ ವಿಚಾರಮಾರ್ಗವನ್ನು ಅನುಸರಿಸಬೇಕೇ ಎಂದು ಕೇಳುತ್ತಾ ಅವರು ಮುಂದುವರಿಸಿ ಹೇಳಿದರು (ಅಲ್ಲೇ) :

*ಇತರ ವಿಜ್ಞಾನಶಾಸ್ತ್ರಗಳು ಯುಕ್ತಿಯ ಅನ್ವೇಷಣೆಯ ಮೂಲಕ ಸಮರ್ಥಿಸಲ್ಪಡುವಂತೆ ಧರ್ಮವೂ ಅದರ ಮೂಲಕ ಸಮರ್ಥಿಸಲ್ಪಡಬೇಕೆ ? ವಿಜ್ಞಾನ ಮತ್ತು ಬಾಹ್ಯ ಶಾಸ್ತ್ರಗಳಲ್ಲಿ ಉಪಯೋಗಿಸುವ ಪರಿಶೋಧನಾ ಮಾರ್ಗವನ್ನೇ ಧರ್ಮದಲ್ಲಿಯೂ ಉಪಯೋಗಿಸಬೇಕೆ ? ನನ್ನ ದೃಷ್ಟಿಯಲ್ಲಿ ಇದು ಅಗತ್ಯ ಮತ್ತು ಇದನ್ನು ಎಷ್ಟು ಬೇಗ ಮಾಡಿದರೆ ಅಷ್ಟು ಒಳ್ಳೆಯದು. ಇಂತಹ ಪರಿಶೋಧನೆಯಿಂದ ಧರ್ಮ ನಾಶವಾಗುವಂತೆ ಇದ್ದರೆ, ಅದು ಇದುವರೆಗೆ ನಿಷ್ಪ್ರಯೋಜಕವಾಗಿತ್ತು ; ಕೆಲಸಕ್ಕೆ ಬಾರದ ಒಂದು ಮೂಢನಂಬಿಕೆಯಾಗಿತ್ತು ಎನ್ನಬೇಕಾಗುತ್ತದೆ. ಇಂತಹ ಧರ್ಮ ಎಷ್ಟುಬೇಗ ನಾಶವಾದರೆ ಅಷ್ಟು ಮೇಲು. ಇಂತಹ ಧರ್ಮ ನಾಶವಾಗುವುದೇ ಅತ್ಯುತ್ತಮವೆಂದು ನಾನು ನಿಸ್ಸಂದೇಹವಾಗಿ ಭಾವಿಸುತ್ತೇನೆ. ಇಂತಹ ಒಂದು ಶೋಧನೆಯಿಂದ ಅಯೋಗ್ಯವಾದುದೆಲ್ಲ ನಿಸ್ಸಂದೇಹವಾಗಿ ನಾಶವಾಗುವುದು ನಿಜ. ಆದರೆ ನಿಜವಾದ ಧರ್ಮದ ಸಾರ ಇಂತಹ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣವಾಗಿ ಅಪ್ರತಿಹತವಾಗಿ ನಿಲ್ಲುವುದು. ಧರ್ಮವು ವೈಜ್ಞಾನಿಕವಾಗುವುದು ಮಾತ್ರವಲ್ಲ—ಭೌತಶಾಸ್ತ್ರ, ರಸಾಯನ ಶಾಸ್ತ್ರಗಳ ನಿರ್ಣಯಗಳಷ್ಟು ವೈಜ್ಞಾನಿಕವಾಗುವುದು ; ಆದರೆ ಅವಕ್ಕಿಂತ ಹೆಚ್ಚು ಶಕ್ತಿಯುತವಾಗಿರುವುದು. ಏಕೆಂದರೆ ರಸಾಯನಶಾಸ್ತ್ರ ಭೌತಶಾಸ್ತ್ರಗಳಿಗೆ ಧರ್ಮಕ್ಕೆ ಇರುವಂತೆ, ಇದು ಸತ್ಯ ಎಂದು ಸಾರುವುದಕ್ಕೆ ಯಾವ ವಿಧವಾದ ಆಂತರಿಕ ಶಾಸನವೂ ಇಲ್ಲ.*

ಪ್ರಾಚೀನ ಭಾರತದಲ್ಲಿ ಧರ್ಮವನ್ನು ಕುರಿತಂತೆ ವಸ್ತುನಿಷ್ಠವಾಗಿಯೂ, ನಿಷ್ಪಕ್ಷವಾಗಿಯೂ ಅಧ್ಯಯನವು ನಡೆಯುತ್ತಿತ್ತು ಎಂಬುದನ್ನು ಉಪನಿಷತ್ತುಗಳ ಅಧ್ಯಯನವು ಸ್ಪಷ್ಟಪಡಿಸುತ್ತದೆ. ಅಂಥ ಅಧ್ಯಯನದ ಗುರಿ ಸತ್ಯವನ್ನು ಕಂಡುಹಿಡಿಯುವುದೇ ವಿನಃ ನಮ್ಮನ್ನು ಸಂತುಷ್ಟಗೊಳಿಸುವ ಭ್ರಮೆಗಳನ್ನು ಅಪ್ಪಿಕೊಳ್ಳುವುದೂ ಅಲ್ಲ, ಬುಡಕಟ್ಟು ಮನೋಭಾವದ ರಾಗದ್ವೇಷಗಳನ್ನು ವೈಭವೀಕರಿಸುವುದೂ ಅಲ್ಲ.

ಭಾರತೀಯ ಚಿಂತನೆಯು ಎತ್ತಿ ಹಿಡಿದ ವೈಜ್ಞಾನಿಕ ಮನೋಭಾವವನ್ನು ಸ್ವಾಮಿ ವಿವೇಕಾನಂದರು ತಮ್ಮ ಅನೇಕ ಉಪನ್ಯಾಸಗಳಲ್ಲಿ ವಿವರಿಸಿದ್ದಾರೆ. "ಧರ್ಮ ಮತ್ತು ವಿಜ್ಞಾನ" ಎಂಬ ಉಪನ್ಯಾಸದಲ್ಲಿ ಅವರು ಹೀಗೆ ಹೇಳಿದ್ದಾರೆ (ಕೃತಿಶ್ರೇಣಿ ಸಂ. ೭ ಪು. ೩೧೩-೧೪) :

*ಅನುಭವವೇ ಜ್ಞಾನಕ್ಕೆ ಮೂಲ. ಜಗತ್ತಿನಲ್ಲಿ ಖಚಿತತೆ ಇಲ್ಲದ ಶಾಸ್ತ್ರವೆಂದರೆ ಧರ್ಮ ಒಂದೇ. ಏಕೆಂದರೆ ಇದನ್ನು ಒಂದು ಅನುಭವದ ಶಾಸ್ತ್ರದಂತೆ ಬೋಧಿಸಿಲ್ಲ. ಆದರೆ ಇದು ಹಾಗಿರಕೂಡದು. ಆದರೂ ತಮ್ಮ ಅನುಭವದಿಂದ ಧರ್ಮವನ್ನು ಬೋಧಿಸುವ ಕೆಲವರು ಇದ್ದಾರೆ. ಇವರನ್ನೇ ಅನುಭಾವಿಗಳು ಎನ್ನುವರು. ಪ್ರತಿಯೊಂದು ಧರ್ಮದಲ್ಲಿಯೂ ಈ ಅನುಭಾವಿಗಳು ಒಂದೇ ಸತ್ಯವನ್ನು ಬೋಧಿಸುವರು. ಇದೇ ನಿಜವಾದ ಧರ್ಮವಿಜ್ಞಾನ. ಹೇಗೆ ಗಣಿತಶಾಸ್ತ್ರ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆಯಾಗಿಲ್ಲವೋ ಹಾಗೆಯೇ ಅನುಭಾವಿಗಳಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಇವರೆಲ್ಲ ಒಂದೇ ಸ್ಥಿತಿಯಲ್ಲಿರುವರು. ಇವರ ಅನುಭವ ಒಂದೇ. ಅದೇ ಒಂದು ನಿಯಮವಾಗುವುದು....*

*ರಸಾಯನಶಾಸ್ತ್ರ ಮುಂತಾದ ಭೌತವಿಜ್ಞಾನಗಳು ಹೇಗೆ ಭೌತಿಕ ವಿಷಯಗಳನ್ನು ಹೇಳುವುವೋ ಹಾಗೆಯೆ ಧರ್ಮವು ಭೌತಾತೀತ ವಿಷಯಗಳನ್ನು ಹೇಳುವುದು. ರಸಾಯಶಾಸ್ತ್ರವನ್ನು ಕಲಿಯಬೇಕಾದರೆ ವ್ಯಕ್ತಿಯು ಪ್ರಕೃತಿಯೆಂಬ ಪುಸ್ತಕವನ್ನು ತೆರೆಯಬೇಕು. ಆದರೆ ಧರ್ಮವನ್ನು ನಿಮ್ಮ ಮನಸ್ಸಿನಿಂದ ಮತ್ತು ನಿಮ್ಮ ಹೃದಯದಿಂದಲೇ ಕಲಿಯಬೇಕಾಗಿದೆ. ಸಂತರು ಭೌತವಿಜ್ಞಾನಗಳ ವಿಷಯದಲ್ಲಿ ತಜ್ಞರಲ್ಲ. ಏಕೆಂದರೆ ಅವರು ಅಧ್ಯಯನ ಮಾಡುವುದು ತಮ್ಮ ಅಂತರಂಗವನ್ನು ಮಾತ್ರ. ವಿಜ್ಞಾನಿಗೆ ಅನೇಕ ವೇಳೆ ಧಾರ್ಮಿಕ ವಿಷಯಗಳು ಗೊತ್ತಿರುವುದಿಲ್ಲ. ಏಕೆಂದರೆ ಅವನು ಬಾಹ್ಯ ಪ್ರಕೃತಿಯನ್ನು ಮಾತ್ರ ಅಧ್ಯಯನ ಮಾಡುವುದು.*

ತಮ್ಮ ಅನ್ವೇಷಣೆಯಿಂದ ಭಾರತೀಯ ಚಿಂತಕರು ಮಾನವನು ಬದುಕಿ ಕೆಲಸಮಾಡುವ ಕ್ಷೇತ್ರಗಳು ಎರಡು ಎಂಬುದನ್ನು ಕಂಡುಹಿಡಿದರು. ಮೊದಲನೆಯದು ಹೊರಗಿನ ಜಗತ್ತು ; ಎರಡನೆಯದು ಒಳಗಿನ ಜಗತ್ತು. ಎರಡು ಬೇರೆ ಬೇರೆ ಘಟನೆಗಳ ಕ್ಷೇತ್ರಗಳು ಅವು. ಒಂದರ ಅಧ್ಯಯನ ಮಾತ್ರವೇ ನಮ್ಮ ಅನುಭವದ ಸಮಸ್ತ ವ್ಯಾಪ್ತಿಯನ್ನೂ ಅಳೆದು ಮುಗಿಸುವುದಿಲ್ಲ. ಅಲ್ಲದೆ ಒಂದರ ಮಾನದಂಡದಿಂದ ಮತ್ತೊಂದನ್ನು ಅಧ್ಯಯನ ಮಾಡಿದರೆ ಸಮರ್ಪಕವಾದ ಫಲಿತಾಂಶವನ್ನು ಪಡೆಯುವುದು ಸಾಧ್ಯವಾಗುವುದಿಲ್ಲ. ಆದರೆ ಒಂದರ ಫಲಿತಾಂಶದ ಬೆಳಕಿನಲ್ಲಿ ಮತ್ತೊಂದನ್ನು ಅಧ್ಯಯನ ಮಾಡಲು ಹೊರಟರೆ ಅದು ಪ್ರಯೋಜನಕಾರಿಯೂ ಸುಸಂಗತವೂ ಆಗುತ್ತದೆ.

'ಸೃಷ್ಟಿತತ್ತ್ವ' ಎಂಬುದನ್ನು ಕುರಿತು ಉಪನ್ಯಾಸ ಮಾಡುತ್ತಾ ಸ್ವಾಮಿ ವಿವೇಕಾನಂದರು ಈ ದೃಷ್ಟಿಯನ್ನು ಕುರಿತು ಹೀಗೆ ಹೇಳಿದ್ದಾರೆ (ಅಲ್ಲೇ ಪು.) :

*ಬ್ರಹ್ಮಾಂಡ ಮತ್ತು ಪಿಂಡಾಂಡ, ಬಾಹ್ಯಜಗತ್ತು ಮತ್ತು ಆಂತರಿಕ ಜಗತ್ತು ಎಂಬ ಎರಡು ಜಗತ್ತುಗಳಿವೆ. ಅನುಭವದಿಂದ ಈ ಎರಡು ಕ್ಷೇತ್ರಗಳಿಂದಲೂ ನಮಗೆ ಸತ್ಯ ದೊರಕುವುದು. ಆಂತರಿಕ ಅನುಭವದಿಂದ ಸಂಗ್ರಹಿಸಿರುವುದೇ ಮನಶ್ಶಾಸ್ತ್ರ, ತತ್ತ್ವಶಾಸ್ತ್ರ ಮತ್ತು ಧರ್ಮ. ಬಾಹ್ಯ ಜಗತ್ತಿನಿಂದ ನಮಗೆ ಭೌತ ವಿಜ್ಞಾನಗಳು ದೊರಕುವುವು. ಪೂರ್ಣವಾದ ಸತ್ಯವು ಈ ಎರಡು ಕ್ಷೇತ್ರಗಳಿಂದ ಬರುವ ಅನುಭವಗಳಿಗೆ ವಿರೋಧವಲ್ಲದೆ ಇರಬೇಕು. ಪಿಂಡಾಂಡವು ಬ್ರಹ್ಮಾಂಡಕ್ಕೆ ಪ್ರಮಾಣವಾಗಿರಬೇಕು. ಬ್ರಹ್ಮಾಂಡವು ಪಿಂಡಾಂಡಕ್ಕೆ ಪ್ರಮಾಣವಾಗಿರಬೇಕು. ಭೌತಿಕ ಸತ್ಯಗಳಿಗೆ ಸರಿಸಮವಾಗಿರುವುದು ಆಂತರಿಕ ಪ್ರಪಂಚದಲ್ಲಿರಬೇಕು. ಆಂತರಿಕ ಜಗತ್ತಿನಲ್ಲಿರುವ ಸತ್ಯವನ್ನು ಹೋಲಿಸುವುದಕ್ಕೆ ಬಾಹ್ಯಜಗತ್ತಿನಲ್ಲಿ ನಮಗೆ ವಸ್ತು ದೊರಕಬೇಕು.*

ಪ್ರಾಚೀನ ಭಾರತದ ಸಂತರೂ ಚಿಂತಕರೂ ಹೀಗೆ ಹೇಳಿದ್ದಾರೆ : ಮಾನವನ ಭೌತಿಕ ಜೀವನ ಇದು ; ಅವನನ್ನು ಸುತ್ತುವರಿದಿರುವ ಭೌತಿಕ ಜಗತ್ತು ಇದು : ಅವೆರಡನ್ನೂ ವೈಜ್ಞಾನಿಕ ಮನೋಭಾವದಿಂದ ಅಧ್ಯಯನ ಮಾಡೋಣ. ಆದರೆ ಮಾನವನ ಆಳಾತಿ ಆಳಗಳನ್ನು ಅವನ ಪ್ರಜ್ಞೆ,

ಚಿಂತನೆಗಳು, ಭಾವನೆಗಳು, ಅಹಂಕಾರ ಮತ್ತು ಅವನ ಆತ್ಮತ್ವದ ಭಾವನೆ ಇವುಗಳನ್ನೂ ಅಧ್ಯಯನ ಮಾಡೋಣ. ಈಗ ಹೇಳಿದವು ಇವೂ ಕೂಡ ಪರೀಕ್ಷೆಗೆ ಒಳಪಡಬೇಕಾದ ವಿಷಯಗಳ ಸಮೂಹ. ಈ ಕ್ಷೇತ್ರದಲ್ಲಿ ನಾವು ಸಾಧಿಸುವ ಪ್ರಗತಿಯು ಮಾನವನ ಬಾಹ್ಯ ಜಗತ್ತಿನ ಅರಿವನ್ನು ಉತ್ತಮಗೊಳಿಸುವುದರಲ್ಲಿ ಸಂದೇಹವಿಲ್ಲ. ಗಣಿತಶಾಸ್ತ್ರಜ್ಞ ಮತ್ತು ಖಗೋಳಶಾಸ್ತ್ರಜ್ಞ ಸರ್ ಆರ್ಥರ್ ಎಡಿಂಗ್‌ಟನ್ (Philosophy of Physical Science, p. 5) ಹೀಗೆ ಹೇಳುತ್ತಾರೆ :

*ಜ್ಞಾನದ ಅನ್ವೇಷಣೆಯಲ್ಲಿ ತೊಡಗಿದಾಗ ಅವು ಯಾವ ಜ್ಞಾನವನ್ನು ಅನ್ವೇಷಿಸುತ್ತಿದ್ದೇವೆಯೋ ಅದರ ಸ್ವರೂಪವನ್ನು ಅರಿಯುವುದು ಅಗತ್ಯ ಎಂಬುದನ್ನು ನಾವು ಕಂಡುಕೊಂಡಿದ್ದೇವೆ.*

## ೯. ಉಪನಿಷತ್ತುಗಳು ಮತ್ತು ಭಾರತದಲ್ಲಿನ ವಿಮರ್ಶಾತ್ಮಕ ಮನೋಭಾವ

ಉಪನಿಷತ್ತುಗಳ ಕಾಲದಿಂದಲೂ ಧರ್ಮ ಎಂದರೆ ಆತ್ಮವು ಕೈಗೊಳ್ಳುವ ಸಾಹಸಯಾತ್ರೆ, ಬದುಕಿನ ಅರ್ಥವನ್ನು ತಿಳಿಯಲು ನಡೆಸುವ ಪ್ರಯತ್ನ ಎಂಬುದಾಗಿ ಭಾರತೀಯರು ದೃಢವಾಗಿ ನಂಬಿದ್ದಾರೆ. ಭಾರತೀಯರಿಗೆ ಧರ್ಮ ಎಂಬುದು ವಿಶ್ರಾಂತಿ ಪಡೆಯಲು ನೆರವಾಗುವ ತಂಪಾದ ಆಶ್ರಯವಲ್ಲ. ಆತ್ಮಸಾಕ್ಷಾತ್ಕಾರದ ಹಂಬಲದ ಕಿಚ್ಚನ್ನು ಹೊತ್ತಿಸುವ ದೊಂದಿ. ಈ ತೀವ್ರವಾದ ಹಂಬಲ, ಹೋರಾಟಗಳು ಇಲ್ಲದಿದ್ದರೆ ಧಾರ್ಮಿಕ ಪುರುಷರ ನಂಬಿಕೆಗೂ, ಅಧಾರ್ಮಿಕರ ಅಪನಂಬಿಕೆಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಅನೇಕರ ವಿಷಯದಲ್ಲಿ ನಂಬಿಕೆ ಎನ್ನುವುದು ಮನಸ್ಸಿನ ಸೋಮಾರಿತನಕ್ಕೆ ಮತ್ತೊಂದು ಹೆಸರು. ಇಂಥ ಜನರಿಗೆ, ಮತಾಚಾರ್ಯಪ್ರಭುತ್ವ ಧಾರ್ಮಿಕ ಶ್ರದ್ಧೆ ಎಂಬುದು ಉಗ್ರವಾದ ಮತಾಂತರ ಕಾರ್ಯ ಅಥವಾ ಜೆಹಾದ್ ಅಥವಾ ಧರ್ಮಯುದ್ಧ ಎಂದೇ ಆಗುತ್ತದೆ. ಅದರಲ್ಲೂ ವಿಶೇಷವಾಗಿ ಯುದ್ಧಾಸಕ್ತ ಚರ್ಚ್ ಅಥವಾ ಮತೀಯ ಸರ್ಕಾರದ ಆಡಳಿತವಿದ್ದರಂತೂ ಈ ಮನೋಭಾವ ಇನ್ನೂ ತೀವ್ರವಾಗಿರುತ್ತದೆ. ಅಂತರಂಗದ ಆಧ್ಯಾತ್ಮಿಕ ಹಸಿವಿನಿಂದ ಹುಟ್ಟುವ ತೀವ್ರವಾದ ಹಂಬಲ ಎಂದರೇನು ಎಂಬುದು ಅವರ ಅರಿವಿಗೆ ಬರುವುದೇ ಇಲ್ಲ. ಅಂಥ ಆಧ್ಯಾತ್ಮಿಕ ಹಸಿವಿಗೆ ಆಹಾರ ಎಂದರೆ ಆಧ್ಯಾತ್ಮಿಕ ಸಾಕ್ಷಾತ್ಕಾರ ಒಂದೇ. ಧರ್ಮ ಎಂಬುದು ಅಂತರಂಗದ ಅನುಭವಕ್ಕೆ ಸಂಬಂಧಿಸಿದ್ದು. ಆಧ್ಯಾತ್ಮಿಕ ಸತ್ವಗಳ ಸಂಪರ್ಕಕ್ಕೆ ಬರುವುದು. ಅದು ಕೇವಲ ನಂಬಿಕೆಯೂ ಅಲ್ಲ, ಆದೇಶಿತ ಸಿದ್ಧಾಂತವೂ ಅಲ್ಲ. ಯಾವುದರ ಜೊತೆಯೇ ಆದರೂ ಹೊಂದಾಣಿಕೆ ಮಾಡಿಕೊಳ್ಳುವುದೂ ಅಲ್ಲ.

ಉಪನಿಷತ್ತುಗಳ ಸತ್ವದಿಂದ ಶಕ್ತಿ ಪಡೆದುದರಿಂದ ಭಾರತದಲ್ಲಿ ಧರ್ಮಶ್ರದ್ಧೆ ಉಳ್ಳವರನ್ನು ಆದೇಶಿತ ಸಿದ್ಧಾಂತ, ಪಂಥ ಅಥವಾ ತಮ್ಮ ಅಭಿಪ್ರಾಯಗಳು ಮತ್ತು ನಂಬಿಕೆಗಳಿಗೆ ಯಾವುದೋ ದೈವೀ ಆದೇಶವಿದೆ ಎಂಬ ಘೋಷಣೆ ಇವುಗಳ ಆಧಾರದ ಮೇಲೆ ಒಂದು ಗುಂಪಾಗಿ ಮಾಡುವ ಪ್ರಯತ್ನ ನಡೆಯಲಿಲ್ಲ. ಧರ್ಮವು ಒಂದು ಅನ್ವೇಷಣೆಯಾಯಿತೇ ಹೊರತು ವಿಚಾರರಹಿತವಾಗಿ ಆಚರಿಸಬೇಕಾದ ಒಂದು ಪದ್ಧತಿಯಾಗಲಿಲ್ಲ. ಆದ್ದರಿಂದ ಅಂಥಲ್ಲಿ ಬೇರೆ ಯಾವುದೂ ಪ್ರಭುತ್ವವನ್ನು ನಡೆಸಲಾಗಲಿಲ್ಲ. ಪಂಥೀಯ ಅಥವಾ ಆದೇಶಿತ ಸಿದ್ಧಾಂತಕ್ಕಿಂತ ಬೇರೆಯಾಗಿ ಧರ್ಮವನ್ನು ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದಾಗ ಅದು ಸಹಿಷ್ಣುತೆ, ಪ್ರಶ್ನಿಸುವ ಮನೋಭಾವ, ತನ್ನದೇ ವಲಯದಲ್ಲಿ ಅನ್ವೇಷಣೆ ಇವುಗಳನ್ನು ಬೆಳಸಿಕೊಳ್ಳುವುದು ಮಾತ್ರವಲ್ಲದೆ ಬದುಕಿನ ಇತರ ವಲಯಗಳನ್ನೂ ವ್ಯಾಪಿಸುವುದು ಸಾಧ್ಯವಾಯಿತು. ಪ್ರಶ್ನಿಸುವ ಮನೋಭಾವವು ಸಾಧಕನನ್ನು ಶಾಸ್ತ್ರಾಚಾರಗಳನ್ನು ಮೀರಿಹೋಗುವಂತೆ ಮಾಡುತ್ತದೆ. ಕೇವಲ ಶಾಸ್ತ್ರ ವಾಕ್ಯಗಳ ಮತ್ತು ಸಂಪ್ರದಾಯಗಳ ಅಡಿಯಾಳಾಗುವುದನ್ನು ತಪ್ಪಿಸುತ್ತದೆ ಎಂದು ಭಗವದ್ಗೀತೆಯು (VI. 44) ಹೇಳುತ್ತದೆ. ಅಂತಹ

ಸಂದರ್ಭದಲ್ಲಿ ಸಾಧಕನು ಕೇವಲ ನಂಬುವವನಾಗಿ ಉಳಿಯದೆ ಪ್ರಯೋಗಶೀಲನಾಗುತ್ತಾನೆ. ಸಾಧನೆ ಅಥವಾ ಪ್ರಯೋಗವು ಧರ್ಮದ ಚಲನಶೀಲ ತತ್ತ್ವ ಎಂಬುದಾಗಿ ಭಾರತೀಯ ಧಾರ್ಮಿಕ ಚಿಂತನೆಯು ಒತ್ತಿ ಹೇಳುತ್ತದೆ. ಭಾರತೀಯ ಧರ್ಮವು ತನ್ನ ತತ್ತ್ವಗಳನ್ನು ರೂಪಿಸುವುದಕ್ಕಾಗಿ ಜಿಜ್ಞಾಸೆಯ ಹಾದಿಯನ್ನು—ಅದು ಬ್ರಹ್ಮ-ಜಿಜ್ಞಾಸೆಯೇ (ದೇವರು ಎಲ್ಲರ ಆತ್ಮ ಎಂಬ ತತ್ತ್ವ) ಆಗಿರಲಿ, ಧರ್ಮ ಜಿಜ್ಞಾಸೆಯೇ (ಸಾಮಾಜಿಕ ಮತ್ತು ವೈಯಕ್ತಿಕ ನೈತಿಕತೆ) ಆಗಿರಲಿ—ಅವಲಂಬಿಸಬೇಕಾಗುತ್ತದೆ.

ಮಾನವನ ಮಾನಸಿಕ ಜೀವನಕ್ಕೆ ಸಂಬಂಧಿಸಿದಂತೆ ಒಂದು ಸಮಗ್ರ ದೃಷ್ಟಿಯ ಫಲವೇ ಮಾನವನು ಧರ್ಮ ಮತ್ತು ಚಿಂತನೆಯು ವಿಷಯದಲ್ಲಿ ಈ ಭವ್ಯವಾದ ಮನೋಭಾವವನ್ನು ತಳೆಯುವುದು ಸಾಧ್ಯವಾಗುವಂತೆ ಮಾಡಿದ ಅಂಶ. ಇದನ್ನು ಭಾರತವು ಉಪನಿಷತ್ತುಗಳ ಅಧ್ಯಯನದಿಂದ ಕಲಿಯಿತು. ಎಲ್ಲ ಧರ್ಮಗಳನ್ನೂ ಒಪ್ಪಿಕೊಳ್ಳುವುದರ ಮತ್ತು ಲೌಕಿಕವಾಗಲಿ, ಅಲೌಕಿಕವಾಗಲಿ ಎಲ್ಲ ಜ್ಞಾನಕ್ಕೂ ಗೌರವವನ್ನು ತೋರಿಸುವುದರ ಮೂಲಕ ಭಾರತವು ಮೇಲಿನ ಮನೋಭಾವವನ್ನು ತನ್ನ ಚಿಂತನೆಯ ಭಾಗವನ್ನಾಗಿ ಮಾಡಿಕೊಂಡಿತು.

### ೧೦. ವಿದ್ಯಾ ದದಾತಿ ವಿನಯಂ—'ವಿದ್ಯೆಯು ವಿನಯವನ್ನು ಕಲಿಸುತ್ತದೆ'

ಆಧುನಿಕ ಯುಗದಲ್ಲಿ ವಿಜ್ಞಾನವು ಮಾನವನ ಮಾನಸಿಕ ವ್ಯಾಪ್ತಿಯನ್ನು ಹೆಚ್ಚಿಸಿದೆ. ಇದು ಅಜ್ಞೇಯವಾದುದರ ರಹಸ್ಯವನ್ನು ಹೆಚ್ಚು ಒತ್ತಿಹೇಳುವುದರ ಜೊತೆಗೆ ಉಪನಿಷತ್ತುಗಳು ಹೇಳುವ ಪರಾ ವಿದ್ಯೆಯ ಮಹತ್ತ್ವವನ್ನೂ ಹೆಚ್ಚಾಗಿ ಸಾರುತ್ತದೆ. ಜೆ. ಆರ್ಥರ್ ಥಾಂಸನ್‌ನ ಮಾತುಗಳಲ್ಲಿ ಹೇಳುವುದಾದರೆ (Introduction of Science p. 205 ) :

> *ತನ್ನ ಬೌದ್ಧಿಕತೆಯ ವ್ಯಾಪ್ತಿಯ ತುಂದಿಯಲ್ಲಿ ಮಾನವನು ಧಾರ್ಮಿಕ ವ್ಯಕ್ತಿಯಾಗುವುದನ್ನು ತ್ಯಜಿಸಿಲ್ಲ.*

ಆದ್ದರಿಂದ ಅನೇಕ ವಿಜ್ಞಾನಿಗಳು, ಕಳೆದ ಕೆಲವು ಶತಮಾಗನಳಲ್ಲಿ, ತಮ್ಮ ತಮ್ಮ ವಿಜ್ಞಾನ ಶಾಖೆಗಳ ಮಿತಿಯನ್ನು ಮೀರಿ, ವಿನೀತ ಮನೋಭಾವದಲ್ಲಿ 'ವಿದ್ಯಾ ದದಾತಿ ವಿನಯಂ' ಎಂಬ ಹೇಳಿಕೆಗೆ ನಿದರ್ಶನವಾಗಿ, ಅಜ್ಞೇಯವಾದುದರ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸಿದ್ದಾರೆ. ಜೆ. ಆರ್ಥರ್ ಥಾಂಸನ್ (ಮೇಲೆ ಹೇಳಿದ ಗ್ರಂಥದ ೨೦೮ನೇ ಪುಟದಲ್ಲಿ) ಕೋಲ್‌ರಿಜ್ ಕವಿಯನ್ನು ಉದ್ಧರಿಸಿದ್ದಾನೆ :

> *ಎಲ್ಲ ಜ್ಞಾನದ ಆದಿ ಅಂತ್ಯಗಳೂ ಆಶ್ಚರ್ಯ ಎಂಬುದೇ. ಆದರೆ ಮೊದಲನೆಯ ಆಶ್ಚರ್ಯ ಅಜ್ಞಾನದ ಶಿಶು, ಎರಡನೆಯ ಆಶ್ಚರ್ಯ ಆರಾಧನೆಯ ತಂದೆ-ತಾಯಿ.*

ಆದೇಶಿತ ಸಿದ್ಧಾಂತ ಮತ್ತು ಇದಮಿತ್ಥಂ ಮನೋಭಾವ ಇವು ಮುಕ್ತವಾದ ಅನ್ವೇಷಣೆಯ ಮನೋಭಾವಕ್ಕೆ ಶತ್ರುಗಳು. ಅವು ನಿಜವಾದ ವಿಜ್ಞಾನಕ್ಕೆ ಎಷ್ಟರಮಟ್ಟಿನ ಶತ್ರುಗಳೋ ನಿಜವಾದ ಧರ್ಮಕ್ಕೂ ಅಷ್ಟೇ ಮಟ್ಟಿನ ಶತ್ರುಗಳು. ವಿಜ್ಞಾನದ ವ್ಯಾಪ್ತಿ ಮತ್ತು ಕಾರ್ಯಚಟುವಟಿಕೆಗಳ ವಿಷಯದಲ್ಲಿ ಸಂಕುಚಿತ ಮನೋಭಾವವನ್ನು ತಾಳಿ, ಇದಮಿತ್ಥಂ ಎಂದು ಹೇಳಿ ಜ್ಞಾನದ ಪ್ರಗತಿಯನ್ನೂ, ಅನುಭವದ ಸಮಗ್ರತೆಯನ್ನೂ ಕುಂಠಿತಗೊಳಿಸುವ ವಿಜ್ಞಾನಿಗಳು ಇಂದು ಹೇರಳವಾಗಿದ್ದಾರೆ. ಹೀಗಾದದ್ದರಿಂದ ಹಿಂದೆ ಧರ್ಮಕ್ಕೆ ಆದಂತೆ ಇಂದು ವಿಜ್ಞಾನಕ್ಕೂ ಅಪಾಯವೊದಗಿದೆ. ಇಂತಹ ಅಪಾಯವನ್ನು ತಪ್ಪಿಸಲು ಇರುವ ಏಕೈಕ ಮಾರ್ಗವೆಂದರೆ ಮುಕ್ತ ಅನ್ವೇಷಣೆಯ ಮನೋಭಾವನನ್ನು ತಾಳುವುದು ಮತ್ತು ವಿಜ್ಞಾನದ ಗುರಿ ಮತ್ತು ದೃಷ್ಟಿಗಳ ವಿಷಯದಲ್ಲಿ ಸರಿಯಾದ ನಿಲುವನ್ನು ತಾಳುವುದು.

ಹತ್ತೊಂಬತ್ತನೆಯ ಶತಮಾನವು ಘರ್ಷಣೆ ಮತ್ತು ಭಿನ್ನತೆಗಳ ಶತಮಾನವಾಗಿತ್ತು. ಇಪ್ಪತ್ತನೆಯ ಶತಮಾನವಾದರೋ ಧರ್ಮ ಮತ್ತು ವಿಜ್ಞಾನಗಳೆರಡೂ ಪರಸ್ಪರರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದುದರ ಫಲವಾಗಿ ಸಂಧಾನ ಮತ್ತು ಮಿಲನಗಳ ಯುಗವಾಗಿದೆ. ಇಪ್ಪತ್ತನೆಯ ಶತಮಾನದ ಭೌತವಿಜ್ಞಾನವು ಪ್ರದರ್ಶಿಸುತ್ತಿರುವ ವಿನಯಕ್ಕೂ ಹತ್ತೊಂಬತ್ತನೆಯ ಶತಮಾನದಲ್ಲಿ ಅದು ತಾಳಿದ್ದ ಇದಮಿತ್ಥಂ ಮನೋಭಾವಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಯಾವ ಮುಕ್ತ ವಿಚಾರಪಥವನ್ನು ಆಶ್ರಯಿಸಿ ಅದು ಅಭಿವೃದ್ಧಿಯನ್ನು ಸಾಧಿಸಿತೋ ಆ ಪಥವು ತನ್ನ ಸೀಮಿತ ಕ್ಷೇತ್ರವನ್ನು ಮೀರಿಯೂ ಇರಬಲ್ಲದು ಎಂದೂ ವೈಯಕ್ತಿಕ ರಾಗದ್ವೇಷಗಳನ್ನು ಬಿಟ್ಟು ಮಾಡಿದ ಅಧ್ಯಯನವೇ ವೈಜ್ಞಾನಿಕವಾಗುತ್ತದೆಯೇ ಹೊರತು ಕೇವಲ ಅಧ್ಯಯನ ಮಾಡಿದರೆ ಅದು ವೈಜ್ಞಾನಿಕವಾಗುತ್ತದೆ, ಅದೇ ವೈಜ್ಞಾನಿಕ ಅನ್ವೇಷಣೆಯ ವಸ್ತುವಾಗುವುದಿಲ್ಲ ಎಂದೂ ಅದಕ್ಕೆ ಅರ್ಥವಾಯಿತು.

ಧರ್ಮದ ಅನ್ವೇಷಣೆಯ ಕ್ಷೇತ್ರ ಅಂತರಂಗ ಜಗತ್ತು. ಅದನ್ನು ಅನ್ವೇಷಿಸುವಾಗಲೂ ವೈಜ್ಞಾನಿಕ ವಿಧಾನವನ್ನು ಅನುಸರಿಸುವುದು ಅಗತ್ಯ.

ಧರ್ಮವನ್ನು ಕುರಿತಂತೆ ಭಾರತೀಯ ಮನೋಭಾವ ಅಂಥದೇ. ಅಂಥ ಮನೋಭಾವವು ಇಲ್ಲದಿದ್ದುದರಿಂದಲೇ ಪಶ್ಚಿಮದಲ್ಲಿ ಪ್ರಗತಿ ಹೊಂದುತ್ತಿರುವ ವೈಜ್ಞಾನಿಕ ಜ್ಞಾನದ ಪಂಥಾಹ್ವಾನವನ್ನು ಎದುರಿಸಲು ಧರ್ಮವು ಸಾಕಷ್ಟು ಸಜ್ಜಾಗದೇ ಇದ್ದುದಕ್ಕೆ ಕಾರಣವಾಯಿತು.

### ೧೧. ಭೌತವಿಜ್ಞಾನದ ಇತಿಮಿತಿಗಳು

ಭೌತ ವಿಜ್ಞಾನದ ಸ್ವರೂಪ ಮತ್ತು ವ್ಯಾಪ್ತಿಯನ್ನು ಆಳವಾಗಿ ಅಧ್ಯಯನ ಮಾಡಿದಷ್ಟೂ ಅದರ ಇತಿಮಿತಿಗಳು ನಮಗೆ ಸ್ಪಷ್ಟವಾಗುತ್ತವೆ. ಉದಾಹರಣೆಗೆ : ಖಗೋಳ ವಿಜ್ಞಾನವೂ ಸೇರಿದಂತೆ ಭೌತಶಾಸ್ತ್ರ ಮತ್ತು ವರ್ತನ ಮನೋವಿಜ್ಞಾನವೂ ಸೇರಿದಂತೆ ಜೀವವಿಜ್ಞಾನ ಈ ಎರಡು ವಿಜ್ಞಾನ ಶಾಖೆಗಳು ವಿಶ್ವ ಮತ್ತು ಮಾನವ ಈ ಎರಡನ್ನೂ ಕುರಿತಂತೆ ಅಪಾರವಾದ ಜ್ಞಾನವನ್ನು ನೀಡಿವೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದವರೆಗೂ ಭೌತವಿಜ್ಞಾನದ ಅಂತಿಮ ತೀರ್ಪುಗಳು ವಸ್ತುನಿಷ್ಠವಾದುದಾಗಿರುತ್ತಿರಲಿಲ್ಲ. ದ್ರವ್ಯವಾಸ್ತವತಾವಾದ (ಭೌತದ್ರವ್ಯ, ಅದರ ರೂಪಾಂತರಗಳು, ಅದರ ಚಲನೆ—ಇವು ಹೊರತು ಮತ್ತೆ ಯಾವುದೂ ಸೃಷ್ಟಿಯಲ್ಲಿಲ್ಲ ಎಂಬ ವಾದ ; ಮನಃಕಾರ್ಯಗಳೆಲ್ಲ ಸಂಪೂರ್ಣವಾಗಿ ಭೌತದ್ರವ್ಯದಿಂದಲೇ ಆಗುತ್ತವೆ ಎಂಬ ವಾದ ; ದೇಹಾತ್ಮವಾದ.) ಮತ್ತು ಯಾಂತ್ರಿಕ ಕೌಶಲಗಳೇ ಈ ವಿಶ್ವವನ್ನೆಲ್ಲ ಆಳುತ್ತಿರುವುದನ್ನು ಆ ಯುಗ ಕಂಡಿತು. ಅವು ನೀಡುವ ತೀರ್ಪುಗಳಲ್ಲಿ ಇದಮಿತ್ಥಂ ಎಂಬ ಧೋರಣೆ ಸ್ಪಷ್ಟವಾಗಿತ್ತು. ಆದರೆ, ಇಪತ್ತನೆಯ ಶತಮಾನದಲ್ಲಿ ಈ ಯುಗದ ಮಹಾನ್ ಭೌತವಿಜ್ಞಾನಿಗಳ ಮನೋಭಾವವನ್ನು ನೋಡಿದರೆ ಅವರಲ್ಲಿ ವಿನಯದ ಅಂಶ ಇರುವುದು ಕಾಣುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಭೌತಜಗತ್ತಿನ ಜ್ಞಾನ ಸಮಗ್ರವಾದುದಾಗಿರಲಿಲ್ಲ. ಅಲ್ಲದೆ ವಿಜ್ಞಾನಿಗಳು ವಸ್ತುಗಳ ಮೇಲುನೋಟವನ್ನು ಮಾತ್ರ ಹೊಂದಿದವರಾಗಿರುತ್ತಿದ್ದರು. ಆದರೆ ವಿದ್ಯುತ್ ವಿಕಿರಣ ಕ್ರಿಯಾಶಕ್ತಿ ಮತ್ತು ಪರಮಾಣುವಿನ ಕೇಂದ್ರ ಮುಂತಾದ ವಿಷಯಗಳು ಅರಿವಿಗೆ ಬಂದ ಮೇಲೆ ಬಾಹ್ಯಜಗತ್ತಿನ ಸತ್ಯವನ್ನು ಕುರಿತಂತೆ ನಮ್ಮ ಜ್ಞಾನಕ್ಕೆ ಪ್ರಬಲವಾದ ಇತಿಮಿತಿಗಳುಂಟು ಎಂಬುದು ಗೊತ್ತಾಗಿದೆ. ತಾನು ವಸ್ತುಗಳ ತೋರಿಕೆಯನ್ನು ಮಾತ್ರ ವಿಶ್ಲೇಷಿಸುತ್ತಿದ್ದೇನೆ, ಆ ತೋರಿಕೆಗಳ ಹಿಂದೆ ಇರುವ ಸತ್ಯವನ್ನಲ್ಲ ಎಂಬುದನ್ನು ವಿಜ್ಞಾನವು ಒಪ್ಪಿಕೊಂಡಿದೆ. ನಮ್ಮ ಸುತ್ತಣ ಜಗತ್ತನ್ನು ಕುರಿತಂತೆ ವಿಜ್ಞಾನವು ತೆರೆದು ತೋರಿಸಿರುವುದು ವಸ್ತುಗಳ ಹೊರ ಸ್ವರೂಪವನ್ನು ಮಾತ್ರ ಎಂದು ಆಧುನಿಕ ಮಹಾನ್ ಭೌತವಿಜ್ಞಾನಿಗಳಲ್ಲಿ ಕೆಲವರು

ಹೇಳುತ್ತಿದ್ದಾರೆ. ನಾವು ನೋಡಬಹುದಾದ ಜಗತ್ತಿನ ಹಿಂದೆ ನೋಡಲು ಸಾಧ್ಯವಾಗದ ಜಗತ್ತೊಂದಿದೆ; ಮಾತ್ರವಲ್ಲ ನೋಡುತ್ತಿರುವವನೂ ಒಬ್ಬನಿದ್ದಾನೆ. ಭೌತವಿಜ್ಞಾನದ ಮತ್ತು ಅದರ ವಿಧಾನಗಳ ಇತಿಮಿತಿಗಳನ್ನು ಕುರಿತಂತೆ ಇದೊಂದು ದೊಡ್ಡ ಅಭಿಪ್ರಾಯ ಪ್ರಕಟಣೆ. ಇಂದ್ರಿಯಗಳು ಮತ್ತು ಇಂದ್ರಿಯಗಳಿಗೆ ನೆರವಾಗುವ ಘಟನಾವಳಿಗಳು ಇವುಗಳೊಡನೆ ಮಾತ್ರ ವಿಜ್ಞಾನವು ವ್ಯವಹರಿಸುವುದು. ಆದರೆ ಇಂದ್ರಿಯಗಳು ತೋರಿಸುವಂಥದು ತೀರ ಸ್ವಲ್ಪಮಾತ್ರ; ಮತ್ತು ಅವು ತೋರಿಸುತ್ತಿರುವಂಥದರಿಂದ ಗೊತ್ತಾಗುವುದೇನೆಂದರೆ ಇಂದ್ರಿಯ ಜಗತ್ತಿನ ಹಿಂದೆಯೂ ವಾಸ್ತವತೆಗಳು ಇವೆ. ಮತ್ತು ಆ ವಾಸ್ತವತೆಗಳು ಇಂದ್ರಿಯ ಜಗತ್ತನ್ನು ನಿರ್ಧರಿಸುವಂತಹವೂ ಅದನ್ನು ನಿಯಂತ್ರಿಸುವಂಥವೂ ಆಗಿವೆ ಎಂಬುದು. ವಿಶ್ವದ ಗೋಚರಸಾಧ್ಯವಾದ ಭಾಗವನ್ನು ಮಾತ್ರ ಅರಿಯುವುದಕ್ಕೆ, ಮತ್ತು ಅದರ ಶಕ್ತಿಗಳನ್ನು ಮಾನವನ ಬಳಕೆಗಾಗಿ ನಿಯಂತ್ರಿಸುವುದಕ್ಕೆ ಭೌತವಿಜ್ಞಾನವು ತನ್ನನ್ನು ತಾನು ಮಿತಗೊಳಿಸಿಕೊಳ್ಳುತ್ತದೆ.

ಜೀವವಿಜ್ಞಾನದ ಕ್ಷೇತ್ರದಲ್ಲೂ ಪರಿಸ್ಥಿತಿ ಹೀಗೇ ಇದೆ. ಕಳೆದ ಶತಮಾನದಲ್ಲೂ ಅದು ಕೂಡ ಇದಮಿತ್ಥಂ ಎಂದು ತೀರ್ಮಾನಗಳನ್ನು ನೀಡುತ್ತಿತ್ತು. ಬದುಕಿನ ಘಟನೆಗಳ ವಿವಿಧ ಮುಖಗಳನ್ನು ಪರಿಶೀಲಿಸಿ ಅದು ವಿಕಾಸವಾದವೆಂಬ ಮಹಾನ್ ಪ್ರಮೇಯವನ್ನು ಮಂಡಿಸಿತು. ಅಂದು ಪ್ರಚಲಿತವಾಗಿದ್ದ ಭೌತವಿಜ್ಞಾನದ ಯಾಂತ್ರಿಕ ದ್ರವ್ಯವಾಸ್ತವತಾವಾದದಿಂದ (Mechanistic materialism) ಪ್ರಭಾವಿತವಾಗಿ ಕೆಲವು ನಿರ್ಣಯಗಳಿಗೆ ಅದು ತಲುಪಿತು. ಅದರ ಪರಿಣಾಮವಾಗಿ ಮಾನವನೂ ಪ್ರಾಣಿಯೂ ಒಂದೇ. ಅವೆರಡೂ ಯಂತ್ರವೂ ಒಂದೇ ಎಂಬ ತೀರ್ಮಾನಕ್ಕೆ ಬಂದಿತು. ಇಂದು ವಿಜ್ಞಾನಿಗಳು ಡಾರ್ವಿನ್ನನು ತನ್ನ ಪ್ರಖ್ಯಾತವಾದ ಗ್ರಂಥಗಳಿಗೆ ಕೊಟ್ಟ The Origin of Species ಮತ್ತು The Descent of Man ಎಂಬ ಹೆಸರುಗಳು ಅಷ್ಟು ಸಮರ್ಪಕವಾಗಿಲ್ಲ ಎಂದು ಹೇಳುತ್ತಿದ್ದಾರೆ. ಅವುಗಳ ಬದಲು The Evolution of Organisms ಮತ್ತು The Ascent of Man ಎಂಬ ಶೀರ್ಷಿಕೆಗಳು ಹೆಚ್ಚು ಸಮಂಜಸವಾಗುತ್ತಿದ್ದವು ಎಂದು ಸರ್ ಜೂಲಿಯನ್ ಹಕ್ಸ್ಲೀ ಸೂಚಿಸಿದ್ದಾನೆ. (Evolution after Darwin, Vol I. The University of Chicago Press, p. 17). ಆದರೆ ಮೇಲಿನ ಗ್ರಂಥಗಳು ಪ್ರಕಟವಾದದ್ದು ಆಗತಾನೆ ಅಸ್ತಿತ್ವಕ್ಕೆ ಬರುತ್ತಿದ್ದ ವಿಜ್ಞಾನ, ಮಾನವನು ಅತೀತದಲ್ಲೆಲ್ಲೋ ಇರುವ ದೇವರ ವಿಶೇಷ ಸೃಷ್ಟಿ ಎಂಬ ಅತಿಪ್ರಾಕೃತಿಕ ಆದೇಶಿತ ಸಿದ್ಧಾಂತ ಇವುಗಳ ನಡುವೆ ಭಯಂಕರವಾದ ಘರ್ಷಣೆ ನಡೆಯುತ್ತಿದ್ದ ಅವಧಿಯಲ್ಲಿ. ಮಹಾನ್ ವಿಜ್ಞಾನ ಗ್ರಂಥಗಳಿಗೆ ಶೀರ್ಷಿಕೆಗಳನ್ನು ಕೊಡುವುದರ ಮೇಲೂ ಈ ಘರ್ಷಣೆ ತನ್ನ ಪ್ರಭಾವವನ್ನು ಬೀರಿಯೇ ಬೀರಿತು.

ಹತ್ತೊಂಬತ್ತನೆಯ ಶತಮಾನದಲ್ಲಿ ಅತಿಪ್ರಾಕೃತವೂ ವಿಜ್ಞಾನವಿರೋಧಿಯೂ ಆದ ಧರ್ಮ ಮತ್ತು ಆಧ್ಯಾತ್ಮಿಕತೆಯಲ್ಲಿ ಪಶ್ಚಿಮದ ಜನರಿಗಿದ್ದ ಶ್ರದ್ಧೆಯು ನುಚ್ಚುನೂರಾಯಿತು. ಹಾಗೆ ನುಚ್ಚುನೂರು ಮಾಡಿದ್ದು ಯಾವುದು ಎಂದರೆ ಭೌತಶಾಸ್ತ್ರದ ವಾಸ್ತವತಾವಾದ ಮತ್ತು ಯಂತ್ರಕೌಶಲ ನಿಯಂತ್ರಣಾವಾದ (Materialism and Mechanistic Determinism) ಮತ್ತು ಜೀವಶಾಸ್ತ್ರದ ವಿಕಾಸವಾದ.

ಅನೇಕ ಆಧುನಿಕ ವಿಜ್ಞಾನಿಗಳು ಒಪ್ಪಿಕೊಂಡಿರುವ ಭೌತವಿಜ್ಞಾನದ ಇತಿಮಿತಿಗಳಿಗೆ ಕಾರಣ ಭೌತ ಎಂಬ ವಿಶೇಷಣ. ಆದರೆ ವಿಜ್ಞಾನ ಮಾತ್ರ ಹಾಗೆ ಸೀಮಿತವಾದದ್ದಲ್ಲ. ಭೌತವಿಜ್ಞಾನಿಗಳು ಇಂದ್ರಿಯಗಳು ನೀಡುವ ಅಂಶಗಳನ್ನೇ ಸಂಪೂರ್ಣವಾಗಿ ಅವಲಂಬಿಸಿವೆಯಾಗಿ ಅವು ವಾಸ್ತವತೆಯನ್ನು ಅಧ್ಯಯನ ಮಾಡಬಹುದೇ ಹೊರತು ಅದನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿ ಮುಗಿಸಲಾರವು. ಸರ್ ಆರ್ಥರ್ ಎಡಿಂಗ್‌ಟನ್ ಎಂಬ ಗಣಿತ ಮತ್ತು ಖಗೋಳ ವಿಜ್ಞಾನಿಯು ಈ

ಮಿತಿಯನ್ನು ಎತ್ತಿ ತೋರಿಸಿದ್ದಾನೆ (The Philosophy of Physical Science p. 16) :

*ಒಬ್ಬ ಮತ್ಸ್ಯಶಾಸ್ತ್ರಜ್ಞನು ಸಮುದ್ರಜೀವಿಗಳನ್ನು ಕುರಿತು ಸಂಶೋಧನೆ ನಡೆಸುತ್ತಿದ್ದಾನೆ ಎಂದು ಭಾವಿಸೋಣ. ಅವನು ಬಲೆಬೀಸಿ ಬಗೆ ಬಗೆಯ ಮೀನುಗಳನ್ನು ಹಿಡಿಯುತ್ತಾನೆ. ತನಗೆ ದೊರೆತ ಮೀನುಗಳನ್ನು ಪರಿಶೀಲಿಸಿ ವಿಜ್ಞಾನಿಯು ಬಳಸುವ ವಿಧಾನವನ್ನು ಅನುಸರಿಸಿ ಅವನು ಜ್ಞಾನವನ್ನು ಕ್ರಮಬದ್ಧಗೊಳಿಸುತ್ತಾನೆ. ಎರಡು ಸಾಮಾನ್ಯೀಕರಣಗಳನ್ನು ಅವನು ತಲುಪುತ್ತಾನೆ :*

*೧. ಯಾವ ಕಡಲು ಜೀವಿಯೂ ಎರಡು ಅಂಗುಲಗಳಿಗಿಂತ ಕಡಿಮೆ ಉದ್ದವಿಲ್ಲ.*
*೨. ಎಲ್ಲ ಕಡಲು ಜೀವಿಗಳಿಗೂ ಕಿವಿರು (ಶ್ವಾಸಾಂಗ)ಗಳು ಉಂಟು.*

*ಅವನು ಹಿಡಿದಿರುವ ಎಲ್ಲ ಮೀನುಗಳ ವಿಷಯದಲ್ಲೂ ಇವೆರಡೂ ನಿಜ. ಈ ಪ್ರಯೋಗವನ್ನು ಎಷ್ಟು ಸಲ ಪುನರಾವರ್ತಿಸಿದಾಗಲೂ ಇದು ಅಷ್ಟೇ ಸತ್ಯವಾಗಿರುತ್ತದೆ ಎಂದು ಅವನು ತಾತ್ಪೂರ್ವಿಕವಾಗಿ ಭಾವಿಸುತ್ತಾನೆ... ತಾನು ಹೇಳುತ್ತಿರುವ ಜೀವಿಗಳ ವಿಷಯದಲ್ಲಿ —ಬಹುಶಃ ಅವನು ಆರಿಸಿದ ಒಂದು ಗುಂಪಿನ ವಿಷಯದಲ್ಲಿ—ಅವನು ಮಾಡುವ ಸಾಮಾನ್ಯೀಕರಣವು ಅತ್ಯಂತ ಸತ್ಯವೂ ಹೌದು. ಆದರೆ ಅವನು ಬೇರೆ ವರ್ಗದ ಜೀವಿಗಳ ವಿಷಯದಲ್ಲಿ ಸಾಮಾನ್ಯೀಕರಣ ಮಾಡಲಾರ.*

ಈ ಮುಂಚೆ, ಎಡಿಂಗ್‌ಟನ್ ಮೇಲೆ ಹೇಳಿದ ಪುಸ್ತಕದ ಪ್ರಸ್ತಾವನೆಯಲ್ಲಿ ಹೀಗೆ ಹೇಳಿದ್ದ (ಅಲ್ಲೇ. ಪು. ix) :

*ಸತ್ಯದ ಅನ್ವೇಷಣೆಯಲ್ಲಿ ಭೌತ ವಿಜ್ಞಾನವು ಪ್ರಯೋಗ ನಡೆಸಿದವುಗಳನ್ನು ಬಿಟ್ಟು, ಉಳಿದ ಮಾನವಾನುಭವಗಳನ್ನೆಲ್ಲ ಉಪೇಕ್ಷಿಸತಕ್ಕದ್ದು ಎಂದು ಭಾವಿಸುವವರ ಗುಂಪಿಗೆ ನಾನು ಸೇರಿಲ್ಲ. ವಿಶಾಲ ಮಾನವಾನುಭವವನ್ನು ಒಳಗೊಳ್ಳುವ ತತ್ತ್ವ ಹಾಗೂ ಭೌತವಿಜ್ಞಾನಕ್ಕೆ ಸಂಬಂಧಿಸಿದ ತತ್ತ್ವ ಇವುಗಳ ನಡುವೆ ಸಾಮರಸ್ಯವಿಲ್ಲವೆಂದು ನನಗೆ ಅನಿಸುವುದಿಲ್ಲ. ಭೌತವಿಜ್ಞಾನ ತತ್ತ್ವವು ಇತ್ತೀಚೆಗೆ ಬೆಳವಣಿಗೆ ಹೊಂದಿದ ಚಿಂತನಾಪದ್ಧತಿಯಾಗಿದ್ದು ಅದರ ಸ್ಥಿರತೆ ಇನ್ನೂ ನಿರ್ಧಾರಿತ ವಾಗಬೇಕಾಗಿದೆ. ಆದರೆ ಮಾನವಾನುಭವದ ವಿಶೇಷ ಮಹತ್ವ ಮತ್ತು ಭೌತ ವಿಜ್ಞಾನದ ವಿಶಿಷ್ಟ ತತ್ವ—ಈ ಎರಡನೆಯದರ ಸತ್ವ ಇನ್ನು ನಿರ್ಧಾರಿತವಾಗಬೇಕಾಗಿದೆ—ಇವುಗಳ ನಡುವೆ ಸಾಮರಸ್ಯವಿಲ್ಲ ಎಂದು ನನಗೆ ಕಾಣುತ್ತಿಲ್ಲ.*

## ೧೨. 'ದ್ರವ್ಯಸತ್ತಾವಾದ—ಒಂದು ದಿಢೀರ್ ಪ್ರವೇಶಕ'

'ಭೌತ' ಎಂಬ ವಿಶೇಷಣದಲ್ಲಿ ಅಡಕವಾಗಿರುವ ಮಿತಿಯನ್ನು ಭೌತವಿಜ್ಞಾನ ಅಥವಾ ವಿಜ್ಞಾನಿಗಳು ಮರೆತು, ಇಲ್ಲವೇ ಉಪೇಕ್ಷಿಸಿ ಜೀವನ ಅಥವಾ ಸತ್ಯದ ವಿಷಯದಲ್ಲಿ ಸಾರಾಸಗಟು ತೀರ್ಪುಗಳನ್ನು ನೀಡಿದರೆ ಅವರು ಆದೇಶಿತ ಸಿದ್ಧಾಂತವಾದಿಗಳಾಗುತ್ತಾರೆ ಇಲ್ಲವೇ ಸತ್ಯಾನ್ವೇಷಣೆಯನ್ನು ಕೈಬಿಟ್ಟವರಾಗುತ್ತಾರೆ ; ಅಂಥ ಒಂದು ಆದೇಶಿತ ಸಿದ್ಧಾಂತ ದ್ರವ್ಯಸತ್ತಾವಾದ. ಅದು ಆಧುನಿಕ ಭೌತ ವಿಜ್ಞಾನದ ಪ್ರಗತಿಯನ್ನು ಕುಂಠಿತಗೊಳಿಸುತ್ತದೆ. ಅದರ ವಿರುದ್ಧ ಪ್ರಖ್ಯಾತ ವಿಜ್ಞಾನಿಗಳು ತಮ್ಮ ದನಿಯೆತ್ತಿದ್ದಾರೆ, ಎಚ್ಚರಿಕೆ ನೀಡಿದ್ದಾರೆ. ತಮ್ಮ Methods and Results ( Volume I, P. 161) ಎಂಬ ಪುಸ್ತಕದಲ್ಲಿ ಈ ಹಿಂದೆ ಭೌತದ್ರವ್ಯವಾದವನ್ನು 'ಧಿಡೀರ್ ಪ್ರವೇಶಕ' ಎಂದು ಕರೆದಿದ್ದ, ಡಾರ್ವಿನ್‌ರ ಅಜ್ಞೇಯತಾವಾದಿ ಸಹೋದ್ಯಮಿ ಥಾಮಸ್ ಹಕ್ಸ್ಲಿ ಆ ವಾದವು ಜೀವನ

ಸಿದ್ಧಾಂತವಾಗಲಾರದು ಎಂದು ಹೇಳಿದ್ದಾರೆ (ಅಲ್ಲೇ ಪು. ೧೬೪-೬೫):

*ಯಾವುದೋ ಒಂದು ಪರಿಭಾಷೆಯನ್ನೋ, ಯಾವುದೋ ಒಂದು ಸಂಕೇತಗಳ ಕೂಟವನ್ನೋ ಬಳಸಿದರೆ ಅಂಥ ಇನ್ನೊಂದನ್ನು ಬಳಸುವುದಕ್ಕಿಂತ ಸುಲಭವಾಗಿ ಪ್ರಕೃತಿಯ ವಿನ್ಯಾಸವನ್ನು ನಾವು ತಿಳಿಯಬಹುದು ಎಂದಾದರೆ ಮೊದಲನೆಯದನ್ನೇ ಬಳಸುವುದು ನಮ್ಮ ಕರ್ತವ್ಯ. ಎಲ್ಲಿಯವರೆಗೆ ನಾವು ಕೇವಲ ಪರಿಭಾಷೆಗಳ ಮತ್ತು ಸಂಕೇತಗಳ ಜೊತೆಯಲ್ಲಿ ಮಾತ್ರ ವ್ಯವಹರಿಸುತ್ತಿದ್ದೇವೆ ಎಂಬ ಅರಿವು ನಮಗೆ ಇದೆಯೋ ಅಲ್ಲಿಯವರೆಗೆ ನಮ್ಮನ್ನು ಯಾವ ದೋಷವೂ ತಟ್ಟುವುದಿಲ್ಲ....*

*ಆದರೆ ವಿಜ್ಞಾನಿಯು ತಾತ್ವಿಕ ವಿಚಾರದ ಇತಿಮಿತಿಗಳನ್ನು ಮರೆತು ಈ ಸಮೀಕರಣ ಸಂಕೇತಗಳಿಂದ ಜಾರಿ ಸಾಮಾನ್ಯವಾಗಿ ದ್ರವ್ಯಸತ್ತಾವಾದ ಎಂದು ಭಾವಿಸಲ್ಪಟ್ಟಿರುವುದನ್ನು ಹಿಡಿದುಕೊಂಡರೆ ಆಗ ಅದು ಹೀಗಾಗುತ್ತದೆ ಎಂಬುದು ನನ್ನ ಭಾವನೆ: ತನ್ನ ಸಮಸ್ಯೆಗಳನ್ನು ಪರಿಹರಿಸಲು ತಾನು ಬಳಸುತ್ತಿರುವ x ಮತ್ತು y ಗಳು ವಾಸ್ತವ ವಸ್ತುಗಳು ಎಂದು ಭ್ರಮಿಸುವ ಗಣಿತಶಾಸ್ತ್ರಜ್ಞನಂತಾಗುತ್ತಾನೆ ಅವನು. ಅನಾನುಕೂಲ ಇನ್ನೂ ಹೆಚ್ಚು. ಏಕೆಂದರೆ ಗಣಿತ ಶಾಸ್ತ್ರಜ್ಞನು ಮಾಡುವ ದೋಷ ಅಷ್ಟೇನೂ ಕಾರ್ಯಗತವಾಗುವ ಪರಿಣಾಮಗಳನ್ನು ಮಾಡುವುದಿಲ್ಲ. ಆದರೆ ಕ್ರಮಬದ್ಧವಾದ ದ್ರವ್ಯಸತ್ತಾವಾದವು ಬದುಕಿನ ಶಕ್ತಿಗಳನ್ನೆಲ್ಲ ಸ್ಥಗಿತಗೊಳಿಸಿ ಅದರ ಸೌಂದರ್ಯವನ್ನೇ ಹಾಳುಮಾಡಬಹುದು.*

## ೧೩. ಭೌತ ವಿಜ್ಞಾನ ಮತ್ತು ವಿಶ್ವದ ರಹಸ್ಯ

ಪ್ರಾಚೀನ ಯುಗದಲ್ಲಿ ಈ ವಿಶ್ವವು ಮಾನವನಿಗೆ ಒಂದು ರಹಸ್ಯವಾಗಿತ್ತು. ಈ ಇಪ್ಪತ್ತನೆಯ ಶತಮಾನದಲ್ಲೂ ನಾಗರಿಕ ಮಾನವನಿಗೆ ಅದು ರಹಸ್ಯವಾಗಿಯೇ ಉಳಿದಿದೆ. ದಿವಂಗತ ಸರ್ ಜೇಮ್ಸ್ ಜೀನ್ಸ್‌ರವರಂತಹ ವಿಜ್ಞಾನಿಗಳು ವೈಜ್ಞಾನಿಕ ದೃಷ್ಟಿಯಲ್ಲಿ ವಿಶ್ವ ಎಂಬುದನ್ನು ಕುರಿತಂತೆ ತಾವು ಬರೆದ ಪುಸ್ತಕಕ್ಕೆ The Myterious Universe (ರಹಸ್ಯಮಯ ವಿಶ್ವ) ಎಂದೇ ಹೆಸರು ಕೊಟ್ಟಿದ್ದಾರೆ. ಇಷ್ಟೊಂದು ಅದ್ಭುತವಾದ ವೈಜ್ಞಾನಿಕ ಆವಿಷ್ಕಾರಗಳು ನಡೆದೂ ವಿಜ್ಞಾನಿಯು ಪ್ರಕೃತಿಯನ್ನು ಗಹನವಾದ ರಹಸ್ಯ ಎಂದು ಭಾವಿಸಿದ್ದರೆ, ಇಷ್ಟೊಂದು ಅಗಾಧವಾದ ಜ್ಞಾನವನ್ನು ಪಡೆದಿದ್ದೂ ವಿಜ್ಞಾನಿಯು ಪ್ರಕೃತಿಯ ಮೇಲ್ಪದರವನ್ನು ಮಾತ್ರ ಕರೆದಿದ್ದೇನೆ ಎಂದು ಭಾವಿಸಿ ತಾನಿನ್ನೂ ವಿಶ್ವದ ಸಮಸ್ಯೆಯ ಕೇಂದ್ರದಿಂದ ದೂರಾತಿದೂರದಲ್ಲಿದ್ದೇನೆ ಎಂದು ಭಾವಿಸುವುದಾದರೆ ಶಂಕರಾಚಾರ್ಯರು ಕೇಳಿದ ಪ್ರಶ್ನೆಯನ್ನೇ ನಾವೂ ಕೇಳಬೇಕಾಗುತ್ತದೆ. ತತಃ ಕಿಂ ತತಃ ಕಿಂ—ಇನ್ನೇನು ? ಮುಂದೇನು ? ತಮ್ಮ The New Background of Science ಎನ್ನುವ ಗ್ರಂಥದಲ್ಲಿ (ಪು. ೬೦) ಸರ್ ಜೇಮ್ಸ್ ಜೀನ್ಸ್ ಹೀಗೆ ಹೇಳಿದ್ದಾರೆ :

*ಭೌತವಿಜ್ಞಾನವು ಜಡಪ್ರಪಂಚ ಮತ್ತು ವಿಕಿರಣವನ್ನು ಮಾತ್ರ ವಿವೇಚಿಸಲು ಆರಂಭಿಸಿತು. ಆದರೆ ಅವೆರಡರಲ್ಲಿ ಯಾವುದನ್ನೂ ತನ್ನಮಟ್ಟಿಗಾದರೂ ವಿವರಿಸಿಕೊಳ್ಳುವುದಕ್ಕಾಗಲೀ, ಚಿತ್ರಿಸಿಕೊಳ್ಳುವುದಕ್ಕಾಗಲೀ ಸಾಧ್ಯವಿಲ್ಲ ಎಂಬುದು ಅದಕ್ಕೆ ಗೊತ್ತಾಗಿದೆ. ಬೀಜಗಣಿತವನ್ನು ಕಲಿಯಲು ಹೊರಡುವ ಮಗುವಿಗೆ ಮೊದಲನೆಯ ದಿನ x, y, z ಎಂಬುವು ಹೇಗೆ ಅರ್ಥರಹಿತವಾಗಿ ಕಾಣುತ್ತವೆಯೋ ಹಾಗೆಯೇ ಪ್ರೋಟಾನ್, ಎಲೆಕ್ಟ್ರಾನ್ ಮತ್ತು ನ್ಯೂಟ್ರಾನ್‌ಗಳು ಭೌತ ವಿಜ್ಞಾನಿಗೂ ಅರ್ಥರಹಿತವಾಗಿವೆ. ಸದ್ಯಕ್ಕೆ ನಮ್ಮ ದೊಡ್ಡ ಆಸೆಯೆಂದರೆ x, y, z ಎಂದರೆ ಏನು ಎಂಬುದನ್ನು ತಿಳಿದುಕೊಳ್ಳದೆಯೆ ಅವನ್ನು ಬಳಸುವ ವಿಧಾನಗಳನ್ನು*

*ಕಂಡುಹಿಡಿಯುವುದು. ಪರಿಣಾಮವೆಂದರೆ ಜ್ಞಾನದ ಪ್ರಗತಿ ಎಂಬುದು ಸದ್ಯಕ್ಕೆ ಐನ್‌ಸ್ಟೈನ್ ಹೇಳುವಂತೆ ಇಷ್ಟಕ್ಕೆ ಇಳಿದಿದೆ: "ಒಂದು ಅಗ್ರಾಹ್ಯದಿಂದ ಮತ್ತೊಂದು ಅಗ್ರಾಹ್ಯವನ್ನು ಹಿಂಡಿ ತೆಗೆಯುವುದು."*

## ೧೪. ಭೌತ ವಿಜ್ಞಾನ ಮತ್ತು ಮಾನವ ರಹಸ್ಯ

ಬಾಹ್ಯ ವಿಶ್ವದ ರಹಸ್ಯವನ್ನು ಭೇದಿಸುವ ಪ್ರಯತ್ನದಲ್ಲಿ ತೊಡಗಿರುವಾಗಲೇ ಆಧುನಿಕ ವಿಜ್ಞಾನಕ್ಕೆ ಇನ್ನೂ ಆಳವಾದ ಮತ್ತೊಂದು ರಹಸ್ಯವು ಸವಾಲಾಗಿದ್ದು ಅದನ್ನು ಬಿಡಿಸುವುದರಲ್ಲಿ ಅದು ಆಸಕ್ತವಾಗಿದೆ. ಆ ರಹಸ್ಯವೆಂದರೆ ಮಾನವನ ಅಂತರಂಗ ಜಗತ್ತು. ಅಂಗರಚನಾಶಾಸ್ತ್ರ, ಶರೀರ ವಿಜ್ಞಾನ, ನರವ್ಯೂಹ ರೋಗಶಾಸ್ತ್ರ, ಔಷಧಶಾಸ್ತ್ರ ಮತ್ತು ಸೂಕ್ಷ್ಮಜೀವವಿಜ್ಞಾನ (Microbiology), ವರ್ತನ ಮನೋವಿಜ್ಞಾನ ಇವುಗಳಲ್ಲಿ ಕ್ರಾಂತಿಕಾರಕ ಪ್ರಗತಿಯನ್ನು ಸಾಧಿಸಿರುವ ವಿಜ್ಞಾನಕ್ಕೆ ಮಾನವನ ಭೌತಿಕ ಆಯಾಮಗಳು ಯಾವ ಸವಾಲನ್ನೂ ಒಡ್ಡಲಾರವು. ಆದರೆ ಇವೆಲ್ಲ ಅವನಲ್ಲಿ ಆಳವಾದ ರಹಸ್ಯವೊಂದಿದೆ ಎಂಬುದನ್ನು ಸೂಚಿಸುತ್ತವೆ. ಇವು ಪ್ರಕೃತಿಯಲ್ಲೇ ಒಂದು ಹೊಸ ಆಯಾಮವಿದೆ ಎಂಬುದನ್ನೂ ತೋರಿಸುತ್ತವೆ. ಆ ಆಯಾಮ ಅದರ ಹೊರಗಿಗಿಂತ ಹೆಚ್ಚಾಗಿ ಅದರ ಒಳಗನ್ನು ಕುರಿತದ್ದು.

ಮಾನವನು ಕೇವಲ ಭೌತಿಕಕ್ಕೆ ಇಳಿಸಲಾರದ ಆಯಾಮಗಳನ್ನು ಹೊಂದಿದ್ದಾನೆ. ಭೌತಿಕ ಆಯಾಮಗಳು 'ಅನಾತ್ಮ' ಅಂಶಗಳು. ಅವು ಅವನ ದೇಹಕ್ಕೆ ಸಂಬಂಧಪಟ್ಟವು. ಅನಾತ್ಮದ ವಿಶಾಲ ಜಗತ್ತಿನಲ್ಲಿ ಅವು ಕೇವಲ ಧೂಳಿನ ಕಣ ಮಾತ್ರ. ಆದರೆ ಅವನಲ್ಲಿ ಅತಿಭೌತಿಕವಾದದ್ದು ಒಂದಿದೆ. ಅದನ್ನು ಭೌತಿಕ ವಲಯಕ್ಕೆ ತರುವುದು ಸಾಧ್ಯವಿಲ್ಲ. ಅವನು ಆತ್ಮ; ಅದು ಅವನ ಮೂಲಭೂತವೂ, ಪರಭಾರೆಗೊಳಿಸಲಾರದ್ದೂ ಆದ ಅಂಶ. ವಿಜ್ಞಾನವು ಮುಂದುವರಿಯಬೇಕಾದರೆ ಬಾಹ್ಯವಿಶ್ವದ ರಹಸ್ಯದ ಅಧ್ಯಯನವನ್ನು ಮೀರಿಸುವ ಅಧ್ಯಯನವನ್ನು ಕೈಗೊಳ್ಳಬೇಕಾಗುತ್ತದೆ. ಅದು ಮಾನವನ ಆತ್ಮದ ಅಧ್ಯಯನ. ಈ ಅಧ್ಯಯನ—ಮಾನವನ ಸ್ವ-ಪ್ರಜ್ಞೆ, ಅವನ ಪ್ರಜ್ಞಾವಲಯ, ಅವನ ಅಹಂ, ಅವನು ತಿಳಿಯುವವನೇ ಹೊರತು ತಿಳಿಯಬೇಕಾದ ವಸ್ತುವಲ್ಲ ಎಂಬುದು ಎಲ್ಲವನ್ನೂ ಒಳಗೊಳ್ಳುವಷ್ಟು ವಿಶಾಲವಾದದ್ದು. ಬಾಹ್ಯ ಪ್ರಕೃತಿಯನ್ನು ಅಧ್ಯಯನ ಮಾಡುವುದಕ್ಕಿಂತ ಹೆಚ್ಚು ವಿಸ್ತಾರವೂ ಸ್ವಾರಸ್ಯಕರವೂ, ಫಲಪ್ರದವೂ ಆದ ಕ್ಷೇತ್ರವು ವಿಜ್ಞಾನಕ್ಕೆ ಅಲ್ಲಿ ದೊರಕುತ್ತದೆ. ಪಶ್ಚಿಮ ದೇಶಗಳಲ್ಲಿ ವಿಜ್ಞಾನಿಗಳು ಈ ಮಹಾನ್ ನಿಗೂಢತೆಯತ್ತ ತಮ್ಮ ದೃಷ್ಟಿಯನ್ನು ಹರಿಸುತ್ತಿದ್ದಾರೆ. ಅದರ ವಿಷಯ, ಅಮೆರಿಕನ್ ವಿಜ್ಞಾನಿ ದಿವಂಗತ ಅಲೆಕ್ಸಿಸ್ ಕೆರೆಲನ ಮಾತುಗಳಲ್ಲಿ 'ಅಜ್ಞಾತ ಮಾನವ'. ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವವಿಜ್ಞಾನ ಮತ್ತು ವರ್ತನ ಮನೋವಿಜ್ಞಾನ ಮುಂತಾದ ವಿಜ್ಞಾನಶಾಖೆಗಳು ನಡೆಸುತ್ತಿರುವ 'ಜ್ಞಾತ ಮಾನವನ ಅಧ್ಯಯನಕ್ಕಿಂತ ಭಿನ್ನವಾದದ್ದು ಅದು.

## ೧೫. ಭೌತಶಾಸ್ತ್ರ ಮತ್ತು ಮಾನವ ರಹಸ್ಯ

ವಿಜ್ಞಾನ ಮತ್ತು ತಂತ್ರಜ್ಞಾನ, ಸಂಸ್ಕೃತಿ ಮತ್ತು ನಾಗರಿಕತೆ ಇವುಗಳನ್ನು ಸೃಷ್ಟಿಸಿರುವವನು ಮಾನವ; ಬಹುಶಃ ಇಂದು ತನ್ನ ನಾಗರಿಕತೆಯನ್ನು ನಾಶಗೊಳಿಸುತ್ತಿರುವವನೂ ಅವನೇ. ಅವನಿಗೆ ಸಂಬಂಧಿಸಿದ ಪ್ರತಿಯೊಂದೂ ನಿಗೂಢವಾದದ್ದೇ. ಆಧುನಿಕ ವೈಜ್ಞಾನಿಕ ಚಿಂತನೆಗೆ ಐನ್‌ಸ್ಟೈನ್‌ನ ಕೊಡುಗೆ ಏನು ಎಂಬುದನ್ನು ವಿವೇಚಿಸುತ್ತಾ ಲಿಂಕನ್ ಬಾರ್ನೆಟ್ ಹೀಗೆ ಹೇಳಿದ್ದಾನೆ (The Universe and Dr. Einstein, Mentor Edition pp. 126-127) :

*ವೈಜ್ಞಾನಿಕ ಚಿಂತನೆಯ' ವಿಷಯದಲ್ಲಿ ಒಂದು ಅಂಶ ಮನಮುಟ್ಟುವಷ್ಟು ಸ್ಪಷ್ಟವಾಗಿದೆ.*

ತನ್ನಿಂದ ಆಚೆಗಿರುವ ಒಂದು ರಹಸ್ಯದತ್ತ ಬೆರಳುತೋರಿಸದ ಯಾವ ಭೌತಿಕ ಜಗತ್ತಿನ ರಹಸ್ಯವೂ ಇಲ್ಲ. ಬುದ್ಧಿಯ ಎಲ್ಲ ಹೆದ್ದಾರಿಗಳೂ, ವಾದ ಊಹೆಗಳ ಎಲ್ಲ ಒಳದಾರಿಗಳೂ ಮಾನವ ಕೌಶಲವು ಸೇತುವೆ ಕಟ್ಟಲಾರದ ಮಹಾ ಪ್ರಪಾತವೊಂದಕ್ಕೆ ಅಂತಿಮವಾಗಿ ಒಯ್ಯುತ್ತವೆ. ಏಕೆಂದರೆ ಮಾನವನು ತನ್ನ ಇರವಿನ ಸ್ಥಿತಿ, ಮಿತಿ ಮತ್ತು ಪ್ರಕೃತಿಯೊಡನೆ ತೊಡರಿಕೊಂಡಿರುವುದು ಇವುಗಳಿಂದಲೇ ಬಂಧಿತನಾಗಿ ಹೋಗಿದ್ದಾನೆ. ತನ್ನ ದಿಗಂತಗಳನ್ನು ವಿಸ್ತರಿಸಿದಷ್ಟೂ ಈ ಸತ್ಯಾಂಶ ಅವನಿಗೆ ಹೆಚ್ಚು ಸ್ಪಷ್ಟವಾಗುತ್ತದೆ : "ಬದುಕಿನ ಈ ಮಹಾನಾಟಕದಲ್ಲಿ ನಾವು ಪ್ರೇಕ್ಷಕರೂ ಹೌದು, ನಟರೂ ಹೌದು." (ಇದು ಭೌತಶಾಸ್ತ್ರಜ್ಞ ನೆಯ್ಲ್ಸ್ ಬೋರ್ ಅವರ ಮಾತು.) ಹೀಗೆ ಮಾನವ ತನಗೆ ತಾನೇ ತನ್ನದೇ ಮಹಾ ರಹಸ್ಯವಾಗಿದ್ದಾನೆ. ತೆರೆಮುಚ್ಚಿದ ಯಾವ ವಿಸ್ತಾರವಾದ ಮಹಾ ವಿಶ್ವಕ್ಕೆ ಆತನು ನೂಕಲ್ಪಟ್ಟಿದ್ದಾನೆಯೋ ಆ ವಿಶ್ವವನ್ನು ಅವನು ಅರ್ಥಮಾಡಿಕೊಳ್ಳಲಾರ. ಕಾರಣ ತಾನೇ ತನಗೆ ಅರ್ಥವಾಗದೇ ಇರುವುದು. ತನ್ನ ಜೈವಿಕ ವಿಧಾನಗಳಲ್ಲಿ ಎಲ್ಲೋ ಅಲ್ಪಸ್ವಲ್ಪ ಮಾತ್ರ ಅವನಿಗೆ ಗೊತ್ತಾಗುತ್ತದೆ. ತನ್ನ ಸುತ್ತ ಇರುವ ಜಗತ್ತನ್ನು ಅರಿಯಲು, ವಿಚಾರಮಾಡಲು, ಕನಸು ಕಾಣಲು ತನಗಿರುವ ಅನುಪಮವಾದ ಶಕ್ತಿಯ ಬಗ್ಗೆ ಅವನ ತಿಳುವಳಿಕೆಯಂತೂ ಇನ್ನೂ ಕಡಮೆ. ತನಗಿರುವ ಅತ್ಯಂತ ಉದಾತ್ತವೂ ಅತ್ಯಂತ ರಹಸ್ಯವೂ ಆದ ಈ ಗುಣದ ಬಗ್ಗೆಯಂತೂ ಅವನ ತಿಳಿವಳಿಕೆ ಕಡಮೆ ಎನ್ನಬೇಕು ; ತನ್ನನ್ನು ತಾನು ಮೀರಿ ತಿಳಿವಳಿಕೆಯ ಕ್ರಿಯೆಯಲ್ಲೇ ತನ್ನನ್ನು ತಾನು ತಿಳಿದುಕೊಳ್ಳುವುದು.

ಅಥವಾ ಗಣಿತಜ್ಞ-ಅನುಭಾವಿ ಪ್ಯಾಸ್ಕಲ್‌ನ ಮಾತುಗಳಲ್ಲಿ ಹೀಗೂ ಹೇಳಬಹುದು : 'ದೇಶದ ದೃಷ್ಟಿಯಿಂದ ನೋಡಿದರೆ ವಿಶ್ವವು ನನ್ನನ್ನು ನುಂಗಿನೊಣೆಯುತ್ತದೆ, ಒಂದು ಸೂಜಿ ಮೊನೆಗೆ ಇಳಿಸಿಬಿಡುತ್ತದೆ. ಆದರೆ ಚಿಂತನೆಯ ಮೂಲಕ ನಾನು ವಿಶ್ವವನ್ನು ಅರ್ಥಮಾಡಿಕೊಳ್ಳಬಲ್ಲೆ.'

### ೧೬. ಜೀವಶಾಸ್ತ್ರ ಮತ್ತು ಮಾನವ ರಹಸ್ಯ

ವಿಜ್ಞಾನವು ಮಾನವನನ್ನು ಆಳವಾಗಿ ಅಧ್ಯಯನ ಮಾಡಬೇಕು ಎಂದು ವಾದಿಸುತ್ತಾ ಪ್ರಖ್ಯಾತ ನಷ್ಟವಂಶ ಜೀವಿಶಾಸ್ತ್ರಜ್ಞ ಟೆಲ್‌ಹಾರ್ಡ್ ಡ ಚಾರ್ಡಿನ್ (The Phenomenon of Man, Collins, London 1959, pp. 35-36) ಹೇಳುತ್ತಾನೆ :

> ಮಾನವಶಾಸ್ತ್ರಜ್ಞರು ಅಥವಾ ನ್ಯಾಯಶಾಸ್ತ್ರಜ್ಞರು ಮಾನವನನ್ನು ಅವನ ಮಿತವಲಯದಲ್ಲಿ ಅಧ್ಯಯನ ಮಾಡಿದಾಗ ಅವನು ಪುಟ್ಟ, ಸುರುಟಿಕೊಂಡ ಜೀವಿಯಾಗಿ ಕಾಣುತ್ತಾನೆ. ಅವನ ಉತ್ಪ್ರೇಕ್ಷಿತ ವ್ಯಕ್ತಿತ್ವವು ಅವನು ಯಾವ ಪೂರ್ಣಕ್ಕೆ ಸೇರಿದವನಾಗಿದ್ದಾನೆಯೋ ಅದನ್ನು ಮುಚ್ಚಿಬಿಡುತ್ತದೆ; ಅವನನ್ನು ನೋಡುತ್ತಿರುವಂತೆ, ನಮ್ಮ ಮನಸ್ಸು ಪ್ರಕೃತಿಯನ್ನು ಚೂರುಚೂರಾಗಿ ಒಡೆಯುವಂತೆ ಮಾಡಲು ಪ್ರೇರೇಪಿಸುತ್ತದೆ. ಅದರ ಪರಸ್ಪರ ಸಂಬಂಧಗಳನ್ನು ಅಮೇಯವಾದ ಕ್ಷಿತಿಜಗಳನ್ನು ಮರೆಯುವಂತೆ ಮಾಡುತ್ತದೆ, ಮಾನವನೇ ಸೃಷ್ಟಿಯ ಕೇಂದ್ರ ಎಂಬ ವಾದದಲ್ಲಿ ಏನೇನು ದೋಷಗಳಿವೆಯೋ ಅವುಗಳ ಕಡೆಗೆ ನಾವು ಓಲುವಂತೆ ಮಾಡುತ್ತದೆ. ಇದೇ ವಿಜ್ಞಾನಿಗಳು ಮಾನವನನ್ನು ಅವನ ದೇಹದ ಮೂಲಕವಲ್ಲದೆ ಬೇರೆ ಯಾವುದೇ ವಿಧದಲ್ಲೂ ವೈಜ್ಞಾನಿಕ ಪ್ರಯೋಗದ ವಸ್ತುವನ್ನಾಗಿ ನೋಡಲು ನಿರಾಕರಿಸುವಂತೆ ಮಾಡುವಂಥದು.
>
> ವಸ್ತುಗಳ ಒಳಗು ಹೊರಗುಗಳೆರಡನ್ನೂ—ಮನಸ್ಸು ಮತ್ತು ಭೌತವಸ್ತು ಎರಡನ್ನೂ ಗಮನಕ್ಕೆ ತೆಗೆದುಕೊಳ್ಳದೇ ಹೋದರೆ, ವಿಶ್ವದ ವ್ಯಾಖ್ಯಾನ—ಪ್ರತ್ಯಕ್ಷ ಪ್ರಮಾಣವಾದವೂ ಸೇರಿದಂತೆ ಅಸಮರ್ಪಕವಾದುದು ಎಂಬುದನ್ನು ತಿಳಿದುಕೊಳ್ಳುವ ಕಾಲ ಬಂದಿದೆ. ನಿಜವಾದ ಭೌತಶಾಸ್ತ್ರ ಯಾವುದೆಂದರೆ ಒಂದು ದಿನ ಈ ಜಗತ್ತಿನ ಸುಸಂಬದ್ಧ ಚಿತ್ರದಲ್ಲಿ ಸಮಗ್ರ ಮಾನವನನ್ನು ಯಾವುದು ಒಳಗೊಳ್ಳುತ್ತದೆಯೋ ಅದು.

ಭಾರತದ ಉಪನಿಷತ್ತುಗಳು ಸಾಂತ ಮಾನವನು ಒಳಗಿನ ಅನಂತ ಮತ್ತು ಅಮರ ಮಾನವನ ಹೊರಗಿನ ಚಿಪ್ಪು ಅಥವಾ ಪದರ ಎಂಬುದನ್ನು ಕಂಡುಹಿಡಿದುವು. ಅವನ ಸಾಂತತೆಯಲ್ಲಿ ಅನಂತಾನಂತ ಬದಲಾವಣೆಗಳುಳ್ಳ ಸುತ್ತಣ ಜಗತ್ತಿನೊಳಕ್ಕೆ ಅವನೂ, ಅವನೊಳಕ್ಕೆ ಆ ಸುತ್ತಣ ಜಗತ್ತೂ ಪ್ರವೇಶಿಸುತ್ತದೆ. ಇದರಲ್ಲಿ ಅವನು ಅನಂತ ದೇಶದಲ್ಲಿ ಒಂದು ಧೂಳಿನ ಕಣ. ಅದರಲ್ಲಿ ಮೇಲೆ ಉದ್ಧರಿಸಿದ ಪ್ಯಾಸ್ಕಲನ ಮಾತುಗಳಲ್ಲಿ ಹೇಳುವುದಾದರೆ 'ಈ ವಿಶ್ವವು ನನ್ನನ್ನು ಸುತ್ತಿ ಒಂದು ಸೂಜಿ ಮೊನೆಗೆ ಇಳಿಸಿಬಿಡುತ್ತದೆ.' ಆದರೆ ತನ್ನ ಅನಂತ ಅವಿನಾಶಿ ಆತ್ಮದ ಆಯಾಮದಲ್ಲಿ ಅವನು. ವಿಶ್ವವನ್ನು ಅರಿಯುತ್ತಾನೆ, ಅಷ್ಟೇ ಏಕೆ ಅದನ್ನು ಮೀರಿ ಹೋಗುತ್ತಾನೆ. ಮಾನವನ ಅಂತರಂಗ ಮುಖದ ಈ ಅದ್ಭುತ ಆಯಾಮವು, ಮತ್ತು ಅವನ ಮೂಲಕ ಅವನ ಸುತ್ತಣ ವಿಶ್ವದ ಆಯಾಮವು ಆಧುನಿಕ ವಿಜ್ಞಾನದ ಅರಿವಿಗೆ ಕ್ರಮವಾಗಿ ಗೋಚರವಾಗುತ್ತದೆ.

ಇದುವರೆಗೆ ವಿಜ್ಞಾನವು ಹೊರಗಿನಿಂದಲ್ಲದೆ ಬೇರೆ ರೀತಿಯಾಗಿ ನೋಡಲು ಪ್ರಯತ್ನಿಸಿದೆಯೇ ಎಂಬ ಅರ್ಥಪೂರ್ಣವಾದ ಪ್ರಶ್ನೆಯನ್ನು ಕೇಳುತ್ತಾ ಚಾರ್ಡಿನ್ ಹೇಳುತ್ತಾನೆ (ಅಲ್ಲೇ ಪು. ೫೫) :

*ಭೌತವಿಜ್ಞಾನಿಯ ದೃಷ್ಟಿಯಲ್ಲಿ, ಕನಿಷ್ಠಪಕ್ಷ ಇಲ್ಲಿಯವರೆಗೆ ವಸ್ತುಗಳ ಹೊರಗನ್ನು ಬಿಟ್ಟರೆ ನ್ಯಾಯಸಮ್ಮತವಾಗಿ ಬೇರೇನೂ ಇಲ್ಲವೇ ಇಲ್ಲ. ಏಕಾಣುಜೀವಿ ಶಾಸ್ತ್ರಜ್ಞನು ತನ್ನ ಪ್ರಯೋಗ ಶಾಲೆಯ ಪರೀಕ್ಷಕ ದ್ರವ್ಯವನ್ನಾಗಿ ಮಾತ್ರ ಜೀವಾಣುರಾಶಿಯನ್ನು (ಕೆಲವು ಕಠಿಣವಾದ ಪ್ರಸಂಗಗಳಲ್ಲಿ ಹೊರತು) ಕಾಣುತ್ತಾನೆಯಾಗಿ ಇದೇ ಬೌದ್ಧಿಕ ಮನೋಭಾವವನ್ನು ಒಪ್ಪುತ್ತಾನೆ ಎಂದಾಯಿತು. ಆದರೆ ಸಸ್ಯ ಜಗತ್ತಿನಲ್ಲಿ ವಿಷಯ ಇನ್ನೂ ಕಠಿಣವಾಗುತ್ತದೆ. ಕೀಟಗಳು ಅಥವಾ ಲೋಳೆ ಮೀನು ಮುಂತಾದುವುಗಳ ನಡತೆಯನ್ನು ಅಧ್ಯಯನ ಮಾಡುತ್ತಿರುವ ಜೀವವಿಜ್ಞಾನಿಗಂತೂ ಅದರ ಬಗ್ಗೆ ಹೇಳುವುದು ಜೂಜಾಡಿದಂತೆಯೇ ಸರಿ. ಕಶೇರುಕಗಳ ವಿಷಯದಲ್ಲಿ ಏನು ಹೇಳುವುದೂ ವ್ಯರ್ಥ. ಇನ್ನು ಕೊನೆಯದಾಗಿ ಮನುಷ್ಯನ ವಿಷಯಕ್ಕಂತೂ ಈ ದೃಷ್ಟಿ ಪೂರ್ತಿಯಾಗಿ ಕುಸಿದು ಬೀಳುತ್ತದೆ. ಏಕೆಂದರೆ "ಅಂತರಂಗದ್ದು" ಒಂದಿದೆ ಎಂಬುದನ್ನು ತಪ್ಪಿಸಿಕೊಳ್ಳುವಂತಿಲ್ಲ. ಏಕೆಂದರೆ ಅದು ಪ್ರತ್ಯಕ್ಷಾನುಭೂತಿಯ ವಸ್ತು ಮತ್ತು ಎಲ್ಲಾ ಜ್ಞಾನದ ತಿರುಳು".*

ಭಾರತದ ಬಹುಜನರಿಗೆ ಹೇಗೋ ಹಾಗೆ ಹೊರಜಗತ್ತಿಗೆ ಭಾರತವು ಶತಮಾನಗಳ ಹಿಂದಿನಿಂದ ಇಂದಿನವರೆಗೂ ತನ್ನ ಉಪನಿಷತ್ತು, ಗೀತೆಗಳಲ್ಲಿ ಏನನ್ನು ಬೆಳೆಸಿಕೊಂಡು ಬಂದಿತ್ತು ಎಂಬುದು ತಿಳಿಯದು. ಅದು ಜೂಲಿಯನ್ ಹಕ್ಸ್ಲೆ ಕರೆದಂತೆ 'ಮಾನವ ಸಾಧ್ಯತೆಗಳ ವಿಜ್ಞಾನ'. ವೇದಾಂತ ಎನ್ನಿ, ಯೋಗ ಎನ್ನಿ, ಅಧ್ಯಾತ್ಮ ವಿದ್ಯೆ ಎನ್ನಿ, ವಿದ್ಯಾ ಎನ್ನಿ, ವಿಜ್ಞಾನ ಎನ್ನಿ ಅದು ಮಾನವನ ಸಮಗ್ರ ಅಧ್ಯಯನ; ಎಲ್ಲ ಕರ್ಮ ಮತ್ತು ಧ್ಯಾನಗಳನ್ನೊಳಗೊಂಡ ಸಮಗ್ರ ಅಧ್ಯಾತ್ಮದ ತಂತ್ರ. ಭೌತವಿಜ್ಞಾನಿಗಳು ಮತ್ತು ಅಧ್ಯಾತ್ಮ ವಿಜ್ಞಾನದ ನಡುವೆ, 'ನಮಗೆ ತಿಳಿದ ಮಾನವ' ಮತ್ತು 'ನಮಗೆ ತಿಳಿಯದ ಮಾನವ'ನ ನಡುವೆ ಭೌತಮಾನವ ಮತ್ತು ಅಧ್ಯಾತ್ಮ ಮಾನವನ ನಡುವೆ ಭಾರತೀಯ ದರ್ಶನ ಯಾವ ಘರ್ಷಣೆಯನ್ನು ಕಾಣಲಿಲ್ಲ.

ಚಾರ್ಡಿನ್ ಹೀಗೆ ಉಪಸಂಹಾರ ಮಾಡುತ್ತಾನೆ (ಅಲ್ಲೇ ಪು. ೫೬) :

*ಜೀವಿಗಳ ಹೃದಯದಲ್ಲಿ, ಒಂದು ಬಿರುಕಿನ ಮೂಲಕ ನೋಡಿದರೆ ಹೇಗೋ ಹಾಗೆ ಒಳಗಿನದು ಎಂಬುದೊಂದು ನಮ್ಮ ಚೇತನದ ಆಳದಲ್ಲಿ ಕಾಣುತ್ತದೆ ಎಂಬುದನ್ನು ಅಲ್ಲಗಳೆಯುವುದು ಅಸಾಧ್ಯ. ಈ 'ಒಳಗಿನದು' ಎಂಬುದು ಒಂದಲ್ಲ ಒಂದು ಪ್ರಮಾಣದಲ್ಲಿ ಪ್ರಕೃತಿಯಲ್ಲಿ ಯಾವಾಗಲೂ ಎದ್ದು ಕಾಣುತ್ತಿದೆ ಎಂಬುದನ್ನು ಖಾತರಿಪಡಿಸಲು ಅಷ್ಟು ಸಾಕು.*

*ವಿಶ್ವದ ವಸ್ತುವಿನ ಪ್ರತಿಯೊಂದು ಬಿಂದುವಿಗೂ ತನ್ನದೇ ಆದ ಒಂದು ಒಳಮುಖವು ಇರುವುದರಿಂದ ಅದರ ಒಟ್ಟು ರಚನೆಯಲ್ಲಿ ಎರಡು ಮುಖಗಳಿರುವುದು ಅತ್ಯಾವಶ್ಯಕ. ಅದು ಕಾಲದೇಶಗಳ ಪ್ರತಿಯೊಂದು ಕ್ಷೇತ್ರದಲ್ಲೂ—ಉದಾಹರಣೆಗೆ ಕಣಗಳ ರಚನೆಯ ವಿಷಯದಲ್ಲಿ ಹೇಗೋ ಹಾಗೆ—ಎರಡೂ ಮುಖಗಳನ್ನು ಹೊಂದಿರುವುದು ಅವಶ್ಯಕ; ವಸ್ತುಗಳ ಹೊರಮುಖ ದೊಂದಿಗೆ ಒಳಮುಖವೂ ಸಮವ್ಯಾಪ್ತಿಯಾಗಿ ಇದ್ದೇ ಇದೆ.*

ಪ್ರಕೃತಿಯ ಅನನ್ಯ ಸೃಷ್ಟಿ ಎಂದರೆ ಮಾನವ. ನಮ್ಮ ಜನ, ಅದರಲ್ಲೂ ನಮ್ಮ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಅವರ ವಿಮರ್ಶಾದೃಷ್ಟಿಯನ್ನು, ಆಸಕ್ತಿಯನ್ನು, ತನಿಖೆಯನ್ನು, ಅವನ ಕಡೆ ಹರಿಸಬೇಕು. ತಮ್ಮ ಸಂಶೋಧನೆಯ ಬೆಳಕನ್ನು ಅವನ ಮೇಲೆ ಚೆಲ್ಲಬೇಕು. ಅವನು ಎಂದರೆ ಮಾನವ ನಮ್ಮ ಭವ್ಯ ರಾಷ್ಟ್ರೀಯ ಪರಂಪರೆಯ ಆಕರ್ಷಕ, ಅಮೂಲ್ಯ ಭಾಗ. ಪ್ರಕೃತಿಯ ಅಂತರಂಗದ ಆಯಾಮ ಅವನ ಮೂಲಕ ವ್ಯಕ್ತವಾಗಿದೆ. ಮಾನವನು ತನ್ನ ಆಧ್ಯಾತ್ಮಿಕ ಶಕ್ತಿಯನ್ನು ಒಳಗಿನಿಂದ ಪಡೆದುಕೊಳ್ಳದೇ ಹೋದರೆ ತನ್ನನ್ನು ತಾನು ದೃಢಗೊಳಿಸಿಕೊಳ್ಳಲು ಹೊರಗಿನ ಶಕ್ತಿಗಳನ್ನು ಹೆಚ್ಚು ಹೆಚ್ಚಾಗಿ ಅವಲಂಬಿಸಬೇಕಾಗುತ್ತದೆ. ಆರೋಗ್ಯವನ್ನು ರಕ್ಷಿಸುವ ದೃಷ್ಟಿಯಿಂದ ಹಾಗೆ ಹೊರಗಿನ ಶಕ್ತಿಗಳನ್ನು ಅವಲಂಬಿಸಬೇಕಾದರೆ ಅದನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಅದನ್ನೇ ದಿನನಿತ್ಯದ ಜೀವನ ವಿಧಾನವನ್ನಾಗಿ ಮಾಡಿಕೊಂಡರೆ ಆಗ ಅದು ಮಾನವ ಜೀವನವನ್ನು ಎಲ್ಲ ಆಧ್ಯಾತ್ಮಿಕ ಮೌಲ್ಯಗಳಿಂದ ಹೊರತುಗೊಳಿಸಿದಂತಾಗುತ್ತದೆ. ಅಷ್ಟೇ ಅಲ್ಲ ಮಾನವ ಭವಿಷ್ಯವನ್ನು ಅಣುಜೀವ ವಿಜ್ಞಾನದಂತಹ ಶಿಲ್ಪ ತಂತ್ರಗಳಿಗೆ ಒಪ್ಪಿಸಿ ಮಾನವ ಸಮಾಜವನ್ನು ಮೃಗಪ್ರಪಂಚವನ್ನಾಗಿ ಮಾಡಿದಂತಾಗುತ್ತದೆ. ಅಂತಹ ಭೀಕರ ಪರಿಣಾಮಗಳು ಮಾನವನ ಮುಂದೆ ಇವೆ. ಅದಕ್ಕೆ ಕಾರಣ ಭೌತಶಾಸ್ತ್ರಗಳು ಮತ್ತು ತಾಂತ್ರಿಕತೆಯ ಮೇಲೆ ಸಂಪೂರ್ಣವಾಗಿ ಅವಲಂಬನ ಗೊಂಡಿರುವುದು. ಅದು ಜಿ. ರೆಟ್ರೆ ಟೈಲರ್‌ರವರ 'ದಿ ಬೈಯಾಲಾಜಿಕಲ್ ಟೈಂಬಾಂಬ್' ಮುಂತಾದ ಪುಸ್ತಕಗಳ ಕರಾಳ ಶೀರ್ಷಿಕೆಗಳಲ್ಲಿ ವ್ಯಕ್ತವಾಗುತ್ತದೆ. ಹಾಗೆ ಮಾಡುವ ವಿಜ್ಞಾನ ವಿಜ್ಞಾನವಾಗಿ ಉಳಿಯುವುದಿಲ್ಲ, ಬದಲಿಗೆ ಅಜ್ಞಾನವಾಗುತ್ತದೆ !

ನಮ್ಮ ಪರಂಪರೆಯನ್ನು ಪರಿಶೀಲಿಸುವ, ಅದನ್ನು ಕುರಿತಂತೆ ಸಂಶೋಧನೆಗಳನ್ನು ಮುಂದುವರಿಸುವ ಪ್ರಯತ್ನಗಳಲ್ಲಿ ಮುಂದುವರಿದಂತೆ, ನಮ್ಮ ದೇಶದ ಮಾನವ ಪರಿಸ್ಥಿತಿಯ ವಿಷಯದಲ್ಲಿ ನಮಗೊಂದು ಹಿಡಿತ ಸಿಕ್ಕುತ್ತದೆ. ಹಾಗೆ ಮಾಡಲು ಮಾನವನನ್ನು ಕುರಿತಂತೆ ನಮ್ಮಲ್ಲಿರುವ ದರ್ಶನದ ಬೆಳಕಿನಲ್ಲಿ ಶಿಕ್ಷಣದ ಗುರಿಗಳನ್ನೂ ವಿಧಾನಗಳನ್ನೂ ಪುನರ್‌ರೂಪಿಸಬೇಕು. ಪರಿಣಾಮವಾಗಿ ಭೌತಶಾಸ್ತ್ರಗಳು ಮತ್ತು ಅಧ್ಯಾತ್ಮಶಾಸ್ತ್ರ ಇವುಗಳ ನಡುವೆ ಸುಂದರ ಸಮನ್ವಯ ಏರ್ಪಡುತ್ತದೆ. ಮತ್ತು ಬಾಹ್ಯ ಹಾಗೂ ಆಂತರಿಕ, ಪ್ರಮಾಣ ಮತ್ತು ಗುಣ ಎರಡೂ ದೃಷ್ಟಿಗಳ ಸಮಗ್ರ ಮಾನವ ಸಫಲತೆ ಸಾಧ್ಯವಾಗುತ್ತದೆ.

ಪ್ರಖ್ಯಾತ ನರವ್ಯೂಹ ತಜ್ಞ ಸರ್ ಚಾರ್ಲ್ಸ್ ಷೆರಿಂಗ್ಟನ್ ಹೀಗೆ ಹೇಳುತ್ತಾನೆ (Man on His Nature, Pelican Edition p.38) :

*ಇಂದು ಪ್ರಕೃತಿಯು ಎಂದಿಗಿಂತ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದೆ. ನಮ್ಮನ್ನು ಎಂದಿಗಿಂತ ಹೆಚ್ಚಾಗಿ, ಹೆಚ್ಚು ಅರ್ಥಪೂರ್ಣವಾಗಿ ಒಳಗೊಳ್ಳುತ್ತಿದೆ. ಬೇಕಾದರೆ ನೀವು ಅದನ್ನು ಯಂತ್ರ ಎನ್ನಬಹುದು. ಆದರೆ ಅದು ಭಾಗಶಃ ಮಾನಸೀಕರಣಗೊಂಡ ಯಂತ್ರ. ನಮ್ಮನ್ನು ಒಳಗೊಂಡಿರುವುದರಿಂದ ಮನಸ್ಸಿನ ಮಾನವಗುಣಗಳನ್ನು ಹೊಂದಿರುವ ಯಂತ್ರ. ಅದು ಶಕ್ತಿಯ ಮಾನಸಿಕ ಮತ್ತು ಭೌತಿಕ—ಹರಿಯುತ್ತಿರುವ ಪ್ರವಾಹ. ಮಾನವ ನಿರ್ಮಿತ ಯಂತ್ರಗಳಂತಲ್ಲದೆ ಅದು ಪ್ರೇರಿತವಾಗುತ್ತಿರುವುದು ಭಾವನೆಗಳಿಂದ, ಬಯಕೆಗಳಿಂದ, ಪ್ರೇಮ, ಅನಿಚ್ಛೆಗಳಿಂದ.*

೧೭. ವಿಕಾಸ : ಜೈವಿಕದ ವಿರುದ್ಧ ಮನೋ–ಸಾಮಾಜಿಕ

'ವಿಕಾಸ ಸಂಬಂಧಿ ದರ್ಶನ' ಎನ್ನುವ ವಿಷಯದ ಮೇಲೆ ಸರ್ ಜೂಲಿಯನ್ ಹಕ್ಸ್ಲೇ ೧೯೫೯ರಲ್ಲಿ ಒಂದು ಉಪನ್ಯಾಸ ನೀಡಿದರು. ಸಂದರ್ಭ : ಷಿಕಾಗೋ ವಿಶ್ವವಿದ್ಯಾನಿಲಯವು 'ಡಾರ್ವಿನ್ನನ ಅನಂತರ ವಿಕಾಸ' ಎಂಬ ವಿಷಯದ ಮೇಲೆ ಏರ್ಪಡಿಸಿದ್ದ ಉಪನ್ಯಾಸ ಮಾಲೆಯ ಸಮಾಪ್ತಿಗೋಷ್ಠಿ. ಅದು ಏರ್ಪಾಡಾಗಿದ್ದುದು ಡಾರ್ವಿನ್ನನ Origin of Species ಪ್ರಕಟಣೆಯ ಶತಮಾನೋತ್ಸವದ ಆಚರಣೆಗಾಗಿ. ಆಗ ಹಕ್ಸ್ಲೇ ಹೇಳಿದರು (Evolution after Darwin, Vol III. pp. 251-52) :

*ಮಾನವನ ವಿಕಾಸ ಜೀವನಕ್ಕೆ ಸಂಬಂಧಪಟ್ಟದ್ದಲ್ಲ ಸಾಮಾಜಿಕ ಮನೋವಿಶ್ಲೇಷಣೆಗೆ ಸಂಬಂಧಿಸಿದ್ದು. ಅದು ಕೆಲಸ ಮಾಡುವುದು ಸಾಂಸ್ಕೃತಿಕ ಪರಂಪರೆಯ ಉಪಕರಣದ ಮೂಲಕ. ಅದರಲ್ಲಿ ಸಂಚಿತ ಸ್ವ-ಸೃಷ್ಟಿಯೂ, ಮಾನಸಿಕ ಚಟುವಟಿಕೆಗಳೂ ಮತ್ತು ಅವುಗಳ ಉತ್ಪನ್ನಗಳ ಸ್ವ-ಪರಿವರ್ತನೆಗಳೂ ಸೇರಿವೆ. ಆದೇ ಪ್ರಕಾರ ಮಾನವ ವಿಕಾಸದ ಪ್ರಧಾನ ಘಟ್ಟಗಳು ಸಾಧಿತ ವಾಗಿರುವುದು ಮಾನಸಿಕ ವ್ಯವಸ್ಥೆಯ, ಜ್ಞಾನ, ಭಾವನೆಗಳು, ನಂಬಿಕೆಗಳು ಇವುಗಳ ಪ್ರಧಾನವಾದ ಮಾದರಿಗಳಲ್ಲಿ ಪಡೆದ ಸಿದ್ಧಿಗಳಿಂದ. ಅವು ದೇಹ ವಿಜ್ಞಾನ ಅಥವಾ ಜೀವ ವಿಜ್ಞಾನಕ್ಕೆ ಸಂಬಂಧಪಟ್ಟ ವ್ಯವಸ್ಥೆಗಿಂತ ಹೆಚ್ಚಾಗಿ ಭಾವನೆಗಳಿಗೆ ಸಂಬಂಧಿಸಿದ್ದು.*

*ಚಿಂತನೆಯ ಎಲ್ಲ ಪ್ರಧಾನ ವ್ಯವಸ್ಥೆಗಳೂ ಇರವಿನ ತತ್‌ಕ್ಷಣದ ಸಮಸ್ಯೆಗಳಿಗೆ ಸಂಬಂಧಿಸಿದ್ದಂತೆಯೇ ಅಂತಿಮ ಸಮಸ್ಯೆಗಳಿಗೂ ಸಂಬಂಧಿಸಿರುತ್ತವೆ. ಅಥವಾ ಹೀಗೆ ಹೇಳಬಹುದು.*

*ತತ್‌ಕಾಲದ ಚಿಂತನೆಯ ರೂಪಿಸಬಹುದಾದ ಅಥವಾ ಕಾಣಬಹುದಾದ ಸಮಸ್ಯೆಗಳಲ್ಲಿ ಕೇವಲ ಅಂತಿಮವಾದುದಕ್ಕೆ ಸಂಬಂಧಿಸಿದ ಸಮಸ್ಯೆಗಳು ಅವು. ಅವೆಲ್ಲವೂ ಮಾನವ, ಅವನು ವಾಸಿಸುತ್ತಿರುವ ಜಗತ್ತು, ಅಲ್ಲಿ ಅವನ ಸ್ಥಾನ ಮತ್ತು ಅವನು ವಹಿಸುತ್ತಿರುವ ಪಾತ್ರ ಇವನ್ನು ಕುರಿತು ಸ್ವಲ್ಪಮಟ್ಟಿನ ವ್ಯಾಖ್ಯಾನವನ್ನು ನೀಡುತ್ತವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಮಾನವತೆಯ ಭವಿಷ್ಯ ಮತ್ತು ಮಹತ್ವ ಇವನ್ನು ಕುರಿತು ಅರ್ಥವಾಗಬಹುದಾದ ಒಂದು ಚಿತ್ರವನ್ನು ಅವು ನೀಡುತ್ತವೆ.*

ಮುಂದುವರಿದು ಹಕ್ಸ್ಲೇ ಮಾನವನ ಮಟ್ಟಿಗೆ ಹೇಳುತ್ತಾ ವಿಕಾಸವು ಗುಣಾತ್ಮಕವಾಗುತ್ತದೆ ಎನ್ನುತ್ತಾರೆ (ಅಲ್ಲೇ ಸಂ. III. pp. 261-62) :

*ಅದು (ವಿಕಾಸ ದರ್ಶನವು) ತೋರಿಸುವುದು ಇದನ್ನು : ಭೌತದ್ರವ್ಯಕ್ಕಿಂತ ಮನಸ್ಸು ಉನ್ನತವಾದದ್ದು, ಗುಣವು ಪ್ರಮಾಣಕ್ಕಿಂತ ಶ್ರೇಷ್ಠವಾದದ್ದು.*

"Emergence of Darwinism" ಎನ್ನುವ ತಮ್ಮ ಪ್ರಬಂಧದಲ್ಲಿ ಹಕ್ಸ್ಲೇಯು ವಿಕಾಸ ಪ್ರಕ್ರಿಯೆಯ ಗುರಿ, ಮಾನವನಿಗೆ ಸಂಬಂಧಿಸಿದಂತೆ "ಸಿದ್ಧಿ"ಯನ್ನು ಪಡೆಯುವುದು ಎನ್ನುತ್ತಾನೆ. (ಅಲ್ಲೇ p. 20).

*ನಮ್ಮ ಈಗಿನ ಜ್ಞಾನದ ಬೆಳಕಿನಲ್ಲಿ ನೋಡುವುದಾದರೆ ಮಾನವನ ಸಮಗ್ರ ಗುರಿ ಹೇಗೋ ಉಳಿದುಕೊಳ್ಳುವುದಲ್ಲ, ಸಂಖ್ಯೆಯಲ್ಲಿ ಹೆಚ್ಚುತ್ತಾ ಹೋಗುವುದೂ ಅಲ್ಲ, ವ್ಯವಸ್ಥೆಯ ಸಂಕೀರ್ಣತೆಯನ್ನು ಹೆಚ್ಚುಮಾಡಿಕೊಳ್ಳುವುದೂ ಅಲ್ಲ, ಅಥವಾ ತನ್ನ ಸುತ್ತಣ ಆವರಣದ ಮೇಲೆ ಹತೋಟಿಯನ್ನು ಹೆಚ್ಚಿಸಿಕೊಳ್ಳುವುದೂ ಅಲ್ಲ ; ಅದು ಹೆಚ್ಚಿನ ಪೂರ್ಣತೆಯ ಸಾಧನೆ ಸಾಮೂಹಿಕವಾಗಿ ಮಾನವ ವಂಶಗಳು ಹೆಚ್ಚಿನ ಸಾಧ್ಯತೆಗಳನ್ನು ಪೂರ್ಣವಾಗಿ ಪಡೆದುಕೊಳ್ಳುವುದು, ಹೆಚ್ಚು ಹೆಚ್ಚು ವ್ಯಕ್ತಿಗಳು ಇವನ್ನು ಸಾಧಿಸುವುದು.*

ಮಾನವ ಸಾಧ್ಯತೆಗಳ ವಿಜ್ಞಾನವನ್ನು ಬೆಳೆಸಬೇಕು ಎಂಬುದನ್ನು ಬಯಸುತ್ತಾ ಹಕ್ಸ್ಲೆ ಹೀಗೆ ಉಪಸಂಹಾರ ಮಾಡುತ್ತಾರೆ (ಅಲ್ಲೇ Vol. I p. 21) :

*ಮಾನವನ ಅಂತಿಮ ಅಥವಾ ಮುಖ್ಯ ಗುರಿ ಹೆಚ್ಚಿನ ಸಾಫಲ್ಯ ಸಾಧನೆ ಎಂಬುದನ್ನು ಒಪ್ಪಿದರೆ ನಮ್ಮ ಮುಂದಿರುವ ಮನೋ-ಸಾಮಾಜಿಕ ವಿಕಾಸದ ದೀರ್ಘವಾದ ಹಾದಿಯನ್ನು ಕ್ರಮಿಸಲು ನಮಗೆ ಅಗತ್ಯವಾಗುವುದು ಮಾನವ ಸಾಧ್ಯತೆಗಳ ವಿಜ್ಞಾನ.*

## ೧೮. ಮನೋ–ಸಾಮಾಜಿಕ ವಿಕಾಸ

ಮನೋ-ಸಾಮಾಜಿಕ ವಿಕಾಸ ಎಂದರೇನು ? ಜೀವಂತ ಕೋಶದಿಂದ ಹಿಡಿದು ಮಾನವನವರೆಗೆ, ಜೈವಿಕ ವಿಕಾಸದ ಪ್ರೇರಕಶಕ್ತಿ ಎಂದರೆ ಜೈವಿಕ ತೃಪ್ತಿಗಳು, ಸಂಖ್ಯಾಭಿವೃದ್ಧಿ ಮತ್ತು ಜೈವಿಕ ಉಳಿವು. ಆದರೆ, ಆಧುನಿಕ ಜೀವ ವಿಜ್ಞಾನದ ಪ್ರಕಾರ ಮಾನವನು ಕಾಣಿಸಿಕೊಂಡಮೇಲೆ ಮೇಲಿನವು ಪ್ರಧಾನವಾಗದೆ ಗೌಣವಾದುವು ; ಸಫಲತೆ ಎಂಬುದೇ ಪ್ರಧಾನ ಪ್ರೇರಕಶಕ್ತಿಯಾಯಿತು ; ಮಾನವನ ಹಂತದಲ್ಲಿ ವಿಕಾಸವೇ ಪ್ರಜ್ಞಾಪೂರ್ವಕವೂ, ಉದ್ದೇಶ ಪೂರ್ವಕವೂ, ಗುರಿಯತ್ತ ಗಮನವುಳ್ಳದ್ದೂ ಆಗುತ್ತದೆ. ಮನುಷ್ಯ-ಪೂರ್ವ ಘಟ್ಟಗಳಂತೆ ಕುರುಡು ಪ್ರಕ್ರಿಯೆಗಳಲ್ಲ ಅವು. ಈ ಕ್ರಾಂತಿಕಾರಕ ಬದಲಾವಣೆಯು ಮಾನವನ ಮಿದುಳು ಪೂರ್ಣವಾಗಿ ಬೆಳೆದದ್ದರಿಂದ ಆಗಿದ್ದು. ಪರಿಣಾಮವಾಗಿ ವಿಕಾಸ ಪ್ರಕ್ರಿಯೆಯೇ ಕ್ರಾಂತಿಕಾರಕವಾದ ಬದಲಾವಣೆಯನ್ನು ಹೊಂದಿತು ; ಜೈವಿಕ ವಿಕಾಸವಾಗಿದ್ದದ್ದು ಮನೋ-ಸಾಮಾಜಿಕ ವಿಕಾಸವಾಗುತ್ತದೆ. ಪ್ರಕೃತಿಯು ಯಾವ ಮನುಷ್ಯನಿಗೆ ಬಹುಮುಖ ಪ್ರತಿಭೆಯ ಬುದ್ಧಿಯೆಂಬ ಅಂಗವನ್ನು ನೀಡಿದೆಯೋ ಅವನಿಗೆ ಜೈವಿಕ ವಿಕಾಸ ಎಂಬುದು ಪ್ರಧಾನ ಆವಶ್ಯಕತೆಯಲ್ಲ. ಏಕೆಂದರೆ ಬುದ್ಧಿಬಲದಿಂದ ಅವನು ಪ್ರಕೃತಿಯು ತನ್ನ ಮಂದಗಮನದ ವ್ಯರ್ಥವಾದ ವಿಕಾಸ ಪ್ರಕ್ರಿಯೆಯಲ್ಲಿ ಸೃಷ್ಟಿಮಾಡಬಹುದಾದುದಕ್ಕಿಂತ ಬೇಗನೆ, ಸಮರ್ಥವಾಗಿ ಯಾವುದೇ ಉಪಕರಣ, ಅವಯವಗಳನ್ನಾಗಲೀ ಸೃಷ್ಟಿಸಬಲ್ಲವನಾಗಿದ್ದಾನೆ. ಹೀಗಾಗಿ ವಿಕಾಸವು ಮಾನವನಲ್ಲಿ ಜೈವಿಕದಿಂದ ಮನೋಸಾಮಾಜಿಕ ಸ್ತರಕ್ಕೇರಿದೆ ಎನ್ನುತ್ತದೆ, ಜೀವಶಾಸ್ತ್ರ.

ಸ್ವ-ಕೇಂದ್ರೀಕೃತ ಮಾನವನಲ್ಲಿ ಮಾನವ-ಪೂರ್ವ ಜಾತಿಗಳಲ್ಲಿ ಹೇಗೋ ಹಾಗೆ ಚೈತನ್ಯ ಅಥವಾ ಮನಸ್ಸು ಅಥವಾ ಆತ್ಮವು ಭೌತಿಕ ದೇಹಕ್ಕೆ ಸೀಮಿತವಾಗಿರುತ್ತದೆ. ನೈತಿಕ ಮಾನವನಲ್ಲಿ ಅದು ವಿಸ್ತಾರವಾಗುತ್ತದೆ. ಅವನ ಭೌತಿಕ ಇತಿಮಿತಿಗಳನ್ನು ದಾಟಿ ಸಾಮಾಜಿಕ ಆವರಣದ ಇತರ ಮನಸ್ಸುಗಳನ್ನು ಪ್ರವೇಶಿಸುತ್ತದೆ. ಅಷ್ಟೇ ಅಲ್ಲ ಇತರ ಮನಸ್ಸುಗಳು ಅದನ್ನು ಪ್ರವೇಶಿಸುತ್ತವೆ. ಮನೋ-ಸಾಮಾಜಿಕ ವಿಕಾಸದ ಫಲ ಇದು. ಜೀವಶಾಸ್ತ್ರವು ಯಾವುದನ್ನು ಮನೋ-ಸಾಮಾಜಿಕ ವಿಕಾಸ ಎಂದು ಕರೆಯುತ್ತದೆಯೋ ಅದನ್ನು ಧರ್ಮ ವಿಜ್ಞಾನವು ನೈತಿಕ ಎಚ್ಚರ ಮತ್ತು ಸಾಮಾಜಿಕ ಸ್ಪಂದನ ಎಂದು ಕರೆಯುತ್ತದೆ. ಇದು ಮಾನವನ ಆಧ್ಯಾತ್ಮಿಕ ಬೆಳವಣಿಗೆಯ ಮೊದಲ ಮಜಲುಗಳ ಉಪ-ಉತ್ಪನ್ನ.

ಮನೋ-ಸಾಮಾಜಿಕ ವಿಕಾಸವು ಶುರುವಾದ ಮೇಲೆ, ಮಾನವರು ಪರಸ್ಪರರಲ್ಲಿ ಪ್ರೀತಿವಿಶ್ವಾಸಗಳ ಕೊಳುಕೊಡೆಗಳನ್ನು ಬೆಳೆಸಿಕೊಳ್ಳುತ್ತಾರೆ—ಅದೂ ಪ್ರಜ್ಞಾಪೂರ್ವಕವಾದ ಆಯ್ಕೆಯಾಗಿ. ಹೀಗೆ ಮಾಡಿದಾಗ ಮಾನವನ ದೈಹಿಕ ಹಸಿವು ಆಯ್ಕೆಗಳ ವ್ಯಕ್ತಿತ್ವಕ್ಕಿಂತ ಹೆಚ್ಚಿನ ಆಯಾಮವೊಂದು ಗೋಚರವಾಗುತ್ತದೆ. ನೈತಿಕ ಸಿದ್ಧಾಂತಗಳು ಎಂದಕೂಡಲೆ ಮಾನವನಲ್ಲಿ ಕೆಳಗಿನ ವ್ಯಕ್ತಿತ್ವವೊಂದಿದೆ, ಅದನ್ನು ಮೀರಿದ ಮೇಲಿನ ವ್ಯಕ್ತಿತ್ವವೊಂದಿದೆ ಎಂಬುದು ಸಿದ್ಧವಾಗುತ್ತದೆ. ಮನೋ-ಸಾಮಾಜಿಕ ವಿಕಾಸ ಅಥವಾ ಆಧ್ಯಾತ್ಮಿಕ ಬೆಳವಣಿಗೆಯ ಮೂಲಕ ಮಾನವನು ಸಾಧಿಸುವುದು ಈ ಉನ್ನತತರ ವ್ಯಕ್ತಿತ್ವವನ್ನು. ಅದು ಕೆಳಗಿನ ಸ್ತರದ ವ್ಯಕ್ತಿತ್ವವನ್ನು ತ್ಯಜಿಸುವುದು ಮತ್ತು ಉನ್ನತತರ ವ್ಯಕ್ತಿತ್ವವನ್ನು ಪಡೆದುಕೊಳ್ಳುವುದು.

ಮಾನವನ ಆಧ್ಯಾತ್ಮಿಕ ಬೆಳವಣಿಗೆ, ಮನೋ-ಸಾಮಾಜಿಕವಾಗಿ ಅವನು ಬೆಳೆದದ್ದು ಈ ಆಧುನಿಕ ಯುಗದಲ್ಲಿ ಅತ್ಯಂತ ಅರ್ಥಪೂರ್ಣವಾದ ವಿಷಯವಾಗಿದೆ. ತನ್ನನ್ನು ತಾನು ಇಂದ್ರಿಯ ಸಂಬಂಧಿಯೂ ಪ್ರಮಾಣಾತ್ಮಕವೂ ಆದ ಬಂಧನದಿಂದ ಬಿಡುಗಡೆ ಹೊಂದಲು, ಲೌಕಿಕತೆಯಲ್ಲಿ ನಿಂತು ನಾರುವ ಸ್ಥಿತಿಯಿಂದ ಪಾರಾಗಲು ಅದು ಮಾನವನಿಗೆ ದಾರಿ ತೋರಿಸಿ ಗುಣಾತ್ಮಕ ಶ್ರೀಮಂತಿಕೆ, ಮತ್ತು ಸಫಲತೆ ಸಿದ್ಧಿಗಳನ್ನು ವ್ಯಕ್ತಿಗತವಾಗಿಯೂ ಸಾಮೂಹಿಕವಾಗಿಯೂ ಪಡೆಯಲು ವಿಕಾಸದ ಪಥದಲ್ಲಿ ಮುಂದುವರಿಯಲು ನೆರವಾಗುತ್ತದೆ.

ಮಾನವನ ಚೇತನವು ಮೊದಲು ಕೇಂದ್ರೀಕರಿಸುವುದು 'ಅಹಂ'ನ ಮೇಲೆ. ವಿಕಾಸದ ದೃಶ್ಯಾವಳಿಯಲ್ಲಿ ಅಹಂ ಎಂಬುದು ಕಾಣಿಸಿಕೊಳ್ಳುವುದು ಮಾನವನೊಡನೆಯೆ. ಮಾನವನ ಹಂತದಲ್ಲಿಯೂ ಅದು ಕಾಣಿಸಿಕೊಳ್ಳುವುದು ಮಗುವು ಎರಡು ಅಥವಾ ಎರಡೂವರೆ ವರ್ಷ ವಯಸ್ಸಿನದಾದಾಗಲೇ. ಆಶ್ಚರ್ಯಕರವಾದ ವಿಷಯವೆಂದರೆ ಅದು ಕಾಣಿಸಿಕೊಳ್ಳುವವರೆಗೆ ಮಗುವು ಕೂಡ, ಎಲ್ಲ ಮಾನವ-ಪೂರ್ವ ಜೀವಿಗಳಂತೆ ಸುತ್ತಣ ಪರಿಸರವನ್ನು ಅವಲಂಬಿಸಿರುತ್ತದೆ. ಅದು ಎಂದರೆ ಅಹಂ ಕಾಣಿಸಿಕೊಂಡ ಕೂಡಲೇ ಮಗುವು ಪರಿಸರವನ್ನು ಆಳಲು ತೊಡಗುತ್ತದೆ. ನಾಲ್ಕು ಅಥವಾ ಐದು ವರ್ಷದ ಮಗುವು ತನಗಿಂತ ಬಹುಪಾಲು ದೊಡ್ಡದಾಗಿರುವ ಕುದುರೆ, ದನ ಮುಂತಾದುವನ್ನು ಹತೋಟಿಯಲ್ಲಿಟ್ಟುಕೊಳ್ಳಬಲ್ಲದು. ಆಧುನಿಕ ನರವ್ಯೂಹ ಶಾಸ್ತ್ರದ ಪ್ರಕಾರ ಆ ಅನನ್ಯ ಘಟನೆಗೆ ಕಾರಣ ಮಾನವ ಶಿಶುವಿನಲ್ಲಿರುವ ಒಂದು ಹೊಸ ದತ್ತಾಂಶ. ಅದರ ಫಲ ಹೊಸ ಸಾಮರ್ಥ್ಯಗಳು, ಶಕ್ತಿಗಳು. ಆ ದತ್ತಾಂಶ ಯಾವುದೆಂದರೆ ಚೈತನ್ಯವೇ ಅಹಂ ಆಗಿರುವುದು. ಆ ಶಕ್ತಿಗಳೆಂದರೆ ಕಲ್ಪನೆ, ವಿಚಾರ, ನಿರ್ಣಯ, ಇಚ್ಛಾಶಕ್ತಿ ಮತ್ತು ಮಾತಿನ ಮೂಲಕ ಸಂವಹನ ಮುಂತಾದುವು. ಇದನ್ನು ಕುರಿತಂತೆ ನರವ್ಯೂಹ ಶಾಸ್ತ್ರಜ್ಞ ಗ್ರೇವಾಲ್ಟರ್ ಹೇಳುತ್ತಾನೆ. (The Living Brain p.2) :

*ಮಾನವನ ಮತ್ತು ಚಿಂಪಾಂಜಿಗಳ ನಡುವೆ ಶರೀರ ಲಕ್ಷಣಗಳಿಗೆ ಸಂಬಂಧಿಸಿದಂತೆ ತೀವ್ರವಾದ ಭಿನ್ನತೆಗಳಿವೆ ಎಂಬುದನ್ನು ಮೆದುಳಿನ ಯಂತ್ರ ರಚನೆಗಳು ತೋರಿಸುತ್ತವೆ. ಪ್ರಸ್ತುತ ಉನ್ನತ ಕ್ರಿಯೆಗಳಿಗೆ ಆತ್ಮ ಎಂಬ ಹೆಸರನ್ನು ಕೊಡುವುದಾದರೆ ಮಾನವನ ಮುಂದೆ ಹೀಗೆ ಪ್ರಕಾಶಿಸುತ್ತಿರುವ ಬೆಳಕಿನ ನಸುನೋಟ ಮಾತ್ರ ಉಳಿದ ಪ್ರಾಣಿಗಳಲ್ಲವೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ನಮಗೆ ಅತ್ಯಂತ ಹತ್ತಿರವಾಗಿರುವ ಪ್ರಾಣಿ ಚಿಂಪಾಂಜಿ. ಚಮತ್ಕಾರಗಳನ್ನಾಗಲಿ, ಸಹಜವಾಗಿ ತನಗೆ ಸಿಕ್ಕುವುದಕ್ಕಿಂತ ದೂರದಲ್ಲಿಟ್ಟಿರುವ ಆಹಾರವನ್ನು ಎಟುಕಿಸಿಕೊಳ್ಳುವುದನ್ನಾಗಲಿ ಕಲಿಯುವುದರಲ್ಲಿ ಅದು ಬೇಕಾದಷ್ಟು ಜಾಣತನವನ್ನು ತೋರಿಸಬಹುದು. ಆದರೆ ತಾನು ಚಿಂತಿಸಬೇಕಾದಷ್ಟು ದೀರ್ಘಕಾಲ ಯಾವುದೇ ಬಿಂಬವನ್ನು ಅದು(ಮನಸ್ಸಿನಲ್ಲಿ) ಉಳಿಸಿಕೊಳ್ಳಲಾರದು. ಪರಿಸರದಿಂದ ಬಿಡುಗಡೆ ಹೊಂದಿ ಅಂತಿಮವಾಗಿ ಅದನ್ನು ಹತೋಟಿಯಲ್ಲಿ ಇಡಲು ಅಗತ್ಯವಾದ ಮೊದಲ ಹೆಜ್ಜೆಯೆಂದರೆ ಭಾವನೆಗಳನ್ನು ನಿಯಂತ್ರಿಸುವುದು. ಚಿಂಪಾಂಜಿಗಳೂ ಇತರ ಪ್ರಾಣಿಗಳೂ ಅದನ್ನು ಸಾಧಿಸಲಾರವು. ಏಕೆಂದರೆ ಒಂದು ಉದ್ದೀಪಕಕ್ಕೆ ಎಷ್ಟು ವಿಧವಾದ ಪ್ರತಿವರ್ತನೆಗಳು ಸಾಧ್ಯವೋ ಅವುಗಳನ್ನು ಪೂರ್ಣವಾಗಿ ತೋರಿಸುವುದು ಅದಕ್ಕೆ ಸಾಧ್ಯವಿಲ್ಲ. ಕಾರಣ ಯೋಚನೆಯ ಶಕ್ತಿ ಅವುಗಳಿಗೆ ಇಲ್ಲದಿರುವುದು. ಸಾಧ್ಯವಾಗುವ ಎಲ್ಲ ಪ್ರತಿವರ್ತನೆಗಳಲ್ಲಿ ಒಂದನ್ನು ಆರಿಸಿಕೊಳ್ಳಲು ಕಾಲಾವಕಾಶಬೇಕು. ಪ್ರಾಣಿಗಳ ಮೆದುಳಿನ ಚಟುವಟಿಕೆಯಲ್ಲಿ ಆ ಹತೋಟಿಗೆ ಕಾಲಾವಕಾಶವಿಲ್ಲ. ಒಂದು ಪ್ರತಿವರ್ತನ ಅಥವಾ ನಿಯಂತ್ರಿತ ಪ್ರತಿವರ್ತನ ಮಾತ್ರ ಅಲ್ಲಿ ಸಾಧ್ಯ. ಕಪಿಯ ಮಿದುಳು ಇನ್ನೂ ಇಂದ್ರಿಯಗಳ ದಾಸ್ಯದಲ್ಲೇ ಇದೆ. (ನಾನು ಗ್ರಹಿಸುತ್ತೇನೆ, ಆದ್ದರಿಂದ ನಾನು ಇದ್ದೇನೆ) ಇದು ಸ್ವಲ್ಪ ಮಾತ್ರ ಅಮಲೇರಿದ ಚಿಂಪಾಂಜಿಯ ಮೊದಲ ಪ್ರತಿವರ್ತನವಾಗಿರಬಹುದು. ಅನೇಕ ವೇಳೆ ಅಮಲಿನ ಮನುಷ್ಯನ*

ಕೊನೆಯ ಪ್ರತಿವರ್ತನೆ ಅದು. ಅಂಥ ಸ್ಥಿತಿಯಲ್ಲೂ ಇಬ್ಬರೂ ಅಷ್ಟು ಹತ್ತಿರ ಇದ್ದರೂ ಅಷ್ಟುದೂರ ಇದ್ದಾರೆ.

ಸಿಂಹ, ಹುಲಿ, ವಿಷಪ್ರಾಣಿ ಮತ್ತು ಇತರ ಬಲಶಾಲಿಗಳಾದ ಪ್ರಾಣಿಗಳ ಮಿದುಳಿನಲ್ಲೂ ಕಲ್ಪನಾಶಕ್ತಿಯ ಯಂತ್ರ ಇಲ್ಲ. ಇದ್ದಿದ್ದರೆ ಇದನ್ನು ಚರ್ಚಿಸುವುದಕ್ಕೆ ನಾವು ಇಲ್ಲಿ ಇರುತ್ತಲೇ ಇರಲಿಲ್ಲ. ತಮ್ಮ ಪರಿಸರದಲ್ಲಿ ಆಗುವ ಬದಲಾವಣೆಗಳನ್ನು ಅವು ಧೈರ್ಯವಾಗಿ ಎದುರಿಸಲಾರವು. ಆದ್ದರಿಂದಲೇ ತಮ್ಮ ಸ್ವಾಭಾವಿಕ ನೆಲೆಯ ಮೇಲೆ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲು ಮಾಡಿದ ಎಲ್ಲ ಪ್ರಯತ್ನಗಳಲ್ಲೂ ಅವು ಪರಿಸರವನ್ನು ಬದಲಾಯಿಸಲು ಯತ್ನವನ್ನು ಮಾತ್ರ ಮಾಡಲಿಲ್ಲ.

ಭಾವನೆಗಳಿಗೆ ಪ್ರತೀಕವನ್ನು ಕಲ್ಪಿಸುವ ಶಕ್ತಿಯನ್ನು ಮಾನವನು ಮಾತ್ರವೇ ಪಡೆದುಕೊಂಡಿದ್ದಾನೆ. ಅವನಲ್ಲಿ ಈ ಶಕ್ತಿಯು ಪ್ರತ್ಯೇಕವಾದ ಒಂದು ಘಟನೆಯಾಗಿ ಇರಲಿಲ್ಲ. ಪಿತ್ರಾರ್ಜಿತವಾಗಿ ದೊರೆತ ಮಿದುಳಿನ ವಿಸ್ತೃತವಾದ ಕ್ಷೇತ್ರದೊಳಗೇ ಮಾನವನು ಹೊಸ ಪ್ರಕ್ರಿಯೆಗಳ ಶ್ರೇಣಿಗಳನ್ನೇ ಸಾಧಿಸಬಲ್ಲ ಒಂದು ರಚನೆಯನ್ನು ವಿಕಾಸಪಡಿಸಿಕೊಂಡ : ಗಮನಿಸಿ ನೋಡುವುದು, ನೆನಪು, ಹೋಲಿಕೆ, ಬೆಲೆ ಕಟ್ಟುವಿಕೆ, ಆಯ್ಕೆ ಮತ್ತು ತೀರ್ಮಾನ ನೀಡುವ ಶಕ್ತಿ ಇವುಗಳನ್ನು ಪಡೆದುಕೊಂಡು ಅವನು ಎರಡನ್ನು ಸಾಧಿಸಿದ.

ಮೊದಲನೆಯದಾಗಿ ಅಪಕ್ವವಾದ ಅನುಭವವನ್ನು ಜ್ಞಾನವನ್ನಾಗಿ, ಜ್ಞಾನವನ್ನು ಶಕ್ತಿಯಾಗಿ, ಶಕ್ತಿಯನ್ನು ಅನಾತ್ಮ ಅನುಭವದಿಂದ ಕೂಡಿದ (ಜಡವಸ್ತುಗಳಿಂದ ಕೂಡಿದ) ಪರಿಸರವನ್ನು ಹತೋಟಿಯಲ್ಲಿಡುವ ಮತ್ತು ಕೌಶಲದಿಂದ ನಿರ್ವಹಿಸುವ ಚಾತುರ್ಯವನ್ನಾಗಿ ಮಾಡುವ ದಾರಿಯನ್ನು ಕಂಡುಕೊಂಡುದು.

ಎರಡನೆಯದಾಗಿ ತಾನು ಜ್ಞಾತೃ—ತಿಳಿಯುವವನು—ಎಂಬ ಅಪಕ್ವವಾದ ತಿಳಿವನ್ನು ಪಡೆದುಕೊಂಡುದು. ಮಿಂಚಿ ಮಾಯವಾಗುತ್ತಿರುವ ಬಿಂಬಗಳ ಹಿಂದಿರುವ ಆತ್ಮ ತಾನು ; ತನ್ನ ಬದುಕು ಕ್ರಿಯೆ, ವರ್ತನೆಗಳಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನು ಹೆಚ್ಚುಹೆಚ್ಚಾಗಿ ವ್ಯಕ್ತಪಡಿಸುತ್ತಾ ಹೋಗುವ, ಸತ್ಯದ ನೂತನ ಆಯಾಮವಾದ ಸಮಗ್ರ ಜ್ಞಾನಕ್ಕೆ ಒಯ್ಯುವ ಅಂತರಂಗದ ಮಾರ್ಗವನ್ನು ಕಂಡುಕೊಂಡುದು.

ಈ ಎರಡು ಕ್ಷೇತ್ರಗಳಲ್ಲಿ ಮಾನವನು ಸ್ಥಿರವಾಗಿ ಸಾಧಿಸಿದ ಪ್ರಗತಿಯೇ ನಾಗರಿಕತೆ ಮತ್ತು ಸಂಸ್ಕೃತಿಗಳ ಕಥೆ. ಮಾನವನಾಗಿ ಬೆಳೆದ ಅನಂತರದ ಘಟ್ಟದಲ್ಲಿ ವಿಕಾಸದ ಮುನ್ನಡೆಯ ಕಥೆಯೂ ಬಹುಪಾಲು ಅದೇ. ಆತ್ಮ ಮತ್ತು ಅನಾತ್ಮ ವಸ್ತುಗಳ ಜ್ಞಾನವನ್ನು ಬೇರೆ ಬೇರೆ ಮಟ್ಟಗಳಲ್ಲಿ ಪಡೆದ ಮಾನವನ ಮನಸ್ಸು ವಿಕಾಸ ರಂಗದಲ್ಲಿ ಕಾಣಿಸಿಕೊಂಡಮೇಲೆ ಪ್ರಕೃತಿ ತನ್ನದೇ ಆದ ಉತ್ಪನ್ನಗಳಲ್ಲಿ ಒಂದಾದ ವಿಕಾಸ ಕ್ರಿಯೆಯ ನಿಯಂತ್ರಣ ಮತ್ತು ನಿರ್ವಹಣೆಗಳ ಶಕ್ತಿಯನ್ನು ಹೆಚ್ಚುಹೆಚ್ಚಾಗಿ ಮಾನವನಿಗೆ ಬಿಟ್ಟುಕೊಡುತ್ತದೆ.

## ೧೯. ಜ್ಞಾನದಿಂದ ವಿವೇಕಕ್ಕೆ ಏರುವಿಕೆ

ಆರಂಭದ ಸ್ವ-ಪ್ರಜ್ಞೆ ಮಾನವನಿಗೆ ಪ್ರಾಣಿ ಜಗತ್ತಿನ ಹತೋಟಿಯನ್ನು ಕೊಟ್ಟಿದ್ದರೂ ಪ್ರಪ್ರಾಚೀನ ಮಾನವನು ಹಸಿವು, ವರ್ತನೆಗಳಲ್ಲಿ ಪ್ರಾಣಿಯೇ ಆಗಿ ಉಳಿದಿದ್ದ. ತನ್ನ ಸಾಮಾಜಿಕ ಅನುಭವದ ಹಿನ್ನೆಲೆಯಲ್ಲಿ ನಡೆಸಿದ ಚಿಂತನೆಯ ಫಲವಾಗಿ ಅಧಿಕಗೊಂಡ ಅವನ ಸ್ವಪ್ರಜ್ಞೆಯು ತನ್ನ ಮೇಲೆ ಹತೋಟಿಯನ್ನು ಹೆಚ್ಚಿಸಿಕೊಳ್ಳಲೂ, ತನ್ನನ್ನು ಮಾನವೀಕರಿಸಿಕೊಳ್ಳಲೂ ಅವನಿಗೆ ನೆರವಾಯಿತು. ಮಾನವ ನಾಗರಿಕತೆಗಳಲ್ಲಿ, ಸಾಮಾಜಿಕ-ರಾಜಕೀಯ ಸಂಸ್ಕೃತಿಗಳಲ್ಲಿ ಈ ವಿಧಾನವು ಯಾವಾಗಲೂ

ಕಾರ್ಯೋನ್ಮುಖವಾಗಿಯೇ ಇದೆ. ಆಧುನಿಕ ಯುಗದಲ್ಲಿ ಮಾನವನನ್ನು ರೂಪಿಸಿರುವುದು ಅದೇ. ಈಗ ಅವನಿಗೆ ಅನಾತ್ಮ ಪರಿಸರದ ಮೇಲೆ ಸಂಪೂರ್ಣವಾದ ಹತೋಟಿ ದೊರೆತಿದೆ. ಅದಕ್ಕೆ ನೆರವು ನೀಡಿದ ಸಮರ್ಥವಾದ ತಂತ್ರಜ್ಞಾನ, ಸಾಮಾಜಿಕ-ಸಾಂಸ್ಕೃತಿಕ ವಿಷಯಗಳಲ್ಲಿ ಇಡೀ ಜಗತ್ತಿನೊಂದಿಗೆ ಅವನಿಗೆ ಸಂಪರ್ಕವಿರುವುದು, ಜೊತೆಗೆ ವಿಶ್ವ ವ್ಯಾಪಕವೂ ಮಾನವೀಯವೂ ಆಗಿರಬೇಕೆಂಬ ಅವನ ಹಂಬಲ.

ಆದರೂ, ಹೊರಗಿನ ಪ್ರಕೃತಿಯ ಮೇಲೆ ಅವನಿಗಿರುವ ಹತೋಟಿ ಮತ್ತು ತನ್ನ ಮೇಲೇ ಇರುವ ಹತೋಟಿ ಇವುಗಳ ನಡುವೆ ಇರುವ ಅಂತರದಿಂದಲೂ, ಅವನ ನೈತಿಕ ದಕ್ಷತೆ ಮತ್ತು ತಾಂತ್ರಿಕ ದಕ್ಷತೆಗಳ ನಡುವೆ ಇರುವ ಅಂತರದಿಂದಲೂ ವಿಕಾಸವು ಇದುವರೆಗೆ ಒಡ್ಡಿದ ಸಮಸ್ಯೆಗಳಲ್ಲೆಲ್ಲ ಅತ್ಯಂತ ತೀವ್ರವಾದ ಸಮಸ್ಯೆಯೊಂದನ್ನು ಅವನು ಎದುರಿಸಬೇಕಾಗಿ ಬಂದಿದೆ. ವಿಶ್ವವ್ಯಾಪಕವೂ ಮಾನವೀಯವೂ ಆದದ್ದನ್ನು ಸಾಧಿಸಬೇಕು ಎಂಬ ಅವನ ಹೃದಯದ ಹಂಬಲವನ್ನು ಇದು ಹಿಸುಕಿಹಾಕುತ್ತಿದೆ. ಈ ಸಮಸ್ಯೆಯನ್ನು ಉಪೇಕ್ಷಿಸಿದರೆ ಅಥವಾ ಪರಿಹರಿಸದೆ ಬಿಟ್ಟರೆ ಮಾನವನೇ ತನ್ನ ನಾಗರಿಕತೆ ಮತ್ತು ವಿಕಾಸದ ಫಲಗಳನ್ನು, ಕೊನೆಗೆ ತನ್ನ ಮಾನವ ವರ್ಗವನ್ನೂ ನಾಶಮಾಡುವ ಏಕೈಕ ಸಾಧನವಾಗುವ ಸಂಭವವಿದೆ. ಈ ಮಧ್ಯೆ ಒಂದು ವಿಧವಾದ ಮಾನಸಿಕ ತುಮುಲದಿಂದ ಮತ್ತೊಂದಕ್ಕೆ, ಒಂದು ದುಃಖದಿಂದ ಮತ್ತೊಂದಕ್ಕೆ ಚಲಿಸಬೇಕಾದ ಸ್ಥಿತಿ ಅವನ ಪಾಲಿಗೆ ಬಂದಿದೆ.

ಇದಕ್ಕೆಲ್ಲ ಇರುವ ಏಕೈಕ ಪರಿಹಾರವೆಂದರೆ ತನ್ನ ನೈತಿಕ ಮತ್ತು ಆಧ್ಯಾತ್ಮಿಕ ಎಚ್ಚರವನ್ನು ಮಾನವನು ತೀವ್ರಗೊಳಿಸಿಕೊಳ್ಳುವುದು. ಪ್ರಾಚೀನ ಮಾನವನು ತನ್ನದೇ ಬಗೆಗೆ ಸ್ವಲ್ಪಮಟ್ಟಿನ ಜ್ಞಾನವನ್ನು ಪಡೆದುಕೊಂಡಾಗ ಜೀವವಿಕಾಸವು ಇದನ್ನು ತಕ್ಕಮಟ್ಟಿಗೆ ಸಾಧಿಸಿತು. ಮಾನವನ ಬುದ್ಧಿಶಕ್ತಿಯ ಮಾರ್ಗದರ್ಶನದಲ್ಲಿ ಸಾಮಾಜಿಕ ವಿಕಾಸವು ಇದನ್ನು ಇನ್ನೂ ಮುಂದುವರಿಸಿತು. ಉಳಿದ ಎಲ್ಲಕ್ಕಿಂತಲೂ ಬೇರೆಯಾದ ಭೌತಿಕ ಅಥವಾ ಜೈವಿಕ ವ್ಯಕ್ತಿತ್ವ ಎಂಬುದು ಸಾಮಾಜಿಕ ವ್ಯಕ್ತಿತ್ವಕ್ಕೆ ಅವಕಾಶ ಮಾಡಿಕೊಟ್ಟಿತು. ಇದರಲ್ಲಿ ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳೊಂದಿಗೆ ನೈತಿಕ ಸಂಬಂಧ ಬೆಳೆಯಿತು. ಮಾನವನು ಸ್ವಾರ್ಥದೃಷ್ಟಿಯಿಂದ ಕೂಡಿರುವ ಸ್ಥಿತಿಯಿಂದ ಸ್ವಾರ್ಥವನ್ನು ಮೀರುವವರೆಗೂ, ಜ್ಞಾನದಿಂದ ವಿವೇಕಕ್ಕೆ ಏರುವವರೆಗೂ ಈ ಶಿಕ್ಷಣವು ಮುಂದುವರಿಯಬೇಕು ಎಂಬುದು ಕ್ರಿಯಾತ್ಮಕವಾದ ಮಾನವ ವಿಕಾಸದ ಅಪೇಕ್ಷೆ. ಈ ಅಪೇಕ್ಷೆ ತೀವ್ರವಾದ ಅಗತ್ಯ ಎಂದು ಹೇಳುತ್ತಾ ಬರ್ಟ್ರೆಂಡ್ ರಸೆಲ್ ಹೀಗೆನ್ನುತ್ತಾರೆ (The Impact of Science on Society pp. 20-21) :

> *ದಾರಿಗಳ ವಿಷಯದಲ್ಲಿ ಮಾನವ ಕೌಶಲ ಮತ್ತು ಗುರಿಗಳ ವಿಷಯದಲ್ಲಿ ಮಾನವ ದೋಷ ಇವುಗಳ ನಡುವೆ ನಡೆಯುತ್ತಿರುವ ಒಂದು ಪಂದ್ಯದ ಮಧ್ಯೆ ನಾವಿದ್ದೇವೆ. ಗುರಿಗಳಿಗೆ ಸಂಬಂಧಿಸಿದಂತೆ ದೋಷ ಹೆಚ್ಚಿದಷ್ಟೂ, ಅದನ್ನು ಸಾಧಿಸಲು ಬೇಕಾಗುವ ಕೌಶಲವು ಕೆಟ್ಟ ರೀತಿಯದೇ ಆಗುತ್ತದೆ. ಅಜ್ಞಾನ ಮತ್ತು ಅದಕ್ಷತೆಗಳಿಂದ ಮಾತ್ರವೇ ಮಾನವಕುಲ ಇದು ವರೆಗೂ ಉಳಿದುಬಂದಿದೆ. ಆದರೆ ಜ್ಞಾನ, ದಕ್ಷತೆ ಮತ್ತು ದೋಷ ಇವೆಲ್ಲವೂ ಒಂದಾದರೆ ಮಾನವಕುಲವು ಉಳಿಯುತ್ತದೆ ಎಂದು ಖಚಿತವಾಗಿ ಹೇಳುವಂತಿಲ್ಲ. ಜ್ಞಾನವೇ ಶಕ್ತಿ, ಆದರೆ ಒಳಿತಿಗೆ ಹೇಗೋ ಕೆಡಕಿಗೂ ಅದು ಶಕ್ತಿಯೇ. ಹೀಗಾಗಿ ಮಾನವರು ಜ್ಞಾನವನ್ನು ಹೇಗೋ ಹಾಗೆ ವಿವೇಕವನ್ನೂ ಬೆಳೆಸಿಕೊಳ್ಳದಿದ್ದರೆ ಜ್ಞಾನದ ಹೆಚ್ಚಳ ಎಂದರೆ ದುಃಖದ ಹೆಚ್ಚಳ ಎಂಬುದೂ ಸಿದ್ಧವಾಗುತ್ತದೆ.*

ಜೀವಶಾಸ್ತ್ರವು ಹೋಮಿಯಸ್ಟ್ಯಾಸಿಸ್ ಎಂಬುದನ್ನು ಕುರಿತು ಹೇಳುತ್ತದೆ. ಆ ಪದದ ಅರ್ಥ ಸಂತುಲನ—ದೇಹಕ್ರಿಯೆಗಳಲ್ಲಿ ಪರಸ್ಪರ ಅವಲಂಬಿಯಾದ ಅಂಶಗಳ ನಡುವೆ ಸಮತೋಲನವನ್ನು

ಪಡೆಯುವ ಪ್ರವೃತ್ತಿ. ಉನ್ನತ ಸ್ತರದ ಸಸ್ತನಿಗಳ ಭೌತಿಕ ರಚನೆಗಳಲ್ಲಿ ಪ್ರಕೃತಿಯು ಒಳಗಿನ ಸ್ಥಿತಿಗತಿಗಳನ್ನು ತನಗೆ ತಾನೇ ಸ್ಥಿರಗೊಳಿಸುತ್ತದೆ ಎಂಬುದಾಗಿ ವಾಡಿಂಗ್‌ಟನ್ ಎನ್ನುವ ಜೀವ ಶಾಸ್ತ್ರಜ್ಞನು ಹೇಳುತ್ತಾನೆ. ಪ್ರಕೃತಿಯು ಮಾನವನಲ್ಲಿ ಉನ್ನತತರ ಮಿದುಳನ್ನು ಪರಿಪೂರ್ಣ ಗೊಳಿಸುವವರೆಗೆ ಮಿದುಳಿನ ವಿಕಾಸವು ಮಂದಗತಿಯಲ್ಲಿ ಸಾಗುತ್ತಾ ಹೋಯಿತು. ಭೌತಿಕ ಉಳಿವು ಮತ್ತು ಭೌತಿಕ ತೃಪ್ತಿಗಳ ಅಗತ್ಯ ಭೌತಿಕ ರಚನೆಗಳಿಗೆ ಇರುವುದರಿಂದಲೂ ಪ್ರಕೃತಿಗೆ ಸಂಖ್ಯಾಭಿ ವೃದ್ಧಿಯ ಅಗತ್ಯ ಇರುವುದರಿಂದಲೂ ಪ್ರಕೃತಿಯು ಇವನ್ನೆಲ್ಲ ಮನುಷ್ಯನ ಕೆಳಸ್ತರದ ಮಿದುಳಿಗೆ ಬಿಟ್ಟುಬಿಟ್ಟಿದೆ. ಹೀಗೆ ಮಾಡಿ ಮನುಷ್ಯನ ಉನ್ನತ ಸ್ತರದ ಮಿದುಳನ್ನು ಆಧುನಿಕ ನರವ್ಯೂಹ ಶಾಸ್ತ್ರದ (The Living Brain p. 6) ಪ್ರಕಾರ 'ಹೋಮಿಯೋ ಅಸ್ಟ್ಯಾಸಿಸ್‌ನ' ಅದ್ಭುತಗಳನ್ನು ಮೀರಿಹೋಗುವ ಕಾರ್ಯಗಳಿಗಾಗಿ' ಬಿಡುಗಡೆ ಮಾಡಿದೆ. ಅಥವಾ ಹೀಗೂ ಹೇಳಬಹುದು, ಅದು ಹಾಗೆ ಬಿಡುಗಡೆ ಮಾಡಿರುವುದು ವಿಕಾಸವನ್ನು ಅದರ ನಿರ್ದಿಷ್ಟವಾದ ಮಾನವ ಕ್ಷೇತ್ರಗಳಿಗೆ, ಎಂದರೆ ವೇದಾಂತದ ಪ್ರಕಾರ ಮನೋಸಾಮಾಜಿಕ ಅಥವಾ ನೈತಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಿಗೆ ಒಯ್ಯಲಿ ಎಂದು.

### ೨೦. ಮನೋಸಾಮಾಜಿಕ ವಿಕಾಸ ಮತ್ತು ಆಧ್ಯಾತ್ಮಿಕ ಬೆಳವಣಿಗೆ

ಉನ್ನತತರ ಮಿದುಳು ಈ ದೊಡ್ಡ ಕಾರ್ಯವನ್ನು ಕೈಗೊಳ್ಳಲು ಅದಕ್ಕೆ ಬೇಕಾದ ಶಕ್ತಿ ಮತ್ತು ಅರ್ಹತೆಗಳು ಅದು ಎಷ್ಟರಮಟ್ಟಿಗೆ ತನ್ನ ಕೆಳಗಿನ ಸ್ತರದ ಮಿದುಳಿನ ದಾಸ್ಯದಿಂದ ಬಿಡುಗಡೆ ಹೊಂದಿರುತ್ತದೆಯೋ, ಅದರ ಇಂದ್ರಿಯಗಳ ಬಯಕೆಗಳಿಂದ, ಅದರ ಕೆಳ ಸ್ವಭಾವದ ಒತ್ತಡಗಳಿಂದ ಪಾರಾಗಿರುತ್ತದೆಯೋ, ಅದರ ನೇರ ಪ್ರಮಾಣಕ್ಕೆ ಅನುಗುಣವಾಗಿರುತ್ತವೆ. ಕಲ್ಪನಾ ಮತ್ತು ವಿಚಾರ ಶಕ್ತಿಗಳಿರುವ ಉನ್ನತತರ ಮಿದುಳು ಇಂದ್ರಿಯಗಳ ಮತ್ತು ಕೆಳಗಿನ ಸ್ತರದ ಮಿದುಳಿನ ಬಾಲದ ತುದಿಯಾಗಿ ಕೆಲಸಮಾಡುವುದರಿಂದ ತಾನೇ ಅಸಂಬದ್ಧ ಇಲ್ಲ ನಿರರ್ಥಕವಾಗಬಹುದು. ಅಥವಾ ತಾನೇ ಮುಕ್ತವಾಗಿ, ನಿಜವಾಗಿ ಉನ್ನತತರವಾಗಲೂಬಹುದು. ವೇದಾಂತವು ಯಾವುದನ್ನು ಶಮ, ದಮಗಳೆಂದು ಕರೆಯುತ್ತದೆಯೋ ಆ ಮನಸ್ಸು ಮತ್ತು ಇಂದ್ರಿಯಗಳ ಶಿಕ್ಷಣದಿಂದ ಉನ್ನತತರ ಮಿದುಳು ತಾನೂ ಮುಕ್ತನಾಗಿ ಮಾನವನನ್ನು ಮುಕ್ತಗೊಳಿಸುವ ಶಕ್ತಿಯಾಗಬಹುದು. ಇದೇ ಮಾನವನ ವಿಚಾರಶಕ್ತಿ ಮತ್ತು ಇಚ್ಛಾಶಕ್ತಿ. ಇದನ್ನೇ ವೇದಾಂತವು ಬುದ್ಧಿ ಎಂದು ಕರೆಯುವುದು. ಇದೇ ಬದುಕನ್ನು ಜ್ಞಾನದಿಂದ ವಿವೇಕಕ್ಕೆ ಬಂಧನದಿಂದ ಬಿಡುಗಡೆಗೆ ಎತ್ತುವ ಪರಮಸಾಧನ. ಉನ್ನತ ಮಿದುಳು ಹೀಗೆ ಹೋಮಿಅಸ್ಟ್ಯಾಸಿಸ್ ಮೂಲಕ ಬೆಳವಣಿಗೆ ಹೊಂದುವುದನ್ನು ಕುರಿತು ಗ್ರೇ ವಾಲ್ಟರ್ ಹೀಗೆ ಉದ್ಗರಿಸುತ್ತಾನೆ (p. 18) :

> *ಎಲ್ಲ ಸಸ್ತನಿಗಳಿಗೆ ಸಂತುಲನ—ಹೋಮಿಅಸ್ಟ್ಯಾಸಿಸ್—ಎಂದರೆ ಬದುಕವಿಕೆ : ಆದರೆ ಮಾನವನಿಗಾದರೋ ಅದೇ ಬಿಡುಗಡೆ, ಮುಕ್ತಿ.*

ಹೀಗೆ ಮಾನವನ ಆಧ್ಯಾತ್ಮಿಕ ಬೆಳವಣಿಗೆ ಎಂಬುದು ಒಂದು ವಾಸ್ತವಾಂಶ. ಈ ವಿಜ್ಞಾನ ಮತ್ತು ತಂತ್ರವನ್ನು ನಾವು ಹೆಚ್ಚು ಹೆಚ್ಚು ತಿಳಿದಷ್ಟೂ ನಮಗೂ ನಮ್ಮ ಸಮಾಜಕ್ಕೂ ಅಷ್ಟೂ ಅಷ್ಟು ಒಳಿತಾಗುತ್ತದೆ. ಬೆಳವಣಿಗೆ—ಅದರ ಕಲ್ಪನೆ ಮತ್ತು ಪದ—ಎಂಬುದು ಬಹುಮುಖಿ ಪ್ರಾಮುಖ್ಯವುಳ್ಳದ್ದು. ಎರಡು ವಿಧವಾದ ಮಾನವ ಬೆಳವಣಿಗೆಯನ್ನು ನಾವು ಬಲ್ಲೆವು, ಹಾಗೂ ಅವನ್ನು ಗಮನಕ್ಕೆ ತೆಗೆದುಕೊಂಡಿದ್ದೇವೆ. ಮೊದಲನೆಯದು ಭೌತಿಕ, ಎರಡನೆಯದು ಮಾನಸಿಕ. ಮೊದಲನೆಯದಕ್ಕಿಂತ ಎರಡನೆಯದು ಅಷ್ಟು ಸುಲಭಗ್ರಾಹ್ಯವಲ್ಲದ್ದು. ಜನನ ಸಮಯದಲ್ಲಿ ಶಿಶುವಿನ ತೂಕ ಸುಮಾರು ಏಳು ಪೌಂಡುಗಳು. ಪ್ರತಿದಿನವೂ ಅದರ ತೂಕ ಹೆಚ್ಚುತ್ತದೆ. ಅದು

ತಾಯಿಯ ಹಾಲನ್ನು ಕುಡಿಯುತ್ತದೆ. ಅನಂತರ ಬೇರೆ ಬಗೆಯ ಆಹಾರ ಅದಕ್ಕೆ ದೊರಕುತ್ತದೆ. ಅದು ಕ್ರಮವಾಗಿ ಬೆಳೆಯುತ್ತಾ ಹೋಗಿ ೭೦ ಅಥವಾ ೮೦ ಕೆ. ಜಿ. ತೂಕದ ವ್ಯಕ್ತಿಯಾಗುತ್ತದೆ. ಇದು ನಾವು ಗ್ರಹಿಸಬಹುದಾದ ಬೆಳವಣಿಗೆ. ಅದು ಆಗುವಂತೆ ನೋಡಿಕೊಳ್ಳಲು ಆಹಾರ ಮತ್ತು ವ್ಯಾಯಾಮಗಳ ನಿಯಂತ್ರಣ ನಡೆಯುತ್ತದೆ. ಮಾನಸಿಕ ಬೆಳವಣಿಗೆ ಎನ್ನುವುದು ಅಷ್ಟೇ ಮುಖ್ಯ. ಆದರೆ ಆ ಬೆಳವಣಿಗೆ ಅಷ್ಟು ಸ್ಪಷ್ಟವಾಗಿ ಗೊತ್ತಾಗುವಂಥದ್ದಲ್ಲ. ಶಿಕ್ಷಣದ ಮೂಲಕ ಮಾನವ ಶಿಶುವು ಚುರುಕಾಗಿರುವಿಕೆ, ಆತ್ಮಸ್ಥೈರ್ಯ, ವ್ಯಕ್ತಿತ್ವದ ಬೆಲೆ ಮತ್ತು ಗೌರವ ಈ ಎಲ್ಲವನ್ನೂ ಬೆಳೆಸಿಕೊಳ್ಳುತ್ತದೆ. ಶಿಶುವು ಬೌದ್ಧಿಕ ಅಥವಾ ಇಚ್ಛಾಶಕ್ತಿಯ ಮಹಾನ್ ವ್ಯಕ್ತಿಯಾಗುವವರೆಗೂ ಈ ಬೆಳವಣಿಗೆ ನಡೆಯುತ್ತದೆ. ಸಂಸ್ಥೆಯ ಮೂಲಕವೋ ಅಥವಾ ಸಂಸ್ಥೆಯಿಲ್ಲದೆಯೋ ದೊರೆಯುವ ಶಿಕ್ಷಣವು ಮನಸ್ಸಿಗೆ ಪೋಷಣೆ ನೀಡಿ ಅದನ್ನು ಬೆಳೆಸುವ ರೀತಿ ಇದು.

ಈ ಎರಡು ರೀತಿಯ ಬೆಳವಣಿಗೆಗಳು ಅಗತ್ಯ, ಆದರೆ ಅದಷ್ಟೇ ಸಾಲದು. ಮೂರನೆಯ ರೀತಿಯ ಬೆಳವಣಿಗೆ ಒಂದುಂಟು. ಅದು ಅತ್ಯಂತ ಮುಖ್ಯ, ಅರ್ಥಪೂರ್ಣ. ಆದರೆ ಅದು ಅಷ್ಟು ಗಮನಕ್ಕೆ ಬಂದಿಲ್ಲ. ಅದಿಲ್ಲದೆ ಉಳಿದೆರಡು ಮಾನವನ ವೈಯಕ್ತಿಕ ಮತ್ತು ಸಾಮೂಹಿಕ ನಾಶಕ್ಕೆ ಕಾರಣವಾಗುತ್ತವೆ. ಈ ಮೂರನೆಯದಿಲ್ಲದೆ ಹೋದರೆ ಮಾನವನು ಸಿದ್ಧಿಗಾಗಿ ಪಡುವ ಹಂಬಲ, ನಡೆಸುವ ಹುಡುಕಾಟ ಎಲ್ಲ ವ್ಯರ್ಥವಾಗಿ ಸೋಲನ್ನು ಪಡೆಯಬೇಕಾಗುತ್ತದೆ. ಇದೇ ವ್ಯಕ್ತಿಯ ಆಧ್ಯಾತ್ಮಿಕ ಬೆಳವಣಿಗೆ, ಅಥವಾ ತನ್ನ ಆಧ್ಯಾತ್ಮಿಕ ಆಯಾಮಕ್ಕೆ ಅವನು ಬೆಳೆಯುವುದು. ಅದು ಅವನು ನೈತಿಕತೆಯ ವಿಷಯದಲ್ಲಿ ಎಚ್ಚರವನ್ನು ಪಡೆಯುವುದರಲ್ಲಿ ಅಭಿವ್ಯಕ್ತಿಯನ್ನೂ ಪಡೆಯುತ್ತದೆ. ಪ್ರಾರಂಭದಲ್ಲಿ ಅದು ಸಾಮಾಜಿಕ ಕಾಳಜಿಯ ರೂಪದಲ್ಲಿರುತ್ತದೆ. ವೇದಾಂತದ ಪ್ರಕಾರ ಅದರ ಅಂತಿಮ ಸ್ವರೂಪ ಆತ್ಮ ಎಂದು ಹೇಳುವ ಅನಂತ, ವಿಶ್ವಾತ್ಮಕ ದಿವ್ಯ ಆಯಾಮವನ್ನು ವ್ಯಕ್ತಿಯು ಪಡೆದುಕೊಳ್ಳುವುದಾಗಿರುತ್ತದೆ.

## ೨೧. ವಿಕಾಸ ಪಥದಲ್ಲಿ ಅಹಂ ಎನ್ನುವುದರ ಸ್ಥಾನ

ಪ್ರಕೃತಿಯ ಮೇಲೆ ಮಾನವನು ಪ್ರಭುತ್ವವನ್ನು ಸ್ಥಾಪಿಸುವಂತೆ ಮಾಡಿದ ಅಹಂ ಅವನ ನಿಜವಾದ ಆತ್ಮವಲ್ಲ. ಅದು ಕೇವಲ ಪ್ರಾರಂಭದ ದತ್ತಾಂಶ, ಬರಲಿರುವ ಮಹತ್ತರ ವಿಷಗಳ ಬಗ್ಗೆ ಭರವಸೆ. ನೀರಿನ ಮಟ್ಟದ ಮೇಲೆ ಕಾಣಿಸುವ ಬಂಡೆಯ ತುದಿಯಂತೆ ಅದು. ಆದರೆ ಬಂಡೆ ಮಾತ್ರ ನೀರಿನೊಳಗೇ ಇರುತ್ತದೆ. ಅದು ಕಾಣುತ್ತಿಲ್ಲ. ಆದರೆ ಕಾಣಲ್ಪಡಲು ಬಯಸುತ್ತಿದೆ. ಭಾರತದ ಅಧ್ಯಾತ್ಮ ವಿದ್ಯೆಯ ಪ್ರಕಾರ ಆತ್ಮವು ಇಂದ್ರಿಯಗಳಿಗಾಗಲಿ, ಇಂದ್ರಿಯಬದ್ಧ ಮನಸ್ಸಿಗಾಗಲಿ ದಕ್ಕುವಂಥದ್ದಲ್ಲ. ಬುದ್ಧಿ ಅಥವಾ ವಿಚಾರವು ಸೂಕ್ಷ್ಮವೂ, ಶುದ್ಧವೂ ಆದಾಗ ಅದಕ್ಕೆ ಆತ್ಮವು ದಕ್ಕುತ್ತದೆ. ಬುದ್ಧಿ-ಗ್ರಾಹ್ಯಮ್, ಅತೀಂದ್ರಿಯಂ ಎಂದು ಗೀತೆ ಹೇಳುವಂತೆ (VI 21) ಅಹಂ ಎನ್ನುವುದು ಅಸತ್ಯ ; ಮಾನವನ ವ್ಯಕ್ತಿತ್ವವಾಗಲಿ, ಆತ್ಮತ್ವವಾಗಲಿ ಅಹಂನಲ್ಲಿ ಇಲ್ಲ ಎನ್ನುವುದು ಬೌದ್ಧಧರ್ಮದ ಕೇಂದ್ರ ಸತ್ಯ ಕೂಡ. ಆಧುನಿಕ ಜೀವಶಾಸ್ತ್ರವೂ ಇದನ್ನೇ ಸ್ಥಿರೀಕರಿಸುತ್ತದೆ. ಆಧುನಿಕ ಜೀವಶಾಸ್ತ್ರದ ತಾತ್ವಿಕ ಬೋಧನೆಯನ್ನು ಕುರಿತಂತೆ ಹೆಚ್. ಜಿ. ವೆಲ್ಸ್, ಜಿ. ವಿ. ವೆಲ್ಸ್ ಮತ್ತು ಜೂಲಿಯನ್ ಹಕ್ಸ್ಲೀ ರಚಿಸಿರುವ The Science of Life ಎಂಬ ಗ್ರಂಥದಲ್ಲಿ ಹೀಗೆ ಹೇಳಿದೆ (pp. 878-79) :

*ನಮ್ಮ ವಿಶ್ವದ ಅತ್ಯಂತ ಸ್ಪಷ್ಟ ಕೇಂದ್ರವಾದ ಈ ಆತ್ಮವು, ಇಷ್ಟೊಂದು ಲೋಭದಿಂದ ಜಗತ್ತನ್ನು ತನ್ನದಾಗಿಸಿಕೊಂಡಿರುವ ಈ ಆತ್ಮವು ಎಂದಾದರೂ ಇಲ್ಲವಾಗುತ್ತದೆಯೋ ಎಂದು ಏಕಾಂಗಿಯಾಗಿ, ರಾತ್ರಿಯ ನೀರವತೆಯಲ್ಲಿ, ಅನೇಕ ಚಿಂತನಶೀಲ ಪ್ರಸಂಗಗಳಲ್ಲಿ ನಾವು*

ಪ್ರಶ್ನಿಸಿದ್ದೇವೆ. ಅದಿಲ್ಲದಿದ್ದರೆ ನಿಜವಾಗಿ ಈ ಜಗತ್ತೇ ಇಲ್ಲ. ಆದರೂ ಈ ಪ್ರಜ್ಞಾಪೂರ್ವಕ ಆತ್ಮವು ಪ್ರತಿರಾತ್ರಿಯೂ ನಾವು ನಿದ್ರಿಸುವಾಗ ಸಾಯುತ್ತದೆ. ಆದರೂ ಆರಂಭದಲ್ಲಿ ಅದು ತನ್ನದೇ ಇರವಿನ ಪ್ರಜ್ಞೆಗೆ ಸಂದಿದ್ದು ಹೇಗೆ ಎಂಬುದರ ಹಂತಗಳನ್ನು ನಾವು ಗುರುತಿಸಲಾರೆವು.

(ಅಹಂನಲ್ಲಿ ಕೇಂದ್ರೀಕೃತವಾಗಿರುವ) ವ್ಯಕ್ತಿತ್ವ ಎನ್ನುವುದು ಪ್ರಕೃತಿಯ ವಿಧಾನಗಳಲ್ಲಿ ಒಂದು ಮಾತ್ರವೇ ಆಗಿರಬಹುದು. ತಕ್ಕಮಟ್ಟಿನ ಕೌಶಲ್ಯದ ಮೌಲ್ಯವನ್ನುಳ್ಳ ಅನುಕೂಲಕರವಾದ ತಾತ್ಕಾಲಿಕ ಭ್ರಮೆ ಅದು.

ವಿಶ್ವವನ್ನು ಕುರಿತು ಮಾನವನು ಪಡೆಯುವ ಚಿತ್ರವು ಹೆಚ್ಚು ಬುದ್ಧಿವಂತಿಕೆಯದೂ ಸಮಗ್ರವೂ ಆದಷ್ಟೂ ಅನಿವಾರ್ಯವಾದ ಅಂತಿಮ ನಿರಾಕರಣೆಯಿಂದ ಕೂಡಿದ ವೈಯಕ್ತಿಕ ಜೀವನದ ಮೇಲೆ (ಗಮನವನ್ನು) ಕೇಂದ್ರೀಕರಿಸುವುದು ಹೆಚ್ಚು ಅಸಹನೀಯವಾಗಿದೆ.

ಈ ವಿಧವಾದ ಸಂಗಮದಿಂದ ಅವನು ತನ್ನ ಅಹಮ್ಮಿನಿಂದ ಬಿಡುಗಡೆ ಪಡೆಯುತ್ತಾನೆ. ಈ ಸಂಪರ್ಕದಿಂದ ಅವನು ನಿರ್ವ್ಯಕ್ತಿಗತ ಅಮೃತತ್ವವನ್ನು ಸಾಧಿಸುತ್ತಾನೆ. ಅವನ ವ್ಯಕ್ತಿತ್ವವು ಮಹತ್ತರವಾದ ವ್ಯಕ್ತಿತ್ವವೊಂದರಲ್ಲಿ ಲಯವಾಗುತ್ತದೆ. ಬಹುಮಟ್ಟಿನ ಧಾರ್ಮಿಕ ಅನುಭವದ ಸಾರ ಇದೇ. ವ್ಯಕ್ತಿತ್ವವನ್ನು ಜೈವಿಕವಾಗಿ ವಿಶ್ಲೇಷಿಸುವುದು ನಮ್ಮನ್ನು ಅನುಭಾವಿಗಳಿಗೆ ಎಷ್ಟು ಹತ್ತಿರಕ್ಕೆ ತರುತ್ತದೆ ಎಂಬುದು ಗಮನಾರ್ಹವಾಗಿದೆ...

ಆಧುನಿಕ ವಿಜ್ಞಾನ ಮತ್ತು ಕಾರ್ಯಯೋಗ್ಯ ನೈತಿಕತೆಯ ದೈನಂದಿನ ಬೋಧನೆಗಳಲ್ಲಿ ಪಾಶ್ಚಾತ್ಯ ಅನುಭಾವಿಗಳು ಮತ್ತು ಪೌರ್ವಾತ್ಯ ಋಷಿಗಳು ತಮ್ಮ ಅನುಭವಕ್ಕೆ ಒಪ್ಪಿಗೆಯ ಮುದ್ರೆಯನ್ನು ಪಡೆಯುತ್ತಾರೆ. ಇವೆರಡೂ 'ಅಹಂ' ಎನ್ನುವುದು ಹೋಗಬೇಕೆಂದೂ ಅದು ಒಂದು ವಿಧಾನವೇ ಹೊರತು ಗುರಿಯಲ್ಲವೆಂದೂ ಬೋಧಿಸುತ್ತವೆ.'

'ತನಗೆ ಅನುಕೂಲಕರವಾದ ತಾತ್ಪೂರ್ವಿಕ ಅಹಂನ ಭ್ರಮೆಯಿಂದ' ಅಧ್ಯಾತ್ಮದ ವಿಜ್ಞಾನ ಮತ್ತು ತಾಂತ್ರಿಕತೆಯ ನೆರವನ್ನು ಪಡೆದು, ನಿಜವಾದ ಆತ್ಮಕ್ಕೆ ಪ್ರಯಾಣ ಮಾಡುವುದು ನೀತಿಶಾಸ್ತ್ರ, ಸೌಂದರ್ಯ ಮೀಮಾಂಸೆ ಮತ್ತು ಧರ್ಮಗಳ ಕೊಡುಗೆ. ಮಾನವನು ಕಾರ್ಯನಿರತವಾಗಿರಲಿ, ಪೂಜಾಮಗ್ನನಾಗಿರಲಿ, ಸಮಾಜದ ನಡುವೆ ಇರಲಿ, ಏಕಾಂತದಲ್ಲಿರಲಿ ಇದು ಮಾನವನಿಗೆ ಆಧ್ಯಾತ್ಮಿಕ ಪೋಷಣೆಯನ್ನು ನೀಡುತ್ತದೆ. ಶ್ರೀಕೃಷ್ಣನು ಗೀತೆಯಲ್ಲಿ (VIII. 7) ಬೋಧಿಸಿರುವಂತೆ ಸೇವಾ ಮನೋಭಾವದಿಂದ ಮಾಡುವ ಕರ್ಮ ಅಂತರಂಗದ ಅವಲೋಕನದಿಂದ ಪುಷ್ಟಿಪಡೆದು ಆಚರಿಸುವ ಪೂಜೆ ಧ್ಯಾನಗಳು ಅವು ಆಧ್ಯಾತ್ಮದ ಬೆಳವಣಿಗೆಯ ಅವಳಿ ತಂತ್ರಗಳು :

ತಸ್ಮಾತ್ ಸರ್ವೇಷು ಕಾಲೇಷು
ಮಾಮ್ ಅನುಸ್ಮರ ಯುದ್ಧ್ಯ ಚ

'ಆದ್ದರಿಂದ ಸರ್ವಕಾಲದಲ್ಲೂ, ನನ್ನನ್ನು ಸ್ಮರಿಸುತ್ತಾ (ಬದುಕಿನ) ಯುದ್ಧಭೂಮಿಯಲ್ಲಿ ಹೋರಾಡು.' ಹನ್ನೊಂದನೆಯ ಅಧ್ಯಾಯದ ಐವತ್ತೈದನೆಯ ಶ್ಲೋಕದ ಭಾಷ್ಯಕ್ಕೆ ಪೀಠಿಕೆಯಾಗಿ ಶಂಕರಾಚಾರ್ಯರು ಹೀಗೆ ಹೇಳಿದ್ದಾರೆ :

ಅಧುನಾ ಸರ್ವಸ್ಯ ಗೀತಾ ಶಾಸ್ತ್ರಸ್ಯ ಅರ್ಥೋ ನಿಶ್ರೇಯಸಾರ್ಥೋ ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ' 'ಸಮಸ್ತ ಗೀತಾಶಾಸ್ತ್ರದ ಅರ್ಥವಾದ ಮೋಕ್ಷಪ್ರಾಪ್ತಿಯ ವಿಷಯವು ಅನುಷ್ಠಾನ ರೂಪದಲ್ಲಿ ಸಂಕ್ಷೇಪವಾಗಿ ಈಗ ಹೇಳಲ್ಪಟ್ಟಿದೆ.'

ಮತ್-ಕರ್ಮ-ಕೃತ್, ಮತ್ ಪರಮೋ
ಮತ್-ಭಕ್ತಃ ಸಂಗ -ವರ್ಜಿತಃ :

ನಿರ್ವೈರಃ ಸರ್ವ -ಭೂತೇಷು
ಯಃ ಸ ಮಾಮೇತಿ ಪಾಂಡವ

*ಅರ್ಪಣಾಮನೋಭಾವದಿಂದ ಕರ್ಮವನ್ನು ನನಗಾಗಿ ಮಾಡು; ನನ್ನನ್ನು (ನಿನ್ನ ಬದುಕಿನ) ಪರಮಗುರಿಯನ್ನಾಗಿ ಮಾಡಿಕೋ; ಎಲ ಇಂದ್ರಿಯ ಸಂಗಗಳಿಂದ ದೂರವಾಗಿ ನನ್ನ ಭಕ್ತನಾಗು; ಎಲ್ಲ ಜೀವಿಗಳ ವಿಷಯವಲ್ಲೂ ವೈರವನ್ನು ಬಿಡು. (ಅಂಥ ಸಾಧಕನು) ನನ್ನನ್ನೆ ಪಡೆಯುತ್ತಾನೆ, ಓ ಅರ್ಜುನ.*

ಈ ಆಧ್ಯಾತ್ಮಿಕ ಬೆಳವಣಿಗೆಯ ಪ್ರಯೋಗಶಾಲೆಯೆಂದರೆ ಬಾಹ್ಯದಲ್ಲಿ ಕರ್ಮ, ಅಂತರಂಗದಲ್ಲಿ ಧ್ಯಾನ ಇವುಗಳಿಂದ ಕೂಡಿದ ಬದುಕು. ಹೊರಗೆ ದೇವಾಲಯ, ಚರ್ಚು ಅಥವಾ ಮಸೀದಿ, ಒಳಗೆ ಮನೆಯ ಪೂಜಾಮಂದಿರ ಇವು, ಸರಿಯಾಗಿ ಬಳಸಿದರೆ ಮತ್ತೊಂದು ಪ್ರಯೋಗಶಾಲೆಯಾಗುತ್ತದೆ. ಇವೆರಡಕ್ಕಿಂತ ಮುಖ್ಯವಾದ ಪ್ರಯೋಗಶಾಲೆಯೆಂದರೆ ಶಿಕ್ಷಿತವೂ ಶುದ್ಧವೂ ಆದ ಮನಸ್ಸು. ಪೂಜೆ ಮತ್ತು ಧಾರ್ಮಿಕ ಕರ್ಮಗಳು ಮತ್ತಿತರ ಧಾರ್ಮಿಕ ಆಚರಣೆಗಳು ಕೂಡ, ಅವು ನಿಂತು ನಾರುವ ಧಾರ್ಮಿಕ ಆಡಂಬರಗಳಾಗದಿದ್ದರೆ, ಅವೇ ಗುರಿಯಾಗದೇ ಹೋದರೆ, ಧಾರ್ಮಿಕ ಬೆಳವಣಿಗೆಗೆ ಸಾಧನಗಳಾದರೆ, ಚಾರಿತ್ರ್ಯವನ್ನು ನಿರ್ಮಾಣಮಾಡುವ ಶಿಕ್ಷಣ ಸಾಧನವಾದರೆ ಉಪಯುಕ್ತ ಸಾಧನಗಳಾಗುತ್ತವೆ.

## ೨೨. ಪ್ರಾಚೀನ ವೇದಾಂತ ಮತ್ತು ಆಧುನಿಕ ವಿಜ್ಞಾನಗಳಿಗಿರುವ ಬಾಂಧವ್ಯ

ಭಾರತದಲ್ಲಿ ವೇದಾಂತವು ರೂಪಿಸಿರುವ ಧರ್ಮವೂ ಆಧುನಿಕ ವಿಜ್ಞಾನವೂ ಮನೋಧರ್ಮ ಸ್ವಭಾವ ಮತ್ತು ಉದ್ದೇಶಗಳಲ್ಲಿ ಪರಸ್ಪರ ಹತ್ತಿರವಾದವು ಎಂದು ಸ್ವಾಮಿ ವಿವೇಕಾನಂದರು ತೋರಿಸಿಕೊಟ್ಟಿದ್ದಾರೆ. ಎರಡೂ ಆಧ್ಯಾತ್ಮಿಕ ಸಾಧನಗಳೇ. ಭೌತಜಗತ್ತಿನ ವಿಶ್ವಶಾಸ್ತ್ರ, ಕಾರ್ಯಕಾರಣ ಸಂಬಂಧತತ್ತ್ವ, ಭೌತದ್ರವ್ಯ ಮತ್ತು ಶಕ್ತಿಗಳ ಸಂಚಯ, ವಿಶ್ವ ಮತ್ತು ಜೈವಿಕ ವಿಕಾಸ ಈ ಎಲ್ಲದರಲ್ಲೂ ಎರಡಕ್ಕೂ ಅನೇಕ ಸಂಪರ್ಕ ಬಿಂದುಗಳಿವೆ. ಪಶ್ಚಿಮದ ಪ್ರಕೃತ್ಯತೀತ ಮತಧರ್ಮ ಶಾಸ್ತ್ರಗಳಂತಲ್ಲದೆ, ವೇದಾಂತ ಮತ್ತು ಆಧುನಿಕ ವಿಜ್ಞಾನದ ವಿಶ್ವಶಾಸ್ತ್ರವು ತಾಳಿರುವ ಮೂಲಭೂತ ನಿಲುವು, ಯಾವುದನ್ನು ಸ್ವಾಮಿ ವಿವೇಕಾನಂದರು (ಅಂತಿಮ ಸತ್ಯವನ್ನು ಕುರಿತಂತೆ) ಸ್ವಯಂ-ವಿಕಾಸಶೀಲ ಕಾರಣ ಎಂದು ಕರೆದರೋ ಆ ಊಹಾಪ್ರತಿಜ್ಞೆಯೇ. ವೇದಾಂತವು ಅದನ್ನು ಬ್ರಹ್ಮ ಎಂದು ಕರೆಯಿತು. ಅದೊಂದು ವಿಶ್ವ-ಆಧ್ಯಾತ್ಮಿಕ-ತತ್ತ್ವ. ತೈತ್ತರೀಯ ಉಪನಿಷತ್ತು (III.1) ಬ್ರಹ್ಮವನ್ನು ಪ್ರತಿಯೊಬ್ಬ ವೈಜ್ಞಾನಿಕ ಚಿಂತಕನೂ ಸ್ವಾಗತಿಸುವಂತಹ ಭವ್ಯವಾದ ಉಕ್ತಿಯಲ್ಲಿ ವರ್ಣಿಸುತ್ತದೆ :

ಯತೋ ವಾ ಇಮಾನಿ ಭೂತಾನಿ ಜಾಯಂತೆ,
ಯೇನ ಜಾತಾನಿ ಜೀವಂತಿ;
ಯತ್ಪ್ರಯಂತ್ಯಭಿ ಸಂವಿಶಂ ತಿ;
ತತ್ ವಿಜಿಜ್ಞಾಸಸ್ವ ತತ್ ಬ್ರಹ್ಮೇತಿ—

*ಯಾವುದರಿಂದ ಎಲ್ಲ ಸಚರಾಚರಗಳೂ ಹುಟ್ಟುತ್ತವೆಯೋ, ಜನಿಸಿದ ಬಳಿಕ ಯಾವುದರಲ್ಲಿ ಅವೆಲ್ಲ ಜೀವಿಸುತ್ತಿವೆಯೋ; ಲಯದ ಕಾಲದಲ್ಲಿ ಯಾವುದನ್ನು ಅವು ಪ್ರವೇಶಿಸುತ್ತವೆಯೋ ಅದನ್ನು ತಿಳಿಯಲು ಪ್ರಯತ್ನಿಸು; ಅದೇ ಬ್ರಹ್ಮ.*

ಆಧುನಿಕ ವಿಜ್ಞಾನಿಗೆ, ಆ ಸ್ವಯಂ-ವಿಕಾಸಶೀಲ ಕಾರಣವು ಒಂದು ಭೌತಸತ್ಯ, ಖಗೋಳ ಭೌತಶಾಸ್ತ್ರಜ್ಞ ಫ್ರೆಡ್ ಹೊಯೆಲ್ ಹೇಳುವಂತೆ 'ಹಿನ್ನೆಲೆಯ ವಸ್ತು' ವಿಶ್ವಧೂಳಿ. ಆದರೆ

ವೇದಾಂತಕ್ಕೆ ಅದೊಂದು ವಿಶ್ವ ಅಧ್ಯಾತ್ಮ ತತ್ವ, ಚಿತ್ ಆಕಾಶ. ವೇದಾಂತವು ಅದನ್ನು ತನ್ನ ವಿಕಾಸದ ಉತ್ಪನ್ನವಾದ ಮಾನವ ಎಂಬುವನ ಮೂಲಕ ವ್ಯಕ್ತವಾಗುವ ಪ್ರಜ್ಞೆಯ ಬೆಳಕಿನಲ್ಲಿ ಕೂಡ ನೋಡುತ್ತದೆ.

ಆಧುನಿಕ ವಿಜ್ಞಾನಕ್ಕೂ ಪ್ರಾಚೀನ ವೇದಾಂತಕ್ಕೂ ಇರುವ ಆಧ್ಯಾತ್ಮಿಕ ಸಂಬಂಧವನ್ನು ಕುರಿತು ೧೮೯೩ರ ಷಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹೀಗೆ ಹೇಳಿದ್ದಾರೆ :

*ಇಂದಿನ ವಿಜ್ಞಾನವು ಬಳಸುವ ಪದ ಅಭಿವ್ಯಕ್ತಿ ಎಂಬುದೇ ವಿನಃ ಸೃಷ್ಟಿಯೆಂಬುದಲ್ಲ. ಹಿಂದುವಿಗೆ ಈಗ ಸಂತೋಷ. ಏಕೆಂದರೆ ಶತಶತಮಾನಗಳ ಕಾಲ ಯಾವುದನ್ನು ತನ್ನ ಹೃದಯದಲ್ಲಿ ಪೋಷಿಸಿಕೊಂಡಿದ್ದನೋ ಆ ಭಾವನೆಯನ್ನು ಈಗ ಹೆಚ್ಚು ಶಕ್ತವಾದ ಭಾಷೆಯಲ್ಲಿ, ಹೆಚ್ಚಿನ ಬೆಳಕಿನಲ್ಲಿ, ವಿಜ್ಞಾನದ ಇತ್ತೀಚಿನ ತೀರ್ಮಾನಗಳ ದೃಷ್ಟಿಯಿಂದ ಹೇಳಲಾಗುತ್ತಿದೆ.*

ವೇದಾಂತಕ್ಕೆ ಇರುವಂತೆ ಆಧುನಿಕ ವೈಜ್ಞಾನಿಕ ಚಿಂತನೆಗೆ ಯಾವುದೇ ಆಧ್ಯಾತ್ಮಿಕ ಸತ್ಯ ಅಥವಾ ತತ್ವ ಇನ್ನೂ ದೊರೆತಿಲ್ಲ. ಆದರೂ ಇಪ್ಪತ್ತನೆಯ ಶತಮಾನದ ಕೆಲವು ವಿಜ್ಞಾನಿಗಳು, ಈ ಮೊದಲೇ ಹೇಳಿದಂತೆ ಟೆಲ್‌ಹಾರ್ಡ್ ಡ ಚಾರ್ಡಿನ್ ಮತ್ತು ಜೂಲಿಯನ್ ಹಕ್ಸ್ಲೆ ಮುಂತಾದ ಜೀವಶಾಸ್ತ್ರಜ್ಞರು ಭೌತಶಾಸ್ತ್ರದ ದ್ರವ್ಯಸತ್ತಾವಾದವನ್ನು ಮೃದುಗೊಳಿಸಲು ಶ್ರಮಿಸಿದ್ದಾರೆ. ಮತ್ತು ಆಧ್ಯಾತ್ಮಿಕ ಅನುಭವಕ್ಕೆ ವೈಜ್ಞಾನಿಕ ವಿಶ್ವಚಿತ್ರದಲ್ಲಿ ಸ್ಥಳವನ್ನು ದೊರಕಿಸಿ ಕೊಡಲು ಪ್ರಯತ್ನಿಸಿದ್ದಾರೆ. ಈ ಮೊದಲೇ ಹೇಳಿರುವಂತೆ ಥಾಮಸ್ ಹಕ್ಸ್ಲೆ ಕೂಡ. ದ್ರವ್ಯಸತ್ತಾವಾದವನ್ನು ಅನಪೇಕ್ಷಿತ ಆಗಂತುಕ ಎಂದು ಕರೆದಿದ್ದಾನೆ. ಈ ಶತಮಾನದಲ್ಲಿ ಮಹಾನ್ ಭೌತಶಾಸ್ತ್ರಜ್ಞರಿಂದಲೂ ಪ್ರತಿಭಟನೆ ಬಂದಿದೆ. ಸರ್ ಜೇಮ್ಸ್ ಜೀನ್ಸ್ ಒಂದು ವಿಷಯ ಕಂಡುಕೊಂಡರು : ಇಪ್ಪತ್ತನೆಯ ಶತಮಾನದಲ್ಲಿ ವಿಶ್ವವನ್ನು ಕುರಿತಂತೆ ಮೂಡಿರುವ ಅಂತಿಮ ಚಿತ್ರದಲ್ಲಿ ಭೌತದ್ರವ್ಯವಸ್ತುವನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ. ಅಲ್ಲಿ 'ಆಳುತ್ತಿರುವ ಏಕೈಕ ಅಂಶ ಮನಸ್ಸು' (The New Background of Science p. 307). ಖಗೋಳ ಭೌತಶಾಸ್ತ್ರಜ್ಞ ಆರ್. ಎ. ಮಿಲಿಕನ್ ಭೌತದ್ರವ್ಯವಸ್ತುವಾದವನ್ನು 'ಅಪಕ್ವಬುದ್ಧಿಯ ದರ್ಶನ' ಎಂದು ಕರೆದ (An Autobiography, last chapter).

## ೨೩. ತತ್ವಶಾಸ್ತ್ರ : ವಿಜ್ಞಾನ ಮತ್ತು ಧರ್ಮಗಳ ಸಂಶ್ಲೇಷಣೆ

ಹೀಗೆ ಇಪ್ಪತ್ತನೆಯ ಶತಮಾನದ ಭೌತಶಾಸ್ತ್ರವು ತನ್ನ ಮುಖವನ್ನು ಪಕ್ಕಾ ದ್ರವ್ಯಸತ್ತಾವಾದದಿಂದ ತಿರುಗಿಸಿಬಿಟ್ಟಿದ್ದ. ಈ ನಿಲುವಿನಲ್ಲಿ ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರವು ಹಿಂದೆ ಬಿದ್ದಿಲ್ಲ. ಇಡೀ ಆಧುನಿಕ ವೈಜ್ಞಾನಿಕ ಚಿಂತನೆಯು ಒಂದು ಕ್ರಾಂತಿಯ ಬೇನೆಯನ್ನು ಅನುಭವಿಸುತ್ತದೆ. ಕಾರಣ, ವೈಜ್ಞಾನಿಕ ಚಿಂತನೆಯ ದಿಗಂತದಲ್ಲಿ ಮನಸ್ಸು ಮತ್ತು ಪ್ರಜ್ಞೆಗಳು ಎಂಬ ಹೊಸ ಸವಾಲನ್ನು ಎದುರಿಸಬೇಕಾಗಿ ಬಂದಿದೆ. ಇದನ್ನೇ ಜೀನ್ಸ್ ವಿಜ್ಞಾನದ ನೂತನ ಹಿನ್ನೆಲೆ ಎಂದು ಕರೆಯುವುದು. ಆತ ಹೇಳುತ್ತಾನೆ (The New Background of Science. pp. 2-6) :

*ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಹಳೆಯ ತತ್ವಶಾಸ್ತ್ರದ ಚಟುವಟಿಕೆ ನಿಂತಿತು. ಇಪ್ಪತ್ತನೆಯ ಶತಮಾನದ ಭೌತಶಾಸ್ತ್ರಜ್ಞನು ತನ್ನದೇ ಒಂದು ಹೊಸ ತತ್ವಶಾಸ್ತ್ರವನ್ನು ರೂಪಿಸುತ್ತಿದ್ದಾನೆ. ಅದರ ಸಾರಾಂಶವೆಂದರೆ ಪ್ರಕೃತಿಯು ತನ್ನಿಂದ ಸಂಪೂರ್ಣವಾಗಿ ಭಿನ್ನವಾದದ್ದು ಎಂದು ಅವನು ಈಗ ಎಣಿಸುವುದಿಲ್ಲ. ಪ್ರಕೃತಿ ಎಂಬುದು ಕೆಲವೊಮ್ಮೆ ಅವನೇ ಸೃಷ್ಟಿಸಿದ್ದು. ಕೆಲವೊಮ್ಮೆ ಅವನೇ ಆರಿಸಿದ್ದು, ಕೆಲವೊಮ್ಮೆ ಅವನೇ ನಾಶಗೊಳಿಸಿದ್ದು ಕೂಡ.*

*ಹೀಗೆ ಇಪ್ಪತ್ತನೆಯ ಶತಮಾನದಲ್ಲಿ ಭೌತವಿಜ್ಞಾನದ ಚರಿತ್ರೆಯೆಂದರೆ ಅದು ಶುದ್ಧ ಮಾನವ ದೃಷ್ಟಿಕೋನದಿಂದ ಕ್ರಮೇಣ ಬಿಡುಗಡೆಯನ್ನು ಹೊಂದುವುದಾಗಿದೆ.*

ಜಗದ್ ವಸ್ತುವಿನ ಆಧ್ಯಾತ್ಮಿಕ ಸ್ವರೂಪವು ಜೈವಿಕ ವಿಕಾಸದಲ್ಲಿ ಕ್ರಮವಾಗಿ ಕಾಣಿಸಿಕೊಂಡುದನ್ನು ಜೂಲಿಯನ್ ಹಕ್ಸ್ಲೇ ಮತ್ತು ಚಾರ್ಡಿನ್ ಅರಿತರು. ಜೀವಶಾಸ್ತ್ರವು, ತನ್ನ ವಿಕಾಸದ ಇತಿಹಾಸದಲ್ಲಿ ಚಾರ್ಡಿನ್ ಯಾವುದನ್ನು ಪ್ರಕೃತಿಯ ಒಳಗು ಎಂದು ಕರೆಯುತ್ತಾನೆಯೋ ಅದನ್ನು ತೆರೆದು ತೋರಿಸುತ್ತದೆ ಎಂಬುದು ಅವರ ಅಭಿಪ್ರಾಯ. ಆ ಒಳಗು ಭೌತಶಾಸ್ತ್ರ ಮತ್ತು ಖಗೋಳ ಶಾಸ್ತ್ರಗಳು ತೋರಿಸುವ ಪ್ರಕೃತಿಯ ಹೊರಗಿಗಿಂತ ಭಿನ್ನವಾದದ್ದು. ವೇದಾಂತವು ಅದೇ ಪ್ರಕೃತಿಯ 'ಒಳಗ'ನ್ನು ಪ್ರತ್ಯಕ್ ರೂಪ ಎಂದೂ 'ಹೊರಗ'ನ್ನು ಪರಾಕ್ ರೂಪ ಎಂದೂ ಕರೆಯುತ್ತದೆ.

ಆಧುನಿಕ ವಿಜ್ಞಾನದಲ್ಲಿ ವಸ್ತುಗಳ ಈ 'ಒಳಗಿನ' ಪ್ರಾಮುಖ್ಯವು ಅರಿವಿಗೆ ಬಂದಾಗ ವೈಜ್ಞಾನಿಕ 'ಹಿನ್ನೆಲೆಯ ವಸ್ತುವು' ಆಧ್ಯಾತ್ಮಿಕ ಸ್ವರೂಪವನ್ನು ಪಡೆಯುತ್ತದೆ. ಹೀಗಾಗಿ ವೇದಾಂತದ 'ಹಿನ್ನೆಲೆಯ ಸತ್ಯ'ವಾದ ಬ್ರಹ್ಮದ ಸಮೀಪಕ್ಕೆ ಬರುತ್ತದೆ. 'ಒಳಗು' ಮತ್ತು 'ಹೊರಗು' ಇವುಗಳ ಜ್ಞಾನದ ಸಂಶ್ಲೇಷಣೆಯೇ ತತ್ವಶಾಸ್ತ್ರ. ಭಾರತದಲ್ಲಿ ವೇದಾಂತವು ಶತಮಾನಗಳ ಹಿಂದೆ ಸಮ್ಯಕ್ ಜ್ಞಾನ—ಸಮಗ್ರ ಸತ್ಯದ ಪೂರ್ಣಜ್ಞಾನ—ಎಂದು ಸಾಧಿಸಿದ್ದು ಇದನ್ನೇ. ಸತ್ಯಕ್ಕೇ ಹೊರಗು ಒಳಗು ಎಂಬ ವ್ಯತ್ಯಾಸ ತಿಳಿಯದು. ಮಾನವ ಮನಸ್ಸು ಈ ವ್ಯತ್ಯಾಸಗಳನ್ನು ಮಾಡಿದ್ದು ಅಧ್ಯಯನ, ಸಂಶೋಧನೆ ಮತ್ತು ದೈನಂದಿನ ಜೀವನಗಳ ಅನುಕೂಲಕ್ಕಾಗಿ.

ಭೌತ ವಿಜ್ಞಾನಗಳ ವಿವಿಧ ಶಾಖೆಗಳು ಒಂದೇ ಸತ್ಯದ, ಎಂದರೆ ಭೌತ ಪ್ರಕೃತಿಯ ಅಧ್ಯಯನಕ್ಕಾಗಿ ಮಾಡಿಕೊಂಡ ವಿವಿಧ ಮಾರ್ಗಗಳು. ಆ ಎಲ್ಲ ಅಧ್ಯಯನ ಶಾಖೆಗಳೂ ಅಂತಿಮವಾಗಿ ಭವ್ಯವಾದ ಈ ಭೌತ ವಿಶ್ವದ ವಿಜ್ಞಾನವಾಗಿ, ಪ್ರಕೃತಿಯ 'ಹೊರಗ'ನ್ನು ಅಧ್ಯಯನ ಮಾಡುವ ವಿಜ್ಞಾನವಾಗಿ ವಿಲೀನಗೊಳ್ಳುತ್ತವೆ. ಹಾಗೆಯೇ ಈ 'ಒಳಗ'ನ್ನು ಅಧ್ಯಯನ ಮಾಡುವ ವಿಜ್ಞಾನವೂ 'ಹೊರಗ'ನ್ನು ಅಧ್ಯಯನ ಮಾಡುವ ವಿಜ್ಞಾನವೂ ಬ್ರಹ್ಮದ, ಸಮಗ್ರಸತ್ಯದ ವಿಜ್ಞಾನವಾಗಿ ವಿಲೀನಗೊಳ್ಳುತ್ತವೆ. ವೇದಾಂತವು ಬ್ರಹ್ಮವಿದ್ಯೆಯನ್ನು, ಬ್ರಹ್ಮದ ವಿಜ್ಞಾನವನ್ನು ನೋಡಿದ್ದು ಈ ದೃಷ್ಟಿಯಿಂದ. ಬ್ರಹ್ಮ ಎಂದರೆ ಸಮಗ್ರಸತ್ಯ, ಭೌತ ಮತ್ತು ಅಭೌತ ಸಮಗ್ರ ಸತ್ಯ. ಮುಂಡಕ ಉಪನಿಷತ್ತು (I.i.1) ಬ್ರಹ್ಮವಿದ್ಯೆಯನ್ನು ಸರ್ವವಿದ್ಯಾ ಪ್ರತಿಷ್ಠಾ, ಎಲ್ಲ ವಿದ್ಯೆ ಅಥವಾ ವಿಜ್ಞಾನದ ಪ್ರತಿಷ್ಠಾ ಎಂದರೆ ಅಸ್ತಿಭಾರ ಎಂದು ವರ್ಣಿಸುತ್ತದೆ. ಗೀತೆಯಲ್ಲಿ (XIII. 2) ಶ್ರೀಕೃಷ್ಣನು ಹೇಳುತ್ತಾನೆ :

ಕ್ಷೇತ್ರ-ಕ್ಷೇತ್ರಜ್ಞಯೋರ್ ಜ್ಞಾನಮ್
ಯತ್ ತತ್ ಜ್ಞಾನಮ್ ಮತಮ್ ಮಮ—

*ನನ್ನ ಪ್ರಕಾರ ಕ್ಷೇತ್ರದ ಎಂದರೆ ಅನಾತ್ಮದ (ವಸ್ತುಗಳ 'ಹೊರಗಿ'ನ) ಜ್ಞಾನವು ಮತ್ತು ಕ್ಷೇತ್ರಜ್ಞ ಎಂದರೆ ಕ್ಷೇತ್ರವನ್ನು ತಿಳಿಯುವವನ (ವಸ್ತುಗಳ 'ಒಳಗಿ'ನ) ಜ್ಞಾನವು ನಿಜವಾದ ಜ್ಞಾನ.*

ಸ್ವಾಮಿ ವಿವೇಕಾನಂದರು ಈ ವೇದಾಂತದ ಚಿಂತನೆಯ ಸರ್ವಗ್ರಾಹ್ಯತ್ವವನ್ನು ವಿವರಿಸಿದ ರೀತಿಯನ್ನು ಕುರಿತಂತೆ ಹೇಳುತ್ತಾ ರೊಮ್ಯ ರೋಲಾ (The Life of Swami Vivekananda p. 289) ಹೀಗೆಂದಿದ್ದಾರೆ :

*ವಿವೇಕಾನಂದರು ಯಾವುದನ್ನು ಮುಕ್ತ ಧರ್ಮ ಎಂದು ಕರೆದರೋ ಅದನ್ನು ವಿಜ್ಞಾನವು ಒಪ್ಪಿಕೊಳ್ಳುತ್ತದೆಯೋ ಬಿಡುತ್ತದೆಯೋ ಎಂಬುದು ತಾನು ಹೆಚ್ಚು ಶಕ್ತಿವಂತ ಎಂದು ಭಾವಿಸುವವನ ಶಾಂತ ಹೆಮ್ಮೆಗೆ ಉಪೇಕ್ಷೆಯ ವಿಷಯವಾಗುತ್ತದೆ. ಏಕೆಂದರೆ ಅವರ ಧರ್ಮ ವಿಜ್ಞಾನವನ್ನು ಒಪ್ಪಿಕೊಂಡಿತು. ಏಕೆಂದರೆ ಆ ಧರ್ಮವು ಎಷ್ಟು ವಿಶಾಲವಾದದ್ದೆಂದರೆ ಸತ್ಯವನ್ನು ಅನ್ವೇಷಿಸುವ ನಿಷ್ಠಾವಂತರಿಗೂ ಅದರ (ಭೋಜನ) ಪಂಕ್ತಿಯಲ್ಲಿ ಎಡೆಯುಂಟು.*

'ಕೇವಲ ಸತ್ಯ ಮತ್ತು ಅಭಿವ್ಯಕ್ತಿ' ಎಂಬ ೧೮೯೬ರಲ್ಲಿ ಲಂಡನ್ನಿನಲ್ಲಿ ನೀಡಿದ ಉಪನ್ಯಾಸದಲ್ಲಿ ಸ್ವಾಮಿ ವಿವೇಕಾನಂದರು ಹೇಳಿದರು (C. W. Vol II. Ninth Edition, p. 140) :

*ವಿಜ್ಞಾನವು ಎತ್ತ ಕಡೆಗೆ ಓಲುತ್ತಿದೆ ಎಂಬುದು ನಿಮಗೆ ಕಾಣುತ್ತಿಲ್ಲವೆ? ಹಿಂದೂ ರಾಷ್ಟ್ರವು ಮನಸ್ಸಿನ ಅಧ್ಯಯನದ ಮೂಲಕ ತತ್ತ್ವಶಾಸ್ತ್ರ ಮತ್ತು ತರ್ಕದ ಮೂಲಕ ಮುಂದುವರಿಯಿತು. ಯೂರೋಪಿನ ರಾಷ್ಟ್ರಗಳು ಹೊರಗಿನ ಪ್ರಕೃತಿಯಿಂದ ಪ್ರಾರಂಭಮಾಡಿದವು. ಈಗ ಅವು ಕೂಡ ಅದೇ ಪರಿಣಾಮಗಳನ್ನು ತಲುಪುತ್ತಿವೆ. ಮನಸ್ಸಿನ ಮೂಲಕ ಹುಡುಕಿ, ಕೊನೆಗೆ ನಾವೂ ಅದೇ ಏಕತೆಗೆ, ವಿಶ್ವ ಏಕಕ್ಕೆ, ಎಲ್ಲದರ ಆತ್ಮಕ್ಕೆ, ಎಲ್ಲದರ ಸಾರಕ್ಕೆ, ಸತ್ಯಕ್ಕೆ ತಲುಪುತ್ತಿದ್ದೇವೆ... ಭೌತವಿಜ್ಞಾನದ ಮೂಲಕ ಅದೇ ಏಕತೆಯನ್ನು ನಾವು ಸೇರುತ್ತಿದ್ದೇವೆ.*

## ೨೪. ಶ್ರೀಕೃಷ್ಣನು ನಡೆಸಿದ ವಿಜ್ಞಾನ ಮತ್ತು ಧರ್ಮಗಳ ಸಂಯೋಗ

ಮಾನವ ಜ್ಞಾನ ಮತ್ತು ಸಫಲತೆಯ ವಿಷಯದಲ್ಲಿ, ಭೌತವಿಜ್ಞಾನ ಮತ್ತು ಧರ್ಮ ವಿಜ್ಞಾನಗಳ ಪರಸ್ಪರ ಪೂರಕ ಸ್ವರೂಪದ ವಿಷಯದಲ್ಲಿ ಶ್ರೀಮದ್‌ಭಾಗವತವು ಶ್ರೀಕೃಷ್ಣನ ಬಾಯಲ್ಲಿ ಒಂದು ಗಹನವಾದ ಹೇಳಿಕೆಯನ್ನು ಹೇಳಿಸಿದೆ (xi. vii. 19-21);

ಪ್ರಾಯೇಣ ಮನುಜಾ ಲೋಕೇ
ಲೋಕ-ತತ್ತ್ವ-ವಿಚಕ್ಷಣಾಃ ;
ಸಮುದ್ಧರತಿ ಹ್ಯಾತ್ಮಾನಮ್
ಆತ್ಮನೈವಾಶುಭಾಶಯಾತ್—

*ಸಾಮಾನ್ಯವಾಗಿ, ಜಗತ್ತಿನಲ್ಲಿ ಬಾಹ್ಯ ಜಗತ್ತನ್ನಾಗಲಿ, ಪ್ರಕೃತಿಯನ್ನಾಗಲಿ, ಪರೀಕ್ಷಿಸುವುದರಲ್ಲಿ ದಕ್ಷರಾದ ಜನರು ಎಲ್ಲ ವಿಧವಾದ ಪಾಪ ಮೂಲಗಳಿಂದಲೂ ತಮ್ಮನ್ನು ತಾವು ಮೇಲಕ್ಕೆ ಎತ್ತಿಕೊಳ್ಳುತ್ತಾರೆ.*

ಆತ್ಮನೋ ಗುರುರಾತ್ಮೈವ
ಪುರುಷಸ್ಯ ವಿಶೇಷತಃ ;
ಯತ್ ಪ್ರತ್ಯಕ್ಷಾನುಮಾನಾಭ್ಯಾಂ
ಶ್ರೇಯೋಽಸೌ ಅನುವಿಂದತೇ—

*ಅದರಲ್ಲೂ ಮಾನವ ಜೀವಿಗೆ ತನ್ನ ಆತ್ಮವೇ ಗುರು. ಏಕೆಂದರೆ ಅವನು ತನ್ನ ಶ್ರೇಯಸ್ಸನ್ನು ನೇರವಾದ ಇಂದ್ರಿಯ ಪರೀಕ್ಷೆಯಿಂದಲೂ,(ನಿಗಮನ ಮತ್ತು ಅನುಗಮನ) ತರ್ಕದ ಮೂಲಕವೂ ಸಾಧಿಸಿಕೊಳ್ಳುತ್ತಾನೆ.*

ಪುರುಷತ್ವೇ ಚ ಮಾಂ ಧೀರಾಃ
ಸಾಂಖ್ಯ -ಯೋಗ-ವಿಶಾರದಾಃ
ಆವಿಸ್ತರಾಂ ಪ್ರಪಶ್ಯಂತಿ
ಸರ್ವ-ಶಕ್ತ್ಯುಪಬೃಂಹಿತಮ್

*ಈ ಮಾನವ ರೂಪದಲ್ಲಿ ಕೂಡ, ಬುದ್ಧಿವಂತರಾದವರು, ಆಧ್ಯಾತ್ಮಿಕ ವಿಜ್ಞಾನ ಮತ್ತು ತಂತ್ರವನ್ನು ಸಾಧಿಸಿರುವವರು, ನನ್ನನ್ನು (ಸರ್ವಾತ್ಮಗಳ ಸ್ವರೂಪವಾದ ಭಗವಂತನನ್ನು) ಎಲ್ಲ ಶಕ್ತಿಗಳ ಆಗರ ಎಂಬುದಾಗಿ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ.*

ಜಗದ್ ವಸ್ತುವಿನ ಆಧ್ಯಾತ್ಮಿಕ ಸ್ವರೂಪವು ಜೈವಿಕ ವಿಕಾಸದಲ್ಲಿ ಕ್ರಮವಾಗಿ ಕಾಣಿಸಿಕೊಂಡುದನ್ನು ಜೂಲಿಯನ್ ಹಕ್ಸ್ಲೀ ಮತ್ತು ಚಾರ್ಡಿನ್ ಅರಿತರು. ಜೀವಶಾಸ್ತ್ರವು, ತನ್ನ ವಿಕಾಸದ ಇತಿಹಾಸದಲ್ಲಿ ಚಾರ್ಡಿನ್ ಯಾವುದನ್ನು ಪ್ರಕೃತಿಯ ಒಳಗು ಎಂದು ಕರೆಯುತ್ತಾನೆಯೋ ಅದನ್ನು ತೆರೆದು ತೋರಿಸುತ್ತದೆ ಎಂಬುದು ಅವರ ಅಭಿಪ್ರಾಯ. ಆ ಒಳಗು ಭೌತಶಾಸ್ತ್ರ ಮತ್ತು ಖಗೋಳ ಶಾಸ್ತ್ರಗಳು ತೋರಿಸುವ ಪ್ರಕೃತಿಯ ಹೊರಗಿಗಿಂತ ಭಿನ್ನವಾದದ್ದು. ವೇದಾಂತವು ಅದೇ ಪ್ರಕೃತಿಯ 'ಒಳಗ'ನ್ನು ಪ್ರತ್ಯಕ್ ರೂಪ ಎಂದೂ 'ಹೊರಗ'ನ್ನು ಪರಾಕ್ ರೂಪ ಎಂದೂ ಕರೆಯುತ್ತದೆ.

ಆಧುನಿಕ ವಿಜ್ಞಾನದಲ್ಲಿ ವಸ್ತುಗಳ ಈ 'ಒಳಗಿನ' ಪ್ರಾಮುಖ್ಯವು ಅರಿವಿಗೆ ಬಂದಾಗ ವೈಜ್ಞಾನಿಕ 'ಹಿನ್ನೆಲೆಯ ವಸ್ತುವು' ಆಧ್ಯಾತ್ಮಿಕ ಸ್ವರೂಪವನ್ನು ಪಡೆಯುತ್ತದೆ. ಹೀಗಾಗಿ ವೇದಾಂತದ 'ಹಿನ್ನೆಲೆಯ ಸತ್ಯ'ವಾದ ಬ್ರಹ್ಮದ ಸಮೀಪಕ್ಕೆ ಬರುತ್ತದೆ. 'ಒಳಗು' ಮತ್ತು 'ಹೊರಗು' ಇವುಗಳ ಜ್ಞಾನದ ಸಂಶ್ಲೇಷಣೆಯೇ ತತ್ವಶಾಸ್ತ್ರ. ಭಾರತದಲ್ಲಿ ವೇದಾಂತವು ಶತಮಾನಗಳ ಹಿಂದೆ ಸಮ್ಯಕ್ ಜ್ಞಾನ—ಸಮಗ್ರ ಸತ್ಯದ ಪೂರ್ಣಜ್ಞಾನ—ಎಂದು ಸಾಧಿಸಿದ್ದು ಇದನ್ನೇ. ಸತ್ಯಕ್ಕೇ ಹೊರಗು ಒಳಗು ಎಂಬ ವ್ಯತ್ಯಾಸ ತಿಳಿಯದು. ಮಾನವ ಮನಸ್ಸು ಈ ವ್ಯತ್ಯಾಸಗಳನ್ನು ಮಾಡಿದ್ದು ಅಧ್ಯಯನ, ಸಂಶೋಧನೆ ಮತ್ತು ದೈನಂದಿನ ಜೀವನಗಳ ಅನುಕೂಲಕ್ಕಾಗಿ.

ಭೌತ ವಿಜ್ಞಾನಗಳ ವಿವಿಧ ಶಾಖೆಗಳು ಒಂದೇ ಸತ್ಯದ, ಎಂದರೆ ಭೌತ ಪ್ರಕೃತಿಯ ಅಧ್ಯಯನಕ್ಕಾಗಿ ಮಾಡಿಕೊಂಡ ವಿವಿಧ ಮಾರ್ಗಗಳು. ಆ ಎಲ್ಲ ಅಧ್ಯಯನ ಶಾಖೆಗಳೂ ಅಂತಿಮವಾಗಿ ಭವ್ಯವಾದ ಈ ಭೌತ ವಿಶ್ವದ ವಿಜ್ಞಾನವಾಗಿ, ಪ್ರಕೃತಿಯ 'ಹೊರಗ'ನ್ನು ಅಧ್ಯಯನ ಮಾಡುವ ವಿಜ್ಞಾನವಾಗಿ ವಿಲೀನಗೊಳ್ಳುತ್ತವೆ. ಹಾಗೆಯೇ ಈ 'ಒಳಗ'ನ್ನು ಅಧ್ಯಯನ ಮಾಡುವ ವಿಜ್ಞಾನವೂ 'ಹೊರಗ'ನ್ನು ಅಧ್ಯಯನ ಮಾಡುವ ವಿಜ್ಞಾನವೂ ಬ್ರಹ್ಮದ, ಸಮಗ್ರಸತ್ಯದ ವಿಜ್ಞಾನವಾಗಿ ವಿಲೀನಗೊಳ್ಳುತ್ತವೆ. ವೇದಾಂತವು ಬ್ರಹ್ಮವಿದ್ಯೆಯನ್ನು, ಬ್ರಹ್ಮದ ವಿಜ್ಞಾನವನ್ನು ನೋಡಿದ್ದು ಈ ದೃಷ್ಟಿಯಿಂದ. ಬ್ರಹ್ಮ ಎಂದರೆ ಸಮಗ್ರಸತ್ಯ, ಭೌತ ಮತ್ತು ಅಭೌತ ಸಮಗ್ರ ಸತ್ಯ. ಮುಂಡಕ ಉಪನಿಷತ್ತು (I.i.1) ಬ್ರಹ್ಮವಿದ್ಯೆಯನ್ನು ಸರ್ವವಿದ್ಯಾ ಪ್ರತಿಷ್ಠಾ, ಎಲ್ಲ ವಿದ್ಯೆ ಅಥವಾ ವಿಜ್ಞಾನದ ಪ್ರತಿಷ್ಠಾ ಎಂದರೆ ಅಸ್ತಿಭಾರ ಎಂದು ವರ್ಣಿಸುತ್ತದೆ. ಗೀತೆಯಲ್ಲಿ (XIII. 2) ಶ್ರೀಕೃಷ್ಣನು ಹೇಳುತ್ತಾನೆ :

ಕ್ಷೇತ್ರ-ಕ್ಷೇತ್ರಜ್ಞಯೋರ್ ಜ್ಞಾನಮ್
ಯತ್ ತತ್ ಜ್ಞಾನಮ್ ಮತಮ್ ಮಮ—

*ನನ್ನ ಪ್ರಕಾರ ಕ್ಷೇತ್ರದ ಎಂದರೆ ಅನಾತ್ಮದ (ವಸ್ತುಗಳ 'ಹೊರಗಿ'ನ) ಜ್ಞಾನವು ಮತ್ತು ಕ್ಷೇತ್ರಜ್ಞ ಎಂದರೆ ಕ್ಷೇತ್ರವನ್ನು ತಿಳಿಯುವವನ (ವಸ್ತುಗಳ 'ಒಳಗಿ'ನ) ಜ್ಞಾನವು ನಿಜವಾದ ಜ್ಞಾನ.*

ಸ್ವಾಮಿ ವಿವೇಕಾನಂದರು ಈ ವೇದಾಂತದ ಚಿಂತನೆಯ ಸರ್ವಗ್ರಾಹ್ಯತ್ವವನ್ನು ವಿವರಿಸಿದ ರೀತಿಯನ್ನು ಕುರಿತಂತೆ ಹೇಳುತ್ತಾ ರೊಮ್ಯ ರೊಲಾ (The Life of Swami Vivekananda p. 289) ಹೀಗೆಂದಿದ್ದಾರೆ :

*ವಿವೇಕಾನಂದರು ಯಾವುದನ್ನು ಮುಕ್ತ ಧರ್ಮ ಎಂದು ಕರೆದರೋ ಅದನ್ನು ವಿಜ್ಞಾನವು ಒಪ್ಪಿಕೊಳ್ಳುತ್ತದೆಯೋ ಬಿಡುತ್ತದೆಯೋ ಎಂಬುದು ತಾನು ಹೆಚ್ಚು ಶಕ್ತಿವಂತ ಎಂದು ಭಾವಿಸುವವನ ಶಾಂತ ಹೆಮ್ಮೆಗೆ ಉಪೇಕ್ಷೆಯ ವಿಷಯವಾಗುತ್ತದೆ. ಏಕೆಂದರೆ ಅವರ ಧರ್ಮ ವಿಜ್ಞಾನವನ್ನು ಒಪ್ಪಿಕೊಂಡಿತು. ಏಕೆಂದರೆ ಆ ಧರ್ಮವು ಎಷ್ಟು ವಿಶಾಲವಾದದ್ದೆಂದರೆ ಸತ್ಯವನ್ನು ಅನ್ವೇಷಿಸುವ ನಿಷ್ಠಾವಂತರಿಗೂ ಅದರ (ಭೋಜನ) ಪಂಕ್ತಿಯಲ್ಲಿ ಎಡೆಯುಂಟು.*

'ಕೇವಲ ಸತ್ಯ ಮತ್ತು ಅಭಿವ್ಯಕ್ತಿ' ಎಂಬ ೧೮೯೬ರಲ್ಲಿ ಲಂಡನ್ನಿನಲ್ಲಿ ನೀಡಿದ ಉಪನ್ಯಾಸದಲ್ಲಿ ಸ್ವಾಮಿ ವಿವೇಕಾನಂದರು ಹೇಳಿದರು (C. W. Vol II. Ninth Edition, p. 140) :

*ವಿಜ್ಞಾನವು ಎತ್ತ ಕಡೆಗೆ ಓಲುತ್ತಿದೆ ಎಂಬುದು ನಿಮಗೆ ಕಾಣುತ್ತಿಲ್ಲವೆ? ಹಿಂದೂ ರಾಷ್ಟ್ರವು ಮನಸ್ಸಿನ ಅಧ್ಯಯನದ ಮೂಲಕ ತತ್ವಶಾಸ್ತ್ರ ಮತ್ತು ತರ್ಕದ ಮೂಲಕ ಮುಂದುವರಿಯಿತು. ಯೂರೋಪಿನ ರಾಷ್ಟ್ರಗಳು ಹೊರಗಿನ ಪ್ರಕೃತಿಯಿಂದ ಪ್ರಾರಂಭಮಾಡಿದವು. ಈಗ ಅವು ಕೂಡ ಅದೇ ಪರಿಣಾಮಗಳನ್ನು ತಲುಪುತ್ತಿವೆ. ಮನಸ್ಸಿನ ಮೂಲಕ ಹುಡುಕಿ, ಕೊನೆಗೆ ನಾವೂ ಅದೇ ಏಕತೆಗೆ, ವಿಶ್ವ ಏಕಕ್ಕೆ, ಎಲ್ಲದರ ಆತ್ಮಕ್ಕೆ, ಎಲ್ಲದರ ಸಾರಕ್ಕೆ, ಸತ್ಯಕ್ಕೆ ತಲುಪುತ್ತಿದ್ದೇವೆ.. ಭೌತವಿಜ್ಞಾನದ ಮೂಲಕ ಅದೇ ಏಕತೆಯನ್ನು ನಾವು ಸೇರುತ್ತಿದ್ದೇವೆ.*

### ೨೪. ಶ್ರೀಕೃಷ್ಣನು ನಡೆಸಿದ ವಿಜ್ಞಾನ ಮತ್ತು ಧರ್ಮಗಳ ಸಂಯೋಗ

ಮಾನವ ಜ್ಞಾನ ಮತ್ತು ಸಫಲತೆಯ ವಿಷಯದಲ್ಲಿ, ಭೌತವಿಜ್ಞಾನ ಮತ್ತು ಧರ್ಮ ವಿಜ್ಞಾನಗಳ ಪರಸ್ಪರ ಪೂರಕ ಸ್ವರೂಪದ ವಿಷಯದಲ್ಲಿ ಶ್ರೀಮದ್‌ಭಾಗವತವು ಶ್ರೀಕೃಷ್ಣನ ಬಾಯಲ್ಲಿ ಒಂದು ಗಹನವಾದ ಹೇಳಿಕೆಯನ್ನು ಹೇಳಿಸಿದೆ (xi. vii. 19-21);

ಪ್ರಾಯೇನ ಮನುಜಾ ಲೋಕೇ
ಲೋಕ-ತತ್ತ್ವ-ವಿಚಕ್ಷಣಾಃ ;
ಸಮುದ್ಧರತಿ ಹ್ಯಾತ್ಮಾನಮ್
ಆತ್ಮನೈವಾಶುಭಾಶಯಾತ್—

*ಸಾಮಾನ್ಯವಾಗಿ, ಜಗತ್ತಿನಲ್ಲಿ ಬಾಹ್ಯ ಜಗತ್ತನ್ನಾಗಲಿ, ಪ್ರಕೃತಿಯನ್ನಾಗಲಿ, ಪರೀಕ್ಷಿಸುವುದರಲ್ಲಿ ದಕ್ಷರಾದ ಜನರು ಎಲ್ಲ ವಿಧವಾದ ಪಾಪ ಮೂಲಗಳಿಂದಲೂ ತಮ್ಮನ್ನು ತಾವು ಮೇಲಕ್ಕೆ ಎತ್ತಿಕೊಳ್ಳುತ್ತಾರೆ.*

ಆತ್ಮನೋ ಗುರುರಾತ್ಮೈವ
ಪುರುಷಸ್ಯ ವಿಶೇಷತಃ ;
ಯತ್ ಪ್ರತ್ಯಕ್ಷಾನುಮಾನಾಭ್ಯಾಂ
ಶ್ರೇಯೋऽಸೌ ಅನುವಿಂದತೇ—

*ಅದರಲ್ಲೂ ಮಾನವ ಜೀವಿಗೆ ತನ್ನ ಆತ್ಮವೇ ಗುರು. ಏಕೆಂದರೆ ಅವನು ತನ್ನ ಶ್ರೇಯಸ್ಸನ್ನು ನೇರವಾದ ಇಂದ್ರಿಯ ಪರೀಕ್ಷೆಯಿಂದಲೂ,(ನಿಗಮನ ಮತ್ತು ಅನುಗಮನ) ತರ್ಕದ ಮೂಲಕವೂ ಸಾಧಿಸಿಕೊಳ್ಳುತ್ತಾನೆ.*

ಪುರುಷತ್ವೇ ಚ ಮಾಂ ಧೀರಾಃ
ಸಾಂಖ್ಯ -ಯೋಗ-ವಿಶಾರದಾಃ
ಆವಿಸ್ತರಾಂ ಪ್ರಪಶ್ಯಂತಿ
ಸರ್ವ-ಶಕ್ತ್ಯುಪಬೃಂಹಿತಮ್

*ಈ ಮಾನವ ರೂಪದಲ್ಲಿ ಕೂಡ, ಬುದ್ಧಿವಂತರಾದವರು, ಆಧ್ಯಾತ್ಮಿಕ ವಿಜ್ಞಾನ ಮತ್ತು ತಂತ್ರವನ್ನು ಸಾಧಿಸಿರುವವರು, ನನ್ನನ್ನು (ಸರ್ವಾತ್ಮಗಳ ಸ್ವರೂಪವಾದ ಭಗವಂತನನ್ನು) ಎಲ್ಲ ಶಕ್ತಿಗಳ ಆಗರ ಎಂಬುದಾಗಿ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ.*

೨೫. ವೇದಾಂತ ದೃಷ್ಟಿಯಲ್ಲಿ ವಿಕಾಸ

ವೇದಾಂತವು ಇಡೀ ವಿಕಾಸ ಪ್ರಕ್ರಿಯೆಯನ್ನು ರೂಪ ಮತ್ತು ರಚನೆಗಳ ಕ್ರಮಕ್ರಮ ವಿಕಾಸ ದಂತೆಯೂ ಅಂತರಂಗದ ಅನಂತ ಆತ್ಮದ ಹೆಚ್ಚು ಹೆಚ್ಚು ಅಭಿವ್ಯಕ್ತಿಯಂತೆಯೂ ಭಾವಿಸುತ್ತದೆ. ಅದು ಭೌತವಸ್ತುವಿನ ವಿಕಾಸ ಮತ್ತು ಆತ್ಮದ ಅಭಿವ್ಯಕ್ತಿ. ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರವು ಜೀವಾಣುಗಳ ಪ್ರಾರಂಭಾವಸ್ಥೆಯ ರೂಪಗಳಲ್ಲಿ ಅರಿವಿನ ದತ್ತಾಂಶದ ಮೂಲಕ ಅನುಭವದ ಅನನ್ಯ 'ಅನುಭವ' ಎಂಬ ವಿಶಿಷ್ಟ ದತ್ತಾಂಶವನ್ನು ಗುರುತಿಸುತ್ತದೆ. ಈ ದತ್ತಾಂಶವು 'ಅರಿವು' ಎಂಬ ಇನ್ನೊಂದು ವಿಶಿಷ್ಟ ದತ್ತಾಂಶದಿಂದ ಉಂಟಾದುದು. ಜೀವಶಾಸ್ತ್ರವು ಜೀವಾಣುವನ್ನು ತನಗೆ ತಾನೇ ತನ್ನ ರೂಪವನ್ನೇ ಪಡೆಯುವ ಭೌತವಸ್ತು ಎಂಬುದಾಗಿ ವರ್ಣಿಸುತ್ತದೆ. ಆ ಜೀವಾಣುವು ಅನುಭವ ಎಂಬುದನ್ನು ಒಂದು ಹೊಸಮೌಲ್ಯ ಎಂಬುದಾಗಿ ತೋರಿಸುತ್ತಿದೆ. ಅಗಾಧವಾದ ಈ ವಿಶ್ವವು ತನ್ನ ಶತ ಲಕ್ಷ ವರ್ಷಗಳ ವಿಕಾಸದ ಇತಿಹಾಸದಲ್ಲಿ ಈ ಮೌಲ್ಯವನ್ನು ತೋರಿಸಿರಲಿಲ್ಲ.

ನಾವು ವಿಕಾಸದ ಏಣಿಯನ್ನು ಏರುತ್ತಾ ಹೋದಂತೆ ಅರಿವಿನ ಆಧ್ಯಾತ್ಮಿಕ ಮೌಲ್ಯವು ಶ್ರೀಮಂತಿಕೆ, ವೈವಿಧ್ಯಗಳಲ್ಲಿ 'ಬೆಳೆಯುತ್ತಾ' ಹೋಗುತ್ತದೆ ಎಂಬಂತೆ ತೋರುತ್ತದೆ. ಹಾಗೆ ಮಾಡುವಾಗ ಅದು ಅನುಭವವನ್ನು ಪಡೆಯುವವನು ಮತ್ತು ಅನುಭವವನ್ನು ನೀಡುವ ವಸ್ತು ಎಂಬ ಎರಡು ಧ್ರುವ ಗಳಿಂದ ಕೂಡಿದ ಅನುಭವದ ದತ್ತಾಂಶವನ್ನು ಕ್ರಮಕ್ರಮವಾಗಿ ವರ್ಣಿಸುತ್ತಾ, ವಿಸ್ತಾರಗೊಳಿಸುತ್ತಾ ಹೋಗುತ್ತದೆ. ನರವ್ಯೂಹಗಳ ವಿಕಾಸವು ಅರಿವು ಆಳ ಅಗಲಗಳಲ್ಲಿ ಬೆಳೆಯುತ್ತಾ ಹೋಗುತ್ತದೆ. ಪರಿಣಾಮವಾಗಿ ಜೀವಿಗೆ ತನ್ನ ಪರಿಸರದ ಮೇಲೆ ಹತೋಟಿಯು ಹೆಚ್ಚುತ್ತಾ ಹೋಗುತ್ತದೆ ಎಂಬುದನ್ನು ತೆರೆದು ತೋರಿಸುತ್ತದೆ.

ವಿಕಾಸದ ದೃಶ್ಯದಲ್ಲಿ ಮಾನವನ ಆಗಮನದಿಂದ ಈ ಅರಿವಿಗೆ ಒಂದು ಹೊಸ, ಅರ್ಥಪೂರ್ಣ ಅದ್ಭುತ ಪ್ರಗತಿ ದೊರಕಿತು. 'ಮಾನವನು ಒಂದಕ್ಕಿಂತ ಹೆಚ್ಚು ರೀತಿಯಲ್ಲಿ ಅನನ್ಯನಾದವನು' ಎನ್ನುತ್ತಾನೆ ಜೂಲಿಯನ್ ಹಕ್ಸ್ಲೀ. ಎಲ್ಲ ಜೀವಿಗಳ ಅರಿವಿಗೆ ಬರುವುದು, ಬಹುಪಾಲು ಬಾಹ್ಯ ಆವರಣ ಮತ್ತು ಸ್ವಲ್ಪಮಟ್ಟಿಗೆ ಅವರ ದೇಹದ ಒಳಭಾಗ—ಅವೆಲ್ಲ ಪ್ರಕೃತಿಯ 'ಹೊರಭಾಗ'. ಮಾನವನೊಬ್ಬನಿಗೆ ಮಾತ್ರ ಆತ್ಮದ ಅರಿವು—ದೃಕ್ ಎಂದರೆ ನೋಡುವವನಾಗಿ ದೊರಕುತ್ತದೆ. ಜೊತೆಗೆ ಅನಾತ್ಮದ ಅರಿವು ಅನುಭವದ ವಸ್ತುವಾಗಿ, ಪ್ರಕೃತಿಯ ಒಳಗೆ, ಹೊರಗುಗಳೆರಡರ ದೃಶ್ಯವಾಗಿ ದೊರಕುತ್ತದೆ.

ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರ ಮತ್ತು ಪ್ರಾಚೀನ ವೇದಾಂತ ಈ ಎರಡರ ದೃಷ್ಟಿ ಯಿಂದಲೂ ಇದು ಮಾನವನ ಅನನ್ಯತೆ. ನರವ್ಯೂಹಶಾಸ್ತ್ರವು ಮಾನವನು ಪ್ರಕೃತಿಯ ಮೇಲೆ ಸಾಧಿಸಿದ ಪ್ರಭುತ್ವದ ಮೂಲ ಇರುವುದು ಅವನ ಸ್ವ-ಅರಿವಿನಲ್ಲಿ ಎನ್ನುತ್ತದೆ. ಪ್ರಕೃತಿಯು ಅದನ್ನು ಸಾಧಿಸಿದ್ದು ಮಾನವನ ಮಿದುಳಿನ ವಿಕಾಸದಿಂದ. ಮಾನವ ವಿಕಾಸದ ಪ್ರಾರಂಭದ ದಿನಗಳಲ್ಲಿ ಈ ಸ್ವ-ಅರಿವು ಒಂದು ಸಣ್ಣ ಅಸ್ಪಷ್ಟ ಧ್ರುವವಾಗಿತ್ತು. ಭಾರತೀಯ ತತ್ವಶಾಸ್ತ್ರವಾದರೋ ಮಾನವನ ಹೆಚ್ಚಿನ ವಿಕಾಸದ ಭವಿಷ್ಯದ ದೃಷ್ಟಿಯಿಂದಲೂ ಅವನು ತನ್ನನ್ನು ಮತ್ತು ಪ್ರಕೃತಿಯನ್ನು ಕುರಿತಂತೆ ರೂಪಿಸಿದ ಸತ್ಯದ ದೃಷ್ಟಿಯಿಂದಲೂ ಈ ಸ್ವ-ಅರಿವು ಅದ್ಭುತ ಸಾಧ್ಯತೆಗಳನ್ನು ಒಳಗೊಂಡಿದೆ ಎನ್ನುತ್ತದೆ.

ವಿಕಾಸವನ್ನೂ ಮಾನವನ ಅನನ್ಯತೆಯನ್ನೂ ಕುರಿತಂತೆ ವೇದಾಂತದ ದೃಷ್ಟಿ ಏನು ಎಂಬುದನ್ನು ಭಾಗವತವು ಹೀಗೆ ನಿರೂಪಿಸುತ್ತದೆ :

ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾತ್ಮಶಕ್ತ್ಯಾ

ವೃಕ್ಷಾನ್ ಸರೀ-ಸೃಪ- ಪಶೂನ್ ಖಗ -ದಂಶ - ಮತ್ಸ್ಯಾನ್ ;
ತೈಸ್ತೈರತುಷ್ಟ ಹೃದಯಃ ಪುರುಷಂ ವಿಧಾಯ
ಬ್ರಹ್ಮಾವಲೋಕ -ಧಿಷಣಂ ಮುದಮಾಪ ದೇವಃ—

*ಪ್ರಕಾಶಮಾನವಾದ ಆ ಏಕವ್ಯಕ್ತಿಯು, ತನ್ನದೇ ಅಂತಶ್ಶಕ್ತಿಯಿಂದ ಮರಗಳು, ಸರೀಸೃಪಗಳು, ಪಶುಪಕ್ಷಿಗಳು ಮೀನು ಮುಂತಾದುವನ್ನು ಹೊಲ ಚೆಲ್ಲಿ (ವಿಕಾಸಗೊಳಿಸಿ) ಇಂಥ ರೂಪಗಳಿಂದ ತನ್ನ ಹೃದಯದಲ್ಲಿ ತೃಪ್ತಿ ಹೊಂದಲಿಲ್ಲ. ಅನಂತರ ಅವನು ಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಅನನ್ಯ ಶಕ್ತಿಯಿರುವ ಮಾನವರೂಪವನ್ನು ಸೃಷ್ಟಿಸಿದನು'. ಆಗ ಅವನು ಸಂತುಷ್ಟನಾದನು.*

## ೨೮. ಭಾರತದ ಧಾರ್ಮಿಕ ಪ್ರೇರಣೆ : ಸಾಕ್ಷಾತ್ಕಾರವೇ ಹೊರತು ಚಿಂತನೆ ಅಥವಾ ಊಹಾಪೋಹವಲ್ಲ

ವಿಶ್ವದ ರಹಸ್ಯವು ಮಾನವನಲ್ಲಿ ಆತ್ಮದ ರಹಸ್ಯವಾಗಿ ಪ್ರೇರೇಪಿಸುತ್ತದೆ ಎಂಬುದನ್ನು ವಿಕಾಸವು ತೋರಿಸಕೊಟ್ಟಿದೆ. ಆತ್ಮದ ರಹಸ್ಯವು ಸ್ಪಷ್ಟವಾಗುವವರೆಗೆ ವಿಶ್ವದ ರಹಸ್ಯವು ಎಂದೆಂದಿಗೂ ರಹಸ್ಯವಾಗಿಯೇ ಉಳಿಯುತ್ತದೆ. ಅಲ್ಲಿಯವರೆಗೂ, ವಿಜ್ಞಾನ ಅಥವಾ ತತ್ತ್ವಶಾಸ್ತ್ರ, ಮತಧರ್ಮಶಾಸ್ತ್ರ ಅಥವಾ ತರ್ಕ ಇವುಗಳ ಮೂಲಕ ತಿಳಿಯುವ ಸಿದ್ಧಾಂತಗಳಲ್ಲಿ ಉಹಾಪೋಹಗಳಾಗಿಯೇ ಉಳಿಯುತ್ತವೆ. ಅದನ್ನು ಬಿಡಿಸಲು ಹೋದರೆ ಮತ್ತಷ್ಟು ಊಹಾಪೋಹಗಳು ಹುಟ್ಟಿಕೊಳ್ಳುತ್ತವೆ. ಮಾನವ ಮತ್ತು ಪ್ರಕೃತಿಯ ಅಂತಿಮ ಸತ್ಯದಂತಹ ಮುಖ್ಯವಾದ ಕ್ಷೇತ್ರದ ವಿಷಯದಲ್ಲಿ ಕೇವಲ ಊಹಾಪೋಹಗಳಲ್ಲಿ ನಿಲ್ಲುವಂತಹದಲ್ಲ ಭಾರತೀಯ ಮನಸ್ಸು. ಭಾರತದ ಚಿಂತನಶೀಲರು ಪ್ರಶ್ನೆ ಮತ್ತು ಅಹಂಗಳಿಂದ ಸೂಚನೆ ಪಡೆದು—ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿರುವ (I.4.7) ಹೆಜ್ಜೆ ಗುರುತುಗಳು ಅವು—ಅಂತರಂಗ ಜಗತ್ತಿನ ಶೋಧನೆಗೆ ಧೈರ್ಯವಾಗಿ ಮುನ್ನುಗ್ಗಿದರು. ಅವರು ಆಳಕ್ಕೆ ಇಳಿದಾಗ ಸಾಂತವೂ, ಕಾಲಬದ್ಧವೂ ಆದುದರ ಹಿಂದೆ ಇರುವ ಅನಂತವೂ ಶಾಶ್ವತವೂ ಆದ ಸತ್ಯವನ್ನು ಕಂಡುಹಿಡಿದರು. ಅವರು ಅದನ್ನು ಅನುಭವ ಸ್ವರೂಪ, ಚಿತ್‌ಸ್ವರೂಪ ಎಂದು ಕರೆದರು. ಈ ಜಗತ್ತಿನ ವಿವಿಧ ವಸ್ತುಗಳೂ, ಅವುಗಳನ್ನು ನೋಡುವವರೂ ಅನಂತ ವಿಧದವರು—ಅವರೆಲ್ಲ ಮಿಂಚಿ ಮಾಯವಾಗುವ ರೂಪಗಳು. ಈ ದೃಷ್ಟಿಯನ್ನೂ ಅದು ಹುಡುಕುತ್ತಿರುವ ವಸ್ತುವನ್ನೂ ಕುರಿತು ಬೃಹದಾರಣ್ಯಕವು ಇನ್ನೊಂದು ಮುಖ್ಯವಾದ ಭಾಗದಲ್ಲಿ ಹೀಗೆ ಹೇಳಿದೆ (III. 4.1):

ಯತ್ ಸಾಕ್ಷಾತ್ ಅಪರೋಕ್ಷಾತ್ ಬ್ರಹ್ಮ
ಯ ಆತ್ಮಾ ಸರ್ವಾಂತರಃ—

*ಯಾವ ಬ್ರಹ್ಮವು ಅಪರೋಕ್ಷವೂ ,ಸಾಕ್ಷಾತ್ತೂ ಆಗಿದೆಯೋ ಅದು ಎಲ್ಲರ ಅಂತರಂಗದ ಆತ್ಮ.*

'ನೀನು ಅದೇ ಆಗಿದ್ದೀಯೆ' (ತತ್ ತ್ವಮ್ ಅಸಿ) ಎನ್ನುತ್ತ ಛಾಂದೋಗ್ಯ ಉಪನಿಷತ್ತು (VI. iii. 7) ಮರ್ತ್ಯ ಮಾನವನನ್ನು ಅಮರ್ತ್ಯ ದಿವ್ಯತೆಯೊಂದಿಗೆ ಸರಿಸಮಾನವಾಗಿಸಿದೆ. ಮತ್ತೆ ಮತ್ತೆ ಉಪನಿಷತ್ತುಗಳು ಈ ಮಹಾನ್ ಸತ್ಯವನ್ನು ಪುನರುಚ್ಚರಿಸುತ್ತವೆ. ವಿಜ್ಞಾನಿ ಮಾನವನು ಈ ವಿಶಾಲವಾದ ವಿಶ್ವವನ್ನು ತನ್ನ ಚಿಂತನ ಶಕ್ತಿಯಿಂದ ಒಂದು ಸೂತ್ರದಲ್ಲಿ ಅಳವಡಿಸಬಲ್ಲ ಗಹನವಾದ ಆಯಾಮವನ್ನು ಹೊಂದಿರಬಲ್ಲನಾದರೆ, ಶುದ್ಧ ಚೈತನ್ಯವೂ ಬದಲಾಯಿಸಲು ಸಾಧ್ಯವಿಲ್ಲದ್ದೂ ಆದ, ಗೀತೆಯು (XIII. 16) ಹೇಳುವಂತೆ ವಿಭಕ್ತ ವಸ್ತುಗಳಲ್ಲಿ ಅವಿಭಕ್ತವೂ ಆದ ಅನಂತ ಆತ್ಮವಾದ

### ೨೫. ವೇದಾಂತ ದೃಷ್ಟಿಯಲ್ಲಿ ವಿಕಾಸ

ವೇದಾಂತವು ಇಡೀ ವಿಕಾಸ ಪ್ರಕ್ರಿಯೆಯನ್ನು ರೂಪ ಮತ್ತು ರಚನೆಗಳ ಕ್ರಮಕ್ರಮ ವಿಕಾಸ ದಂತೆಯೂ ಅಂತರಂಗದ ಅನಂತ ಆತ್ಮದ ಹೆಚ್ಚು ಹೆಚ್ಚು ಅಭಿವ್ಯಕ್ತಿಯಂತೆಯೂ ಭಾವಿಸುತ್ತದೆ. ಅದು ಭೌತವಸ್ತುವಿನ ವಿಕಾಸ ಮತ್ತು ಆತ್ಮದ ಅಭಿವ್ಯಕ್ತಿ. ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರವು ಜೀವಾಣುಗಳ ಪ್ರಾರಂಭಾವಸ್ಥೆಯ ರೂಪಗಳಲ್ಲಿ ಅರಿವಿನ ದತ್ತಾಂಶದ ಮೂಲಕ ಅನುಭವದ ಅನನ್ಯ 'ಅನುಭವ' ಎಂಬ ವಿಶಿಷ್ಟ ದತ್ತಾಂಶವನ್ನು ಗುರುತಿಸುತ್ತದೆ. ಈ ದತ್ತಾಂಶವು 'ಅರಿವು' ಎಂಬ ಇನ್ನೊಂದು ವಿಶಿಷ್ಟ ದತ್ತಾಂಶದಿಂದ ಉಂಟಾದುದು. ಜೀವಶಾಸ್ತ್ರವು ಜೀವಾಣುವನ್ನು ತನಗೆ ತಾನೇ ತನ್ನ ರೂಪವನ್ನೇ ಪಡೆಯುವ ಭೌತವಸ್ತು ಎಂಬುದಾಗಿ ವರ್ಣಿಸುತ್ತದೆ. ಆ ಜೀವಾಣುವು ಅನುಭವ ಎಂಬುದನ್ನು ಒಂದು ಹೊಸಮೌಲ್ಯ ಎಂಬುದಾಗಿ ತೋರಿಸುತ್ತಿದೆ. ಅಗಾಧವಾದ ಈ ವಿಶ್ವವು ತನ್ನ ಶತ ಲಕ್ಷ ವರ್ಷಗಳ ವಿಕಾಸದ ಇತಿಹಾಸದಲ್ಲಿ ಈ ಮೌಲ್ಯವನ್ನು ತೋರಿಸಿರಲಿಲ್ಲ.

ನಾವು ವಿಕಾಸದ ಏಣಿಯನ್ನು ಏರುತ್ತಾ ಹೋದಂತೆ ಅರಿವಿನ ಆಧ್ಯಾತ್ಮಿಕ ಮೌಲ್ಯವು ಶ್ರೀಮಂತಿಕೆ, ವೈವಿಧ್ಯಗಳಲ್ಲಿ 'ಬೆಳೆಯುತ್ತಾ' ಹೋಗುತ್ತದೆ ಎಂಬಂತೆ ತೋರುತ್ತದೆ. ಹಾಗೆ ಮಾಡುವಾಗ ಅದು ಅನುಭವವನ್ನು ಪಡೆಯುವವನು ಮತ್ತು ಅನುಭವವನ್ನು ನೀಡುವ ವಸ್ತು ಎಂಬ ಎರಡು ಧ್ರುವ ಗಳಿಂದ ಕೂಡಿದ ಅನುಭವದ ದತ್ತಾಂಶವನ್ನು ಕ್ರಮಕ್ರಮವಾಗಿ ವರ್ಣಿಸುತ್ತಾ, ವಿಸ್ತಾರಗೊಳಿಸುತ್ತಾ ಹೋಗುತ್ತದೆ. ನರವ್ಯೂಹಗಳ ವಿಕಾಸವು ಅರಿವು ಆಳ ಅಗಲಗಳಲ್ಲಿ ಬೆಳೆಯುತ್ತಾ ಹೋಗುತ್ತದೆ. ಪರಿಣಾಮವಾಗಿ ಜೀವಿಗೆ ತನ್ನ ಪರಿಸರದ ಮೇಲೆ ಹತೋಟಿಯು ಹೆಚ್ಚುತ್ತಾ ಹೋಗುತ್ತದೆ ಎಂಬುದನ್ನು ತೆರೆದು ತೋರಿಸುತ್ತದೆ.

ವಿಕಾಸದ ದೃಶ್ಯದಲ್ಲಿ ಮಾನವನ ಆಗಮನದಿಂದ ಈ ಅರಿವಿಗೆ ಒಂದು ಹೊಸ, ಅರ್ಥಪೂರ್ಣ ಅದ್ಭುತ ಪ್ರಗತಿ ದೊರಕಿತು. 'ಮಾನವನು ಒಂದಕ್ಕಿಂತ ಹೆಚ್ಚು ರೀತಿಯಲ್ಲಿ ಅನನ್ಯನಾದವನು' ಎನ್ನುತ್ತಾನೆ ಜೂಲಿಯನ್ ಹಕ್ಸ್ಲೇ. ಎಲ್ಲ ಜೀವಿಗಳ ಅರಿವಿಗೆ ಬರುವುದು, ಬಹುಪಾಲು ಬಾಹ್ಯ ಆವರಣ ಮತ್ತು ಸ್ವಲ್ಪಮಟ್ಟಿಗೆ ಅವರ ದೇಹದ ಒಳಭಾಗ—ಅವೆಲ್ಲ ಪ್ರಕೃತಿಯ 'ಹೊರಭಾಗ'. ಮಾನವನೊಬ್ಬನಿಗೆ ಮಾತ್ರ ಆತ್ಮದ ಅರಿವು—ದೃಕ್ ಎಂದರೆ ನೋಡುವವನಾಗಿ ದೊರಕುತ್ತದೆ. ಜೊತೆಗೆ ಅನಾತ್ಮದ ಅರಿವು ಅನುಭವದ ವಸ್ತುವಾಗಿ, ಪ್ರಕೃತಿಯ ಒಳಗೆ, ಹೊರಗುಗಳೆರಡರ ದೃಶ್ಯವಾಗಿ ದೊರಕುತ್ತದೆ.

ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರ ಮತ್ತು ಪ್ರಾಚೀನ ವೇದಾಂತ ಈ ಎರಡರ ದೃಷ್ಟಿ ಯಿಂದಲೂ ಇದು ಮಾನವನ ಅನನ್ಯತೆ. ನರವ್ಯೂಹಶಾಸ್ತ್ರವು ಮಾನವನು ಪ್ರಕೃತಿಯ ಮೇಲೆ ಸಾಧಿಸಿದ ಪ್ರಭುತ್ವದ ಮೂಲ ಇರುವುದು ಅವನ ಸ್ವ-ಅರಿವಿನಲ್ಲಿ ಎನ್ನುತ್ತದೆ. ಪ್ರಕೃತಿಯು ಅದನ್ನು ಸಾಧಿಸಿದ್ದು ಮಾನವನ ಮಿದುಳಿನ ವಿಕಾಸದಿಂದ. ಮಾನವ ವಿಕಾಸದ ಪ್ರಾರಂಭದ ದಿನಗಳಲ್ಲಿ ಈ ಸ್ವ-ಅರಿವು ಒಂದು ಸಣ್ಣ ಅಸ್ಪಷ್ಟ ಧ್ರುವವಾಗಿತ್ತು. ಭಾರತೀಯ ತತ್ವಶಾಸ್ತ್ರವಾದರೋ ಮಾನವನ ಹೆಚ್ಚಿನ ವಿಕಾಸದ ಭವಿಷ್ಯದ ದೃಷ್ಟಿಯಿಂದಲೂ ಅವನು ತನ್ನನ್ನು ಮತ್ತು ಪ್ರಕೃತಿಯನ್ನು ಕುರಿತಂತೆ ರೂಪಿಸಿದ ಸತ್ಯದ ದೃಷ್ಟಿಯಿಂದಲೂ ಈ ಸ್ವ-ಅರಿವು ಅದ್ಭುತ ಸಾಧ್ಯತೆಗಳನ್ನು ಒಳಗೊಂಡಿದೆ ಎನ್ನುತ್ತದೆ.

ವಿಕಾಸವನ್ನೂ ಮಾನವನ ಅನನ್ಯತೆಯನ್ನೂ ಕುರಿತಂತೆ ವೇದಾಂತದ ದೃಷ್ಟಿ ಏನು ಎಂಬುದನ್ನು ಭಾಗವತವು ಹೀಗೆ ನಿರೂಪಿಸುತ್ತದೆ :

ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾತ್ಮಶಕ್ತ್ಯಾ

ವೃಕ್ಷಾನ್ ಸರೀ-ಸೃಪ- ಪಶೂನ್ ಖಗ -ದಂಶ - ಮತ್ಸ್ಯಾನ್ ;
ತೈಸ್ತೈರತುಷ್ಟ ಹೃದಯಃ ಪುರುಷಂ ವಿಧಾಯ
ಬ್ರಹ್ಮಾವಲೋಕ -ಧಿಷಣಂ ಮುದಮಾಪ ದೇವಃ—

*ಪ್ರಕಾಶಮಾನವಾದ ಆ ವಿಶವ್ಯಕ್ತಿಯು, ತನ್ನದೇ ಅಂತಶ್ಶಕ್ತಿಯಿಂದ ಮರಗಳು, ಸರೀಸೃಪಗಳು, ಪಶುಪಕ್ಷಿಗಳು ಮೀನು ಮುಂತಾದುವನ್ನು ಹೊಲ ಚೆಲ್ಲಿ (ವಿಕಾಸಗೊಳಿಸಿ) ಇಂಥ ರೂಪಗಳಿಂದ ತನ್ನ ಹೃದಯದಲ್ಲಿ ತೃಪ್ತಿ ಹೊಂದಲಿಲ್ಲ. ಅನಂತರ ಅವನು ಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಅನನ್ಯ ಶಕ್ತಿಯಿರುವ ಮಾನವರೂಪವನ್ನು ಸೃಷ್ಟಿಸಿದನು'. ಆಗ ಅವನು ಸಂತುಷ್ಟನಾದನು.*

## ೨೬. ಭಾರತದ ಧಾರ್ಮಿಕ ಪ್ರೇರಣೆ : ಸಾಕ್ಷಾತ್ಕಾರವೇ ಹೊರತು ಚಿಂತನೆ ಅಥವಾ ಊಹಾಪೋಹವಲ್ಲ

ವಿಶ್ವದ ರಹಸ್ಯವು ಮಾನವನಲ್ಲಿ ಆತ್ಮದ ರಹಸ್ಯವಾಗಿ ಪ್ರೇರೇಪಿಸುತ್ತದೆ ಎಂಬುದನ್ನು ವಿಕಾಸವು ತೋರಿಸಿಕೊಟ್ಟಿದೆ. ಆತ್ಮದ ರಹಸ್ಯವು ಸ್ಪಷ್ಟವಾಗುವವರೆಗೆ ವಿಶ್ವದ ರಹಸ್ಯವು ಎಂದೆಂದಿಗೂ ರಹಸ್ಯವಾಗಿಯೇ ಉಳಿಯುತ್ತದೆ. ಅಲ್ಲಿಯವರೆಗೂ, ವಿಜ್ಞಾನ ಅಥವಾ ತತ್ವಶಾಸ್ತ್ರ, ಮತಧರ್ಮಶಾಸ್ತ್ರ ಅಥವಾ ತರ್ಕ ಇವುಗಳ ಮೂಲಕ ತಿಳಿಯುವ ಸಿದ್ಧಾಂತಗಳಲ್ಲಿ ಉಹಾಪೋಹಗಳಾಗಿಯೇ ಉಳಿಯುತ್ತವೆ. ಅದನ್ನು ಬಿಡಿಸಲು ಹೋದರೆ ಮತ್ತಷ್ಟು ಊಹಾಪೋಹಗಳು ಹುಟ್ಟಿಕೊಳ್ಳುತ್ತವೆ. ಮಾನವ ಮತ್ತು ಪ್ರಕೃತಿಯ ಅಂತಿಮ ಸತ್ಯದಂತಹ ಮುಖ್ಯವಾದ ಕ್ಷೇತ್ರದ ವಿಷಯದಲ್ಲಿ ಕೇವಲ ಊಹಾಪೋಹಗಳಲ್ಲಿ ನಿಲ್ಲುವಂತಹದಲ್ಲ ಭಾರತೀಯ ಮನಸ್ಸು. ಭಾರತದ ಚಿಂತನಶೀಲರು ಪ್ರಜ್ಞೆ ಮತ್ತು ಅಹಂಗಳಿಂದ ಸೂಚನೆ ಪಡೆದು—ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿರುವ (I.4.7) ಹೆಜ್ಜೆ ಗುರುತುಗಳು ಅವು—ಅಂತರಂಗ ಜಗತ್ತಿನ ಶೋಧನೆಗೆ ಧೈರ್ಯವಾಗಿ ಮುನ್ನುಗ್ಗಿದರು. ಅವರು ಆಳಕ್ಕೆ ಇಳಿದಾಗ ಸಾಂತವೂ, ಕಾಲಬದ್ಧವೂ ಆದುದರ ಹಿಂದೆ ಇರುವ ಅನಂತವೂ ಶಾಶ್ವತವೂ ಆದ ಸತ್ಯವನ್ನು ಕಂಡುಹಿಡಿದರು. ಅವರು ಅದನ್ನು ಅನುಭವ ಸ್ವರೂಪ, ಚಿತ್‌ಸ್ವರೂಪ ಎಂದು ಕರೆದರು. ಈ ಜಗತ್ತಿನ ವಿವಿಧ ವಸ್ತುಗಳೂ, ಅವುಗಳನ್ನು ನೋಡುವವರೂ ಅನಂತ ವಿಧದವರು—ಅವರೆಲ್ಲ ಮಿಂಚಿ ಮಾಯವಾಗುವ ರೂಪಗಳು. ಈ ದೃಷ್ಟಿಯನ್ನೂ ಅದು ಹುಡುಕುತ್ತಿರುವ ವಸ್ತುವನ್ನೂ ಕುರಿತು ಬೃಹದಾರಣ್ಯಕವು ಇನ್ನೊಂದು ಮುಖ್ಯವಾದ ಭಾಗದಲ್ಲಿ ಹೀಗೆ ಹೇಳಿದೆ (III. 4.1) :

ಯತ್ ಸಾಕ್ಷಾತ್ ಅಪರೋಕ್ಷಾತ್ ಬ್ರಹ್ಮ
ಯ ಆತ್ಮಾ ಸರ್ವಾಂತರಃ—

*ಯಾವ ಬ್ರಹ್ಮವು ಅಪರೋಕ್ಷವೂ ,ಸಾಕ್ಷಾತ್ತೂ ಆಗಿದೆಯೋ ಅದು ಎಲ್ಲರ ಅಂತರಂಗದ ಆತ್ಮ.*

'ನೀನು ಅದೇ ಆಗಿದ್ದೀಯೆ' (ತತ್ ತ್ವಮ್ ಅಸಿ) ಎನ್ನುತ್ತ ಛಾಂದೋಗ್ಯ ಉಪನಿಷತ್ತು (VI. iii. 7) ಮರ್ತ್ಯ ಮಾನವನನ್ನು ಅಮರ್ತ್ಯ ದಿವ್ಯತೆಯೊಂದಿಗೆ ಸರಿಸಮಾನವಾಗಿಸಿದೆ. ಮತ್ತೆ ಮತ್ತೆ ಉಪನಿಷತ್ತುಗಳು ಈ ಮಹಾನ್ ಸತ್ಯವನ್ನು ಪುನರುಚ್ಚರಿಸುತ್ತವೆ. ವಿಜ್ಞಾನಿ ಮಾನವನು ಈ ವಿಶಾಲವಾದ ವಿಶ್ವವನ್ನು ತನ್ನ ಚಿಂತನ ಶಕ್ತಿಯಿಂದ ಒಂದು ಸೂತ್ರದಲ್ಲಿ ಅಳವಡಿಸಬಲ್ಲ ಗಹನವಾದ ಆಯಾಮವನ್ನು ಹೊಂದಿರಬಲ್ಲನಾದರೆ, ಶುದ್ಧ ಚೈತನ್ಯವೂ ಬದಲಾಯಿಸಲು ಸಾಧ್ಯವಿಲ್ಲದ್ದೂ ಆದ, ಗೀತೆಯು (XIII. 16) ಹೇಳುವಂತೆ ವಿಭಕ್ತ ವಸ್ತುಗಳಲ್ಲಿ ಅವಿಭಕ್ತವೂ ಆದ ಅನಂತ ಆತ್ಮವಾದ

ಮಾನವನು ಎಂತಹ ಆಯಾಮವನ್ನು ಹೊಂದಿದವನಾಗಿರಬೇಕು ! ಮಾನವನಲ್ಲಿನ ರಹಸ್ಯದ ಪರಿಹಾರದಿಂದ ವಿಶ್ವದ ರಹಸ್ಯವು ಅಂತಿಮವಾಗಿ ಪರಿಹರಿಸಲ್ಪಟ್ಟಿತು. ಉಪನಿಷತ್ತಿನ ಋಷಿಗಳು ವಿಶ್ವದ ಕೇಂದ್ರವನ್ನು ಮಾನವನಲ್ಲಿರುವ ಕೇಂದ್ರದಿಂದ ಕಂಡುಹಿಡಿದರು. ಆ ಕಂಡುಹಿಡಿಯುವಿಕೆಯಿಂದ ಮಾನವನು ತನ್ನ ಅನಂತ ಆಯಾಮದಲ್ಲಿ ಗೋಚರವಾದನು. ವಿಶ್ವವೂ ಕೂಡ ತನ್ನ ಅನಂತ ಆಧ್ಯಾತ್ಮಿಕ ಆಯಾಮದಲ್ಲಿ ಗೋಚರವಾಯಿತು. ಜೀವನ ಸಾರ್ಥಕತೆಗೆ ಈ ಸತ್ಯದ ಸಾಕ್ಷಾತ್ಕಾರವೊಂದೇ ದಾರಿ ಎಂದುವು ಉಪನಿಷತ್ತುಗಳು. ಶ್ವೇತಾಶ್ವತರ ಉಪನಿಷತ್ತು ಹೇಳುತ್ತದೆ (ii.15) :

ಯದಾತ್ಮ-ತತ್ತ್ವೇನ ತು ಬ್ರಹ್ಮ-ತತ್ತ್ವಂ
ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ ;
ಅಜಂ ಧ್ರುವಂ ಸರ್ವತತ್ತ್ವೈಃ ವಿಶುದ್ಧಂ
ಜ್ಞಾತ್ವಾದೇವಂ ಮುಚ್ಯತೇ ಸರ್ವ ಪಾಪೈಃ—

*ಇಂದ್ರಿಯಗಳನ್ನು ನಿಗ್ರಹಿಸಿದ ಸಾಧಕನು, ಈ ದೇಹದಲ್ಲಿಯೇ, (ಎಲ್ಲರಲ್ಲೂ ಇರುವ ಅನಂತ ಆತ್ಮವಾದ) ಬ್ರಹ್ಮವನ್ನು ಆತ್ಮದ ಸತ್ಯದ ಮೂಲಕ ಬೆಳಕಿನಂತೆ ಸ್ವಯಂ ಪ್ರಕಾಶಮಾನವಾದದ್ದು ಎಂದು ಅರಿತಾಗ, ಅಜಾತವೂ, ಶಾಶ್ವತವೂ ಪ್ರಕೃತಿಯ ಬದಲಾವಣೆಗಳ ಸ್ಪರ್ಶವಿಲ್ಲದ್ದೂ ಆದ ದಿವ್ಯತೆಯನ್ನು ಅರಿತು ಎಲ ಪಾಪಗಳಿಂದಲೂ ಮುಕ್ತನಾಗುತ್ತಾನೆ*

ಇದು ಮತ್ತಿತರ ಉಪನಿಷತ್ ಶ್ಲೋಕಗಳು ಗಹನವಾದ, ಆನಂದಮಯವಾದ ಸಾಕ್ಷಾತ್ಕಾರವನ್ನು ನಮಗೆ ಸಂವಹನಗೊಳಿಸುತ್ತವೆ. ಆ ಅಪಾರವಾದ ಸಾಹಿತ್ಯದ ಭಾಷೆಯೇ ನಮಗೆ ಅದನ್ನು ತಿಳಿಸುತ್ತದೆ. ಆತ್ಮದ ಅಂತಿಮ ಸತ್ಯವನ್ನು ಸೇರುವುದರಲ್ಲಿ ಅವರು, ಅಸ್ತಿತ್ವ ಮತ್ತು ಜ್ಞಾನದ, ಶಾಂತಿ, ಆನಂದಗಳ, ಅನಂತ ಅನುಭವದ ಸಂಯೋಜಕ ಕ್ಷೇತ್ರದ ಅಂತಿಮ ಸತ್ಯವನ್ನು ತಲುಪಿದ್ದರು. ಆದುದರಿಂದಲೇ ಅವರು ತಮ್ಮ ಈ ಕಂಡುಹಿಡಿಯುವಿಕೆಯನ್ನು ಸತ್ಯ, ಜ್ಞಾನ, ಅನಂತ ಅಥವಾ ಸತ್ ಚಿತ್, ಆನಂದಗಳ ಅಪಾರ ಗಣಿಯೆಂದು ಸಾರಿದರು. ಈ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಹೋರಾಟದಲ್ಲಿ, ಅದು ನೀಡುವ ಜೀವನ ಸಾಫಲ್ಯದಲ್ಲಿ, ಸಿದ್ಧಿಯಲ್ಲಿ ಅವರು ವಿಶ್ವ,ಜೈವಿಕ ವಿಕಾಸ ಸಮಸ್ತದ, ವಿಶೇಷವಾಗಿ ಮಾನವ ವಿಕಾಸದ ನಿಜವಾದ ಅರ್ಥವನ್ನು ಕಂಡುಕೊಂಡರು.

ಜೀವಿಯು ಸಫಲತೆಯನ್ನು ಬಯಸುತ್ತದೆ ; ಎಲ್ಲ ಚಟುವಟಿಕೆಗಳ ಪ್ರಕ್ರಿಯೆಗಳ ಗುರಿ ಅದೇ ಎನ್ನುತ್ತದೆ, ಆಧುನಿಕ ಜೀವಶಾಸ್ತ್ರ. ಉಪನಿಷತ್ತುಗಳಲ್ಲಿ ಮುಕ್ತಿ ಮತ್ತು ಪೂರ್ಣತೆಯ ಸುಂದರ ಕಲ್ಪನೆಗಳಿವೆ. ನಾವು ಈಗ ಬದ್ಧರು ; ಈಗ ನಾವು ಹೋಳು ಹೋಳಾಗಿ ವಿಚ್ಛಿನ್ನರಾಗಿದ್ದೇವೆ. ನಾವು ಮುಕ್ತರಾಗ ಬಯಸುತ್ತೇವೆ ; ನಾವು ಪೂರ್ಣರಾಗಲು ಇಡಿಯಾಗಬಯಸುತ್ತೇವೆ. ನಾವು ಪೂರ್ಣತೆಯನ್ನು ಅನುಭವಿಸಬಯಸುತ್ತೇವೆ. ಯೇಸುಕ್ರಿಸ್ತನು ಅದನ್ನು 'ಪರಿಪೂರ್ಣತೆ' ಎಂದು ಕರೆದ. 'ನೀವು ಆದ್ದರಿಂದ ಪರಿಪೂರ್ಣರಾಗಿ, ಸ್ವರ್ಗದಲ್ಲಿರುವ ನಿಮ್ಮ ತಂದೆಯು ಪರಿಪೂರ್ಣನಾಗಿರುವಂತೆ' (Mathew V. 48). ಮುಕ್ತಿಯ ಸ್ವಾತಂತ್ರ್ಯವನ್ನು ಅನುಭವಿಸುವುದು ಮಾನವನ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು, ಬುದ್ಧ ಹೇಳಿದಂತೆ ಬೋಧಿಯನ್ನು, ಪೂರ್ಣಜ್ಞಾನವನ್ನು ಪಡೆಯುವುದು. ಇದೇ ಮಾನವ ವಿಕಾಸದ ಮಹಾನ್ ಗುರಿ. ಶಿಕ್ಷಣ, ವಿಜ್ಞಾನ, ಸಂಸ್ಕೃತಿ, ಸಾಮಾಜಿಕ-ರಾಜಕೀಯ ಪ್ರಕ್ರಿಯೆಗಳು ಮತ್ತು ಧರ್ಮ ಈ ಎಲ್ಲವುಗಳ ಉದ್ದೇಶ ಮಾನವ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು, ಮಾನವ ಸಾಫಲ್ಯದ ವ್ಯಾಪ್ತಿ, ಆಳಗಳನ್ನು ಹೆಚ್ಚಿಸುವುದು. ಇದು ಸಾಧ್ಯವಾಗುವುದು ಹೊರಗಿನ ಜಗತ್ತಿನ ಮೇಲೆ ಮಾತ್ರವಲ್ಲದೆ, ಅಂತರಂಗದ ಆಳಗಳ ಮೇಲೆ ಹತೋಟಿಯನ್ನು ಸಾಧಿಸುವುದರಿಂದ, ಅವುಗಳ ವಿಷಯದಲ್ಲಿ ಮಾನವನ ಜ್ಞಾನವನ್ನು ಹೆಚ್ಚಿಸುವುದರಿಂದ. ಭೌತ ವಿಜ್ಞಾನಗಳಲ್ಲಿ ಜ್ಞಾನವೇ ಶಕ್ತಿ. ಧರ್ಮದ ವಿಜ್ಞಾನದಲ್ಲಿ, ಮಾನವನ ಅಂತರಂಗ ಪ್ರಕೃತಿಯ

ವಿಜ್ಞಾನದಲ್ಲಿ ಅದು ಇನ್ನೂ ಹೆಚ್ಚು ಸತ್ಯ. ಏಕೆಂದರೆ ಹಾಗೆ ಸಂಪಾದಿಸಿದ ಶಕ್ತಿಯು ಪ್ರಮಾಣದ ದೃಷ್ಟಿಯಿಂದಲ್ಲದೆ ಗುಣದ ದೃಷ್ಟಿಯಿಂದಲೂ ಇನ್ನೂ ಹಿರಿದಾದದ್ದು.

## ೨೭. ಸಾಮಾಜಿಕ ನೀತಿಯಾಗಿ ಧರ್ಮ

ಮಾನವನು ತನ್ನ ಜೈವಿಕ ತೃಪ್ತಿಗಳನ್ನು ಒಂದು ಶಿಸ್ತಿಗೆ ಒಳಪಡಿಸಿದಲ್ಲದೆ ಆಧ್ಯಾತ್ಮಿಕ ಬೆಳವಣಿಗೆ ಅಥವಾ ಮನೋ-ಸಾಮಾಜಿಕ ವಿಕಾಸದ ದೀರ್ಘಪಥದಲ್ಲಿ ಮುಂದುವರೆಯಲಾರನು. ಅಂಥ ಶಿಸ್ತಿನಿಂದ, ತನ್ನ ಜ್ಞಾನ ಮತ್ತು ಪ್ರಯತ್ನಗಳಿಂದ ತನ್ನ ಅಂತರಂಗ ಜೀವನದಲ್ಲಿ ಒಂದು ಮಟ್ಟದ ಸ್ಥಿರತೆಯನ್ನು ಅವನು ಪಡೆದುಕೊಳ್ಳಬೇಕಾಗುತ್ತದೆ. ಪ್ರಕೃತಿಯು ಅವನಿಗೆ ಒದಗಿಸಿದ ಪ್ರಥಮ ಸಮತೋಲನದ (Homeostasis) ಜೊತೆಗೆ ಅವನು ಸಾಧಿಸಬೇಕಾದ ಎರಡನೆಯ ಸಮತೋಲನ ಇದು. ಇದರ ವಿಷಯ ಮುಂದೆ ಹೆಚ್ಚಾಗಿ ಹೇಳುತ್ತೇನೆ. ಸಮತ್ವಂ ಯೋಗ ಉಚ್ಯತೆ, ಯೋಗ ಎಂದರೆ ಸಮತ್ವ ಹಿಂದು ಗೀತೆ ಹೇಳುವ ಸಮತೋಲನ ಇದೇ. ಮಹಾನ್ ಫ್ರೆಂಚ್ ಮನಶ್ಶಾಸ್ತ್ರಜ್ಞ ಕ್ಲಾಡ್ ಬರ್ನಾರ್ (Claude Bernard) ಹೇಳಿದ 'ಮುಕ್ತ ಜೀವನಕ್ಕೆ ಅಗತ್ಯವಾದ ಸ್ಥಿತಿ ಎಂದರೆ ಸ್ಥಿರವಾದ ಅಂತರಂಗದ ಆವರಣ' ಎಂಬುದರ ಆಧ್ಯಾತ್ಮಿಕ ಸಮಾನಾರ್ಥಕ ಇದೇ. ಇದರ ವಿಷಯ ಮುಂದೆ ಹೆಚ್ಚಾಗಿ ಹೇಳುತ್ತೇನೆ.

ಭಾರತೀಯ ಧರ್ಮದಲ್ಲಿ ಹೇಳಿರುವ ಶಿಸ್ತು ಇದೇ. ಯಾವುದೇ ಕ್ರಮಬದ್ಧ ಮಾನವ ಸಮಾಜವೂ ಇದನ್ನು ಬಿಟ್ಟು ಇರಲಾರದು. ಇದಿಲ್ಲದಿದ್ದರೆ ಮಾನವನು ಪಶುಸ್ಥಾನಕ್ಕೆ ಇಳಿಯುತ್ತಾನೆ ಎನ್ನುತ್ತದೆ ಭಾರತೀಯ ವಿವೇಕ ; ಧರ್ಮೇಣ ಹೀನಾಃ ಪಶುಭಿಃ ಸಮಾನಾಃ. ಧರ್ಮ ಎಂದರೆ ಸಮಾಜದಲ್ಲಿ ಮಾನವ ಮಾನವರ ನಡುವೆ ಬಾಂಧವ್ಯದ ಬೆಸುಗೆಯ ತತ್ವ. ಅದರರ್ಥ ಪಂಥ, ಸಿದ್ಧಾಂತ, ಮತಕರ್ಮ ಅಥವಾ ಪರಲೋಕದಲ್ಲಿ ಮುಕ್ತಿಯನ್ನು ಪಡೆಯುವ ಯೋಜನೆ—ಈ ಯಾವುದೂ ಅಲ್ಲ. ಇಟ್ಟಿಗೆಗಳ ಒಂದು ರಾಶಿ ಎಂದೂ ಕಟ್ಟಡವಾಗುವುದಿಲ್ಲ. ಹಾಗೆಯೇ ಮನುಷ್ಯರ ಗುಂಪು ಒಂದು ಸಮಾಜವಾಗುವುದಿಲ್ಲ. ಸ್ಥಾಯಿಯಾದ ವ್ಯಕ್ತಿಯೊಬ್ಬನನ್ನು ಚೈತನ್ಯಶೀಲವೂ ವಿಶಾಲವೂ ಆದ ವ್ಯಕ್ತಿತ್ವವನ್ನಾಗಿ ಮಾಡುವ ಸಂಯೋಜಕ ತತ್ವವೊಂದುಂಟು ; ಅದೇ ಸಮಾಜದ ವ್ಯಕ್ತಿಗಳನ್ನು ಒಂದಾಗಿ ಬೆಸೆಯಲು ನೆರವಾಗುತ್ತದೆ. ಆ ತತ್ವವೇ ಧರ್ಮ ; ಅದು ಪರಸ್ಪರತ್ವವನ್ನು, ಪರಸ್ಪರ ಅವಲಂಬನೆಯನ್ನು ಒತ್ತಿ ಹೇಳುತ್ತದೆ. ಮಾನವನು ಮಾನವೀಯತೆಯನ್ನು ಪಡೆಯಲು ಇತರ ಮಾನವ ವ್ಯಕ್ತಿಗಳ ಆವಶ್ಯಕತೆಯುಂಟು. ಧರ್ಮ ಎಂಬುದನ್ನು ಶ್ರೀಕೃಷ್ಣನು ಮಹಾಭಾರತದಲ್ಲಿ ವಿವರಿಸುವುದು ಹೀಗೆ : ಧಾರಣಾತ್ ಧರ್ಮ ಇತ್ಯಾಯುಃ, ಧರ್ಮೋ ಧಾರಯತೇ ಪ್ರಜಾಃ.

## ೨೮. ಮನೋ–ಸಾಮಾಜಿಕ ಸಂದರ್ಭದಲ್ಲಿ ಪುರುಷಾರ್ಥಗಳು

ಭಾರತೀಯ ಆಧ್ಯಾತ್ಮಿಕ ಪರಂಪರೆಯು ಕಾಮವನ್ನು, ಜೈವಿಕ ತೃಪ್ತಿಯನ್ನು ಅಥವಾ ಕಾಮಕ್ಕೆ ನೆರವಾಗುವ ಅರ್ಥವನ್ನು ತಿರಸ್ಕರಿಸುವುದಿಲ್ಲ. ಅಥವಾ ಕೀಳಾಗಿಯೂ ಕಾಣುವುದಿಲ್ಲ. ಅವು ಮಾನವರು ಸಾಧಿಸಬೇಕಾದಂತಹವು—ಪುರುಷಾರ್ಥಗಳು ಎಂದು ಅದು ಪರಿಗಣಿಸುತ್ತದೆ. ಆದರ ಪರಂಪರೆಯು ಹತೋಟಿಯಿಲ್ಲದ ಜೈವಿಕ ಬಯಕೆಗಳಿಂದ ಉತ್ಪನ್ನವಾದ ಲೋಭ ಮೋಹಗಳು ಅನೈತಿಕವಾದುದು ಎನ್ನುತ್ತದೆ. ಅದಕ್ಕೆ ಕಾರಣ ಅವು ಸಮಾಜವಿರೋಧಿಯಾದವು. ಕಾಮ, ಅರ್ಥಗಳು ಸಮಾಜ ವಿರೋಧಿಯಾಗುವುದನ್ನು ತಡೆಗಟ್ಟಲು ಅತ್ಯಂತ ಮುಖ್ಯವಾದ ಮೂರನೆಯ ಪುರುಷಾರ್ಥವೊಂದು ಅಸ್ತಿತ್ವಕ್ಕೆ ಬಂತು. ಅದು ಧರ್ಮ. ಅದು ಕೇವಲ ಕೆಲವರು ಶಕ್ತಿಶಾಲಿಗಳು ಮತ್ತು ಬುದ್ಧಿಶಾಲಿ ಗಳು ಮಾತ್ರ ಕಾಮ ಮತ್ತು ಅರ್ಥ ಎಂಬ ಪುರುಷಾರ್ಥಗಳನ್ನು ಭೋಗಿಸುವುದನ್ನು ತಪ್ಪಿಸಿ ಎಲ್ಲರಿಗೂ ಅವು ಲಭ್ಯವಾಗುವಂತೆ ಮಾಡಿತು. ಎಲ್ಲ ಸೃಷ್ಟಿಯ ದಿವ್ಯಾತ್ಮದ ಅಭಿವ್ಯಕ್ತಿಯಾದ

ಮಾನವನು ಎಂತಹ ಆಯಾಮವನ್ನು ಹೊಂದಿದವನಾಗಿರಬೇಕು ! ಮಾನವನಲ್ಲಿನ ರಹಸ್ಯದ ಪರಿಹಾರದಿಂದ ವಿಶ್ವದ ರಹಸ್ಯವು ಅಂತಿಮವಾಗಿ ಪರಿಹರಿಸಲ್ಪಟ್ಟಿತು. ಉಪನಿಷತ್ತಿನ ಋಷಿಗಳು ವಿಶ್ವದ ಕೇಂದ್ರವನ್ನು ಮಾನವನಲ್ಲಿರುವ ಕೇಂದ್ರದಿಂದ ಕಂಡುಹಿಡಿದರು. ಆ ಕಂಡುಹಿಡಿಯುವಿಕೆ ಯಿಂದ ಮಾನವನು ತನ್ನ ಅನಂತ ಆಯಾಮದಲ್ಲಿ ಗೋಚರವಾದನು. ವಿಶ್ವವೂ ಕೂಡ ತನ್ನ ಅನಂತ ಆಧ್ಯಾತ್ಮಿಕ ಆಯಾಮದಲ್ಲಿ ಗೋಚರವಾಯಿತು. ಜೀವನ ಸಾರ್ಥಕತೆಗೆ ಈ ಸತ್ಯದ ಸಾಕ್ಷಾತ್ಕಾರ ವೊಂದೇ ದಾರಿ ಎಂದುವು ಉಪನಿಷತ್ತುಗಳು. ಶ್ವೇತಾಶ್ವತರ ಉಪನಿಷತ್ತು ಹೇಳುತ್ತದೆ (ii.15) :

ಯದಾತ್ಮ-ತತ್ವೇನ ತು ಬ್ರಹ್ಮ-ತತ್ವಂ
ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ ;
ಅಜಂ ಧ್ರುವಂ ಸರ್ವತತ್ತ್ವೈಃ ವಿಶುದ್ಧಂ
ಜ್ಞಾತ್ವಾದೇವಂ ಮುಚ್ಯತೇ ಸರ್ವ ಪಾಶೈಃ—

*ಇಂದ್ರಿಯಗಳನ್ನು ನಿಗ್ರಹಿಸಿದ ಸಾಧಕನು, ಈ ದೇಹದಲ್ಲಿಯೇ, (ಎಲ್ಲರಲ್ಲೂ ಇರುವ ಅನಂತ ಆತ್ಮವಾದ) ಬ್ರಹ್ಮವನ್ನು ಆತ್ಮದ ಸತ್ಯದ ಮೂಲಕ ಬೆಳಕಿನಂತೆ ಸ್ವಯಂ ಪ್ರಕಾಶಮಾನ ವಾದದ್ದು ಎಂದು ಅರಿತಾಗ, ಅಜಾತವೂ, ಶಾಶ್ವತವೂ ಪ್ರಕೃತಿಯ ಬದಲಾವಣೆಗಳ ಸ್ಪರ್ಶ ವಿಲ್ಲದ್ದೂ ಆದ ದಿವ್ಯತೆಯನ್ನು ಅರಿತು ಎಲ ಪಾಪಗಳಿಂದಲೂ ಮುಕ್ತನಾಗುತ್ತಾನೆ*

ಇದು ಮತ್ತಿತರ ಉಪನಿಷತ್ ಶ್ಲೋಕಗಳು ಗಹನವಾದ, ಆನಂದಮಯವಾದ ಸಾಕ್ಷಾತ್ಕಾರವನ್ನು ನಮಗೆ ಸಂವಹನಗೊಳಿಸುತ್ತವೆ. ಆ ಅಪಾರವಾದ ಸಾಹಿತ್ಯದ ಭಾಷೆಯೇ ನಮಗೆ ಅದನ್ನು ತಿಳಿಸುತ್ತದೆ. ಆತ್ಮದ ಅಂತಿಮ ಸತ್ಯವನ್ನು ಸೇರುವುದರಲ್ಲಿ ಅವರು, ಅಸ್ತಿತ್ವ ಮತ್ತು ಜ್ಞಾನದ, ಶಾಂತಿ, ಆನಂದಗಳ, ಅನಂತ ಅನುಭವದ ಸಂಯೋಜಕ ಕ್ಷೇತ್ರದ ಅಂತಿಮ ಸತ್ಯವನ್ನು ತಲುಪಿದ್ದರು. ಆದುದರಿಂದಲೇ ಅವರು ತಮ್ಮ ಈ ಕಂಡುಹಿಡಿಯುವಿಕೆಯನ್ನು ಸತ್ಯ, ಜ್ಞಾನ, ಅನಂತ ಅಥವಾ ಸತ್ ಚಿತ್, ಆನಂದಗಳ ಅಪಾರ ಗಣಿಯೆಂದು ಸಾರಿದರು. ಈ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಹೋರಾಟದಲ್ಲಿ, ಅದು ನೀಡುವ ಜೀವನ ಸಾಫಲ್ಯದಲ್ಲಿ, ಸಿದ್ಧಿಯಲ್ಲಿ ಅವರು ವಿಶ್ವ,ಜೈವಿಕ ವಿಕಾಸ ಸಮಸ್ತದ, ವಿಶೇಷವಾಗಿ ಮಾನವ ವಿಕಾಸದ ನಿಜವಾದ ಅರ್ಥವನ್ನು ಕಂಡುಕೊಂಡರು.

ಜೀವಿಯು ಸಫಲತೆಯನ್ನು ಬಯಸುತ್ತದೆ ; ಎಲ್ಲ ಚಟುವಟಿಕೆಗಳ ಪ್ರಕ್ರಿಯೆಗಳ ಗುರಿ ಅದೇ ಎನ್ನುತ್ತದೆ, ಆಧುನಿಕ ಜೀವಶಾಸ್ತ್ರ. ಉಪನಿಷತ್ತುಗಳಲ್ಲಿ ಮುಕ್ತಿ ಮತ್ತು ಪೂರ್ಣತೆಯ ಸುಂದರ ಕಲ್ಪನೆಗಳಿವೆ. ನಾವು ಈಗ ಬದ್ಧರು ; ಈಗ ನಾವು ಹೋಳು ಹೋಳಾಗಿ ವಿಚ್ಛಿನ್ನರಾಗಿದ್ದೇವೆ. ನಾವು ಮುಕ್ತರಾಗ ಬಯಸುತ್ತೇವೆ ; ನಾವು ಪೂರ್ಣರಾಗಲು ಇಡಿಯಾಗಬಯಸುತ್ತೇವೆ. ನಾವು ಪೂರ್ಣತೆ ಯನ್ನು ಅನುಭವಿಸಬಯಸುತ್ತೇವೆ. ಯೇಸುಕ್ರಿಸ್ತನು ಅದನ್ನು 'ಪರಿಪೂರ್ಣತೆ' ಎಂದು ಕರೆದ. 'ನೀವು ಆದ್ದರಿಂದ ಪರಿಪೂರ್ಣರಾಗಿ, ಸ್ವರ್ಗದಲ್ಲಿರುವ ನಿಮ್ಮ ತಂದೆಯು ಪರಿಪೂರ್ಣನಾಗಿರುವಂತೆ' (Mathew V. 48). ಮುಕ್ತಿಯ ಸ್ವಾತಂತ್ರ್ಯವನ್ನು ಅನುಭವಿಸುವುದು ಮಾನವನ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು, ಬುದ್ಧ ಹೇಳಿದಂತೆ ಬೋಧಿಯನ್ನು, ಪೂರ್ಣಜ್ಞಾನವನ್ನು ಪಡೆಯುವುದು. ಇದೇ ಮಾನವ ವಿಕಾಸದ ಮಹಾನ್ ಗುರಿ. ಶಿಕ್ಷಣ, ವಿಜ್ಞಾನ, ಸಂಸ್ಕೃತಿ, ಸಾಮಾಜಿಕ-ರಾಜಕೀಯ ಪ್ರಕ್ರಿಯೆಗಳು ಮತ್ತು ಧರ್ಮ ಈ ಎಲ್ಲವುಗಳ ಉದ್ದೇಶ ಮಾನವ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು, ಮಾನವ ಸಾಫಲ್ಯದ ವ್ಯಾಪ್ತಿ, ಆಳಗಳನ್ನು ಹೆಚ್ಚಿಸುವುದು. ಇದು ಸಾಧ್ಯವಾಗುವುದು ಹೊರಗಿನ ಜಗತ್ತಿನ ಮೇಲೆ ಮಾತ್ರವಲ್ಲದೆ, ಅಂತರಂಗದ ಆಳಗಳ ಮೇಲೆ ಹತೋಟಿಯನ್ನು ಸಾಧಿಸುವುದರಿಂದ, ಅವುಗಳ ವಿಷಯದಲ್ಲಿ ಮಾನವನ ಜ್ಞಾನವನ್ನು ಹೆಚ್ಚಿಸುವುದರಿಂದ. ಭೌತ ವಿಜ್ಞಾನಗಳಲ್ಲಿ ಜ್ಞಾನವೇ ಶಕ್ತಿ. ಧರ್ಮದ ವಿಜ್ಞಾನದಲ್ಲಿ, ಮಾನವನ ಅಂತರಂಗ ಪ್ರಕೃತಿಯ

ವಿಜ್ಞಾನದಲ್ಲಿ ಅದು ಇನ್ನೂ ಹೆಚ್ಚು ಸತ್ಯ. ಏಕೆಂದರೆ ಹಾಗೆ ಸಂಪಾದಿಸಿದ ಶಕ್ತಿಯು ಪ್ರಮಾಣದ ದೃಷ್ಟಿಯಿಂದಲ್ಲದೆ ಗುಣದ ದೃಷ್ಟಿಯಿಂದಲೂ ಇನ್ನೂ ಹಿರಿದಾದದ್ದು.

### ೨೭. ಸಾಮಾಜಿಕ ನೀತಿಯಾಗಿ ಧರ್ಮ

ಮಾನವನು ತನ್ನ ಜೈವಿಕ ತೃಪ್ತಿಗಳನ್ನು ಒಂದು ಶಿಸ್ತಿಗೆ ಒಳಪಡಿಸಿದಲ್ಲದೆ ಆಧ್ಯಾತ್ಮಿಕ ಬೆಳವಣಿಗೆ ಅಥವಾ ಮನೋ-ಸಾಮಾಜಿಕ ವಿಕಾಸದ ದೀರ್ಘಪಥದಲ್ಲಿ ಮುಂದುವರೆಯಲಾರನು. ಅಂಥ ಶಿಸ್ತಿನಿಂದ, ತನ್ನ ಜ್ಞಾನ ಮತ್ತು ಪ್ರಯತ್ನಗಳಿಂದ ತನ್ನ ಅಂತರಂಗ ಜೀವನದಲ್ಲಿ ಒಂದು ಮಟ್ಟದ ಸ್ಥಿರತೆಯನ್ನು ಅವನು ಪಡೆದುಕೊಳ್ಳಬೇಕಾಗುತ್ತದೆ. ಪ್ರಕೃತಿಯು ಅವನಿಗೆ ಒದಗಿಸಿದ ಪ್ರಥಮ ಸಮತೋಲನದ (Homeostasis) ಜೊತೆಗೆ ಅವನು ಸಾಧಿಸಬೇಕಾದ ಎರಡನೆಯ ಸಮತೋಲನ ಇದು. ಇದರ ವಿಷಯ ಮುಂದೆ ಹೆಚ್ಚಾಗಿ ಹೇಳುತ್ತೇನೆ. ಸಮತ್ವಂ ಯೋಗ ಉಚ್ಯತೆ, ಯೋಗ ಎಂದರೆ ಸಮತ್ವ ಹಿಂದು ಗೀತೆ ಹೇಳುವ ಸಮತೋಲನ ಇದೇ. ಮಹಾನ್ ಫ್ರೆಂಚ್ ಮನಶ್ಶಾಸ್ತ್ರಜ್ಞ ಕ್ಲಾಡ್ ಬರ್ನಾರ್ (Claude Bernard) ಹೇಳಿದ 'ಮುಕ್ತ ಜೀವನಕ್ಕೆ ಅಗತ್ಯವಾದ ಸ್ಥಿತಿ ಎಂದರೆ ಸ್ಥಿರವಾದ ಅಂತರಂಗದ ಆವರಣ' ಎಂಬುದರ ಆಧ್ಯಾತ್ಮಿಕ ಸಮಾನಾರ್ಥಕ ಇದೇ. ಇದರ ವಿಷಯ ಮುಂದೆ ಹೆಚ್ಚಾಗಿ ಹೇಳುತ್ತೇನೆ.

ಭಾರತೀಯ ಧರ್ಮದಲ್ಲಿ ಹೇಳಿರುವ ಶಿಸ್ತು ಇದೇ. ಯಾವುದೇ ಕ್ರಮಬದ್ಧ ಮಾನವ ಸಮಾಜವೂ ಇದನ್ನು ಬಿಟ್ಟು ಇರಲಾರದು. ಇದಿಲ್ಲದಿದ್ದರೆ ಮಾನವನು ಪಶುಸ್ಥಾನಕ್ಕೆ ಇಳಿಯುತ್ತಾನೆ ಎನ್ನುತ್ತದೆ ಭಾರತೀಯ ವಿವೇಕ ; ಧರ್ಮೇನ ಹೀನಾಃ ಪಶುಭಿಃ ಸಮಾನಾಃ. ಧರ್ಮ ಎಂದರೆ ಸಮಾಜದಲ್ಲಿ ಮಾನವ ಮಾನವರ ನಡುವೆ ಬಾಂಧವ್ಯದ ಬೆಸುಗೆಯ ತತ್ತ್ವ. ಅದರರ್ಥ ಪಂಥ, ಸಿದ್ಧಾಂತ, ಮತಕರ್ಮ ಅಥವಾ ಪರಲೋಕದಲ್ಲಿ ಮುಕ್ತಿಯನ್ನು ಪಡೆಯುವ ಯೋಜನೆ—ಈ ಯಾವುದೂ ಅಲ್ಲ. ಇಟ್ಟಿಗೆಗಳ ಒಂದು ರಾಶಿ ಎಂದೂ ಕಟ್ಟಡವಾಗುವುದಿಲ್ಲ. ಹಾಗೆಯೇ ಮನುಷ್ಯರ ಗುಂಪು ಒಂದು ಸಮಾಜವಾಗುವುದಿಲ್ಲ. ಸ್ಥಾಯಿಯಾದ ವ್ಯಕ್ತಿಯೊಬ್ಬನನ್ನು ಚೈತನ್ಯಶೀಲವೂ ವಿಶಾಲವೂ ಆದ ವ್ಯಕ್ತಿತ್ವವನ್ನಾಗಿ ಮಾಡುವ ಸಂಯೋಜಕ ತತ್ತ್ವವೊಂದುಂಟು ; ಅದೇ ಸಮಾಜದ ವ್ಯಕ್ತಿಗಳನ್ನು ಒಂದಾಗಿ ಬೆಸೆಯಲು ನೆರವಾಗುತ್ತದೆ. ಆ ತತ್ತ್ವವೇ ಧರ್ಮ ; ಅದು ಪರಸ್ಪರತ್ವವನ್ನು, ಪರಸ್ಪರ ಅವಲಂಬನೆಯನ್ನು ಒತ್ತಿ ಹೇಳುತ್ತದೆ. ಮಾನವನು ಮಾನವೀಯತೆಯನ್ನು ಪಡೆಯಲು ಇತರ ಮಾನವ ವ್ಯಕ್ತಿಗಳ ಆವಶ್ಯಕತೆಯುಂಟು. ಧರ್ಮ ಎಂಬುದನ್ನು ಶ್ರೀಕೃಷ್ಣನು ಮಹಾಭಾರತದಲ್ಲಿ ವಿವರಿಸುವುದು ಹೀಗೆ : ಧಾರಣಾತ್ ಧರ್ಮ ಇತ್ಯಾಹುಃ, ಧರ್ಮೋ ಧಾರಯತೇ ಪ್ರಜಾಃ.

### ೨೮. ಮನೋ–ಸಾಮಾಜಿಕ ಸಂದರ್ಭದಲ್ಲಿ ಪುರುಷಾರ್ಥಗಳು

ಭಾರತೀಯ ಆಧ್ಯಾತ್ಮಿಕ ಪರಂಪರೆಯು ಕಾಮವನ್ನು, ಜೈವಿಕ ತೃಪ್ತಿಯನ್ನು ಅಥವಾ ಕಾಮಕ್ಕೆ ನೆರವಾಗುವ ಅರ್ಥವನ್ನು ತಿರಸ್ಕರಿಸುವುದಿಲ್ಲ. ಅಥವಾ ಕೀಳಾಗಿಯೂ ಕಾಣುವುದಿಲ್ಲ. ಅವು ಮಾನವರು ಸಾಧಿಸಬೇಕಾದಂತಹವು—ಪುರುಷಾರ್ಥಗಳು ಎಂದು ಅದು ಪರಿಗಣಿಸುತ್ತದೆ. ಅದರ ಪರಂಪರೆಯು ಹತೋಟಿಯಿಲ್ಲದ ಜೈವಿಕ ಬಯಕೆಗಳಿಂದ ಉತ್ಪನ್ನವಾದ ಲೋಭ ಮೋಹಗಳು ಅನೈತಿಕವಾದುದು ಎನ್ನುತ್ತದೆ. ಅದಕ್ಕೆ ಕಾರಣ ಅವು ಸಮಾಜವಿರೋಧಿಯಾದವು. ಕಾಮ, ಅರ್ಥಗಳು ಸಮಾಜ ವಿರೋಧಿಯಾಗುವುದನ್ನು ತಡೆಗಟ್ಟಲು ಅತ್ಯಂತ ಮುಖ್ಯವಾದ ಮೂರನೆಯ ಪುರುಷಾರ್ಥವೊಂದು ಅಸ್ತಿತ್ವಕ್ಕೆ ಬಂತು. ಅದು ಧರ್ಮ. ಅದು ಕೇವಲ ಕೆಲವರು ಶಕ್ತಿಶಾಲಿಗಳು ಮತ್ತು ಬುದ್ಧಿಶಾಲಿ ಗಳು ಮಾತ್ರ ಕಾಮ ಮತ್ತು ಅರ್ಥ ಎಂಬ ಪುರುಷಾರ್ಥಗಳನ್ನು ಭೋಗಿಸುವುದನ್ನು ತಪ್ಪಿಸಿ ಎಲ್ಲರಿಗೂ ಅವು ಲಭ್ಯವಾಗುವಂತೆ ಮಾಡಿತು. ಎಲ್ಲ ಸೃಷ್ಟಿಯ ದಿವ್ಯಾತ್ಮದ ಅಭಿವ್ಯಕ್ತಿಯಾದ

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಕಾಮವು ಹೇಗೆ ಒಪ್ಪಿತವಾದದ್ದು ಮತ್ತು ಸೃಜನಶೀಲಪಾತ್ರವನ್ನು ವಹಿಸಬಲ್ಲುದು ಎಂಬುದನ್ನು ಹೇಳಿದ್ದಾನೆ (VII. 11) :

ಧರ್ಮಾವಿರುದ್ಧೋ ಭೂತೇಷು
ಕಾಮೋಽಸ್ಮಿ ಭರತರ್ಷಭ—

*ಧರ್ಮಕ್ಕೆ ವಿರುದ್ಧವಲ್ಲದ ಕಾಮವಾಗಿ ನಾನು ಎಲ್ಲ ಜೀವಿಗಳಲ್ಲಿಯೂ ಇದ್ದೇನೆ, ಅರ್ಜುನ.*

ಭಾರತೀಯ ದರ್ಶನ ಪರಂಪರೆಯು ಧರ್ಮ, ಅರ್ಥ, ಕಾಮಗಳನ್ನು ತ್ರಿವರ್ಗ ಎಂದು ಕರೆದಿದೆ. ಅವು ಬೇರ್ಪಡಿಸಲಾರದ ಒಂದು ಮುಕ್ಕೂಟ. ಅದು ಎಲ್ಲ ಕ್ರಮಬದ್ಧ ಆಸ್ತಿಕ, ನಾಸ್ತಿಕ, ಅಜ್ಞೇಯತಾವಾದದ—ಸಮಾಜದ ಹಾಸುಹೊಕ್ಕು ಎಂಬುದು ಆ ಪರಂಪರೆಯ ನಂಬಿಕೆ. ಹಾಗೆಯೇ ಅದರ ಪ್ರಕಾರ ಮೋಕ್ಷವು ನಾಲ್ಕನೆಯ ಪುರುಷಾರ್ಥ. ಅದು ಸಮಾಜಾತೀತ ಐಚ್ಛಿಕ ಸಾಧನೆ. ಯಾರು ಸತ್ಯದ ಆಧ್ಯಾತ್ಮಿಕ ಆಯಾಮಗಳ ಆಳಕ್ಕೆ ಮುಳುಗಿ ತಮ್ಮ ವೈಭವೋಪೇತ ಸತ್ಯಸ್ವರೂಪವನ್ನು ಅರಿಯಲು ಅಪೇಕ್ಷಿಸುತ್ತಾರೋ ಅಂಥ ಧೈರ್ಯ ತೋರುತ್ತಾರೆಯೋ ಅವರಿಗೆ ಅದು ಮೀಸಲು. ಉಳಿದ ಎಲ್ಲರಿಗೂ ಈ ಮೋಕ್ಷಾನುಭವವು ಸಾಮಾಜಿಕ ಸಂದರ್ಭದ ಮಿತಿಯೊಳಗೆ ಸೇರುತ್ತದೆ. ಅದು ಅವರಿಗೆ ಧರ್ಮ. ಹೀಗೆ ಧರ್ಮವು ಲೌಕಿಕ ಮತ್ತು ಅಧ್ಯಾತ್ಮಗಳ, ಸಾಮಾಜಿಕ ಮತ್ತು ಸಮಾಜಾತೀತಗಳ ಸಂಗಮ. ಭಾರತದ ಧಾರ್ಮಿಕ, ಲೌಕಿಕ ಸಾಹಿತ್ಯಗಳೆರಡೂ ಈ ಧರ್ಮದ ವೈಭವವನ್ನು ಹಾಡಿ ಹೊಗಳಿವೆ. ಭಾರತೀಯ ಸಂಸ್ಕೃತಿಯ ಬೇರುಗಳಿರುವುದು ಆ ಧರ್ಮದಲ್ಲಿ. ಅದು ಸ್ಫೂರ್ತಿ ಪಡೆಯುವುದು ಅದರಿಂದ. ಭಾರತೀಯ ಏಕೆ ಇಡೀ ಜಗತ್ತಿನ ಧರ್ಮಗಳ ಅನುಭಾವದ ಶಿಖರಗಳೆಲ್ಲ ಈ ಸಮಾಜಾತೀತ ಮೋಕ್ಷದ ಆದರ್ಶ ಮತ್ತು ಮೌಲ್ಯದಿಂದ ರಚಿತವಾದವು.

ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರದಲ್ಲಿ ಬರುವ ಮನೋಸಾಮಾಜಿಕ ವಿಕಾಸದ ಕಲ್ಪನೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಮಾನವಹಂತದಲ್ಲಿ ವಿಕಾಸದ ಪ್ರಮಾಣಗಳಾದ ಗುಣ ಮತ್ತು ಸಾಫಲ್ಯಗಳ ಭಾವನೆ—ಇವುಗಳಲ್ಲಿಯೂ ಧರ್ಮದ ಈ ಮಹಾನ್ ಮೌಲ್ಯವೇ ಪ್ರತಿಧ್ವನಿತವಾಗುತ್ತಿದೆ.

ಅಹಂನಿಂದ ಮತ್ತು ಜೈವಿಕ ವ್ಯವಸ್ಥೆ ಮತ್ತು ಅದರಲ್ಲಡಗಿರುವ ತೃಷೆಗಳಿಂದ ಬಿಡುಗಡೆ ಹೊಂದಬೇಕು ಎಂಬುದಕ್ಕೆ ಒತ್ತು ನೀಡಬೇಕು ಎಂದು ಹೇಳಿರುವುದರಲ್ಲಿ ಆಧುನಿಕ ಮನೋ-ಸಾಮಾಜಿಕ ವ್ಯವಸ್ಥೆಯು ಗೀತೆಯ ಪ್ರಾಚೀನ ಅನಾಸಕ್ತಿ-ಯೋಗವನ್ನು ಪ್ರತಿಧ್ವನಿಸುತ್ತಿದೆ.

## ೨೯. ಧರ್ಮ : ನೈತಿಕ ಮತ್ತು ಆಧ್ಯಾತ್ಮಿಕ

ಧರ್ಮವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದಾಗ ಪ್ರತಿಯೊಂದು ಧರ್ಮಕ್ಕೂ, ಅದರಲ್ಲೂ ಚೆನ್ನಾಗಿ ಬೆಳೆದಿರುವ ಪ್ರತಿಯೊಂದು ವಿಶ್ವಧರ್ಮಕ್ಕೂ ಎರಡು ಆಯಾಮಗಳಿರುವುದು ಕಂಡು ಬರುತ್ತದೆ. ಒಂದು ಧರ್ಮ ಸಾಮಾಜಿಕ-ರಾಜಕೀಯ ಅಭಿವ್ಯಕ್ತಿ ಎಂಬುದು. ಇನ್ನೊಂದು ಧರ್ಮವು ಭಗವಂತನ ಅನುಭೂತಿ ಅಥವಾ ಅದಕ್ಕೆ ಸಮಾನವಾದ ಮತ್ತೆ ಯಾವುದೇ ಮೌಲ್ಯ. ಮೊದಲನೆಯದರಲ್ಲಿ ಧರ್ಮದ ಮಾಡು-ಬಿಡುಗಳು, ಆಹಾರ, ಉಡುಪು, ಮದುವೆ ಮತ್ತಿತರ ಸಾಮಾಜಿಕ ನಿಯಮಗಳು, ಪುರಾಣ ಕಥೆಗಳು, ವಿಶ್ವದ ಬಗೆಗಿನ ಸಿದ್ಧಾಂತಗಳು ಇವು ಸೇರುತ್ತವೆ. ಇವು ಧರ್ಮದ ಸಾಮಾಜಿಕ ರಾಜಕೀಯ ಅಂಗಗಳು. ಇವು ಧರ್ಮದ ಜನಗಣತಿ ದಾಖಲೆಗಳಲ್ಲಿದ್ದು ಇತರ ಧರ್ಮಗಳಿಂದ ಅದು ಹೇಗೆ ಬೇರೆ ಎಂಬುದನ್ನು ಸೂಚಿಸುತ್ತದೆ. ಇದು ಧರ್ಮದ ವಿಜ್ಞಾನವಲ್ಲ, ಧರ್ಮದ ಇತಿಹಾಸ ನಿಯಮಾಧೀನ ಅಭಿವ್ಯಕ್ತಿ. ಧರ್ಮದ ವಿಜ್ಞಾನವು ಧರ್ಮಗಳನ್ನು ಅವುಗಳ ಭಕ್ತಿಯೋಗ, ಜ್ಞಾನ ಯೋಗ, ರಾಜಯೋಗ, ಕರ್ಮಯೋಗ ಮುಂತಾದ ವಿಷಯಾನುಕ್ರಮವಾಗಿ

ವರ್ಗೀಕರಿಸುತ್ತದೆ. ಈ ಎರಡನೆಯ ಆಯಾಮವು ವೈಯಕ್ತಿಕ ನೀತಿ, ಪೂಜೆ, ಮಾನವರ ಆಧ್ಯಾತ್ಮಿಕ ಬೆಳವಣಿಗೆಗಾಗಿ ವಿಧಿಸಿರುವ ಶಿಸ್ತು ಇವನ್ನೆಲ್ಲ ಒಳಗೊಂಡು, ನಿಜವಾದ ಆಧ್ಯಾತ್ಮಿಕ ಭಾಗವಾಗಿದೆ. ಇವು ಧರ್ಮದ ಬದಲಾಗದ, ಸಾರ್ವತ್ರಿಕ ಭಾಗ. ಮೊದಲನೆಯದು ಬದಲಾಗುವಂಥದು, ಅಮುಖ್ಯಭಾಗ. ಅದೂ ಸುಸಂಗತವೇ, ಆದರೆ ಎರಡನೆಯದರ ಅಂತಃಸತ್ವವನ್ನು ಅದುಮದೇ ಇದ್ದಾಗ ಮಾತ್ರ.

ಭಾರತೀಯ ಪರಂಪರೆಯು ಮೊದಲನೆಯದನ್ನು ಸ್ಮೃತಿ ಎಂದು ಕರೆದಿದೆ. ಎರಡನೆಯದು ಶ್ರುತಿ. ಇದು ಧರ್ಮದ ಭಾಗ. ಶ್ರುತಿ ಸಾರ್ವತ್ರಿಕ, ಶಾಶ್ವತ. ಸ್ಮೃತಿಯಾದರೆ ಪ್ರಾದೇಶಿಕ, ಕಿರುಕ್ಷೇತ್ರಕ್ಕೆ ಸಂಬಂಧಪಟ್ಟಿದ್ದು, ಉಪಯುಕ್ತತೆಯಲ್ಲಿ ತಾತ್ಕಾಲಿಕವಾದದ್ದು. ಶ್ರುತಿಯು ಸನಾತನ ಧರ್ಮವನ್ನು ಪ್ರತಿನಿಧಿಸುತ್ತದೆ. ಅದು ಯಾವಾಗಲೂ ಉಳಿಯುವಂಥದು. ಸ್ಮೃತಿಯಾದರೋ ಯುಗ ಧರ್ಮದ ಪ್ರತಿನಿಧಿ. ಅದು ಒಂದು ನಿರ್ದಿಷ್ಟ ಯುಗ ಅಥವಾ ಕಾಲಕ್ಕೆ ಸಂಬಂಧಿಸಿದ್ದು, ಬದಲಾಗುವಂಥದ್ದು. ಆದ್ದರಿಂದ ಭಾರತವು ಧರ್ಮದ ಭಾಗವಾದ ಯುಗಧರ್ಮವು ಎಲ್ಲ ಕಾಲದ, ಎಲ್ಲ ಜನರಿಗೂ ಅನ್ವಯವಾಗುವುದಿಲ್ಲವೆಂದು ಭಾವಿಸುವುದು ಮಾತ್ರವೇ ಅಲ್ಲ, ಮುಂದಿನ ಕಾಲದ ತನ್ನ ಜನರಿಗೇ, ಆ ಜನರ ಜೀವನ ಸ್ಥಿತಿಯು ಬದಲಾಗುವುದರಿಂದ, ಅಸಂಬದ್ಧವಾಗುತ್ತದೆ ಎನ್ನುತ್ತದೆ. ಆದ್ದರಿಂದ ಭಾರತೀಯ ಪರಂಪರೆಯ ಸ್ಮೃತಿಗಳಲ್ಲೂ ಯುಗ ಧರ್ಮದಲ್ಲೂ ಸೂಕ್ತವಾದ ಬದಲಾವಣೆಗಳನ್ನು ಮಾಡಲು ಅವಕಾಶ ನೀಡುತ್ತದೆ. ಬದಲಾದ ಸಾಮಾಜಿಕ ಪರಿಸ್ಥಿತಿಗಳು ಅವನ್ನು ನಿರುಪಯುಕ್ತ ಗೊಳಿಸಿದ್ದುವಷ್ಟೇ. ಅವು ಹಾನಿಕಾರಕವೂ ಆಗಿದ್ದುವು. ಆದ್ದರಿಂದ ಸ್ಮೃತಿಗಳನ್ನು ಆಯಾಕಾಲಕ್ಕೆ ಸುಸಂಬದ್ಧವಾಗಿ ಮಾಡಲು ಅವಕಾಶವನ್ನು ಕಲ್ಪಿಸಲಾಯಿತು. ಭಾರತದ ಈ ವಿವೇಕವನ್ನು ಶ್ರೀರಾಮಕೃಷ್ಣರು ಎಂದು ಅರ್ಥಪೂರ್ಣ ವಾಕ್ಯದಲ್ಲಿ ನಿರೂಪಿಸಿದ್ದಾರೆ : 'ಮೊಘಲ್ ನಾಣ್ಯಗಳಿಗೆ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತದಲ್ಲಿ ಚಲಾವಣೆ ಇಲ್ಲ.' ಮಾನವ ಮತ್ತು ಸಾಮಾಜಿಕ ವಿಕಾರಗಳು ಸಮಾಜಿಕ-ಧಾರ್ಮಿಕ ಪರಂಪರೆಯ ನಿರುಪಯುಕ್ತ ಅಂಶಗಳ ಪ್ರಾಧಾನ್ಯದ ಫಲ. ಅವು ಸಾಮಾಜಿಕ ಪದ್ಧತಿಗಳ ಗಡಸುತನ, ಮಾನವ-ವಿರೋಧಿ ಪದ್ಧತಿಗಳು, ಧಾರ್ಮಿಕ ಘರ್ಷಣೆಗಳು, ಅಸಾಮರಸ್ಯಗಳು, ಧಾರ್ಮಿಕ ಹಿಂಸೆ, ನಿಂತು ನಾರುವ ಸ್ಥಿತಿ, ಮಾನವ ಮನೋಧರ್ಮಗಳು ಬದಲಾಗದಿರುವಿಕೆ—ಈ ಎಲ್ಲಕ್ಕೂ ಕಾರಣವಾಗುತ್ತವೆ.

ಎಲ್ಲ ಧರ್ಮಗಳ ಮೂಲಭೂತ ಸಂದೇಶಗಳೂ ಮೂಡಿಬರುವುದು ಅವುಗಳ ಮುಖ್ಯ ಆಧ್ಯಾತ್ಮಿಕ ಸತ್ಯಗಳಿಂದ. ಅವೇ ಅವುಗಳ ಕೇಂದ್ರ ಹೃದಯ. ಇವೇ ಆ ಧರ್ಮಗಳ ಶ್ರುತಿಭಾಗ. ಈ ಆಧ್ಯಾತ್ಮಿಕ ಸತ್ಯಗಳು ಅಪೌರುಷೇಯ ಎಂದರೆ ಅ-ವ್ಯಕ್ತಿಗತ, ಆದ್ದರಿಂದ ವಿಶ್ವಸಾಮಾನ್ಯ ; ಅದನ್ನು ಕಂಡುಹಿಡಿದವರು ಧರ್ಮದ ವಿಜ್ಞಾನಿಗಳು-ಅನುಭಾವಿಗಳು. ಈ ಸತ್ಯಗಳ ಪ್ರಾಮಾಣ್ಯ ಇರುವುದು ಧಾರ್ಮಿಕ ಪ್ರಯೋಗಶೀಲರು ಅವುಗಳ ಅನುಭವ ಪಡೆದುಕೊಳ್ಳುತ್ತಿರುವುದರಲ್ಲಿ ; ಅಷ್ಟೇ ಅಲ್ಲ, ಅವುಗಳಲ್ಲಿರುವ ಇತರರು ಮತ್ತೆ ಅವನ್ನು ತಾಳೆನೋಡಬಹುದಾದ ಶಕ್ತಿಯಲ್ಲಿ. ಹಿಂದೂ ಸಂಪ್ರದಾಯಕ್ಕೆ ಸೇರಿದ ವೇದಗಳ ವಿಷಯದಲ್ಲಿ ಈ ಪ್ರಾಮಾಣ್ಯವನ್ನು ಕುರಿತು ಮಾತನಾಡುತ್ತಾ ಸ್ವಾಮಿ ವಿವೇಕಾನಂದರು ೧೮೯೩ರಲ್ಲಿ ಷಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಹೀಗೆ ಹೇಳಿದರು (C. W. Vol I. pp.6-7) :

*ವೇದಗಳು ಎಂದರೆ ಯಾವ ಪುಸ್ತಕಗಳೂ ಅಲ್ಲ. ಅವುಗಳ ಅರ್ಥ ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ವ್ಯಕ್ತಿಗಳು ಕಂಡುಹಿಡಿದ ಆಧ್ಯಾತ್ಮಿಕ ನಿಯಮಗಳ ಸಂಚಿತ ಭಂಡಾರ ಎಂದು. ಹೇಗೆ ಗುರುತ್ವಾಕರ್ಷಣ ಶಕ್ತಿಯ ನಿಯಮವು ಅದನ್ನು ಕಂಡುಹಿಡಿಯುವ ಮುನ್ನವೂ ಇತ್ತೋ ಇಡೀ ಮಾನವ ಕುಲವೇ ಅದನ್ನು ಮರೆತುಬಿಟ್ಟರೂ ಮುಂದೆ ಹೇಗೆ ಅದು ಇರುತ್ತದೆಯೋ*

*ಹಾಗೆಯೇ ಆಧ್ಯಾತ್ಮಿಕ ಜಗತ್ತನ್ನು ಆಳುವ ನಿಯಮಗಳೂ ಆತ್ಮ–ಆತ್ಮಗಳ ನಡುವೆ, ವ್ಯಕ್ತಿಗತ ಆತ್ಮದ ಹಾಗೂ ಎಲ್ಲ ಆತ್ಮಗಳ ತಂದೆಯ ನಡುವೆ ಇರುವ ನೈತಿಕ ಮತ್ತು ಆಧ್ಯಾತ್ಮಿಕ ಬಾಂಧವ್ಯಗಳು ಅವುಗಳನ್ನು ಕಂಡುಹಿಡಿಯುವ ಮುನ್ನವೂ ಇದ್ದುವು ಮತ್ತು ನಾವೆಲ್ಲ ಅವನ್ನು ಮರೆತರೂ ಮುಂದೆಯೂ ಇರುತ್ತವೆ.*

*ಈ ನಿಯಮಗಳನ್ನು ಕಂಡುಹಿಡಿದವರನ್ನು ಋಷಿಗಳು ಎನ್ನುತ್ತಾರೆ. ಅವರು ಪರಿಪೂರ್ಣತೆಯನ್ನು ಪಡೆದ ವ್ಯಕ್ತಿಗಳು ಎಂದು ನಾವು ಅವರನ್ನು ಗೌರವಿಸುತ್ತೇವೆ. ಅವರಲ್ಲಿ ಅತ್ಯಂತ ಉನ್ನತ ವ್ಯಕ್ತಿಗಳಲ್ಲಿ ಕೆಲವರು ಸ್ತ್ರೀಯರು ಎಂಬುದನ್ನು ಈ ಸಭೆಗೆ ನಾನು ತಿಳಿಸಲು ಸಂತೋಷವಾಗುತ್ತದೆ.*

ಮೇಲಿನ ವರ್ಣನೆಯು ಹಿಂದೂ ಧರ್ಮದ–ಅಷ್ಟೇಕೆ ಪ್ರತಿಯೊಂದು ವಿಶ್ವಧರ್ಮದ ಶ್ರುತಿ ಭಾಗಕ್ಕೆ ಮಾತ್ರ ಅನ್ವಯಿಸುತ್ತದೆ. ಒಂದೇ ವ್ಯತ್ಯಾಸವೆಂದರೆ ಶ್ರುತಿಯ ವಿಶ್ವಸಾಮಾನ್ಯತೆ ಮತ್ತು ಸ್ಮೃತಿಯ ಮಿತ ಸುಸಂಬದ್ಧತೆ ಇವು ಪೂರ್ಣವಾಗಿ ಗ್ರಾಹ್ಯವಾಗಿ ಅನುಷ್ಠಾನಕ್ಕೆ ಬಂದದ್ದು ಹಿಂದೂ ಸಂಪ್ರದಾಯದಲ್ಲಿ ಮಾತ್ರ. ಅಲ್ಲದೆ ಇಲ್ಲಿ ಸಾಮಾಜಿಕವಾಗಿ ಹೊಸದನ್ನು ತಂದವರು ಮತ್ತು ಧಾರ್ಮಿಕ ಪ್ರವಾದಿಗಳು ಹಿಂಸೆಗೆ, ಸಾವಿಗೆ ಒಳಗಾಗಲಿಲ್ಲ, ಅಷ್ಟೆ ಅಲ್ಲ ಜನ ಅವರನ್ನು ಗೌರವಿಸಿ ಹಿಂಬಾಲಿಸಿದರು. ಈ ವರಪ್ರದಾನಕ್ಕೆ ಹಿಂದೂ ಧರ್ಮವು ಋಣಿಯಾಗಿರುವುದು ಅದರ ಅಮರ ಸಾಹಿತ್ಯವಾದ ಉಪನಿಷತ್ತುಗಳಿಗೆ. ಅಲ್ಲಿ ಇರುವುದು ಶ್ರುತಿಯೇ, ಸ್ಮೃತಿಯ ಸ್ಪರ್ಶ ಕೂಡ ಅಲ್ಲಿಲ್ಲ. ಹಿಂದೂ ಧರ್ಮದ ಒಳಗಾಗಲಿ ಹೊರಗಾಗಲಿ ಅವೊಂದೇ ಪವಿತ್ರಗ್ರಂಥಗಳು ಸತ್ಯವನ್ನು ಹುಡುಕುವುದು ಮಾತ್ರವೇ ತಮ್ಮ ಕರ್ತವ್ಯ ಎಂದು ಭಾವಿಸಿದ್ದು ; ಅಲ್ಲದೆ ಸತ್ಯ ಸಾಕ್ಷಾತ್ಕಾರಕ್ಕಾಗಿ ಜನರನ್ನು ಜಾತಿ, ಪಂಥ, ಜನಾಂಗ ಭೇದವಿಲ್ಲದೆ, ಕರೆದುಕೊಂಡು ಹೊರಟಿದ್ದು. ಜೊತೆಗೆ ಭಾರತೀಯ ಸಂಸ್ಕೃತಿ, ಧರ್ಮ ಮತ್ತು ಜೀವನದ ಪರಭಾರೆ ಮಾಡಲಾಗದ ಲಕ್ಷಣಗಳಾದ ಕ್ರಿಯಾತ್ಮಕ ಸಹಿಷ್ಣುತೆಯ ಚೈತನ್ಯಶೀಲ, ಆರೋಗ್ಯಕರ ವಾತಾವರಣವನ್ನು ಸೃಷ್ಟಿಮಾಡಿದ್ದೂ ಆ ಉಪನಿಷತ್ತುಗಳೇ.

ಈ ಶ್ರುತಿ-ಸ್ಮೃತಿ ಕಲ್ಪನೆಯ ಬೆಳಕಿನಲ್ಲಿ ನಾವು ನೋಡಿದರೆ ವಿಜ್ಞಾನದ ಬಾಂಧವ್ಯ ಇರುವುದು ಭಗವಂತನೆಡೆಗೆ ಕರೆದೊಯ್ಯುವ ದಾರಿಯಾಗಿರುವ ಶ್ರುತಿಯೊಂದಿಗೆ ಮಾತ್ರ. ವಿಜ್ಞಾನಕ್ಕೂ ಧರ್ಮದ ಸಾಮಾಜಿಕ-ರಾಜಕೀಯ ಅಭಿವ್ಯಕ್ತಿಯಾದ ಸ್ಮೃತಿ ಭಾಗಕ್ಕೂ ಯಾವುದೇ ಸಂಬಂಧವೂ ಇಲ್ಲ. ಮತಧರ್ಮ (ಅಥವಾ ಜನಾಂಗೀಯ ಧರ್ಮ—ethnical religion) ಎನ್ನುವ ಮಾತೇ ಒಂದು ಗುಂಪಿನ ಪ್ರತ್ಯೇಕತಾ ನೀತಿ, ಪಂಥ ನಿಷ್ಠೆ ಇವುಗಳಿಂದ ಕೂಡಿದ ಸ್ಮೃತಿ ಅಂಶದ ಪ್ರಾಧಾನ್ಯವನ್ನು ಎತ್ತಿತೋರಿಸುತ್ತದೆ. ಕಾಲಕ್ರಮದಲ್ಲಿ ಕೊಳೆತು ನಾರುವ ಈ ಮತಧರ್ಮವೇ ಸಾಮಾಜಿಕ ಪರಿವರ್ತನೆಯನ್ನು ನಿರಾಕರಿಸುವಂಥದು. ಭೌತವಿಜ್ಞಾನ ಮತ್ತು ಎಲ್ಲ ಸೃಜನಶೀಲ ಸಾಮಾಜಿಕ ಪ್ರಯತ್ನಗಳೊಂದಿಗೆ ಘರ್ಷಣೆಗೆ ಇಳಿಯುವಂಥದು. ಎಲ್ಲ ಧರ್ಮಗಳಲ್ಲೂ ಈ ಮತಧರ್ಮದ ಅಂಶವು ಕಾಲಕ್ರಮದಲ್ಲಿ ಪುರೋಹಿತಶಾಹಿಯಲ್ಲೂ, ಊಳಿಗಮಾನ್ಯ ಪದ್ಧತಿಯಲ್ಲೂ ಹೆಚ್ಚು ಹೆಚ್ಚಾಗಿ ಕೇಂದ್ರೀಕೃತಗೊಂಡು ನಿಂತುಬಿಡುತ್ತದೆ. ಅದರ ಆಧ್ಯಾತ್ಮಿಕ ಅಂಶವು ಪ್ರವಾದಿಯಲ್ಲೂ, ಅವತಾರಿಯಲ್ಲೂ ನೆಲೆಗೊಳ್ಳುತ್ತದೆ. ಧರ್ಮದ ಜನಾಂಗೀಯ ಅಂಶವೂ ಮುಂದುವರಿಯುತ್ತದೆ. ಆದರೆ, ಅದು ಮಾನವನ ಆಧ್ಯಾತ್ಮಿಕ ಬೆಳವಣಿಗೆಗೆ ನೆರವಾಗಬೇಕಾದರೆ ಅದು ಆಧ್ಯಾತ್ಮಿಕ ಭಾಗಕ್ಕೆ ಅಡಿಯಾಳಾಗಬೇಕಾಗುತ್ತದೆ ಎನ್ನುತ್ತದೆ ಹಿಂದೂ ಸಂಪ್ರದಾಯ.

### ೩೦. ಭಾರತ ಮತ್ತು ಧರ್ಮಕ್ಕೆ ವೈಜ್ಞಾನಿಕ ಪಥ

ಧರ್ಮದ ಕ್ಷೇತ್ರದಲ್ಲಿ ಅನುಸರಿಸುವ ಸಂಶೋಧನಾ ವಿಧಾನಗಳು ಬಹುಪಾಲು ವಿಜ್ಞಾನ

ಕ್ಷೇತ್ರದಲ್ಲಿ ಅನುಸರಿಸುವ ವಿಧಾನಗಳೇ : ವಾಸ್ತವಾಂಶಗಳ ಸಂಗ್ರಹ, ಅವುಗಳ ವರ್ಗೀಕರಣ, ಅವುಗಳ ಹಿಂದೆ ಇರುವ ನಿಯಮ ಅಥವಾ ನಿಯಮಗಳನ್ನು ಕಂಡುಹಿಡಿಯಲು ನಡೆಸುವ ರಾಗದ್ವೇಷ ರಹಿತ ಅಧ್ಯಯನ, ಸಂಬಂಧಪಟ್ಟ ಘಟನೆಗಳ ಮೇಲೆ ಹತೋಟಿ ಸಾಧಿಸಲು ಬೇಕಾದ ಜ್ಞಾನ ಸಂಪಾದನೆ, ಅಂತಿಮವಾಗಿ ಮಾನವನ ಆಧ್ಯಾತ್ಮಿಕ ಬೆಳವಣಿಗೆಗೆ, ಮಾನವನ ದುಃಖಕಷ್ಟಗಳ ನಿವಾರಣೆಗೆ, ಮಾನವನ ಜೀವನವನ್ನು ಶ್ರೀಮಂತಗೊಳಿಸುವುದು ಹಾಗೂ ಮಾನವ ಜೀವನದ ಸಾಫಲ್ಯಕ್ಕೆ ಅಂತಹ ಜ್ಞಾನವನ್ನು ಬೆಳೆಸುವುದು. ಪ್ರಾಚೀನ ಭಾರತದ ಮಹಾನ್ ಸಂತರು ಅಂತರಂಗ ಜೀವನದ ವಾಸ್ತವಾಂಶಗಳನ್ನು ಕಂಡುಹಿಡಿಯಲು ಧರ್ಮವನ್ನು ಮೇಲೆ ಹೇಳಿದ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ, ಅಧ್ಯಯನ ಮಾಡಿದರು. ಹೀಗೆ ಮಾಡಿ ಅವರು ಪಡೆದ ಒಳ ಅರಿವುಗಳನ್ನು ಅನಂತರ ಅನೇಕ ಮಹಾನ್ ಸಂತರು ಮತ್ತೆ ಪರೀಕ್ಷೆಗೆ ಒಳಪಡಿಸಿ, ವಿಸ್ತರಿಸಿ ಮುಂದಿನ ತಲೆಮಾರುಗಳಿಗೆ ಧರ್ಮದ ಕ್ಷೇತ್ರದ ಅಮೂಲ್ಯವಾದ ವೈಜ್ಞಾನಿಕ ಸಂಪತ್ತನ್ನಾಗಿ ಬಿಟ್ಟುಹೋದರು.

*ಈ ವಜ್ರಸದೃಶವಾದ ತರ್ಕಬದ್ಧವಾದ, ಅನುಭವಾತ್ಮಕ ಅಸ್ತಿಭಾರದಮೇಲೆ ರಚಿತವಾಗಿರುವುದರಿಂದಲೇ ಭಾರತೀಯ ಆಧ್ಯಾತ್ಮಿಕತೆ ಮತ್ತು ಸಂಸ್ಕೃತಿಗಳು, ಆ ಅಸ್ತಿಭಾರತದಿಂದಲೇ ಪೋಷಣೆ ಪಡೆದು ಕಾಲದ ಪರೀಕ್ಷೆಯನ್ನು ಎದುರಿಸಿ ನಿಂತಿರುವುದು. ಅದು ಆಧುನಿಕ ಭೌತ ವಿಜ್ಞಾನವನ್ನು ಮುಕ್ತವಾಗಿ ಸ್ವೀಕರಿಸುವುದನ್ನೂ ಆಧುನಿಕ ಪಶ್ಚಿಮವು ಪೋಷಿಸಿ ಬೆಳಸಿರುವ ತನ್ನ ಸೋದರ ಶಾಖೆಯಾದ ವಿಜ್ಞಾನವು ನಡೆಸಿರುವ ಅದ್ಭುತವಾದ ಸಾಧನೆಗಳ ವಿಷಯದಲ್ಲಿ ಅದು ಹೆಮ್ಮೆ ತಾಳಿರುವುದಕ್ಕೂ ಕಾರಣವು ಇದೇ.*

ಭಾರತೀಯ ತಾತ್ವಿಕ ಚಿಂತನೆಯ ಈ ಗುಣವನ್ನು ಕುರಿತು ರೊಮ್ಮೆ ರೊಲಾ ಹೇಳುತ್ತಾರೆ (The Life of Vivekananda, p. 196) :

*ನಿಜವಾದ ವೇದಾಂತ ಮನೋಭಾವವು ಪೂರ್ವಕಲ್ಪಿತ ಭಾವನೆಗಳಿಂದ ಹೊರಡುವುದಿಲ್ಲ. ಪರೀಕ್ಷಿಸಿ ನೋಡಬೇಕಾದ ಸಂಗತಿಗಳು, ಅವುಗಳ ಸಂಯೋಜನೆಗೆ ಬೇಕಾದ ಬೇರೆ ಬೇರೆ ಆಧಾರಕಲ್ಪನೆಗಳು ಇವುಗಳ ವಿಷಯದಲ್ಲಿ ಅಲ್ಲಿ ಪೂರ್ಣಸ್ವಾತಂತ್ರ್ಯವೂ ಅನುಪಮವಾದ ಧೈರ್ಯವೂ ಇರುತ್ತವೆ. ಯಾವ ಪುರೋಹಿತ ವರ್ಗದಿಂದಲೂ ಅಡಚಣೆಗೊಳ್ಳದೆ ಪ್ರತಿಯೊಬ್ಬನೂ ಈ ವಿಶ್ವ ದೃಶ್ಯದ ಆಧ್ಯಾತ್ಮಿಕ ವಿವರಣೆಯನ್ನು ತನಗೆ ಬೇಕಾದ ಕಡೆ ಹುಡುಕುವ ಪೂರ್ಣ ಸ್ವಾತಂತ್ರ್ಯ ಅಲ್ಲಿದೆ.*

ಮಾನವನ ಸ್ವಭಾವವನ್ನು ಕುರಿತಂತೆ ಸಮಗ್ರವಾದ ಸಂಶೋಧನೆಯನ್ನು ನಡೆಸಿದ ಮೇಲೆ ಉಪನಿಷತ್ತುಗಳ ಋಷಿಗಳು ಒಂದು ಮೂಲಭೂತ ವಿಷಯವನ್ನು ಕಂಡುಹಿಡಿದರು ; ಮಾನವನ ಮೂಲಭೂತ ಸ್ವರೂಪವು ದಿವ್ಯವಾದದ್ದು ; ಸಾಂತ ಮಾನವನ ಹಿಂದೆ ಮುಕ್ತವೂ, ನಿತ್ಯ ಶುದ್ಧವೂ, ನಿತ್ಯ ಪ್ರಕಾಶಮಾನವೂ ಆದ ಆತ್ಮವಿದೆ. ಅಮರನೂ ದಿವ್ಯನೂ ಆದ ನಿಜವಾದ ಮಾನವನ ದೇಹ, ಮನಸ್ಸು, ಅಹಂಗಳು ಅವನ ಬಹಿರಂಗಗಳು ಮಾತ್ರ. ಈ ಶೋಧನೆಯು ಮತ್ತೊಂದು ಶೋಧನೆಗೆ ಒಯ್ದಿತು : ಅದೇ ದಿವ್ಯತೆಯೇ ಜಗತ್ತಿನ ನೆಲೆಗಟ್ಟು ಕೂಡ. ಇದನ್ನು ಆ ಋಷಿಗಳು ಎಲ್ಲ ಆತ್ಮ ಅನಾತ್ಮಗಳ ಸಮಗ್ರತೆಯಾದ ಬ್ರಹ್ಮ ಎಂದು ಕರೆದರು. ಅದು ಸತ್ಯ, ಜ್ಞಾನ, ಅನಂತ.

## ೩೧. ಪರಾ ವಿದ್ಯಾ ಮತ್ತು ಅಪರಾ ವಿದ್ಯಾ

ನಿಜವಾದ ಹಂಬಲದಿಂದ ಕೂಡಿದ ಶಿಷ್ಯನು ಮಹಾನ್ ಗುರುವೊಬ್ಬನಿಗೆ ಈ ಪ್ರಶ್ನೆಯನ್ನು ಹಾಕಿದ ಎಂದು ಮುಂಡಕ ಉಪನಿಷತ್ತು (I.I. 3) ಹೇಳುತ್ತದೆ :

ಕಸ್ಮಿನ್ ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ—'ಭಗವನ್, ಯಾವ ಸತ್ಯವನ್ನು ತಿಳಿದರೆ ಈ ವ್ಯಕ್ತ ಜಗತ್ತಿನಲ್ಲಿರುವ ಇತರ ಎಲ್ಲವನ್ನೂ ತಿಳಿಯಬಹುದು ?"

ಯಾವುದನ್ನು ತಿಳಿದರೆ ಈ ಪ್ರಕೃತಿಯಲ್ಲಿ ವ್ಯಕ್ತವಾಗಿರುವ ಎಲ್ಲ ಅಂತರಂಗ ಬಹಿರಂಗವಸ್ತುಗಳನ್ನು ಅರ್ಥಮಾಡಿಕೊಳ್ಳಬಹುದೋ ಅಂತಹ ಸತ್ಯ ಎಂಬುದೊಂದಿದೆಯೆ ? ಈ ವಿವಿಧತೆಯ ನಡುವೆ ಏಕತೆ ಎಂಬುದೊಂದಿದೆಯೆ ? ಈ ಪ್ರಶ್ನೆಗೆ ಗುರುವು ಅರ್ಥಪೂರ್ಣವಾದ ಉತ್ತರವನ್ನು ನೀಡಿದನು. (ಅಲ್ಲೇ I. I. 4) :

ದ್ವೇ ವಿದ್ಯೇ ವೇದಿತವ್ಯೇ, ಇತಿ ಹಸ್ಮ ಯದ್ ಬ್ರಹ್ಮವಿದೋ ವದಂತಿ, ಪರಾ ಚೈವ ಅಪರಾ ಚ

*ಮಾನವನು ತಿಳಿದುಕೊಳ್ಳಬೇಕಾದ ಎರಡು ವಿದ್ಯೆಗಳು, ಅಥವಾ ವಿಜ್ಞಾನಗಳಿವೆ. ಹೀಗೆಂದು ಬ್ರಹ್ಮ ಜ್ಞಾನಿಗಳು ಹೇಳುತ್ತಾರೆ. ಒಂದು ಪರಾವಿದ್ಯೆ, ಉನ್ನತತರ ವಿದ್ಯೆ ಅಥವಾ ವಿಜ್ಞಾನ. ಇನ್ನೊಂದು ಅಪರಾ ವಿದ್ಯೆ, ಸಾಮಾನ್ಯ ವಿದ್ಯೆ ಅಥವಾ ವಿಜ್ಞಾನ.*

ಈ ಎರಡನ್ನೂ ಪರೀಕ್ಷಿಸಬೇಕು. ಇವುಗಳಲ್ಲಿ ಅಪರಾ ಅಥವಾ ಸಾಮಾನ್ಯ ಜ್ಞಾನದಲ್ಲಿ ಪವಿತ್ರವೇದಗಳು, ಶಿಕ್ಷಾಶಾಸ್ತ್ರ, ಕಲ್ಪಾ, ವ್ಯಾಕರಣ, ನಿರುಕ್ತ, ಛಂದಸ್, ಜ್ಯೋತಿಷ್ಯ ಇವೆಲ್ಲ ಸೇರಿವೆ ಎನ್ನುತ್ತಾನೆ ಉಪನಿಷತ್ತಿನ ಗುರು. ವಾಸ್ತವವಾಗಿ ಇಂದು ನಾವು ಯಾವುದನ್ನು ಎಲ್ಲ ಧರ್ಮಗಳ ಗ್ರಂಥಗಳಲ್ಲೂ ಇರುವ ಧರ್ಮದ ಅನುಭೂತಿಯ ಪರೋಕ್ಷ ಜ್ಞಾನವೂ ಸೇರಿದಂತೆ ಎಲ್ಲ ಪ್ರತ್ಯಕ್ಷಪ್ರಮಾಣ ಜ್ಞಾನದ ಸಮಸ್ತವೂ ಇದರ ವ್ಯಾಪ್ತಿಯಲ್ಲಿ ಬರುತ್ತವೆ.

ಇಲ್ಲಿ ನಾವು ವ್ಯಕ್ತಿಗತವಲ್ಲದ, ವಸ್ತುನಿಷ್ಠವಾದ, ಸಂಗದೂರವಾದ ಅತ್ಯುನ್ನತಮಟ್ಟದ ಮಹಾನ್ ಮತಿಯೊಂದನ್ನು ಕಾಣುತ್ತೇವೆ. ಪ್ರಿಯವಾದ ಅಭಿಪ್ರಾಯವೊಂದನ್ನು ಮಂಡಿಸುವ ಬಯಕೆಯಿಲ್ಲ. ಸತ್ಯವೊಂದೇ, ಆ ಸತ್ಯವು ಪ್ರಿಯಾಪ್ರಿಯಗಳಿಗೆ ವಿರುದ್ಧವಾಗಿದ್ದರೂ, ಇಲ್ಲಿ ಚಾಲಕಶಕ್ತಿ. ಇಡೀ ಜನಾಂಗಕ್ಕೆ ಪವಿತ್ರವಾದ ವೇದಗಳೂ ಸಾಮಾನ್ಯ ಜ್ಞಾನದ ವರ್ಗಕ್ಕೆ ಸೇರುತ್ತವೆ ಎನ್ನುತ್ತಾನೆ ಗುರು. ಯಾರು ತಾನೆ ತನ್ನ ಪವಿತ್ರ ಗ್ರಂಥಗಳು ಕೂಡ ಸಾಮಾನ್ಯವಾದವು ಎಂದು ಹೇಳುವ ಧೈರ್ಯ ಮಾಡಬಲ್ಲ ?—ಒಬ್ಬನ ವಿನಾ. ಯಾರಿಗೆ ಸಂಗರಹಿತವೂ ವೈಜ್ಞಾನಿಕವಾದದ್ದೂ ಆದ ಮನಸ್ಥಿತಿ ಇದೆಯೋ, ಯಾರು ಸಿದ್ಧಾಂತವನ್ನಲ್ಲದೆ ಸತ್ಯವನ್ನು ಅರಸುತ್ತಿದ್ದಾನೆಯೋ, ಯಾರಲ್ಲಿ ಮುಚ್ಚಿಡ ಬೇಕಾದ ಸತ್ಯ ಯಾವುದೂ ಇಲ್ಲವೋ, ಎತ್ತಿಹಿಡಿಯಬೇಕಾದ ಅಭಿಪ್ರಾಯ ಯಾರಲ್ಲಿ ಇಲ್ಲವೋ ತಾನು ವಕಾಲತ್ತು ವಹಿಸಬೇಕಾದ ಪೂರ್ವಗ್ರಹ ಯಾರಲ್ಲಿಲ್ಲವೋ, ಯಾರು ಸತ್ಯವನ್ನು ಮಾತ್ರ ಅರಿಯಲು ಅಪೇಕ್ಷಿಸುತ್ತಾನೆಯೋ, ಆ ಪ್ರಯತ್ನದಲ್ಲಿ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧನಿದ್ದಾನೆಯೋ ಅಂಥವನು ಅವನು. ಉಪನಿಷತ್ತುಗಳ ಪರಂಪರೆಯಿಂದ ಬಂದ ಧರ್ಮವೊಂದಲ್ಲದೆ ಬೇರೆ ಯವುದೂ ಇಂಥ ಕೆಚ್ಚೆದೆಯ ನಿರ್ಲಿಪ್ತತೆಯನ್ನು ಆಚರಿಸಲಾರದು. ಸಾಮಾನ್ಯ ಜ್ಞಾನ ಯಾವುದು ಎಂದು ಬೇರೆ ಯಾವುದೇ ಧರ್ಮದ ಅನುಯಾಯಿಗಳನ್ನು ಕೇಳಿ ಅವರು ಸ್ವಲ್ಪವೂ ಹಿಂಜರಿಯದೆ ಹೇಳುತ್ತಾರೆ ; ನನ್ನದನ್ನು ಬಿಟ್ಟು ಉಳಿದೆಲ್ಲ ಧರ್ಮಗಳ ಪವಿತ್ರಗ್ರಂಥಗಳು. ಆದರೆ ಉಪನಿಷತ್ತುಗಳ ಈ ಗುರು, ಸತ್ಯವನ್ನು ಕುರಿತು ತನಗಿರುವ ಪ್ರೀತಿಯಿಂದ ಪ್ರೇರಿತನಾಗಿ, ತಾನು ಮತ್ತು ತನ್ನ ಜನ ಅತ್ಯಂತ ಪೂಜ್ಯಭಾವದಿಂದ ನೋಡುವ ವೇದಗಳು ಕೂಡ ಅಮುಖ್ಯ ಎಂದು ಹೇಳುವ ನಿರ್ಲಿಪ್ತತೆ ಮತ್ತು ಧೈರ್ಯವನ್ನು ಪ್ರಕಟಿಸುತ್ತಾರೆ. ಎಲ್ಲ ಧರ್ಮ ಗ್ರಂಥಗಳೂ, ಎಲ್ಲ ಮಾನವ ನಿರ್ಮಿತ ವಿಜ್ಞಾನಗಳೂ, ಕಲೆಗಳೂ ಕೆಳಗಿನ ಸ್ತರದ ಜ್ಞಾನ–ಅಪರಾವಿದ್ಯೆ ಎಂದು ಹೇಳುತ್ತಾನೆ.

ನಮ್ಮ ಕಾಲದಲ್ಲಿ ಶ್ರೀರಾಮಕೃಷ್ಣರು ಈ ಮನೋಭಾವವನ್ನು ಒತ್ತಿ ಹೇಳುತ್ತಾ ಹೀಗೆಂದಿದ್ದಾರೆ : ವೇದಗಳು ಮತ್ತು ಇತರ ಪವಿತ್ರ ಗ್ರಂಥಗಳಲ್ಲಿ ದೇವರಿಲ್ಲ. ಅವುಗಳಲ್ಲಿರುವುದು ದೇವರ ಬಗ್ಗೆ

ವಾರ್ತೆ. ಅವು ಹಿಂದೂ ಪಂಚಾಂಗಗಳಂತೆ. ಈ ವರ್ಷ ಎಷ್ಟು ಮಳೆ ಬೀಳುತ್ತದೆ ಎಂಬುದನ್ನು ಪಂಚಾಂಗವು ಹೇಳುತ್ತದೆ. ಆದರೆ, ಎನ್ನುತ್ತಾರೆ ಶ್ರೀರಾಮಕೃಷ್ಣರು, ಪಂಚಾಂಗವನ್ನು ಹಿಂಡಿದರೂ ನಿಮಗೆ ಒಂದು ಹನಿ ನೀರು ಸಿಕ್ಕುವುದಿಲ್ಲ. ಹಾಗೆಯೇ ಪವಿತ್ರಗ್ರಂಥಗಳನ್ನು ಹಿಂಡುವುದರಿಂದ ಯಾರಿಗೂ ದೇವರು ದೊರೆಯುವುದಿಲ್ಲ. ಆದರೆ ನಿಮ್ಮ ಅನುಭವವನ್ನು ಹಿಂಡಿದರೆ ಎಲ್ಲರೂ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ; ಏಕೆಂದರೆ ಅವನು ಎಲ್ಲರಲ್ಲಿರುವ ಆತ್ಮ.

ಹಾಗಾದರೆ ಪರಾವಿದ್ಯೆಯ ಉನ್ನತ ಜ್ಞಾನದ ವರ್ಗದಲ್ಲಿ ಸೇರುವುದು ಯಾವುದು? ಈ ಜಾರಿಕೆಯ ವಿಷಯವನ್ನು ಕುರಿತು ಗುರು ಹೇಳುತ್ತಾನೆ. ನಾವು ಗಮನಿಸದೆ ಬಿಟ್ಟಿರುವ ಒಂದು ವಿಸ್ತಾರವಾದ ಜ್ಞಾನಕ್ಷೇತ್ರವಿದೆ, ಅನುಭವ ಕ್ಷೇತ್ರವಿದೆ. ಆದರೆ ಅದು ಬೇರೆಯೇ ವರ್ಗದ್ದು. ಆದ್ದರಿಂದ ಹೇಳುತ್ತಾನೆ (ಅಲ್ಲೇ. I. 1.5) :

ಅಥ ಪರಾ, ಯಯಾ ತದ್ ಅಕ್ಷರಂ ಅಧಿಗಮ್ಯತೇ

*ಅದು ಪರಾವಿದ್ಯೆ, ಉನ್ನತತರ ವಿಜ್ಞಾನ, ನಾಶರಹಿತವಾದ (ಸತ್ಯವನ್ನು) ಅರಿಯುವುದು ಅದರಿಂದಲೇ.*

ಭೌತವಿಜ್ಞಾನ ಮತ್ತುಳಿದ ಎಲ್ಲವೂ ಬದಲಾಗುವ, ನಾಶಹೊಂದುವ ವಿಷಯಗಳನ್ನು ಕುರಿತು ವ್ಯವಹರಿಸುತ್ತವೆ. ಸರ್ ಆರ್ಥರ್ ಎಡಿಂಗ್‌ಟನ್ ಹೇಳಿರುವಂತೆ 'ವಿಜ್ಞಾನವು ವಸ್ತುಗಳ ರಚನಾ ರೂಪದ ಜ್ಞಾನವನ್ನು ನೀಡುತ್ತವೆಯೇ ಹೊರತು ಒಳಗಿನ ಸಾರದ ಜ್ಞಾನವನ್ನಲ್ಲ. ಪವಿತ್ರ ಗ್ರಂಥಗಳು, ಶ್ರೀರಾಮಕೃಷ್ಣರ ಮಾತುಗಳಲ್ಲಿ ಹೇಳುವುದಾದರೆ ಭಗವಂತನ ವಿಷಯದಲ್ಲಿ ವಾರ್ತೆಯನ್ನು ನೀಡುತ್ತವೆಯೇ ಹೊರತು ಜ್ಞಾನವನ್ನಲ್ಲ. ಆದರೂ, ಎಡಿಂಗ್ಟನ್ನನ ಮಾತುಗಳಲ್ಲಿ 'ಈ ಭೌತ ಜಗತ್ತಿನಾದ್ಯಂತ ನಮಗೆ ತಿಳಿದಿಲ್ಲದ ಆ ತಿರುಳು ವ್ಯಾಪಿಸಿರುವುದು' ನಮ್ಮ ಅನುಭವಕ್ಕೆ ಬರುತ್ತಿದೆ. ಆ 'ತಿರುಳು' ಯಾವುದು ? ಅದನ್ನು ನಾವು ಪಡೆಯುವುದು ಹೇಗೆ ? ಈ ಭೌತವಿಜ್ಞಾನಗಳು ಅದನ್ನು ಸಮೀಪಿಸಲಾಗದಿದ್ದರೆ ಇನ್ನು ಯಾವುದೋ ಶಾಖೆ, ಇನ್ನು ಯಾವುದೋ ಶೋಧನ ವಿಧಾನ ಆ ಸತ್ಯವನ್ನು ನಮಗೆ ಕೊಡುವಂಥದು ಇರಬೇಕು.

ಪವಿತ್ರ ಗ್ರಂಥಗಳು ಭಗವಂತನ ಬಗ್ಗೆ ವಾರ್ತೆಯನ್ನು ಮಾತ್ರ ಕೊಡುವಂತಿದ್ದರೆ ಮತ್ತೆ ಯಾವುದೇ ಶಾಖೆ, ಭಗವಂತನ ಬಗೆಗೆ ಬರಿಯ ವಾರ್ತೆಯನ್ನಲ್ಲದೆ ಭಗವಂತನನ್ನೇ ನೀಡುವಂಥದ್ದು ಇರಬೇಕು. ಈ ಶೋಧನೆಯೇ ಉಪನಿಷತ್ತುಗಳನ್ನೆಲ್ಲ ವ್ಯಾಪಿಸಿರುವುದು ಮತ್ತು ಅವನ್ನು ಸಾಹಿತ್ಯವನ್ನಾಗಿ ಕೂಡ ಅಮರವನ್ನಾಗಿಸಿರುವುದು. ಆ ಶೋಧನೆಯ ಸ್ವರೂಪ ಮತ್ತು ವ್ಯಾಪ್ತಿ, ಅದು ನಡೆದ ರೀತಿ ಅದರಿಂದ ದೊರೆತ ಸತ್ಯಗಳು ಇವೆಲ್ಲದರಲ್ಲಿ ಅತ್ಯಂತ ಶ್ರೇಷ್ಠವಾದ ಅಂಶವೊಂದಿದೆ. ಎಷ್ಟೇ ಪ್ರಿಯವಾದದ್ದಾದರೂ ಒಂದು ಅಭಿಪ್ರಾಯವನ್ನು ಎತ್ತಿಹಿಡಿಯುವ ಪ್ರಯತ್ನ ಅಲ್ಲಿಲ್ಲ. ಒಂದು ಸಿದ್ಧಾಂತವನ್ನು ಮಂಡಿಸಿ, ಅದಕ್ಕೆ ಜೋತುಬೀಳುವ, ಇತರರ ಮೇಲೆ ಅದನ್ನು ಹೇರುವ ಹೋರಾಟ ಅಲ್ಲಿಲ್ಲ. ಬಳಲಿಕೆಯ ಅಥವಾ ಮಾನಸಿಕ ಸೋಮಾರಿತನದ, ದಾರಿಯಲ್ಲಿ ಒಂದು ತಂಗುದಾಣವನ್ನು ಹುಡುಕುವ ಪ್ರಯತ್ನದ ಸುಳಿವು ಕೂಡ ಅಲ್ಲಿಲ್ಲ. ಸತ್ಯ, ಸತ್ಯವಲ್ಲದೆ ಬೇರೇನೂ ಅಲ್ಲ ಎಂಬುದೇ ಅಲ್ಲಿನ ಘೋಷಣಾ ವಾಕ್ಯ. ಈ ಮನೋಭಾವದಿಂದ ತುಂಬಿತುಳುಕುತ್ತಿದ್ದ ಅಲ್ಲಿನ ಋಷಿಗಳು ಘೋಷಿಸಿದರು (ಅಲ್ಲೇ III.1.6) :

ಸತ್ಯಮೇವ ಜಯತೇ ನಾನೃತಮ್
ಸತ್ಯೇನ ಪಂಥಾ ವಿತತೋ ದೇವಯಾನಃ —

*ಸತ್ಯವೊಂದೇ ಗೆಲ್ಲುವುದು, ಅಸತ್ಯವಲ್ಲ ; ಪ್ರಕಾಶಮಾನವಾದ ಸತ್ಯದೆಡೆಗೆ ಒಯ್ಯುವ ದಾರಿ ಸತ್ಯದಿಂದ ಮಾಡಿದ್ದಾಗಿದೆ.*

ಪ್ರಕಾಶಮಾನವಾದ ಸತ್ಯದ ಪಥದಲ್ಲಿ ಏನೆಲ್ಲದರ ಭಗ್ನಾವಶೇಷಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ : ನಿರಾಕರಿಸಲ್ಪಟ್ಟ ಅಭಿಪ್ರಾಯಗಳು, ಪ್ರಿಯವಾದ ಸಿದ್ಧಾಂತಗಳು, ಚೂರು ಚೂರಾದ ಊಹಾ ಪ್ರತಿಜ್ಞೆಗಳು, ಕೊನೆಗೆ ಸಿಂಹಾಸನಚ್ಯುತರಾದ ದೇವರುಗಳು ! ಅವುಗಳಲ್ಲಿ ಯಾವೊಂದರ ಮೇಲೂ ಚಿಂತನೆ ಬಹುಕಾಲ ವಿಶ್ರಾಂತಿ ಪಡೆಯಲು ಬಿಡಲಿಲ್ಲ. ಅದು ವಿಮರ್ಶಾಪೂರ್ಣ ವಿವೇಕ ಮತ್ತು ಅಂತರಂಗದ ನಿರ್ಮೋಹ—ವಿವೇಕ ಮತ್ತು ವೈರಾಗ್ಯ ಎಂಬ ಎರಡು ರೆಕ್ಕೆಗಳ ನೆರವಿನಿಂದ ಭರ್ರನೆ ಹಾರುತ್ತಾ ಸಾಗಿತು. ಅದನ್ನು ಸಾಗಿಸಿದ್ದು ಸತ್ಯದ ವಿಷಯದಲ್ಲಿದ್ದ ಏಕಾಗ್ರ, ಕಟ್ಟುಗ್ರ ಹಂಬಲದ ಸೆಳೆತ. ಒಬ್ಬ ಋಷಿಯು ಅಂತರಂಗದ ಜಗತ್ತಿನ ವಿಷಯದಲ್ಲಿ ತಾನು ಸಂಗ್ರಹಿಸಿದ ದತ್ತಾಂಶಗಳ ಆಧಾರದ ಮೇಲೆ ತಾನು ತಲುಪಿದ ಸಿದ್ಧಾಂತವನ್ನು ಮಂಡಿಸುತ್ತಾನೆ ; ಮತ್ತೊಬ್ಬ ಋಷಿ ಅದು ಹೇಗೆ ಅಸಮರ್ಪಕ ಎಂಬುದನ್ನು ತೋರಿಸುತ್ತಾನೆ ; ಇದರಿಂದ ಮತ್ತಷ್ಟು ಜಿಜ್ಞಾಸೆಗೆ ಪ್ರಚೋದನೆ ದೊರೆಯುತ್ತದೆ. ಪರಿಣಾಮವಾಗಿ ಮತ್ತೊಂದು ಗಹನವಾದ ಸಿದ್ಧಾಂತ ಲಭ್ಯವಾಗುತ್ತದೆ. ಹೀಗಾಗಿ ಉತ್ಸಾಹಗುಂದದ, ಸಂತೋಷಪೂರ್ಣವಾದ ಶೋಧನೆ ನಡೆಯುತ್ತಾ ಹೋಯಿತು. ಅತ್ಯಂತ ಪ್ರತಿಭಾನ್ವಿತ ಮತಿಗಳ ನಡುವೆ ಸೌಜನ್ಯಪೂರ್ಣವಾದ ಚರ್ಚೆ ನಡೆಯಿತು. ಇವುಗಳ ನಡುವೆ ಚಿಂತನೆ ಪ್ರಗತಿಪಥದಲ್ಲಿ ಸಾಗಿತು. ಅದನ್ನು ಅದುಮಿಡಲು ಅಥವಾ ಸೆರೆಯಲ್ಲಿಡಲು ಯಾವ ರಾಷ್ಟ್ರೀಯ ಔದ್ಧತ್ಯ ಸಿದ್ಧಾಂತವಾಗಲಿ, ಸರ್ವಾಧಿಕಾರದ ಧರ್ಮಪೀಠವಾಗಲಿ ಇರಲಿಲ್ಲ. ಈ ಇಡೀ ಪ್ರಕ್ರಿಯೆ ತನ್ನ ಪರಾಕಾಷ್ಠೆಯನ್ನು ತಲುಪಿದ್ದು ಅದು ಮಾನವನ ಅವಿನಾಶಿಯಾದ ಆತ್ಮವನೂ ಆ ಆತ್ಮವು ವಿಶ್ವದ ಆತ್ಮವಾದ ಬ್ರಹ್ಮನಲ್ಲಿ ತನ್ನ ಆಧ್ಯಾತ್ಮಿಕ ಐಕ್ಯವನ್ನು ಪಡೆದಿದೆಯೆಂಬುದನ್ನೂ ಕಂಡುಹಿಡಿದಾಗ. ಇಡೀ ಪ್ರಕ್ರಿಯೆ ಕಂಡುಹಿಡಿಯುವಿಕೆಯ ಒಂದು ಸಂತೋಷಕರ ಯಾನವಾಗಿತ್ತು. ಹಿಂದಿರುಗಿ ನೋಡಿದಾಗ ಅವರಿಗೆ ತಾವು ಹಿಂದೆ ಬಿಟ್ಟಿದ್ದ ಹೆಜ್ಜೆಗಳು ಕೂಡ ಸಪ್ರಮಾಣವಾದವು, ಮಾನವನು ದೋಷಗಳಿಂದ ಸತ್ಯಗಳ ಕಡೆಗೆ ಹೋಗುವುದಿಲ್ಲ. ಬದಲಿಗೆ ಕೆಳಗಿನ ಸತ್ಯಗಳಿಂದ ಉನ್ನತತರ ಸತ್ಯಗಳೆಡೆಗೆ ಪ್ರಯಾಣ ಮಾಡುತ್ತಾನೆ ಎಂಬುದು ಗೊತ್ತಾಯಿತು.

### ೩.೨. ಭಾರತದ ಆಧ್ಯಾತ್ಮಿಕ ದರ್ಶನ—ವೈವಿಧ್ಯದಲ್ಲಿ ಏಕತೆ

ಈ ಸಂದರ್ಭದಲ್ಲಿ, ಈ ಹಿನ್ನೆಲೆಯಲ್ಲಿ ಭಾರತವು ಧರ್ಮದ ಬಗೆಗೆ ತಳೆದ ನಿಲುವು ಅರ್ಥಪೂರ್ಣವಾಗುವುದು. ಉಪನಿಷತ್ತುಗಳ ಕಾಲದಿಂದ ನಮ್ಮ ಕಾಲದವರೆಗೂ ಭಾರತವು ಧರ್ಮದಲ್ಲಿ ಹುಡುಕಿರುವುದು ತಾನು ನಂಬಬಯಸುವ ಸಿದ್ಧಸಿದ್ಧಾಂತವನ್ನಲ್ಲ, ಮಾನವ ಮತ್ತು ಪ್ರಕೃತಿಯ ಹಿಂದೆ ನಿತ್ಯವೂ ಇರುವ ಸತ್ಯವನ್ನು ಮರೆಮಾಡಿರುವ ತೆರೆಯನ್ನು ಹರಿಯುವುದಕ್ಕೆ ಬೇಕಾದ ದಾರಿಯನ್ನು ಕ್ರಮಬದ್ಧವಾಗಿ ತಿಳಿದುಕೊಳ್ಳುವುದನ್ನು.

ಭಾರತೀಯ ಮನಸ್ಸಿಗೆ ಅನುಭವ ವಲಯವನ್ನು ಪ್ರವೇಶಿಸಿ ಸತ್ಯವನ್ನು ಹುಡುಕಲು ಇರುವ ತೀವ್ರವಾದ ಹಂಬಲವನ್ನು ಉಪನಿಷತ್ತುಗಳು ಭವ್ಯವಾದ ರೀತಿಯಲ್ಲಿ ದಾಖಲಿಸಿವೆ. ಅಮೆರಿಕದ ಕ್ರೈಸ್ತ ಪಾದ್ರಿ ರಾಬರ್ಟ್ ಅರ್ನೆಸ್ಟ್ ಹ್ಯೂಮ್ (The Thirteen Principal Upanishads, p..30. foot note) ಈ ಮೆಚ್ಚುಗೆಯ ಮಾತುಗಳನ್ನು ಹೇಳಿದ್ದಾರೆ :

> *ಉಪನಿಷತ್ತುಗಳ ಆನಂದಕರವೂ ಪ್ರಶಂಸಾರ್ಹವೂ ಆದ ಲಕ್ಷಣಗಳಲ್ಲಿ ಒಂದು ಎಂದರೆ ಸತ್ಯಾನ್ವೇಷಣೆಯಲ್ಲಿ ಅವಕ್ಕೆ ಇರುವ ತೀವ್ರವಾದ ಹಂಬಲ.*

ಉಪನಿಷತ್ತಿನ ಋಷಿಗಳು ಮಾನವನ ಆಳವನ್ನು ವಿಮರ್ಶಾತ್ಮಕವೂ, ಸೀಳಿನೋಡುವಂತಹುದೂ ಆದ ಬುದ್ಧಿಯಿಂದ ಶೋಧಿಸಿನೋಡಿದರು. ಉಪನಿಷತ್ತುಗಳಲ್ಲಿ ಒಂದು (ಕಠೋಪನಿಷತ್ತು III.12) ಹೇಳುವಂತೆ ಆ ಋಷಿಗಳು ಸೂಕ್ಷ್ಮ ಸತ್ಯಗಳನ್ನು ಅರಿಯುವುದರಲ್ಲಿ ಪಳಗಿದ ಸೂಕ್ಷ್ಮವಾದ ಹರಿತ

ವಾದ ಬುದ್ಧಿಯ ಮೂಲಕ—ಅಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ—ಅವರು ಅವಿನಾಶಿಯಾದ ಸತ್ಯವು ಏಕ, ಅ-ದ್ವಯ ಆತ್ಮ ಎಂದು ಕಂಡುಕೊಂಡರು. ಈಶಾವ್ಯಾಸ ಉಪನಿಷತ್ತಿನ ಮೊದಲನೆಯ ಮಂತ್ರವು ಈ ಭವ್ಯ ಸತ್ಯವನ್ನು ಘೋಷಿಸಿದೆ. ಆ ಮಂತ್ರವು ಗೀತೆಯ ತಾತ್ವಿಕ ಚಿಂತನೆಗೂ ಅನಂತರದ ಅಸಂಖ್ಯಾತ ಆಧ್ಯಾತ್ಮಿಕ ಸಾಧಕರಿಗೂ ಸ್ಫೂರ್ತಿಯನ್ನು ನೀಡಿದೆ. ಆ ಮಾತು ಹೀಗಿದೆ : ಈಶಾವ್ಯಾಸಂ ಇದಂ ಸರ್ವಂ ಯತ್ ಕಿಂಚ ಜಗತ್ಯಾಂ ಜಗತ್—'ಈ ಇಡೀ ವಿಶ್ವವು, ಅದರ ಬದಲಾಗುವ ಎಲ್ಲ ರೂಪಗಳೊಡನೆ ಭಗವಂತನಿಂದ ವ್ಯಾಪಿಸಲ್ಪಟ್ಟಿದೆ. ಕಠೋಪನಿಷತ್ತಿನ ಐದನೆಯ ಅಧ್ಯಾಯದ ಎರಡನೆಯ ಮಂತ್ರವನ್ನು ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಹೀಗೆ ಪರಿಚಯಿಸುತ್ತಾರೆ. ಆತ್ಮವು ಒಂದು (ಮಾನವ) ದೇಹದ 'ನಗರ' ನಿವಾಸಿ ಮಾತ್ರವಲ್ಲ. ಅವನು ಎಲ್ಲ ದೇಹಗಳಲ್ಲೂ ಇದ್ದಾನೆ :

ಹಂಸಃ ಶುಚಿಷದ್ವಸುರಂತರಿಕ್ಷಸತ್
ಹೋತಾವೇದಿಶದತಿಥಿರ್-ದುರೋಣಸತ್ ;
ನೃಷದ್ವರ ಸದೃತಸದ್ವ್ಯೋಮಸದಬ್ಜಾ ಗೋಜಾ
ಋತಜಾ ಅದ್ರಿಜಾ ಋತಂ ಬೃಹತ್—

*ಅವನು ಸ್ವರ್ಗದಲ್ಲಿ (ಸೂರ್ಯರೂಪದಲ್ಲಿ) ಇರುವ ಹಂಸ, ಅಂತರಿಕ್ಷದಲ್ಲಿರುವ ವಾಯು. ವೇದಿಯಲ್ಲಿರುವ ಅಗ್ನಿ, ಮನೆಯಲ್ಲಿರುವ ಪವಿತ್ರ ಅತಿಥಿ, ಅವನು ಮಾನವರಲ್ಲಿ, ದೇವತೆಗಳಲ್ಲಿ, ಯಜ್ಞದಲ್ಲಿ, ವಿಶಾಲವಾದ ಆಕಾಶದಲ್ಲಿ ಇದ್ದಾನೆ. (ಅವನು)ನೀರಿನಲ್ಲಿ ಜಲಚರಗಳಂತೆ ಇದ್ದಾನೆ. ಭೂಮಿಯಲ್ಲಿ (ಕ್ರಿಮಿಕೀಟಸರ್ಪ ಸಸ್ಯನಿಗಳಂತೆ) ಇದ್ದಾನೆ. ಅವನು ಯಜ್ಞ (ಫಲ)ದಂತೆ, ಜನಿಸಿದ್ದಾನೆ. ಪರ್ವತಗಳಿಂದ (ಸಮುದ್ರಕ್ಕೆ ಹರಿಯುವ ನದಿಗಳಂತೆ) ಜನಿಸಿದ್ದಾನೆ. ಅವನು ಸತ್ಯ, ಅನಂತ.*

ಈ ಮಹಾಮಂತ್ರವು ಒಂದು ಗಹನವಾದ ಆಧ್ಯಾತ್ಮಿಕ ದರ್ಶನವುಳ್ಳದ್ದು. ಇದು ಋಗ್ವೇದ (IV. 40.5)ದಲ್ಲಿಯೂ ಇದೆ. ಅಲ್ಲಿ ಕೊನೆಯ ಪದ ಮಾತ್ರ ಬಿಟ್ಟುಹೋಗಿದೆ. ಪ್ರಕೃತಿಯ ವಿಷಯದಲ್ಲಿ ಭೌತಿಕ ಮತ್ತು ಸಸ್ಯ ಮೃಗ ಪ್ರಾಣಿ ಮಾನವ ಪರಿಸರಗಳ ವಿಷಯದಲ್ಲಿ ಭಾರತೀಯ ದೃಷ್ಟಿಯನ್ನು ರೂಪಿಸಿದ ದರ್ಶನ ಇದು. ಪಶ್ಚಿಮದವರು ಭಾವಿಸಿದಂತೆ ಪರಿಸರವು ನಾವು ಸೋಲಿಸಿ, ಆಕ್ರಮಿಸಿಕೊಳ್ಳಬೇಕಾದ ಶತ್ರುವಲ್ಲ, ನಾವು ಅರ್ಥಮಾಡಿಕೊಂಡು ಗೌರವಿಸಬೇಕಾದ ಮತ್ತು ವಿವೇಕದಿಂದ ಪ್ರಯೋಜನ ಪಡೆದುಕೊಳ್ಳಬೇಕಾದ ಮಿತ್ರ. ಶತ್ರುವೆಂದು ಭಾವಿಸಿ ಮಾನವನು ಪ್ರಕೃತಿಯನ್ನು ಲೂಟಿಮಾಡಿ ನಾಶಮಾಡುತ್ತಾನೆ. ಇದೇ ದೃಷ್ಟಿ ಇತರ ಮಾನವಜೀವಿಗಳ ವಿಷಯಕ್ಕೂ ವ್ಯಾಪಿಸಿ ಯುದ್ಧಗಳು, ವಸಾಹತುಗಳ ಲೂಟಿ ಮತ್ತು ಗುಲಾಮರ ಮಾರಾಟಗಳಲ್ಲಿ ಪರ್ಯವಸಾನ ವಾಯಿತು. ಅದು ತೀವ್ರವಾದ ಪರಿಸರ ಅಸಮತೋಲನಗಳನ್ನು ಕೂಡ ಉಂಟುಮಾಡುತ್ತದೆ. ಪರಿಣಾಮವಾಗಿ ಪ್ರಕೃತಿಯೂ ತನ್ನ ಮೇಲೆ ಆಘಾತವನ್ನು ವಿಧಿಸಿದವರ ಮೇಲೇ ನಾಶವನ್ನು ಹೇರಿ ಅವರನ್ನು ಛಿದ್ರ ಛಿದ್ರ ಮಾಡುತ್ತದೆ. ಆಧುನಿಕ ಮಾನವನು ಅನುಭವಿಸುತ್ತಿರುವ ದುರಂತ ಇದೇ. ಮಾನವನ ವಿವೇಕಕ್ಕೆ ಗಂಭೀರವಾದ ಸವಾಲನ್ನು ಒಡ್ಡುತ್ತಿರುವುದು ಇದೇ.

## ೩೩. ಸರ್ ಜೆ. ಸಿ. ಬೋಸ್ ಮತ್ತು ಏಕತೆಯನ್ನು ಕುರಿತಂತೆ ವೈಜ್ಞಾನಿಕ ದರ್ಶನ

ಎಲ್ಲ ಸೃಷ್ಟಿಯೂ ಆಧ್ಯಾತ್ಮಿಕ ಏಕತೆಯುಳ್ಳದ್ದು ಎಂಬ ಭಾರತೀಯ ದರ್ಶನವು ಯುದ್ಧೋತ್ತರ ಪಶ್ಚಿಮದಲ್ಲಿ ಹೆಚ್ಚು ಹೆಚ್ಚು ಜನ ವಿಚಾರಶೀಲರಿಂದಲೂ ವಿಜ್ಞಾನಿಗಳಿಂದಲೂ ಉತ್ತರ ರೂಪವಾದ ಪ್ರತಿಧ್ವನಿಗಳನ್ನು ಪಡೆಯುತ್ತಿದೆ. ಆರ್ಥಿಕ ಸಮೃದ್ಧಿಯನ್ನು ಕುರಿತು, ಒಟ್ಟು ರಾಷ್ಟ್ರೀಯ ಉತ್ಪನ್ನವೆಂಬ

(GNP) ಆರ್ಥಿಕ ಅಭಿವೃದ್ಧಿಯ ಮಿಥ್ಯಾಕಲ್ಪನೆಯನ್ನು ಕುರಿತು, ಕಡಿವಾಣವಿಲ್ಲದ ಜೈವಿಕ ತೃಪ್ತಿಗಳ ಬೆನ್ನೇರಿರುವುದು, ಪ್ರಕೃತಿಯ ವಿನಾಶ—ಇವುಗಳನ್ನು ಕುರಿತು ಟೀಕೆಗಳು ಪ್ರಮಾಣ, ತೀವ್ರತೆಗಳಲ್ಲಿ ಹೆಚ್ಚುತ್ತಲೇ ಇವೆ. ಭಾರತೀಯ ದೃಷ್ಟಿಯನ್ನು ಎತ್ತಿ ಹಿಡಿದು, ಉಪನಿಷತ್ತಿನ ಭಾಗಗಳನ್ನು ಬರೆದಿರುವ ಪುಸ್ತಕಗಳು ಪಶ್ಚಿಮದಲ್ಲಿ ಹೆಚ್ಚು ಹೆಚ್ಚಾಗಿ ಹೊರಬರುತ್ತಿವೆ. ಅಂಥವಲ್ಲಿ ಒಂದು Peter Tompkins ಮತ್ತು Christopher Bird ಸೇರಿ ಬರೆದಿರುವ The Secret Life of Plants. ಅದರ ಉಪಶೀರ್ಷಿಕೆ ಹೀಗಿದೆ: ಸಸ್ಯಗಳು ಮತ್ತು ಮಾನವನ ನಡುವೆ ಇರುವ ಭೌತಿಕ, ಭಾವುಕ ಮತ್ತು ಆಧ್ಯಾತ್ಮಿಕ ಸಂಬಂಧಗಳ ದಿಗ್ಭ್ರಮೆಗೊಳಿಸುವ ಆವಿಷ್ಕಾರಗಳು. ಅಮೆರಿಕ ಸಂಯುಕ್ತ ಸಂಸ್ಥಾನಗಳು, ಸೋವಿಯಟ್ ರಷ್ಯ ಮತ್ತಿತರ ದೇಶಗಳಲ್ಲಿ ಈ ವಿಷಯದಲ್ಲಿ ನಡೆಸಿದ ಸಂಶೋಧನೆ ಗಳ ಆಕರ್ಷಕ ನಿರೂಪಣೆ ಅದರಲ್ಲಿದೆ. ತಮ್ಮ ಪೀಠಿಕಾ ಭಾಗದ ಉಪಸಂಹಾರದಲ್ಲಿ ಲೇಖಕರು ಹೀಗೆ ಹೇಳಿದ್ದಾರೆ :

*ಸಸ್ಯಗಳು ಜೀವಂತವಾಗಿರುವ, ಉಸಿರಾಡುತ್ತಿರುವ ಸಂವಹನಶೀಲವಾದ ಜೀವಿಗಳು. ಅವಕ್ಕೆ ವ್ಯಕ್ತಿತ್ವವುಂಟು, ಆತ್ಮದ ಲಕ್ಷಣಗಳುಂಟು, ಎಂಬ ಕವಿಗಳ, ದಾರ್ಶನಿಕರ ದರ್ಶನಕ್ಕೆ ಈಗ ಸಾಕ್ಷಿ ದೊರೆತಿದೆ. ಅವುಗಳ ಕ್ರಿಯೆ ಯಾಂತ್ರಿಕ ಎಂದು ಒತ್ತಾಯಪೂರ್ವಕವಾಗಿ ಹೇಳುತ್ತಿದ್ದವರು ನಾವು, ನಮ್ಮ ಕುರುಡುತನದಿಂದ.*

ಭಾರತೀಯರಾದ ನಮಗೆ ವಿಶೇಷ ಆಸಕ್ತಿ ಕೆರಳಿಸುವುದು ಅದರ ೭ನೆಯ ಅಧ್ಯಾಯ. ಅದರ ಶೀರ್ಷಿಕೆ 'ಕೋಟ್ಯಂತರ ಪಾಲು ದೊಡ್ಡದು ಮಾಡಲ್ಪಟ್ಟ ಸಸ್ಯಜೀವನ'. ಎಂಟರಿಂದ ಐದು ದಶಕಗಳ ಹಿಂದೆ ದಿವಂಗತ ಸರ್ ಜಗದೀಶ ಚಂದ್ರ ಬೋಸ್‌ರವರು ಈ ಅತಿಮುಖ್ಯ ಕ್ಷೇತ್ರದಲ್ಲಿ ಮಾರ್ಗದರ್ಶಕ ಸಂಶೋಧನೆ ನಡೆಸಿದರಷ್ಟೆ. ಅದರ ಸ್ಪಷ್ಟ, ಹೃದಯಸ್ಪರ್ಶಿನಿರೂಪಣೆ ಈ ಅಧ್ಯಾಯದಲ್ಲಿದೆ. ಮೊದಲನೆಯ ವಾಕ್ಯವೃಂದದಲ್ಲಿ ಲೇಖಕರು ಕಲ್ಕತ್ತದಲ್ಲಿರುವ ಬೋಸ್ ಇನ್ಸ್ಟಿಟ್ಯೂಟ್‌ನ "ಭಾರತೀಯ ವಿಜ್ಞಾನ" ದೇವಾಲಯವನ್ನು ಕುರಿತು ಬರೆದಿದ್ದಾರೆ. ಆ ಸಂಸ್ಥೆಯ ಫಲಕ ಹೀಗೆ ಹೇಳುತ್ತದೆ : ಈ ದೇವಾಲಯವನ್ನು ಭಗವಂತನ ಚರಣಗಳಿಗೆ, "ಭಾರತಕ್ಕೆ ಗೌರವವನ್ನೂ, ಜಗತ್ತಿಗೆ ಆನಂದವನ್ನೂ ತಂದಿರುವುದಕ್ಕಾಗಿ ಅರ್ಪಿಸಲಾಗಿದೆ."

ಬೋಸರು ತಮ್ಮ ವೈಜ್ಞಾನಿಕ ಸಂಶೋಧನೆಯನ್ನು ಆರಂಭಿಸಿದ್ದು ಭೌತಶಾಸ್ತ್ರದ ಕ್ಷೇತ್ರದಲ್ಲಿ, ಇಪ್ಪತ್ತು ಚದುರಡಿಯ ಪ್ರಯೋಗಾಲಯದಲ್ಲಿ. ತಮಗೆ ಬೇಕಾದ ಉಪಕರಣಗಳನ್ನು ತಾವೇ ತಯಾರಿಸಿಕೊಂಡಿದ್ದರು. ನಿಸ್ತಂತು ಅಲೆಗಳ ಅಸ್ತಿತ್ವವನ್ನೂ ಅವುಗಳ ಪ್ರಸಾರವನ್ನೂ ಅವರು ೧೮೯೫ರಲ್ಲಿ ಕಲ್ಕತ್ತೆಯಲ್ಲಿ ಪ್ರದರ್ಶಿಸಿದರು. ಭೌತಶಾಸ್ತ್ರದ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸವು ಅವರನ್ನು, ಅವರಿಗೇ ತಿಳಿಯದಂತೆ, ಸಸ್ಯಶಾಸ್ತ್ರ ಮತ್ತು ಶರೀರ ವಿಜ್ಞಾನಗಳಿಗೆ ಒಯ್ದಿತು. ಅಜೀವವಾದ ಲೋಹಗಳು ಮತ್ತು ಸಜೀವವಾದ ಸಸ್ಯ ಮತ್ತು ಮಾನವರ ನಡುವೆ ಇರುವ ರೇಖೆಯು ಎಷ್ಟು ತೆಳುವಾದದ್ದು ಎಂಬುದನ್ನು 'ತೋರಿಕೆಗೆ ವಿವಿಧವಾಗಿರುವ ಪ್ರಕೃತಿಯು, ಮೂಲಭೂತವಾಗಿ ಏಕ' ಎಂಬುದನ್ನು ಅವರ ಸಂಶೋಧನೆಯು ಅವರಿಗೆ ಮನದಟ್ಟು ಮಾಡಿತು. ೧೯೦೧ರ ಮೇ ೧೦ರಂದು ಅವರು ಲಂಡನ್ನಿನ ರಾಯಲ್ ಇನ್ಸ್ಟಿಟ್ಯೂಟ್‌ನಲ್ಲಿ ಉಪನ್ಯಾಸವನ್ನೂ, ಪ್ರಯೋಗ ಪ್ರದರ್ಶನವನ್ನೂ ನೀಡಿದರು. ಅಲ್ಲಿದ್ದುದು ಮಿಶ್ರಶ್ರೋತೃವರ್ಗ—ಮೆಚ್ಚುವವರು, ಅಪನಂಬಿಕೆಯಿದ್ದ ವರು. ಬೋಸರು ತಮ್ಮ ಉಪನ್ಯಾಸವನ್ನು ಈ ರೀತಿ ಮುಕ್ತಾಯಗೊಳಿಸಿದರು (The Secret Life of Plants pp. 86.87) :

*ಇಂದು ಸಂಜೆ ನಾನು ನಿಮಗೆ ಸಜೀವಿಗಳು ಮತ್ತು ನಿರ್ಜೀವಿಗಳಲ್ಲಿ ಒತ್ತಡ ಮತ್ತು ಶ್ರಮಗಳ ಇತಿಹಾಸದ ಸ್ವ-ಲಿಖಿತ ದಾಖಲೆಗಳನ್ನು ತೋರಿಸಿದ್ದೇನೆ. ಆ ಬರಹಗಳು ಹೇಗೆ*

*ಒಂದನ್ನೊಂದು ಹೋಲುತ್ತಿವೆ! ಅವು ಎಷ್ಟರಮಟ್ಟಿಗೆ ಒಂದನ್ನೊಂದು ಹೋಲುತ್ತಿವೆಯೆಂದರೆ ಒಂದು ಇನ್ನೊಂದರಿಂದ ಬೇರೆ ಎಂಬುದನ್ನು ಹೇಳಲು ಸಾಧ್ಯವಾಗುತ್ತಿಲ್ಲ. ಇಂಥ ಘಟನೆಗಳ ನಡುವೆ ಹೇಗೆ ತಾನೆ ನಾವು ಒಂದು ಸೀಮಾರೇಖೆಯನ್ನು ಎಳೆದು ಇಲ್ಲಿ ಭೌತಿಕವಾದದ್ದು ಮುಗಿಯುತ್ತದೆ, ಇಲ್ಲಿ ಶರೀರಶಾಸ್ತ್ರಕ್ಕೆ ಸಂಬಂಧಪಟ್ಟದ್ದು ಪ್ರಾರಂಭವಾಗುತ್ತದೆ ಎಂದು ಹೇಳಲು ಸಾಧ್ಯವಾಗುತ್ತದೆ ? ಅಂತಹ ಕೇವಲ ಅಡೆತಡೆಗಳು ಎಂಬುದು ಇಲ್ಲ.*

*ಈ ಸ್ವಯಂ ಸೃಷ್ಟಿತ ದಾಖಲೆಗಳ ಮೂಕ ಸಾಕ್ಷಿಗಳು ನನಗೆ ದೊರೆತಾಗ ಎಲ್ಲ ವಸ್ತುಗಳನ್ನೂ ವ್ಯಾಪಿಸಿರುವ ಐಕ್ಯತೆಯ ಒಂದು ಘಟ್ಟ ನನ್ನ ಅರಿವಿಗೆ ಬಂತು. ಎಲ್ಲ ವಸ್ತುಗಳಲ್ಲೂ ಬೆಳಕಿನ ಅಲೆಗಳಲ್ಲಿ ಅಲುಗಾಡುವ ಧೂಳಿನ ಕಣ, ನಮ್ಮ ಭೂಮಿಯ ಮೇಲೆ ತುಂಬಿತುಳುಕುತ್ತಿರುವ ಜೀವ ಮತ್ತು ನಮ್ಮ ಮೇಲೆ ಪ್ರಕಾಶಮಾನವಾಗಿರುವ ಸೂರ್ಯರುಗಳು—ಈ ಎಲ್ಲ ವಸ್ತುಗಳಲ್ಲೂ ವ್ಯಾಪಿಸಿರುವ ಐಕ್ಯತೆಯನ್ನು ಕಂಡಾಗ, ಮೊಟ್ಟಮೊದಲ ಬಾರಿಗೆ ನಾನು ಮೂವತ್ತು ಶತಮಾನಗಳ ಹಿಂದೆ ನನ್ನ ಪೂರ್ವಜರು ಗಂಗೆಯ ದಡಗಳಲ್ಲಿ ಘೋಷಿಸಿದ ಈ ಸಂದೇಶವನ್ನು ಅರ್ಥಮಾಡಿಕೊಂಡೆ: ಈ ವಿಶ್ವದ ಬದಲಾಗುತ್ತಿರುವ ವೈವಿಧ್ಯದ ಹಿಂದೆ ಇರುವ ಆ ಏಕವನ್ನು ಯಾರು ಕಾಣುತ್ತಾರೋ ಅವರಿಗೆ ಮಾತ್ರ ಶಾಶ್ವತವಾದ ಸತ್ಯವು ಸೇರಿದ್ದು—ಬೇರಾರಿಗೂ ಅಲ್ಲ, ಬೇರಾರಿಗೂ ಅಲ್ಲ.*

೧೯೧೯-೨೦ರಲ್ಲಿ ಯೂರೋಪಿಗೆ ಭೇಟಿ ನೀಡಿದ್ದಾಗ ಬೋಸರು ಮಾಡಿದ ಈ ಕ್ರಾಂತಿಕಾರಕ ವೈಜ್ಞಾನಿಕ ಜ್ಞಾನಪ್ರಕಾಶನಕ್ಕೆ ಪಶ್ಚಿಮದ ಪ್ರತಿಕ್ರಿಯೆಯ ಒಂದು ಮಾದರಿಯನ್ನು ಕೊಡುತ್ತಾ 'ಸಾಮಾನ್ಯವಾಗಿ ತನ್ನ ಅಭಿಪ್ರಾಯವನ್ನು ಕಾಯ್ದಿರಿಸಿಕೊಳ್ಳುವ' ಲಂಡನ್ನಿನ ಟೈಮ್ಸ್ ಪತ್ರಿಕೆ ಹೀಗೆ ಬರೆಯಿತು ಎಂಬುದಾಗಿ ಮೇಲೆ ಹೇಳಿದ ಪುಸ್ತಕದ ಲೇಖಕರು ಹೇಳಿದ್ದಾರೆ (ಅಲ್ಲೇ p. 94) ;

*ಇಂಗ್ಲೆಂಡಿನಲ್ಲಿ ನಾವಿನ್ನೂ ಅಸಂಸ್ಕೃತ ಜೀವನದ ಅನುಭವೈಕವಾದದಲ್ಲಿ ತೊಡಗಿಕೊಂಡಿದ್ದಾಗ, ಆ ಸೂಕ್ಷ್ಮ ಪೂರ್ವದೇಶದ ವ್ಯಕ್ತಿಯು ವಿಶ್ವವನ್ನು ಒಂದು ಸಂಶ್ಲೇಷಣೆಗೆ ನೂಕಿದ್ದನು. ಬದಲಾಗುವ ಎಲ್ಲ ಅಭಿವ್ಯಕ್ತಿಗಳಲ್ಲೂ ಆ ಒಂದನ್ನು ಅವನು ಕಂಡಿದ್ದನು.*

ಮೇಲಿನ ಲೇಖಕರು ತಮ್ಮ ಪುಸ್ತಕವನ್ನು ಈ ಮಾತುಗಳಿಂದ ಮುಗಿಸಿದ್ದಾರೆ :

*ದಾರ್ಶನಿಕನ ಇಂದ್ರಿಯಾತೀತ ಜಗತ್ತಿನ, ಅಥವಾ ಜಗತ್ತುಗಳೊಳಗಿನ ಜಗತ್ತುಗಳ ಆಕರ್ಷಣೆ ನಾವು ಬಿಡಲಾರದಷ್ಟು ಮಹತ್ಪ್ರಮಾಣದ್ದು. ಮತ್ತು ಅದಕ್ಕೊಡ್ಡುವ ಪಣ ತೀರ ದುಬಾರಿಯದು. ಏಕೆಂದರೆ ಅದರಲ್ಲಿ ಈ ಗ್ರಹದ ಉಳಿವು ಸೇರಿರಬಹುದು. ಎಲ್ಲಿ ಆಧುನಿಕ ವಿಜ್ಞಾನಿಯು ಸಸ್ಯಗಳಲ್ಲಿ ಜೀವದ ರಹಸ್ಯವನ್ನು ತಿಳಿದು ದಿಗ್ಭ್ರಾಂತನಾಗಿದ್ದಾನೆಯೋ ಅಲ್ಲಿ ದಾರ್ಶನಿಕನು ಪರಿಹಾರಗಳನ್ನು ನೀಡುತ್ತಾನೆ. ನಂಬಿಕೆಗೆ ಅವು ಎಷ್ಟೇ ಅನರ್ಹವಾಗಿದ್ದರೂ ವಿದ್ಯಾಸಂಸ್ಥೆಗಳ ಬೋಧಕರ ಧೂಳುತುಂಬಿದ ವಾಗಾಡಂಬರಕ್ಕಿಂತ ಇವರ ವಾದ ಹೆಚ್ಚು ಅರ್ಥಪೂರ್ಣವಾಗಿದೆ. ಇವರ ಮಾತುಗಳು ಬದುಕಿನ ಸಮಗ್ರತೆಗೆ ತಾತ್ವಿಕ ಅರ್ಥವನ್ನು ನೀಡುತ್ತವೆ.*

## ೩೪. ವಿಜ್ಞಾನ ಮತ್ತು ಧರ್ಮ ಪರಸ್ಪರ ಪೂರಕಗಳು

ತಾಳೆ ನೋಡಿದ ಮತ್ತು ತಾಳೆ ನೋಡಬಹುದಾದ ವಿಜ್ಞಾನವನ್ನಾಗಿ ಧರ್ಮವನ್ನು ವ್ಯಾಖ್ಯಾನ ಮಾಡಿದಾಗ ಅದರಲ್ಲಿ ಇಡೀ ಮಾನವತೆಗೆ ಒಂದು ಸಂದೇಶವಿರುವುದು ಗೊತ್ತಾಗುತ್ತದೆ. ಭೌತ ವಿಜ್ಞಾನವು ಮಾನವನಿಗೆ ತನ್ನ ತಂತ್ರಜ್ಞಾನದಿಂದ ಸೊಗಸಾದ ಮನೆಯನ್ನು ಕಟ್ಟಿಕೊಡಬಹುದು.

ಅದರಲ್ಲಿ ರೇಡಿಯೋ, ಟೆಲಿವಿಷನ್ ಮುಂತಾದ ಸಾಧನಗಳನ್ನು ಅಳವಡಿಸಬಹುದು ; ಆಧುನಿಕ ಕ್ಷೇಮಪಾಲಕ ಸರ್ಕಾರವು ಈ ಜಗತ್ತಿನಲ್ಲಿ ಸುಖ ಜೀವನವನ್ನು ನಡೆಸಲು ಬೇಕಾದ ಪ್ರತಿಯೊಂದನ್ನೂ ಅವನಿಗೆ ತನ್ನ ಸಾಮಾಜಿಕ ಭದ್ರತೆಯ ಯೋಜನೆಯನ್ವಯ ನೀಡಬಹುದು. ಸರ್ಕಾರದ ಚರ್ಚಿನ ಮೂಲಕ ಈ ಜಗತ್ತಿನಾಚೆಯ ಜಗತ್ತಿನ ಸುಖವನ್ನು ಒದಗಿಸುವ ಭರವಸೆಯನ್ನು ನೀಡಬಹುದು. ವ್ಯಕ್ತಿಯೇ ತನ್ನ ಮನೆಗೆ 'ಶಾಂತಿ ಕುಂಜ್' ಅಥವಾ 'ಸುಖ ನಿವಾಸ್' ಎಂಬ ಕಣ್ಣನ್ನು ಸೆರೆಹಿಡಿಯುವ ಹೆಸರನ್ನು ಕೊಡಬಹುದು. ಆದರೆ ಇವಾವುವೂ ಅವನು ತನ್ನ ಮನೆಯಲ್ಲಿ ಶಾಂತಿಯಿಂದ ಅಥವಾ ಸುಖವಾಗಿ ಬದುಕುವ ಭರವಸೆಯನ್ನು ನೀಡಲಾರವು. ಏಕೆಂದರೆ ಹಾಗೆ ಬದುಕಬೇಕಾದರೆ ಅದಕ್ಕೆ ಬೇರೊಂದೇ ಮೂಲದಿಂದ, ಬಹುಪಾಲು ಶಕ್ತಿ, ಪೋಷಣೆಗಳು ದೊರಕಬೇಕಾಗುತ್ತದೆ. ಬೇರೊಂದೇ ವಿಧವಾದ ಜ್ಞಾನ, ಶಿಸ್ತುಗಳು ಬೇಕಾಗತ್ತವೆ. ಆ ಜ್ಞಾನ ಶಿಸ್ತುಗಳು ಮೂಲ ಧರ್ಮದ ವಿಜ್ಞಾನ ಮತ್ತು ತಂತ್ರ. ವ್ಯಕ್ತಿಯು ವಸ್ತುವಿಜ್ಞಾನದಿಂದ ನೆರವು ಪಡೆದು ಹೊರಗಿನ ಆರೋಗ್ಯಕರ ಪರಿಸರ ವನ್ನೂ, ಅಧ್ಯಾತ್ಮ ವಿಜ್ಞಾನದಿಂದ ಒಳಗಿನ ಪರಿಸರವನ್ನೂ ನಿರ್ಮಿಸಿಕೊಳ್ಳಬಲ್ಲನಾದರೆ ಆಗಲೀಗ ಸಂಪೂರ್ಣವಾದ ಜೀವನ ಸಾಫಲ್ಯವನ್ನು ಪಡೆಯಬಲ್ಲನೇ ಹೊರತು, ಇಲ್ಲದಿದ್ದರೆ, ಇಲ್ಲ, ಇದೇ ಉಪನಿಷತ್ತುಗಳ ವಿಧಾಯಕ ವಾಕ್ಯ.

ಆದರೆ, ಇಂದು, ಆಧುನಿಕ ನಾಗರಿಕತೆ ನೀಡುತ್ತಿರುವ ಚಿತ್ರ ಇದಲ್ಲ. ಮಾನವನು ಈ ತಾಂತ್ರಿಕ ನಾಗರಿಕತೆಯಲ್ಲಿ ಸಂಪತ್ತು, ಅಧಿಕಾರ, ಸುಖ ಇವುಗಳ ಪರಿಸರದಲ್ಲಿ ಒಳಗೆ ದಾರಿದ್ರ್ಯವನ್ನೂ ಶೂನ್ಯ ವನ್ನೂ ಅನುಭವಿಸುತ್ತಿದ್ದಾನೆ. ಸದಾ ಅವನಿಗೆ ಮಾನಸಿಕ ಘರ್ಷಣೆ, ದುಃಖ, ಸಂದೇಹ, ಅನಿಶ್ಚಯತೆ ಇವು ತುಂಬಿಕೊಂಡಿವೆ. ಬಾಲಾಪರಾಧಗಳು, ಕುಡಿತ, ಆತ್ಮಹತ್ಯೆ, ಸದಾ ಹೆಚ್ಚುತ್ತಲೇ ಇರುವ ಇತರ ವ್ಯಾಧಿಗಳು, ವೈಯಕ್ತಿಕ ಹಾಗೂ ಸಾಮಾಜಿಕ ವಿಕಾರಗಳು ಅವನನ್ನು ಕಾಡುತ್ತಲೇ ಇವೆ. ಏಕೆ ? ಅವನು ಅಂತರಂಗದಲ್ಲಿ ತೃಪ್ತಿಯಿಂದಿಲ್ಲ. ಅವನನ್ನು ಜುಗುಪ್ಸೆ ಬೇಸರ ಇವು ಕಾಡು ತ್ತಿವೆ. ಅವುಗಳ ಮೂಲ ಅವನ ಇಂದ್ರಿಯಬದ್ಧ ಜಗತ್ತಿನ ದೃಷ್ಟಿಯ ಇತಿಮಿತಿಗಳು. ಭಾರತೀಯ ಚಿಂತಕರು ಮಾನವನ ಅವಸ್ಥೆಯನ್ನು ಅನೇಕ ಶತಮಾನಗಳ ಹಿಂದೆಯೇ ಮುಂದಾಗಿ ಕಂಡಿದ್ದರು. ಈ ಆಧುನಿಕ ಗಗನಯುಗದ ವಿಷಯವಾಗಿ ಪ್ರಾಚೀನ ಶ್ವೇತಾಶ್ವತರ ಉಪನಿಷತ್ತು ಹೇಳುತ್ತದೆ (VI. 20) :

ಯದಾ ಚರ್ಮವದಾಕಾಶಂ
ವೇಷ್ಟಯಿಶ್ಯಂತಿ ಮಾನವಾಃ ;
ತದಾ ದೇವಮವಿಜ್ಞಾಯ
ದುಃಖಸ್ಯಾನ್ತೋ ಭವಿಷ್ಯತಿ—

*ಮಾನವರು (ಅವರ ತಾಂತ್ರಿಕ ಚಾತುರ್ಯದಿಂದ) ಆಕಾಶವನ್ನು ಒಂದು ಚೂರು ಚರ್ಮದಂತೆ ಸುತ್ತಬಲ್ಲವರಾದರೂ ಅಂತರಂಗದ ಪ್ರಕಾಶಮಾನವಾದ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳದೆ ಅವರ ದುಃಖವು ಅಂತ್ಯವನ್ನು ಕಾಣುವುದಿಲ್ಲ.*

ಒಂದು ನೂರು ವರ್ಷಗಳ ಹಿಂದೆ ಷೋಪೆನ್‌ಹೋರ್ ಹೇಳಿದ (The World as Will and Idea, Vol I. p. 404)

*ಚಿಂತೆ, ಬಯಕೆಗಳಿಂದ ಪಾರಾಗಿ ಎಲ್ಲ ಭಾರಗಳನ್ನೂ ಕೊನೆಗೂ ಕಳೆದುಕೊಂಡವರು ತಮಗೆ ತಾವೇ ಭಾರವಾಗುತ್ತಿದ್ದಾರೆ.*

## ೩೫. ಧರ್ಮ ಮತ್ತು ಸಾಕ್ಷಾತ್ಕಾರ

ಇಂದು ಮಾನವನು ತನಗೆ ತಾನೇ ಪ್ರಧಾನ ಭಾರವೂ ಸಮಸ್ಯೆಯೂ ಆಗಿದ್ದಾನೆ. ಅವನು ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು ಹೆಚ್ಚು ಪ್ರತ್ಯಕ್ಷಪ್ರಮಾಣವಾದದ ವಿಜ್ಞಾನದಿಂದಲ್ಲ. ಹೆಚ್ಚಿನ ತಂತ್ರಜ್ಞಾನದಿಂದಲ್ಲ. ಹೆಚ್ಚು ಜೀವನ ಸೌಲಭ್ಯಗಳನ್ನು ಪಡೆಯುವುದರಿಂದಲ್ಲ. ಮಾನವ ಸ್ಥಿತಿಗತಿಗಳನ್ನು ಸಾಮಾಜಿಕ-ರಾಜಕೀಯ ಇಲ್ಲವೇ ಅಣುಜೀವವಿಜ್ಞಾನದ ತಂತ್ರಗಳಿಂದ ಬದಲಾಯಿಸುವುದರಿಂದಲ್ಲ. ಧರ್ಮವಿಜ್ಞಾನವನ್ನು ಬೆಳಸಿಕೊಳ್ಳುವುದರಿಂದ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ (C.W. Vol IV eigth edition, p.35) :

> *ಧರ್ಮ ಎಂಬುದು ಬರಿಯ ಮಾತಲ್ಲ, ಸಿದ್ಧಾಂತಗಳಲ್ಲ, ಪುಸ್ತಕಗಳಲ್ಲ, ಆದರೆ ಅದು ಸಾಕ್ಷಾತ್ಕಾರ; ಅದು ಅರಿವಲ್ಲ, ಇರವು.*

ಭಾರತವು ಧರ್ಮವನ್ನು ಅರಿತದ್ದು ಈ ಅರ್ಥದಲ್ಲಿ. ಸ್ವಾಮಿ ವಿವೇಕಾನಂದರು ಪೂರ್ವ ಪಶ್ಚಿಮಗಳಲ್ಲಿ, ತಮ್ಮ ಶಕ್ತಿಪೂರ್ಣ ವಾಣಿಯಿಂದ ವ್ಯಾಖ್ಯಾನಿಸಿದ್ದು ಈ ಧರ್ಮವನ್ನು. ನಮ್ಮ ಪ್ರಾಚೀನ ಆಚಾರ್ಯರು ಹೇಳಿದಂತೆ ಧರ್ಮದ ಗುರಿ ಮಾನವನು ಆಧ್ಯಾತ್ಮಿಕ ಅರಿವನ್ನು ಬೆಳೆಸಿಕೊಂಡು ಭಗವಂತನನ್ನು ಅನುಭವವನ್ನಾಗಿ ಮಾಡಿಕೊಳ್ಳುವುದು.ವ್ಯಕ್ತಿಯು ಹಂತ ಹಂತವಾಗಿ ಆಧ್ಯಾತ್ಮಿಕವಾಗಿ ಬೆಳೆಯುವುದು ಎಂಬುದೊಂದಿದೆ. ಒಂದು ಕಟ್ಟಡವು ಇಟ್ಟಿಗೆ ಇಟ್ಟಿಗೆಯಾಗಿ ಹಂತ ಹಂತವಾಗಿ ಮೇಲೇಳುವುದನ್ನು, ಒಂದು ಗಿಡ ಬೆಳೆಯುವುದನ್ನು ನಾವು ನೋಡುವಂತೆ ಆಧ್ಯಾತ್ಮಿಕ ಬೆಳವಣಿಗೆಯನ್ನು ನಾವು ಅನುಭವಕ್ಕೆ ತಂದುಕೊಳ್ಳುತ್ತೇವೆ. ನಾವು ಧರ್ಮದ ಬದುಕಿನಲ್ಲಿ ಬಾಳಿದರೆ ನಮಗೆ ಶಕ್ತಿ ಬರುತ್ತದೆ, ನಮ್ಮ ಪ್ರಜ್ಞೆ ವಿಸ್ತರಿಸುತ್ತದೆ, ಸಹಾನುಭೂತಿಗಳು ಬೆಳೆಯುತ್ತವೆ, ವಿಶಾಲವಾಗುತ್ತವೆ, ನಾವು ಉತ್ತಮತರ ಸ್ತ್ರೀಪುರುಷರಾಗಿ ಬೆಳೆಯುತ್ತಿದ್ದೇವೆ ಎಂಬುದು ನಮ್ಮ ಅನುಭವಕ್ಕೆ ಬರುತ್ತದೆ. ಅಂತಹ ಅಂತರಂಗದ ಆಧ್ಯಾತ್ಮಿಕ ಬೆಳವಣಿಗೆಯಿಂದ ಮಾತ್ರವೇ ಮಾನವನು ವೈಜ್ಞಾನಿಕ ತಂತ್ರಜ್ಞಾನದ ಪ್ರಗತಿಯಿಂದ ಬಿಡುಗಡೆಯಾದ ಶಕ್ತಿಗಳನ್ನು ಅರಗಿಸಿಕೊಂಡು ಅವನ್ನು ಹತೋಟಿಗೆ ತರಲು ಸಾಧ್ಯ. ಅಂತಹ ವ್ಯಕ್ತಿಯು ಮಾತ್ರವೇ ಬದುಕಿನ ಅವ್ಯವಸ್ಥೆಯನ್ನು ಸುಖಶಾಂತಿಗಳ ಮತ್ತು ಸರ್ವರ ಹಿತದ ವಿನ್ಯಾಸವನ್ನಾಗಿ ಪರಿವರ್ತಿಸಲು ಸಾಧ್ಯ. ಮಾನವ ಸಮಾಜದಿಂದ ಧರ್ಮವನ್ನು ತೆಗೆದುಹಾಕಿದ್ದಾದರೆ ಉಳಿಯುವುದು ಬರಿಯ ಬರ್ಬರತೆ. ಪ್ರಾಚೀನ ನಾಗರಿಕತೆಗಳು ನಾಶಹೊಂದಿದ್ದು ಆ ನಾಗರಿಕತೆಗಳಿಂದ ಹೊರಗಿದ್ದವರಿಂದ. ಆಧುನಿಕ ನಾಗರಿಕತೆಯು, ಈಗಿರುವಂತೆಯೇ ಮುಂದುವರಿದರೆ, ಈ ನಾಗರಿಕತೆಯ ಒಳಗಿರುವ ಬರ್ಬರರಿಂದಲೇ ನಾಶ ಹೊಂದುತ್ತದೆ. ಈ ಅವಸ್ಥೆಯಿಂದ ನಮ್ಮನ್ನು ಯಾವುದು ಕಾಪಾಡಬಲ್ಲುದೆಂದರೆ, ಬರ್ಟ್ರೆಂಡ್ ರಸೆಲ್ (Impact of Science on Society p. 114) ಅವರ ಮಾತುಗಳಲ್ಲಿ ಹೇಳುವುದಾದರೆ ನಮ್ಮ ನೆರೆಯವರ ವಿಷಯದಲ್ಲಿ ಸ್ವಲ್ಪ 'ಕ್ರೈಸ್ತ ಪ್ರೇಮ' ಮತ್ತು ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರಿತಿರಿಂ ಎಸ್ ಸೂರೊಕಿನ್ (Reconstruction of Humanity, especially Part V) ಅವರ ಮಾತುಗಳಲ್ಲಿ 'ಇನ್ನೂ ಸ್ವಲ್ಪ ಹೆಚ್ಚು ಪರಹಿತ ಚಿಂತನೆ.' ಜಗತ್ತಿನ ವಿಶ್ವಾಸಾರ್ಹ ಆಧ್ಯಾತ್ಮಿಕ ಆಚಾರ್ಯರು ಹೇಳಿರುವಂತೆ ಈ ಪ್ರೀತಿಯು ಬರುವುದು ಧರ್ಮದ ಅನುಷ್ಠಾನದಿಂದ. ಧರ್ಮಕ್ಕೆ ವೈಜ್ಞಾನಿಕ ಲಕ್ಷಣ ನಿರೂಪಣೆ ಮಾಡುತ್ತಾ ಸ್ವಾಮಿ ವಿವೇಕಾನಂದರು ಹೇಳುತ್ತಾರೆ (C.W. Vol. IV. eighth edition p. 358) :

> *ಧರ್ಮ ಎಂಬುದು ಈಗಾಗಲೇ ಮಾನವನಲ್ಲಿರುವ ದಿವ್ಯತೆಯ ಅಭಿವ್ಯಕ್ತಿ.*

ಈಗ ಉದ್ಭವ ವಾಗುವ ಪ್ರಶ್ನೆ ಎಂದರೆ—ಸ್ವಾಮಿ ವಿವೇಕಾನಂದರೆ ಈ ಪ್ರಶ್ನೆಯನ್ನು ಕೇಳಿ, ಧರ್ಮವು ಏನನ್ನಾದರೂ ಸಾಧಿಸಬಲ್ಲುದೆ ?—ಅವರೇ ಉತ್ತರಿಸಿದ್ದಾರೆ (ibid Vol III, eighth edition 94) :

*ಹೌದು, ಅದು ಸಾಧಿಸಬಲ್ಲುದು. ಮಾನವನಿಗೆ ಅದು ಶಾಶ್ವತ ಜೀವನವನ್ನು ತಂದುಕೊಡಬಲ್ಲದು. ಮಾನವನು ಈಗ ಏನಾಗಿದ್ದಾನೆಯೋ ಅದನ್ನು ಮಾಡಿದ್ದು ಧರ್ಮವೇ. ಅದೇ ಧರ್ಮವೇ ಈ ಮಾನವ ಪ್ರಾಣಿಯನ್ನು ದೇವರನ್ನಾಗಿ ಮಾಡುತ್ತದೆ. ಅದು ಧರ್ಮದ ಸಾಧ್ಯತೆ. ಮಾನವ ಸಮಾಜದಿಂದ ಧರ್ಮವನ್ನು ಹೊರಗೆ ಹಾಕಿ, ಉಳಿಯುವುದೇನು? ಕ್ರೂರ ಮಾನವರ ಅರಣ್ಯದ ಹೊರತು ಬೇರೇನೂ ಇಲ್ಲ. ಇಂದ್ರಿಯ ಸುಖ ಮಾನವತೆಯ ಗುರಿ ಅಲ್ಲ. ಎಲ್ಲ ಜೀವನದ ಗುರಿಯೂ ವಿವೇಕ, ಜ್ಞಾನ. ಪ್ರಾಣಿಗಳು ಇಂದ್ರಿಯಗಳಿಂದ ಪಡೆಯುವುದಕ್ಕಿಂತ ಹೆಚ್ಚಿನ ಸುಖವನ್ನು ಮಾನವನು ಬುದ್ಧಿಯಿಂದ ಪಡೆಯುತ್ತಾನೆ. ಅಲ್ಲದ ಮಾನವನು ತನ್ನ ಬುದ್ಧಿಯಿಂದ ಪಡೆಯುವುದಕ್ಕಿಂತ ಹೆಚ್ಚಿನ ಸುಖವನ್ನು ತನ್ನ ಆಧ್ಯಾತ್ಮಿಕ ಪ್ರಕೃತಿಯಿಂದ ಪಡೆಯುತ್ತಾನೆ ಎಂಬುದನ್ನು ನೋಡಿದ್ದೇವೆ. ಆದ್ದರಿಂದ ಅತ್ಯುನ್ನತ ವಿವೇಕ ಎಂದರೆ ಈ ಅಧ್ಯಾತ್ಮ ಜ್ಞಾನವೇ ಇರಬೇಕು. ಈ ಜ್ಞಾನದೊಂದಿಗೆ ಆನಂದವೂ ಬರುತ್ತದೆ.*

## ೩೭. ವಿಕಾಸದಲ್ಲಿ ಹೋಮಿಯಸ್ಟ್ಯಾಸಿಸ್‌ನ ಪ್ರಾಮುಖ್ಯ

ಪ್ರಕೃತಿಯು ಮಾನವನಿಗೆ ಜಗತ್ತನ್ನೂ ತನ್ನನ್ನೂ ಅರ್ಥಮಾಡಿಕೊಳ್ಳುವ ಶಕ್ತಿಯನ್ನು ನೀಡಿದೆ. ಉನ್ನತತರ ಸಸ್ತನಿಗಳಿಂದ ಹಿಡಿದು ಮಾನವನ ವರೆಗೆ ಪ್ರಕೃತಿಯು ಒಂದು ಒಳರಚಿತ (built-in) ಸಮತೋಲನವನ್ನು, ಮೊದಲಿಗೆ ಸಮಸ್ಥಿತಿಯನ್ನೂ (Thermostatic) ಅನಂತರ ಸಮತೋಲನವನ್ನೂ (ಹೋಮಿಯಸ್ಟ್ಯಾಸಿಸ್) ಜೀವಿಯ ಒಳಗೇ ರಚಿಸಿರುತ್ತದೆ ಎಂಬುದನ್ನೂ ಪ್ರಕೃತಿಯು ಇದನ್ನು ಬೆಳೆಸುತ್ತಾ ಪರಿಪೂರ್ಣಗೊಳಿಸಲು ಪ್ರಯತ್ನಿಸುತ್ತಲೇ ಬಂದಿದೆ ಎಂದು ಜೀವಶಾಸ್ತ್ರ ಹೇಳುತ್ತದೆ ಎಂಬುದನ್ನೂ ಈ ಹಿಂದೆಯೇ ಸೂಚಿಸಿದೆ. ಈ ಯಂತ್ರವಿನ್ಯಾಸದ ವಿಕಾಸದ ಪ್ರಾಮುಖ್ಯ ಏನು ಎಂಬುದನ್ನು ನರಶಾಸ್ತ್ರಜ್ಞ ಗ್ರೇ ವಾಲ್ಟರ್ ಹೀಗೆ ವಿವರಿಸಿದ್ದಾನೆ (The Living Brain p.16) :

*ಅಂತರಂಗದ ಉಷ್ಣದ ನಿಯಂತ್ರಣ ಶಕ್ತಿಯನ್ನು ಸಾಧಿಸಿದ್ದು ನರಗಳ, ಅಷ್ಟೇಕೆ ಇಡೀ ನಿಸರ್ಗದ ಇತಿಹಾಸದಲ್ಲೇ ಪರಮ ಪ್ರಮುಖವಾದ ಘಟನೆ. ತಣ್ಣಗಾಗುತ್ತಾ ಹೋದ ಭೂಮಂಡಲದ ಮೇಲೆ ಸಸ್ತನಿಗಳು ಉಳಿಯುವುದು ಸಾಧ್ಯವಾದದ್ದು ಅದರಿಂದಲೇ. ವಿಕಾಸದಲ್ಲಿ ಅದರ ಸಾಮಾನ್ಯ ಪ್ರಾಮುಖ್ಯ ಅದರಿಂದಲೇ. ಅದರ ವಿಶಿಷ್ಟ ಪ್ರಾಮುಖ್ಯವೆಂದರೆ ಮಿದುಳಿನ ಒಂದು ಭಾಗದಲ್ಲಿ ದೇಹದ ಮುಖ್ಯ ಕ್ರಿಯೆಗಳನ್ನು ತಾನೇ ಸುಭದ್ರಗೊಳಿಸಿದ್ದು. ಆ ಸ್ಥಿತಿಯನ್ನು ಸಮಾವರೋಧ (Homoestatis) ಎಂದು ಕರೆಯುತ್ತಾರೆ. ಈ ವ್ಯವಸ್ಥೆಯಿಂದಾಗಿ ಮಿದುಳಿನ ಇತರ ಭಾಗಗಳು ಪ್ರಾಣಮಯ ಯಂತ್ರ ಅಥವಾ ಇಂದ್ರಿಯಗಳಿಗೆ ಸಂಬಂಧಿಸಿದ ಪ್ರಸ್ತುತ ಚಟುವಟಿಕೆಗಳಿಂದ ಮುಕ್ತವಾಗಿ ಸಮಾವರೋಧದ ಆಶ್ಚರ್ಯಗಳನ್ನೇ ಮೀರಿಸುವ ಚಟುವಟಿಕೆಗಳಲ್ಲಿ ತೊಡಗಲು ಬಿಡುವು ದೊರೆಯಿತು.'*

ಫ್ರೆಂಚ್ ದೇಹಶಾಸ್ತ್ರಜ್ಞ ಕ್ಲಾಡ್ ಬರ್ನಾರ್ಡ್ ಈ ವಿಷಯವನ್ನು ತನ್ನ ಒಂದು ಪ್ರಖ್ಯಾತವಾದ ಹೇಳಿಕೆಯಲ್ಲಿ ಹೀಗೆ ಸಂಗ್ರಹಿಸಿದ್ದಾನೆ: 'ಸ್ವತಂತ್ರವಾದ ಬದುಕಿಗೆ ಆವಶ್ಯಕವಾದದ್ದೆಂದರೆ ಸ್ಥಿರವಾದ ಆಂತರಿಕ ವ್ಯವಸ್ಥೆ.' ಅದನ್ನು ಉದ್ಧರಿಸಿ ಹೇಳಿ ಗ್ರೇ ವಾಲ್ಟರ್ ಮುಂದುವರಿಯುತ್ತಾನೆ (ibid. pp. 16-17) :

*ಕೇಂಬ್ರಿಜ್ಜಿನಲ್ಲಿ ಸರ್ ಜೋಸೆಫ್ ಬಾರ್‌ಕ್ರಾಫ್ಟ್ ಅವರ ಸನ್ನಿಧಿಯಲ್ಲಿ ಅಧ್ಯಯನ ಮಾಡುವ ಅವಕಾಶ ದೊರೆತವರು ಅವರಿಗೆ ಬಹುಮಟ್ಟಿಗೆ ಋಣಿಯಾಗಿದ್ದಾರೆ. ಏಕೆಂದರೆ ಮೇಲೆ ಹೇಳಿದ*

ಸೂತ್ರವನ್ನು ವಿವರಿಸಿ ಶರೀರವಿಜ್ಞಾನದ ಸಂಶೋಧನೆಯಲ್ಲಿ ಅದನ್ನು ಅನ್ವಯಗೊಳಿಸುವ ವಿಷಯದಲ್ಲಿ ಅವರಿಗಿದ್ದ ಕೌಶಲ ಅಂಥದು. ಹಾಗಿಲ್ಲದಿದ್ದರೆ ಬಹುಶಃ ನಾವು ಅವರನ್ನು ಅಪಹಾಸ್ಯ ಮಾಡುತ್ತಿದ್ದೆವು. ಕಾರಣ 'ಮುಕ್ತಜೀವನ' ಎಂಬುದು ವೈಜ್ಞಾನಿಕ ಉಕ್ತಿಯಲ್ಲ. ಆ ಉಕ್ತಿಯನ್ನು ಅವರು ಸರಳವಾದ ಪ್ರಶ್ನೆಗಳಾಗಿ ಪರಿವರ್ತಿಸಿ ಉತ್ತರಗಳ ಕಡೆಗೆ ನಮ್ಮನ್ನು ಕರೆದೊಯ್ದಿದ್ದಾರೆ.

ಉಷ್ಣತೆ, ಹೈಡ್ರೋಜನ್ ಅಯಾನಿನ ಸಾರತೆ (ಆಮ್ಲೀಯತೆ) ಹಾಗೂ ನೀರು, ಸಕ್ಕರೆ, ಆಮ್ಲಜನಕ, ಕ್ಯಾಲ್ಸಿಯಂ, ಮುಂತಾದುವುಗಳ ಪ್ರಮಾಣಗಳ ಸ್ಥಿರತೆಯಿಂದ ಜೀವಿಯು ಸಾಧಿಸಿರುವುದಾದರೂ ಏನನ್ನು ?' ಪರಿಮಾಣಾತ್ಮಕವಾಗಿ ನಿರೂಪಿಸುವ ಶಕ್ತಿಯು ಅವರಿಗೆ ಒಂದು ವರವಾಗಿದ್ದುದರಿಂದ ಸೊಗಸಾಗಿ ಸಮತುಲಿತವಾಗಿರುವ ವಿವಿಧ ಪ್ರತ್ಯಾದಾನ ಕ್ರಿಯೆಗಳ ಸಂಕೀರ್ಣತೆಯನ್ನು ಎತ್ತಿ ತೋರಿಸುವುದು ಅವರಿಗೆ ಲೀಲಾಜಾಲವಾದ ವಿಷಯವಾಗಿತ್ತು. ಆದರೂ, ಸಮಾವರೋಧ ಮತ್ತು ಅದರ ವಿಶಿಷ್ಟ ಅನುಕೂಲತೆಯನ್ನು ಹೀಗೆ ಪ್ರದರ್ಶಿಸುವಾಗ ಎಲ್ಲಿ ನಾವು ಅದನ್ನು ಅವರ ಕಲ್ಪನಾವಿಲಾಸ ಎಂದು ಹಾಸ್ಯಮಾಡುತ್ತೇವೋ ಎಂದು ಅವರು ಒಂದು ರೀತಿಯ ಅಳುಕಿನಿಂದ ಭೀತರಾದ ಬಗೆ ನನಗಿನ್ನೂ ನೆನಪಿದೆ.

ಸಾಗುತ್ತಿರುವ ದೋಣಿಯೊಂದು ಶಾಂತವಾದ ಸರೋವರದಲ್ಲಿ ಕಿರುದೆರೆಗಳು ಏಳುವಂತೆ ಮಾಡುವುದನ್ನು ಎಷ್ಟು ಸಲ ಗಮನವಿಟ್ಟು ನೋಡಿದ್ದೇವೆ. ಅವುಗಳ ಕ್ರಮಬದ್ಧತೆಯನ್ನು ಗಮನಿಸಿದ್ದೇವೆ. ಅಂಥ ಎರಡು ತೆರೆಗಳ ಸಮೂಹಗಳು ಸಂಧಿಸಿದಾಗ ಅವು ಉಂಟುಮಾಡುವ ರಚನೆಗಳನ್ನು ಎಷ್ಟು ಸಲ ಮೆಚ್ಚಿದ್ದೇವೆ... ಯಾವ ವ್ಯವಸ್ಥೆಯಲ್ಲಿ ಗುಣಲಕ್ಷಣಗಳು ಸ್ಥಿರಗೊಂಡಿಲ್ಲವೋ ಅಲ್ಲಿ ಅತ್ಯುನ್ನತ ಮಟ್ಟದ ಬೌದ್ಧಿಕ ಬೆಳವಣಿಗೆಯನ್ನು ಅರಸುವುದು ಅಲ್ಲೋಲಕಲ್ಲೋಲಮಯವಾದ ಅಟ್ಲಾಂಟಿಕ್ ಸಮುದ್ರದಲ್ಲಿ ತೆರೆಯ ವಿನ್ಯಾಸಗಳನ್ನು ಅರಸುವಂತೆಯೇ.

ಸ್ಥಿರವಾದ ಅಂತರಂಗದ 'ಆವರಣ' ಎನ್ನುವ ಅರ್ಥದಲ್ಲಿ ಸಮಾವರೋಧ ಎನ್ನುವುದು ತನಗೆ ತಾನೇ ಒಂದು ಗುರಿಯಲ್ಲ. ಜೀವವು ವಿಕಾಸದ ಉನ್ನತ, ಇನ್ನೂ ಉನ್ನತತರ ಮಟ್ಟಗಳಿಗೆ ಮುಂದುವರಿಯುವುದಕ್ಕೆ ಬೇಕಾದ ಅತ್ಯಗತ್ಯ ಸ್ಥಿತಿ ಅದು. ಸೇರಬೇಕಾದ ಅತ್ಯುನ್ನತ ಮಟ್ಟ ಎಂದರೆ ಮಾನವ ಚೇತನದ ಪೂರ್ಣ ಸ್ವಾತಂತ್ರ್ಯ. ಹಾಗೆ ತಲುಪಬೇಕಾದರೆ ಈಗ ದೊರೆತಿರುವ ಆತ್ಮದ ಹೊಸ ದತ್ತಾಂಶವನ್ನು ಅದರ ಜೈವಿಕ ಇತಿಮಿತಿಗಳಿಂದ ಬಿಡುಗಡೆಮಾಡಬೇಕು, ಅದರ ನಿಜವಾದ ಸ್ವರೂಪವನ್ನು ಅದು ಅರಿಯುವಂತೆ ಮಾಡಬೇಕು. ಪ್ರಕೃತಿಯು ಮಾನವನಿಗೆ ಒಂದು ಭೌತಿಕ ಸಮಾವರೋಧವನ್ನು ಸಾಧಿಸಿದೆ. ಮಾನವನು ಈಗ ಮಾನಸಿಕ ಸಮಾವರೋಧವನ್ನು ಸಾಧಿಸಬೇಕು ಎನ್ನುತ್ತದೆ, ವೇದಾಂತ. ಅದನ್ನು ಮಾನವನು ತನಗಾಗಿ, ತಾನೇ, ಮನಸ್ಸಿನ ಹಿಂದೆ ಇರುವ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕಾಗಿ, ಪ್ರಕೃತಿಯು ತನಗೆ ನೀಡಿರುವ ಜೈವಿಕ ಶಕ್ತಿಗಳಿಂದ ಸಾಧಿಸಬೇಕು. ಅದನ್ನು ವಿವರಿಸಿದ ಮೇಲೆ, ಸಮಾವರೋಧದ ಮೂಲಕ 'ಉನ್ನತತರ ಮಿದುಳು ದೇಹದ ಶ್ರಮಿಕ ಕಾರ್ಯಗಳಿಂದ ಬಿಡುಗಡೆ ಹೊಂದಿ, ನಿಯಂತ್ರಣ ಕಾರ್ಯಗಳನ್ನು ಕೆಳಗಿನ ಮಿದುಳಿಗೆ ವಹಿಸುತ್ತದೆ' ಎನ್ನುತ್ತಾನೆ, ಗ್ರೇ ವಾಲ್ಟರ್. ಮತ್ತೆ ಅವನು, ಈ ಹಿಂದೆ ಹೇಳಿದಂತೆ ಸಸ್ತನಿಗಳಿಗೆ, ಸಮಾವರೋಧ ಎಂದರೆ ಉಳಿದುಕೊಳ್ಳುವಿಕೆ, ಆದರೆ ಮನುಷ್ಯನಿಗಾದರೋ ಅದು ಆಧ್ಯಾತ್ಮಿಕ ಬಿಡುಗಡೆಯತ್ತ ಮಾರ್ಗದರ್ಶನ ನೀಡುತ್ತದೆ ಎನ್ನುತ್ತಾನೆ.

## ೩೭. ಸಮಾವರೋಧ ಮತ್ತು ಯೋಗ

ಜೈವಿಕ ವಿಕಾಸದ ಈ ದೈಹಿಕ ಸಮಾವರೋಧಕ್ಕೂ ಯೋಗದ ಮಾನಸಿಕ ಮತ್ತು ಆಧ್ಯಾತ್ಮಿಕ ಸಮಾವರೋಧಕ್ಕೂ ಸಂಬಂಧವನ್ನು ಕಲ್ಪಿಸುತ್ತಾ ಗ್ರೇ ವಾಲ್ಟರ್ ಹೀಗೆ ಮುಕ್ತಾಯಮಾಡುತ್ತಾನೆ :

*ಮತ್ತೆ, ಹೊಸ ದಿಗಂತಗಳು ತೆರೆದಂತೆ ಹಳೆಯ ಹೆಗ್ಗುರುತುಗಳು ಅರಿವಿಗೆ ಬರುತ್ತಿವೆ. ಸಮಾವರೋಧದ ಅನುಭವವೂ, ಮಿದುಳಿಗೆ ಅದು ದೊರಕಿಸುವ ಪೂರ್ಣ ಶಮ ಸ್ಥಿತಿಯೂ ಎರಡು ಮೂರು ಸಾವಿರ ವರ್ಷಗಳ ಕಾಲ ಬೇರೆ ಬೇರೆ ಹೆಸರುಗಳಲ್ಲಿ ಜನರಿಗೆ ತಿಳಿದದ್ದೇ. ಪೂರ್ಣತಾ ಸಾಧನೆಯ ಧರ್ಮಗಳಲ್ಲಿ ದೈಹಿಕ ಸ್ವರೂಪ ಅದು—ನಿರ್ವಾಣ, ಯೋಗಿಯು ಹೇಳುವ ಅಮೂರ್ತ ಸ್ಥಿತಿ, ಅರಿವನ್ನು ಮೀರಿದ ಶಾಂತಿ, ಅಪಹಾಸ್ಯಕ್ಕೀಡಾಗಿರುವ 'ಅಂತರಂಗದ ಶಾಂತಿ' ಅವ್ಯವಸ್ಥೆ ಮತ್ತು ರೋಗಗಳು ಕೇವಲ ಯಾಂತ್ರಿಕ ಸ್ಥಿತಿಗಳಾಗಿರುವ ಒಂದು ಕೃಪಾಸ್ಥಿತಿ ಅದು.*

ಜೈವಿಕ ಸೆಳೆತ ಮತ್ತು ಇತಿಮಿತಿಗಳಾಚೆಗೆ ಹೋಗುವ ಹೋರಾಟ ಮತ್ತು ಆತ್ಮಸಾಕ್ಷಾತ್ಕಾರದಲ್ಲಿ ನಮ್ಮ ಚೇತನದ ಸ್ವಾತಂತ್ರ್ಯವನ್ನು ಕಂಡುಕೊಳ್ಳುವುದು ಇವಕ್ಕೆ ಭದ್ರವಾದ ನೈತಿಕ ಜೀವನದ ಬೆಂಬಲ, ಪೋಷಣೆಗಳು ಬೇಕಾಗುತ್ತವೆ. ಹಾಗೆ ಅಸ್ತಿಭಾರವು ಭದ್ರವಾದ ಮೇಲೆಯೇ ಮಾನವನು ಹೋರಾಟವನ್ನು ನೇರವಾಗಿ ಅಂತರಂಗ ಜಗತ್ತಿಗೆ ಒಯ್ಯಲು ಸಾಫಲ್ಯವಾಗುವುದು ; ಆಗ ಅವನಿಗೆ ಅಗತ್ಯವಾದ ಶಿಸ್ತು ಸಂಯಮಗಳನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ. ತನ್ನ ಮನೋ-ದೈಹಿಕ ಶಕ್ತಿಯಿಂದ ಹೊಸ ಹೊಸ ಆಯುಧಗಳನ್ನು ತಯಾರುಮಾಡಿಕೊಳ್ಳುವುದು ಸುಲಭವಾಗುತ್ತದೆ. ಆ ಆಯುಧಗಳಲ್ಲಿ ಅತ್ಯಂತ ಗಟ್ಟಿಯಾದವು ಎಂದರೆ ದೃಢವಾದ ಮನಸ್ಸು ಮತ್ತು ಶುದ್ಧವಾದ ಬುದ್ಧಿ. ಇದರ ಪರಿಣಾಮವೇ, ಹಿಂದೆ ಹೇಳಿದ ಎರಡನೆಯ ಸಮಾವರೋಧ. ಮಾನವನು ಇದನ್ನು ಪಡೆಯುವುದು ಉನ್ನತತರ ಮಿದುಳಿನಿಂದ, ಅದನ್ನು ಜೈವಿಕ ವ್ಯವಸ್ಥೆಯ ದಾಸ್ಯದಿಂದ ಬಿಡುಗಡೆ ಮಾಡಿದ ಮೇಲೆ. ಈ ಎರಡನೆಯ ಸಮಾವರೋಧವನ್ನು ವೇದಾಂತ ಮತ್ತು ಯೋಗಗಳು, ಸಮಗ್ರವಾಗಿ ಶಮ ಮತ್ತು ದಮ ಎಂದು ಕರೆದಿವೆ. ಕಠೋಪನಿಷತ್ತಿನ ಮೂರನೆಯ ಅಧ್ಯಾಯವು ಇದನ್ನು ಸುಂದರವಾದ ರೂಪಕದ ಮೂಲಕ ಹೇಳಿದೆ. ಜ್ಞಾನವನ್ನು ಪಡೆದ ಬುದ್ಧಿಯನ್ನು, ಶುದ್ಧ ಚಿತ್ತವನ್ನು ಮಾನವನು ಸ್ವಾತಂತ್ರ್ಯ ಸಾಫಲ್ಯಗಳಿಗೆ ಯಾತ್ರೆ ಹೊರಟಾಗ ಬೇಕಾಗುವ ರಥಿಕನಿಗೆ ಹೋಲಿಸಲಾಗಿದೆ.

## ೩೮. ಯೋಗದ ಸ್ವರೂಪ

ಇಂದ್ರಿಯಗಳ ಗದ್ದಲಗಳನ್ನು ಶಾಂತಗೊಳಿಸುವಲ್ಲಿ ಯಶಸ್ವಿಯಾದ ಸ್ಥಿತಿಯಲ್ಲಿ ಮನಸ್ಸು ಶುದ್ಧವೂ, ಏಕಾಗ್ರವೂ ಶಾಂತವೂ ಆಗುವ ಸ್ಥಿತಿಯನ್ನು ಯೋಗ ಎಂದು ಕರೆಯಲಾಗಿದೆ. ಶತಮಾನಗಳಿಂದ ಆಧ್ಯಾತ್ಮಿಕ ಸಾಧಕರು ಈ ಸ್ಥಿತಿಯನ್ನು ಪಡೆಯಲು ಶ್ರಮಿಸಿದ್ದಾರೆ. ಅನೇಕರು ಅಂಥ ಸ್ಥಿತಿಯನ್ನು ಪಡೆದಿದ್ದಾರೆ. ಶ್ರೀಕೃಷ್ಣನು ಗೀತೆಯಲ್ಲಿ (IV. 10) ಹೇಳಿರುವಂತೆ ಎಲ್ಲರ ಅಂತರಾತ್ಮನಾದ ಭಗವಂತನನ್ನು ಅನೇಕರು ಸಾಕ್ಷಾತ್ಕರಿಸಿಕೊಂಡಿದ್ದಾರೆ :

ವೀತ-ರಾಗ-ಭಯ-ಕ್ರೋಧಾ  
ಮನ್ಮಯಾ ಮಾಮುಪಾಶ್ರಿತಾಃ ;  
ಬಹವೋ ಜ್ಞಾನ-ತಪಸಾ  
ಪೂತಾ ಮದ್ಭಾವಮಾಗತಾಃ—

*ಆಸಕ್ತಿ, ಭಯ, ಕೋಪ ಇವುಗಳಿಂದ ಬಿಡುಗಡೆ ಹೊಂದಿ (ಎಲ್ಲರಲ್ಲೂ ಇರುವ ಏಕ ಆತ್ಮವಾದ) ನನ್ನಲ್ಲೇ ಆಶ್ರಯಪಡೆದು, ಅನೇಕರು ಜ್ಞಾನದ ತಪಸ್ಸಿನಿಂದ ಅಥವಾ ಆಧ್ಯಾತ್ಮಜ್ಞಾನದ ಶಿಸ್ತಿನಿಂದ ನನ್ನಲ್ಲೇ ಒಂದಾಗಿದ್ದಾರೆ.*

ಗೌಡಪಾದರು ಕೂಡ ಇದೇ ಸತ್ಯವನ್ನು ಮಾಂಡೂಕ್ಯೋಪನಿಷತ್ ಕಾರಿಕೆಯಲ್ಲಿ ಪುನರುಚ್ಚರಿಸಿದ್ದಾರೆ (II. 35):

ವೀತ-ರಾಗ-ಭಯ-ಕ್ರೋಧೈಃ
ಮುನಿಭಿಃ ವೇದ-ಪಾರಗೈಃ ;
ನಿರ್ವಿಕಲ್ಪಂ ಹ್ಯಯಂ ದೃಷ್ಟಃ
ಪ್ರಪಂಚೋಪರಮೋಽದ್ವಯಃ—

*ಆಸಕ್ತಿ, ಭಯ, ಕೋಪ, ಇವುಗಳಿಂದ ಬಿಡುಗಡೆಹೊಂದಿದ ವೇದಗಳ (ಆಜ್ಞೆಯ)ನ್ನು ಎಂದರೆ ಪ್ರಯೋಗ ಕ್ಷೇತ್ರವನ್ನು ಪ್ರವೇಶಿಸಿ, ಎಲ್ಲಾ ಶಾಸ್ತ್ರಗಳನ್ನೂ ಪ್ರಾಪಂಚಿಕ ಅಸ್ತಿತ್ವವನ್ನೂ ಮೀರಿ ನಿರ್ವಿಕಲ್ಪ ಸ್ಥಿತಿಯನ್ನು ಸೇರಿದ್ದಾರೆ.*

ಉಪನಿಷತ್ತುಗಳ ಕಾಲದಿಂದಲೂ, ಎಂದರೆ ಸುಮಾರು ನಾಲ್ಕು ಸಾವಿರ ವರ್ಷಗಳಿಗಿಂತ, ಅಥವಾ ಅದಕ್ಕಿಂತಲೂ ಇನ್ನೂ ಹಿಂದಿನಿಂದ ನಮ್ಮ ದೇಶವು ಈ ವಿಷಯದ, ಎಂದರೆ ಯೋಗದ ಪೂರ್ಣ ವಿಜ್ಞಾನದ ತಂತ್ರವನ್ನು ಬೆಳೆಸಿಕೊಂಡಿತ್ತು. ಬಾಲಕನಾದ ನಚಿಕೇತನಿಗೆ ಯಮನು ಹೇಳಿದ ಮಾತುಗಳಲ್ಲಿ ಹೇಳುವುದಾದರೆ (ಕಠೋಪನಿಷತ್):

ಯದಾ ಪಂಚಾವತಿಷ್ಠಂತೇ
ಜ್ಞಾನಾನಿ ಮನಸಾ ಸಹ ;
ಬುದ್ಧಿಶ್ಚ ನ ವಿಚೇಶ್ಟತೇ
ತಾಮಾಹುಃ ಪರಮಾಂ ಗತಿಮ್
ತಾಂ ಯೋಗಂ ಇತಿ ಮನ್ಯನ್ತೇ—

*ಐದು ಜ್ಞಾನೇಂದ್ರಿಯಗಳು ಮನಸ್ಸಿನೊಂದಿಗೆ ಯಾವಾಗ ಸ್ಥಿರವಾಗಿರುತ್ತವೆಯೋ, ಯಾವಾಗ ಬುದ್ಧಿಯೂ ಕೆಲಸ ಮಾಡುವುದಿಲ್ಲವೋ ಅದೇ ಪರಮಸ್ಥಿತಿ ಎನ್ನುತ್ತಾರೆ (ಋಷಿಗಳು).*

*ಅವರು (ಋಷಿಗಳು) ಅದನ್ನು (ಆ ಸ್ಥಿತಿಯನ್ನು) ಯೋಗ ಎನ್ನುತ್ತಾರೆ.*

## ೩೯. ವೇದಾಂತದ ಹಿನ್ನೆಲೆಯಲ್ಲಿ ಧರ್ಮ ಮತ್ತು ವಿಜ್ಞಾನ

ಆಧುನಿಕ ನಾಗರಿಕತೆಯು ಭೌತ ವಿಜ್ಞಾನಕ್ಕೂ ತಂತ್ರಜ್ಞಾನಕ್ಕೂ ಬಹು ಹೆಚ್ಚಿನ ಬೆಲೆ ಕಟ್ಟಿದೆ, ಹಿಂದಿನ ನಾಗರಿಕತೆಗಳು ಅವಕ್ಕೆ ಕಡಮೆ ಕಿಮ್ಮತ್ತನ್ನು ನೀಡಿದ್ದಂತೆ. ಇಂದು ವಿಜ್ಞಾನವನ್ನು ಅದಕ್ಕೆ ನೀಡಬೇಕಾದ ಸ್ಥಾನದ ದೃಷ್ಟಿಯಿಂದ ನೋಡಬೇಕಾಗಿದೆ—ಆ ಸ್ಥಾನ ಸಮಗ್ರ ಮಾನವ ಜ್ಞಾನ ಮತ್ತು ಹಿತದ ದೃಷ್ಟಿಯಿಂದ ನೋಡಿದ್ದಾಗಬೇಕು. ಸ್ವಾಮಿ ವಿವೇಕಾನಂದರು ಆಧುನಿಕ ಚಿಂತನೆಗೆ ನೀಡಿದ ಅನೇಕ ಮುಖ್ಯ ಕೊಡುಗೆಗಳಲ್ಲಿ ಇದೊಂದು. ಪೂರ್ವದೇಶಗಳು ಧರ್ಮಕ್ಕೆ ನೀಡಿದ ಕೊಡುಗೆಗಳೂ ಪಶ್ಚಿಮದೇಶಗಳು ವಿಜ್ಞಾನಕ್ಕೆ ನೀಡಿದ ಕೊಡುಗೆಗಳು ಪರಸ್ಪರ ಪೂರಕ ಎಂದು ಹೇಳುತ್ತಾ 'ನನ್ನ ಗುರುದೇವ' ಎಂಬ, ೧೮೯೬ರಲ್ಲಿ ನ್ಯೂಯಾರ್ಕಿನಲ್ಲಿ ನೀಡಿದ ಉಪನ್ಯಾಸದಲ್ಲಿ ಅವರು ಹೀಗೆಂದರು (C.W. Vol IV. eighth edition p.155) :

*ಎರಡು ಆದರ್ಶಗಳಲ್ಲಿಯೂ ಒಂದು ವೈಭವವಿದೆ, ಮಹಿಮೆಯಿದೆ. ಆಧುನಿಕ ವ್ಯವಸ್ಥೆ ಈ ಎರಡು ಆದರ್ಶಗಳನ್ನೂ ಸಂಗಮಗೊಳಿಸಿ ಸಮನ್ವಯಗೊಳಿಸುವುದು. ಪಾಶ್ಚಾತ್ಯರಿಗೆ*

ಇಂದ್ರಿಯ ಜಗತ್ತು ಎಷ್ಟು ಸತ್ಯವೋ ಪ್ರಾಚ್ಯರಿಗೆ ಆಧ್ಯಾತ್ಮಿಕ ಜಗತ್ತು ಅಷ್ಟೇ ಸತ್ಯ. ಪ್ರಾಚ್ಯನಿಗೆ ಏನು ಬೇಕೋ, ಯಾವುದನ್ನೂ ಕುರಿತು ಅವನು ಹಂಬಲಿಸುತ್ತಿರುವನೋ, ಯಾವುದು ಜೀವನವನ್ನು ಸತ್ವಮಯವನ್ನಾಗಿ ಮಾಡಬಲ್ಲುದೋ, ಅವೆಲ್ಲವನ್ನೂ ಅವನು ಆಧ್ಯಾತ್ಮದಲ್ಲಿ ಕಂಡುಕೊಳ್ಳುತ್ತಾನೆ. ಪಾಶ್ಚಾತ್ಯ ದೃಷ್ಟಿಯಲ್ಲಿ ಪ್ರಾಚ್ಯನು ಒಬ್ಬ ಕನಸುಣಿ. ಪ್ರಾಚ್ಯನಿಗೆ ಕೆಲಸಕ್ಕೆ ಬಾರದ ವಸ್ತುವಿನೊಂದಿಗೆ ಆಡುತ್ತಿರುವ ಪಾಶ್ಚಾತ್ಯನು ಒಬ್ಬ ಕನಸುಣು. ವಯಸ್ಸಾದ ಸ್ತ್ರೀಪುರುಷರು, ಎಂದಾದರೊಂದು ದಿನ, ಬೇಗಲೋ, ನಿಧಾನವಾಗಿಯೋ ಬಿಟ್ಟುಹೋಗಬೇಕಾದ ಒಂದು ಹಿಡಿಮಣ್ಣಿಗೆ ಇಷ್ಟು ಪ್ರಾಧಾನ್ಯ ಕೊಡುವುದನ್ನು ನೋಡಿ ಪ್ರಾಚ್ಯನು ನಗುವನು. ಒಬ್ಬನು ಮತ್ತೊಬ್ಬನನ್ನು ಕನಸು ಕಾಣುವನೆಂದು ನಗುವನು.

ಆದರೆ ಮಾನವ ಜನಾಂಗದ ಪ್ರಗತಿಗೆ ಪಾಶ್ಚಾತ್ಯ ಆದರ್ಶ ಎಷ್ಟು ಮುಖ್ಯವೋ ಪ್ರಾಚ್ಯ ಆದರ್ಶವೂ ಅಷ್ಟೇ ಮುಖ್ಯವೆಂದೂ—ಇದು ಹೆಚ್ಚು ಮುಖ್ಯವೆಂದೂ ಭಾವಿಸುತ್ತೇನೆ. ಯಂತ್ರಗಳು ಮಾನವ ಜನಾಂಗವನ್ನು ಹಿಂದೆ ಸುಖಿಯನ್ನಾಗಿ ಮಾಡಿಲ್ಲ, ಮುಂದೆ ಮಾಡುವಂತೆಯೂ ಇಲ್ಲ. ಯಾರು ನಾವು ಇದನ್ನು ನಂಬುವಂತೆ ಮಾಡುತ್ತಿರುವರೋ ಅವರು ಸುಖವು ಯಂತ್ರದಲ್ಲಿದೆ ಎಂದು ಭಾವಿಸುವರು. ಆದರೆ ಸುಖವು ಯಾವಾಗಲೂ ಇರುವುದು ಮನಸ್ಸಿನಲ್ಲಿ. ಯಾವನು ತನ್ನ ಮನಸ್ಸಿನ ಒಡೆಯನಾಗಿರುವನೋ ಆ ವ್ಯಕ್ತಿಯೊಬ್ಬನೇ ಸುಖಿಯಾಗಬಲ್ಲ, ಉಳಿದವರಲ್ಲ. ಯಂತ್ರಶಕ್ತಿಯಲ್ಲೇನಿದೆ ? ತಂತಿಯ ಮೂಲಕ ವಿದ್ಯುತ್ ಪ್ರವಾಹವನ್ನು ಹರಿಸಬಲ್ಲ ಒಬ್ಬ ಮನುಷ್ಯನನ್ನು ದೊಡ್ಡವ್ಯಕ್ತಿ ಎಂದು, ಅತಿ ಬುದ್ಧಿವಂತನೆಂದು ಏಕೆ ಕರೆಯಬೇಕು ? ಪ್ರತಿ ಕ್ಷಣದಲ್ಲಿಯೂ ಪ್ರಕೃತಿಯು ಇದಕ್ಕಿಂತಲೂ ಹತ್ತು ಲಕ್ಷ ಪಾಲು ಹೆಚ್ಚು ಮಾಡುತ್ತಿಲ್ಲವೇನು ? ಹೀಗಿರುವಾಗ ಪ್ರಕೃತಿಗೆ ತಲೆಬಾಗಿ ಅದನ್ನೇ ಏಕೆ ಪೂಜಿಸಬಾರದು ?

## ೪೦. ಶಿಕ್ಷಣದಲ್ಲಿ ವಿಜ್ಞಾನ ಮತ್ತು ಧರ್ಮಗಳ ಸಂಶ್ಲೇಷಣೆಯ ಅಗತ್ಯ

ಎಲ್ಲ ವಿದ್ಯಾರ್ಥಿಗಳೂ ಕೊಂಚಮಟ್ಟಿಗಾದರೂ ಪೂರ್ವಪಶ್ಚಿಮಗಳನ್ನು, ಅಧ್ಯಾತ್ಮ-ವಿಜ್ಞಾನಗಳನ್ನು, ಚಿಂತನೆ-ಕ್ರಿಯೆಗಳನ್ನು ಒಂದುಗೂಡಿಸಿಕೊಳ್ಳಲು ಶಿಕ್ಷಣವು ಅನುಕೂಲ ಮಾಡಿಕೊಡಬೇಕು. ಅಧ್ಯಾತ್ಮ ವಿಜ್ಞಾನವು, ಪರಾ-ವಿದ್ಯೆಯು, ಪರಮ ವಿಜ್ಞಾನವು ಮಾನವನ, ನೈತಿಕ, ಕಲಾತ್ಮಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನೂ, ಶುದ್ಧವಿಜ್ಞಾನಗಳ ನೈತಿಕ ಮೌಲ್ಯಗಳನ್ನೂ ಅಳವಡಿಸಿಕೊಳ್ಳಲು ನೆರವಾಗುತ್ತದೆ. ಈ ಎಲ್ಲ ಮೌಲ್ಯಗಳ ಸಾಮರಸ್ಯವು ವೇದಾಂತವು ಸದಾ ಎತ್ತಿ ಹಿಡಿದಿರುವ ವಿಜ್ಞಾನ ಮತ್ತು ಧರ್ಮಗಳ ಸ್ವಾಭಾವಿಕ ಸಾಮರಸ್ಯವು, ನಮ್ಮ ಕಾಲದಲ್ಲಿ ಅಪರಾ-ವಿದ್ಯೆಯ ಪ್ರತಿನಿಧಿಯಾದ (ಮುಂದೆ ಸ್ವಾಮಿ ವಿವೇಕಾನಂದರಾದ) ನರೇಂದ್ರ ಮತ್ತು ಪರಾವಿದ್ಯೆಯ ಮೂರ್ತಿಸ್ವರೂಪರಾದ ಶ್ರೀ ರಾಮಕೃಷ್ಣರ ಆಧ್ಯಾತ್ಮಿಕ ಬಾಂಧವ್ಯದಲ್ಲಿ ಕಾಣಿಸಿಕೊಂಡಿತು. ಇಂತಹ ಎಲ್ಲ ಮೌಲ್ಯಗಳೂ ಮಾನವ ಚೇತನದ ಆಳದಿಂದ, ಮಾನವ ಚೇತನದ ವಿಕಾಸದ ಒಂದು ಹಂತದಲ್ಲಿ, ಅವನು ತನ್ನ ಸುತ್ತಣ ಪರಿಸರದಮೇಲೆ ತಕ್ಕಮಟ್ಟಿನ ಹತೋಟಿಯನ್ನು ಸಾಧಿಸಿದಮೇಲೆ ಮೂಡಿಬರುತ್ತವೆ : ಅವು ಭೌತಿಕ ಪ್ರಕೃತಿಯಿಂದಲೇ ಮೂಡಿ ಬರುವುದಿಲ್ಲ. ಅವು ಕೈಗಾರಿಕೆಯಿಂದಾಗಲಿ, ಭೌತಿಕ ಪ್ರಕೃತಿಯನ್ನು ತಾಂತ್ರಿಕವಾಗಿ ಹತೋಟಿಗೆ ಒಳಪಡಿಸುವುದರಿಂದಾಗಲಿ, ಅಂಥ ಸಾಧನೆಗಳಿಂದ ದೊರಕುವ ಸಂಪತ್ತಿನಿಂದಾಗಲಿ ತಮಗೆ ತಾವೇ ಬರುತ್ತವೆ ಎಂದು ನಂಬುವುದಾಗಲಿ ನಿರೀಕ್ಷಿಸುವುದಾಗಲಿ ತಪ್ಪಾಗುತ್ತದೆ. ಹೀಗೆ ಅನೇಕರು, ಆಧುನಿಕ ಕಾಲದಲ್ಲಿ ಭಾವಿಸಿರುವುದನ್ನು ಪ್ರತಿಭಟಿಸುತ್ತಾ ಬರ್ಟ್ರೆಂಡ್ ರಸೆಲ್‌ರವರು ಹೇಳುತ್ತಾರೆ (Impact of Science on Society p. 77) :

*ಪೂಜಾವಸ್ತುವನ್ನಾಗಿ ಯಂತ್ರವನ್ನು ಭಾವಿಸಿರುವುದು ಆಧುನಿಕ ಕಾಲದ ಸೈತಾನ, ಅದನ್ನು ಪೂಜಿಸುವುದು ಆಧುನಿಕ ಕಾಲದ ಪಿಶಾಚಾರಾಧನೆ.*

*ಉಳಿದ ಯಾವುದೇ ಆಗಲಿ ಯಾಂತ್ರಿಕವಾಗಿರಬಹುದು, ಆದರೆ ಮೌಲ್ಯಗಳಂತೂ ಯಾಂತ್ರಿಕ ಅಲ್ಲ, ಇದನ್ನು ಯಾವ ರಾಜಕೀಯ ತಾತ್ವಿಕನೂ ಮರೆಯಬಾರದು.*

ಆದ್ದರಿಂದ ಒಂದು ವಿಷಯ ಸ್ಪಷ್ಟವಾಯಿತು ; ಇಂದಿನ ಶಾಲೆ ಮತ್ತು ಕಾಲೇಜುಗಳ ಶಿಕ್ಷಣವು ಉನ್ನತ ಮತ್ತು ಉನ್ನತತರ ಶಿಕ್ಷಣವಾದರೆ, ನಮ್ಮ ಕಾಲದಲ್ಲಿ ಸ್ವಾಮಿ ವಿವೇಕಾನಂದರು ಶ್ರೀ ರಾಮಕೃಷ್ಣರಿಂದ ಪಡೆದ ಆಧ್ಯಾತ್ಮಿಕ ಶಿಕ್ಷಣವು ಉನ್ನತೋನ್ನತವಾದದ್ದು ಎನ್ನಬೇಕು. ಅದು ಸಾಗರದಷ್ಟು ಆಳವಾದದ್ದೂ, ಗಗನದಷ್ಟು ವಿಶಾಲವಾದದ್ದೂ ಆಗಿತ್ತು. ಏಕೆಂದರೆ ಅದು ಚಾರಿತ್ರ್ಯ-ಶಕ್ತಿ ಮತ್ತು ದಯೆ, ಪೂರ್ವ-ಪಶ್ಚಿಮ, ಧರ್ಮ-ವಿಜ್ಞಾನ, ಅಲೌಕಿಕ-ಲೌಕಿಕ ಇವುಗಳ ಸಮನ್ವಯವಾಗಿತ್ತು. ಮತ್ತು ಶಾಲೆ ಕಾಲೇಜುಗಳ ಶಿಕ್ಷಣಗಳು ತಮ್ಮ ಸಾಫಲ್ಯವನ್ನು ಕಂಡುಕೊಳ್ಳಬೇಕಾದರೆ ರಾಮಕೃಷ್ಣರು ವಿವೇಕಾನಂದರಿಗೆ ನೀಡಿದ ಶಿಕ್ಷಣಕ್ಕೆ ಒಂದು ಶಿಶುವನ್ನು ಒಯ್ಯುವಂಥದಾಗಿರಬೇಕಾಗುತ್ತದೆ. ಮಾನವನು ಈ ಆಧ್ಯಾತ್ಮಿಕ ಶಿಕ್ಷಣಕ್ಕೆ ತನ್ನ ಶಾಲೆ ಅಥವಾ ಕಾಲೇಜು ಶಿಕ್ಷಣದ ಯಾವುದೇ ಘಟ್ಟದಲ್ಲಾಗಲಿ ಅದು ಯಾವುದೇ ಮಟ್ಟದಲ್ಲಿರಲಿ ಪ್ರವೇಶಿಸಬಹುದು ಎಂಬುದನ್ನು ಶ್ರೀ ರಾಮಕೃಷ್ಣರ ಅನುಭವವೂ ಮೇಲ್ಪಂಕ್ತಿಯೂ ತೋರಿಸುತ್ತವೆ.

ಯಾವುದೇ ಮಟ್ಟದಲ್ಲಾಗಲೀ—ಪ್ರಾಥಮಿಕ, ಪ್ರೌಢ, ಪದವಿ ಅಥವಾ ಸ್ನಾತಕೋತ್ತರ ವಿವೇಕವು ಜ್ಞಾನದ ಸಹಚರಿಯಾಗಿದ್ದು, ಅದನ್ನು ಹುರಿದುಂಬಿಸಬಹುದು, ಮತ್ತು ಕ್ರಿಯಾತ್ಮಕವಾಗಿ ಚೈತನ್ಯಗೊಳಿಸಬಹುದು. ಇನ್ನೂ ಒಂದು ಅಂಶ ಸ್ಪಷ್ಟವೇ ಆಗಿದೆ : ಸ್ವಲ್ಪ ವಿವೇಕವಿಲ್ಲದೆ ಹೋದರೆ ಆ ಯಾವುದೇ ಮಟ್ಟದಲ್ಲಿ ಜ್ಞಾನವು, ದೀರ್ಘಾವಧಿಯ ಲೆಕ್ಕದಲ್ಲಿ ನೋಡಿದರೆ , ವರವಾಗುವುದರ ಬದಲು ವ್ಯಕ್ತಿಗೂ ಸಮಾಜಕ್ಕೂ ಶಾಪವಾಗಬಹುದು ; ಅಹಂಕಾರ, ಪರಕೀಯತೆ, ಒಂಟಿತನ, ಏಕಾಕಿತನ, ಮಾನಸಿಕ ರೋಗ ಮುಂತಾದುವುಗಳಿಗೆ ಜನ್ಮಭೂಮಿಯೂ ಆಗಬಹುದು. ಇವು ಹಿಂದೆ ಸಮಾಜಗಳಿಗೂ ನಾಗರಿಕತೆಗಳಿಗೂ ಹಾನಿಯನ್ನು ತಂದಿವೆ, ಅವುಗಳು ಕ್ಷೀಣಿಸುವುದಕ್ಕೆ ನಾಶವಾಗುವುದಕ್ಕೆ ಕಾರಣವಾಗಿವೆ. ಆಧುನಿಕ ಪಾಶ್ಚಾತ್ಯ ನಾಗರಿಕತೆಯೂ ಈ ಸವಾಲುಗಳನ್ನು ಎದುರಿಸುತ್ತಿದೆ. ಈ ಆಧುನಿಕ ನಾಗರಿಕತೆಯ ಶಕ್ತಿಗಳನ್ನು ನಮ್ಮ ದೇಶವೂ ವೇಗಗತಿಯಲ್ಲಿ ಹೀರಿಕೊಳ್ಳುತ್ತಿರುವುದರಿಂದ, ಅದರ ಕೆಲವು ವಿಕಾರಗಳನ್ನು ಈಗಾಗಲೇ ಅನುಭವಿಸುತ್ತಿರುವುದರಿಂದ ನಾವು ನಮ್ಮ ಆಧ್ಯಾತ್ಮ-ವಿದ್ಯೆಯ ಅಥವಾ ಮಾನವನ ಅಂತರಂಗ ಆಳ ವಿಜ್ಞಾನದ ನಿತ್ಯ ಸಂದೇಶಕ್ಕೆ ಕಿವಿಗೊಡುವುದು ಸೂಕ್ತ. ಹಾಗೆ ಮಾಡಿ ಈ ತೀವ್ರತರವಾದ ತಾಂತ್ರಿಕತೆಯ ಯುಗದ ಭೌತಿಕ ಮತ್ತು ಮಾನಸಿಕ ಶಕ್ತಿಮೂಲಗಳನ್ನು ಅರಗಿಸಿಕೊಳ್ಳುವ ದೃಷ್ಟಿಯಿಂದ ನಮ್ಮ ಆಧ್ಯಾತ್ಮಿಕ ಶಕ್ತಿಮೂಲಗಳಿಂದ ಹೊಸ ಬಂಡವಾಳವನ್ನು ಸೃಷ್ಟಿಸಿಕೊಳ್ಳುವುದು ಒಳ್ಳೆಯದು.

## ೪೧. ವಸ್ತು–ತಂತ್ರಜ್ಞಾನ ಮತ್ತು ಪುರುಷ–ತಂತ್ರಜ್ಞಾನ

ಬದುಕಿನ ಸವಾಲುಗಳನ್ನು ಸಮರ್ಪಕವಾದ ತತ್ವಶಾಸ್ತ್ರದ ಸವಾಲುಗಳಿಂದಲೇ ಎದುರಿಸಬೇಕೆಂದು ಆಧುನಿಕ ಯುಗವು ಒತ್ತಾಯಪೂರ್ವಕವಾಗಿ ಹೇಳುತ್ತದೆ ; ಅಂತಹ ಸಮರ್ಪಕತೆ ಖಚಿತವಾಗುವುದು ಆ ತತ್ವಶಾಸ್ತ್ರವು ಭೌತವಿಜ್ಞಾನಗಳು ಮತ್ತು ಅಧ್ಯಾತ್ಮ ವಿಜ್ಞಾನದ ನಡುವೆ ಹರ್ಷದಾಯಕವಾದ ಸಮನ್ವಯವನ್ನು ಸಾಧಿಸುವ ಎದೆಗಾರಿಕೆಯನ್ನು ತೋರಿಸಿದಾಗ ಮಾತ್ರ. ವೇದಾಂತವೊಂದೇ ವೈಜ್ಞಾನಿಕ ಜ್ಞಾನದ ಮುನ್ನಡೆಗೆ ಅಂಜದೆ ಇರತಕ್ಕ ತತ್ವಶಾಸ್ತ್ರ ; ಮಾತ್ರವಲ್ಲ ಅದು ವಿಜ್ಞಾನವನ್ನು ಹಾರ್ದಿಕವಾಗಿ ಸ್ವಾಗತಿಸುತ್ತದೆ. ಸತ್ಯವೇ ಅದರ ತೀವ್ರವಾದ ಆಸಕ್ತಿ—ಸತ್ಯಮೇವ ಜಯತೇ—

ಯಾವುದೇ ಪ್ರಿಯವಾದ ಅಭಿಪ್ರಾಯವೂ ಅಲ್ಲ. ಸಿದ್ಧಾಂತವೂ ಅಲ್ಲ. ಆಧುನಿಕ ಭೌತ ವಿಜ್ಞಾನದಂತೆ ವೇದಾಂತವೂ ವಿಮರ್ಶಾಪೂರ್ವಕ ಶೋಧನ ಮನೋಭಾವವನ್ನು ಅಸಂಗತ್ಯ, ವಸ್ತುನಿಷ್ಠತೆ, ನಿಷ್ಪಕ್ಷತೆ ಮತ್ತು ಸತ್ಯವನ್ನು ತಾಳೆನೋಡುವ ಸವಾಲು ಈ ಎಲ್ಲವನ್ನೂ ಪ್ರೋತ್ಸಾಹಿಸುತ್ತದೆ. ಯಾವುದೇ ಜ್ಞಾನ ಶಾಖೆಯೂ ತಾನು ವಸ್ತುನಿಷ್ಠ ಸತ್ಯವನ್ನು—ವೈಯಕ್ತಿಕ ವ್ಯಕ್ತಿನಿಷ್ಠ ಕಲ್ಪನೆಗಳನ್ನು, ತೃಪ್ತಿಗಳನ್ನಲ್ಲ—ಹುಡುಕುವ ಹಾದಿಯಲ್ಲಿ ಇರದೇ ಇದ್ದರೆ ಇಂತಹ, ನೈತಿಕ ಸದ್ಗುಣಗಳನ್ನೂ, ರಮ್ಯತೆಗಳನ್ನು ಬೆಳೆಸುವುದಿಲ್ಲ.

ವೇದಾಂತದ ಈ ವೈಜ್ಞಾನಿಕ ಲಕ್ಷಣವನ್ನು ಶಂಕರಾಚಾರ್ಯರು ಧೈರ್ಯವಾಗಿ ನಿರೂಪಿಸಿದ್ದಾರೆ. ಅವರು ಹಾಗೆ ಮಾಡಿರುವುದು ಬ್ರಹ್ಮಸೂತ್ರದ ಮೇಲೆ ಬರೆದಿರುವ ವ್ಯಾಖ್ಯಾನದಲ್ಲಿ—ಬ್ರಹ್ಮಜಿಜ್ಞಾಸಾ ಎಂಬುದನ್ನು ವಿವರಿಸುವಾಗ ಮತ್ತು ಗೀತಾಭಾಷ್ಯದಲ್ಲಿ ವೈಜ್ಞಾನಿಕ ಮನೋಭಾವ ಎನ್ನುವುದನ್ನು ವ್ಯಾಖ್ಯಾನಿಸುವಾಗ. ಮೊದಲನೆಯದರಲ್ಲಿ ಅವರು ವಸ್ತು-ತಂತ್ರಜ್ಞಾನ, ಎಂದರೆ ವಸ್ತು ಅಥವಾ ಅಸ್ತಿತ್ವದಲ್ಲಿರುವ ಸತ್ಯವನ್ನು ಆಶ್ರಯಿಸಿದ, ಅದರಿಂದ ಉತ್ಪನ್ನವಾಗುವ ಜ್ಞಾನ ಮತ್ತು ಪುರುಷನ ಎಂದರೆ ವ್ಯಕ್ತಿಯ ಮನೋಭಾವ, ಕಲ್ಪನೆಗಳು, ಆಸಕ್ತಿಗಳು ಇವನ್ನು ಆಶ್ರಯಿಸಿದ ಜ್ಞಾನ ಇವುಗಳ ನಡುವೆ ಇರುವ ವ್ಯತ್ಯಾಸವನ್ನು ವಿವರಿಸಿದ್ದಾರೆ. ವಸ್ತು-ತಂತ್ರ-ಜ್ಞಾನವು ಅಸ್ತಿತ್ವದಲ್ಲಿರುವ ಒಂದು ವಾಸ್ತವಾಂಶವನ್ನೂ ಅವಲಂಬಿಸಿರುವುದರಿಂದ ಅದು ತನ್ನನ್ನು ತಿಳಿಯುವ ವ್ಯಕ್ತಿಯಿಂದ ಸ್ವತಂತ್ರ ವಾದದ್ದು, ಎಂದರೆ ಆ ವ್ಯಕ್ತಿಯನ್ನು ಆಶ್ರಯಿಸಿದ್ದಲ್ಲ. ಆ ಜ್ಞಾನವು ವಾಸ್ತವಾಂಶವನ್ನು ಕಂಡುಹಿಡಿಯು ತ್ತದೆಯೇ ಹೊರತು ಅದನ್ನು ಸೃಷ್ಟಿಸುವುದಿಲ್ಲ. ಪುರುಷ-ತಂತ್ರಜ್ಞಾನವಾದರೋ ವ್ಯಕ್ತಿಯನ್ನು ಆಶ್ರಯಿ ಸಿದ್ದು, ಮತ್ತು ಆ ವ್ಯಕ್ತಿಗೆ ಅನುಗುಣವಾಗಿ, ಇರುವ, ಬದಲಾಗುವ ಅಥವಾ ನಾಶಗೊಳಿಸಲ್ಪಡುವ ಸಾಧ್ಯತೆಯನ್ನುಳ್ಳದ್ದು—ಕರ್ತುಮ್ ಅಕರ್ತುಮ್ ಅನ್ಯಥಾ -ಕರ್ತುಮ್ ಶಕ್ಯತೇ, ಪುರುಷ-ತಂತ್ರತ್ವಾತ್ ಏವ—ಎನ್ನುತ್ತಾರೆ ಶಂಕರಾಚಾರ್ಯರು.

ಅಂತಹ ಪುರುಷ-ತಂತ್ರ ಜ್ಞಾನದ ಕ್ಷೇತ್ರದಲ್ಲಿ ಬೇಕಾದಷ್ಟು ಬೇಕು ಬೇಡಗಳಿಗೆ ಅವಕಾಶವಿದೆ. ಮತ್ತು ಮಾನವ ಜೀವನದಲ್ಲಿ ಅವು ನಿರ್ವಹಿಸಬೇಕಾದ ನ್ಯಾಯಬದ್ಧವಾದ ಪಾತ್ರವೂ ಇದೆ. ಆದರೆ ವೇದಾಂತದ ಅರ್ಥದಲ್ಲಿ ದೇವರು ಮತ್ತು ಆತ್ಮ ಇವು ವ್ಯಕ್ತಿನಿಷ್ಠ ಭ್ರಮೆಗಳಲ್ಲ, ಅವು ವಸ್ತು-ತಂತ್ರ ಶೋಧನೆ ಮತ್ತು ಜ್ಞಾನದ ವಲಯಗಳಿಗೆ ಸೇರಿದುವು; ಈ ಹಿಂದೆ ಬೃಹದಾರಣ್ಯಕ ಉಪನಿಷತ್ತು ಭಗವಂತನ ಸತ್ಯವನ್ನು ನಿರೂಪಿಸುವ ಸಂದರ್ಭದಲ್ಲಿ ಹೇಳಿದಂತೆ 'ಅಪರೋಕ್ಷವೂ, ನೇರವೂ ಆದ ಬ್ರಹ್ಮ.' ನೈತಿಕತೆಗೆ ವಿಚಾರಪೂರ್ಣ ಪ್ರಮಾಣವೆಂದರೆ ಎಲ್ಲರ ಆತ್ಮವಾದ, ಪ್ರತ್ಯಗಾತ್ಮನ್ ಆದ ಬ್ರಹ್ಮ. ಅದು ಸರ್ವಕಾಲಕ್ಕೂ ಇರುವ ಸತ್ಯ, ಎಲ್ಲ ಅರಿವಿನ ಕ್ರಿಯೆಗಳ ಹಿಂದೆಯೂ ಇರುವ ತಿಳಿಯುವ ವ್ಯಕ್ತಿ, ಅದು ಜ್ಞಾನಕ್ಕೆ ವಸ್ತು ಅಲ್ಲ, ಅದರ ನಿರಾಕರಣೆ ಅಸಾಧ್ಯವಾದದ್ದು. ಏಕೆಂದರೆ ಯಾರು ಅದನ್ನು ನಿರಾಕರಿಸುತ್ತಾರೆಯೋ ಅವನ ಆತ್ಮವೇ ಅವನು ಅಥವಾ ಅದು. ಯ ಏವ ನಿರಾಕರ್ತಾ ತಸ್ಯೈವ ಆತ್ಮತ್ವಾತ್, ಎನ್ನುತ್ತಾರೆ, ಶಂಕರಾಚಾರ್ಯರು. ಬ್ರಹ್ಮವು ಏಕದೇವತಾವಾದ ದಲ್ಲಿ ಸಾಮಾನ್ಯವಾಗಿ ಇರುವ ಒಂದು ವಿಶ್ವಾತೀತ ದೇವತೆಯಲ್ಲ. ಆ ದೇವತೆಯಾದರೋ ಮಾನವ ತರ್ಕವು ಸಿಂಹಾಸನಕ್ಕೆ ಏರಿಸಬಹುದಾದ, ಅಥವಾ ಇಳಿಸಬಹುದಾದ ಒಂದು ತಾರ್ಕಿಕ ಊಹಾಪುಂಜ ಯಲ್ಲ. ಅಂಥದೊಂದು ದೇವತೆಯನ್ನು ನಂಬಿಕೆಯಿಂದ ಬೇಕಾದರೆ ಇಟ್ಟುಕೊಳ್ಳಬಹುದು. ಆದರೆ ಅದರ ಅಸ್ತಿತ್ವವನ್ನು ತಾಳೆನೋಡಲು ಸಾಧ್ಯವಿಲ್ಲ. ಆದರೆ ಉಪನಿಷತ್ತುಗಳ ಬ್ರಹ್ಮವು ಅನುಭವದ ತಳಹದಿ ಮತ್ತು ಪರಾಕಾಷ್ಠೆ, ಏಕೆಂದರೆ ಎಲ್ಲರಲ್ಲಿಯೂ ಇರುವ ಏಕ ಆತ್ಮ. ಅನುಭವಾವಸಾನತ್ವಾತ್ ಭೂತ-ವಸ್ತು-ವಿಷಯತ್ವಾತ್-ಚ ಬ್ರಹ್ಮಜ್ಞಾನಸ್ಯ—'ಏಕೆಂದರೆ ಬ್ರಹ್ಮಜ್ಞಾನವು ಪರ್ಯವಸಾನವಾಗು ವುದು ಅನುಭವದಲ್ಲಿ, ಆದ್ದರಿಂದ ಅದು ಅಸ್ತಿತ್ವದಲ್ಲಿರುವ ವಸ್ತು ಅಥವಾ ವಾಸ್ತವಾಂಶ'—

ಎನ್ನುತ್ತಾರೆ ಶಂಕರಾಚಾರ್ಯರು. ಅದು ಆಧ್ಯಾತ್ಮಿಕ ಅಜ್ಞಾನದ ಸ್ಥಿತಿಯಲ್ಲಿ ಅರಿವಿಗೆ ಬಂದಿಲ್ಲದೇ ಇರತಕ್ಕದ್ದು. ಆದರೆ ತಿಳಿಯಲು ಸಾಧ್ಯವೇ ಇಲ್ಲದ್ದಲ್ಲ ; ಏಕೆಂದರೆ ಅದು ತಿಳಿಯುವವನ ಆತ್ಮವೇ ಆಗಿದೆ. ಆದ್ದರಿಂದ ಯಾವುದೇ ವಿಷಯ ವಸ್ತುವಿಗಿಂತ ಹೆಚ್ಚು ಆತ್ಮೀಯವಾಗಿ ಅರಿವಿಗೆ ಬರತಕ್ಕದ್ದು. ಆದರೆ ಈ ಜ್ಞಾನವು ಆತ್ಮ-ಅನಾತ್ಮಗಳ ಮಿಶ್ರಣದ ಗೊಂದಲದಲ್ಲಿ ಸಾಮಾನ್ಯಾನುಭವದಲ್ಲಿ ಅಡೆತಡೆಗಳಿಗೆ ಸಿಕ್ಕಿಕೊಂಡು ಮುಚ್ಚಿಹೋಗಿದೆ. ಆದ್ದರಿಂದ ವಿವೇಕಪೂರ್ಣವಾದ ಶೋಧದ ಅಗತ್ಯವಿದೆ.

ಉಪನಿಷತ್ತುಗಳ ಋಷಿಗಳು ಅಂಥದೊಂದು ತೀಕ್ಷ್ಣ ಅನ್ವೇಷಣೆಯ ಮೂಲಕ ಭೇದಿಸುವ ಶೋಧದಿಂದ ದೇಹದ, ಸದಾ ಬದಲಾಗುವ ಐದು ಕೋಶಗಳು, ನರವ್ಯೂಹ, ಮನಸ್ಸು, ಬುದ್ಧಿ, ಅಹಂಕಾರ ಶೂನ್ಯ ನಿದ್ರೆಯ ಆನಂದದ ಹಿಂದೆ ಇರುವ ಅನಂತವೂ ಅಮರವೂ ಆಗಿರುವ ಆತ್ಮವನ್ನು ಸಾಕ್ಷಾತ್ಕರಿಸಿಕೊಂಡರು. ಗುರುವಾದ ಯಮನು ಬಾಲಕನಾದ ನಚಿಕೇತನಿಗೆ ಹೀಗೆ ಹೇಳಿದ (ಕಠೋಪನಿಷತ್ತು II.12) :

ಏಷ ಸರ್ವೇಷು ಭೂತೇಷು
ಗೂಢೋ ಆತ್ಮಾ ನ ಪ್ರಕಾಶತೇ ;
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ
ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ—

*ಈ ಆತ್ಮವು ಎಲ್ಲ ಜೀವಿಗಳಲ್ಲಿಯೂ ಅಡಗಿದ್ದರೂ ಎಲ್ಲರಲ್ಲಿಯೂ ವ್ಯಕ್ತವಾಗುವುದಿಲ್ಲ. ತಮ್ಮ ಹರಿತವೂ ಸೂಕ್ಷ್ಮವೂ ಆದ ಬುದ್ಧಿಯಿಂದ ಸೂಕ್ಷ್ಮ ತತ್ವವನ್ನು ಶೋಧಿಸಲು ಶಿಕ್ಷಣ ಪಡೆದವರು ಇದನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲರು.*

ಸತ್ಯವನ್ನು ಮುಚ್ಚಿರುವ ಕೋಶಗಳ ಕಲ್ಪನೆಯ ಪ್ರತಿಧ್ವನಿಯನ್ನು ನಾವು ಇಪ್ಪತ್ತನೆಯ ಶತಮಾನದ ಜೀವಶಾಸ್ತ್ರದಲ್ಲಿ ಕೇಳುತ್ತೇವೆ. ತೈತ್ತಿರೀಯ ಉಪನಿಷತ್ತು ಒತ್ತಿಹೇಳುವ ಮುಂದಿನದನ್ನು ಹಿಂದಿನದು ತುಂಬುತ್ತದೆ—ತೇನೈಷ ಪೂರ್ಣಃ 'ಇದು ಅದರಿಂದ ತುಂಬಲ್ಪಟ್ಟಿದೆ—ಎನ್ನುವ ಮೊದಲ ಮೂರು ಕೋಶಗಳ ಪ್ರಸ್ತಾಪ ಜೀವಶಾಸ್ತ್ರದಲ್ಲಿದೆ. ಅಮೆರಿಕದ ಜೀವಶಾಸ್ತ್ರಜ್ಞ ಜಾರ್ಜ್ ಗೇಲಾರ್ಡ್ ಸಿಂಪ್ಸನ್ (The Meaning of Evolution p. 312) ಹೇಳುತ್ತಾನೆ :

*ವಿಜ್ಞಾನಗಳನ್ನು ಭೌತವಿಜ್ಞಾನ, ಜೀವವಿಜ್ಞಾನ ಮತ್ತು ಸಮಾಜವಿಜ್ಞಾನ ಎಂದು ಸ್ಥೂಲವಾಗಿ ವರ್ಗೀಕರಿಸುವುದು ಭೌತವಸ್ತು ಮತ್ತು ಚೈತನ್ಯಗಳ ವ್ಯವಸ್ಥೆಯ ಮೂರು ಸ್ತರಗಳಿಗೆ ಸಂವಾದಿಯಾಗಿದೆ. ಅವು ಸ್ತರಗಳು ಮಾತ್ರವಲ್ಲ, ವ್ಯವಸ್ಥೆಯ ಸ್ಪಷ್ಟವಾದ ಪ್ರತ್ಯೇಕ ವಿಧಗಳು. ಮೂರು ತೀವ್ರವಾದ ಏರುವಿಕೆಯ ಕ್ರಮಗಳನ್ನುಳ್ಳ ಜಟಿಲತೆಯಿಂದ ಕೂಡಿದವು. ಪ್ರತಿಯೊಂದರಲ್ಲೂ ಕೆಳಗಿನ ಮಟ್ಟದವು ಸೇರಿಯೇ ಇವೆ. ಪ್ರಾಣಕ್ಕೆ ಸಂಬಂಧಿಸಿದ ವ್ಯವಸ್ಥೆಯು ಭೌತಿಕ ವ್ಯವಸ್ಥೆಗಿಂತ ಹೆಚ್ಚು ಜಟಿಲವಾದದ್ದು. ಅದು ಭೌತಿಕ ವ್ಯವಸ್ಥೆಯ ಸ್ಥಾನದಲ್ಲಿ ಬರುವುದಿಲ್ಲ. ಆದರೆ ಅದನ್ನೂ ಒಳಗೊಳ್ಳುತ್ತದೆ. ಪ್ರಾಣಕ್ಕೆ ಸಂಬಂಧಿಸಿದ ವ್ಯವಸ್ಥೆಯಲ್ಲಿ ಇದು ಪೂರ್ಣವಾಗಿ ಸೇರಿಕೊಂಡಿದೆ. ಸಾಮಾಜಿಕ ವ್ಯವಸ್ಥೆಯು ಈ ಎರಡೂ ವ್ಯವಸ್ಥೆಗಳ ಜಟಿಲತೆಗಳನ್ನು ಉಳಿಸಿಕೊಂಡು ಎರಡನ್ನೂ ಒಟ್ಟು ಮಾಡುವುದರ ಜೊತೆಗೆ ತನ್ನದೇ ಆದ ಇನ್ನೂ ಹೆಚ್ಚಿನ ಜಟಿಲತೆಗಳನ್ನು ಸೇರಿಸುತ್ತದೆ.*

ಮಾನವನ ನಿತ್ಯ, ದಿವ್ಯ, ಅಮರ ಆಯಾಮದ ಅರಿವಿಗೆ ಮನಸ್ಸಿನ ಅಪರಿಶುದ್ಧತೆಗಳು ಅಡ್ಡಿಯಾಗಿ ನಿಲ್ಲುತ್ತವೆ. ಈ ಕಲ್ಮಶಗಳು ಅಹಂನಲ್ಲಿ, ಅದು ರಾಗದ್ವೇಷಗಳಲ್ಲಿ, ಅದು ಜೈವಿಕ

ವ್ಯವಸ್ಥೆಗೆ ಅಂಟಿಕೊಂಡಿರುವುದರಲ್ಲಿ ಕೇಂದ್ರೀಕೃತವಾಗಿದೆ. ವೈಜ್ಞಾನಿಕ ಜ್ಞಾನವನ್ನು ನೀಡುವ ಹೊರ ಜಗತ್ತಿನಲ್ಲಾಗಲಿ, ಆಧ್ಯಾತ್ಮಿಕ ಅನುಭವವನ್ನು ನೀಡುವ ಒಳಜಗತ್ತಿನಲ್ಲಾಗಲಿ ಸತ್ಯದ ಅನ್ವೇಷಣೆಗೆ ಅಗತ್ಯವಾದದ್ದು ಈ ಕಲ್ಮಶಗಳ ನಿವಾರಣೆ. ಅದು ಮಾತ್ರವೇ ಹೊರಗಿನ ಅಥವಾ ಒಳಗಿನ ಆಳಗಳಿಗೆ ಪ್ರವೇಶಿಸುವ ಶಕ್ತಿಯನ್ನು ಮನಸ್ಸಿಗೆ ನೀಡುತ್ತದೆ. ಗೀತೆಯಲ್ಲಿ (VIII. 27.28) ಕೃಷ್ಣನು ಅರ್ಜುನನಿಗೆ ಹೇಳುವ ವೈಜ್ಞಾನಿಕ ಮನೋಭಾವ ಇದೇ. ಇದನ್ನೇ ಶಂಕರಾಚಾರ್ಯರು ಆ ಶ್ಲೋಕಗಳ ಮೇಲಿನ ವ್ಯಾಖ್ಯಾನದಲ್ಲಿ ವಿಸ್ತರಿಸಿ ಸ್ಪಷ್ಟಪಡಿಸಿರುವುದು.

ಇಚ್ಛಾದ್ವೇಷ ಸಮುತ್ಥೇನ
ದ್ವಂದ್ವ ಮೋಹೇನ ಭಾರತ ;
ಸರ್ವ ಭೂತಾನಿ ಸಮ್ಮೋಹಮ್
ಸರ್ಗೇ ಯಾಂತಿ ಪರಂತಪ—

*ಇಚ್ಛೆ, ದ್ವೇಷ ಇವುಗಳಿಂದ ಹುಟ್ಟುವ ದ್ವಂದ್ವ ಮೋಹಗಳಿಂದ, ಓ ಭಾರತ, ಎಲ್ಲ ಜೀವಿಗಳೂ ಜನ್ಮ ಕಾಲದಲ್ಲಿ ಆಳವಾದ ಮೋಹದಲ್ಲಿ ಮುಳುಗುತ್ತಾರೆ.*

ಯೇಷಾಂ ತ್ವಂತಗತಂ ಪಾಪಂ
ಜನಾನಾಂ ಪುಣ್ಯಕರ್ಮಣಾಂ ;
ತೇ ದ್ವಂದ್ವ ಮೋಹ ನಿರ್ಮುಕ್ತಾ:
ಭಜಂತೇ ಮಾಂ ದೃಢವ್ರತಾ:—

*ಯಾರ ಪಾಪಗಳು ನಾಶವಾಗಿವೆಯೋ ಅಂತಹ ಪುಣ್ಯ ಕರ್ಮಗಳನ್ನು ಮಾಡುವವರು ದ್ವಂದ್ವ ಮೋಹಗಳಿಂದ ಪಾರಾಗಿ ದೃಢವ್ರತರಾಗಿ ನನ್ನನ್ನು ಪೂಜಿಸುತ್ತಾರೆ.*

ಮೊದಲನೆಯ ಶ್ಲೋಕದ ಮೇಲೆ ವ್ಯಾಖ್ಯಾನ ಮಾಡುತ್ತಾ ಶಂಕರಾಚಾರ್ಯರು ಹೇಳುತ್ತಾರೆ :

*ರಾಗದ್ವೇಷಗಳ ದಾಸ್ಯದಲ್ಲಿರುವವರ ಮನಸ್ಸಿನಲ್ಲಿ ವಸ್ತುಗಳು ಇರುವಂತೆ ಇರುವ ಜ್ಞಾನವು ಉದಯಿಸುವುದಿಲ್ಲ ಎಂಬುದು ಎಲ್ಲರಿಗೂ ಚೆನ್ನಾಗಿಯೇ ಗೊತ್ತಿದೆ. ಹೀಗಿರುವಾಗ ಅನೇಕ ಅಡೆತಡೆಗಳಿಂದ ಕೂಡಿದ ಅಂತರಂಗದ ಆತ್ಮ ಜ್ಞಾನವು, ಅಂತಹ ರಾಗದ್ವೇಷಗಳಿಗೆ ದಾಸರಾಗಿರುವವರಿಗೆ, ಪರಿಣಾಮವಾಗಿ ಮೋಹದಲ್ಲಿ ಮುಳುಗಿಹೋಗಿರುವವರಿಗೆ, ದೊರೆಯದೇ ಇರುವುದರಲ್ಲಿ ಆಶ್ಚರ್ಯವೇನಿದೆ? ಆದುದರಿಂದ ಈ ದ್ವಂದ್ವಗಳ ಮೋಹದಿಂದ ಬುದ್ಧಿಯು ಮುಚ್ಚಿಹೋಗಿ, ಭ್ರಾಂತರಾಗಿರುವವರಿಗೆ ಅವರ ಆತ್ಮ ವೇ ಆದ ನನ್ನ ವಿಷಯದಲ್ಲಿ ಜ್ಞಾನವು ದೊರಕುವುದಿಲ್ಲ. ಆದ್ದರಿಂದ ಅವರು ನನ್ನನ್ನು ತಮ್ಮ ದೇ ಆತ್ಮ ವೆಂದು ಪೂಜಿಸುವುದಿಲ್ಲ.*

## ೪೩. ವಿಜ್ಞಾನ–ಧರ್ಮ ಮತ್ತು ಯಕ್ಷಿಣಿ–ಪವಾಡಗಳು

ನಮ್ಮಲ್ಲಿ ಕೆಲವರು, ಅದರಲ್ಲೂ ವಿದ್ಯಾವಂತ ವರ್ಗದವರು, ಆಡಳಿತ ವರ್ಗದವರೂ ಸೇರಿದಂತೆ ಎಲ್ಲ ವಿಧವಾದ ಪವಾಡಗಳು, ಯಂತ್ರಮಂತ್ರಗಳು—ಅವ್ರೋ ಬಾಲಿಶ, ಬಂಚೆ—ಹಿಂದೆ, ಧರ್ಮ, ಯೋಗಗಳ ಹೆಸರಿನಲ್ಲಿ ಓಡುತ್ತಾರೆ. ಪ್ರಕೃತಿ ವಿಜ್ಞಾನದ ಅದ್ಭುತಗಳ ಈ ಯುಗದಲ್ಲಿ ಅಂಥ ಧಾರ್ಮಿಕ ಯಂತ್ರ, ತಂತ್ರಗಳು, ಪವಾಡಗಳು ಬಾಲಿಶವಾಗಿ ಕಾಣುತ್ತವೆ. ಯಾವ ಅಗ್ಗದ ಮಂತ್ರ ತಂತ್ರಗಳು, ಅಗ್ಗದ ಧರ್ಮ ಮತ್ತು ಯೋಗದ ಹೆಸರಿನಲ್ಲಿ ನಡೆಯುವಂತಹವು, ಅವುಗಳನ್ನು ಮಾಡುವವರು ಅವನ್ನು ರಹಸ್ಯ ಎಂದು ಕರೆಯುವಂಥವು ಪ್ರಕೃತಿ ವಿಜ್ಞಾನಗಳು ನಡೆಸುವ ಪವಾಡಗಳ ಮುಂದೆ ನಿಲ್ಲಬಲ್ಲವು ? ಪ್ರಕೃತಿ ವಿಜ್ಞಾನದ 'ಪವಾಡ'ಗಳೋ ತಾಳೆ ನೋಡಲ್ಪಟ್ಟವು. ತಾಳೆ

ನೋಡಲ್ಪಡಬಹುದಾದವು. ತೆರೆದ ಪುಸ್ತಕಗಳು, ಇತರರಿಗೆ ಹೇಳಿಕೊಡಬಹುದಾದವು. ಔಷಧ ವಿಜ್ಞಾನದ ಕ್ಷೇತ್ರದಲ್ಲೇ ತೆಗೆದುಕೊಳ್ಳಿ—ಜನಗಳ ರೋಗಗಳನ್ನು ಅದೂ ದೊಡ್ಡ ಪ್ರಮಾಣದಲ್ಲಿ ಗುಣಪಡಿಸುತ್ತಿವೆ. ಆಹಾರೋತ್ಪಾದನೆಯನ್ನು ಕೃಷಿ ವಿಜ್ಞಾನವು ಹೆಚ್ಚಿಸಿದೆ. ಮಾನವನನ್ನೂ, ವಾಹನವನ್ನೂ ಚಂದ್ರನ ಮೇಲೆ ಮಂಗಳಗ್ರಹದ ಮೇಲೆ ಇಳಿಸಿವೆ, ಮತ್ತೆ ಎರಡನ್ನೂ ಹಿಂದಕ್ಕೆ ತರಿಸಿವೆ. ಇವು 'ಪವಾಡ'ಗಳಲ್ಲವೇನು ?

ಮಹಾತ್ಮನಾದ ಬುದ್ಧನು ಧರ್ಮದ ಕ್ಷೇತ್ರದಲ್ಲಿ ಎಲ್ಲ ಪವಾಡಗಳನ್ನೂ ರಹಸ್ಯಗಳನ್ನೂ ವಜಾಮಾಡಿದ. ರಹಸ್ಯವಾದದ್ದು ಪವಿತ್ರವಾಗಿರದೇ ಹೋಗಬಹುದು. ಪವಿತ್ರವಾದದ್ದು ರಹಸ್ಯವಾಗಿರ ಬೇಕಾಗಿಲ್ಲ. ಬುದ್ಧನ ಉಪದೇಶಗಳು ಗಹನವಾಗಿದ್ದುವು. ಆದರೆ ಅವು ರಹಸ್ಯ ಸ್ವರೂಪದವಲ್ಲ. ಏಹಿ ಪಸ್ಸ, ಏಹಿ ಪಸ್ಸ ಬನ್ನಿ ನೋಡಿ, ಬನ್ನಿ ನೋಡಿ' ಎಂದು ಆತ ಸಚಿತ್ರವಾಗಿ ವಿವರಿಸಿದ. ತನ್ನ ಶಿಷ್ಯ ಆನಂದನನ್ನು ಉದ್ದೇಶಿಸಿ ಆತ ಹೇಳಿದ : 'ತಥಾಗತನಲ್ಲಿ ರಹಸ್ಯ ಎಂಬುದಿಲ್ಲ.' ರಹಸ್ಯವು ಮೂರು ವಿಷಯಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಓ ಆನಂದ : ಪೌರೋಹಿತ ಜ್ಞಾನಕ್ಕೆ, ಸುಳ್ಳು ಜ್ಞಾನಕ್ಕೆ ಮತ್ತು ವೇಶ್ಯೆಯರಿಗೆ.'

ನಮ್ಮ ಜನ ಯೋಗ ಮತ್ತು ಧರ್ಮದ ಅಗ್ಗದ, ರಹಸ್ಯ ಪವಾಡಗಳಿಂದ ವಿಮುಖರಾಗಿರುವುದು ಅತ್ಯವಶ್ಯಕ. ಇವುಗಳಲ್ಲಿ ಸಿಕ್ಕಿಹಾಕಿಕೊಂಡಿದ್ದರಿಂದ ನಮ್ಮ ಜನ ದುರ್ಬಲರಾದರು. ಮೂಢನಂಬಿಕೆಗಳಲ್ಲಿ ಮುಳುಗಿದವರಾದರು. ಶತಮಾನಗಳ ಕಾಲ ರಾಜಕೀಯ ದಾಸ್ಯದಲ್ಲಿ ನರಳಿದರು. ಈಗ ನಾವು ಇವುಗಳ ಕಡೆಗೆ ಬೆನ್ನು ತಿರುಗಿಸಿ ವಸ್ತುವಿಜ್ಞಾನದ ಅದ್ಭುತವೂ ಪ್ರಯೋಜನಕಾರಿಯೂ ಆದ ತೆರೆದ 'ಪವಾಡ'ಗಳನ್ನು ಸಾಧಿಸಲು ಪ್ರಯತ್ನಿಸಬೇಕು. ಅದರಲ್ಲೇ ನಮ್ಮ ವ್ಯಕ್ತಿಗತ ಹಾಗೂ ಸಾಮೂಹಿಕ ಶ್ರೇಯಸ್ಸು ಇರುವುದು.

ಆಧುನಿಕ ವಸ್ತುವಿಜ್ಞಾನಗಳ ಮಹಾ 'ಪವಾಡ'ಗಳಿಗೆ ಸಮವಾಗಿರುವ ಅಥವಾ ಅವನ್ನು ಮೀರಿಸುವ ಏಕೈಕ 'ಪವಾಡ' ವೆಂದರೆ ಶುದ್ಧ ಧರ್ಮದಿಂದ, ಅಧ್ಯಾತ್ಮದಿಂದ ದೊರಕುವ ಚಾರಿತ್ರ್ಯದ 'ಪವಾಡ'. ಧರ್ಮ ವಿಜ್ಞಾನವು ನಮ್ಮಲ್ಲಿ ಉತ್ಪನ್ನಮಾಡುವ ಅದ್ಭುತ ಫಲಗಳೆಂದರೆ ಪರಿಶುದ್ಧತೆ, ಪ್ರೇಮ, ಅನುಕಂಪ, ಕಾರ್ಯದಕ್ಷತೆ, ಸಮರ್ಪಣ ಮತ್ತು ಸೇವಾ ಮನೋಭಾವ. ಗಾಂಧೀಜಿಯು ದ್ವೇಷವನ್ನು ಪ್ರೇಮವಾಗಿಯೂ, ಹಿಂಸೆಯನ್ನು ಅಹಿಂಸೆಯಾಗಿಯೂ ಪರಿವರ್ತಿಸುವ ಪವಾಡಗಳನ್ನು ಮೆರೆದರು, ಹಾಗೂ ಅವನ್ನು ಇತರರಿಗೂ ಕಲಿಸಿದರು.

ಧರ್ಮ ಹಾಗೂ ಯೋಗಗಳ ಅಗ್ಗದ ಪವಾಡಗಳು ಮಾನವ ಮನಸ್ಸನ್ನು ದುರ್ಬಲಗೊಳಿಸುತ್ತವೆ. ಅವು ವಶೀಕರಣವನ್ನು (hypnosis) ಉಂಟುಮಾಡುತ್ತವೆ. ವೇದಾಂತವೂ, ಜಗತ್ತಿನ ಎಲ್ಲ ಆಧ್ಯಾತ್ಮಿಕ ಆಚಾರ್ಯರೂ ಅವನ್ನು ಮಾಡದಿರುವಂತೆ ಜನರನ್ನು ಪ್ರೋತ್ಸಾಹಿಸಿದರು. ಸ್ವಾಮಿ ವಿವೇಕಾನಂದರು ಪೂರ್ವ-ಪಶ್ಚಿಮಗಳಲ್ಲಿ ಹಾಗೆ ವಶೀಕರಣಕ್ಕೆ ಒಳಗಾದವರನ್ನು ನಿರ್ವಶೀಕರಣಗೊಳಿಸಲು (dehypnosis) ವೇದಾಂತವನ್ನು ಬೋಧಿಸಿದರು. 'ಶಕ್ತಿ, ಶಕ್ತಿ ಇದನ್ನೇ ಉಪನಿಷತ್ತುಗಳು ತಮ್ಮ ಪ್ರತಿಪುಟದಲ್ಲೂ ನನಗೆ ಬೋಧಿಸಿದ್ದು' ಎಂದು ಅವರು ಘೋಷಿಸಿದರು. ಜನರು ಮೌಢ್ಯ ಮೂರ್ಖರಾಗಿರುವುದಕ್ಕಿಂತ ನಾಸ್ತಿಕರೂ ಅಜ್ಞೇಯತಾವಾದಿಗಳೂ ಆಗುವುದು ಲೇಸು ಎಂದು ಅವರು ಹೇಳಿದರು. ಏಕೆಂದರೆ, ನಾಸ್ತಿಕರಿಗೂ ಅಜ್ಞೇಯತಾವಾದಿಗಳಿಗೂ ಬಿಡುಗಡೆಯನ್ನು ಪಡೆಯುವ ಅವಕಾಶವಿದೆ. ಆದರೆ ಮೂಢನಂಬಿಕೆಗಳಿಂದ ದುರ್ಬಲರಾದವರಿಗೆ ಆ ಅವಕಾಶವಿಲ್ಲ. ಆದ್ದರಿಂದಲೇ ಶ್ರೀಕೃಷ್ಣನು ಗೀತೆಯಲ್ಲಿ ಬುದ್ಧಿಯೋಗವನ್ನು ಬೋಧಿಸಿದ್ದು. ಅದು ಬದುಕಿನಲ್ಲಿ ಎಂದೂ ಕೈಬಿಡದ ವಿಚಾರದ ಯೋಗ.

ವೇದಾಂತವು ಧರ್ಮವಿಜ್ಞಾನಕ್ಕೆ ಸುಲಭವಾಗಿ ಅರ್ಥವಾಗುವ ಪಾರಿಭಾಷಿಕ ಶಬ್ದಗಳ, ಕಲ್ಪನೆಗಳ

ಅಂತರರಾಷ್ಟ್ರೀಯ ಚೌಕಟ್ಟನ್ನು ಒದಗಿಸಿದೆ. ಅವು ಜಗತ್ತಿನ ವಿವಿಧ ಧರ್ಮಗಳಿಗೆ ತಮ್ಮನ್ನು ತಾವು ಅರ್ಥಮಾಡಿಕೊಳ್ಳಲು, ಪರಸ್ಪರರನ್ನು ಅರ್ಥಮಾಡಿಕೊಂಡು ಸ್ವಾಗತಿಸಲು, ವಸ್ತುವಿಜ್ಞಾನಗಳನ್ನು ಅರ್ಥಮಾಡಿಕೊಂಡು ಮೆಚ್ಚಲು ನೆರವು ನೀಡುತ್ತವೆ. ಆಧುನಿಕ ವಸ್ತುವಿಜ್ಞಾನವು ಇತರ ಎಲ್ಲ ವಸ್ತುವಿಜ್ಞಾನಗಳ ವಿಷಯದಲ್ಲೂ ಮಾಡಿರುವ ಸೇವೆ ಇದೇ. ಹೀಗೆ ಎರಡೂ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬರೆದರೂ ಜ್ಞಾನಕ್ಕೂ, ಜೀವನ ಸಾಫಲ್ಯಕ್ಕೂ ಮಾನವರು ನೀಡಿರುವ ಕೊಡುಗೆಗಳಾಗಿವೆ. ಗೀತೆಯಲ್ಲಿ ಶ್ರೀಕೃಷ್ಣನು ಪ್ರಕೃತಿಯ ಹೊರಗನ್ನು ಅಪರಾ ಪ್ರಕೃತಿಯೆಂದೂ (ಸಾಮಾನ್ಯ ಪ್ರಕೃತಿ) ಪ್ರಕೃತಿಯ ಒಳಗನ್ನು ಪರಾ ಪ್ರಕೃತಿ ಅಥವಾ ಉನ್ನತತರ ಪ್ರಕೃತಿ ಎಂದೂ, ಅವೆರಡೂ ದಿವ್ಯ ಪ್ರಕೃತಿಯ ಎರಡು ಮುಖಗಳೆಂದೂ ಹೇಳಿದ್ದಾನೆ. (VII 5) :

ಅಪರೇಯಮಿತಸ್ತ್ವನ್ಯಾಂ
ಪ್ರಕೃತಿಂ ವಿದ್ಧಿ ಮೇ ಪರಾಂ ;
ಜೀವಭೂತಾಂ ಮಹಾಬಾಹೋ
ಯ ಯೇದಂ ಧಾರ್ಯತೇ ಜಗತ್—

*ಇದು(ನನ್ನ) ಸಾಮಾನ್ಯ ಪ್ರಕೃತಿ; ಆದರೆ ಇದಲ್ಲದೆ ಇರುವ ನನ್ನ ಉನ್ನತತರ ಪ್ರಕೃತಿಯನ್ನೂ ತಿಳಿದುಕೋ. ಅದು ಚೈತನ್ಯಾತ್ಮಕವಾದದ್ದು. ಅದರಿಂದಲೇ ಇಡೀ ವಿಶ್ವವು ಪೋಷಿತವಾಗಿದೆ.*

ಶ್ರೀಕೃಷ್ಣನ ಈ ಶ್ಲೋಕದ ಮೇಲೆ ಭಾಷ್ಯ ಬರೆಯುತ್ತಾ ಮುಂದಿನ ಆರನೆಯ ಶ್ಲೋಕದ ಮೇಲಿನ ಭಾಷ್ಯದಲ್ಲಿ ಶಂಕರಾಚಾರ್ಯರು ಹೇಳುತ್ತಾರೆ :

ಪ್ರಕೃತಿ-ದ್ವಯ-ದ್ವಾರೇಣ ಅಹಮ್
ಸರ್ವಜ್ಞಾ ಈಶ್ವರೋ ಜಗತಃ ಕಾರಣಮ್—

*ಈ ಎರಡು ವಿಧದ ಪ್ರಕೃತಿಯ ಮೂಲಕ ನಾನು, ಸರ್ವಜ್ಞನಾದವನು (ಶುದ್ಧ ಚೈತನ್ಯ ಸ್ವರೂಪಿಯಾಗಿರುವುದರಿಂದ) ಈ ವಿಶ್ವದ ಸೃಷ್ಟಿಗೆ ಕಾರಣನಾಗಿದ್ದೇನೆ.*

ಈ ಎರಡರ—ಎಂದರೆ ಧರ್ಮ, ಅಂದರೆ ಪ್ರಕೃತಿಯ ಒಳಗನ್ನು ವೈಜ್ಞಾನಿಕವಾಗಿ ನೋಡುವುದು. ಮತ್ತು ಆಧುನಿಕ ವಿಜ್ಞಾನ ಅಂದರೆ ಪ್ರಕೃತಿಯ ಹೊರಗನ್ನು ವೈಜ್ಞಾನಿಕವಾಗಿ ನೋಡುವುದು ಇವೆರಡರ ಕೂಡುವಿಕೆ ಇಂದು ಸಮಸ್ತ ಮಾನವತೆಗೆ ಸಮಗ್ರಶಿಕ್ಷಣದ ಸಾಫಲ್ಯವಾಗುತ್ತದೆ. ತನ್ನ Auto biographyಯಲ್ಲಿ ಇದೇ ನಂಬಿಕೆಯನ್ನು ಪ್ರತಿಧ್ವನಿಸುತ್ತಾ ಖಗೋಳ ಭೌತವಿಜ್ಞಾನಿ R.A. Millikan ಹೀಗೆ ಹೇಳುತ್ತಾನೆ :

*ಸಮಸ್ತ ಮಾನವ ಕಲ್ಯಾಣ ಮತ್ತು ಮಾನವ ಪ್ರಗತಿಗಳನ್ನು ಹೊತ್ತಿರುವ ಎರಡು ದೊಡ್ಡ ಆಧಾರಸ್ತಂಭಗಳೆಂದರೆ, ನನಗೆ ತಿಳಿದಂತೆ, ಮೊದಲನೆಯದು ಧರ್ಮದೃಷ್ಟಿ, ಎರಡನೆಯದು, ವಿಜ್ಞಾನ ದೃಷ್ಟಿ. ಮತ್ತೊಂದರ ನೆರವನ್ನು ಪಡೆಯದೆ ಇವೆರಡರಲ್ಲಿ ಯಾವುದೂ ವಿಶೇಷವಾಗಿ ಪರಿಣಾಮ ಬೀರಲಾರದು. ಎರಡನೆಯದರ ಅಭಿವೃದ್ಧಿಗಾಗಿ ವಿಶ್ವವಿದ್ಯಾನಿಲಯಗಳಿವೆ, ಸಂಶೋಧನ ಸಂಸ್ಥೆಗಳಿವೆ. ಆದರೆ ಯಾವುದೇ ವಿನಾಯಿತಿಯಿಲ್ಲದೆ ಪ್ರತಿಯೊಬ್ಬರಿಗೂ ಪರಮಾವಕಾಶವಿರುವುದು ಮೊದಲಯನೆದರಲ್ಲೇ.*

## ೪೩. ವಿಚಾರವಾದ ಮತ್ತು ವಿಚಾರದ ಪ್ರಗತಿ

ಪ್ರಕೃತಿ ವಿಜ್ಞಾನ ಮತ್ತು ಸಿದ್ಧಾಂತ–ಬದ್ಧ ಧರ್ಮ ಈ ಎರಡರ ಇತಿಮಿತಿಗಳನ್ನು ಈ ಹಿಂದೆಯೇ ನಾನು ಚರ್ಚಿಸಿದ್ದೇನೆ. ವಿವೇಕಾನಂದ ಸ್ವಾಮಿಗಳು ಧರ್ಮವನ್ನು ವಿಚಾರದ ಪರೀಕ್ಷೆಗೆ ಒಡ್ಡಬೇಕು

ಎಂದು ಬಲವಾಗಿ ವಾದಿಸಿದರು ಎಂದೂ ಹೇಳಿದ್ದೇನೆ. ಹತ್ತೊಂಬತ್ತನೆಯ ಶತಮಾನದ ವಿಜ್ಞಾನವು ಐಹಿಕವಾದವನ್ನು ಪ್ರೋತ್ಸಾಹಿಸುತ್ತದೆ ಎಂಬ ಚಿತ್ರ ದೊರೆತ ಮೇಲೆ ಧರ್ಮದ ಮೇಲೆ ವಿಜ್ಞಾನವು ಮಾತ್ರವಲ್ಲದೆ ವಿಚಾರವಾದವೆಂಬ ಒಂದು ತತ್ತ್ವ ಹಾಗೂ ಚಳುವಳಿಯೂ ಆಕ್ರಮಣ ನಡೆಸಲು ತೊಡಗಿತು. ವಿಚಾರವಾದವು ಸ್ಪಷ್ಟವಾಗಿ ವಿಚಾರಮಾಡಲು ಪ್ರೋತ್ಸಾಹ ನೀಡಿ ಒಳ್ಳೆಯ ಕೆಲಸಮಾಡಿದೆ ಹೌದು. ಆದರೆ ಯುದ್ಧಾನಂತರದ ವಿಚಾರವಾದಿಗಳೂ ವಿಚಾರವಾದವೂ ಒಂದು ಬಗೆಯಲ್ಲಿ ಅಸಂಗತ ಎನ್ನಬೇಕು. ಏಕೆಂದರೆ ವಸ್ತುವಿಜ್ಞಾನವು ಕಳೆದ ಶತಮಾನದಲ್ಲಿ ಇದ್ದ ಸ್ಥಿತಿಯಲ್ಲೇ ಈಗಲೂ ಇಲ್ಲದಿದ್ದರೂ, ವಿಚಾರವಾದಿಗಳಾದರೋ ಆ ಹಳೆಯ ವಿಜ್ಞಾನದ ಮೇಲೆ ಆಣೆಯಿಟ್ಟೇ ಮಾತನಾಡುತ್ತಿದ್ದಾರೆ. ಇಪ್ಪತ್ತನೆಯ ಶತಮಾನದ ವಿಜ್ಞಾನಕ್ಕೆ ಇರುವ ವಿನಯವು ವಿಚಾರವಾದದ ಕೋಟೆಯ ಮೇಲೆ ಇನ್ನೂ ಲಗ್ಗೆ ಹೂಡಬೇಕಾಗಿದೆ. ವಿಚಾರವಾದವು ಒಂದು ಕಡೆ ಧರ್ಮ ಇನ್ನೊಂದು ಕಡೆ ಮೌಢ್ಯ ಮತ್ತು ಅಂಧಶ್ರದ್ಧೆ ಇವುಗಳ ನಡುವೆ ಇರುವ ವ್ಯತ್ಯಾಸವನ್ನು ಅರಿತಾಗ ಆ ಆಕ್ರಮಣ ಸಫಲವಾಗುತ್ತದೆ. ಆದರೆ ಇಂದು ಎಲ್ಲ ಧರ್ಮದ ವಿರುದ್ಧ ಅದು ನಡೆಸುತ್ತಿರುವ ಹೋರಾಟ, ಆ ವ್ಯತ್ಯಾಸದ ಅರಿವಿಲ್ಲದೇ ಇರುವುದರಿಂದ ವಿಚಾರವಾದವೇ ಅವಿಚಾರವಾದ ಎನ್ನುವಂತಾಗಿದೆ. ಅದು ತಾನು ವ್ಯವಹರಿಸುತ್ತಿರುವ ವಿಚಾರದ ಇತಿಮಿತಿಗಳನ್ನು ಅರಿತಾಗ ಮತ್ತು ವಿಚಾರವಾದದ ಮುನ್ನಡೆಯ ಸತ್ಯವನ್ನು ಗುರುತಿಸಿದಾಗ ತನ್ನ ಅವಿಚಾರವಾದವನ್ನು, ಇತಿಮಿತಿಗಳನ್ನು ಮೀರಲು ಸಮರ್ಥವಾಗುತ್ತದೆ. ಆಗಲೀಗ ಅದಕ್ಕೆ ಮೌಢ್ಯ ಮತ್ತು ಅಂಧಶ್ರದ್ಧೆಯ ವಿರುದ್ಧ ತನ್ನ ಹೋರಾಟದಲ್ಲಿ ಧರ್ಮದ ಎಲ್ಲ ಶಕ್ತಿಗಳೂ ತನ್ನ ಪಕ್ಷದಲ್ಲಿರುವುದು ತಿಳಿಯುತ್ತದೆ.

ತರ್ಕ ಮತ್ತು ವೈಜ್ಞಾನಿಕ ವಿಧಾನಗಳ ಉಪಕರಣವಾದ ತಾರ್ಕಿಕ ವಿಚಾರ ಎನ್ನುವುದರ ವ್ಯಾಪ್ತಿ ಪರಿಮಿತವಾದದ್ದು, ಬಾಹ್ಯ ವಿಶ್ವದ ರಹಸ್ಯ ಸ್ವರೂಪದಿಂದ ಅದು ದಿಗ್ಭ್ರಾಂತವಾಗಿದೆ ಎಂಬ ಹೇಳಿಕೆಯ ಅರ್ಥವೇನು ? ತಾರ್ಕಿಕ ವಿಚಾರವು ನಿರ್ಣಯವಿಹೀನವಾದದ್ದು—ಎಂದರೆ ಒಂದು ನಿರ್ಣಯವನ್ನು ತಲುಪಲಾರದ್ದು. ಬಾದರಾಯಣನ ಬ್ರಹ್ಮಸೂತ್ರದ ಒಂದು ಪ್ರಖ್ಯಾತ ಸೂತ್ರ—ತರ್ಕ ಅಪ್ರತಿಷ್ಠಾನತೆ ಎಂಬುದು. ವಿಕಾಸವು ಸೂರೆ ಚೆಲ್ಲಿರುವ ಒಂದು ಮೌಲಿಕ ಸಾಧನ ವಿಚಾರ ಎಂಬುದು—ಸಂಸ್ಕೃತಿ ಮತ್ತು ನಾಗರಿಕತೆಗಳ ಕ್ಷೇತ್ರದಲ್ಲಿ ಮಾನವನು ನಡೆಸಿರುವ ಬಹುಪಾಲು ಸಾಧನೆಯ ಮೂಲ ಇದು. ವಿಚಾರ ಎಂಬುದು ಅಸಮರ್ಪಕವಾದದ್ದು ಎಂಬುದನ್ನು ಕಂಡುಹಿಡಿದದ್ದೇ ಮಾನವನ ತಣಿಸಲಾರದ ಸತ್ಯ ಪ್ರೇಮ. ಸತ್ಯವನ್ನು ಕಂಡುಹಿಡಿಯುವುದಕ್ಕೆ ಅವನು ಮುನ್ನುಗ್ಗುವುದು ಇವುಗಳ ಫಲವಾಗಿ ದೊರೆತದ್ದು. ವಿಚಾರದ ಇತಿಮಿತಿಗಳನ್ನು ಕಂಡುಹಿಡಿದದ್ದೇ ಅವಿಚಾರ ಮತ್ತು ಕಡಮೆ ವಿಚಾರಗಳನ್ನು ಆರಿಸಿಕೊಳ್ಳುವುದಕ್ಕೆ ಕಾರಣವಾಗಬಾರದು. ಸತ್ಯವನ್ನು ಹುಡುಕಲು ಸಮರ್ಥವಾದ ಸಾಧನವನ್ನಾಗಿ ವಿಚಾರವನ್ನು ರೂಪಿಸಬೇಕು. ನಾನು ಈಗಾಗಲೇ ಚರ್ಚಿಸಿರುವಂತೆ ಬುದ್ಧಿ ಅಥವಾ ತಾತ್ವಿಕ ವಿಚಾರ ಎಂಬುದರಲ್ಲಿ ವೇದಾಂತವು ಸಾಧಿಸಿರುವುದು ಇದನ್ನೇ. ಸ್ವಾಮಿ ವಿವೇಕಾನಂದರು ಒಂದು ಸ್ಪಷ್ಟವಾದ ಹೇಳಿಕೆಯಲ್ಲಿ ಇದನ್ನು ನಿರೂಪಿಸಿದ್ದಾರೆ (C.W. Vol I. Eleventh Edition p. 155) :

*ನಾವು ಆಸ್ತಿಭಾರವನ್ನು ಕಟ್ಟಬೇಕಾದದ್ದು ವಿಚಾರದ ಮೇಲೆ. ಅದು ನಮ್ಮನ್ನು ಕೊಂಡೊಯ್ಯುವವರೆಗೂ ನಾವು ಅದನ್ನು ಹಿಂಬಾಲಿಸಬೇಕು. ವಿಚಾರವು ಸೋತಾಗ ಅತ್ಯುನ್ನತ ಸ್ಥಿತಿಗೆ ತಲುಪುವ ದಾರಿಯನ್ನು ಅದೇ ನಮಗೆ ತೋರಿಸುತ್ತದೆ.*

ವೈಜ್ಞಾನಿಕ ವಿಚಾರದ ಮಿತಿ ಇರುವುದು ಮುಖ್ಯವಾಗಿ ಅದು ಹೊರಜಗತ್ತಿನಲ್ಲಿ ಕಾಣುವ ಇಂದ್ರಿಯ ದತ್ತಾಂಶಗಳನ್ನೇ ಸಂಪೂರ್ಣವಾಗಿ ಆಶ್ರಯಿಸಿ ಅಂತರಂಗ ಜಗತ್ತನ್ನು ನೋಡುವವನ ಅಥವಾ ಅದರ ಅನುಭವವನ್ನು ಪಡೆಯುವವನನ್ನು ಉಪೇಕ್ಷಿಸಿರುವುದರಲ್ಲಿ. ಇಂದ್ರಿಯಾನುಭವದ ಕ್ಷೇತ್ರದಲ್ಲಿ ವೈಜ್ಞಾನಿಕ ವಿಚಾರವು ಸತ್ಯಾನ್ವೇಷಣೆಗೆ ಅತ್ಯಂತ ಉಪಯುಕ್ತವಾದ ಸಾಧನ. ನಿಧಾನವಾದ

ರೀತಿಯಲ್ಲಿ ಹಂತ ಹಂತವಾಗಿ ಮಾನವನು ಈ ಉಪಕರಣವನ್ನು, ಅದರ ಅತ್ಯಂತ ಮುಖ್ಯವಾದ ಸಾಧನವಾದ ಭಾಷೆ ಎಂಬುದರೊಡನೆ ಬಳಸಿಕೊಂಡಿದ್ದಾನೆ. ಬಾಹ್ಯ ಜಗತ್ತು ನಿರಂತರವಾಗಿ ಅವನಿಗೆ ಒದಗಿಸುತ್ತಿರುವ ಗೊಂದಲಮಯ ದತ್ತಾಂಶಗಳನ್ನು ನಿಷ್ಕೃಷ್ಟವಾಗಿ, ಸಮರ್ಪಕವಾಗಿ ವರ್ಗೀಕರಿಸುವುದರಲ್ಲಿ ಮೇಲಿನ ಸಾಧನಗಳು ಮಾನವನಿಗೆ ಸಹಕಾರಿಯಾಗಿವೆ. ಇಂಥ ಮಹಾನ್ ಸಾಧನೆಗಳಿರುವಾಗ ಮಾನವ, ವಿಚಾರದ ಇತಿಮಿತಿಗಳ ವಿಷಯವಾಗಿ ಯಾರು ತಾನೆ ಅಂತಿಮ ನಿರ್ಣಯವನ್ನು ನೀಡಬಲ್ಲರು ? ಮಾನವ ಇತಿಹಾಸದ ಅಲ್ಪಾವಧಿಯಲ್ಲಿ ಮಾನವ ವಿಚಾರವೇ ವಿಚಾರದ ಇತಿಮಿತಿಗಳನ್ನು ಮೀರಿರುವುದನ್ನು ನಾವು ಕಂಡಿಲ್ಲವೆ? ಆದಿಮಾನವನ ಕೈಯಲ್ಲಿ ಅನಿಶ್ಚಿತ ಉಪಕರಣವಾಗಿರುವುದರಿಂದ ಹಿಡಿದು ಇಪ್ಪತ್ತನೆಯ ಶತಮಾನದ ವಿಜ್ಞಾನಿಯ ಕೈಯಲ್ಲಿ ಸಮರ್ಥವಾದ ಉಪಕರಣವಾಗುವವರೆಗೆ ವಿಚಾರ ಎನ್ನುವುದು ಎಷ್ಟೊಂದು ದೂರ ಪ್ರಯಾಣ ಮಾಡಿದೆ ! ಆದ್ದರಿಂದ, ವಿಚಾರವು ತನ್ನ ವ್ಯಾಪ್ತಿ ಮತ್ತು ಕ್ರಿಯೆಗಳಲ್ಲಿ ಕಾಣುವ ಇತಿಮಿತಿಗಳನ್ನು ತಾನೇ ಮೀರುತ್ತದೆ ಎಂದು ನಾವು ನಿರೀಕ್ಷಿಸಬಾರದೆ ?

ಈ ಸಂದೇಹಗಳಿಗೂ, ಪ್ರಶ್ನೆಗಳಿಗೂ ವೇದಾಂತವು ನೀಡುವ ಉತ್ತರವು ಕೆಚ್ಚೆದೆಯದು, ಸ್ಪಷ್ಟವಾದುದು ಮತ್ತು ಇತ್ಯಾತ್ಮಕವಾದುದು. ಆ ಉತ್ತರದ ಹಿಂದೆ, ನಾನು ಈ ಹಿಂದೆಯೇ ತೋರಿಸಿರುವಂತೆ, ಮಾನವನಿಗೆ ತನ್ನ ಸತ್ಯ ಜ್ಞಾನಗಳ ಹುಡುಕುವಿಕೆಯಲ್ಲಿ ತೃಪ್ತಿಪಡಿಸಲಾರದ ಹಸಿವು ಇದ್ದು ಅದನ್ನು ತೃಪ್ತಿಪಡಿಸಲು ಮಾನವ ವಿಚಾರ ಮತ್ತು ಭಾಷೆಗಳನ್ನು ಆ ಹುಡುಕುವಿಕೆಯ ಸಾಧನವನ್ನಾಗಿ ಮಾಡಿಕೊಂಡ ಪ್ರಯತ್ನದ ಮಾನವ ಸಾಹಸದ ಅದ್ಭುತ ದಾಖಲೆಯಿದೆ. ಅದರ ಹಿಂದೆ, ಅದಕ್ಕಿಂತ ಸ್ವಲ್ಪ ಕಡಮೆ ಪ್ರಮಾಣದಲ್ಲಿ ಮಾನವರ ಸಂತೋಷ ಕಲ್ಯಾಣಗಳನ್ನು ಸಾಧಿಸಲು ಅವನು ನಡೆಸಿದ ಸಾಹಸದ ದಾಖಲೆಯೂ ಇದೆ. ವಿಚಾರವು ಮಾನವನಿಗಿರುವ ಅತ್ಯಮೂಲ್ಯ ಆಸ್ತಿ. ಅದನ್ನು ಅವನು ಪ್ರಕಾಶಮಾನವಾಗಿ, ಶುದ್ಧವಾಗಿ ಇಟ್ಟುಕೊಂಡಿರಬೇಕು. ಅದನ್ನು ದುರ್ಬಲಗೊಳಿಸುವ ಯಾವುದರಲ್ಲೂ ಅವನು ತೊಡಗಬಾರದು ಎಂಬುದು ವೇದಾಂತದ ಅಭಿಪ್ರಾಯ.

ವಿಚಾರದ ಮುನ್ನಡೆಯ ಸತ್ವವು ವಿಚಾರವು ಅನುಭವದೊಂದಿಗೆ, ಅನುಭವದ ಆಳಾತಿ ಆಳದ ಸ್ತರಗಳೊಡನೆ ನಡೆಸಿದ ಘರ್ಷಣೆಯಲ್ಲಿ ಕಾಣುತ್ತದೆ. ಶಾಸ್ತ್ರಾರ್ಥದ ತರ್ಕದಲ್ಲಿ ಅನುಭವಕ್ಕೆ ಬರುವ ವಿಚಾರವು ಅತ್ಯಂತ ಗಡುಸಾದ ಚೌಕಟ್ಟಿನಲ್ಲಿರುತ್ತದೆ. ಅನುಭವಕ್ಕೂ ಅದಕ್ಕೂ ಯಾವ ಸಂಬಂಧವೂ ಇಲ್ಲ. ಅದರ ಸ್ವರೂಪ ಸ್ಥಾಯಿಯಾಗಿರುವುದನ್ನು, ಅದರ ರೂಪ ಔಪಚಾರಿಕವಾಗಿರುವುದನ್ನು, ಹೊಸ ಜ್ಞಾನವನ್ನು ನೀಡಲು ಅದು ಅಸಮರ್ಥವಾಗಿರುವುದನ್ನು ಇದು ವಿವರಿಸುತ್ತದೆ. ಎಲ್ಲ ಶಾಸ್ತ್ರಾರ್ಥದ ತಾರ್ಕಿಕ ನಿಗಮನದಲ್ಲೂ ಸಿದ್ಧಾಂತವು ಪ್ರಮೇಯದ ಪುನರುಕ್ತಿಯೇ ಆಗಿರುತ್ತದೆ. ವೈಜ್ಞಾನಿಕ ವಿಧಾನದ ತರ್ಕದಲ್ಲಿ ವಿಚಾರವು ಅನುಭವದೊಂದಿಗೆ ನೇರವಾದ ಘರ್ಷಣೆಯಲ್ಲಿ ತೊಡಗುತ್ತದೆ. ಅನುಭವದ ಈ ಶಿಸ್ತು ವಿಚಾರದ ವೈಜ್ಞಾನಿಕ ಅನುಗಮನಕ್ಕೆ (induction) ಶಿಸ್ತಿನ ನಿಗಮನದ (deduction) ನೆರವಿನಿಂದ, ಹದಿನೇಳರಿಂದ ಹತ್ತೊಂಬತ್ತನೆಯ ಶತಮಾನದ ಅವಧಿಯಲ್ಲಿ ಬಾಹ್ಯ ಪ್ರಕೃತಿಯ ರಹಸ್ಯಗಳನ್ನು ಬಯಲುಗೊಳಿಸುವುದರಲ್ಲಿ ಮಹತ್ತಾದ ಯಶಸ್ಸನ್ನು ಗಳಿಸುವುದರಲ್ಲಿ ಯಶಸ್ವಿಯಾಯಿತು. ಆದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ ಭೌತಶಾಸ್ತ್ರದ ಕ್ಷೇತ್ರದಲ್ಲಿ ವೈಜ್ಞಾನಿಕ ವಿಚಾರವು ಕೂಡ ಅಭಿಜಾತ ಭೌತಶಾಸ್ತ್ರದ ಚೌಕಟ್ಟು ತನ್ನ ವಿಶಾಲ ಮನೋಭಾವಕ್ಕೆ ತುಂಬ ಗಡುಸಾಯಿತು ಎಂದು ಭಾವಿಸಿತು. ಭೌತಶಾಸ್ತ್ರಜ್ಞ ದಿವಂಗತ ಹೈಸೆನ್ ಬರ್ಗ್ ಹೀಗೆಂದಿದ್ದಾರೆ (Physics and Philosophy p. 169) :

*...ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಕೃತಿ ವಿಜ್ಞಾನವು ವಿಜ್ಞಾನವನ್ನು ಮಾತ್ರವಲ್ಲದೆ*

*ಅಸಂಖ್ಯಾತ ಜನರ ಸಾಮಾನ್ಯ ದೃಷ್ಟಿಯನ್ನೂ ಒಳಗೊಂಡಿತ್ತು. ಆ ಶತಮಾನವು ಪ್ರಕೃತಿ ವಿಜ್ಞಾನಕ್ಕೆ ಒಂದು ಗಡುಸಾದ ಚೌಕಟ್ಟನ್ನು ರಚಿಸಿತ್ತು. ಕಾಲ, ದೇಶ, ಜಡವಸ್ತು, ಕಾರಣತ್ವ ಎಂಬ ಕ್ಲಾಸಿಕಲ್ ಭೌತಶಾಸ್ತ್ರದ ಮೂಲಭೂತ ಕಲ್ಪನೆಗಳು ಈ ಚೌಕಟ್ಟನ್ನು ಎತ್ತಿ ಹಿಡಿದಿದ್ದವು. ಇಂದ್ರಿಯಗಳಿಂದ ಅಥವಾ ತಾಂತ್ರಿಕ ವಿಜ್ಞಾನವು ಒದಗಿಸಿದ್ದ ಪರಿಷ್ಕೃತ ಉಪಕರಣಗಳಿಂದ ನಾವು ಅನುಭವಕ್ಕೆ ತಂದುಕೊಳ್ಳಬಹುದಾದ ವಸ್ತುಗಳು ಅಥವಾ ಘಟನೆಗಳಿಗೆ ಮಾತ್ರ ವಾಸ್ತವತೆಯ ಕಲ್ಪನೆಯು ಅನ್ವಯವಾಗುತ್ತಿತ್ತು. ಜಡವಸ್ತು ಎಂಬುದೇ ಮೂಲ ವಾಸ್ತವತೆಯಾಗಿತ್ತು. ವಿಜ್ಞಾನದ ಪ್ರಗತಿಯೆಂದರೆ ಭೌತಜಗತ್ತಿನ ಆಕ್ರಮಣಕ್ಕಾಗಿ ನಡೆವ ಧರ್ಮಯುದ್ಧ ಎಂದು ಚಿತ್ರಿತವಾಗಿತ್ತು. ಆ ಕಾಲದ ಸೂತ್ರವಾಕ್ಯವೆಂದರೆ ಪ್ರಯೋಜನ... ಈ ಚೌಕಟ್ಟು ಎಷ್ಟು ಇಕ್ಕಟ್ಟಾದದ್ದು, ಗಡುಸಾದದ್ದು ಆಗಿತ್ತು ಎಂದರೆ ಈಗಾಗಲೇ ನಮ್ಮ ಭಾಷೆಯ ಮೂಲಸತ್ವಕ್ಕೆ ಸೇರಿಹೋಗಿದ್ದ ಕೆಲವು ಕಲ್ಪನೆಗಳನ್ನು ಉದಾಹರಣೆಗೆ, ಮನಸ್ಸಿನ ಕಲ್ಪನೆ, ಮಾನವ ಆತ್ಮದ ಕಲ್ಪನೆ ಅಥವಾ ಬದುಕಿನ ಕಲ್ಪನೆ ಇವುಗಳನ್ನು ಆ ಚೌಕಟ್ಟಿನೊಳಕ್ಕೆ ಸೇರಿಸುವುದು ಕಷ್ಟವಾಗಿತ್ತು.*

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಭೌತಜಗತ್ತಿನ ಬಗೆಗೆ ಅದರಲ್ಲೂ ವಿಶೇಷವಾಗಿ ಅಧೋ-ಪರಮಾಣು ಜಗತ್ತಿನ ವಿಷಯಕ್ಕೆ ಅನೇಕ ಹೊಸ ಸತ್ಯಾಂಶಗಳು ತಿಳಿದುಬಂದದ್ದರಿಂದ ಕ್ಲಾಸಿಕಲ್ ಭೌತಶಾಸ್ತ್ರದ ಕಟ್ಟುನಿಟ್ಟಿನ ಗಡಸುಚೌಕಟ್ಟು ಮುರಿದುಬೀಳುವುದು ಅನಿವಾರ್ಯವಾಯಿತು. ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಬೆಳೆದ ಕ್ವಾಂಟಮ್ ಮತ್ತು ಸಾಪೇಕ್ಷ ಸಿದ್ಧಾಂತಗಳು ಈ ವಿಧಾನವನ್ನು ಚುರುಕುಗೊಳಿಸಿ ಹಳೆಯ ಚೌಕಟ್ಟು ಸಂಪೂರ್ಣವಾಗಿ ಅರಕ್ಷಣೀಯವಾದದ್ದು ಎಂದು ಮಾಡಿದುವು. ಈ ಬದಲಾವಣೆಯ ಅತ್ಯಂತ ಕ್ರಾಂತಿಕಾರಕ ಮುಖವು ಯಾವುದೆಂದರೆ ವಸ್ತುನಿಷ್ಠ ಜಗತ್ತು ಎಂದು ಕರೆಸಿಕೊಳ್ಳುತ್ತಿದ್ದುದರ ಸಂಪೂರ್ಣವಾದ ವಸ್ತುನಿಷ್ಠತೆಯ ನಿರಾಕರಣೆ ಮತ್ತು ವಾಸ್ತವಿಕತೆಯ ಕಲ್ಪನೆಯ ಬಗೆಗೆ ತತ್ಪರಿಣಾಮವಾಗಿ ಅದು ಪಡೆದ ಬದಲಾವಣೆ. ಕ್ವಾಂಟಮ್ ಸಿದ್ಧಾಂತದ ಪ್ರಾಮುಖ್ಯತೆಯನ್ನು ಕುರಿತು ಹೈಸನ್‌ಬರ್ಗ್ ಹೇಳುತ್ತಾರೆ (ಅಲ್ಲೇ ಪುಟ 33) :

*ವಾಸ್ತವತೆಯ ಕಲ್ಪನೆಯನ್ನು ಕುರಿತು ಅತ್ಯಂತ ಮೂಲಭೂತವಾದ ಬದಲಾವಣೆಗಳಾಗಿರುವುದು ಕ್ವಾಂಟಮ್ ಸಿದ್ಧಾಂತದಲ್ಲಿ. ಕ್ವಾಂಟಮ್ ಸಿದ್ಧಾಂತವು ಅಂತಿಮವಾಗಿ ತಳೆದ ರೂಪದಲ್ಲಿ ಪರಮಾಣು ಭೌತಶಾಸ್ತ್ರದ ಹೊಸ ಭಾವನೆಗಳು ಕೇಂದ್ರೀಕರಣಗೊಂಡು ನಿರ್ದಿಷ್ಟರೂಪವನ್ನು ತಾಳಿವೆ... ಆದರೆ ಕ್ವಾಂಟಮ್ ಸಿದ್ಧಾಂತದಲ್ಲಿ ಅಭಿವ್ಯಕ್ತಗೊಂಡ ವಾಸ್ತವಿಕತೆಯ ಕಲ್ಪನೆಯಲ್ಲಾದ ಬದಲಾವಣೆಯು ಗತದ ಮುಂದುವರಿಕೆ ಮಾತ್ರವಲ್ಲ, ಆಧುನಿಕ ವಿಜ್ಞಾನದ ರಚನೆಯಲ್ಲಿ ನಿಜಕ್ಕೂ ಪ್ರಗತಿಪರವಾದ ಹೊಸ ತಿರುವು ಇದು ಎಂದು ತೋರುತ್ತದೆ.*

ಈ ಇತ್ತೀಚಿನ ಬೆಳವಣಿಗೆಯಲ್ಲಿ ವಿಚಾರಕ್ಕೆ ಅನುಭವದ ಮೌಲ್ಯಮಾಪನವೂ, ಪಶ್ಚಿಮದ ವೈಜ್ಞಾನಿಕ, ಧಾರ್ಮಿಕ ಅಥವಾ ತಾತ್ವಿಕ ಚಿಂತನೆಯಲ್ಲಿ ಹಿಂದೆಂದೂ ಲಭಿಸದ ಸ್ವ-ವಿಮರ್ಶೆಯೂ ಪ್ರಾಪ್ತವಾಗಿವೆ. ಸಾಂಪ್ರದಾಯಿಕ ತರ್ಕವಾಗಲಿ ವಿಚಾರವಾದಿಗಳೂ, ಅವರ ವಿಚಾರವಾದವು ಬಳಸುವ ತರ್ಕವಾಗಲಿ ಇಂದ್ರಿಯಗಳಾಚೆ ಇರುವ ಮೌಲ್ಯಗಳನ್ನು ಮಾಪನಮಾಡುವ ಸಾಮರ್ಥ್ಯವನ್ನು ಹೊಂದಿಲ್ಲ. ಏಕೆಂದರೆ, ನಿಗೂಢ ಮನಶ್ಶಾಸ್ತ್ರವು ತೋರಿಸಿರುವಂತೆ ಆ ವಿಚಾರ ಎಂಬುದು ಅಪ್ರಜ್ಞೆ ಮತ್ತು ಅವಪ್ರಜ್ಞೆಗಳ ಕೈಯಲ್ಲಿ ಸಿಕ್ಕಿ ಪಲಾಯನವಾದಿಯಾಗಿದೆ. ಅವುಗಳ ಇತಿಮಿತಿಗೆ ಕಾರಣ ಸರ್ ಜೇಮ್ಸ್ ಜೀನ್ಸ್ ಹೇಳಿದಂತೆ ಅವುಗಳ 'ಶುದ್ಧ ಮಾನವ ದೃಷ್ಟಿಯ ನೋಟ'. ವೇದಾಂತವು ಅದೇ ಭಾವನೆಯನ್ನು ಹೀಗೆ ಹೇಳುತ್ತದೆ : ಅವು ಎಚ್ಚರ ಅಥವಾ ಜಾಗೃತ್ ಸ್ಥಿತಿಯು ನೀಡುವ ದತ್ತಾಂಶಗಳಿಗೆ ತಮ್ಮನ್ನು ತಾವು ಸೀಮಿತಗೊಳಿಸಿಕೊಂಡಿರುವುದೇ ಅವುಗಳ ಇತಿಮಿತಿಗೆ ಕಾರಣ.

ಕ್ವಾಂಟಮ್ ಮತ್ತು ಸಾಪೇಕ್ಷ ಭೌತವಿಜ್ಞಾನದಲ್ಲೂ, ಇಪ್ಪತ್ತನೆಯ ಶತಮಾನದ ಸಸ್ಯಶಾಸ್ತ್ರ ಮತ್ತು ಫ್ರಾಯ್ಡ್‌ನ ಮನಶ್ಶಾಸ್ತ್ರ ಮುಂತಾದ ಇತರ ವಿಜ್ಞಾನ ಶಾಖೆಗಳಲ್ಲೂ ವಿಚಾರವು ಇಂದ್ರಿಯಗಳ ದತ್ತಾಂಶ ಮತ್ತು ಅಹಂನಿಂದ ಕೂಡಿದ ಎಚ್ಚರದ ಸ್ಥಿತಿಯ ಪೆಡಸು ಚೌಕಟ್ಟನ್ನೂ, ಅದರ ಕೃತಕ ತರ್ಕಜನ್ಯ ಕಲ್ಪನೆಗಳನ್ನೂ, ದೃಗ್ ದೃಶ್ಯಗಳ ವಿಷಯದಲ್ಲಿ ಅದಕ್ಕಿರುವ ಸೀಮಿತ ಭಾವನೆಗಳನ್ನೂ ಸತ್ಯದ ಮಾನದಂಡವು ಗೋಚರಾನುಭವವೇ ಎಂಬ ಕಲ್ಪನೆಯನ್ನೂ, ನಕಲು, ಪರಸ್ಪರ ಹೋಲಿಕೆ ಮತ್ತು ಸುಸಂಬದ್ಧತೆ ಇತ್ಯಾದಿಗಳೇ ಸತ್ಯಕ್ಕೆ ಮಾನದಂಡ ಎಂಬ ಭಾವನೆಯನ್ನೂ ಭೇದಿಸಿದೆ. ಹೀಗೆ ವಿಚಾರವು ಅದರ ಇಂದ್ರಿಯಬದ್ಧ ಮಿತಿಯಿಂದ ಅಥವಾ ವೇದಾಂತದ ಪರಿಭಾಷೆಯನ್ನು ಬಳಸುವುದಾದರೆ ಅದರ ಎಚ್ಚರ-ಸ್ಥಿತಿಯ ಮಿತಿಯಿಂದ ಪಾರಾಗಿದೆ, ಮತ್ತು ಮಾನವನಲ್ಲಿಯೂ ಪ್ರಕೃತಿಯಲ್ಲಿಯೂ ಇರುವ ತಿಳಿಯದ ಅಂಶದ ರಹಸ್ಯವನ್ನು ಭೇದಿಸುವ ಹೆದ್ದಾರಿಯಲ್ಲಿದೆ. ಹಾಗೆ ಮಾಡಲು ಸಾಧ್ಯವಾಗಿರುವುದು, ವೇದಾಂತದ ಪರಿಭಾಷೆಯಲಿ, ಎಚ್ಚರದ ಮತ್ತು ನಿದ್ರೆಯ ಸ್ಥಿತಿಗಳನ್ನು, ಅವುಗಳ ಪರಸ್ಪರ ಸಂಬಂಧಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡುವುದರಿಂದ.

ಇಪ್ಪತ್ತನೆಯ ಶತಮಾನದ ಭೌತಶಾಸ್ತ್ರದಲ್ಲಿ ವಿಚಾರಕ್ಕೆ ಸವಾಲಾಗಿರುವುದು, ಕಾಲ ದೇಶಗಳಲ್ಲಿರುವ ಸ್ಥಾವರ ವಸ್ತುಗಳಲ್ಲ (ದೃಶ್ಯಗಳಲ್ಲ), ಆದರೆ ಕಾಲ-ದೇಶಗಳ ಅಖಂಡ ಪ್ರವಾಹದಲ್ಲಿರುವ ಚಲನಶೀಲ ಘಟನೆಗಳು. ಆ ಘಟನೆಗಳಲ್ಲಿ ಎಚ್ಚರದ ಸ್ಥಿತಿಯ ಎಲ್ಲ ಜ್ಞಾತೃಜ್ಞೇಯಗಳೂ ಆ ಕಾಲ-ದೇಶಗಳ ಕ್ಷಣಿಕ ರೂಪಗಳಾಗುತ್ತವೆ. ಅನುಭವದ ಈ ಆಯಾಮವೇ ಸ್ವಪ್ನಾವಸ್ಥೆಯಲ್ಲಿಯೂ ಕಾಣಿಸಿಕೊಳ್ಳುತ್ತದೆ ಎಂಬುದು ಗಮನಾರ್ಹ. ಜ್ಞಾತೃ ಅಥವಾ ನೋಡುವವನು ಜ್ಞೇಯ ಜಗತ್ತನ್ನು ಕುರಿತ ತನ್ನ ಜ್ಞಾನವನ್ನು ಪ್ರವೇಶಿಸುತ್ತಾನೆ ಎಂಬುದನ್ನು ವಿಜ್ಞಾನವು ಕಂಡುಕೊಂಡರೆ ಶುದ್ಧ ಜ್ಞೇಯ ಎಂಬುದು ಎಲ್ಲೂ ಇಲ್ಲ ಎಂದಾದರೆ—ಅಣು ಭೌತಶಾಸ್ತ್ರದಲ್ಲಿ ಇರುವ ಸ್ಥಿತಿ ಇದೇ—ಎಲ್ಲ ಘಟನೆಗಳ ಹಿಂದಿರುವ ಸತ್ಯವನ್ನು ಶೋಧಿಸುವ ದೃಷ್ಟಿಯಿಂದ ಜ್ಞೇಯದ ಅಥವಾ ನೋಡುವವನ ಅನನ್ಯವಾದ ದತ್ತಾಂಶಗಳನ್ನು ಹುಡುಕುವುದಕ್ಕೆ ಪ್ರವೇಶಿಸುವುದು ವಿಜ್ಞಾನದ ಸತ್ಯಾನ್ವೇಷಕ ಪ್ರವೃತ್ತಿಗೆ ಅನುಗುಣವಾಗಿಯೇ ಇರುತ್ತದೆ. ಶೋಧನೆಯ ಕ್ಷೇತ್ರವು ಹೀಗೆ ವಿಶಾಲ ವಾದಂತೆ ವಿಚಾರವು ಹರಿತವಾಗುವುದೂ ಅಗತ್ಯವಾಗುತ್ತದೆ. ಕಾರಣ ಸತ್ಯದ ಸೂಕ್ಷ್ಮಾತಿಸೂಕ್ಷ್ಮ ಆಯಾಮವನ್ನು ಶೋಧಿಸಲು ವಿಚಾರವೂ ಸೂಕ್ಷ್ಮಾತಿಸೂಕ್ಷ್ಮವೂ ಸ್ಪಷ್ಟಾತಿಸ್ಪಷ್ಟವೂ ಆಗುವುದು ಆವಶ್ಯಕವಾದುದು. ಇದು ಸಾಧ್ಯವಾಗುವುದು ಹೆಚ್ಚು ಹೆಚ್ಚಾಗಿ ಬುದ್ಧಿಯು ನಿಸ್ಸಂಗತ್ಯವನ್ನು ಸಾಧಿಸುವುದರಿಂದ, ವ್ಯಕ್ತಿಯು, ವೇದಾಂತದ ಪ್ರಕಾರ, ಪ್ರಕೃತಿಯ ದಾಸ್ಯದಿಂದ ಬಿಡುಗಡೆ ಹೊಂದಿ ನೈತಿಕ ಶುದ್ಧಿಯನ್ನು ಪಡೆಯುವುದರಿಂದ.

ಇದು ನಡೆದಾಗ ಪ್ರಜ್ಞೆ ಮತ್ತು ಅಪ್ರಜ್ಞೆಗಳ ತರ್ಕ, ಎಚ್ಚರ ಮತ್ತು ಸ್ವಪ್ನಸ್ಥಿತಿಗಳ ತರ್ಕ ಇವು ಭವ್ಯವಾದ ಸಕಲ ದೃಶ್ಯಗಳ ತರ್ಕದೊಂದಿಗೆ, ಸಮಗ್ರ ವಸ್ತುಗಳ ಮತ್ತು ಕಲ್ಪನೆಗಳ ತರ್ಕದೊಂದಿಗೆ ಐಕ್ಯವಾಗುತ್ತವೆ. ಎಲ್ಲ ದೃಶ್ಯದ ಭವ್ಯ ಸಮಗ್ರತೆಯನ್ನು ಅರ್ಥಮಾಡಿಕೊಳ್ಳುವ ವಿಚಾರವನ್ನು ವೇದಾಂತವು ಬುದ್ಧಿ ಎಂದು ಕರೆಯುತ್ತದೆ. ಎಲ್ಲ ದೃಶ್ಯಗಳ ಹಿಂದೆ ಇರುವ ದೃಕ್ ಅಥವಾ ನೋಡುವವನ ಮೇಲೆ ಅದಕ್ಕೆ ಮಾತ್ರವೇ ಬೆಳಕಿನ ಹೊಳೆಯನ್ನು ಹರಿಸುವ ಶಕ್ತಿ ಇರುವುದು. ನಾವು ತಿಳಿಯುವುದು ಏನನ್ನು ಎಂಬ ಪ್ರಶ್ನೆಗೆ ಉತ್ತರ 'ತಿಳಿಯುತ್ತಿರುವವರು' ಯಾರು ಎಂಬುದಕ್ಕೆ ಉತ್ತರವನ್ನು ಕಂಡುಹಿಡಿಯುವವರೆಗೆ ದೊರಕುವುದಿಲ್ಲ. ಎಚ್ಚರದ ಸ್ಥಿತಿಯಲ್ಲಿ ಅನುಭವಕ್ಕೆ ಬರುವ ಎಲ್ಲ ವಸ್ತುಗಳು ಮತ್ತು ಕಾಲ, ದೇಶ ಮತ್ತು ಕಾರಣಗಳು ಸಾಪೇಕ್ಷ ಎಂಬುದನ್ನು ವೈಜ್ಞಾನಿಕ ವಿಚಾರವು ಸ್ಥಾಪಿಸಿತೋರಿಸಿದೆ. ಕಾಲ-ದೇಶಗಳ ಅಖಂಡ ಪ್ರವಾಹದ ವಿನ್ಯಾಸಗಳಾಗಿ ಇವಕ್ಕೆ ಸ್ವಲ್ಪ

ಮಟ್ಟಿನ ವಾಸ್ತವಿಕತೆ ಇದೆ ಎಂದು ಸಾಪೇಕ್ಷ ಭೌತಶಾಸ್ತ್ರವು ವ್ಯಾಖ್ಯಾನಿಸಿತ್ತಾದರೂ, ಅವುಗಳ ಪ್ರತ್ಯೇಕ ರೂಪಗಳಾಗಿ ಅವಕ್ಕೆ ಅಸ್ತಿತ್ವವನ್ನು ನಿರಾಕರಿಸಲಾಗಿತ್ತು. ಹಾಗೆಯೇ ಸ್ವಪ್ನವನ್ನು ಅಧ್ಯಯನ ಮಾಡಿದಾಗ ಸ್ವಪ್ನದಲ್ಲಿ ಪ್ರತ್ಯೇಕ ವಸ್ತುಗಳಾಗಿ ಅವಕ್ಕೆ ಅಸ್ತಿತ್ವ ಇಲ್ಲ ಎಂದೂ ಚಿತ್ತಕ್ಕೆ ಅಸ್ತಿತ್ವ ಉಂಟೆಂದೂ ತೋರಿಸಲಾಗಿತ್ತು. ಈ ಶೋಧನೆ ಮತ್ತು ಈ ಶೋಧನೆಯ ಮುಂದುವರಿಕೆ ವೈಜ್ಞಾನಿಕ ವಿಚಾರವನ್ನು ಬುದ್ಧಿಯಾಗಿ ಅಥವಾ ತಾತ್ವಿಕ ವಿಚಾರವನ್ನಾಗಿ ಪರಿವರ್ತಿಸುವುದಕ್ಕೆ ದಾರಿ ತೋರುತ್ತದೆ ಎನ್ನುತ್ತದೆ, ವೇದಾಂತ.

ತಾತ್ವಿಕವಿಚಾರವು ಎಲ್ಲ ದೃಶ್ಯದ ಮತ್ತು ಎಚ್ಚರ ಮತ್ತು ನಿದ್ರೆಯ ಸ್ಥಿತಿಗಳಲ್ಲಿನ ಅಹಂಗಳ ಸಾಂತತೆಯನ್ನೂ ಬಲಾಗುವಿಕೆಯನ್ನೂ ಕಂಡುಹಿಡಿದದ್ದು ಮಾತ್ರವಲ್ಲದೆ, ಅನುಭವದ ಆಳದಲ್ಲಿ ಎಲ್ಲಾದರೂ ಬದಲಾಗದ ಸತ್ಯವೊಂದು ಇದೆಯೇ, ಒಂದು ವೇಳೆ ಇದ್ದರೆ ಅದರ ಸ್ವರೂಪವೇನು, ದೃಶ್ಯದ ಸಕಲ ಜಗತ್ತಿಗೂ ಅದಕ್ಕೆ ಇರುವ ಸಂಬಂಧವೇನು ಎಂಬ ಮೂಲಭೂತ ಪ್ರಶ್ನೆಗಳನ್ನು ಕೇಳುತ್ತದೆ. ಜ್ಞಾನ ಮತ್ತು ನೆನಪಿನ ದತ್ತಾಂಶಗಳು ಜ್ಞಾತೃವಿನ ಅಥವಾ ತಿಳಿಯುವ ವಸ್ತುವಿನ ಐಕ್ಯತೆ ಮತ್ತು ಬದಲಾಗದೆ ಇರುವಿಕೆಯನ್ನು ಅಪೇಕ್ಷಿಸುತ್ತದೆ. ಆದರೆ ಎಚ್ಚರ ಮತ್ತು ನಿದ್ರೆಯ ಸ್ಥಿತಿಗಳ ಅಹಂಗಳು ಬದಲಾವಣೆ ಹೊಂದುವಂತಹವು ಮತ್ತು ಪರಸ್ಪರ ವ್ಯಾವರ್ತಕಗಳು ( ಎಂದರೆ ಗೊತ್ತುಪಡಿಸುವುದನ್ನು ಹೊರತು ಉಳಿದುವನ್ನು ಹೊರಹಾಕುವಂತಹುವು).

ಎರಡು ಸ್ಥಿತಿಗಳ ಅಹಂಗಳ ಆಚೆ ಯಾವುದಾದರೂ ಬದಲಾಗದ ಜ್ಞಾತೃ ಇದೆ ಎಂಬುದನ್ನು ಅನುಭವ ತೋರಿಸುತ್ತದೆಯೆ ? ಈ ಮಖ್ಯವಾದ ಪ್ರಶ್ನೆಗೆ ಉತ್ತರವನ್ನು ಹುಡುಕುವುದಕ್ಕೆ ಎಚ್ಚರ ಮತ್ತು ನಿದ್ರೆಯ ಸ್ಥಿತಿಯಲ್ಲದೆ ಮೂರನೆಯ ಸ್ಥಿತಿ ಅಥವಾ ಅವಸ್ಥೆಯೊಂದರ ತಾತ್ವಿಕ ಅರ್ಥವನ್ನು ಶೋಧಿಸಬೇಕಾದ ಅಗತ್ಯವಿದೆ ಎನ್ನುತ್ತದೆ ವೇದಾಂತ. ಆ ಸ್ಥಿತಿ ಸುಷುಪ್ತಿ, ಸ್ವಪ್ನರಹಿತ ನಿದ್ರೆ. ಆ ಸ್ಥಿತಿಯಲ್ಲಿ ಉಳಿದೆರಡು ಸ್ಥಿತಿಗಳ ಎಲ್ಲ ದೃಗ್ ದೃಶ್ಯಗಳೂ ಮಾಯವಾಗಿ ಶುದ್ಧ ಚೈತನ್ಯದ ಶಾಶ್ವತ ವಸ್ತುವಾದ ಆತ್ಮ ಅಥವಾ ಬ್ರಹ್ಮನಲ್ಲಿ ಲೀನವಾಗಿ ಹೋಗುತ್ತವೆ. ಎಲ್ಲ ರೂಪಗಳ ಇಡೀ ಜಗತ್ತು, ಅದರ ದೃಗ್ ದೃಶ್ಯಗಳು ಆ ಬ್ರಹ್ಮದ ತೋರಿಕೆಗಳು. ಸುಷುಪ್ತಿಯಲ್ಲಿ ತೋರುವ ಸೂಕ್ಷ್ಮಪರಿಜ್ಞಾನವು ವಿಚಾರಕ್ಕೆ ದೊರಕುವುದು. ವಿಚಾರವು ಜಾಗ್ರತಾವಸ್ಥೆಗೆ ಸಂಬಂಧಿಸಿದ ಕಾರ್ಯಕಾರಣ ನಿಯಮದಲ್ಲಿ ತನಗಿರುವ ತೀವ್ರ ಆಸಕ್ತಿಯನ್ನು ಕಳೆದುಕೊಂಡು ಶುದ್ಧವಾದ ಬಳಿಕ ಜಾಗ್ರದವಸ್ಥೆಯಲ್ಲಿಯೂ ಕೂಡ ಈ ಕಾರ್ಯಕಾರಣ ನಿಯಮವು ಅಸಮರ್ಪಕವೆಂದು ಕ್ವಾಂಟಮ್ ಸಿದ್ಧಾಂತ ತೋರಿಸಿದೆ. ಅದರ ಹಿಂದಿನ ಮತ್ತು ಎಡೆಬಿಡದೆ ಅಂಟಿಕೊಂಡಿರುವ ಆಸಕ್ತಿಯಾದ ಎಚ್ಚರದ ಸ್ಥಿತಿಯ ಕಾರಣಾರ್ಥಕ ಭಾವನೆಯನ್ನು—ಆ ಭಾವನೆಯು ಎಚ್ಚರದ ಸ್ಥಿತಿಯಲ್ಲಿ ಕೂಡ ಕ್ವಾಂಟಂ ಭೌತಶಾಸ್ತ್ರದ ಪ್ರಕಾರ ಅಸಮರ್ಥನೀಯವಾದದ್ದು—ಕಳೆದುಕೊಂಡು ಶುದ್ಧವಾದ ಬಳಿಕವೇ ತರ್ಕಕ್ಕೆ ಅದು ದೊರಕುತ್ತದೆ. ವೇದಾಂತದ ಪ್ರಕಾರ ಆಗ ಪ್ರಕಾಶಿಸುವ ಸತ್ಯವು ತುರೀಯ. ಮಾಂಡೂಕ್ಯ ಉಪನಿಷತ್ತು (ಶ್ಲೋಕ ೭) ಅದನ್ನು ಹೀಗೆ ವಿವರಿಸುತ್ತದೆ :

ಅದೃಶ್ಯಂ ಅವ್ಯವಹಾರ್ಯಂ ಅಗ್ರಾಹ್ಯಂ ಅಲಕ್ಷಣಂ, ಅಚಿಂತ್ಯಂ, ಅವ್ಯಪದೇಶ್ಯಂ,
ಏಕಾತ್ಮಪ್ರತ್ಯಯಸಾರಂ, ಪ್ರಪಂಚೋಪಶಮಂ, ಶಾಂತಂ, ಶಿವಂ, ಅದ್ವೈತಂ,
ಚತುರ್ಥಂ ಮನ್ಯಂತೇ-ಸ ಆತ್ಮಾ ಸ ವಿಜ್ಞೇಯಃ—

'ಅದು ಕಾಣತಕ್ಕದ್ದಲ್ಲ. ವ್ಯವಹಾರರಹಿತವಾದದ್ದು (ಎಂದರೆ ಸಾಪೇಕ್ಷದ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವುದಲ್ಲ), (ಮಾತು ಮೊದಲಾದ ಅಂಗಗಳಿಂದ) ಗ್ರಹಿಸಲು ಅಸಾಧ್ಯವಾದದ್ದು, ಯಾವ ಚಿಹ್ನೆಗಳೂ ಇಲ್ಲದ್ದು (ಚಿಹ್ನೆಗಳಿಂದ ಮಾತ್ರ ತಾರ್ಕಿಕ ಅನುಮಾನ ಸಾಧ್ಯ), ಚಿಂತನೆಗೆ ಮೀರಿದ್ದು, (ಗುರುತಿಗೆ) ಯಾವ ಹೆಸರೂ ಇಲ್ಲದ್ದು, ಆತ್ಮದ ಏಕತೆಯ ಪ್ರಜ್ಞೆಯ ಸಾರವಾದದ್ದು.

ನಿತ್ಯವೂ ಬದಲಾಗುವ ಜಗತ್ತಿನ ಘಟನೆಗಳನ್ನು ಶಮನಗೊಳಿಸತಕ್ಕದ್ದು. (ಪೂರ್ಣ) ಶಾಂತವೂ ಒಳಿತೂ ಅ-ದ್ವಯವೂ ಆದರೂ ಅದು ನಾಲ್ಕನೆಯ (ಸ್ಥಿತಿ) ಎಂದು ಭಾವಿಸಲಾದದ್ದು— ಅವನೇ ಆತ್ಮ, ಅವನನ್ನು ಸಾಕ್ಷಾತ್ಕರಿಸಿಕೊಳ್ಳತಕ್ಕದ್ದು'!

ಹೀಗೆ ಆತ್ಮವು ಎಲ್ಲ ಅನುಭವದ ಐಕ್ಯತೆ. ಈ ಇಡೀ ವಿಶ್ವವು ಆತ್ಮ. ಅದು ಶುದ್ಧ ಚೈತನ್ಯ ಸ್ವರೂಪಿ, ಚಿತ್. ಅದು ಎಲ್ಲರ ಆತ್ಮವಾದುದರಿಂದ ಆತ್ಮನು ಚಿತ್-ಸ್ವರೂಪ ಮತ್ತು ಅದ್ವೈತ, ಅದು ಅನಂತ. ಅಣು ಭೌತವಿಜ್ಞಾನಿ ಎರ್ವಿನ್ ಶೋಡಿಂಜರ್ ಹೇಳುತ್ತಾರೆ (What is Life ? pp. 90-91) : .

*ಚೈತನ್ಯವನ್ನು 'ಅನೇಕ'ವಾಗಿ ಅನುಭವಕ್ಕೆ ತಂದುಕೊಳ್ಳುವುದು ಸಾಧ್ಯವಿಲ್ಲ. 'ಏಕ'ವಾಗಿ ಅನುಭವಿಸುವುದು ಮಾತ್ರ ಸಾಧ್ಯ. ಅದರ ಬಹುತ್ವ ತಿಳಿಯದ್ದು. ಇರುವುದು ಒಂದೇ ಒಂದು. ಅನೇಕ ಎಂದು ತೋರುವುದು ಒಂದೇ ಒಂದರ ಅನೇಕ ಮುಖಗಳ ಶ್ರೇಣಿಗಳು, ಭ್ರಮೆಯಿಂದ (ಭಾರತೀಯ ಮಾಯಾ) ಕಲ್ಪಿತವಾದವು.*

ಈ ತುರೀಯ ಅಥವಾ ಲೋಕೋತ್ತರ (ಕಾರಣಾತೀತ) ಚೈತನ್ಯವನ್ನೇ ಎರಡು ಸಾವಿರದ ಐನೂರು ವರ್ಷಗಳ ಹಿಂದೆ ಮಹಾಚೇತನವಾದ ಬುದ್ಧನು ಪುಣ್ಯವಾದ ಹುಣ್ಣಿಮೆಯ ರಾತ್ರಿ ಸಾಕ್ಷಾತ್ಕಾರ ಮಾಡಿಕೊಂಡದ್ದು. ಈ ಸಾಕ್ಷಾತ್ಕಾರವನ್ನು ಕುರಿತು ಆತ ತನ್ನ ಶಿಷ್ಯರಿಗೆ ಅನಂತರ ಹೀಗೆ ಹೇಳಿದ (ಸುತ್ತ ಪಿಟಕ, ಮಜ್ಝಿಮ ನಿಕಾಯ, ಸುತ್ತ ೨೬ : ಅರಿಯ ಪರಿಯೇಷಣ ಸುತ್ತ) :

*ರೋಗ.... ಸಾವು.... ಅಶುದ್ಧಿ ಮತ್ತು ನಾಶ ಇವುಗಳಿಂದ, ಅಹಂ-ನಾಶದ ಪರಮ ಶಾಂತಿಯನ್ನು ನಾನು ಪಡೆದಿದ್ದೇನೆ. ಜ್ಞಾನವು, ಈಗ ಕಾಣುತ್ತಿರುವಂತೆ (ದರ್ಶನಮ್) ನನ್ನಲ್ಲಿ ಉದಿಸಿತು. ನನ್ನ ವಿಮುಕ್ತಿ ಸ್ಥಾಪಿತವಾಯಿತು. ಜಾತಿ ಅಥವಾ ಕಾರಣಗಳ ಸರಣಿಯು (ಈ ಜನ್ಮದಲ್ಲೇ) ಕೊನೆಗೊಂಡಿತು. ನನಗೆ ಇನ್ನು ಪುನರ್ಭವ (ಮರುಹುಟ್ಟು) ಇಲ್ಲ '*

ಮತ್ತೆ :

*ಕೇಳಿ, ಭಿಕ್ಖುಗಳೇ, ಅಮೃತ ಅಥವಾ ಅಮರವಾದದ್ದು ನನಗೆ ಲಭ್ಯವಾಗಿದೆ. ನಾನು ಸತ್ಯವನ್ನು ಬೋಧಿಸುತ್ತೇನೆ, ತೋರಿಸುತ್ತೇನೆ.*

ಶ್ರಾವಸ್ತಿಯ ಜೇತನದಲ್ಲಿ ಈ ಲೋಕೋತ್ತರ ಅಥವಾ ತುರೀಯದ ನಿರ್ವಾಣ ಅನುಭವವನ್ನು ವಿವರಿಸುತ್ತಾ ಬುದ್ಧನು ಈ ಗಂಭೀರವಾದ ಮಾತುಗಳನ್ನು ಹೇಳಿದನು (ಉದಾನ, ವುಡ್‌ವರ್ಡ್‌ರ ಅನುವಾದ):

*ಹುಟ್ಟಿದ್ದಲ್ಲದ, ಆದದ್ದಲ್ಲದ, ಮಾಡಿದ್ದಲ್ಲದ, ಘಟಿತವಾದದ್ದಲ್ಲದ ಒಂದು ಇದೆ, ಸೋದರರೇ... ಹೀಗೆ ಹುಟ್ಟಿದ್ದಲ್ಲದ, ಆದದ್ದಲ್ಲದ, ಮಾಡಿದ್ದಲ್ಲದ, ಘಟಿತವಾದದ್ದಲ್ಲದ ಈ ಒಂದು ಇಲ್ಲವೇ ಇದ್ದಿದ್ದರೆ ಸೋದರರೆ, ಹುಟ್ಟಿದ್ದು, ಆದದ್ದು, ಮಾಡಿದ್ದು, ಘಟಿತವಾದದ್ದು ಆದುದರಿಂದ ಬಿಡುಗಡೆ ಎಂಬುದೇ ಇರುತ್ತಿರಲಿಲ್ಲ.*

*ಆದರೆ, ಸೋದರರೆ, ಈ ಹುಟ್ಟಿದ್ದಲ್ಲದ, ಆದದ್ದಲ್ಲದ, ಮಾಡಿದ್ದಲ್ಲದ, ಘಟಿತವಾದ ದ್ದಲ್ಲದ ಒಂದು ಇರುವುದರಿಂದ ಹುಟ್ಟಿದ್ದು, ಆದದ್ದು, ಮಾಡಿದ್ದು, ಘಟಿತವಾದದ್ದು ಆದದ್ದರಿಂದ ಬಿಡುಗಡೆ ಎಂಬುದನ್ನು ತಿಳಿಸಲಾಯಿತು.*

ಗೌಡಪಾದರು ಮಾಂಡೂಕ್ಯೋಪನಿಷತ್ತಿನ ಕಾರಿಕೆಯಲ್ಲಿ ಬ್ರಹ್ಮವು ಶುದ್ಧಚೈತನ್ಯವೆಂದೂ ಕಾರಣತ್ವವನ್ನು ಮೀರಿದ್ದೆಂದೂ ಹೇಳುತ್ತಾರೆ :

ಅಕಲ್ಪಮಂ ಅಜಂ ಜ್ಞಾನಂ
ಜ್ಞೇಯಾಭಿನ್ನಂ ಪ್ರಚಕ್ಷತೇ ;
ಬ್ರಹ್ಮಜ್ಞೇಯಮಜಮನಿತ್ಯಂ
ಅಜೇನಾಜಂ ವಿಬುದ್ಧ್ಯತೇ

*ಜ್ಞಾನವು, ವಿಚಾರಾತೀತವೂ, ಕಾರಣತಾತೀತವೂ ಆದ ಜ್ಞಾನವು ಎಲ್ಲ ಕಾಲ್ಪನಿಕ ಇತಿಮಿತಿಗಳಿಂದಲೂ ಬಿಡುಗಡೆ ಹೊಂದಿದುದು, ತಿಳಿಯಲು ಸಾಧ್ಯವಾಗುವ (ಸತ್ಯದಿಂದ) ನಿತ್ಯವೂ ಅಭಿನ್ನವಾದದ್ದು. ಬ್ರಹ್ಮನೆಂದೇ ತಿಳಿಯಲು ಸಾಧ್ಯವಾಗುವ (ಸತ್ಯ) ನಿತ್ಯ ಮತ್ತು ಕಾರಣಾತೀತ. ಹುಟ್ಟಿಲ್ಲದ್ದೂ, ಕಾರಣಾತೀತವೂ ಆದ ಬ್ರಹ್ಮವು ಹುಟ್ಟಿಲ್ಲದ, ಕಾರಣಾತೀತವಾದ್ದರಿಂದ (ವಿಚಾರ ಅಥವಾ ಜ್ಞಾನದಿಂದ) ತಿಳಿಯಲ್ಪಡುತ್ತದೆ.*

ಎಲ್ಲ ಕಾರ್ಯಕಾರಣ ಸಂಬಂಧಗಳನ್ನು ಮೀರಿದ ಪರಮ ಸತ್ಯವನ್ನು (ಎಲ್ಲ ಅನುಭವದ ಏಕತೆಯನ್ನು, ಆತ್ಮ ಎಂಬುದನ್ನು) ಸಾಕ್ಷಾತ್ಕಾರ ಪಡಿಸಿಕೊಂಡ ಮಾನವ ಗುರುವಿಗೆ ಗೌರವವನ್ನು ಸಲ್ಲಿಸುತ್ತಾ ಗೌಡಪಾದರು ಹೇಳುತ್ತಾರೆ (ಅಲ್ಲೇ VI) :

ಜ್ಞಾನೇನಾಕಾಶಕಲ್ಪೇನ
ಧರ್ಮಾನ್ ಯೋ ಗಗನೋಪಮಾನ್ ;
ಜ್ಞೇಯೋಭಿನ್ನೇನ ಸಂಬುದ್ಧಃ
ತಂ ವಂದೇ ದ್ವಿಪದಾಂ ವರಮ್

*ಯಾರು ತನ್ನ ಆಕಾಶದಂತೆ ಅನಂತವಾದ ಜ್ಞಾನದಿಂದ, ಆಕಾಶದಂತೆ ಅನಂತವಾದ ಜಗತ್ತಿನ ವಸ್ತುಗಳನ್ನು ಜ್ಞೇಯವಾದ ಬ್ರಹ್ಮಕ್ಕಿಂತ ಅಭಿನ್ನವಾಗಿ ಅರಿತಿದ್ದಾನೆಯೋ ಆ ಮಾನವ ಶ್ರೇಷ್ಠನಿಗೆ ನಮಸ್ಕಾರ ಮಾಡುತ್ತೇನೆ.*

ಶ್ರೀ ರಾಮಕೃಷ್ಣರ ಮಾತುಗಳಲ್ಲಿ ಹೇಳುವುದಾದರೆ :

*ಶುದ್ಧಮನಸ್ಸು, ಶುದ್ಧಬುದ್ಧಿ, ಶುದ್ಧ ಆತ್ಮ ಇವೆಲ ಒಂದೇ ಸತ್ಯ.*

ಬೃಹದಾರಣ್ಯಕ ಉಪನಿಷತ್ತು ಒಂದು ಗಂಭೀರವಾದ ಮಂತ್ರದಲ್ಲಿ ಪ್ರಾಣಗಳು ಅಥವಾ ಜಗತ್ತಿನ ಶಕ್ತಿಗಳು ಸತ್ಯ ಎಂದು ಹೇಳಿ ಆತ್ಮವು ಸತ್ಯಸ್ಯಸತ್ಯ ಎನ್ನುತ್ತದೆ (II. 1.20) :

ಸ ಯಥೋರ್ಣ ನಾಭಿಃ ತಂತುನೋಚ್ಚರೇತ್
ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರಂತಿ ;
ಏವಮೇವ ಅಸ್ಮಾತ್ ಆತ್ಮನಃ
ಸರ್ವೇ ಪ್ರಾಣಾಃ ಸರ್ವೇ ಲೋಕಾಃ
ಸರ್ವೇ ದೇವಾಃ ಸರ್ವಾಣಿಭೂತಾನಿ ವ್ಯುಚ್ಚರಂತಿ
ತಸ್ಯೋಪನಿಷತ್—ಸತ್ಯಸ್ಯಸತ್ಯಮಿತಿ ;
ಪ್ರಾಣಾ ವೈ ಸತ್ಯಂ ತೇಷಾಂ ಏಷ ಸತ್ಯಂ

*ಹೇಗೆ ಒಂದು ಜೇಡವು(ತಾನೇ ತನ್ನಿಂದಲೇ ಸೃಷ್ಟಿಸಿದ) ನೂಲಿನ ಮೇಲೆ ಚಲಿಸುತ್ತದೆಯೋ, ಮತ್ತು ಹೇಗೆ (ಜ್ವಲಿಸುತ್ತಿರುವ) ಅಗ್ನಿಯಿಂದ ಚಿಕ್ಕ ಕಿಡಿಗಳು ಎಲ್ಲ ದಿಕ್ಕುಗಳಿಗೂ ಹಾರುತ್ತವೆಯೋ, ಹಾಗೆಯೇ ಆ ಆತ್ಮನಿಂದಲೇ ಎಲ್ಲ ಶಕ್ತಿಗಳೂ ಜಗತ್ತುಗಳೂ, ಎಲ್ಲ (ಪ್ರಕಾಶಮಾನರಾದ ಜೀವಿಗಳಾದ) ದೇವತೆಗಳೂ ಎಲ್ಲ ವಸ್ತುಗಳೂ, ಮೂಡುತ್ತವೆ. ಅದರ ಉಪನಿಷತ್ ನಾಮವು ಸತ್ಯಸ್ಯಸತ್ಯ ಎಂದು. ಈ (ಜಗತ್ತಿನ) ಶಕ್ತಿಗಳು ಸತ್ಯ ; ಈ ಶಕ್ತಿಗಳ ಸತ್ಯವೂ ಅದೇ.*

ಶ್ರೀಮದ್ ಭಾಗವತದಲ್ಲಿ (I.ii 11) ತತ್ತ್ವವಿದರ ಎಂದರೆ ಸತ್ಯವನ್ನು ಬಲ್ಲವರ ಉಲ್ಲೇಖವಿದೆ. ಅವರು ಸತ್ಯವು ಅದ್ವಯಮ್ ಜ್ಞಾನಮ್ ಎಂದರೆ ಶುದ್ಧಜ್ಞಾನ, ಅಥವಾ ವಿಚಾರ ಅಥವಾ ಚೈತನ್ಯ ಕ್ಷೇತ್ರ ಅಥವಾ ಅನುಭವ - ಕ್ಷೇತ್ರ ಎಂದು ಹೇಳುತ್ತಾರೆ.

ವಿಚಾರವು ಈ ನಿತ್ಯವಾಗಿರುವ ಐಕ್ಯವನ್ನು ಸಾಕ್ಷಾತ್ಕರಿಸಿಕೊಳ್ಳಲು ಅನುಸರಿಸುವ ವೈಜ್ಞಾನಿಕ ವಿಧಾನವನ್ನು ವೇದಾಂತವು ಅವಸ್ಥಾತ್ರಯ ಪ್ರಕ್ರಿಯಾ—ಮೂರು ಅವಸ್ಥೆಗಳ ವಿಧಾನ—ಎಂದು ಕರೆದಿದೆ. ಇದು ಹೊರಗಿನ ಮತ್ತು ಒಳಗಿನ, ದೃಕ್‌ನ ಮತ್ತು ದೃಶ್ಯದ, ಪ್ರಕೃತಿಯ ಒಳಗು ಹೊರಗುಗಳನ್ನು ಎಲ್ಲ ಸತ್ಯವನ್ನೂ ವೈಚಾರಿಕವಾಗಿ ಅರಿಯುವ ರೀತಿ.

ವಿಚಾರವಾದದ ವಿಚಾರವು ಸ್ವಭಾವತಃ ಮಿತಿಯುಳ್ಳದ್ದಾಗಿರುವುದರಿಂದ ಅದಕ್ಕೆ ಅಧ್ಯಾತ್ಮ ಮತ್ತು ಮೂಢನಂಬಿಕೆಗಳ ನಡುವೆ ಇರುವ ವ್ಯತ್ಯಾಸ ತಿಳಿಯುವುದಿಲ್ಲ. ಆದರೂ ಮೊಂಡು ಸಾಹಸದಿಂದ ಅದು ಎರಡರ ವಿರುದ್ಧವೂ ಸಮರವನ್ನು ಸಾರಿದೆ. ಇಪ್ಪತ್ತನೆಯ ಶತಮಾನದ ವಿಜ್ಞಾನವು ವಿಶಾಲಹೃದಯ ಉಳ್ಳದ್ದಾಗಿರುವುದರಿಂದ ಅದು ತಿಳಿಯದುದರ ಮಹಾರಹಸ್ಯದ ವಿಷಯದಲ್ಲಿ ವಿನಮ್ರವಾಗಿ ನಿಂತಿದೆ ; ಆದರಿಂದ ಪ್ರಬಲವಾಗಿ ಆಕರ್ಷಿತವಾಗಿದೆ.

ವಿಚಾರವು ಸತ್ಯವನ್ನು ವೈಜ್ಞಾನಿಕ, ಕಲಾತ್ಮಕ, ಧಾರ್ಮಿಕ ಕ್ಷೇತ್ರಗಳಾಗಿ ವಿಭಜಿಸಿರುವುದು ನಮ್ಮ ಇತಿಮಿತಿಗಳನ್ನು ತೋರಿಸುತ್ತದೆಯೇ ಹೊರತು ಸತ್ಯದ ಇತಿಮಿತಿಗಳನ್ನಲ್ಲ. ಅಂಥ ವಿಭಜನೆ ಮಾಡ ಬಹುದಾದದ್ದೇ. ಭೂಮಿಯನ್ನು ಸುತ್ತಿರುವ ಸಮುದ್ರವನ್ನು ಅಧ್ಯಯನ ಮತ್ತು ವಿಶ್ಲೇಷಣೆಗಳಿಗಾಗಿ ತಾತ್ಕಾಲಿಕವಾಗಿ ಬೇರೆ ಬೇರೆ ಸಮುದ್ರಗಳೆಂದು ಕರೆಯುವಂತೆ ಇದು. ಆದರೆ ಅದನ್ನು ತುಂಬ ದೂರ ಒಯ್ದರೆ, ಅದೇ ಅಂತಿಮವೆಂದು ಭಾವಿಸಿದರೆ ಅದು ಸತ್ಯವನ್ನು ವಿರೂಪಗೊಳಿಸುತ್ತದೆ. ಮಾನವ ಜ್ಞಾನದ ವಿವಿಧ ಶಾಖೆಗಳ ಮತ್ತು ಅನುಭವಗಳ ತೀರ್ಮಾನಗಳನ್ನು ಒಂದುಗೂಡಿಸಿ, ಸಮಗ್ರ ಸತ್ಯದ ದರ್ಶನವನ್ನು ಪಡೆಯುವುದು ತಾತ್ವಿಕ ವಿಚಾರದ ಪರಮ ಕರ್ತವ್ಯ ಎನ್ನುತ್ತದೆ, ವೇದಾಂತ. ವೇದಾಂತದ ವಿಚಾರವು ಸತ್ಯದ ಸಮಗ್ರ ದರ್ಶನವನ್ನು ಪಡೆದು ಧರ್ಮಗಳ ಪರಸ್ಪರ ಸಾಮರಸ್ಯವನ್ನು ಮಾತ್ರವಲ್ಲದೆ ಧರ್ಮ, ಕಲೆ, ಭೌತವಿಜ್ಞಾನಗಳು ಇವುಗಳಲ್ಲಿ ನಿತ್ಯವಾಗಿರುವ ಸಾಮರಸ್ಯವನ್ನು ಕಂಡುಹಿಡಿಯಿತು. ಹೀಗಾಗಿ ವೇದಾಂತದ ಐಕ್ಯತಾದರ್ಶನವು ನಂಬಿಕೆ ಮತ್ತು ವಿಚಾರ, ಪ್ರೀತಿ ಮತ್ತು ಜ್ಞಾನ, ಕಾವ್ಯ ಮತ್ತು ತತ್ತ್ವ, ಕಲೆ ಮತ್ತು ವಿಜ್ಞಾನ ಇವುಗಳ ಸಂಗಮ ಸ್ಥಾನವಾಯಿತು. ಆಧುನಿಕ ಯುಗದಲ್ಲಿ ಸ್ವಾಮಿ ವಿವೇಕಾನಂದರು ನೀಡಿದ ವೇದಾಂತದ ಬುದ್ಧಿಯ ವ್ಯಾಪ್ತಿಯ ವಿವರಣೆಯನ್ನು ಕುರಿತಂತೆ ಸೋದರಿ ನಿವೇದಿತಾ ಹೀಗೆ ಬರೆದಿದ್ದಾರೆ (C.W. Vol. I, Eleventh Edition, Introduction pp. VIII-VIV) :

> *ಅವರಿಗೆ ಮಾನವ ಸೇವೆ ಮತ್ತು ಭಗವಂತನ ಪೂಜೆಗಳ ನಡುವೆ, ಪೌರುಷ ಮತ್ತು ಶ್ರದ್ಧೆಗಳ ನಡುವೆ, ನಿಜವಾದ ಧಾರ್ಮಿಕತೆ ಮತ್ತು ಅಧ್ಯಾತ್ಮಗಳ ನಡುವೆ ಯಾವುದೇ ವ್ಯತ್ಯಾಸವೂ ಇರಲಿಲ್ಲ. ಅವರ ಎಲ್ಲ ಮಾತುಗಳೂ, ಒಂದು ದೃಷ್ಟಿಯಿಂದ ಈ ಕೇಂದ್ರ ನಿರ್ಣಯದ ಮೇಲೆ ಮಾಡಿದ ವ್ಯಾಖ್ಯಾನದಂತೆ ಇತ್ತು : "ಕಲೆ, ವಿಜ್ಞಾನ ಮತ್ತು ಧರ್ಮ ಈ ಮೂರೂ ಒಂದೇ ಸತ್ಯವನ್ನು ಸಾರುವ ಮೂರು ವಿವಿಧ ವಿಧಾನಗಳು. ಆದರೆ ಇದನ್ನು ಅರ್ಥಮಾಡಿಕೊಳ್ಳುವುದಕ್ಕೆ ನಮಗೆ ಅದ್ವೈತ ಸಿದ್ಧಾಂತವು ಅಗತ್ಯ."*

## ೪೪. ಆಧುನಿಕ ಭೌತ ವಿಜ್ಞಾನ ಮತ್ತು ತಾತ್ವಿಕ ವಿಚಾರ

ವಿಶ್ವದ ಅನಂತ ವೈವಿಧ್ಯಗಳ ಹಿಂದೆ ಇರುವ ಮೂಲಭೂತ ಏಕತೆಯ ವಿಷಯದಲ್ಲಿ ಮಾನವ ಜ್ಞಾನದ ಎಲ್ಲೆಗಳನ್ನು ವಿಸ್ತರಿಸುವುದಕ್ಕಾಗಿ ಇಂದು ಪ್ರಕೃತಿ ವಿಜ್ಞಾನದ ಪ್ರತಿಯೊಂದು ಶಾಖೆಯೂ

ಶ್ರಮಿಸುತ್ತಿದೆ. ಪ್ರಕೃತಿ ವಿಜ್ಞಾನವು ಬಾಹ್ಯ ಪ್ರಕೃತಿಯ ರಹಸ್ಯಗಳನ್ನು ಶೋಧಿಸುವುದರೊಂದಿಗೆ ಪ್ರಾರಂಭಿಸಿತು. ಆದರೆ ಈ ಶೋಧನೆಯ ತುದಿಯಲ್ಲಿ ಅದು ಮುಖಾಮುಖಿಯಾದದ್ದು ಮಾನವನ, ಅವನ ಮನಸ್ಸು ಪ್ರಜ್ಞೆಗಳ ರಹಸ್ಯ ; ಎಲ್ಲಕ್ಕಿಂತ ಆಳವಾದ ರಹಸ್ಯ ಅದೇ. ಪೂರ್ವದೇಶದ ದರ್ಶನಗಳು ಅದರಲ್ಲೂ ಬೌದ್ಧ ಚಿಂತನೆಗಳೂ ಸೇರಿದಂತೆ ಭಾರತದ ವೇದಾಂತವು, ಎರಡು ಸಾವಿರ ವರ್ಷಗಳ ಹಿಂದೆಯೇ ಮಾನವನ ಈ ರಹಸ್ಯವನ್ನು ಎದುರಿಸಿತು. ಹಾಗೆ ಮಾಡಿದ್ದು ಅಂತರಂಗದ ಜಗತ್ತಿನ ಆಳಾತಿ ಆಳಗಳನ್ನು ಶೋಧಿಸುವುದರ ಮೂಲಕ. ಇಂದು ಈ ಎರಡು—ಪರೋಕ್ಷ ಮತ್ತು ಅಪರೋಕ್ಷ ಪಥಗಳು ಅನೇಕದರ ಹಿಂದೆ ಇರುವ ಒಂದು ಎಂಬ ಸಾಮಾನ್ಯ ತತ್ವದಲ್ಲಿ ಸಂಗಮಗೊಂಡಿರುವುದನ್ನು ನಾವು ಕಾಣುತ್ತಿದ್ದೇವೆ.

ಈ ಶತಮಾನದ ಮೊದಲ ಇಪ್ಪತ್ತೈದು ವರ್ಷಗಳಲ್ಲಿ ಭೌತಶಾಸ್ತ್ರಜ್ಞರು ಸಾಪೇಕ್ಷತೆಯಲ್ಲಿ ಮತ್ತು ಕ್ವಾಂಟಂ ಭೌತಶಾಸ್ತ್ರದಲ್ಲಿ ನಡೆದ ಕ್ರಾಂತಿಕಾರೀ ಕಂಡುಹಿಡಿಯುವಿಕೆಗಳನ್ನು ಎದುರಿಸಬೇಕಾದ ಸವಾಲಿನ ಸಂದರ್ಭಗಳಲ್ಲಿ ಧೈರ್ಯವಾಗಿ ತಾತ್ವಿಕ ಚಿಂತಕರಾದರು. ಭೌತಶಾಸ್ತ್ರದ ವಿಚಾರವನ್ನು ಅವರು ಬುದ್ಧಿ ಅಥವಾ ತತ್ವಶಾಸ್ತ್ರದ ವಿಚಾರವನ್ನಾಗಿ ಪರಿವರ್ತಿಸಿದರು. ಆ ತತ್ವಶಾಸ್ತ್ರದ ವಿಚಾರವು ಭೌತಶಾಸ್ತ್ರದ ಇಂದ್ರಿಯಗಳ ದತ್ತಾಂಶವನ್ನು ಮಾತ್ರವಲ್ಲದೆ ವೀಕ್ಷಕನಾದ ಮಾನವನನ್ನೂ ಪರೀಕ್ಷಿಸುವ ವಿಶ್ಲೇಷಣಾ ಘಟಕವಾಯಿತು, ಅದರ ಕೈಯಲ್ಲಿ. ಎಡಿಂಗ್‌ಟನ್, ಜೀನ್ಸ್, ಮ್ಯಾಕ್ಸ್‌ಪ್ಲಾಂಕ್, ಐನ್‌ಸ್ಟೈನ್, ಷೋಡಿಂಜರ್, ನೀಲ್ಸ್ ಬೋರ್ ಹೈಸನ್‌ಬರ್ಗ್ ಮತ್ತು ಇಪ್ಪತ್ತನೆಯ ಶತಮಾನದ ಇತರ ಮಹಾನ್ ಭೌತಶಾಸ್ತ್ರ ಜನಕರಿಂದ ಪ್ರಾರಂಭವಾಗಿ ಈ ತಾತ್ವಿಕ ಪ್ರವೃತ್ತಿಯು ಕಳೆದ ಐದು ದಶಕಗಳಲ್ಲಿ ಮುಂದುವರಿದು ಮೂರುವರ್ಷದ ಹಿಂದೆ ಬರ್ಕ್ಲಿ ವಿಶ್ವವಿದ್ಯಾನಿಲಯದ ಭೌತಶಾಸ್ತ್ರ ಪ್ರಾಧ್ಯಾಪಕ ಡಾ. ಫ್ರಿಟ್‌ಜೋಫ್ ಕಾಪ್ರ ಅವರು The Tao of Physics ಎಂಬ ಪುಸ್ತಕವನ್ನು ರಚಿಸುವಲ್ಲಿ ಪರ್ಯವಸಾನವಾಗಿದೆ.

ತಮ್ಮ Space, Time and Gravitation ಎಂಬ ಪುಸ್ತಕದ ಉಪಸಂಹಾರ ಭಾಗದಲ್ಲಿ ಎಡಿಂಗ್‌ಟನ್ ಭೌತಪ್ರಕೃತಿಯ-ರಹಸ್ಯದ ಅಧ್ಯಯನದಿಂದ ಮಾನವನ ರಹಸ್ಯವು ಸ್ಪಷ್ಟವಾಗಬಹುದು ಎಂಬುದನ್ನು ಸೂಚಿಸಿದರು :

*ಸಾಪೇಕ್ಷ ಸಿದ್ಧಾಂತವು ಇಡೀ ಭೌತಶಾಸ್ತ್ರದ ವಸ್ತುವನ್ನೆಲ್ಲಾ ಪರಿಶೀಲಿಸಿಬಿಟ್ಟಿದೆ. ಮಾನವ ಜ್ಞಾನದಲ್ಲಿ ವಸ್ತುವಿಜ್ಞಾನವು ಇಂದು ಸಂಪಾದಿಸಿಕೊಂಡಿರುವ ಹೆಮ್ಮೆಯ ಸ್ಥಾನಕ್ಕೆ ಕಾರಣ ಮಹಾ ನಿಯಮಗಳನ್ನು ಅದು ನಿಷ್ಪಷ್ಟವಾಗಿ ರೂಪಿಸಿದ್ದು ಮತ್ತು ವಿಚಿತ್ರವಾಗಿ ಪ್ರಯೋಗಿಸಿದ್ದು. ಸಾಪೇಕ್ಷ ಸಿದ್ಧಾಂತವು ಆ ಎಲ್ಲ ಮಹಾ ನಿಯಮಗಳನ್ನು ಐಕ್ಯಗೊಳಿಸಿದೆ. ಆದರೂ ಪದಾರ್ಥಗಳ ಸ್ವರೂಪದ ವಿಷಯಕ್ಕೆ ಈ ಜ್ಞಾನವು ಕೇವಲ ಖಾಲಿಯ ಚಿಪ್ಪು- ಬರಿಯ ಸಂಕೇತಗಳ ಆಕಾರ. ಅದು ರಚನೆಯ ಆಕಾರದ ಜ್ಞಾನವೇ ಹೊರತು ವಸ್ತುವಿನ ಸ್ವರೂಪ ಜ್ಞಾನವಲ್ಲ. ಈ ಭೌತ ಪ್ರಪಂಚದ ಅಂತರಾಳವನ್ನೆಲ್ಲ ಒಂದು ಅಜ್ಞಾತ ತಿರುಳು ವ್ಯಾಪಿಸಿದೆ. ಅದೇ ನಮ್ಮ ಪ್ರಜ್ಞೆಯ ಸಾಮಗ್ರಿ ಆಗಿರಲೇಬೇಕು. ಭೌತ ವಿಜ್ಞಾನದ ಆಳಾತಿ ಆಳದ ಅಂಶಗಳ ಬಗ್ಗೆ ಸೂಚನೆ ಇಲ್ಲಿದೆ. ಆದರೂ ಭೌತವಿಜ್ಞಾನದ ವಿಧಾನಗಳಿಂದ ಮಾತ್ರ ಅದನ್ನು ಪಡೆಯಲು ಸಾಧ್ಯವಿಲ್ಲ. ಅದಕ್ಕಿಂತ ಹೆಚ್ಚಿನ ಹಂತ ಒಂದುಂಟು. ಅದೇನೆಂದರೆ ವಿಜ್ಞಾನವು ಎಲ್ಲಿ ಅತ್ಯಂತ ಹೆಚ್ಚಿನ ಪ್ರಗತಿಯನ್ನು ಸಾಧಿಸಿದೆಯೋ ಅಲ್ಲಿ ಮತಿಯು ಪ್ರಕೃತಿಯಲ್ಲಿ ಏನನ್ನು ಹಾಕಿತ್ತೋ ಅದನ್ನು ಹಿಂದಕ್ಕೆ ಪಡೆದಿದೆ. ಅಜ್ಞಾತವಾದುದರ ಕಿನಾರೆಯಲ್ಲಿ ಅಪರಿಚಿತವಾದ ಒಂದು ಹೆಜ್ಜೆಗುರುತನ್ನು ಕಂಡಿದ್ದೇವೆ. ಅದರ ಮೂಲವನ್ನು ಕುರಿತಂತೆ ಒಂದಾದ ಮೇಲೆ ಒಂದರಂತೆ ಗಹನವಾದ ಸಿದ್ಧಾಂತಗಳನ್ನು ಮಂಡಿಸಿದ್ದೇವೆ. ಕೊಟ್ಟ ಕೊನೆಗೆ ಆ ಹೆಜ್ಜೆ ಗುರುತನ್ನು ಮಾಡಿದ ಪ್ರಾಣಿಯನ್ನು*

*ಪುನರ್‍ರಚಿಸುವುದರಲ್ಲಿ ಯಶಸ್ಸನ್ನು ಗಳಿಸಿದ್ದೇವೆ. ಓ, ಆ ಹೆಜ್ಜೆಗುರುತು ನಮ್ಮದೇ !'*

ಹಿಂದಿನ ತಾತ್ವಿಕ-ವಿಜ್ಞಾನಿಗಳು ನೀಡಿದ ಇಂತಹ ಸೂಚನೆಗಳು ಈ ಶತಮಾನದ ಡಾ. ಕಾಪ್ರ ಅವರಲ್ಲಿ ಖಂಡಿತವಾದ ಸ್ಥಿರೀಕರಣಗಳಾಗಿವೆ. ಅವರು ತಮ್ಮ ಪುಸ್ತಕಕ್ಕೆ ನೀಡಿರುವ ಶೀರ್ಷಿಕೆ The Tao of Physics ಎನ್ನುವುದೇ ಈ ಸಂದರ್ಭದಲ್ಲಿ ಅರ್ಥಪೂರ್ಣವಾಗಿದೆ. ಅವರ ಪ್ರತಿಪಾದನೆ ಅದ್ಭುತವೂ ಆಕರ್ಷಕವೂ ಆಗಿರುವುದಲ್ಲದೆ ಅವರು ಮಂಡಿಸಿರುವ ಸಿದ್ಧಾಂತವೂ ಅಷ್ಟೆ :

*ಪೂರ್ವದೇಶದವರು ಜಗತ್ತಿನ ಬಗ್ಗೆ ನೀಡಿರುವ ದೃಷ್ಟಿಯ ಅಂಶಗಳು ಆಧುನಿಕ ಭೌತಶಾಸ್ತ್ರದಿಂದ ಮೂಡಿರುವ ಜಗತ್ತಿನ ವಿಷಯದ ದೃಷ್ಟಿಯ ಅಂಶಗಳೇ ಆಗಿವೆ.*

ಮತ್ತು

*ಪೂರ್ವದೇಶದವರ ಚಿಂತನೆ, ಹೆಚ್ಚು ಸಾಧಾರಣವಾಗಿ ಹೇಳಬೇಕಾದರೆ ಅವರ ಅನುಭಾವ ಚಿಂತನೆ—ಸಮಕಾಲೀನ ವಿಜ್ಞಾನದ ಪ್ರಮೇಯಗಳಿಗೆ ಸಂಬಂಧಿಸಿದಂತೆ ಸುಸಂಬದ್ಧವಾದ ತಾತ್ವಿಕ ಹಿನ್ನೆಲೆಯನ್ನು ಒದಗಿಸುತ್ತದೆ (The Tao of Physics p.25).*

ಭೌತವಾದ ಅಥವಾ ಜಡದ್ರವ್ಯವಾದ ಮತ್ತು ತಾಂತ್ರಿಕವಾದಗಳ ಎರಡು ಶತಮಾನಗಳ ಸಂಪರ್ಕವನ್ನು, ಮಿತಿಮೀರಿದ ತಾಂತ್ರಿಕತೆಯು ತಂದ ಹಾನಿಗಳ ವಿರುದ್ಧ ಕಂಡುಬಂದ ಸಮಕಾಲೀನ ಪ್ರತಿಕ್ರಿಯೆಗಳನ್ನು ಗಮನಿಸಿ ಆಧುನಿಕ ಮಾನವನ ಕಣ್ಣುಗಳಲ್ಲಿ ವಿಜ್ಞಾನದ ಕಲ್ಪನೆಗೆ ಧಕ್ಕೆಯೊದಗಿದೆ ಎನ್ನುತ್ತಾರೆ ಡಾ. ಕಾಪ್ರ ಅವರು. ಆದ್ದರಿಂದ, ಶುದ್ಧ ವಿಜ್ಞಾನವು ಸತ್ಯ ಮತ್ತು ಮಾನವ ಕಲ್ಯಾಣಗಳನ್ನು ಅಪೇಕ್ಷಿಸುತ್ತದೆಯೇ ಹೊರತು ಬೇರೇನೂ ಅಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ವಿಜ್ಞಾನವು ಮಾನವನ, ಅದರಲ್ಲೂ ಪೂರ್ವದೇಶದವರ ಆಧ್ಯಾತ್ಮಿಕ ಪರಂಪರೆಗೆ ವಿರೋಧವಾಗಿಲ್ಲದೆ, ಅದಕ್ಕೆ ಸಮಶ್ರುತಿಯಲ್ಲಿದೆ ಎನ್ನುತ್ತಾರೆ (ಅಲ್ಲೇ) :

*ಪೂರ್ವದೇಶಗಳ ವಿವೇಕ ಮತ್ತು ಪಶ್ಚಿಮ ದೇಶಗಳ ವಿಜ್ಞಾನ ಇವುಗಳ ಮನೋಭಾವದ ನಡುವೆ ಸಾರಭೂತವಾದ ಸಾಮರಸ್ಯವಿದೆ ಎಂಬುದನ್ನು ತೋರಿಸುವುದರ ಮೂಲಕ ವಿಜ್ಞಾನದ ವಿಷಯದಲ್ಲಿ ಜನರಿಗಿರುವ ಭಾವನೆಯನ್ನು ಉತ್ತಮಗೊಳಿಸಬೇಕೆಂಬುದೇ ಈ ಗ್ರಂಥದ ಉದ್ದೇಶ. ಆಧುನಿಕ ಭೌತವಿಜ್ಞಾನವು ಬರಿಯ ತಾಂತ್ರಿಕತೆಯಿಂದ ಆಚೆಗೆ ಬಹುದೂರ ಹೋಗುತ್ತದೆ ಎಂಬುದನ್ನೂ ಭೌತಶಾಸ್ತ್ರದ ಪಥ ಅಥವಾ ಟಾ ಓ ಎಂಬುದು ಹೃದಯವಂತಿಕೆಯಿಂದ ಕೂಡಿದ್ದು, ಆಧ್ಯಾತ್ಮಿಕ ಜ್ಞಾನ ಮತ್ತು ಆತ್ಮಸಾಕ್ಷಾತ್ಕಾರಕ್ಕೆ ದಾರಿ ಎಂಬುದನ್ನೂ ಈ ಗ್ರಂಥವು ಸೂಚಿಸುತ್ತದೆ.'*

ಮೂಲಭೂತ ಸತ್ಯಾನ್ವೇಷಣೆಯು ಮಾನವನನ್ನು ಇಂದ್ರಿಯಗಳ ಮತ್ತು ಘಟನೆಗಳಿಂದ ಕೂಡಿದ ಇಂದ್ರಿಯ ಜಗತ್ತಿನ ಆಚೆಗೆ ಒಯ್ಯುತ್ತದೆ ಎಂಬ ವೇದಾಂತದ ಮತ್ತು ಎಲ್ಲ ಅನುಭೂತಿ ಚಿಂತನೆಯ ವಾಣಿಯನ್ನು ಪ್ರತಿಧ್ವನಿಸುತ್ತಾ ಕಾಪ್ರ ಹೇಳುತ್ತಾರೆ (ibid, P. 51) :

*ಅತ್ಯಂತ ಕಿರಿದಾದ ಜಗತ್ತಿಗೆ ಕೈಗೊಂಡ ಯಾತ್ರೆಯಲ್ಲಿ ತಾತ್ವಿಕ ದೃಷ್ಟಿಯಿಂದ ಅತ್ಯಂತ ಮುಖ್ಯವಾದ ಹೆಜ್ಜೆ ಎಂದರೆ ಮೊದಲನೆಯ ಹೆಜ್ಜೆ : ಪರಮಾಣುಗಳ ಜಗತ್ತಿಗೆ ಇಟ್ಟ ಹೆಜ್ಜೆ. ಪರಮಾಣುವಿನ ಒಳಗನ್ನೂ ಶೋಧಿಸಲು ಹೊರಟು, ಅದರ ರಚನೆಯನ್ನು ಪರೀಕ್ಷಿಸಲು ಹೊರಟು, ವಿಜ್ಞಾನವು ನಮ್ಮ ಇಂದ್ರಿಯಜನ್ಯ ಕಲ್ಪನೆಯ ಮಿತಿಗಳನ್ನು ದಾಟಿತು. ಈ ಘಟ್ಟದಿಂದಾಚೆಗೆ ಅದು ತರ್ಕ ಮತ್ತು ವ್ಯವಹಾರ ಜ್ಞಾನಗಳನ್ನು ಖಚಿತವಾದ ನಿಶ್ಚಿತತೆಯಿಂದ ಅವಲಂಬಿಸಲು ಸಾಧ್ಯವಾಗಲಿಲ್ಲ. ಪರಮಾಣು ಭೌತಶಾಸ್ತ್ರವು ವಿಜ್ಞಾನಿಗಳಿಗೆ ವಸ್ತುಗಳ*

ಸಾರಭೂತ ಸ್ವರೂಪದ ಮೊದಲ ಹೊಳಹುಗಳನ್ನು ನೀಡಿತು. ಅನುಭಾವಿಗಳಂತೆ ಭೌತಶಾಸ್ತ್ರಿಗಳು ಸತ್ಯದ ಇಂದ್ರಿಯ ಜನ್ಯವಲ್ಲದ ಅನುಭವದೊಡನೆ ಈಗ ವ್ಯವಹರಿಸುವಂತಾಯಿತು. ಮತ್ತು ಅನುಭಾವಿಗಳಂತೆ ಅವರು ಈ ಅನುಭವದ ಪರಸ್ಪರ ವಿರೋಧಿಯಂತೆ ಕಾಣುವ ಮುಖಗಳೊಡನೆ ವ್ಯವಹರಿಸಬೇಕಾಯಿತು. ಆದ್ದರಿಂದ, ಅಲ್ಲಿಂದೀಚೆಗೆ, ಆಧುನಿಕ ಭೌತಶಾಸ್ತ್ರದ ಮಾದರಿಗಳೂ, ಮೂರ್ತಿಗಳೂ ಪೌರ್ವಾತ್ಯ ದರ್ಶನದ ಮಾದರಿಗಳು ಮತ್ತು ಮೂರ್ತಿಗಳಂತೆಯೇ ಇರಬೇಕಾಯಿತು.

ಪೌರ್ವಾತ್ಯ ಅನುಭಾವ ಮತ್ತು ಆಧುನಿಕ ಭೌತಶಾಸ್ತ್ರದಲ್ಲಿ ವಿಶ್ವದ ಮೂಲಭೂತ ಐಕ್ಯತೆಯನ್ನು ಪ್ರತಿಪಾದಿಸಿರುವುದನ್ನು ಕುರಿತು ಕಾಪ್ರ ಹೇಳುತ್ತಾರೆ (ibid. p. 130-31) :

*ಪೌರ್ವಾತ್ಯ ವಿಶ್ವ-ದೃಷ್ಟಿಯ ಅತ್ಯಂತ ಮುಖ್ಯವಾದ ಲಕ್ಷಣವೆಂದರೆ—ಅದರ ಸಾರ ಎಂದೇ ಹೇಳಬಹುದು—ಎಲ್ಲ ವಸ್ತುಗಳ ಮತ್ತು ಘಟನೆಗಳ ಐಕ್ಯ ಮತ್ತು ಪರಸ್ಪರ ಸಂಬಂಧಗಳ ಅರಿವು.. ಎಲ್ಲ ವಸ್ತುಗಳಲ್ಲಿಯೂ ಅಭಿವ್ಯಕ್ತಗೊಳ್ಳುವ, ಮತ್ತು ಎಲ್ಲ ವಸ್ತುಗಳೂ ಅದರ ಭಾಗವಾಗಿರುವ ಅಂತಿಮ ಅಖಂಡ ಸತ್ಯವನ್ನು ಕುರಿತು ಪೌರ್ವಾತ್ಯ ಸಂಪ್ರದಾಯಗಳು ಸದಾ ಹೇಳುತ್ತಲೇ ಇರುತ್ತವೆ. ಹಿಂದೂ ಧರ್ಮವು ಅದನ್ನು ಬ್ರಹ್ಮ ಎಂದೂ, ಬೌದ್ಧಧರ್ಮವು ಧರ್ಮಕಾಯ ಎಂದೂ ಟಾಓ ಧರ್ಮವು ಟಾಓ ಎಂದೂ ಕರೆಯುತ್ತವೆ.*

*ವಿಶ್ವದ ಮೂಲಭೂತ ಏಕತೆಯು ಅನುಭಾವದ ಕೇಂದ್ರ ಲಕ್ಷಣ ಮಾತ್ರವಲ್ಲ, ಅದು ಆಧುನಿಕ ಭೌತಶಾಸ್ತ್ರದ ಅತ್ಯಂತ ಮುಖ್ಯವಾದ ಜ್ಞಾನಪ್ರಕಟನೆಗಳಲ್ಲಿ ಒಂದು. ಪರಮಾಣು ಮಟ್ಟದಲ್ಲಿ ಅದು ತೋರಿಸಿಕೊಳ್ಳುತ್ತದೆ, ಮತ್ತು ನಾವು ಭೌತದ್ರವ್ಯದ ಆಳಕ್ಕೆ ಉಪ-ಪರಮಾಣು ಕಣಗಳ ವಲಯಕ್ಕೆ ಪ್ರವೇಶಿಸಿದಂತೆಲ್ಲಾ ಅದು ಹೆಚ್ಚು ಹೆಚ್ಚಾಗಿ ಆವಿಷ್ಕಾರಗೊಳ್ಳುತ್ತದೆ. ಆಧುನಿಕ ಭೌತಶಾಸ್ತ್ರ ಮತ್ತು ಪೌರ್ವಾತ್ಯ ತತ್ವಶಾಸ್ತ್ರ ಇವನ್ನು ಹೋಲಿಸುತ್ತಾ ಹೋದಂತೆ ಎಲ್ಲ ವಸ್ತುಗಳ ಮತ್ತು ಘಟನೆಗಳ ಐಕ್ಯತೆಯು ಮತ್ತೆ ಮತ್ತೆ ಕಾಣಿಸಿಕೊಳ್ಳುವ ವಿಷಯವಾಗುತ್ತದೆ.*

ಸತ್ಯವು ದೇಶ, ಕಾಲ ಮತ್ತು ಕಾರಣತ್ವವನ್ನು ಮೀರಿಹೋಗುತ್ತದೆ ಎಂದು ಎರಡೂ ಹೇಳುತ್ತವೆ. ಈ ಬಾಂಧವ್ಯವನ್ನು ಕುರಿತು ಡಾ. ಕಾಪ್ರ ಹೇಳುತ್ತಾರೆ (Ibid pp. 186-187) :

*ಸಾಪೇಕ್ಷತಾ ಭೌತಶಾಸ್ತ್ರದ ದೇಶ-ಕಾಲವು ಅದನ್ನೇ ಹೋಲುವ ಉನ್ನತ ಆಯಾಮದ ಕಾಲರಹಿತ ದೇಶ. ಅಲ್ಲಿನ ಎಲ್ಲ ಘಟನೆಗಳೂ ಪರಸ್ಪರ ಸಂಬಂಧವುಳ್ಳವು. ಆದರೆ ಆ ಸಂಬಂಧವು ಕಾರಣಾತ್ಮಕವಲ್ಲ. ದೇಶ-ಕಾಲ ರೇಖಾಕೃತಿಗಳನ್ನು ಒಂದು ನಿರ್ದಿಷ್ಟ ದಿಕ್ಕಿನಲ್ಲಿ, ಉದಾಹರಣೆಗೆ ಬುಡದಿಂದ ಮೇಲಕ್ಕೆ ಓದಿದಾಗ ಮಾತ್ರ ಕಣಗಳ ಪರಸ್ಪರ ಪ್ರತಿಕ್ರಿಯೆಗಳನ್ನು ಕಾರ್ಯಕಾರಣ ಸಂಬಂಧದಲ್ಲಿ ವ್ಯಾಖ್ಯಾನಿಸುವುದು ಸಾಧ್ಯ. ಯಾವುದೇ ನಿರ್ದಿಷ್ಟ ಕಾಲ ಸೂಚಿಯನ್ನು ಅವುಗಳಿಗೆ ಅನ್ವಯಿಸದೆ ಅವನ್ನು ನಾಲ್ಕು ಆಯಾಮಗಳ ರಚನೆಗಳು ಎಂದು ಭಾವಿಸಿದಾಗ 'ಹಿಂದು' ಅಥವಾ 'ಮುಂದು' ಎಂಬುದು ಇರುವುದಿಲ್ಲ. ಹಾಗೆಯೇ ಕಾರಣತ್ವ ಎಂಬುದೂ ಇರುವುದಿಲ್ಲ.*

*ಅದೇ ರೀತಿ, ಕಾಲವನ್ನು ಮೀರುವಾಗ ತಾವು ಕಾರ್ಯಕಾರಣಗಳ ಜಗತ್ತನ್ನೂ ಅತಿಕ್ರಮಿಸುತ್ತೇವೆ ಎಂದು ಪೌರ್ವಾತ್ಯ ಅನುಭಾವಿಗಳು ಹೇಳುತ್ತಾರೆ. ನಮ್ಮ ದೇಶ-ಕಾಲಗಳ ಸಾಮಾನ್ಯ ಕಲ್ಪನೆಯಂತೆ ಕಾರಣತ್ವ ಎಂಬುದು ಜಗತ್ತಿನ ಯಾವುದೋ ಒಂದು ಅನುಭವಕ್ಕೆ ಸೀಮಿತವಾದ ಭಾವನೆ. ಅನುಭವವನ್ನು ವಿಸ್ತರಿಸಿದಾಗ ಆ ಭಾವನೆಯನ್ನು ತ್ಯಜಿಸಬೇಕಾಗುತ್ತದೆ. ಸ್ವಾಮಿ ವಿವೇಕಾನಂದರ ಮಾತುಗಳಲ್ಲಿ (Jnana Yoga p.169) :*

ಕಾಲ, ದೇಶ ಮತ್ತು ಕಾರಣತ್ವಗಳು ಪರಮಸತ್ಯವನ್ನು ನಾವು ಯಾವುದರ ಮೂಲಕ ನೋಡುತ್ತೇವೆಯೋ ಆ ಗಾಜು. ಪರಮಸತ್ಯದಲ್ಲಿ ಕಾಲ, ದೇಶ, ಕಾರಣತ್ವ ಯಾವುದೂ ಇಲ್ಲ.

ಪೌರ್ವಾತ್ಯ ಆಧ್ಯಾತ್ಮಿಕ ಸಂಪ್ರದಾಯಗಳು, ತಮ್ಮ ಅನುಯಾಯಿಗಳಿಗೆ ಕಾಲದ ಸಾಮಾನ್ಯ ಅನುಭವವನ್ನು ದಾಟಿಹೋಗುವ ಮತ್ತು ಕಾರ್ಯಕಾರಣಗಳ ಸರಪಳಿಯಿಂದ ಬಿಡುಗಡೆ ಹೊಂದುವ, ಬೌದ್ಧರು, ಹಿಂದುಗಳು ಹೇಳುವಂತೆ ಕರ್ಮ ಬಂಧನದಿಂದ ಬಿಡುಗಡೆ ಹೊಂದುವ ಅನೇಕ ಪಥಗಳನ್ನು ತೋರಿಸಿವೆ. ಆದ್ದರಿಂದಲೇ ಪೌರ್ವಾತ್ಯ ಅನುಭಾವವು ಕಾಲದಿಂದ ಮುಕ್ತವಾದದ್ದು ಎಂದು ಹೇಳಲಾಗಿದೆ. ಸಾಪೇಕ್ಷ ಭೌತಶಾಸ್ತ್ರದ ವಿಷಯದಲ್ಲೂ ಇದೇ ಮಾತನ್ನು ಹೇಳಬಹುದು.

ಮತ್ತೆ (Ibid p.21) :

ಕ್ಷೇತ್ರ ಎಂಬುದರ ಕಲ್ಪನೆಯ ಹೊರಹೊಮ್ಮಿದ ಮೇಲೆ ಭೌತಶಾಸ್ತ್ರಿಗಳು ವಿವಿಧ ಕ್ಷೇತ್ರಗಳನ್ನು ಎಲ್ಲ ಭೌತಿಕ ಘಟನೆಗಳನ್ನು ಒಳಗೊಳ್ಳುವ ಒಂದು ಮೂಲಭೂತ ಕ್ಷೇತ್ರವಾಗಿ ಒಂದುಗೂಡಿಸಲು ಪ್ರಯತ್ನಿಸಿದ್ದಾರೆ. ಅದರಲ್ಲೂ ಐನ್‌ಸ್ಟೈನ್, ತನ್ನ ಜೀವನದ ಕೊನೆಯ ವರ್ಷಗಳನ್ನು ಅಂಥದೊಂದು ಏಕೀಕೃತ ಕ್ಷೇತ್ರವನ್ನು ಹುಡುಕುವುದರಲ್ಲಿ ಕಳೆದರು. ಹಿಂದುಗಳ ಬ್ರಹ್ಮ, ಟಾಓ ಪಂಥದವರ ಟಾಓ ಮತ್ತು ಬೌದ್ಧರ ಧರ್ಮಕಾಯವು ಬಹುಶಃ ಅಂಥದೊಂದು ಅಂತಿಮ ಏಕೀಕೃತ ಕ್ಷೇತ್ರವೆಂದೂ ಆದರಿಂದಲೇ ಭೌತಶಾಸ್ತ್ರವು ಅಧ್ಯಯನ ಮಾಡುವ ಘಟನೆಗಳು ಮಾತ್ರವಲ್ಲದೆ ಉಳಿದ ಎಲ್ಲ ಘಟನೆಗಳೂ ಮೂಡಿಬರುತ್ತವೆ ಎಂದೂ ಹೇಳಬಹುದು.

ಪೌರ್ವಾತ್ಯರ ದೃಷ್ಟಿಯಲ್ಲಿ ಎಲ್ಲ ಘಟನೆಗಳ ಹಿಂದೆ ಇರುವ ಸತ್ಯವು ಎಲ್ಲ ರೂಪಗಳ ಆಚೆಗೆ ಇರುವಂಥದು, ಎಲ್ಲ ವರ್ಣನೆಗಳನ್ನು ವಿವರಣೆಗಳನ್ನು ನಿರಾಕರಿಸುವಂಥದು. ಆದ್ದರಿಂದ ಅದನ್ನು ಅನೇಕ ಸಲ ನಿರಾಕಾರವಾದ್ದು, ಶೂನ್ಯ ಎಂದೆಲ್ಲ ಕರೆಯಲಾಗಿದೆ. ಆದರೆ ಈ ಶೂನ್ಯ ಎಂದರೆ ಏನೂ ಇಲ್ಲದ್ದು ಎಂದು ಭಾವಿಸಬಾರದು. ಆದಕ್ಕೆ ಬದಲಾಗಿ ಇದು ಎಲ್ಲ ರೂಪಗಳ ಸಾರ, ಮತ್ತು ಎಲ್ಲ ಜೀವನದ ಮೂಲ. ಹೀಗೆ ಹೇಳುತ್ತವೆ ಉಪನಿಷತ್ತುಗಳು (ಛಾಂದೋಗ್ಯ IV Vol. 4) :

ಬ್ರಹ್ಮವೇ ಜೀವ ಬ್ರಹ್ಮವೇ ಆನಂದ.
ಬ್ರಹ್ಮವೇ ಶೂನ್ಯ....
ಆನಂದವು, ನಿಜವಾಗಿಯೂ ಶೂನ್ಯವೇ.
ಶೂನ್ಯವೇ ನಿಜವಾಗಿಯೂ ಆನಂದವೇ.

ಪರಮಾಣು ಭೌತಶಾಸ್ತ್ರವು ಎದುರಿಸಬೇಕಾಗಿ ಬಂದದ್ದು ಜ್ಞಾತೃವು ಅಥವಾ ಹೊಸ, ಹೆಚ್ಚು ಅರ್ಥಪೂರ್ಣವಾದ, ಜಾನ್‌ವ್ಹೀಲರ್ ಸೃಷ್ಟಿಸಿದ ಪರಿಭಾಷೆಯಲ್ಲಿ ಹೇಳುವುದಾದರೆ 'ಭಾಗವಹಿಸುವವನು' ನೀಡುವ ದತ್ತಾಂಶಗಳ ಮೂಲಕ ದೊರೆಯುವ ಪ್ರಜ್ಞಾವಸ್ತು. ಆದ್ದರಿಂದ ಡಾ. ಕಾಪ್ರ ಹೇಳುತ್ತಾರೆ :

ಆಧುನಿಕ ಭೌತವಿಜ್ಞಾನದಲ್ಲಿ, ಪ್ರಜ್ಞೆಯ ಪ್ರಶ್ನೆಯು ಎದ್ದಿರುವುದು ಪರಮಾಣು ಘಟನೆಗಳನ್ನು ಗಮನಿಸುವುದರ ಸಂದರ್ಭದಲ್ಲಿ. ಯಾವುದರ ತುದಿಯು ಮಾನವ ವೀಕ್ಷಕನ ಪ್ರಜ್ಞೆಯಲ್ಲಿದೆಯೋ ಅಂತಹ ಈ ಘಟನೆಗಳು ಪ್ರಕ್ರಿಯೆಗಳ ಸರಪಣಿಯ ಕೊಂಡಿಗಳಾಗಿ ಮಾತ್ರ

ಅರ್ಥವಾಗುವಂಥವು. ಯುಜೀನ್ ವೈನರ್‌ನ (*Symmetries and Reflections Scientific Essays p. 172*). ಮಾತುಗಳಲ್ಲಿ ಹೇಳುವುದಾದರೆ :

(ಕ್ವಾಂಟಂ ಸಿದ್ಧಾಂತದ) ನಿಯಮಗಳನ್ನು, ಪ್ರಜ್ಞೆಯನ್ನು ಉಲ್ಲೇಖಿಸದೆ ಪೂರ್ಣವಾಗಿ ಸುಸಂಬದ್ಧವಾಗಿ ನಿರೂಪಿಸಲು ಸಾಧ್ಯವಾಗಲಿಲ್ಲ.

ವಿಜ್ಞಾನಿಗಳು ತಮ್ಮ ಪ್ರಯೋಗಾದಿಗಳಲ್ಲಿ ಬಳಸುವ ಕ್ವಾಂಟಂ ಸಿದ್ಧಾಂತದ ವ್ಯಾವಹಾರಿಕ ನಿರೂಪಣೆಯು ಅವರ ಪ್ರಜ್ಞೆಯನ್ನು ಸ್ಪಷ್ಟವಾಗಿ ಉಲ್ಲೇಖಿಸುವುದಿಲ್ಲ. ಆದರೆ, ವೈನರ್ ಮತ್ತಿತರ ಭೌತಶಾಸ್ತ್ರಿಗಳು ಭೌತವಸ್ತುವನ್ನು ಕುರಿತು ಭವಿಷ್ಯದಲ್ಲಿ ರೂಪಿಸುವ ಪ್ರಮೇಯಗಳ ಮುಖ್ಯವಾದ ಭಾಗವಾಗಿ ಮಾನವನ ಪ್ರಜ್ಞೆಯನ್ನು ಸೇರಿಸುವುದು ಅವಶ್ಯಕವಾಗಿರುತ್ತದೆ ಎಂದು ವಾದಿಸುತ್ತಾರೆ.

ಅಂತಹ ಬೆಳವಣಿಗೆಯು ಭೌತಶಾಸ್ತ್ರ ಮತ್ತು ಪೌರ್ವಾತ್ಯ ಅನುಭಾವದ ನಡುವೆ ನೇರವಾದ ಪರಸ್ಪರ ಕ್ರಿಯೆಗಳ ವಿಷಯದಲ್ಲಿ ಉತ್ತೇಜಕ ಸಾಧ್ಯತೆಗಳನ್ನು ತೆರೆಯುತ್ತದೆ. ವ್ಯಕ್ತಿಯು ತನ್ನ ಪ್ರಜ್ಞೆಯನ್ನು ಅರ್ಥಮಾಡಿಕೊಂಡು ಉಳಿದ ವಿಶ್ವದೊಂದಿಗೆ ಅದರ ಸಂಬಂಧವೇನು ಎಂದು ತಿಳಿದುಕೊಳ್ಳುವುದು ಎಲ್ಲ ಅನುಭಾವದ ಆರಂಭ ಬಿಂದುವಾಗುತ್ತದೆ. ಭೌತಶಾಸ್ತ್ರಿಗಳು ತಮ್ಮ ಸಂಶೋಧನೆಯ ಕ್ಷೇತ್ರದಲ್ಲಿ ಮಾನವ ಪ್ರಜ್ಞೆಯ ಸ್ವರೂಪವನ್ನು ಸೇರಿಸಿಕೊಳ್ಳಲು ನಿಜವಾಗಿ ಬಯಸಿದರೆ, ಪೌರ್ವಾತ್ಯ ಭಾವನೆಗಳ ಅಧ್ಯಯನವು ಅವರಿಗೆ ಉದ್ದೀಪನಕಾರಿಯಾದ ಹೊಸ ದೃಷ್ಟಿಕೋನಗಳನ್ನು ನಿಜವಾಗಿಯೂ ನೀಡಬಹುದು.

ಈ ಉಪನ್ಯಾಸದ ೨೨ನೆಯ ಉಪಶೀರ್ಷಿಕೆಯಲ್ಲಿ ಉದ್ಧರಿಸಿರುವ ಸ್ವಾಮಿ ವಿವೇಕಾನಂದರ, ಭೌತ ಶಾಸ್ತ್ರಿಯೂ ಅನುಭಾವಿಯೂ ಐಕ್ಯತೆಯ ಸತ್ಯವನ್ನು ಬೇರೆ ಬೇರೆ ಮಾರ್ಗವಾಗಿ ಸೇರುತ್ತಾರೆ ಎಂಬ ಅಭಿಪ್ರಾಯವನ್ನು ಸ್ಥಿರೀಕರಿಸುತ್ತಾ ಡಾ. ಕಾಪ್ರ ಹೇಳುತ್ತಾರೆ (Ibid p. 305) :

ಅನುಭಾವಿಗಿಂತ ಬೇರೆಯಾಗಿ ಭೌತಶಾಸ್ತ್ರಿಯು ವಸ್ತುಗಳ ಸಾರ ಸ್ವರೂಪದ ಶೋಧನೆಯನ್ನು ಭೌತ ಜಗತ್ತಿನ ಅಧ್ಯಯನದಿಂದ ಆರಂಭಿಸುತ್ತಾನೆ. ಭೌತದ್ರವ್ಯದ ಆಳಾತಿ ಆಳದ ವಲಯವನ್ನು ಶೋಧಿಸಿ ಅವನು ಸಾರತಃ ಎಲ್ಲ ವಸ್ತುಗಳೂ ಘಟನೆಗಳೂ ಒಂದೇ ಎಂಬುದನ್ನು ಅರಿವಿಗೆ ತಂದುಕೊಂಡಿದ್ದಾನೆ. ಅದಕ್ಕಿಂತ ಹೆಚ್ಚಾಗಿ ತಾನೂ ತನ್ನ ಪ್ರಜ್ಞೆಯೂ ಆ ಐಕ್ಯದ ಅವಿಭಾಜ್ಯ ಅಂಗ ಎಂಬುದನ್ನು ಅರಿತಿದ್ದಾನೆ. ಹೀಗೆ, ಅನುಭಾವಿಯೂ ಭೌತಶಾಸ್ತ್ರಿಯೂ ಒಂದೇ ನಿರ್ಣಯಕ್ಕೆ ಬಂದಿದ್ದಾರೆ : ಒಬ್ಬನು ಒಳಗಿನ ವಲಯದಿಂದ ಪ್ರಾರಂಭಿಸಿದರೆ ಮತ್ತೊಬ್ಬನು ಹೊರಜಗತ್ತಿನಿಂದ. ಅವರ ದೃಷ್ಟಿಗಳ ಸಾಮರಸ್ಯವು ಬಾಹ್ಯದ ಅಂತಿಮ ಸತ್ಯವಾದ ಬ್ರಹ್ಮವೂ, ಅಂತರಂಗದ ಸತ್ಯವಾದ ಆತ್ಮವೂ ಯಥಾವತ್ತಾಗಿ ಒಂದೇ ಎಂಬ ಪ್ರಾಚೀನ ಭಾರತೀಯ ಜ್ಞಾನವನ್ನು ಸ್ಥಿರೀಕರಿಸುತ್ತದೆ.

## ೪೫. ಉಪಸಂಹಾರ

ಈ ಬೆಳಕಿನಲ್ಲಿ ಅರ್ಥಮಾಡಿಕೊಂಡಂತೆ, ಧರ್ಮ ಮತ್ತು ವಿಜ್ಞಾನಗಳ ನಡುವೆ, ಭೌತಿಕ ವಿಜ್ಞಾನಗಳು ಮತ್ತು ಅಧ್ಯಾತ್ಮ ವಿಜ್ಞಾನದ ನಡುವೆ ಯಾವ ಘರ್ಷಣೆಯೂ ಇಲ್ಲ. ಎರಡರ ಗುರಿಯೂ ವಾಸ್ತವವಾಗಿ ಒಂದೇ—ಮಾನವನು ಭೌತಿಕವಾಗಿ, ಮಾನಸಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಮುಂದುವರಿದು (ಜೀವನ)ಸಾಫಲ್ಯವನ್ನು ಪಡೆದುಕೊಳ್ಳುವಂತೆ ಮಾಡುವುದು. ಆದರೆ ಇವೆರಡರಲ್ಲಿ ಒಂದೊಂದೂ ತನಗೆ ತಾನೇ ಅಸಮರ್ಪಕ ಮತ್ತು ನಿಸ್ಸಹಾಯಕ. ಪ್ರತ್ಯೇಕವಾಗಿ

ಅವನ್ನು ಬಳಸಲು ಪ್ರಯತ್ನಿಸಿದ್ದಾಗಿದೆ. ಫಲಿತಾಂಶ ಮಾತ್ರ ಅಸಮರ್ಪಕ ಎಂದು ಕಂಡುಕೊಂಡದ್ದೂ ಆಗಿದೆ. ಹಳೆಯ ನಾಗರಿಕತೆಗಳು ಬಹುಪಾಲು ಧರ್ಮದಿಂದ ಮಾರ್ಗದರ್ಶನ ಪಡೆದುವು. ಅವರ ಸಾಧನೆಗಳು ಅಪೂರ್ಣ ಮತ್ತು ಇತಿಮಿತಿಗಳಿಂದ ಕೂಡಿದ್ದವು. ಆಧುನಿಕ ನಾಗರಿಕತೆ ಬಹುಪಾಲು ವಿಜ್ಞಾನವನ್ನು ಅವಲಂಬಿಸಿದೆ. ಇದರ ಸಾಧನೆಯೂ ಅಪೂರ್ಣ ಮತ್ತು ಇತಿಮಿತಿಗಳಿಂದ ಕೂಡಿದ್ದು. ಈ ಎರಡು ಪರಸ್ಪರ ಪೂರಕ ವಿಷಯಗಳ ಆಧ್ಯಾತ್ಮಿಕ ಶಕ್ತಿಗಳ ಸಂಗಮದಿಂದ ಇಂದು ಮಾನವ ಜೀವನದಲ್ಲಿ ಮಾನವನ ಬದುಕು ಹಸನಾಗುತ್ತದೆ. ಅವುಗಳು ಒಂದಾದರೆ ಸುಸಂಯೋಜಿತ ಮಾನವ ಜೀವಿಗಳು ಸೃಷ್ಟಿಯಾಗುತ್ತಾರೆ. ಅದು ಪೂರ್ಣ ಮಾನವ ನಾಗರಿಕತೆ ವಿಕಾಸವಾಗಲು ನೆರವಾಗುತ್ತದೆ. ಅದಕ್ಕಾಗಿ ಈಗ ಜಗತ್ತು ಪಕ್ವವಾಗಿ ಕಾಯುತ್ತಿದೆ. ಮಾನವ ಚಿಂತನೆಗೆ ಇಂದು ಸ್ವಾಮಿ ವಿವೇಕಾನಂದರ ಅದ್ಭುತ ಕೊಡುಗೆ ಇದು. ಅವರ ಈ ಸಮಗ್ರ ದರ್ಶನವು ಅವರ ವೇದಾಂತದ ನಂಬಿಕೆಯ ಒಂದು ಸಂಕ್ಷಿಪ್ತ ಆದರೆ ವ್ಯಾಪಕ ವಿಧಾಯಕ ಹೇಳಿಕೆಯೊಂದರಲ್ಲಿ ವ್ಯಕ್ತವಾಗಿದೆ. (C. W. Vol. I, Eleventh Edition p. 124. ಕಂಸದಲ್ಲಿರುವ ಪದಗಳು ವಿವೇಕಾನಂದರದ್ದಲ್ಲ.)

*ಪ್ರತಿಯೊಂದು ಜೀವವೂ ಸತ್ವತಃ ದಿವ್ಯವಾದದ್ದು.*

*(ಬದುಕಿನ) ಗುರಿ ಅಂತರಂಗದಲ್ಲಿರುವ ಈ ದಿವ್ಯತೆಯನ್ನು, ಹೊರಗಿನ ಮತ್ತು ಒಳಗಿನ ಪ್ರಕೃತಿಯನ್ನು ನಿಗ್ರಹಿಸುವುದರ ಮೂಲಕ (ಹೊರಗಿನ ಪ್ರಕೃತಿಯ ನಿಗ್ರಹ ವಸ್ತುವಿಜ್ಞಾನ, ತಾಂತ್ರಿಕತೆ ಮತ್ತು ಸಾಮಾಜಿಕ-ರಾಜಕೀಯ ಪ್ರಕ್ರಿಯೆಗಳ ಮೂಲಕ) ಒಳಗಿನ ಪ್ರಕೃತಿಯ ನಿಗ್ರಹದ(ನೈತಿಕ, ಕಲಾತ್ಮಕ ಹಾಗೂ ಆಧ್ಯಾತ್ಮಿಕ ಪ್ರಕ್ರಿಯೆಗಳ) ಮೂಲಕ ವ್ಯಕ್ತಪಡಿಸುವುದು. 'ಇದನ್ನು ಕರ್ಮ ಅಥವಾ ಪೂಜೆ ಅಥವಾ ಮನೋನಿಗ್ರಹ ಅಥವಾ ತಾತ್ವಿಕ ಚಿಂತನೆ ಇವುಗಳಲ್ಲಿ ಒಂದರಿಂದ ಅಥವಾ ಹೆಚ್ಚಿನವುಗಳಿಂದ ಅಥವಾ ಹಲವನ್ನು ಸೇರಿಸಿ ಮಾಡು– ಮತ್ತು ಮುಕ್ತನಾಗು.*

*ಸಮಸ್ತ ಧರ್ಮವೂ ಇಷ್ಟೇ. ತತ್ವಗಳು, ಸಿದ್ಧಾಂತಗಳು, ಮತಧರ್ಮ ಪ್ರಕ್ರಿಯೆಗಳು, ಪುಸ್ತಕಗಳು, ದೇವಾಲಯಗಳು, ದೇವತಾಮೂರ್ತಿಗಳು ಇವೆಲ್ಲ ಗೌಣ ವಿವರಗಳು.*

ಉಪನಿಷತ್ತಿನ ಋಷಿಗಳು ಮಾನವನ ನಿಜವಾದ ವೈಭವವನ್ನು ಸಾಕ್ಷಾತ್ಕರಿಸಿಕೊಳ್ಳಲು ವೈಜ್ಞಾನಿಕ ಮಾರ್ಗವನ್ನು ಅನಾಸಕ್ತಿಯಿಂದ ಅನುಸರಿಸಿದರು. ಬುದ್ಧನಿಂದ ರಾಮಕೃಷ್ಣರವರೆಗಿನ ಸಂತರು ತಮ್ಮ ಆಧ್ಯಾತ್ಮಿಕ ಪ್ರಯೋಗಗಳಿಂದ ಆ ಋಷಿಗಳ ಅನುಭವಗಳನ್ನು ದೃಢೀಕರಿಸಿದರು. ಶ್ವೇತಾಶ್ವತರೋಪನಿಷತ್ತಿನ ಒಂದು ಅಮರವಾದ ಮಂತ್ರದಲ್ಲಿ ಆ ಅನುಭವವು ಪ್ರಕಾಶಮಾನವಾದ ರೀತಿಯಲ್ಲಿ ವ್ಯಕ್ತವಾಗಿದೆ. ವಿಜ್ಞಾನ ಮತ್ತು ಧರ್ಮ ಎಂಬ ಈ ಅಧ್ಯಯನಕ್ಕೆ ಅದು ಉಚಿತವಾದ ಭರತ ವಾಕ್ಯವಾಗುತ್ತದೆ.

ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ
ಆ ಯೇ ಧಾಮಾನಿ ದಿವ್ಯಾನಿ ತಸ್ಥುಃ
ವೇದಾಹಮೇತಂ ಪುರುಷಂ ಮಹಾಂತಂ
ಆದಿತ್ಯವರ್ಣಂ ತಮಸಃ ಪರಸ್ತಾತ್ ;
ತಮೇವ ವಿದಿತ್ವಾ ಅತಿಮೃತ್ಯುಮೇತಿ
ನಾನ್ಯಃ ಪಂಥಾ ವಿದ್ಯತೇ ಅಯನಾಯ–

ಮಾನವನ ಸ್ವಾತಂತ್ರ್ಯ ಎಂಬ ನಿರ್ಣಾಯಕ ವಿಷಯವು ಅವನು ಎಲ್ಲ ಭೌತಪ್ರಕೃತಿಯಂತೆ, ಕಾರ್ಯಕಾರಣ ಸಂಬಂಧಗಳ ನೆಯ್ಗೆ ಮಾತ್ರ, ಇಚ್ಛಾಸ್ವಾತಂತ್ರ್ಯವಿಲ್ಲದವನು ಅಥವಾ ಮಾನವನು

ತನ್ನ ಅಂತರಾಳದಲ್ಲಿ ಇರುವ ಆತ್ಮದ ಸ್ವಾತಂತ್ರ್ಯದ ಕಡೆ ಗಮನವನ್ನು ಕೇಂದ್ರೀಕರಿಸುವವನು ಎಂಬ ಎರಡರ ನಡುವಿನ ಹಗ್ಗದ ಮೇಲೆ ನೇತಾಡುತ್ತಿದೆ. ಜಗತ್ತಿನಾದ್ಯಂತ ನಡೆಯುತ್ತಿರುವ ಸಮಕಾಲೀನ ನರವ್ಯೂಹಶಾಸ್ತ್ರ ಮತ್ತು ಮಿದುಳುಗಳ ಸಂಶೋಧನೆ ಈ ಸಮಸ್ಯೆಗೆ ಪರಿಹಾರವನ್ನು ಹುಡುಕುತ್ತಿದೆ. ಭಾರತವು ಅಧ್ಯಾತ್ಮ ವಿಜ್ಞಾನದ ದೃಷ್ಟಿಯಿಂದ ದೀರ್ಘಕಾಲದ ಹಿಂದೆಯೇ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡಿತ್ತು. ಸ್ವಾಮಿ ವಿವೇಕಾನಂದರು ತಾವು ಷಿಕಾಗೋದಲ್ಲಿ ನೀಡಿದ ಐತಿಹಾಸಿಕ ಉಪನ್ಯಾಸದಲ್ಲಿ ಮೇಲೆ ಉದ್ಧರಿಸಿದ ಮಂತ್ರದ ಬೆಳಕಿನಲ್ಲಿ ಮತ್ತು ಈ ವಿಷಯದ ಮೇಲೆ ಅಂದಿಗೆ ನಡೆಯುತ್ತಿದ್ದ ಚರ್ಚೆಗಳ ಸಂದರ್ಭದಲ್ಲಿ ಹೀಗೆ ಹೇಳಿದರು (C.W. Vol.I. Eleventh Edition p. 11);

*ಮಾನವನು ಬಿರುಗಾಳಿಯಲ್ಲಿ ಸಿಕ್ಕಿರುವ ಒಂದು ಸಣ್ಣ ದೋಣಿಯೇ? ಒಂದು ಸಾರಿ ನೊರೆಯಿಂದ ಕೂಡಿದ ದೊಡ್ಡ ಅಲೆಯ ನೆತ್ತಿಯ ಮೇಲೇರಿ ಮರುಕ್ಷಣವೆ ಪಾತಾಳಕ್ಕೆ ಎಸೆಯಲ್ಪಡುವವನೇ ಅವನು ? ಒಳ್ಳೆಯ ಮತ್ತು ಕೆಟ್ಟ ಕರ್ಮಗಳ ಹೊಡೆತಕ್ಕೆ ಸಿಕ್ಕಿ ಅತ್ತ ಇತ್ತ ಅಲೆಯುತ್ತಿರುವವನೆ ಅವನು? ಅನವರತವೂ ಗರ್ಜಿಸುತ್ತ ಪ್ರವಹಿಸುತ್ತಿರುವ, ಎಂದಿಗೂ ಯಾವ ಹೊಂದಾಣಿಕೆಗೂ ಜಗ್ಗದ ಕಾರ್ಯಕಾರಣಗಳೆಂಬ ಪ್ರಚಂಡ ಅಲೆಗಳಲ್ಲಿ ಸಿಕ್ಕಿದ, ಶಕ್ತಿ ಹೀನವಾದ ದಿಕ್ಕಿಲ್ಲದ ಒಂದು ಹಾಳಾದ ದೋಣಿಯೆ ಅವನು? ವಿಧವೆಯರ ಕಂಬನಿಗೆ ಕರಗದೆ, ತಬ್ಬಲಿಗಳ ಗೋಳಿಗೆ ಮರುಗದೆ, ತನ್ನ ದಾರಿಯಲ್ಲಿ ಸಿಕ್ಕಿದುದನ್ನೆಲ್ಲ ನುಚ್ಚುನೂರು ಮಾಡುತ್ತಿರುವ ಕಾರ್ಯಕಾರಣಗಳೆಂಬ ಮಹಾಚಕ್ರದ ಕೆಳಗೆ ಇರುವ ಒಂದು ಕೀಟವೆ ಮಾನವ? ಇದನ್ನು ಯೋಚಿಸಿದರೆ ನಮ್ಮ ಹೃದಯ ಕುಸಿಯುತ್ತದೆ. ಆದರೆ, ಇದು ಪ್ರಕೃತಿ ನಿಯಮ. ಹಾಗಾದರೆ ಭರವಸೆ ಇಲ್ಲವೆ ? ಇದರಿಂದ ಬಿಡುಗಡೆ ಇಲ್ಲವೆ ? ಹೃದಯಾಂತರಾಳದಿಂದ ಹೊಮ್ಮಿದ ನಿರಾಶೆಯ ಈ ಆರ್ತನಾದ ಕರುಣಾಮಯನನ್ನು ಮುಟ್ಟಿತು. ಧೈರ್ಯ ಮತ್ತು ಸಮಾಧಾನವನ್ನು ಕೊಡುವ ನುಡಿಗಳು ಇಳಿದುಬಂದು ಉಪನಿಷತ್ತಿನ ಋಷಿಯೊಬ್ಬನಿಗೆ ಸ್ಫೂರ್ತಿ ನೀಡಿದುವು. ಅವನು ಜಗತ್ತಿನ ಎದುರಿಗೆ ನಿಂತು ಜಯಘೋಷದಿಂದ ಈ ಆನಂದದ ಸುದ್ದಿಯನ್ನು ಸಾರಿದನು :*

*ಅಮೃತಪುತ್ರರೇ ಕೇಳಿ ; ಸ್ವರ್ಗಧಾಮದಲ್ಲಿರುವವರು ಕೂಡ ಕೇಳಿ, ಮೋಹದಾಚೆ, ಕತ್ತಲಿನಾಚೆ ಇರುವ ಸನಾತನ ಪುರುಷನನ್ನು ನಾನು ಕಂಡಿರುವೆ. ಅವನನ್ನು ಸಾಕ್ಷಾತ್ಕಾರ ಮಾಡಿಕೊಂಡರೆ ಮಾತ್ರ ನೀವು ಸಾವಿನಿಂದ ಪಾರಾಗಬಹುದು.*

*ಅಮೃತ ಪುತ್ರರೇ! ಎಷ್ಟು ಮಧುರವಾದ, ಎಂಥ ಭರವಸೆ ನೀಡುವ ಹೆಸರು! ಸಹೋದರರೇ, ಅಮೃತ ಪುತ್ರರು ಎಂಬ ಮಧುರ ನಾಮದಿಂದ ನಿಮ್ಮನ್ನು ಸಂಬೋಧಿಸಲು ಅನುಮತಿ ನೀಡಿ. ನೋಡಿ, ಹಿಂದುಗಳು ನಿಮ್ಮನ್ನು ಪಾಪಿ ಎಂದು ಖಂಡಿತ ಕರೆಯುವುದಿಲ್ಲ. ನಾವು ಭಗವಂತನ ಮಕ್ಕಳು; ಅಮೃತಾನಂದದಲ್ಲಿ ಭಾಗಿಗಳು; ಪರಿಶುದ್ಧಾತ್ಮರು ನಾವು, ಪರಿಪೂರ್ಣರು ನಾವು. ನೀವೆಲ್ಲರೂ ಜಗತ್ತಿನ ಪವಿತ್ರಾತ್ಮರು. ಪಾಪಿಗಳು ಎಂದು ಮಾನವನನ್ನು ಕರೆಯುವುದೇ ಘೋರ ಪಾತಕ, ಮಾನವ ಸ್ವಭಾವಕ್ಕೆ ಬಗೆಯುವ ಮಹಾದ್ರೋಹ. ಸಿಂಹಗಳೇ, ಬನ್ನಿ, ನೀವು ಕುರಿಗಳು ಎಂಬ ಭ್ರಾಂತಿಯನ್ನು ಕೊಡಹಿ ಹಾಕಿ. ಅಮೃತಾತ್ಮರು ನೀವು. ಮುಕ್ತಾತ್ಮರು ನೀವು. ಆನಂದ ಮಯರು ನೀವು, ನಿತ್ಯಾತ್ಮರು ನೀವು. ನೀವು ಪ್ರಕೃತಿಯಲ್ಲ ; ನೀವು ದೇಹಗಳಲ್ಲ ; ಪ್ರಕೃತಿ ನಿಮ್ಮ ಸೇವಕ, ನೀವು ಪ್ರಕೃತಿಯ ಸೇವಕರಲ್ಲ.*

ಅನು : ಪ್ರಭುಶಂಕರ

೧೫

# ಶ್ರದ್ಧೆ ಮತ್ತು ವಿಚಾರ*

## ೧. ಪೀಠಿಕೆ

ಈ ಸಂಜೆ ಶ್ರದ್ಧೆ ಹಾಗೂ ವಿಚಾರ ಎಂಬುದರ ಬಗೆಗೆ ಮಾತನಾಡಲು ನೀವು ನನ್ನನ್ನು ಕೇಳಿದ್ದೀರಿ. ಪ್ರಶಾಂತವೂ ಪವಿತ್ರವೂ ಉಲ್ಲಾಸಕರವೂ ಆದ ಆಶ್ರಮದ ಈ ವಾತಾವರಣವು ಉಪನ್ಯಾಸಕ ಹಾಗೂ ಶ್ರೋತೃಗಳಿಬ್ಬರೂ ಒಟ್ಟಿಗೆ ಕುಳಿತು ಗಹನವಾದ ಆಧ್ಯಾತ್ಮಿಕ ವಿಷಯಗಳನ್ನು ಚರ್ಚಿಸಲು ಸ್ಫೂರ್ತಿಯನ್ನೀಯುತ್ತದೆ. ಈ ಸುಂದರ ಸಂಜೆಯ ವೇಳೆ ಇಂಥ ವಾತಾವರಣ ಶ್ರೇಷ್ಠವಾದ ವಿಷಯಗಳನ್ನು ಸರಳವಾಗಿ ಪ್ರತಿಪಾದಿಸಲು ನೆರವಾಗುತ್ತದೆ.

ದೆಹಲಿಯಿಂದ ಶ್ರೀನಗರಕ್ಕೆ ಹೋಗುವ ನನ್ನ ಪ್ರಯಾಣದ ಅವಧಿಯಲ್ಲಿ ಮತ್ತೊಮ್ಮೆ ಗ್ವಾಲಿಯರ್‌ಗೆ ಬಂದು ಒಂದೆರಡು ದಿನಗಳನ್ನು ನಿಮ್ಮೊಡನೆ ಕಳೆಯಲು ನನಗೆ ತುಂಬಾ ಹರ್ಷವೆನಿಸಿದೆ. ನಮ್ಮ ದೇಶದಲ್ಲಿನ ಈ ಪ್ರವಚನ ಪ್ರವಾಸದ ಅವಧಿಯಲ್ಲಿ ಈಗಾಗಲೇ ಬೆಂಗಳೂರು ಬೊಂಬಾಯಿ, ಇಂದೂರಿನ ಪ್ರವಾಸವನ್ನು ಮುಗಿಸಿದ್ದೇನೆ.

## ೨. ಶ್ರದ್ಧೆ ಮತ್ತು ವಿಚಾರಗಳ ನಡುವೆ ಸಂಘರ್ಷ : ಇದು ಪಾಶ್ಚಾತ್ಯರ ಅನುಭವವೇ ಹೊರತು ಭಾರತೀಯರದ್ದಲ್ಲ

ಆಂಗ್ಲ ಭಾಷೆಯಲ್ಲಿ ನಾವು 'Faith' ಮತ್ತು 'Reason' ಎಂದು ಹೇಳುತ್ತೇವೆ. ಸಂಸ್ಕೃತ ಭಾಷೆಯಲ್ಲಿ ಈ ಭಾವನೆಗಳು ವ್ಯಕ್ತಪಡಿಸುವ ಸುಂದರವಾದ ಶಬ್ದಗಳಿವೆ. 'Faith' ಎನ್ನುವುದಕ್ಕೆ ಶ್ರದ್ಧೆ ಎಂಬ ಶ್ರೇಷ್ಠ ಪದವನ್ನು ಬಳಸಿದ್ದಾರೆ. ನಮ್ಮ ಸಂಪ್ರದಾಯದಲ್ಲಿ ಇದು ಅತ್ಯಂತ ಶ್ರೇಷ್ಠವಾದ ಪದ. ಆಂಗ್ಲ ಭಾಷೆಯಲ್ಲಿನ Faith ಅಥವಾ belief ಎಂಬ ಪದಕ್ಕಿಂತ ಹೆಚ್ಚಿನ ಅರ್ಥವನ್ನು ಅದು ತಿಳಿಸುತ್ತದೆ. 'Reason'ಗೆ ಸಂವಾದಿಯಾದ ಸಂಸ್ಕೃತ ಪದಗಳೆಂದರೆ ಯುಕ್ತಿ, ಉಪಪತ್ತಿ ಹಾಗೂ ಕೆಲವು ವೇಳೆ ಬುದ್ಧಿ ಎಂದಾಗುತ್ತದೆ. ಶ್ರದ್ಧೆ ಮತ್ತು ಯುಕ್ತಿ ಅಥವಾ ವಿಚಾರಗಳ ನಡುವಿನ ಸಂಬಂಧವೇನು ? ಪಾಶ್ಚಾತ್ಯ ದೇಶಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಇತಿಹಾಸದ ಪ್ರಾರಂಭದಿಂದಲೂ ಇವೆರಡೂ ಸತತವಾಗಿ ಸಂಘರ್ಷವನ್ನು ಹೊಂದಿರುವ ಪದಗಳು. ಶ್ರದ್ಧೆ ವೈಚಾರಿಕತೆಯ ವಿರೋಧಿ. ವಿಚಾರ ಶ್ರದ್ಧೆಯ ವಿರೋಧಿ. ಭಾರತದಲ್ಲೂ ನಮ್ಮಲ್ಲಿ ಹೆಚ್ಚಿನ ಜನ, ಪಾಶ್ಚಾತ್ಯದೇಶದ ಮಾದರಿಯಲ್ಲಿ ಹೆಚ್ಚಿನ ಶಿಕ್ಷಣ ಪಡೆದ ಭಾರತೀಯರನೇಕರು, ಅವೆರಡೂ ಶಾಶ್ವತವಾದ ವಿರೋಧಿಗಳು ಎಂದು ಅನುಮೋದಿಸುವುದನ್ನು ನಾವು ಕಲಿತಿದ್ದೇವೆ.

---

* ೧೯೭೬ ಮೇ ೨೭ರಂದು ಗ್ವಾಲಿಯರ್ ರಾಮಕೃಷ್ಣ ಆಶ್ರಮದಲ್ಲಿ ನೀಡಿದ ಉಪನ್ಯಾಸವನ್ನು ಆಧರಿಸಿದೆ.

ಭಾರತೀಯರ ದೃಷ್ಟಿಯಲ್ಲಿ ಇವೆರಡರ ಸಂಬಂಧವನ್ನು ಅರಿತುಕೊಳ್ಳುವುದಕ್ಕೆ ಇದು ಸಕಾಲ. ಆಗ ಮಾನವನ ಸತ್ಯಾನ್ವೇಷಣೆಯ ಹಾದಿಯಲ್ಲಿ ಇವೆರಡಕ್ಕೂ ಇರುವ ನಿಕಟವಾದ ಪ್ರತ್ಯೇಕಿಸಲಾಗದ ಸಂಬಂಧವನ್ನು ನಾವು ಅರಿಯಬಲ್ಲೆವು. ಪಾಶ್ಚಾತ್ಯದೇಶದ ಚರಿತ್ರೆಯ ಪ್ರಮುಖ ಲಕ್ಷಣಗಳಾದ ಶ್ರದ್ಧೆ ಮತ್ತು ವೈಚಾರಿಕತೆಗೆ ಸತತವಾಗಿ ಸಂಭವಿಸುವ ಸಂಘರ್ಷವನ್ನು ನಾವು ಎಂದೂ ಅನುಭವಿಸಿಲ್ಲ. ಇದನ್ನು ಆ ದೇಶದ ಧಾರ್ಮಿಕ ಇತಿಹಾಸ ಹಾಗೂ ವೈಜ್ಞಾನಿಕ ಇತಿಹಾಸದಲ್ಲಿ ಗುರುತಿಸಬಹುದು. ನಮ್ಮ ಸಂಪ್ರದಾಯದ ಕಡೆಗೆ ಮನಸ್ಸನ್ನು ಹರಿಸಿ ನೋಡಿದಾಗ, ಇವೆರಡು ಮಾತ್ರವಲ್ಲದೆ, ಮಾನವನ ಸತ್ಯಾನ್ವೇಷಣೆ ಮತ್ತು ಜೀವನ ಸಾಫಲ್ಯಗಳೂ ಕೂಡ ಒಂದು ಹೊಸ ಬೆಳಕಿನಲ್ಲಿ ನಮಗೆ ಕಂಡುಬರುತ್ತವೆ. ಇದು ಆ ಮಹಾ ಅನ್ವೇಷಣೆಯಲ್ಲಿ ಭೌತಿಕ ವಿಜ್ಞಾನ ಮತ್ತು ಧರ್ಮ ಪರಸ್ಪರ ಪೂರಕವಾಗಿರುವುದನ್ನು ತೋರಿಸುತ್ತದೆ.

## ೩. ಪಶ್ಚಿಮದಲ್ಲಿ ಸಂಘರ್ಷದ ಕಥೆ

ಧರ್ಮವು ಶ್ರದ್ಧೆಯನ್ನವಲಂಬಿಸಿದೆ. ವಿಜ್ಞಾನವು ವಿಚಾರವನ್ನವಲಂಬಿಸಿದೆ. ಪಾಶ್ಚಾತ್ಯರ ಈ ವಿಶಿಷ್ಟ ದೃಷ್ಟಿಕೋನವನ್ನೇ ನಮಗೆ ಶಾಲಾಕಾಲೇಜುಗಳಲ್ಲಿ ಕಲಿಸಲಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಹೀಗೆ ಹಿಂದೆಯೂ ಇತ್ತು. ಈಗಲೂ ಅದು ಇದೆ. ಭೌತವಿಜ್ಞಾನವು ಧರ್ಮವಿರೋಧಿ. ಅಂತೆಯೇ ಧರ್ಮವು ಈ ಭೌತವಿಜ್ಞಾನ ವಿರೋಧಿ. ಧರ್ಮವು ವಿಜ್ಞಾನವಿರೋಧಿ ಎನಿಸಿದ ಸಂದರ್ಭದಲ್ಲಿ ಅದು ಸಹಜವಾಗಿಯೇ ಕೇವಲ ನಂಬಿಕೆಯು, ವಿಚಾರವಿರೋಧಿ ಎಂಬುದನ್ನು ಅನುಸರಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ಅನೇಕ ಬಾರಿ ನಂಬಿಕೆಯು ಮಂತ್ರಮಾಟಗಳು ಹಾಗೂ ಮೂಢನಂಬಿಕೆಯೊಡನೆ ತಳಕುಹಾಕಿಕೊಂಡಿರುತ್ತದೆ. ಇವೆರಡರ ಸಂಘರ್ಷ ಹಾಗೂ ಒಂದು ನಂಬಿಕೆ ಮತ್ತೊಂದು ನಂಬಿಕೆಯೊಡನೆ ಇರುವ ಇಂಥ ವಿರೋಧವು ಪಾಶ್ಚಾತ್ಯ ಇತಿಹಾಸದಲ್ಲಿ ಅಂದರೆ ಗ್ರೀಸ್, ರೋಮ್ ದೇಶಗಳ ಕಾಲದಿಂದಲೂ, ಅದಕ್ಕಿಂತ ಮುನ್ನವೂ ಇದ್ದುದೆ. ನಂಬಿಕೆ-ನಂಬಿಕೆಗಳ ನಡುವೆ ಸಂಘರ್ಷವು ಕ್ರೈಸ್ತಮತವು ಉಗಮಿಸುವ ಕಾಲಕ್ಕಿಂತಲೂ ಮುಂಚಿನ ಸೆಮೆಟಿಕ್ ಸಮಾಜದ ಕಾಲದಿಂದಲೂ ಇದ್ದು, ಕ್ರೈಸ್ತಧರ್ಮದ ಆಗಮನದ ನಂತರ ತೀವ್ರಗೊಂಡಿತ್ತು. ಈ ಸಂಘರ್ಷ ಒಂದೆಡೆ ಕ್ರೈಸ್ತ ಹಾಗೂ ಕ್ರೈಸ್ತೇತರ ನಡುವೆ ಸತತವಾಗಿ ಅಸಹನೆ, ಹಿಂಸೆ, ಸಮರದ ರೂಪದಲ್ಲಿ ಮಧ್ಯಕಾಲೀನ ಯುಗದಲ್ಲಿ ದೀರ್ಘವಾದ ರಕ್ತಪಾತದ ಆಕ್ರಮಣದ ರೂಪದಲ್ಲಿ, ಅನಂತರ ಮತ್ತೊಂದೆಡೆ ಹದಿನಾರನೇ ಶತಮಾನದಲ್ಲಿ ಕ್ರೈಸ್ತಮತದಲ್ಲೇ ಇದ್ದ ವಿಭಿನ್ನ ಪಂಥಗಳ ನಡುವೆ ಹಾಗೂ ಇದರ ಮುಂದಿನ ಶತಮಾನದಲ್ಲಿ ಕ್ಯಾಥೋಲಿಕರು ಹಾಗೂ ಪ್ರಾಟೆಸ್ಟೆಂಟರ ನಡುವೆ ೩೦ ವರ್ಷಗಳ ಕಾಲ ನಡೆದ ಘೋರ ಸಂಗ್ರಾಮದ ವಿಧ್ವಂಸಕರ ಉಚ್ಛ್ರಾಯ ಸ್ಥಿತಿಯಲ್ಲಿ ವ್ಯಕ್ತವಾಯಿತು.

ವಿಜ್ಞಾನ ಮತ್ತು ವಿಚಾರ ಹಾಗೂ ಧರ್ಮ ಮತ್ತು ನಂಬಿಕೆ ಇವೆರಡರ ನಡುವಣ ವಿರೋಧಗಳು ಕಳೆದ ೪೦೦ ವರ್ಷಗಳಿಂದಲೂ ಪ್ರಮುಖವಾದ ಸಂಗತಿಯಾಗಿವೆ. ಪಾಶ್ಚಾತ್ಯರು ತಿಳಿದಿರುವಂತೆ ಈ ವಿಜ್ಞಾನದ ಜೀವದ್ರುವವೆನಿಸಿರುವ ವೈಚಾರಿಕತೆಯೇ ಅವಸಾನಸೂಚಕಗಳಾದ ಮರಣ ಗಂಟೆಯಾಯಿತು. ಧರ್ಮಗಳು ಪಾಶ್ಚಾತ್ಯ ದೇಶದಲ್ಲಿ ಬೆಳೆದುಬಂದುದೇ ಹೀಗೆ. ಅಲ್ಲಿನ ವಿಜ್ಞಾನವು ಧರ್ಮವನ್ನು ವಿಚಾರಕ್ಷೇತ್ರದ ಪರಿಧಿಯ ಆಚೆಗೆ ಇರಬೇಕೆಂದು ವಿಧಿಸಿತು. ಹೀಗಾಗಿ ಧರ್ಮವೆಂದರೆ ಕೇವಲ ಆಚಾರ, ಮತಸಿದ್ಧಾಂತಗಳು, ನಂಬಿಕೆಗಳು ಮಾತ್ರ. ಅವನ್ನು ನೀವು ನಂಬಬೇಕು, ನೀವು ಪ್ರಶ್ನಿಸಲಾಗದು. ವಿಚಾರದ ಪಾತ್ರವಂತೂ ಇಂತಹ ನಂಬುಗೆಯನ್ನು ಸಮರ್ಥಿಸಿಕೊಳ್ಳುವುದೇ ಆಗಿತ್ತು.

ಇಂತಹ ಧಾರ್ಮಿಕ ಮನೋಭಾವನೆಗಳು ವೈಜ್ಞಾನಿಕ ಮನೋಧರ್ಮದೊಂದಿಗೆ ಹೊಂದಿಕೊಳ್ಳುವುದಿಲ್ಲ. ಏಕೆಂದರೆ ವೈಜ್ಞಾನಿಕ ಮನೋಧರ್ಮವೆಂದರೆ ತಥ್ಯಾಂಶಗಳ ಅನಿರ್ಬಂಧಿತವಾದ

ಅನ್ವೇಷಣೆ, ಅವುಗಳ ವಿಮರ್ಶಾತ್ಮಕ ಅಧ್ಯಯನ, ಅವುಗಳನ್ನು ಪ್ರಶ್ನಿಸುವುದು ಮತ್ತು ಇವುಗಳಿಂದ ಪಡೆದ ನಿರ್ಣಯುಗಳ ಪರೀಕ್ಷೆ. ವಸ್ತುಸ್ಥಿತಿಯನ್ನು ಅನ್ವೇಷಿಸಲು ನಿರಾತಂಕ ಶೋಧನೆ ಅವುಗಳ ಸ್ವರೂಪ ಕುರಿತ ಜಿಜ್ಞಾಸೆ ಮತ್ತು ಅವುಗಳನ್ನು ವಿಚಾರಕ್ಕೆ ಗುರಿಪಡಿಸುವುದು. ಹೀಗೆ ವಿಮರ್ಶಾತ್ಮಕ ವಿಚಾರವು ಆಧುನಿಕ ಭೌತವಿಜ್ಞಾನಕ್ಕೆ ಒಂದು ದೊಡ್ಡ ಶಕ್ತಿಯಾಗಿ ಪರಿಣಮಿಸಿತು. ಪಾಶ್ಚಾತ್ಯ ಸನ್ನಿವೇಶದಲ್ಲಿ ಧರ್ಮವು ಮೊದಲಿಗೆ ಅಧಿಕೃತ ಕ್ರೈಸ್ತ ಮಂಡಲಿ ಹಾಗೂ ಅದರ ನಂಬಿಕೆ ಮತ್ತು ಮತಾಚರಣೆಗಳ ಪ್ರಬಲ ರಕ್ಷಣೆಯಲ್ಲಿ ದೃಢವಾಗಿತ್ತು. ವಿಧೇಯತೆ ಮತ್ತು ಅನುಸರಣೆಯನ್ನು ಒತ್ತಾಯಿಸುವ ಅಧಿಕಾರ ಹೊಂದಿತ್ತು ಮತ್ತು ಈ ನೂತನ ವಿಮರ್ಶಾತ್ಮಕ ಬೌದ್ಧಿಕ ಅನ್ವೇಷಣೆಯ ಉತ್ಸಾಹವನ್ನು, ಉದಯೋನ್ಮುಖ ವಿಜ್ಞಾನದ ಮನೋಭಾವವನ್ನು ದಮನ ಮಾಡಲು ಪ್ರಯತ್ನಿಸಿತು. ಆದರೆ ಇತ್ತೀಚಿನ ಇತಿಹಾಸದಲ್ಲಿ ನಾವು ಗಮನಿಸಿರುವಂತೆ ವಿಜ್ಞಾನವು ಆರಂಭದೆಸೆಯಲ್ಲಿನ ಸ್ವಲ್ಪ ಹಿನ್ನಡೆಗಳ ತರುವಾಯ ಜಯಗಳಿಸಿತು. ವಿಮರ್ಶೆ ಪ್ರಭುತ್ವಕ್ಕೇರಿತು. ಮತ್ತು ಕೇವಲ ನಂಬಿಕೆಯನ್ನವಲಂಬಿಸಿದ ಧರ್ಮವು ಸೋಲನ್ನನುಭವಿಸಿತು. ಆರಂಭದಲ್ಲಿ ಅದು ಅಪಾಯಕರ ದೋಷವೆಂದು ಭಾವಿಸಲ್ಪಟ್ಟು ಅಂತಿಮವಾಗಿ ಅದೊಂದು ಕೇಡೆಸಗದ ಮೂಢನಂಬಿಕೆ ಯೆಂದು ತಿರಸ್ಕೃತವಾಯಿತು.

## ೪. ಭಾರತೀಯ ಸಂದರ್ಭದಲ್ಲಿ ಈ ಸಂಘರ್ಷದ ಅಪ್ರಸ್ತುತತೆ

ಹೀಗೆ ಪಾಶ್ಚಾತ್ಯನು ೧೯ನೇ ಶತಮಾನದ ಅಂತ್ಯಕ್ಕೆ ವಿಜ್ಞಾನದ ಹೆಸರಿನಲ್ಲಿ ವಿಚಾರವಾದಿಯಾದ, ಮತದ ಹೆಸರಿನಲ್ಲಿ ಮೂಢನಂಬಿಕೆಯುಳ್ಳವನೂ, ಸಂಕುಚಿತಮನಸ್ಕನೂ, ಮತಾಂಧನೂ, ಅಸಹಿಷ್ಣುವೂ ಆದನು. ಹೀಗೆ ಇವೆರಡರ ಒಂದು ಅಹಿತ ಸಂಕರವಾದ. ಇದು ಪಾಶ್ಚಾತ್ಯ ದೇಶದ ಇತಿಹಾಸ. ಇದನ್ನು ಭಾರತೀಯರಾದ ನಾವು ಅಧ್ಯಯನ ಮಾಡುವಂತಾದುದಲ್ಲದೆ ಅದನ್ನು ಅನುಕರಿಸುವವರಾದೆವು. ಇಂತಹ ವಿದ್ಯಾಭ್ಯಾಸವು ಆಧುನಿಕ ವಿಜ್ಞಾನದ ವಿಮರ್ಶಾತ್ಮಕ ಸ್ವಭಾವವನ್ನು ಮೆಚ್ಚಲು ನಮಗೆ ನೆರವಾಯಿತು. ಅದರ ಮನೋಭಾವ ಮತ್ತು ವಿಧಾನದ ಮಾದರಿಯನ್ನು ನಮ್ಮದೇ ಆದ ಸಮಸ್ಯೆಗಳಿಗೂ ಅನ್ವಯಿಸುವಂತೆ ಸ್ಫೂರ್ತಿ ನೀಡಿತು. ಅಲ್ಲದೆ ಅದು ಆಧುನಿಕ ಎಚ್ಚೆತ್ತ ಯುಗದಲ್ಲಿ ಕೇವಲ ಶ್ರದ್ಧೆಯೇ ಆಧಾರವಾಗಿರುವ ನಮ್ಮ ಸನಾತನಧರ್ಮವು ಕೇವಲ ಅಂಧಶ್ರದ್ಧೆಗಳ ಕಂತೆ, ವಿಚಾರಕ್ಕೆ ಯೋಗ್ಯವಲ್ಲ ಎಂದು ಅದನ್ನು ನಾವು ಸಂದೇಹಿಸುವಂತೆ ಮಾಡಿತು. ಹೀಗೆ ನಮ್ಮ ಸನಾತನ ಸಂಸ್ಕೃತಿಯ ಅಸ್ತಿಭಾರವನ್ನೇ ತಿರಸ್ಕರಿಸುವಂತಾಯಿತು. ಈ ಮನೋಭಾವವು—ಯಾವ ವಿಧವಾದ ವಿಮರ್ಶೆಯೂ ಇಲ್ಲದೆ ನಮ್ಮ ಜನಸಮುದಾಯದ ಕೆಲವು ವರ್ಗಗಳು ಪಶ್ಚಿಮದೇಶದ ಆಧುನಿಕ ರೀತಿ ಹಾಗೂ ಮಾರ್ಗಗಳನ್ನು ಅನುಕರಿಸುತ್ತಾ ಅದರ ಮಹತ್ವವಾದ ಅಂಶಗಳನ್ನು ಅರಗಿಸಿಕೊಳ್ಳದೆ ಅದರ ಟೊಳ್ಳಾದ, ಪ್ರದರ್ಶನಾತ್ಮಕವಾದ ಅಂಶವನ್ನು ಅನುಸರಿಸುವಂತೆ ಪ್ರೋತ್ಸಾಹಿಸಿತು. ಜನಸಮುದಾಯದ ಇನ್ನುಳಿದ ಕೆಲವು ವರ್ಗಗಳು ವಿಮರ್ಶೆಯೇ ಇಲ್ಲದೆ ನಮ್ಮ ರಾಷ್ಟ್ರೀಯ ಮೂಢನಂಬಿಕೆಗಳನ್ನು ಸಮರ್ಥಿಸಿಕೊಳ್ಳುತ್ತಾ ಮತ್ತೆ ಹಿಂದಕ್ಕೆ ಹೋದೆವು. ನಮ್ಮದೇ ಆದ ರೀತಿಯಲ್ಲಿ ಆಧುನಿಕ ಯುಗದ ಸವಾಲುಗಳನ್ನು ಎದುರಿಸಲು ತೆಗೆದುಕೊಳ್ಳಬೇಕಾದ ರಾಷ್ಟ್ರದ ನಿಲವನ್ನು ಸಾಮಾನ್ಯವಾಗಿ ದುರ್ಬಲಗೊಳಿಸುತ್ತಾ ಶತಶತಮಾನಗಳ ನಮ್ಮ ರಾಷ್ಟ್ರಜೀವನದ ಚಾರಿತ್ರಿಕ ಸಾಧ್ಯತೆಯನ್ನು ದೃಢಪಡಿಸುವ ಸಲುವಾಗಿ ನಾವು ಮತ್ತೆ ಹಿಂದಕ್ಕೆ ಹೋದೆವು.

ನಮ್ಮ ಆಧುನಿಕ ಇತಿಹಾಸದ ಈ ಸಂಧಿಕಾಲದಲ್ಲಿ ನಮ್ಮ ಸಂಸ್ಕೃತಿಯು ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರಂತಹ ಉನ್ನತಮಟ್ಟದ ಆಧ್ಯಾತ್ಮಿಕ ಗುರುಗಳು ಉದಿಸುವಂತೆ ಮಾಡಿತು. ಅವರು ಈ ಪ್ರಮುಖ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವ ಹಾಗೂ ನಿಭಾಯಿಸುವ ವಿಶಿಷ್ಟ

ಭಾರತೀಯ ವಿಧಾನವನ್ನು ನಮಗೆ ಕಲಿಸಿದರು. ಆ ವಿಧಾನವು ನಮಗೆ ಇಂದು ಭಾರತದಲ್ಲಿ ಹಾಗೂ ವಿದೇಶದಲ್ಲಿನ ಭಾರತೀಯರಿಗೆ ವಿಜ್ಞಾನ ಮತ್ತು ಧರ್ಮ ಹಾಗೂ ವಿಚಾರ ಮತ್ತು ನಂಬಿಕೆ ಇವುಗಳ ನಡುವೆ ತೋರುತ್ತಿರುವ ಸಂಘರ್ಷವು ವಿಶ್ವದಲ್ಲಿನ ಸಂಗತಿಯೇನಲ್ಲ ಎಂಬುದನ್ನು ಬೋಧಿಸುತ್ತದೆ. ಭಾರತದ ಐತಿಹಾಸಿಕ ಅನುಭವವು ಬಲಿಷ್ಠವಾದ ತತ್ವಶಾಸ್ತ್ರದ ಅಸ್ತಿತ್ವ ಮತ್ತು ಒಂದು ವಿಧಾನವನ್ನು ಪ್ರಕಟಗೊಳಿಸಿದೆ. ಅದು ಸತ್ಯ ಮತ್ತು ಜೀವನದ ಅಖಂಡತೆಯನ್ನು ಕಂಡುಕೊಂಡಿದೆ. ಅದು ಮಾನವೀಯ ಜೀವನದ ಸೌಂದರ್ಯವನ್ನಾಗಲಿ ಜೀವನದ ಪರಿಪೂರ್ಣ ಮಾನವತೆಯ ಧ್ಯೇಯ ವನ್ನಾಗಲಿ ಕೆಡಿಸಲು ಮತ್ತು ಅದಕ್ಕೆ ವಿರೋಧವನ್ನುಂಟುಮಾಡಲು ಅವಕಾಶವನ್ನೀಯುವುದಿಲ್ಲ. ಆ ತತ್ತ್ವಜ್ಞಾನದ ಬೆಳಕು ಸಾವಧಾನವಾಗಿ ನಮ್ಮ ಕೆಲವು ಜನರಿಗೆ ಸಹಾಯವನ್ನೆಸಗುತ್ತಿದೆ. ಅದು ಇಂತಹ ವಿರೋಧಗಳು ಪಾಶ್ಚಾತ್ಯರ ಅನುಭವಕ್ಕೆ ಸೀಮಿತವೇ ಹೊರತು ವಿಶ್ವಕ್ಕೆಲ್ಲಾ ಅನ್ವಯಿಸುವು ದಿಲ್ಲ ಎಂಬುದನ್ನು ನಮ್ಮ ಅನುಭವಕ್ಕೆ ತಂದುಕೊಡುತ್ತದೆ. ಇಂದು ನಮ್ಮ ಜನರೆಲ್ಲರು ಅಂತಹ ಅನುಭೂತಿಯನ್ನು ಸಾಧಿಸಿಕೊಳ್ಳಬೇಕಾಗಿದೆ. ನಂಬಿಕೆ, ವಿಚಾರ ಹಾಗೂ ಧರ್ಮ ಮತ್ತು ವಿಜ್ಞಾನ ಇವೆರಡರ ಪರಸ್ಪರ ಸಂಬಂಧದ ಸಮಸ್ಯೆಯ ಬಗೆಗೆ ಇರುವ ಭಾರತೀಯ ವಿಧಾನದ ಒಳನೋಟವನ್ನು ಮತ್ತು ಅದರ ಮೇಲೆ ಹತೋಟಿಯನ್ನು ನಾವು ಸಾಧಿಸಿಕೊಳ್ಳಬೇಕಾಗಿದೆ.

ಭಾರತಕ್ಕೆ ಇಂದು ಹೆಚ್ಚಿನ ವಿಜ್ಞಾನದ ಅವಶ್ಯಕತೆಯಿದೆ. ನಮಗೆ ಇಂದು ಹೆಚ್ಚು ವಿಚಾರವಂತಿಕೆ ಬೇಕಾಗಿದೆ. ಆದರೆ, ನಮ್ಮ ಚಾರಿತ್ರಿಕ ಅನುಭವವು ಮತ್ತು ನಾವು ಕೈಗೊಂಡ ಸತ್ಯ ಹಾಗೂ ಜ್ಞಾನದ ದೀರ್ಘಕಾಲದ ಅನ್ವೇಷಣೆಯು ನಮಗೆ ಇಂದು ಜಿಜ್ಞಾಸೆ ಮತ್ತು ವಿಜ್ಞಾನವು ನಂಬಿಕೆ ಹಾಗೂ ಧರ್ಮದ ವಿರೋಧಿಯೆಂದು ಭಾವಿಸಬೇಕಾಗಿಲ್ಲ ಎಂದು ತಿಳಿಸಿಕೊಡುತ್ತದೆ. ಏಕೆಂದರೆ ನಾವು ಎಂದೂ ಅವೆರಡರ ನಡುವೆ ಯಾವ ವಿರೋಧವನ್ನು ಕಾಣಲಿಲ್ಲ ; ಅದು ಅನುಭವಕ್ಕೂ ಬಂದಿಲ್ಲ ; ಬದಲಾಗಿ ಅವೆರಡೂ ಪರಸ್ಪರ ಪೋಷಕಗಳಾಗಿವೆ ಮತ್ತು ಅವೆರಡಕ್ಕೂ ಸಂಬಂಧವಿದೆಯೆಂಬುದನ್ನು ನಾವು ಅರಿತಿದ್ದೇವೆ. ಭಾರತೀಯ ಪರಿಸರದಲ್ಲಿ ಅವೆರಡರ ಸಂಬಂಧವೇನಿತ್ತು ? ಭಾರತದೇಶವು ಈ ಮಹತ್ವಪೂರ್ಣವಾದ ಸಮಸ್ಯೆಗಳಿಗೆ ಹೇಗೆ ಬೆಳಕು ತೋರಿಸುತ್ತಿದೆ ? ಈ ಬೆಳಕನ್ನು ಇಂದು ಭಾರತದ ಪ್ರತಿಯೊಬ್ಬ ಪ್ರಜೆಯೂ ಅವಶ್ಯವಾಗಿ ಸ್ವೀಕರಿಸಬೇಕು. ಪಶ್ಚಿಮದೇಶದ ಅನುಭವದ ಜೊತೆಯಲ್ಲೇ ನಮ್ಮ ಆ ಚಿಂತನೆ ಮತ್ತು ಮನೋಭಾವವನ್ನು ಭಾರತೀಯ ಅನುಭವದ ಹಿನ್ನಲೆಯ ರೂಪದಲ್ಲಿ ಅವಶ್ಯವಾಗಿ ಪಡೆದಿರಬೇಕು. ಇದರ ಫಲವಾಗಿ ವಸ್ತುಗಳ ನೈಜಸ್ವರೂಪವನ್ನು ಅರಿಯಬಲ್ಲೆವು. ದುರದೃಷ್ಟಕರವಾದ ವಿಷಯವೆಂದರೆ ಪಾಶ್ಚಾತ್ಯರಲ್ಲಿ ಧರ್ಮವು ವಿಮರ್ಶಾತ್ಮಕ ಭೌತಿಕ ಜಿಜ್ಞಾಸೆಯ ಉದ್ದೇಶವನ್ನು ಮೆಚ್ಚಲಿಲ್ಲ, ಪ್ರೋತ್ಸಾಹಿಸಲಿಲ್ಲ, ಮಾನ್ಯ ಮಾಡಲಿಲ್ಲ, ಪಶ್ಚಿಮ ದೇಶಕ್ಕೆ ವಿಚಾರ ಹಾಗೂ ಭೌತಿಕವಿಜ್ಞಾನ ಇವೆರಡೂ ಸ್ವತಂತ್ರವಾದ ಪ್ರತ್ಯೇಕ ಅನ್ವೇಷಣೆಯಾಗಿ ರೂಪುಗೊಳ್ಳಬೇಕಾದ ಅನಿವಾರ್ಯತೆ ಒದಗಿತು. ದುರದೃಷ್ಟವಶಾತ್ ಅಂತಹ ಬೆಳವಣಿಗೆ ಉಂಟಾಯಿತು. ಅಂತಹ ಅಧಿಕ ಸಂಘರ್ಷ ಜರುಗಿತು. ಇದರಿಂದಾಗಿ ಆಧುನಿಕ ವ್ಯಕ್ತಿ ವಿಜ್ಞಾನವನ್ನೇ ಪಟ್ಟಾಗಿ ನಂಬಿಕೊಂಡು ಎಲ್ಲ ಧರ್ಮಗಳನ್ನೂ ತ್ಯಜಿಸುವ ಅನಿವಾರ್ಯತೆಗೆ ಬರಬೇಕಾಯಿತು.

ಇಂಥ ಪ್ರಗತಿಯು ನಮಗೆ ಧರ್ಮ ಬೇಕಾಗಿಲ್ಲ, ನಂಬಿಕೆಗೆ ಸಂಬಂಧಿಸಿದ ವಿಚಾರಗಳು ಅಗತ್ಯವಿಲ್ಲ, ನಾವು ಪ್ರತಿಯೊಂದು ವಿಷಯವನ್ನೂ ವಿಜ್ಞಾನ ಹಾಗೂ ವಿಚಾರದ ಮೂಲಕವೇ ತಿಳಿಯು ತ್ತೇವೆ ಎಂಬ ಮನೋಭಾವವನ್ನು ನಿರ್ಮಾಣಮಾಡಿತು. ಈ ಪಾಶ್ಚಾತ್ಯ ಮನೋಭಾವವು ವಿಶ್ವದ ಎಲ್ಲಾ ಭಾಗಗಳ ಲಕ್ಷಾಂತರ ಜನರ ಮೇಲೆ ತನ್ನ ಪ್ರಭಾವ ಬೀರಿತು. ಆಧುನಿಕ ಪಶ್ಚಿಮ ದೇಶದ ಹೆಚ್ಚಿನ ಮಾನ್ಯತೆಯಿಂದಾಗಿ ನಮ್ಮ ದೇಶದ ಮೇಲೂ ಇದರ ಪರಿಣಾಮವುಂಟಾಯಿತು. ಆದರೆ, ಇತ್ತೀಚಿನ ಕೆಲವು ದಶಕಗಳಲ್ಲಿ ಈ ರೀತಿಯ ವಿರೋಧಭಾವನೆಯ ಬಗೆಗೆ ಪಾಶ್ಚಾತ್ಯ ಜನರೇ

ಸಂತುಷ್ಟರಾಗಿಲ್ಲ. ಅವರೇ ಈಗ ಒಂದು ನವೀನ ವಿಧಾನ ಹಾಗೂ ಸಾಮರಸ್ಯದ ನೂತನ ಮಾರ್ಗವನ್ನು ಅನ್ವೇಷಿಸುತ್ತಿದ್ದಾರೆ.

**೫. ಆಧುನಿಕ ಪಶ್ಚಿಮದ ಇತ್ತೀಚಿನ ಬಯಕೆ ಈ ಸಂಘರ್ಷವನ್ನು ಪರಿಹರಿಸುವುದು**

ಮಾನವಸಹಜ ಶಕ್ತಿಗಳಾದ ನಂಬಿಕೆ ಹಾಗೂ ವಿಚಾರಗಳಲ್ಲಿ ಈ ರೀತಿಯಾಗಿ ಭೇದ ಮಾಡಿರುವುದು ಪಾಶ್ಚಾತ್ಯರಿಗೆ ಯಾವ ವಿಧವಾದ ಒಳಿತನ್ನೂ ಉಂಟುಮಾಡಿಲ್ಲ. ಅಲ್ಪ ಕಾಲಾವಧಿಯ ಹೊರತು ದೀರ್ಘಕಾಲಾವಧಿಯಲ್ಲಿ ಅದು ಪಾಶ್ಚಾತ್ಯರಿಗೆ ಕೆಡುಕನ್ನು ಉಂಟುಮಾಡಲು ಪ್ರಾರಂಭಿಸಿದೆ. ಹೀಗಾಗಿ ಪಾಶ್ಚಾತ್ಯರು ಶ್ರದ್ಧೆ ಮತ್ತು ವಿಚಾರಗಳ ನಡುವೆ ಇರುವ ನೈಜ ಸಂಬಂಧದ ಬಗೆಗೆ ಪುನರ್ಮೌಲ್ಯ ಮಾಪನ ಮಾಡುತ್ತಿದ್ದಾರೆ. ಪಾಶ್ಚಾತ್ಯರಲ್ಲಿ ಅಧಿಕಗೊಳ್ಳುತ್ತಿರುವ ಧಾರ್ಮಿಕ ಚಿಂತಕರು ಮತ್ತು ಸಂಸ್ಥೆಗಳು ಇಂದು ತಮ್ಮ ಧರ್ಮಕ್ಕೆ ಬೌದ್ಧಿಕ ಹಾಗೂ ವೈಜ್ಞಾನಿಕ ಆಧಾರಗಳನ್ನು ಅನ್ವೇಷಿಸತೊಡಗುತ್ತಿದ್ದಾರೆ. ಮತನಂಬಿಕೆ ಹಾಗೂ ಸಿದ್ಧಾಂತಗಳಿಗಿಂತ ಪ್ರಯೋಗ ಹಾಗೂ ಅನುಭವಗಳಿಗೆ ಹೆಚ್ಚು ಒತ್ತು ಕೊಡುತ್ತಿದ್ದಾರೆ. ಅಂತೆಯೇ ಪಾಶ್ಚಾತ್ಯರಲ್ಲಿ ಅಧಿಕ ಸಂಖ್ಯೆಯಲ್ಲಿ ವಿಜ್ಞಾನಿಗಳೂ ಇಂದು ಮನುಷ್ಯರಿಗೆ ಧರ್ಮ ಮತ್ತು ಶ್ರದ್ಧೆ ಎರಡೂ ಅಗತ್ಯವೆಂದು ಹೇಳುತ್ತಿದ್ದಾರೆ. ಇಷ್ಟೇ ಅಲ್ಲದೆ ಭೌತಿಕವಿಜ್ಞಾನಕ್ಕೆ ಹೋಲಿಸಿದಲ್ಲಿ ಮನುಷ್ಯನಿಗೆ ಇವೇ ಹೆಚ್ಚು ಪ್ರಮುಖ ವಿಷಯಗಳೆಂದು ಅಭಿಪ್ರಾಯವನ್ನಿಟ್ಟುಕೊಳ್ಳುತ್ತಿದ್ದಾರೆ. ಆದರೆ ಅವರು ಬೌದ್ಧಿಕ ಪರಿಶೀಲನೆಯನ್ನು ಎದುರಿಸಬಲ್ಲ ಧರ್ಮವಾಗಿರಬೇಕೆಂದು ಒತ್ತಾಯಿಸುತ್ತಿದ್ದಾರೆ. ಹಾಗಲ್ಲದಿದ್ದ ಪಕ್ಷದಲ್ಲಿ ಅವು ಮೂಢನಂಬಿಕೆಗಳಾಗುತ್ತವೆ. ಮತ್ತು ಪೊಳ್ಳಾದ ಹಗುರವಾದ ಇಂದ್ರಜಾಲ ವಿದ್ಯೆಯಾಗುತ್ತವೆ. ಅದು ನೈಜಧರ್ಮವಾಗುವುದಿಲ್ಲ. ಆದರೆ ಧರ್ಮಕ್ಕೆ ಬೇಕಾದ ಅಂತಹ ವಿಧಾನವೊಂದು ಪಾಶ್ಚಾತ್ಯರಿಗೆ ತಮ್ಮದೇ ಆದ ಚಾರಿತ್ರಿಕ ಅನುಭವದಲ್ಲಿ ದೊರೆಯುತ್ತಿಲ್ಲ. ಅವರು ಈಗ ಅಂತಹ ಒಂದು ವಿಧಾನವನ್ನು ಭಾರತೀಯ ಹಾಗೂ ಇನ್ನಿತರ ಪೌರ್ವಾತ್ಯ ಪರಂಪರೆಯಲ್ಲಿ ಅನ್ವೇಷಿಸುತ್ತಿದ್ದಾರೆ. ಈಗ ನಿಧಾನವಾಗಿ ಪಾಶ್ಚಾತ್ಯರಲ್ಲಿ ಭಾರತೀಯ ಅನುಭವವು ಈ ಕ್ಷೇತ್ರದಲ್ಲಿ ಪಾಶ್ಚಾತ್ಯರ ಅನುಭವಕ್ಕಿಂತ ಸಂಪೂರ್ಣ ಭಿನ್ನವಾದುದೆಂಬ ಮೆಚ್ಚುಗೆಯು ಬೆಳೆಯುತ್ತಾ ಇದೆ. ಆದರೂ ನಾವಾದರೊ ಇನ್ನೂ ಭಾರತದಲ್ಲಿ, ಈ ಭಾರತೀಯ ಅನುಭವದ ಸ್ವರೂಪವೇನು ಎಂಬುದನ್ನು, ಈ ಮಹತ್ವಪೂರ್ಣವಾದ ವಿಷಯವನ್ನು ಕುರಿತಂತೆ ಭಾರತದ ವಿಶಿಷ್ಟ ದೃಷ್ಟಿಕೋನವೇನು ಎಂಬುದನ್ನು ಸ್ಪಷ್ಟವಾಗಿ ಅರಿತಿಲ್ಲ.

ಚರಿತ್ರೆಯ ಆಧುನಿಕ ಕಾಲವನ್ನು ವೈಜ್ಞಾನಿಕಯುಗವೆಂದು ಬಣ್ಣಿಸಲಾಗಿದೆ. ವಿಜ್ಞಾನದಲ್ಲಿ ತೀಕ್ಷ್ಣವಾದ ವಿಚಾರಶಕ್ತಿ, ಪ್ರಶ್ನಿಸುವಿಕೆ, ಪರಿಶೀಲನೆ ಇವುಗಳು ಮುಖ್ಯ. ಈ ನೂತನ ಉತ್ಸಾಹವು ಆಧುನಿಕ ಪಾಶ್ಚಾತ್ಯರಲ್ಲಿ ಕಳೆದ ೪೦೦ ವರ್ಷಗಳ ಅವಧಿಯಲ್ಲಿ ಹೇಗೆ ವ್ಯಕ್ತವಾಯಿತು ಹಾಗೂ ವಿಕಾಸವಾಯಿತು ಎಂಬುದನ್ನು ತಿಳಿಯುವುದು ನಮಗೆ ಅತ್ಯಂತ ಆಸಕ್ತಿದಾಯಕವಾದ ವಿಚಾರ. ಭಾರತದಲ್ಲಿಯೂ ಇಂದು ನಾವೂ ವೈಜ್ಞಾನಿಕ ಕ್ರಾಂತಿಯ ಮೂಲಕ ಮುನ್ನಡೆಯುತ್ತಿದ್ದೇವೆ. ನಮ್ಮ ದೇಶದಲ್ಲಿ ಪ್ರಾಥಮಿಕ ಶಾಲೆಯಿಂದ ಪ್ರಾರಂಭಿಸಿ ವಿಶ್ವವಿದ್ಯಾನಿಲಯದ ಮಟ್ಟದವರೆಗೂ ಪ್ರತಿಯೊಂದು ಮಗುವಿಗೂ ವಿಜ್ಞಾನವನ್ನು ಕಲಿಸಲು ಉದ್ಯುಕ್ತರಾಗಿದ್ದೇವೆ.

ನಮ್ಮ ದೇಶದಲ್ಲಿ ಬಹು ವ್ಯಾಪಕವಾದ ವಿಜ್ಞಾನದ ಪ್ರಸಾರ ಮತ್ತು ವೈಜ್ಞಾನಿಕ ಉತ್ಸಾಹ ಮತ್ತು ಮನೋಭಾವ ಇವುಗಳುಳ್ಳ ಕಾರ್ಯಕಲಾಪಗಳನ್ನು ನಾವು ಸ್ವಾಗತಿಸುತ್ತೇವೆ. ಇಂತಹ ಮಹತ್ವವಾದ ವಿಷಯಗಳ ಬಗೆಗೆ ಲಕ್ಷ್ಯ ಕೊಡುವುದನ್ನು ನಾವು ತಪ್ಪಿಸಿಕೊಳ್ಳಬಾರದು. ಇದು ನೈಜ ಸಂಗತಿ. ನಮ್ಮದೇ ಆದ ಪ್ರಾಚೀನ ಪರಂಪರೆಯ ಉತ್ತೇಜಕ ಪರಿಸರದಲ್ಲಿ ಮತ್ತು ಆ ಬೆಳಕಿನಲ್ಲಿ ನಾವು ಇದನ್ನು ಸ್ವಾಗತಿಸುತ್ತೇವೆ. ಆದರೆ ಪಾಶ್ಚಾತ್ಯರಲ್ಲಿದ್ದಂತೆ ವಿರೋಧದೊಡನೆಯಾಗಲಿ, ಸ್ಥಳಾಂತರಿಸುವ

ರೀತಿಯಂತಾಗಲಿ ಅಲ್ಲ. ನಾವಾಗಲಿ ಅಥವಾ ನಮ್ಮ ರಾಷ್ಟ್ರದ ಪರಂಪರೆಯಾಗಲಿ ಭೌತವಿಜ್ಞಾನ ಹಾಗೂ ಅದರ ಪ್ರಾಣಸ್ವರೂಪವಾದ ವಿಚಾರಶಕ್ತಿಗೆ ಅಂಜುವುದಿಲ್ಲ. ಬದಲಾಗಿ ನಾವು ಅದನ್ನು ಸ್ವಾಗತಿಸುತ್ತೇವೆ. ಏಕೆಂದರೆ ಅದರಲ್ಲಿ ನಾವು ವಿಶೇಷ ಮಹತ್ವವನ್ನು ಕಂಡಿದ್ದೇವೆ. ಅಂತಹ ವಿಶಿಷ್ಟ ಮಹತ್ವದ ಸಂಗತಿ ಯಾವುದು ? ನಾನು ಮೊದಲೇ ಹೇಳಿದಂತೆ ನಮ್ಮ ರಾಷ್ಟ್ರೀಯ ಪರಂಪರೆಯು ಅದರ ವಿಮರ್ಶಾತ್ಮಕ ಶಕ್ತಿಯನ್ನು, ಸ್ವತಂತ್ರ ವೈಚಾರಿಕ ಉತ್ಸಾಹವನ್ನು, ಅದಕ್ಕಿರುವ ಸತ್ಯಾನ್ವೇಷಣೆಯ ಹಂಬಲವನ್ನು ಮಾನ್ಯ ಮಾಡುತ್ತದೆ. ಮಾನವನ ಬುದ್ಧಿಯು ಅದನ್ನು ಪಡೆದಿರುವುದು ಮತ್ತು ಸತ್ಯಾನ್ವೇಷಣೆಯಲ್ಲಿ ಹಾಗೂ ಜ್ಞಾನದ ಜಿಜ್ಞಾಸೆಯಲ್ಲಿ ಅದನ್ನು ಬಳಸಿಕೊಳ್ಳುವುದು ಎಂತಹ ಸುಂದರವಾದ ಶ್ರೇಷ್ಠಗುಣ !

## ೬. ವಿಮರ್ಶಿಸಲೊಲ್ಲದ ಅಧಿಕಾರದಿಂದ ವಿಮರ್ಶಾತ್ಮಕ ಜಿಜ್ಞಾಸೆಯವರೆಗಿನ ಆಧುನಿಕ ಪಾಶ್ಚಾತ್ಯ ದೇಶದವರ ಪರಿವರ್ತನೆಯ ಕಥೆ

ಆದರೆ ಹೇಗೋ ಹದಿನೈದನೇ ಶತಮಾನದ ಕೊನೆಯವರೆಗೂ ಪಶ್ಚಿಮ ದೇಶದವರು ಅದರ ಆವಶ್ಯಕತೆಯನ್ನು ಮನಗಂಡಿರಲಿಲ್ಲ. ಅದು ಪ್ರಶ್ನಾತೀತ ಮಹತ್ವದ ತನ್ನ ಧರ್ಮದ ಬಗೆಗೆ ಸಮಾಧಾನ ಹೊಂದಿತ್ತು. ಮತಶಾಸ್ತ್ರವು ನಂಬಿಕೆಯನ್ನೇ ಆಧಾರವನ್ನಾಗಿಟ್ಟುಕೊಂಡು ಧಾರ್ಮಿಕ ವೈಚಾರಿಕ ಒತ್ತಡದ ಕೋಟೆಯೊಳಗೆ ಭದ್ರವಾಗಿತ್ತು. ಇದು ಒಂದೆಡೆ ಅಂಧಶ್ರದ್ಧೆಗೆ ಮತ್ತೊಂದೆಡೆ ಮತಾಂಧತೆ, ದುರಭಿಮಾನ, ಹಿಂಸೆ, ಆಕ್ರಮಣ ಮುಂತಾದವುಗಳಿಗೆ ಎಡೆಮಾಡಿಕೊಟ್ಟಿತು. ಆದರೆ ೧೫ನೇ ಶತಮಾನದ ಅಂತ್ಯದಿಂದ ಇವೆಲ್ಲವು ಪಾಶ್ಚಾತ್ಯರಲ್ಲಿ ಬದಲಾವಣೆ ಹೊಂದಲಾರಂಭಿಸಿದವು. ವಿಮರ್ಶಾತ್ಮಕ ಜಿಜ್ಞಾಸೆ ಮತ್ತು ಸ್ವತಂತ್ರವಾದ ಪರಿಶೀಲನೆ ಎಂಬ ಚೇತೋಹಾರಿಯಾದ ಉಲ್ಲಾಸದಾಯಕವಾದ ಗಾಳಿಯು ಬೀಸಲು ಪ್ರಾರಂಭವಾಯಿತು. ಮೊದಲು ಮೃದುವಾಗಿ ನಂತರ ಬಲಿಷ್ಠವಾಗಿ ಬೀಸುತ್ತಾ, ಆಧುನಿಕ ವಿಜ್ಞಾನವೆಂದು ಕರೆಸಿಕೊಳ್ಳುವ ಮತ್ತು ಅದರ ಫಲವಾದ ಆಧುನಿಕ ಕೈಗಾರಿಕಾಯುಗದ ಆಧುನಿಕ ಪ್ರಪಂಚವನ್ನು ಸೃಜಿಸಿತು. ಯಾವ ರೀತಿ ಈ ವೈಜ್ಞಾನಿಕ ಉತ್ಸಾಹವು ಆಧುನಿಕ ಪಾಶ್ಚಾತ್ಯರಲ್ಲಿ ಬೆಳೆಯಿತೆಂಬುದು ಭಾರತೀಯರಾದ ನಮಗೆ ಒಂದು ಕುತೂಹಲಕಾರಿ ಅಧ್ಯಯನವಾಗಿದೆ. ನಮ್ಮ ಸುದೀರ್ಘ ಇತಿಹಾಸದಲ್ಲಿ ಅಜ್ಞಾನದ ಕತ್ತಲೆ, ಅಂಧಶ್ರದ್ಧೆಯ ದೌರ್ಬಲ್ಯ, ಭೌತ ವಿಜ್ಞಾನದ ಬಗೆಗೆ ಔದಾಸೀನ್ಯ ಇವುಗಳುಳ್ಳ ಐದು ಶತಮಾನಗಳು ಮುಗಿದ ತರುವಾಯ ನಾವು ಒಂದು ನೂತನ ವೈಜ್ಞಾನಿಕ ಯುಗಕ್ಕೆ ಪ್ರವೇಶಿಸುತ್ತಿದ್ದೇವೆ. ವಿಜ್ಞಾನದ ಇತಿಹಾಸಜ್ಞರು, ಆಧುನಿಕ ಪಾಶ್ಚಾತ್ಯರ ಈ ವಿಮರ್ಶಾತ್ಮಕ ವೈಜ್ಞಾನಿಕ ಹುಮ್ಮಸ್ಸಿನ ಆಕ್ರಮಣವನ್ನು ವಿವರಿಸಲು ಕುತೂಹಲ, ಆಸಕ್ತಿ ಹುಟ್ಟಿಸುವ ಘಟನೆಗಳನ್ನು ನಮಗೆ ತಿಳಿಸುತ್ತಾರೆ.

ಹದಿನೈದನೇ ಶತಮಾನದ ಅಂತ್ಯದ ವೇಳೆಗೆ ಇಂತಹ ಘಟನೆಯೊಂದು ಜರುಗಿತು. ನಾನು ಮೊದಲನೇ ಬಾರಿ ಅದನ್ನು ಓದಿದಾಗ ನನಗೆ ತುಂಬಾ ಹಿಡಿಸಿತು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಗ್ರಂಥಾಲಯದ ಪ್ರಾಂಗಣದಲ್ಲಿ ಅನೇಕ ವಿದ್ವಾಂಸರು ಕೂಡಿ ನಡೆಸಿದ ಚರ್ಚೆಗೆ ಅದು ಸಂಬಂಧಿಸಿದ್ದಾಗಿದೆ. ಅವರ ದೃಷ್ಟಿಯಲ್ಲಿ ಅಂದು ಅತ್ಯಂತ ಪ್ರಮುಖ ವಿಷಯವೆನಿಸಿಕೊಂಡ ಕುದುರೆಯ ಹಲ್ಲುಗಳೆಷ್ಟು ? ಎಂಬುದನ್ನು ಕುರಿತು ಅವರು ಚರ್ಚಿಸುತ್ತಿದ್ದರು. ಆ ಕಾಲದಲ್ಲಿ ಎಲ್ಲಾ ವಿಷಯಗಳನ್ನು ಚರ್ಚಿಸುತ್ತಿದ್ದ ರೀತಿಯಲ್ಲಿಯೇ ಅಂದರೆ ಪ್ರಾಚೀನ ಅಧಿಕೃತ ಕೃತಿಗಳನ್ನು ಬಳಸಿಯೇ ಅವರು ಚರ್ಚಿಸತೊಡಗಿದರು. ಅವರು ಗ್ರಂಥಾಲಯದಿಂದ ಅನೇಕ ಸಂಪುಟಗಳನ್ನು ತಂದರು. ಈ ಗ್ರಂಥಕರ್ತನು ಏನನ್ನು ಹೇಳುತ್ತಾನೆ, ಆ ಗ್ರಂಥಕರ್ತನು ಏನನ್ನು ಹೇಳುತ್ತಾನೆ ಎಂಬುದರ ಬೆಳಕಿನಲ್ಲಿಯೇ ವಿಷಯವನ್ನು ಚರ್ಚಿಸಿದರು. ಅಂದಿನ ದಿನಗಳಲ್ಲಿ ಅತ್ಯಧಿಕವಾಗಿ ಉದಾಹೃತವಾಗುತ್ತಿದ್ದ ಮತ್ತು ಗೌರವಕ್ಕೆ ಪಾತ್ರವಾಗಿದ್ದ ಒಂದು ವಿಶಿಷ್ಟ ಅಧಿಕೃತವಾದ ಮೂಲವೆಂದರೆ ಅರಿಸ್ಟಾಟಲ್

ಆಗಿದ್ದ. ಆದ್ದರಿಂದ ಅರಿಸ್ಟಾಟಲ್‌ನ ಗ್ರಂಥಗಳನ್ನು ತಂದಿಟ್ಟುಕೊಂಡು ಚರ್ಚೆಯು ಆವೇಶಭರಿತವಾಗಿ ಮುಂದುವರೆಯುತ್ತಿತ್ತು. ಆ ವೇಳೆಗೆ ಸರಿಯಾಗಿ, ಈ ಕಥೆಯು ನಾಟಕೀಯವಾಗಿ ಹೇಳುವಂತೆ, ಒಬ್ಬ ಯುವ ವಿದ್ವಾಂಸನು ಆ ಸಭಾಂಗಣದಿಂದ ಸದ್ದಿಲ್ಲದೆ ಹೊರಬಂದ. ಅವನ ನಿರ್ಗಮನವನ್ನು ಯಾರೂ ಗಮನಿಸಲಿಲ್ಲ. ಆದರೆ ಕೆಲವು ನಿಮಿಷಗಳ ತರುವಾಯ ಆ ಯುವ ವಿದ್ವಾಂಸನು ಪ್ರಾಂಗಣಕ್ಕೆ ಹಿಂದಿರುಗಿದ. ಆದರೆ ಆ ವೇಳೆಯಲ್ಲಿ ಯಾರೂ ಅವನನ್ನು ಗಮನಿಸದೇ ಇರಲು ಸಾಧ್ಯವಾಗಲಿಲ್ಲ. ಏಕೆಂದರೆ ಅವನು ಅಲ್ಲಿಗೆ ಒಂದು ಜೀವಂತ ಕುದುರೆಯನ್ನು ತಂದಿದ್ದ. ಆ ಸಭಾಂಗಣದ ಮಧ್ಯದಲ್ಲಿ ಅದನ್ನು ನಿಲ್ಲಿಸಿ ಶ್ರೋತೃಗಳನ್ನು ಸಂಬೋಧಿಸಿ ಹೀಗೆ ಹೇಳಿದ. ಸಭ್ಯರೇ, ನೀವು ಕುದುರೆಗೆ ಎಷ್ಟು ಹಲ್ಲುಗಳಿರುತ್ತವೆ ಎಂಬುದನ್ನು ತಿಳಿಯಬಯಸುತ್ತೀರಲ್ಲವೇ ? ಪುಸ್ತಕಗಳೆಡೆಗೆ ಏಕೆ ಹೋಗುತ್ತೀರಿ ? ಇಗೋ ಇಲ್ಲಿದೆ ಕುದುರೆ. ಅದರ ಬಾಯನ್ನು ತೆರೆಸಿ ಹಲ್ಲುಗಳನ್ನು ಪರೀಕ್ಷಿಸಿ ನೀವೇ ಸ್ವತಃ ಸತ್ಯವನ್ನು ಕಂಡುಕೊಳ್ಳಿ.

ಇಂದಿನ ನಮಗೆ ಈ ಯುವ ವಿದ್ವಾಂಸನ ಈ ಕ್ರಿಯೆಯು ಅತ್ಯಂತ ಸಮುಚಿತ ಮತ್ತು ಅವನ ಮಾತು ಸ್ಮರಣಾರ್ಹ. ಆದರೆ ಅಂದಿನ ವಿದ್ವಾಂಸರಿಗೆ ಇದು ಅನಾದರಣೀಯವಾದ ಸೊಕ್ಕಿನ ಘಟನೆಯಾಗಿ ತೋರಿತು. ಆ ಯುವಕನು ಅರಿಸ್ಟಾಟಲ್‌ನು ಹೇಳಿರುವುದಕ್ಕಿಂತ ಆ ಕುದುರೆಗೆ ಹೆಚ್ಚು ಹಲ್ಲುಗಳಿವೆ ಎಂದು ಆಲೋಚಿಸಿದ್ದೇ ಆತನ ದೋಷವಾಗಿತ್ತು. ಅಷ್ಟಲ್ಲದೇ ಅವನು ಸ್ವತಂತ್ರವಾಗಿ ಅದರ ಬಾಯನ್ನು ಪರೀಕ್ಷಿಸಿ ಎಂದು ಎದೆಗಾರಿಕೆಯಿಂದ ಕೇಳುವುದಕ್ಕೆ ಎಷ್ಟು ಧೈರ್ಯ ? ಇಂತಹ ಘಟನೆಗಳು ಪಾಶ್ಚಾತ್ಯರಲ್ಲಿ ಮೃದುವಾದ, ಚಿತ್ತೋಹಾರಿಯಾದ ವೈಜ್ಞಾನಿಕ ಗಾಳಿಯು ಬೀಸಲು ಪ್ರಾರಂಭಿಸಿತು—ಎಂಬುದನ್ನು ತಿಳಿಸುತ್ತದೆ. ಈ ಹಗುರವಾದ ಮೆಲುಗಾಳಿಯು ಕಾಲಕ್ರಮದಲ್ಲಿ ಅತ್ಯಂತ ಪ್ರಬಲವಾದ ಬಿರುಗಾಳಿಯಾಗಿ ಮೊಟ್ಟಮೊದಲು ಇಡೀ ಪಾಶ್ಚಾತ್ಯ ಯುರೋಪಿನ ಮೇಲೆ, ಅನಂತರ ಇಡೀ ಪಾಶ್ಚಾತ್ಯ ಜಗತ್ತಿನ ಮೇಲೆ ಪರಿಣಾಮ ಬೀರಿತು. ಇಂದು ಆ ಬಿರುಗಾಳಿಯು ಪ್ರಪಂಚವನ್ನೆಲ್ಲಾ ತಟ್ಟುತ್ತಿದೆ. ಪ್ರಶ್ನಿಸುವ ಅಂತಃಪ್ರೇರಣೆ, ಆಳವಾದ ವಿಚಾರಣೆ ಮತ್ತು ಮನುಷ್ಯ ಹಾಗೂ ಪ್ರಕೃತಿಯನ್ನು ಸೂಕ್ಷ್ಮವಾಗಿ, ಸ್ವತಂತ್ರವಾಗಿ, ನಿರ್ಭೀತವಾಗಿ ಪರೀಕ್ಷಿಸುವುದೇ ಆಧುನಿಕ ವೈಜ್ಞಾನಿಕ ಬಿರುಗಾಳಿಯ ಲಕ್ಷಣವಾಗಿದೆ. ಇಗೋ ಇಲ್ಲಿದೆ ನಮ್ಮ ಮುಂದೆ ವಿಶಾಲವಾದ ಪ್ರಾಕೃತಿಕ ಪ್ರಪಂಚ. ಇದನ್ನು ಅಧ್ಯಯನ ಮಾಡು, ಪರೀಕ್ಷಿಸು, ಅದರ ಬಗೆಗೆ ಪ್ರಶ್ನೆ ಮಾಡು, ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸು. ಯಾವುದು ಇಂದು ವೈಜ್ಞಾನಿಕ ಮಾರ್ಗವೆಂದು ಸ್ಥಾಪಿತ ವಾಗಿದೆಯೋ ಅದರ ಕಠಿಣ ವಿಧಾನದ ಮೂಲಕ ಅದರ ಕೆಲವು ಶಕ್ತಿಗಳನ್ನು ಹತೋಟಿಯಲ್ಲಿಟ್ಟುಕೊ. ಪರೀಕ್ಷಿತವಾದ, ಪರೀಕ್ಷೆಗೆ ಒಳಪಡಿಸಬಹುದಾದ, ಮುಕ್ತವಾದ, ಮತ್ತೊಬ್ಬರಿಗೆ ತಿಳಿಸಬಹುದಾದ ಮತ್ತು ಜೀವನದ ವಿಭಿನ್ನ ಕ್ಷೇತ್ರಗಳಲ್ಲಿ ಪ್ರಾಯೋಗಿಕವಾಗಿ ಅನ್ವಯಕ್ಕೊಳಗಾಗಬಲ್ಲ ಅಭೂತ ಪೂರ್ವವಾದ ಜ್ಞಾನದ ಉತ್ಪಾದನೆಯೇ ಆಧುನಿಕ ಭೌತಿಕ ವಿಜ್ಞಾನವಾಗಿದೆ. ಅದುವೇ ಆಧುನಿಕ ಪಾಶ್ಚಾತ್ಯ ಭೌತಿಕ ವಿಜ್ಞಾನದ ಶಕ್ತಿ ಮತ್ತು ಮಾನವ ಬುದ್ಧಿಗೆ ಅತ್ಯಧಿಕವಾಗಿ ಇಷ್ಟವಾಗುವ ವಿಚಾರ.

## ೭. ಆಧುನಿಕ ಭಾರತವು ವಿಜ್ಞಾನದ ಬೇರನ್ನರಸುತ್ತಾ ಮುಂದುವರೆಯಬೇಕು, ಕೇವಲ ಅದರ ಆಧುನಿಕ ಫಲವನ್ನಲ್ಲ

ಈಗ ನಮಗೆ ಆಧುನಿಕ ಭಾರತದಲ್ಲಿ ಈ ವಿಜ್ಞಾನದ ಬೆಳವಣಿಗೆಗೆ ವೈಜ್ಞಾನಿಕ ಕ್ರಮ ಮತ್ತು ಮನೋಭಾವ ಬೇಕಾಗಿದೆ. ಕೇವಲ ವಿಜ್ಞಾನದ ಉತ್ಪಾದನೆಗಳಾದ ತಂತ್ರಜ್ಞಾನ, ಕೈಗಾರಿಕೆ, ಕಾರ್ಮಿಕರ ಸಂಖ್ಯೆಯನ್ನು ಕಡಿಮೆಗೊಳಿಸುವ ಯಂತ್ರಗಳು, ಉಪಕರಣಗಳು ಮುಂತಾದವನ್ನು ಬೆಂಬತ್ತಿ ಹೋಗುವುದಷ್ಟೇ ಸಾಲದು. ಇವು ನಮಗೆ ಅಗತ್ಯ ; ಆದರೆ ನಾವು ಆಧುನಿಕ ವಿಜ್ಞಾನದ ಈ ಫಲಗಳಲ್ಲಷ್ಟೇ ಕೇವಲ ತೃಪ್ತರಾಗಬಾರದು. ವಿಜ್ಞಾನದ ನಿಜವಾದ ಬಲವನ್ನು ವಶಪಡಿಸಿಕೊಳ್ಳಬೇಕು.

ಆಧುನಿಕ ವಿಜ್ಞಾನದ ಮುಖ್ಯ ಬೇರಾದ ಶುದ್ಧ ವಿಜ್ಞಾನ ಅದರ ಮನೋಭಾವ, ಅದರ ಪರಿಣಾಮಗಳು ಮತ್ತು ಅದರ ವಿಧಾನಗಳು, ಬ್ರಹ್ಮಾಂಡ ಹಾಗೂ ಪಿಂಡಾಂಡಗಳ ಬಗೆಗೆ ಅದರ ತೀರ್ಮಾನಗಳು ಇವುಗಳತ್ತ ಧಾವಿಸಬೇಕು. ಅದು ಸುಶಿಕ್ಷಿತ ಮಾನವಬುದ್ಧಿಗೆ ನೀಡಿರುವ ಅದ್ಭುತವಾದ ಸತ್ಯಗಳನ್ನು ಆಧುನಿಕ ವಿಜ್ಞಾನದ ಚರಿತ್ರೆಯು ವಿಶದವಾಗಿ ವಿವರಿಸಿದೆ. ನಮ್ಮ ಎಲ್ಲ ಮಕ್ಕಳಿಗೂ ಇದನ್ನು ತಿಳಿಯುವುದು ಅತ್ಯಂತ ಸ್ಫೂರ್ತಿದಾಯಕ ಹಾಗೂ ಉತ್ಸಾಹದಾಯಕ. ನಮ್ಮ ಸಂಸ್ಕೃತಿಯು ವೇದಗಳ ಕಾಲದ ಪ್ರಾರಂಭದಿಂದಲೂ, ಉಪನಿಷತ್ತುಗಳು ಬುದ್ಧ ಶಂಕರ ಇವರ ಮೂಲಕ, ಪ್ರಕೃತಿ ಹಾಗೂ ಮನುಷ್ಯನಿಗೆ ಸಂಬಂಧಿಸಿದಂತೆ ಈ ರೀತಿ ಪ್ರಶ್ನಿಸುವ ವಿಧಾನವನ್ನು ಪ್ರೋತ್ಸಾಹಿಸುತ್ತಾ ಬಂದಿವೆ. ನಾವು ಭೌತಿಕ ವಿಜ್ಞಾನಗಳನ್ನು ಮತ್ತು ಅದರ ಮುಂದುವರೆದ ಭಾಗವಾದ ಧರ್ಮದ ವಿಜ್ಞಾನ ಇವೆರಡನ್ನೂ ನಾವು ಬೆಳೆಸಿದ್ದೆವು. ಪ್ರಾಚೀನ ಭಾರತವು ಶಸ್ತ್ರವಿಜ್ಞಾನ, ಔಷಧ, ಗಣಿತ, ಲೋಹವಿದ್ಯೆ, ಭೌತಶಾಸ್ತ್ರ, ವಿಶ್ವರಚನಾವಿಜ್ಞಾನ, ವ್ಯಾಕರಣ, ಭಾಷಾಶಾಸ್ತ್ರ, ನಗರ ನಿರ್ಮಾಣ, ಪರಿಸರನೈರ್ಮಲ್ಯ ಮತ್ತು ಇನ್ನಿತರ ಕ್ಷೇತ್ರಗಳಲ್ಲಿ ಹೆಚ್ಚು ಮಹತ್ವವಾದ ಕಾಣಿಕೆಗಳನ್ನು ನೀಡಿದೆ ಎಂಬುದನ್ನು ನಿಧಾನವಾಗಿ ಈಗ ಅರಿಯಲಾಗುತ್ತಿದೆ. ಯಾವುದನ್ನು ಆಧುನಿಕ ಪಾಶ್ಚಾತ್ಯದೇಶಗಳು ಈಗ ವೈಜ್ಞಾನಿಕ ವಿಧಾನ ಎಂಬುದಾಗಿ ಹೆಚ್ಚು ನಿಷ್ಕೃಷ್ಟವಾಗಿ ಬೆಳೆಸಿವೆಯೋ ಅದೇ ವಿಧಾನಗಳಿಂದ ಭಾರತದಲ್ಲಿ ಭೌತಿಕ ವಿಜ್ಞಾನಗಳನ್ನೂ ನಾವು ಬೆಳೆಸಿದ್ದೆವು.

ಇದನ್ನು ವಿಶೇಷವಾಗಿ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ನೋಡಬಹುದು. ಅವನು ಕೆಲವು ವಿದ್ವಾಂಸರ ಇತ್ತೀಚಿನ ಸಂಶೋಧನೆಗಳ ತೀರ್ಮಾನದಂತೆ ಸುಮಾರು ಕ್ರಿ.ಪೂ. ೧೪ನೇ ಶತಮಾನದಲ್ಲಿ ಜೀವಿಸಿದ್ದನು. (ಹಿಂದಣ ವಿದ್ವಾಂಸರ ಪ್ರಕಾರ ಸುಮಾರು ಕ್ರಿ.ಪೂ. ೫ನೇ ಶತಮಾನ). ಈಗ ಪಶ್ಚಿಮ ಪಾಕಿಸ್ತಾನದಲ್ಲಿನ ಪಠಾಣ ಪ್ರದೇಶದಲ್ಲಿ ಕಾಬೂಲ್ ಹಾಗೂ ಸಿಂಧೂ ನದಿಯು ಒಂದೆಡೆ ಸೇರುವ ಸ್ಥಳದ ಸಮೀಪದಲ್ಲಿರುವ ಶಾಲಾತುರ ಎಂಬ ಪಟ್ಟಣದಲ್ಲಿ ಅವನು ನೆಲೆಸಿದ್ದನು. ಜನರ ಆಡು ಭಾಷೆಯಾದ ಸಂಸ್ಕೃತದ ನಿಷ್ಕೃಷ್ಟವಾದ ಅಧ್ಯಯನದ ಮೂಲಕ ಮತ್ತು ಪವಿತ್ರವಾದ ವೈದಿಕಸಂಸ್ಕೃತ ಭಾಷೆಯಿಂದ ಸಂಗ್ರಹಿಸಲ್ಪಟ್ಟ ದತ್ತಾಂಶಗಳ ನಿಖರವಾದ ವರ್ಗೀಕರಣದ ಮೂಲಕ, ತನ್ನ ಮತ್ತು ಹಿಂದಿನ ಪರಿಶೋಧನೆಗಳಿಂದ ಮೂಡಿದ ವಿಧಿ ಮತ್ತು ನಿಯಮಗಳ ಮೂಲಕ ನಿರೂಪಿಸಿ, ಪಾಣಿನಿಯು ಭಾಷಾವಿಜ್ಞಾನದ ಜೊತೆಯಲ್ಲೇ ಸಂಸ್ಕೃತಭಾಷೆಯ ವ್ಯಾಕರಣ ಮತ್ತು ಭಾಷಾಶಾಸ್ತ್ರವನ್ನು ಬೆಳೆಸುತ್ತಾ ಆ ಸುಪ್ರಸಿದ್ಧ ಗ್ರಂಥವನ್ನು ರಚಿಸಿದನು. ಪ್ರಪಂಚದ ಬೇರೆ ಯಾವುದೇ ಭಾಷೆಯೂ ಇದಕ್ಕಿಂತ ಹಿಂದೆ ಅಥವಾ ಅಂದಿನಿಂದ ಈ ವಿಧವಾದ ವೈಜ್ಞಾನಿಕ ಪ್ರಕ್ರಿಯೆಯನ್ನು ಅಳವಡಿಸಿಕೊಂಡಿಲ್ಲ. ಪಾಣಿನಿ ಹಾಗೂ ಅವನ ಪೂರ್ವಜರು ಇಬ್ಬರು ಅಥವಾ ಮೂವರು ಅವನ ಉತ್ತರಾಧಿಕಾರಿಗಳು ಮಾನವ ಚರಿತ್ರೆಯ ಅದರಲ್ಲೂ ಆ ಆದಿಮ ಭಾಗದಲ್ಲಿ ಇದನ್ನು (ವೈಜ್ಞಾನಿಕ ಪ್ರಕ್ರಿಯೆ) ಸಂಸ್ಕೃತ ಭಾಷೆಗೆ ಒದಗಿಸಿದರು. ಅವನು ಪ್ರತಿಯೊಂದು ಸ್ವರ ಅಥವಾ ವ್ಯಂಜನಕ್ಕೆ ನಿರ್ದಿಷ್ಟವಾದ ಧ್ವನಿಮೌಲ್ಯವನ್ನು ಕೊಟ್ಟನು. ಅದು ಸಂಸ್ಕೃತವನ್ನು ನಿಜಕ್ಕೂ ಧ್ವನಿ-ಸಾಂಕೇತಿಕ ಭಾಷೆಯನ್ನಾಗಿ ಮಾಡಿತು.

ಅಕಾರದಿಂದ ಪ್ರಾರಂಭವಾಗುವ ಮೊದಲನೆಯ ಧ್ವನಿಯು ಗಂಟಲಿನಿಂದ ಹುಟ್ಟುತ್ತದೆ. ಇಂಗ್ಲೀಷ್ ಭಾಷೆಯ ಪಾರ್ಟ್ ಎಂಬ ಪದದಲ್ಲಿರುವ 'ಅ' ಎಂಬ ಹ್ರಸ್ವ ರೂಪದಂತೆ ಉಚ್ಚರಿಸಲ್ಪಡುತ್ತದೆ. ಈ ಭಾಷೆಯ ೧೬ ಸ್ವರಗಳು ಮತ್ತು ೩೫ ವ್ಯಂಜನಗಳನ್ನು ಅವುಗಳ ಸ್ಥಾನ—ಹುಟ್ಟುವ ಸ್ಥಾನ, ಮಾತ್ರ (ಅವಧಿ) ಅಭ್ಯಂತರ ಪ್ರಯತ್ನ (ಆಂತರಿಕ ಪ್ರಯತ್ನ) ಮತ್ತು ಬಾಹ್ಯ ಪ್ರಯತ್ನ (ಹೊರಗಣ ಪ್ರಯತ್ನ)ಕ್ಕನುಸಾರವಾಗಿ ವರ್ಗೀಕರಿಸಿದನು. ಕಳೆದ ಶತಮಾನದಲ್ಲಿದ್ದ ಬಹುಶ್ರುತ ತಲಸ್ಪರ್ಶಿ ಸಂಸ್ಕೃತ ವಿದ್ವಾಂಸನಾದ ಜರ್ಮನಿಯ ಥಿಯೋಡರ್ ಗೋಲ್ಡ್‌ಸ್ಟಕರ್‌ನ ಭಾಷೆಯಲ್ಲಿ

ಹೇಳುವುದಾದರೆ (*Panini, His Place in Sanskrit Literature*, first Indian edition, ೧೯೬೫, pp. ೯೫ : ೬) :

ಪಾಣಿನಿಯ ವ್ಯಾಕರಣವು ಒಂದು ವಿಸ್ತೃತ ಹಾಗೂ ಮುಖ್ಯವಾದ ಪ್ರಾಚೀನ ಸಾಹಿತ್ಯಶಾಖೆಯ ಕೇಂದ್ರ. ಭಾರತದ ವೈಜ್ಞಾನಿಕ ಬೆಳವಣಿಗೆಯ ನೆಲದಲ್ಲಿ ಯಾವುದೂ ಅವನ ಕೃತಿಯಷ್ಟು ಆಳವಾದ ಬೇರುಗಳನ್ನು ಬಿಟ್ಟಿಲ್ಲ. ಅದು ಭಾಷಾ ನಿಖರತೆಯಲ್ಲಿನ ಮಾನದಂಡ. ವೈದಿಕ ವ್ಯಾಖ್ಯಾನಗಳ ವ್ಯಾಕರಣ ತಳಹದಿ. ಪ್ರತಿಯೊಬ್ಬ ವೈಜ್ಞಾನಿಕ ಬರಹಗಾರನೂ ತನಗೆ ಭಾಷಾಕ್ಲೇಶವು ಎದುರಾದಾಗ ಅದನ್ನು ಆಶ್ರಯಿಸುತ್ತಾನೆ. ಹಿಂದೂ ನಂಬಿಕೆಯ ಮೂಲ ಕೃತಿಗಳಿಂದ ಸ್ಫೂರ್ತಿ ಪಡೆದ ಕರ್ತೃಗಳಾದ ಋಷಿಗಳ ಜೊತೆಗೆ ನಿಜವಾಗಿ ಗಣ್ಯವ್ಯಕ್ತಿಗಳೆಂದು ಪರಿಗಣಿಸಬಹುದಾದ ವೈಜ್ಞಾನಿಕ ಕೃತಿಕಾರರಲ್ಲಿ ಪಾಣಿನಿಯೊಬ್ಬನೇ ಸರಿಯಾದ ಅರ್ಥದಲ್ಲಿ ಋಷಿ ಎನಿಸುವವನು– ತನಗೆ ಅಪೌರುಷೇಯವಾಗಿ ದತ್ತವಾದುದ್ದನ್ನು ಆಧರಿಸಿ ಗ್ರಂಥ ರಚಿಸಿದವನೆಂದು ಪರಿಗಣಿತನಾದವನು.

ಡಾ. ವಿ. ಎಸ್. ಅಗರ್‌ವಾಲ್‌ರು ತಮ್ಮ ಕೃತಿ *India as known to Panini*ಯಲ್ಲಿ ಹೇಳುತ್ತಾರೆ : (ಪು. ೨-೩)

ಪಾಣಿನಿಯು ತನ್ನ ಸಮಕಾಲೀನ ಆಡುಭಾಷೆ ಹಾಗೂ ಜೀವಂತ ಭಾಷೆಯ ಆಳವಾದ ಅನ್ವೇಷಣೆಯನ್ನು ನಿರ್ವಹಿಸಿದನು. ವ್ಯಾಕರಣ ವ್ಯವಸ್ಥೆಯನ್ನು ಬೆಳೆಸುವ ಉದ್ದೇಶಗಳಿಂದ ಪ್ರೇರಿತನಾಗಿ ತನಗೆ ಬೇಕಾದ ವಿಷಯಗಳನ್ನು ಕಂಡುಕೊಳ್ಳಲು ಮತ್ತು ಸೃಜಿಸಲು ಅನುಗಮನ ಪದ್ಧತಿಯನ್ನು ಪ್ರಯೋಗಿಸಿದನು. ಭಾಷೆಗೆ ಸಂಬಂಧಿಸಿದ ಸಂಗತಿಗಳನ್ನು ಸಮರ್ಥಿಸುವಲ್ಲಿ ವಿಶ್ವಾಸಾರ್ಹನು ಮತ್ತು ದಕ್ಷನೂ ಆದ ಪಾಣಿನಿಯು ಭಾಷೆಯ ಬಹುಪಾಲು ಎಲ್ಲಾ ಶಬ್ದಗಳನ್ನು ಬಳಸಿಕೊಳ್ಳುವಷ್ಟು ವ್ಯಾಪಕವಾಗಿ ತನ್ನ ಬಲೆಯನ್ನು ಬೀಸಿದನು. (ಶಬ್ದೇಷು ಬಹವಃ ಸಮಾಕಲಿತಃ, ತಾನ್ ಉಪಾದಾಯ ಪಾಣಿನಿನಾ ಸ್ಮೃತಿರೂಪನಿಬದ್ಧ (ಕಾಶಿಕಾ, IV-೧-೧೧೪).

ಒಟ್ಟಿನಲ್ಲಿ ಪಾಣಿನಿಯ ವ್ಯಾಕರಣವು ಸಂಸ್ಕೃತದೊಡನೆ ಹೊಂದಿರುವ ಸಂಬಂಧವು ಮರಕ್ಕೂ ಮತ್ತು ಅದರ ಬೆಳವಣಿಗೆಯನ್ನು ನಿಯಂತ್ರಿಸುವ ಅಂತಸ್ಸತ್ವ ಮತ್ತು ಜೀವಶಕ್ತಿಯ ಮೂಲವಾದ ತಾಯಿಬೇರಿಗೂ ಇರುವ ಸಂಬಂಧದಂತೆ ಎಂದು ಯಾರಾದರೂ ಹೇಳಬಹುದು. ಪಾಣಿನಿಯ ಕೃತಿಯು ಇಂಡೋ-ಯೂರೋಪಿಯನ್ ಭಾಷಾಶಾಸ್ತ್ರಕ್ಕೆ ಅತ್ಯಮೂಲ್ಯವೆಂಬುದನ್ನು ದೃಢಪಡಿಸಿದೆ. ಪ್ರಸ್ತುತ ಅಧ್ಯಯನವು ತೋರಿಸಲು ನಿರ್ದೇಶಿತವಾಗಿರುವಂತೆ ಭಾರತೀಯ ಇತಿಹಾಸ ಹಾಗೂ ಸಂಸ್ಕೃತಿಗೆ ಅಷ್ಟಾಧ್ಯಾಯಿಯು ಅನೇಕ ಸಂಸ್ಥೆಗಳ ಮೇಲೆ ಬೆಳಕು ಬೀರುವ ವಿಶ್ವಾಸಾರ್ಹ ವಿಷಯಗಳ ಗಣಿಯಾಗಿದೆ.

ನಮ್ಮ ಪೂರ್ವಜರು ಕೇವಲ ಭೌತವಿಜ್ಞಾನಗಳನ್ನಷ್ಟೇ ಅಭಿವೃದ್ಧಿಪಡಿಸದೆ ಕಾವ್ಯ, ಲಲಿತಕಲೆಗಳು, ತತ್ತ್ವಶಾಸ್ತ್ರ ಮತ್ತು ಧರ್ಮಗಳನ್ನು ಬೆಳೆಸುವಲ್ಲಿ ದೈವದತ್ತವಾದ ಸುಶಿಕ್ಷಿತ ಮನಸ್ಸನ್ನು ಹೊಂದಿದ್ದರು ; ಅವರ ಮನಸ್ಸು ಸತ್ಯ, ಸೌಂದರ್ಯ ಮತ್ತು ಶಿವಕ್ಕೆ ಹಾತೊರೆಯುತ್ತಿತ್ತು. ಅಲ್ಲದೆ ಅವರು ವಿಶ್ವದ ಮಾನವ ಕ್ಷೇಮಾಭಿವೃದ್ಧಿಗಾಗಿ ತೀವ್ರವಾದ ಅಭೀಪ್ಸೆಯನ್ನು ಹೊಂದಿದ್ದರು.

## ೮. ಅಧ್ಯಾತ್ಮವಿದ್ಯೆಯ ವೈಭವ

ಉಪನಿಷತ್ತಿನ ಋಷಿಗಳಿಂದ ವಿಕಸನಗೊಂಡ ತತ್ತ್ವಜ್ಞಾನವನ್ನು ವೇದಾಂತವೆಂದು ತಿಳಿಯಲಾಗಿದೆ. ಅದು ಬ್ರಹ್ಮವಿದ್ಯೆ ಅಥವಾ ಅಧ್ಯಾತ್ಮವಿದ್ಯೆಯೆಂದು ವರ್ಣಿತವಾಗಿದೆ. 'ಸರ್ವವಿದ್ಯಾ ಪ್ರತಿಷ್ಠಾ'–

ಪ್ರತಿಯೊಂದು ವಿದ್ಯೆ ಅಥವಾ ವಿಜ್ಞಾನದ ಆಧಾರ ಎಂದು ಅದಕ್ಕೆ ಲಕ್ಷಣ ನೀಡಿದ್ದಾರೆ. ಏಕೆಂದರೆ ಬದಲಾಗುವ ವೈವಿಧ್ಯಮಯ ಜಗತ್ತಿನ ಹಿಂದೆ ಅದಕ್ಕೆ ಆಧಾರವಾಗಿರುವ ಅಪರಿಣಾಮಿಯೂ ಅದ್ವಯವೂ ಆದ ಶುದ್ಧಚೈತನ್ಯಕ್ಕೆ ಸಂಬಂಧಿಸಿದ ವಿದ್ಯೆಯಾಗಿದೆ ಇದು. ಶಂಕರಾಚಾರ್ಯರ ಪರಮಗುರುಗಳಾದ, ಏಳನೇ ಶತಮಾನದಲ್ಲಿದ್ದ, ಗೌಡಪಾದರು ಪೂರ್ಣ ಅರಿವು ಎನ್ನಲಾದ ಈ ಸಮಗ್ರ ದರ್ಶನದ ವೈಭವವನ್ನು ತಮ್ಮ ಮಾಂಡೂಕ್ಯೋಪನಿಷತ್ ಕಾರಿಕೆಯ ಒಂದು ಸುಪ್ರಸಿದ್ಧ ಶ್ಲೋಕದಲ್ಲಿ ಹೀಗೆ ನಿರೂಪಿಸಿದ್ದಾರೆ :

ಅಸ್ಪರ್ಶಯೋಗೋ ವೈ ನಾಮ ಸರ್ವಸತ್ತ್ವಸುಖೋ ಹಿತಃ ;
ಅವಿವಾದೋ ಅವಿರುದ್ಧಶ್ಚ ದೇಶಿಕಸ್ತಂ ನಮಾಮ್ಯಹಮ್—

*ಎಲ್ಲಾ ಅಸ್ತಿತ್ವದ ಐಕ್ಯವನ್ನು ಬೋಧಿಸುವ, ಸರ್ವಜೀವಿಗಳ ಕಲ್ಯಾಣಗಳಿಗಾಗಿ ಶ್ರಮಿಸುವ, ದುಃಖ ವಿರೋಧಗಳಿಂದ ಬಿಡುಗಡೆಹೊಂದಿರುವ, ಈ ಪ್ರಸಿದ್ಧ ದರ್ಶನಕ್ಕೆ ನಾನು ನಮಿಸುವೆ.*

ಮನಸ್ಸಿಗೆ ಅಂತಹ ಬಹುಮುಖ ಸಾಮರ್ಥ್ಯವಿತ್ತು. ಅದು ಸತ್ಯವನ್ನು ಬಾಹ್ಯ ಪ್ರಪಂಚ ಮತ್ತು ಆಂತರಿಕ ಪ್ರಪಂಚ ಇವೆರಡರಲ್ಲೂ ಅನ್ವೇಷಿಸಲು ಪ್ರಯತ್ನಿಸಿತು. ಅದು ಭೌತಿಕವಿಜ್ಞಾನವನ್ನು ಸವಿಮರ್ಶ ಜಿಜ್ಞಾಸೆಯ ಪ್ರಯೋಗದ ನೆರವಿನಿಂದ ಮುಂದುವರೆಸಬೇಕು ಮತ್ತು ಧರ್ಮದ ಕ್ಷೇತ್ರ ವನ್ನು ಮಾತ್ರ ಕೇವಲ ನಂಬಿಕೆಯ ಮೂಲಕವೇ ಪ್ರವೇಶಿಸಬೇಕು ಎಂದು ಸತ್ಯವನ್ನಾಗಲೀ ಅಥವಾ ಅದರ ಅನ್ವೇಷಣೆಯನ್ನಾಗಲೀ ಕಟ್ಟುನಿಟ್ಟಾಗಿ ವಿಭಜಿಸಲಿಲ್ಲ. ಅದು ಲೌಕಿಕವೇ ಆಗಿರಲಿ ಅಥವಾ ಆಧ್ಯಾತ್ಮಿಕವೇ ಆಗಿರಲಿ, ಜ್ಞಾತದಿಂದ ಅಜ್ಞಾತದವರೆಗೆ ಎಲ್ಲಿ ಮುಂಚಾಚುವಿಕೆ ಇರುತ್ತದೋ, ಅಲ್ಲೆಲ್ಲಾ ಈ ಋಷಿಗಳು ಸವಿಮರ್ಶ ಜಿಜ್ಞಾಸೆಗೆ ಒತ್ತುಕೊಡುತ್ತಿದ್ದರು ಮತ್ತು ಅಂತಹ ಎಲ್ಲ ಜಿಜ್ಞಾಸಾಕ್ಷೇತ್ರದಲ್ಲಿಯೂ ಶ್ರದ್ಧೆ ಹಾಗೂ ವಿಚಾರಕ್ಕೆ ಉನ್ನತವಾದ ಸ್ಥಾನವಿತ್ತು. ಆದರೆ ಅಂತಹ ಶ್ರದ್ಧೆಯೆಂದರೆ ಹೇಳಿದ್ದೆಲ್ಲವನ್ನೂ, ಕಿವಿಯಿಂದ ಕೇಳಿದ್ದೆಲ್ಲವನ್ನೂ ಕೇವಲ ಸ್ವೀಕರಿಸುವ ಕುರುಡು ನಂಬಿಕೆಯೆಂದರ್ಥವಲ್ಲ. ಅಂತಹ ಶ್ರದ್ಧೆಯಲ್ಲಿ ಸವಿಮರ್ಶ ಜಿಜ್ಞಾಸೆಗೆ ಪೂರಕ ಮೌಲ್ಯದಂತೆ ಒಂದು ವಿಶಿಷ್ಟ ಗುಣವಿದೆ.

## ೯. ಉಪನಿಷತ್ತುಗಳು ಮತ್ತು ಧರ್ಮದಲ್ಲಿ ವಿಮರ್ಶೆಯ ಮನೋಭಾವ

ಮೂರು ಸಾವಿರ ವರ್ಷಗಳ ಹಿಂದೆ ಉಪನಿಷತ್ತಿನ ಕಾಲದಿಂದ ನಮ್ಮ ಕಾಲದವರೆಗೂ ನಾವು ಶ್ರೇಷ್ಠ ಆಧ್ಯಾತ್ಮಿಕ ಗುರುಗಳನ್ನು ಪಡೆದಿದ್ದೇವೆ. ಅವರು ಧರ್ಮದ ಗುರುಗಳು ಎಂದು ಕರೆಯಿಸಿ ಕೊಳ್ಳುವ ಮುನ್ನ ಧರ್ಮಕ್ಷೇತ್ರದಲ್ಲಿ ಅವರು ಪ್ರಮುಖವಾಗಿ, ಮೂಲತಃ ಉನ್ನತಮಟ್ಟದ ವೈಜ್ಞಾನಿಕ ಪರಿಶೋಧಕರಾಗಿದ್ದರು. ಅವರು ಧರ್ಮವನ್ನು ಪ್ರಶ್ನಿಸದೆ ಅಂಗೀಕರಿಸುವ ಪರಿನಿಷ್ಠಿತ ಮತಸಿದ್ಧಾಂತ ವೆಂದು ನಮ್ಮ ಮುಂದಿಡದೆ ಅದು ಸಂಶೋಧನೆ, ಪ್ರಯೋಗ ಮತ್ತು ಅನುಭವಗಳ ವಿಷಯವೆಂದು ತೋರಿಸಿದ್ದಾರೆ.

ನಾವು ಆ ವಿಮರ್ಶಾತ್ಮಕ ಜಿಜ್ಞಾಸೆಯ ಪ್ರವಾಹವನ್ನು ಉಪನಿಷತ್‌ಕಾಲದ ಆಧ್ಯಾತ್ಮಿಕ ಮತ್ತು ತಾತ್ತ್ವಿಕ ಅನ್ವೇಷಣೆಯಲ್ಲಿ ಕಾಣಬಹುದು. ಇದು ಉಪನಿಷತ್ತುಗಳ ಮುನ್ನ ಇದ್ದ ವೈದಿಕಸಾಹಿತ್ಯದಲ್ಲಿ ಸಂಪೂರ್ಣ ಮರೆಯಾಗಿರಲಿಲ್ಲ. ಉಪನಿಷತ್ ಕಾಲದ ಋಷಿಗಳು ತಮ್ಮ ಅನೂಚಾನವಾದ ಧರ್ಮ ದಲ್ಲಿನ ದೇವರುಗಳು ಮತ್ತು ಅವುಗಳ ಸ್ವರೂಪ ಲಕ್ಷಣಗಳನ್ನು ಕುರಿತು ಮತ್ತು ಮನುಷ್ಯ ಪ್ರಕೃತಿಯ ಬಗೆಗೆ ಗಹನವಾದ ಪ್ರಶ್ನೆಗಳನ್ನು ಕೇಳಲು ಧೈರ್ಯ ವಹಿಸಿದರು. ತೃಪ್ತಿಕರವಾದ ಉತ್ತರವು ದೊರೆಯದಿದ್ದಾಗ ಅದನ್ನು ಸಂದೇಹಿಸಲು ಧೈರ್ಯ ತಾಳಿದರು. ತನ್ಮೂಲಕ ಅವರು ಉನ್ನತಮಟ್ಟದ ಧರ್ಮದ ವಿಜ್ಞಾನವನ್ನು ವಿರೋಧಿಸದ ಆದರೆ ಅದಕ್ಕೆ ಪೂರಕವಾಗಿರುವ ಭೌತಪ್ರಕೃತಿಯ

ವಿಜ್ಞಾನವನ್ನು, ಕಾಲಕ್ರಮದಲ್ಲಿ ವೇದಾಂತವೆಂದೆನಿಸಿಕೊಳ್ಳುವ ತತ್ತ್ವಜ್ಞಾನವನ್ನು, ಭೌತಿಕವಿಜ್ಞಾನಗಳು ಮತ್ತು ಧಾರ್ಮಿಕ ವಿಜ್ಞಾನವನ್ನು ಒಗ್ಗೂಡಿಸುತ್ತಾ—ವಿಕಾಸಗೊಳಿಸಿದರು. ಅವರು ಪರಮಸತ್ಯ ಒಂದೇ ಎಂದೂ ಅದನ್ನು ಅದರ ಎರಡು ಮುಖಗಳಾದ ಬಾಹ್ಯಪ್ರಕೃತಿ ಮತ್ತು ಆಂತರಿಕ ಪ್ರಕೃತಿಯ ರೂಪದಲ್ಲಿ ಅಧ್ಯಯನ ಮಾಡಬಹುದು ಎಂದೂ ಭಾವಿಸಿದರು. ಜ್ಞಾನ ಮತ್ತು ಸತ್ಯದ ಅನ್ವೇಷಣೆ ಯಲ್ಲಿ ಮಾನವನಿಗೆ ಕೇವಲ ಬಾಹ್ಯದ ಭೌತಿಕ ಪ್ರಕೃತಿಯೊಂದರಿಂದಲೇ ಅಲ್ಲ, ಮನುಷ್ಯ ನೊಳಗೆ ಯಾವುದೋ ಒಂದು ಆಂತರಿಕ ಆಳದಿಂದ ಸಮಸ್ಯೆಯು ಎದುರಾಗುತ್ತದೆ. ಈ ಎರಡು ಪ್ರಪಂಚ ಗಳನ್ನು ಪರೀಕ್ಷಿಸಬೇಕಾಗುತ್ತದೆ. ಮತ್ತು ಅಂತಹ ಪರೀಕ್ಷಣ ಪ್ರಕ್ರಿಯೆಯಲ್ಲಿ ಶ್ರದ್ಧೆ ಮತ್ತು ವಿಚಾರ ಎರಡನ್ನೂ ಬಳಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ನಮ್ಮಲ್ಲಿ ಹಾಗೂ ಇನ್ನಿತರ ಮಾನವಜೀವಿ ಗಳಲ್ಲಿ ಮತ್ತು ವಿಶ್ವದ ಆತ್ಯಂತಿಕ ಅರ್ಥಪೂರ್ಣತೆಯಲ್ಲಿ ನಂಬಿಕೆಯನ್ನಿಡಬೇಕಾದ ಆವಶ್ಯಕತೆಯಿದೆ. ಅನೇಕ ವೇಳೆ ಸಕಾರಾತ್ಮಕ ಕ್ರಿಯೆಯೆನಿಸುವ ಸತ್ಯಾನ್ವೇಷಣೆಗೆ ಇಂತಹ ಬಹುಮುಖ ಆರಂಭದ ಶ್ರದ್ಧೆಯಿಲ್ಲದೆ ಅರ್ಥವಿರುವುದಿಲ್ಲ.

## ೧೦. ಸತ್ಯಾನ್ವೇಷಣೆಯಲ್ಲಿ ಶ್ರದ್ಧೆಯ ಪಾತ್ರ

ಹೀಗೆ ಶ್ರದ್ಧೆಯು ವೈಚಾರಿಕ ಪರೀಕ್ಷಣೆಗೆ ಪ್ರಬಲ ಆಧಾರವಾಗಿದ್ದು, ಶ್ರದ್ಧೆಯಿಲ್ಲದೆ ಉನ್ನತ ಮಟ್ಟದ ವಿಜ್ಞಾನವಾಗಲಿ ಅಥವಾ ಉನ್ನತಮಟ್ಟದ ಧರ್ಮವಾಗಲಿ ಇರಲು ಸಾಧ್ಯವಿಲ್ಲ. ಭಾರತದಲ್ಲಿ ಸತ್ಯವಂತರಾದ ಆಧ್ಯಾತ್ಮಿಕ ಗುರುಗಳು ಧರ್ಮಕ್ಕೆ ಶ್ರದ್ಧೆಯ ಜೊತೆಗೆ ಹೇಗೆ ವಿಚಾರ ಬಲದ ಅವಶ್ಯಕತೆಯಿದೆ ಎಂದು ಹೇಳುತ್ತಾರೋ, ಅಂತೆಯೆ ನಮಗೆ ಇಂದು ಶ್ರೇಷ್ಠ ವಿಜ್ಞಾನಿಗಳೂ ಸಹ ವಿಜ್ಞಾನಕ್ಕೆ ವಿಚಾರದ ಜೊತೆಗೆ ಶ್ರದ್ಧೆಯೂ ಬೇಕು ಎನ್ನುತ್ತಾರೆ. ಆದರೆ ಈ ಶ್ರದ್ಧೆಯು ಯಾವುದಾದರೂ ಅಧಿಕಾರದಿಂದ ಹೇಳಿದ, ಯಾವುದೇ ಪರೀಕ್ಷೆಗೆ ಒಳಪಡಿಸದೆ ಸುಮ್ಮನೆ ಸ್ವೀಕರಿಸುವ ಸಾಮಾನ್ಯ ದೃಷ್ಟಿಯ ನಂಬಿಕೆಗಿಂತ ಸಂಪೂರ್ಣ ಭಿನ್ನವಾಗಿರುತ್ತದೆ. ಶಂಕರಾಚಾರ್ಯರು ನಿಜವಾದ ಶ್ರದ್ಧೆಯ ಸ್ವರೂಪವನ್ನು ತಮ್ಮ ವಿವೇಕಚೂಡಾಮಣಿಯ ಒಂದು ಶ್ಲೋಕದಲ್ಲಿ ಹೀಗೆ ಲಕ್ಷಿಸಿದ್ದಾರೆ. (ವಿ.ಚೂ. ೨೦)

ಶಾಸ್ತ್ರಸ್ಯ ಗುರುವಾಕ್ಯಸ್ಯ ಸತ್ಯಬುದ್ಧ್ಯಾವಧಾರಣಮ್ ।
ಸಾ ಶ್ರದ್ಧಾ ಕಥಿತಾ ಸದ್ಭಿಃ ಯಯಾ ವಸ್ತೂಪಲಭ್ಯತೇ ॥

*ಶಾಸ್ತ್ರವಾಕ್ಯ ಹಾಗೂ ಗುರುವಾಕ್ಯವನ್ನು ಸತ್ಯವೆಂದು ಅರ್ಥಮಾಡಿಕೊಳ್ಳುವುದನ್ನೇ ಸಜ್ಜನರು ಶ್ರದ್ಧೆಯೆಂದು ಕರೆದಿದ್ದಾರೆ. ಇದರಿಂದ ಪರಮಸತ್ಯವಾದುದನ್ನು ಪಡೆಯಬಹುದು.' ಶ್ರದ್ಧೆಯೆಂದರೆ ಯಾವುದರ ಮೂಲಕ ಈಗಾಗಲೇ ಇರುವುದನ್ನು ತಿಳಿಯುತ್ತೇವೆಯೋ ಅದು.*

ಸತ್ಯಬುದ್ಧ್ಯಾ ಅವಧಾರಣಂ' ಅಂದರೆ ಈಗಾಗಲೇ ತಿಳಿಯಪಡಿಸಿರುವ, ಬೋಧಿಸಿರುವುದರ ಸತ್ಯವನ್ನು ವಿಚಾರದ ಮೂಲಕ ದೃಢಪಡಿಸಿಕೊಳ್ಳುವುದು. ಯಾವ ಅವಿವೇಕಿಯಾದರೂ ನಂಬಬಲ್ಲ. ಆದರೆ ಆ ನಂಬಿಕೆಯು ಸತ್ಯದ ಪರೀಕ್ಷೆಗೆ ಒಳಪಟ್ಟಿರಬೇಕು. ಅದೇ ನಿಜವಾದ ಶ್ರದ್ಧೆ. ಅದಕ್ಕೆ ಕೇವಲ ನಂಬಿಕೆಯನ್ನು ಸತ್ಯದೆಡೆಗೆ ಪರಿವರ್ತಿಸಿಕೊಳ್ಳುವ ದೃಢವಾದ ಅಭಿಪ್ರಾಯದೆಡೆಗೆ ಒಯ್ಯುವ ಸಾಮರ್ಥ್ಯವಿದೆ. ಅನೇಕ ಆಧುನಿಕ ವಿಜ್ಞಾನಿಗಳೂ ಅದೇ ವಿಷಯವನ್ನು ಹೇಳಿದ್ದಾರೆ. ಡಾರ್ವಿನ್ನನ ಸಹೋದ್ಯಮಿಯಾದ ಥಾಮಸ್ ಹಕ್ಸ್ಲೀಯು ಈ ರೀತಿ ತಿಳಿಸುತ್ತಾನೆ (*Introduction to Science* ಎಂಬ ಗ್ರಂಥದಲ್ಲಿ ಆರ್ಥರ್ ಜೆ. ಥಾಮ್ಸನ್‌ನು ಉದ್ಧರಿಸಿದುದು) :

*ನಾನು ದೀರ್ಘಕಾಲ ಬದುಕಿದಂತೆಲ್ಲಾ ನನಗೆ ಹೆಚ್ಚು ವಿಶದವಾಗುತ್ತಿರುವ ವಿಷಯವೆಂದರೆ*

*ಮಾನವನ ಜೀವನದಲ್ಲಿ ಅತ್ಯಂತ ಪವಿತ್ರವಾದ ಕಾರ್ಯವೆಂದರೆ "ಇಂಥಿಂಥಾದ್ದನ್ನು ಸತ್ಯವೆಂದು ನಾನು ನಂಬುತ್ತೇನೆ" ಎಂದು ಹೇಳುವಿಕೆ ಹಾಗೂ ಅನುಭವಿಸುವಿಕೆ. ಬದುಕಿನ ಎಲ್ಲಾ ಮಹತ್ತರವಾದ ಪ್ರತಿಫಲಗಳು ತೀವ್ರತರವಾದ ಶಿಕ್ಷೆಗಳು ಇದನ್ನು ಹೊಂದಿಕೊಂಡಂತಿರುತ್ತವೆ.*

ಒಂದು ವೇಳೆ ಯಾವನಾದರೂ ಇಂತಹ ಒಬ್ಬ ಮನುಷ್ಯ ಅಪ್ರಮಾಣಿಕ ಎಂದು ನಾನು ನಂಬುತ್ತೇನೆ ಎಂದು ಹೇಳುತ್ತಾನೆ ಎನ್ನೋಣ. ಅವನು ಅದನ್ನು ಪರೀಕ್ಷಿಸುವವರೆಗೂ ಮತ್ತು ಅದನ್ನು ಸತ್ಯವೆಂದು ಕಂಡುಹಿಡಿಯುವವರೆಗೂ, ಅವನ ಹೇಳಿಕೆಯನ್ನು ಸತ್ಯವೆಂದು ನಂಬಬಹುದೇ ? ಹಾಗಲ್ಲದಿದ್ದರೆ ಅದು ಕೇವಲ ಒಂದು ನಂಬಿಕೆ ; ಅದು ಅನೇಕ ವೇಳೆ ಪೂರ್ವಗ್ರಹಪೀಡಿತವಾದ ಅಥವಾ ಸುಳ್ಳು ನಂಬಿಕೆ. ಯಾವ ಅವಿವೇಕಿಯಾದರೂ ಆ ರೀತಿ 'ನಾನು ನಂಬುತ್ತೇನೆ' ಎಂದು ಹೇಳಬಲ್ಲ. ಆದರೆ ಅಂತಹ ವಿಷಯವು ಸತ್ಯವಾದದ್ದು ಎಂದು ನಾನು ನಂಬುತ್ತೇನೆ ಎಂದು ಹೇಳಬೇಕಾದರೆ ಅದ್ಭುತವಾದ ಮಾನಸಿಕವಾದ ಸಾಮರ್ಥ್ಯ ಇರಬೇಕಾಗುತ್ತದೆ. ಭೌತಿಕವಿಜ್ಞಾನದಲ್ಲಿ ಅದೇ ಶ್ರದ್ಧೆ. ಧರ್ಮವಿಜ್ಞಾನದಲ್ಲಿಯೂ ಅದು ಶ್ರದ್ಧೆಯೇ. ಶಾಸ್ತ್ರಗ್ರಂಥಗಳು ಯಾವುದೋ ಒಂದು ವಿಷಯವನ್ನು ಪ್ರತಿಪಾದಿಸುತ್ತವೆ. ಅದನ್ನು 'ನೀನು ನಂಬು' ಎಂದು ಹೇಳುತ್ತೀಯೆ. ಗುರುಗಳು ಒಂದು ವಿಷಯವನ್ನು ಹೇಳುತ್ತಾರೆ. ಅದನ್ನು 'ನೀನು ನಂಬು' ಎಂದು ಹೇಳುತ್ತೀಯೆ. ಆದರೆ ಒಂದು ಮುಖ್ಯ ಪ್ರಶ್ನೆ ಹೀಗಿದೆ: ನೀನು ಆ ಪ್ರಾಥಮಿಕ ನಂಬಿಕೆಯಿಂದ ಪ್ರಾರಂಭಿಸಿ ಅದನ್ನು ಪರೀಕ್ಷಿಸುವವರೆಗೂ ಅದರಲ್ಲಿ ಮುಂದುವರೆದಿದ್ದೀಯಾ ? ಹಾಗಿದ್ದಲ್ಲಿ ಮಾತ್ರ ಅದು ಸತ್ಯವಾಗಿರುವುದೆಂದು ನೀನು ಅರಿಯಬಲ್ಲೆ. ಅದೇ ಶ್ರದ್ಧೆ.

ಧಾರ್ಮಿಕವಿಜ್ಞಾನದಲ್ಲಿ ಅಂತಹ ಪರಿಶೀಲನೆಯು ಜೀವನದಿಂದಲೇ ನಡೆಯುತ್ತದೆ. ಅದು ಕೇವಲ ಬೌದ್ಧಿಕ ಚಿಂತನೆಗಳಿಂದಾಗಲಿ ಮತ್ತು ವ್ಯರ್ಥವಾದ ಚರ್ಚೆಯಿಂದಾಗಲಿ ಸಾಧ್ಯವಾಗುವುದಿಲ್ಲ. ಜೀವನದಲ್ಲಿ "ಇದು ಸತ್ಯ ಎಂದು ನಾನು ನಂಬುತ್ತೇನೆ" ಎಂಬಂತಹ ಕೆಲವು ನಂಬಿಕೆಗಳನ್ನು ಹೊಂದಿರು ವುದು ಅತ್ಯಾವಶ್ಯಕ. ಅಂತಹ ನಂಬಿಕೆಗಳು ಸೃಜನಾತ್ಮಕ ಶಕ್ತಿಯನ್ನು ಹೊಂದಿರುತ್ತವೆ. ನಿಷ್ಕ್ರಿಯವಾದ ಮತ್ತು ಅನುಕೂಲಕರವಾದ 'ನಾನು ನಂಬುತ್ತೇನೆ' ಎಂಬ ಬೇರೆ ಅನೇಕ ನಂಬಿಕೆಗಳೂ ಇವುಗಳೊಡನೆ ಸೇರಿಕೊಂಡಿರುತ್ತವೆ. ಮೊದಲನೆಯದು ದೃಢವಿಶ್ವಾಸವಾಗಿ ಪರಿವರ್ತಿತಗೊಂಡ ನಂಬಿಕೆಗಳಾಗಿವೆ. ಇದೇ ಶ್ರದ್ಧೆ. ಶ್ರದ್ಧೆಯೇ ಮಾನವ ಬದುಕಿನ ಹಾಸುಹೊಕ್ಕು. 'ಶ್ರದ್ಧೆಯಿಂದ ಆವೃತನಾಗಿರುವವನೇ ಮನುಷ್ಯ. ಯಾವ ವಿಧವಾದ ಶ್ರದ್ಧೆಯುಳ್ಳವನೋ ಅವನು ಅದೇ ಆಗುತ್ತಾನೆ' ಎಂದು ಗೀತೆಯು ವಿವರಿಸುತ್ತದೆ.

## ೧೧. ಶ್ರದ್ಧೆ ಮತ್ತು ವಿಚಾರ ಪರಸ್ಪರ ಪೂರಕ

ಇಲ್ಲಿ ನೀವು ಶ್ರದ್ಧೆಯ ವೈಜ್ಞಾನಿಕ, ವೈಚಾರಿಕ ಮತ್ತು ಮಾನವಿಕ ಮುಖಗಳನ್ನು ಕಾಣಬಹುದು. ಎಲ್ಲಾ ಭೌತಿಕ ವಿಜ್ಞಾನ ಎಲ್ಲಾ ಧರ್ಮ ಮತ್ತು ಎಲ್ಲಾ ಮಾನವ ಜೀವನಕ್ಕೂ ಈ ವಿಧವಾದ ಶ್ರದ್ಧೆಯ ಅಗತ್ಯವಿದೆ. ಭೌತಿಕ ವಿಜ್ಞಾನಗಳಲ್ಲಿ ಶ್ರದ್ಧೆಯೆಂದರೆ ಏನರ್ಥ ? ವಿಶ್ವದ ಅರ್ಥವಂತಿಕೆಯಲ್ಲಿ ದೃಢ ವಿಶ್ವಾಸ. ಪ್ರಕೃತಿಯು ಪರೀಕ್ಷಿಸಲು ಅರ್ಥವತ್ತಾದುದೆಂಬ ಭಾವನೆ ಮತ್ತು ತನ್ನೆದುರಿರುವ ಗೊಂದಲ ಮಯವಾದ ದೃಶ್ಯವಸ್ತುಗಳ ರಾಶಿಯ ಹಿಂದೆ ಒಂದು ಅರ್ಥವಿದೆ ಎಂಬ ನಂಬಿಕೆಯನ್ನು ವಿಜ್ಞಾನಿಯು ಇಟ್ಟುಕೊಳ್ಳದ ಹೊರತು ಅವನು ಪ್ರಕೃತಿಯನ್ನು ಪರೀಕ್ಷಿಸಲು ಸಾಧ್ಯವಿಲ್ಲ. ಆ ಮೊದಲು ಇರಬೇಕಾದ ಶ್ರದ್ಧೆಯ ಹೊರತಾಗಿ ಅವನು ತನ್ನ ವೈಜ್ಞಾನಿಕ ಅನ್ವೇಷಣೆಗೆ ಅಗತ್ಯವಾದ ಪ್ರೇರಣೆಯನ್ನು ಪಡೆಯಲಾರ. ಶ್ರದ್ಧೆಯಿಂದ ಉಂಟಾಗುವ ಈ ಅಂತಃಪ್ರೇರಣೆಯನ್ನು ಸೂಚಿಸುವ ಇನ್ನೊಂದು ಪದವನ್ನು

ಶಂಕರರು ಬಳಸುತ್ತಾರೆ 'ಆಸ್ತಿಕ್ಯಬುದ್ಧಿ' ಎಂದು. ಅದರ ಅರ್ಥ ಅದೇ, 'ಇತ್ಯಾತ್ಮಕ ಮನೋಭಾವಾಭಿಮುಖವಾಗಿರುವ ವಿಚಾರ' ಎಂದಾಗುತ್ತದೆ. ವೈಜ್ಞಾನಿಕ ಕಾರಣದ ದೃಷ್ಟಿಯಿಂದ ಶ್ರದ್ಧೆಯನ್ನು ಗಮನಿಸುತ್ತಾ ಆರ್ಥರ್ ಎಡಿಂಗ್‌ಟನ್ ಹೇಳುತ್ತಾರೆ (*Philosophy of Physical Science*, p. ೨೨೨) :

*ವೈಚಾರಿಕ ಯುಗದಲ್ಲಿ ಶ್ರದ್ಧೆಯು ಇನ್ನೂ ಪರಮ ಪ್ರಮಾಣವಾಗಿರುತ್ತದೆ. ಏಕೆಂದರೆ ವಿಚಾರವು ಶ್ರದ್ಧೆಯ ನಿಬಂಧನೆಗಳಲ್ಲೊಂದಾಗಿದೆ. ಆಲ್ಬರ್ಟ್ ಐನ್‌ಸ್ಟೀನ್ ವಿಜ್ಞಾನ ಮತ್ತು ಧರ್ಮ ಎಂಬ ಪ್ರಬಂಧದಲ್ಲಿ ಹೀಗೆ ಹೇಳುತ್ತಾರೆ (Out of My Later Years, p. ೨೬).*

*ಈಗ ಧರ್ಮ ಮತ್ತು ವಿಜ್ಞಾನ ಕ್ಷೇತ್ರಗಳೆರಡೂ ತಮ್ಮಲ್ಲೇ ಒಂದು ಮತ್ತೊಂದರಿಂದ ಪರಸ್ಪರ ಸ್ಪಷ್ಟವಾಗಿ ಬೇರ್ಪಟ್ಟಿವೆಯಾದರೂ ಅವೆರಡರ ನಡುವೆ ದೃಢವಾದ ಅನ್ಯೋನ್ಯಾಶ್ರಿತ ಸಂಬಂಧಗಳಿವೆ. ಧರ್ಮವು ಜೀವನದ ಗುರಿಯನ್ನು ನಿರ್ಧರಿಸಬಹುದಾದರೂ ವಿಜ್ಞಾನದಿಂದ ತಾನು ಸ್ಥಾಪಿಸಿದ ಗುರಿಗಳನ್ನು ಸಂಪಾದಿಸಲು ಯಾವ ಸಾಧನಗಳು, ಅತ್ಯಂತ ವಿಶಾಲಾರ್ಥದಲ್ಲಿ ಸಹಾಯಕವಾಗುತ್ತವೆ ಎಂಬುದನ್ನು ತಿಳಿದುಕೊಂಡಿದೆ. ಆದರೆ ವಿಜ್ಞಾನವು ಸತ್ಯ ಮತ್ತು ಜ್ಞಾನಾಕಾಂಕ್ಷೆಯನ್ನು ಆದ್ಯಂತ ತುಂಬಿಕೊಂಡಿರುವವರಿಂದ ಮಾತ್ರವೇ ಸೃಷ್ಟಿಯಾಗಬಲ್ಲದು. ಏನೇ ಆಗಿರಲಿ ಈ ಸಂವೇದನೆಯ ಉಗಮಕ್ಕೆ ಧರ್ಮವು ಮೂಲವಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ವಾಸ್ತವ್ಯ ಜಗತ್ತಿಗೆ ತಕ್ಕುದಾದ ನಿಯಮಗಳು ಅಥವಾ ಬುದ್ಧಿಗ್ರಾಹ್ಯವಾಗಿರುವ ಸಾಧ್ಯತೆಯಲ್ಲಿನ ಶ್ರದ್ಧೆಯೂ ಸೇರಿದೆ. ಅಂಥ ಗಾಢವಾದ ಶ್ರದ್ಧೆಯಿಲ್ಲದ ನಿಜವಾದ ಒಬ್ಬ ವಿಜ್ಞಾನಿಯನ್ನು ನಾನು ಊಹಿಸಲಾರೆ. ಇಂತಹ ಸನ್ನಿವೇಶವನ್ನು ರೂಪಕ ಒಂದರಿಂದ ವ್ಯಕ್ತಪಡಿಸಬಹುದಾದರೆ ಧರ್ಮವಿಲ್ಲದ ವಿಜ್ಞಾನ ಕುಂಟು, ವಿಜ್ಞಾನವಿಲ್ಲದ ಧರ್ಮ ಕುರುಡು.*

ಸತ್ಯವೊಂದಲ್ಲದೆ ಬೇರೇನನ್ನೂ ಬಯಸದ, ಸತ್ಯದ ಬಗೆಗೆ ತೀವ್ರವಾದ ಅಭೀಪ್ಸೆಯಿಂದ ಸ್ಫೂರ್ತಿಗೊಂಡ ಒಬ್ಬ ಬಾಲಕನಾದ ನಚಿಕೇತನನ್ನು ನಮಗೆ ಕಠೋಪನಿಷತ್ತು ಪರಿಚಯಿಸುತ್ತದೆ. ಅವನನ್ನು ಶ್ರದ್ಧೆ ಆವರಿಸಿಕೊಂಡಿತ್ತು (ಶ್ರದ್ಧಾ ಆವಿವೇಶ) ಎಂದು ಉಪನಿಷತ್ತು ಹೇಳುತ್ತದೆ (೧.೨). ಶ್ರದ್ಧಾ ಎಂದರೆ ಏನರ್ಥ? ಅವನ ಪೂರ್ವಜರು ಅವನಿಗೆ ಹೇಳಿದ ಕಲ್ಪಿತ ಕಥೆಗಳೆಲ್ಲವನ್ನೂ ಅವನು ನಂಬಿದನು ಎಂದರ್ಥವೇ ? ಖಂಡಿತ ಅಲ್ಲ ; ವೈವಿಧ್ಯಮಯವಾಗಿ ತೋರುತ್ತಿರುವ ಪ್ರಕೃತಿ ಮತ್ತು ಜೀವನದ ಹಿನ್ನೆಲೆಯಲ್ಲಿ ಗಹನವಾದ ಸತ್ಯವೊಂದಿದೆ ಎಂಬ ಗಾಢವಾದ ಶ್ರದ್ಧೆಯಿಟ್ಟು, ಅವನು ಸತ್ಯಾನ್ವೇಷಣೆಯಲ್ಲಿ ತೊಡಗಿಕೊಂಡಿದ್ದನು. ಪ್ರಕೃತಿಯ ರಹಸ್ಯಕ್ಕೆ ಸಂಬಂಧಿಸಿದ ಸಮಸ್ಯೆಯನ್ನು ಮುಖಾಮುಖಿ ಎದುರಿಸುವ ವಿಜ್ಞಾನಿಯೊಬ್ಬನ ಮನಸ್ಸಿಗೆ ಸರಿಯಾಗಿ ಹೋಲುವಂತೆ ನಚಿಕೇತನ ಮನಸ್ಸಿತ್ತು ; ಇದು ಮನಸ್ಸಿನ ವಿಧಾಯಕ ಸ್ವರೂಪ: ಆಸ್ತಿಕ್ಯಬುದ್ಧಿ ; ಅದು ಜೀವನದ ಏಕಾಂತದಲ್ಲಿ ಎಲ್ಲೋ ಸತ್ಯವು ಅಡಗಿದೆ ಎಂಬ ದೃಢ ನಂಬಿಕೆಯುಳ್ಳದ್ದಾಗಿರುತ್ತದೆ. ನನಗೆ ಅದರ ಮನವರಿಕೆಯಾಗಿದೆ, ಅದರ ಅನ್ವೇಷಣೆಯಲ್ಲಿ ತೊಡಗಿದ್ದೇನೆ, ಅದನ್ನು ನಾನು ಇನ್ನೂ ದರ್ಶಿಸಿಲ್ಲ, ಆದರೆ ಅದು ಇದೆ ಎಂದು ಬಲವಾಗಿ ನಂಬಿದ್ದೇನೆ. ಹಾಗಲ್ಲದೆ ಜೀವನದಲ್ಲಿ ಅಂತಹ ಸತ್ಯವು ಅಡಗಿಲ್ಲ ಎಂಬುದನ್ನು ನಾನು ಮೊದಲೇ ಅರಿತಿದ್ದರೆ ಇಂತಹ ಪ್ರಯಾಸಕರವಾದ ಅನ್ವೇಷಣೆಯಲ್ಲಿ ನನ್ನ ಪ್ರಶಸ್ತವಾದ ಯುವ ಜೀವಿತವನ್ನು ನಾನು ಏಕೆ ಅರ್ಪಿಸಬೇಕು ?

ಜ್ಞಾತಪ್ರಪಂಚವನ್ನು ನನ್ನ ಇಂದ್ರಿಯಗಳ ಮೂಲಕ ನೋಡಬಲ್ಲೆ ಮತ್ತು ಅನುಭವಿಸಬಲ್ಲೆ. ಅಜ್ಞಾತಪ್ರಪಂಚವನ್ನು ನಾನು ಕಾಣಲಾರೆ ಹಾಗೂ ತಿಳಿಯಲಾರೆ. ಆದರೂ ಅದು ಇದೆಯೆಂದು ನಾನು ಭಾವಿಸುತ್ತೇನೆ. ಈ ವಿಧವಾದ ಪರಮಸತ್ಯದ ಅಜ್ಞಾತ ಆಯಾಮದ ಬಗೆಗೆ ಇರುವ ಈ

ವಿಧವಾದ ಮೂಲಭೂತವಾದ ಇತ್ಯಾತ್ಮಕ ಮನೋಭಾವವನ್ನೇ ಶ್ರದ್ಧೆ ಎನ್ನುತ್ತಾರೆ. ಇಂತಹ ವಿಧಾಯಕ ಮನಸ್ಥಿತಿಯಿಲ್ಲದೆ ಯಾವ ವಿಜ್ಞಾನಿಯೂ ಪ್ರಗತಿ ಹೊಂದಲಾರ. ಆ ಕ್ಷೇತ್ರದಲ್ಲಿ ಯಾವುದೇ ಸತ್ಯವನ್ನು ಅನಾವರಣಗೊಳಿಸುವಲ್ಲಿ, ವೈಜ್ಞಾನಿಕ ಅನ್ವೇಷಣೆಯ ಕ್ಷೇತ್ರದಲ್ಲಿ, ಯಾವುದೇ ವಿಜ್ಞಾನಿಯು ಪ್ರವೇಶಿಸಲಾರ. ಅಂತೆಯೇ ವೇದಾಂತದಲ್ಲೂ ಇಂತಹ ಶ್ರದ್ಧೆ ಬೇಕೆಂಬುದಕ್ಕೆ ನಾವು ಒತ್ತುಕೊಡುತ್ತೇವೆ. ನಮ್ಮೊಳಗಿರುವ ಹಾಗೂ ನಮ್ಮ ಸುತ್ತ ಇರುವ ಪ್ರಪಂಚದ ಅರ್ಥವಂತಿಕೆಯ ಬಗೆಗೆ ಇತ್ಯಾತ್ಮಕ ಮನೋಭಾವದ ಆವಶ್ಯಕತೆಯಿದೆ. ಈ ದಿಸೆಯಲ್ಲಿ ಸತತ ಪ್ರಾಮಾಣಿಕ ಅನ್ವೇಷಣೆಗೋಸ್ಕರ ಮತ್ತು ಆ ರಹಸ್ಯವನ್ನು ಹೊರಗೆಡಹಲು ನಮ್ಮ ಸಾಮರ್ಥ್ಯದಲ್ಲಿ ನಂಬಿಕೆ ಇರಬೇಕಾಗುತ್ತದೆ. ಇದು ಅತ್ಯಂತ ಅವಶ್ಯಕ.

ಶ್ರದ್ಧೆಯ ನಿಜವಾದ ಅರ್ಥ ಹಾಗೂ ಮಹತ್ವವನ್ನು ಚೆನ್ನಾಗಿ ತಿಳಿದುಕೊಳ್ಳಲು ನಮಗೆ ಶ್ರದ್ಧೆಗೆ ವಿರುದ್ಧವಾದುದು ನೆರವಾಗುತ್ತದೆ. ಶ್ರದ್ಧೆಗೆ ವಿರೋಧವಾದುದಾವುದು ? ಸಂಸ್ಕೃತದಲ್ಲಿ ನಾವು ಅದನ್ನು ಅಶ್ರದ್ಧೆ ಎನ್ನುತ್ತೇವೆ. ಕೇವಲ ಇದರ ಆರಂಭದಲ್ಲಿ ಸೇರಿರುವ 'ಅ' ಎಂಬುದು ನಿಷೇಧಾರ್ಥಕವನ್ನು ಸೂಚಿಸುತ್ತದೆ. ಆಂಗ್ಲಭಾಷೆಯಲ್ಲಿ ಈ ಅಶ್ರದ್ಧೆ ಎಂಬ ಪದದಿಂದ ವ್ಯಕ್ತವಾಗುವ ಮನೋಭಾವವನ್ನು ಸಂಪೂರ್ಣವಾಗಿ ವ್ಯಕ್ತಪಡಿಸುವ ಅತ್ಯಂತ ಪ್ರಭಾವಶಾಲಿಯಾದ ಪದವೆಂದರೆ, Cynicism (ಸಿನಿಕತನ). ಸಿನಿಕನ ಲಕ್ಷಣವೆಂದರೆ ತನ್ನ ಸುತ್ತಲಿನ ಪ್ರಪಂಚ ಹಾಗೂ ತನ್ನ ಬಗೆಗೆ ನಂಬಿಕೆಯಿಲ್ಲದವನು. ಈ ಸಿನಿಕ ಮನೋಭಾವವೇ ಅಶ್ರದ್ಧೆ. ಅವನ ಮನಸ್ಸು ನಕಾರಾತ್ಮಕ ಆಲೋಚನೆಗಳ ಮೊತ್ತದಿಂದ ಸಂಕಟಕ್ಕೀಡಾಗಿರುತ್ತದೆ. ಶ್ರದ್ಧೆಯಾದರೋ ಸಕಾರಾತ್ಮಕ ಚಿಂತನೆಗಳ ಮೊತ್ತವನ್ನು ಸೂಚಿಸುತ್ತದೆ. ಇದನ್ನು ಶಂಕರರು 'ಆಸ್ತಿಕ್ಯಬುದ್ಧಿ' ಎಂಬ ಪದದಿಂದ ಕರೆದಿದ್ದಾರೆ. ಇದು ಮಗುವಿನ ಮನಸ್ಸಿನ ಕುತೂಹಲ ಮತ್ತು ಹೊಸತನವನ್ನು ತಿಳಿಸುತ್ತದೆ. ಇದಕ್ಕೆ ಭಿನ್ನವಾದ ಅಶ್ರದ್ಧೆಯು ಜೀರ್ಣವಾದ, ಸವೆದ, ಸೊರಗಿದ ವೃದ್ಧಾಪ್ಯದ ಮನಸ್ಸನ್ನು ತೋರಿಸುತ್ತದೆ.

## ೧೨. ಶ್ರದ್ಧೆ ಮತ್ತು ವಿಚಾರಕ್ಕೆ ಪ್ರತಿಯಾದ ಸಿನಿಕತನ

ಸಿನಿಕತನವು ಮನುಷ್ಯನ ಆಧ್ಯಾತ್ಮಿಕ ಮರಣವನ್ನು ಸೂಚಿಸುತ್ತದೆ. ಅದು ಎಲ್ಲಾ ಮೌಲ್ಯಗಳನ್ನು ತುಚ್ಛೀಕರಿಸುತ್ತದೆ. ಭೌತಿಕವಾದದ ಧ್ಯೇಯದ ಹಾದಿಯಲ್ಲೇ ಬೇರುಬಿಟ್ಟಿರುವ ಎಲ್ಲ ನಾಗರಿಕತೆಗಳಿಗೂ ಅಂತಿಮ ಪ್ರತೀಕಾರವಾಗಿದೆ. ಗತಕಾಲದ ಎಲ್ಲಾ ನಾಗರಿಕತೆಗಳನ್ನು ಹೆಚ್ಚೂಕಡಿಮೆ ಇದು ಸಂಕಟಕ್ಕೀಡುಮಾಡಿದೆ. ಆದರೆ ಆಧುನಿಕ ನಾಗರಿಕತೆಯ ವರ್ತಮಾನ ಮನೋಭಾವವೇ ಇದಾಗಿದೆ. ಭೌತಿಕವಸ್ತುಗಳಿಗೆ ಮತ್ತು ಇಂದ್ರಿಯಸುಖಕ್ಕೆ ಹೆಚ್ಚು ಒತ್ತುಕೊಡುವುದರಿಂದ ಮನುಷ್ಯನು ಯಾವಾಗ ಆಧ್ಯಾತ್ಮಿಕವಾಗಿ ದುರ್ಬಲನಾಗುತ್ತಾನೋ ಆಗ ಇದು ಪ್ರವೇಶಿಸುತ್ತದೆ. ಮನುಷ್ಯ ಮತ್ತು ಪ್ರಕೃತಿಯಲ್ಲಿ ಸದಾ ನೆಲೆಸಿರುವ ದಿವ್ಯ ಬೆಳಕನ್ನು ಉಪೇಕ್ಷಿಸುವ ಫಲವಾಗಿ ಇದು ಉಂಟಾಗುತ್ತದೆ. ಮಾನವನು ಆಗ ಅನುಭವವನ್ನು ಅರಗಿಸಿಕೊಳ್ಳುವ ಆಧ್ಯಾತ್ಮಿಕ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾನೆ. ಅವನು ಅದಕ್ಕೆ ಪ್ರತಿಯಾಗಿ ಅನುಭವಗಳಿಂದಲೇ ಜೀರ್ಣಸಲ್ಪಡುತ್ತಾನೆ. ಇದು ಸಿನಿಕತನದಿಂದ ಪರಿಣಮಿಸುತ್ತದೆ. ಇಂದು ಪ್ರಪಂಚಾದ್ಯಂತ ಅನೇಕ ಬುದ್ಧಿಜೀವಿಗಳು ಈ ಸಿನಿಕತನದ ಮನೋಭಾವವನ್ನು ಬೆಳೆಸಿಕೊಂಡಿದ್ದಾರೆ. ಅವರು ಶ್ರದ್ಧೆಯ ಬೆಲೆಬಾಳುವ ಮೌಲ್ಯವನ್ನು ಕಳೆದುಕೊಂಡಿದ್ದಾರೆ ಮತ್ತು ಅವರು ಇದರ ವಿರುದ್ಧವಾದ ಅಶ್ರದ್ಧೆಗೆ ಬಲಿಯಾಗಿದ್ದಾರೆ.

ಪ್ರಸ್ತುತ ಆಧುನಿಕ ಯುಗದಲ್ಲಿ ನಾವು ಕಾಣುವಷ್ಟು ವ್ಯಾಪಕವಾದ ಸಿನಿಕ ಮನೋಭಾವ, ಇತಿಹಾಸದ ಯಾವ ಕಾಲದಲ್ಲೂ ಇರಲಿಲ್ಲ. ಇಂದು ಬಹುತೇಕ ಪ್ರತಿಯೊಬ್ಬ ಬುದ್ಧಿಜೀವಿಯು ಭಾಗಶಃ ಅಥವಾ ಪೂರ್ಣವಾಗಿ ಸಿನಿಕನೆ. ಪ್ರಾಚೀನ ನಾಗರಿಕತೆಗಳಲ್ಲಿ ವೃದ್ಧಾಪ್ಯದಲ್ಲಷ್ಟೇ ಒರಟು

ಜೀವನ ವಿಧಾನದಿಂದಾಗಿ ಮುಖ್ಯವಾಗಿ ಕೆಲವು ವ್ಯಕ್ತಿಗಳನ್ನು ಆವರಿಸುತ್ತಿದ್ದ ಸಿನಿಕತನ ಇಂದು ಮಕ್ಕಳನ್ನೂ ಬಿಡದೆ ಆವರಿಸಿದೆ. ಏಕೆಂದರೆ ಎಲ್ಲ ಧರ್ಮಗಳ ಹಿಂದಿರುವ, ಎಲ್ಲ ವಿಜ್ಞಾನದ ಹಿಂದಿರುವ, ಎಲ್ಲ ಉತ್ಕೃಷ್ಟತೆ ಮತ್ತು ನಿಜವಾದ ಜ್ಞಾನದ ಅನ್ವೇಷಣೆ ಹಿಂದೆ ಇರಬೇಕಾದ ಮೂಲಾಧಾರವಾದ ಶ್ರದ್ಧೆಯು ಇಂದು ಮರೆಯಾಗುತ್ತಿದೆ. ಇದಕ್ಕೆ ಮತ್ತೊಂದು ಕಾರಣವೆಂದರೆ ಆನ್ವಯಿಕ ವಿಜ್ಞಾನವು ಸ್ವಾಸ್ಥ್ಯಮಟ್ಟಕ್ಕೆ ಮೀರಿದ ಇಂದ್ರಿಯಸುಖಕ್ಕಾಗಿ ಆಧುನಿಕ ಮಾನವನ ತೃಷ್ಣೆಯನ್ನು ವೃದ್ಧಿಗೊಳಿಸಲು ಸಹಾಯ ಮಾಡುತ್ತಿರುವುದು. ಬುದ್ಧಿಶಕ್ತಿಯು ಮೊನಚೂ ಚುರುಕೂ ಆಗಿದೆ. ಅದು ತನ್ನ ಅಥವಾ ಇತರರ ನಂಬಿಕೆಗಳನ್ನು ಅಲ್ಲಾಡಿಸಬಲ್ಲದು, ತಲೆಕೆಳಗುಮಾಡಬಲ್ಲದು ಅಥವಾ ನಾಶಮಾಡಬಲ್ಲದು. ಆದರೆ ಅದು ಸೌಂದರ್ಯವನ್ನು ಅನುಭವಿಸುವ, ಒಳಿತನ್ನು ಸಾಧಿಸುವ, ನಿರ್ಮಿಸುವ ಅಥವಾ ಸತ್ಯಕ್ಕಾಗಿ ಪ್ರಯತ್ನಿಸುವ ಪ್ರಚೋದನೆಯನ್ನು ಕಳೆದುಕೊಂಡಿದೆ. ಹೆಚ್ಚಾಗಿ ಅರಿತಂತೆ ತೋರುತ್ತಿರುವುದರಿಂದ ಮತ್ತು ಜೀವನದ ಆಂತರಿಕ ಮಟ್ಟದಲ್ಲಿ ಅರ್ಥವಂತಿಕೆಯಿಂದ ಕೂಡಿರುವ ನಂಬಿಕೆಯನ್ನು ಬರಡು ಮಾಡಿರುವುದರಿಂದ ಅದು ಜ್ಞಾನದ ಚಿಲುಮೆಯನ್ನು ಬತ್ತಿಸಿದೆ, ಮುಂದುವರಿದ ಸತ್ಯಾನ್ವೇಷಣೆಯನ್ನು ತ್ಯಜಿಸುವಂತೆ ಮಾಡಿದೆ, ಜೀವನದ ಸಾಮುದಾಯಕ ಮಟ್ಟವು ಸ್ಥಗಿತಗೊಂಡಿದೆ ; ಜೀವನವನ್ನೇ ನಿರಾಶೆಗೆ ಹಾಗೂ ಬೇಸರಿಕೆಗೆ ಒಳಪಡಿಸಿದೆ.

## ೧೩. ಸಿನಿಕತನದ ದುಷ್ಪರಿಣಾಮಗಳು

ಯಾರೋ ಒಬ್ಬ, ಪ್ರಾಯಶಃ ಆಸ್ಕರ್ ವೈಲ್ಡ್ ಎಂದು ತೋರುತ್ತದೆ. ಅವನು ಒಂದೇ ವಾಕ್ಯದಲ್ಲಿ ಸಿನಿಕನ ಲಕ್ಷಣವನ್ನು ತಿಳಿಸಿರುವುದನ್ನು ನಿಮಗೆ ಹೇಳುತ್ತೇನೆ : 'ಯಾವನು ಎಲ್ಲದರ ಬೆಲೆಯನ್ನು ತಿಳಿದಿದ್ದಾನೋ ಮತ್ತು ಯಾವುದರ ಮೌಲ್ಯ ಗೊತ್ತಿಲ್ಲವೊ ಅವನೇ ಸಿನಿಕ.' ಅವನ ಬಳಿ ಎಲ್ಲಾ ವಿಷಯಗಳ ಬಗ್ಗೆ ಮಾಹಿತಿಯಿದೆ. ಆದರೆ ಯಾವ ವಸ್ತುವಿನ ಮೌಲ್ಯದ ಬಗೆಗೂ ಒಳನೋಟ ಅವನಿಗಿಲ್ಲ. ಮೌಲ್ಯದ ವ್ಯವಸ್ಥೆ ಆಂತರಿಕ ಮಟ್ಟದಲ್ಲಡಗಿದೆ. ಅದನ್ನು ಅರಿಯಬೇಕಾದರೆ ಶ್ರದ್ಧೆ ಎಂಬ ಪದದಿಂದ ಸೂಚಿತವಾಗುವ ಈ ಸಕಾರಾತ್ಮಕ ಮನೋಭಾವದ ಅಗತ್ಯವಿದೆ. ಒಬ್ಬ ವಿಜ್ಞಾನಿಯು ಸಿನಿಕನಲ್ಲ ; ಅವನಿಗೆ ವಿಧಾಯಕ ಮನೋಭಾವವಿರುತ್ತದೆ. ಜೀವನದ ಇತರ ಕ್ಷೇತ್ರಗಳಲ್ಲಿ ಅವನು ಸಿನಿಕನಾಗಬಹುದು. ಆದರೆ ತನ್ನ ಸಂಶೋಧನಾ ಕ್ಷೇತ್ರದಲ್ಲಿ ಹಾಗೆ ಇರಲಾರ. ಸಿನಿಕ ಮನೋದೃಷ್ಟಿಯು ಮೌಲಿಕವಾದ ಎಲ್ಲಾ ವಸ್ತುಗಳನ್ನು ಅಮೌಲ್ಯಗೊಳಿಸುತ್ತದೆ ಮತ್ತು ಅದು ಅರ್ಥವತ್ತಾದ, ಯೋಗ್ಯವಾದ ಎಲ್ಲದರ ಸಾರವನ್ನು ಬರಡುಗೊಳಿಸುತ್ತದೆ. ಅದಕ್ಕೆ ತನ್ನ ಸ್ವಂತ ತಾಯಿಯೂ ಈ ದೇಹದ ಹುಟ್ಟಿಗೆ ಕಾರಣವಾದ ಒಂದು ವ್ಯಕ್ತಿಯಾಗಿಬಿಡುತ್ತದೆ. ಸಿನಿಕ ಮನಸ್ಸು ಎಲ್ಲಾ ಸಂವೇದನೆಗಳನ್ನು ಮತ್ತು ಭಾವನೆಗಳನ್ನು ಬರಿದುಮಾಡುತ್ತದೆ. ಅದು ಕೇವಲ ತರ್ಕಬದ್ಧ ಮನುಷ್ಯರನ್ನು ವಸ್ತುಗಳನ್ನು ತನ್ನ ಜಡತರ್ಕದಿಂದಲೇ ಅಳೆಯುತ್ತದೆ. ಲೋಕಮಾನ್ಯ ಬಾಲಗಂಗಾಧರ ತಿಲಕರು ತಮ್ಮ ಸುಪ್ರಸಿದ್ಧ ಗ್ರಂಥ ಗೀತಾರಹಸ್ಯದಲ್ಲಿ ಒಬ್ಬ ತಾಯಿಯ ಲಕ್ಷಣಸ್ವರೂಪವನ್ನು ಅಂತಹ ಸಿನಿಕ, ತಾರ್ಕಿಕ ಮನಸ್ಸಿನ ದೃಷ್ಟಿಯಿಂದ ಹೀಗಿರಬಹುದು ಎಂದ ಹೀಗೆ ತಿಳಿಸಿದ್ದಾರೆ : ತಾಯಿಯು ಗರ್ಭಧಾರಣೆ, ಪ್ರಸವ ಮುಂತಾದ ಸ್ತ್ರೀತ್ವ ಸಾಮಾನ್ಯ ಲಕ್ಷಣಗಳಿಂದ ಕೂಡಿದ ವ್ಯಕ್ತಿವಿಶೇಷ. ಕೇವಲ ಈ ತರಹದ ಲಕ್ಷಣವುಳ್ಳ ತಾಯಿಯನ್ನು ಯಾರೊಬ್ಬರು ತಮ್ಮ ತಾಯಿಯೆಂದು ಸ್ವೀಕರಿಸಲು ಸಾಧ್ಯವಿಲ್ಲ. ಏಕೆಂದರೆ ಮಾತೃತ್ವದ ಜೊತೆಗೆ ಇರುವ ಎಲ್ಲಾ ಮೌಲ್ಯಗಳು ಈ ತೆರನಾದ ಲಕ್ಷಣದಿಂದ ಶುಷ್ಕಗೊಳಿಸಲ್ಪಟ್ಟಿವೆ. ಆದರೆ ವಸ್ತುಗಳು, ವ್ಯಕ್ತಿಗಳು ಮತ್ತು ಜೀವನದ ಬಗೆಗೆ ಸಿನಿಕ ಮನಸ್ಸು ಅಂತಹ ದೃಷ್ಟಿಯನ್ನಿಟ್ಟುಕೊಂಡಿರುತ್ತದೆ. ಅದು ತಾಯಿಯನ್ನು ತಿಳಿಯಲಾರದು ; ಆದರೆ ಅಂತಹ ಅನುತ್ಪಾದಕ ವ್ಯಕ್ತಿಯನ್ನು ಸಾಕಲು ಅದಕ್ಕೆ ಇಷ್ಟು ಬೆಲೆಯಾಗುತ್ತದೆ, ಅಷ್ಟಾಗುತ್ತದೆ ಎಂದು ಮಾತ್ರ

ತಿಳಿದಿರುತ್ತದೆ. ಮೌಲ್ಯವ್ಯವಸ್ಥೆಯು ಆವರಿಸಿರುವ ಮತ್ತು ತುಂಬಿರುವ ವಿಶಿಷ್ಟ ವ್ಯಕ್ತಿಗಳನ್ನಾಗಲಿ ಮತ್ತು ವಿಷಯಗಳನ್ನಾಗಲಿ ಎಂದೂ ಅದು ಅರ್ಥಮಾಡಿಕೊಳ್ಳಲಾರದು. ಈ ವಿಧವಾದ ಜಡವಾದ ತಾರ್ಕಿಕವಾದ ಪ್ರಯೋಜನಕಾರಿಯಾದ ಮನೋಭಾವವು ಇಂದು ಮೌಲ್ಯಗಳ ಸಂಬಂಧವಿಲ್ಲದಿರುವಿಕೆಯಿಂದ ಲಕ್ಷಾಂತರ ವ್ಯಕ್ತಿಗಳನ್ನು ಕಲುಷಿತಗೊಳಿಸುತ್ತಿದೆ. ಈ ಮೌಲ್ಯಗಳು ವಾಸ್ತವಿಕ ಸಂಗತಿಗಳಿಂದುಂಟಾದ ಶ್ರದ್ಧೆಯ ಕೊಡುಗೆ. ಅವು ಬುದ್ಧಿ ಅಥವಾ ವಿಚಾರದ ಕೊಡುಗೆ. ಈ ಸಿನಿಕ ಮನೋಭಾವವೇ ತರ್ಕ ಹಾಗೂ ಬುದ್ಧಿಯನ್ನು ವ್ಯರ್ಥಗೊಳಿಸುತ್ತದೆ. ಅದು ಮನುಷ್ಯನಿಗೆ ಸತ್ಯ ಹಾಗೂ ಜೀವನ ಸಾರ್ಥಕತೆಗೆ ಮುಖ್ಯ ಮಾರ್ಗದರ್ಶಿಯಾಗಲು ಅನರ್ಹವೆನಿಸಿಕೊಳ್ಳುತ್ತದೆ.

## ೧೪. ವೇದಾಂತದಲ್ಲಿ ತಿಳಿಸಿರುವ ಬುದ್ಧಿಯು, ಕ್ರಿಯಾತ್ಮಕ-ಶ್ರದ್ಧಾವಿಚಾರ

ಯುಕ್ತಿ ಮತ್ತು ಬುದ್ಧಿಯು, ಶ್ರದ್ಧೆಯೊಡನೆ ಏಕೀಕೃತಗೊಂಡಾಗ ಸೃಜನಶೀಲವಾಗುತ್ತವೆ. ಇದೇ ವೇದಾಂತವು ತಿಳಿಸಿಕೊಡುವ ಬುದ್ಧಿ. ಈ ಬುದ್ಧಿಯು ಶ್ರದ್ಧೆಯ ಸೃಜನಶೀಲತೆಯನ್ನು ಅದರ ಮೌಲ್ಯಗಳ ಸೂಕ್ಷ್ಮತೆಯೊಡನೆ, ಮತೀಯ ವಿಶ್ಲೇಷಕ ಶಕ್ತಿಯೊಡನೆ, ವಾಸ್ತವಾಂಶದ ಗ್ರಹಿಕೆಯೊಡನೆ ಒಗ್ಗೂಡಿಸುತ್ತದೆ. ಅದು ತನ್ನೊಡನೆ ಶುದ್ಧಮನಸ್ಸಿನ ಇಚ್ಛಾಶಕ್ತಿಯನ್ನು ಸೇರಿಸಿಕೊಳ್ಳುತ್ತದೆ. ಮನುಷ್ಯನ ಆಂತರ್ಯದಲ್ಲಿಯೇ ಪ್ರಕೃತಿಯು ನೀಡಿದ ನರ-ಮಾನಸಿಕ ಶಕ್ತಿಗಳ ಫಲವಾಗಿ, ಮನುಷ್ಯನಿಂದ ವಿಕಸಿತವಾದ ಶ್ರದ್ಧೆ, ವಿಚಾರ ಮತ್ತು ಇಚ್ಛಾಶಕ್ತಿಗಳ ಸಮಗ್ರ ಐಕ್ಯವೇ ಬುದ್ಧಿಯೆನಿಸಿಕೊಳ್ಳುತ್ತದೆ. ಅದಕ್ಕೆ ವಿಜ್ಞಾನ, ಭೌತಿಕ ಅಥವಾ ಆಧ್ಯಾತ್ಮಿಕ ಸಂಶೋಧನೆಗಳೆಡೆಗೆ ಅವನನ್ನು ಮುನ್ನಡೆಸುವ ಸಾಮರ್ಥ್ಯವಿದೆ. ಅಷ್ಟೆ ಅಲ್ಲದೆ ಅದಕ್ಕೆ ವೈಯಕ್ತಿಕ ಮತ್ತು ಸಾಮೂಹಿಕವಾಗಿ ಶ್ರೇಷ್ಠ ಕಲೆ ಮತ್ತು ಜೀವನ ಸಾರ್ಥಕತೆಯನ್ನುಂಟುಮಾಡುವ ಸಾಮರ್ಥ್ಯವಿದೆ.

ಹೀಗೆ ಬುದ್ಧಿಯೆಂಬುದರ 'ಇಂಟೆಲೆಕ್ಟ್' ಎಂಬ ಅನುವಾದವು, ಅದರ ಅರ್ಥ ಮತ್ತು ವ್ಯಾಪ್ತಿಯನ್ನು ಕಟ್ಟುನಿಟ್ಟಾಗಿ ಸೀಮಿತಗೊಳಿಸುತ್ತದೆ. ಅದು ಪ್ರಕಾಶಗೊಳಿಸುವ, ಕ್ರಿಯಾತ್ಮಕ ಚಲನಶೀಲ ಶಕ್ತಿಯಂತೆ ಮೈದೋರಿದಾಗ ವೇದಾಂತವು ಅದರ ನೈಜಸ್ವರೂಪವನ್ನು ಪ್ರಕಟಪಡಿಸುತ್ತದೆ. ಉಪನಿಷತ್ತುಗಳು ಹಾಗೂ ಗೀತೆಯಲ್ಲಿ ಅದನ್ನು ಹೆಚ್ಚಾಗಿ ಶ್ಲಾಘಿಸಿದ್ದಾರೆ. ಗೀತೆಯು ಮಾನವನಿಗೆ ತನ್ನ ಜೀವನವನ್ನು ಬುದ್ಧಿಯ ಮಾರ್ಗದರ್ಶನದ ಅಧೀನದಲ್ಲಿರಬೇಕೆಂದು ತಿಳಿಸುತ್ತದೆ : 'ಬುದ್ಧೌ ಶರಣಂ ಅನ್ವಿಚ್ಛ' (೨.೪೯). ಚಿತ್ತವು ತನ್ನ ಸೀಮಿತ ಹಾಗೂ ಅರಿಯುವಿಕೆಯ ಪರವಾಗಿ ಅಪಹೃತವಾದ ಕಾವ್ಯ ಹಾಗೂ ಸೌಂದರ್ಯಪ್ರಜ್ಞೆಯನ್ನು, ಬುದ್ಧಿಯು ಮಾನವನ ಬದುಕಿನಲ್ಲಿ ಮತ್ತು ಪ್ರಪಂಚದಲ್ಲಿ ಮತ್ತೆ ಪ್ರತಿಷ್ಠಾಪಿಸುತ್ತದೆ. ಮನುಷ್ಯ ತನ್ನ ಜೀವನ ರಥದ ಹೊಣೆಗಾರಿಕೆಯನ್ನು ರಥಕ್ಕೆ ಅಂದರೆ ತನ್ನ ಶರೀರಕ್ಕೆ ಅಥವಾ ಕುದುರೆಗಳಿಗೆ ಅಂದರೆ ಇಂದ್ರಿಯಗಳಿಗೆ, ಅಥವಾ ಕಡಿವಾಣ ಎಂದರೆ ಮಾನಸಿಕ ವ್ಯವಸ್ಥೆಗೆ ವಹಿಸದೆ, ಸಾರಥಿಯ ಮಾರ್ಗದರ್ಶನದಡಿಯಲ್ಲಿ, ಅಂದರೆ ಬುದ್ಧಿಗೆ ಅಥವಾ ಜಾಗೃತಪ್ರಜ್ಞೆಗೆ ವಹಿಸಿಕೊಡಬೇಕು ಎಂದು ಕಠೋಪನಿಷತ್ತು ಆಗ್ರಹಪಡಿಸುತ್ತದೆ.

## ೧೫. ಆಧ್ಯಾತ್ಮಿಕ ಜೀವನದಲ್ಲಿ ಯುಕ್ತಿ ಮತ್ತು ಶ್ರದ್ಧೆಗಿರುವ ವಿರೋಧವು ಮರೆಯಾಗುತ್ತದೆ

ಯುಕ್ತಿ ಮತ್ತು ಶ್ರದ್ಧೆಗಿರುವ ಈ ವಿರೋಧವು ಭಾರತೀಯ ತತ್ತ್ವಜ್ಞಾನದಲ್ಲಿ ಎಲ್ಲವನ್ನೂ ಒಳಗೊಂಡಿರುವ ಆಧ್ಯಾತ್ಮಿಕತೆಯ ಉನ್ನತದರ್ಶನದಿಂದ ಇಲ್ಲವಾಗುತ್ತದೆ. ಭಾರತದಲ್ಲಿ ಯುಕ್ತಿಯೊಂದರಿಂದಲೇ ಪ್ರಮಾಣೀಕರಿಸುವ ಜನರಿದ್ದರು. ಅಂತೆಯೇ ಶ್ರದ್ಧೆಯೊಂದರಿಂದಲೇ ಪ್ರಮಾಣೀಕರಿಸುವ ಬೇರೆ ಜನರೂ ಇದ್ದರು. ಅವರಿಬ್ಬರು ಅಂತಹ ಪ್ರತ್ಯೇಕತೆ ಹಾಗೂ ವಿಶಿಷ್ಟತೆಗಳಿಂದ ಸಂಕುಚಿತಮನಸ್ಕರಾಗಿದ್ದರು. ನಮ್ಮಲ್ಲಿ ಯುಕ್ತಿಯನ್ನೇ ತಲೆ ತುಂಬಾ ತುಂಬಿಕೊಂಡ ಅನೇಕ

ಪಂಡಿತರಿದ್ದರು. ಆದರೆ ಅವರು ವಕ್ರವಾದ ಬರಡು ವ್ಯಕ್ತಿಗಳಾಗಿದ್ದು, ವಾಗ್ಯುದ್ಧದಲ್ಲಿಯೇ ನಿರತರಾಗಿದ್ದರು. ಅವರು ಯುಕ್ತಿಯ ಜೊತೆಯಲ್ಲಿಯೇ ಸಂವೇದನೆ ಮತ್ತು ಭಾವನೆಗಳ ಸಂಸ್ಕೃತಿಯಿಂದ ಉದ್ಭವಿಸುವ ಮಾನವಸಂಬಂಧದಲ್ಲಿನ ಸಹಾನುಭೂತಿ ಹಾಗೂ ಮಾನವ ಹಿತಗಳಿಂದ ದೂರವಾಗಿದ್ದರು.

ಮತ್ತೊಂದೆಡೆ, ನಮ್ಮಲ್ಲಿ ಭಾವನಾತ್ಮಕವಾಗಿ ಗೃಹೀತ ನಂಬಿಕೆಗಳುಳ್ಳ ಅನೇಕ ಜನರಿದ್ದರು. ವಾಸ್ತವಸಂಗತಿಗಳ ಸ್ಪಷ್ಟ ಅರಿವಿಲ್ಲದೇ, ಮಾನಸಿಕವಾಗಿ ದುರ್ಬಲರಾಗಿದ್ದರು. ಅನೇಕ ವೇಳೆ ಮತಾಂಧತೆ ಹಾಗೂ ಮೂಢನಂಬಿಕೆ ಉಳ್ಳವರಾಗಿದ್ದರು. ಆದರೆ ನಮ್ಮ ಶ್ರೇಷ್ಠ ಬೋಧಕರು ಮತ್ತು ಗ್ರಂಥಗಳು, ಶ್ರದ್ಧೆ ಮತ್ತು ಯುಕ್ತಿಯ ಈ ಸಾಮರಸ್ಯದ ಸೇರಿಕೆಗೆ, ಸಂಯೋಜನೆಗೆ ಒತ್ತು ಕೊಟ್ಟಿದ್ದರು. ಇಂತಹ ಸಂಯೋಜನೆಯು ಲೌಕಿಕ ಮತ್ತು ಆಧ್ಯಾತ್ಮಿಕಗಳನ್ನೂ ಕೆಲಸ ಮತ್ತು ಪೂಜೆಗಳನ್ನೂ ಒಂದುಗೂಡಿಸುತ್ತದೆ.

ಈ ಬುದ್ಧಿಯನ್ನು ಶಂಕರರು 'ನೇದಿಷ್ಠಂ ಬ್ರಹ್ಮ'—ಬ್ರಹ್ಮನಿಗೆ ನಿಕಟತಮ ಎಂದು ವರ್ಣಿಸಿದ್ದಾರೆ. ಅದು ಎಲ್ಲರ ಮಾನಸಿಕ ವ್ಯವಸ್ಥೆಯ ಹಿಂದಿರುವ, ಪ್ರಕೃತಿಯ ಹಿಂದಿರುವ ಆತ್ಮದ ಆಂತರ್ಯಕ್ಕೆ ನಿಕಟವರ್ತಿ. ಇಂದ್ರಿಯಗಳ ದುರ್ಬಲವಾದ ಬೆಳಕು ಮತ್ತು ಎದುರಿಗೆ ತೋರುತ್ತಿರುವ ಐಂದ್ರಿಯ ಪ್ರಪಂಚ ಸಾಮಾನ್ಯವಾದ ವಿಚಾರ ಅಥವಾ ಸಾಮಾನ್ಯ ಬುದ್ಧಿಯನ್ನು ಬೆಳಗಿಸುತ್ತದೆ. ಆದರೆ ವಿಶೇಷಬುದ್ಧಿಯಾದರೋ 'ಏಕಂ ಜ್ಯೋತಿಷಾಂ ಜ್ಯೋತಿಃ' ಎಲ್ಲ ಬೆಳಕಿನ ಬೆಳಕು—ಆತ್ಮ ಅಥವಾ ಪರಬ್ರಹ್ಮ—ಶುದ್ಧಚೈತನ್ಯದ ಬೆಳಕಿನಿಂದ ಬೆಳಗಿಸಲ್ಪಡುತ್ತದೆ.

ಗೀತೆಯು ಪ್ರತಿಪಾದಿಸುವ ಯೋಗಸಮನ್ವಯವೆಂದರೆ ಇದೇ. ಇದರಲ್ಲಿ ಜ್ಞಾನ ಮತ್ತು ಕರ್ಮ-ಧ್ಯಾನ-ಇವುಗಳು ಒಂದಾಗುತ್ತವೆ. ಅದು ಪ್ರತಿಪಾದಿಸುವ ಬುದ್ಧಿಯೋಗದಲ್ಲಿ ಸುಶಿಕ್ಷಿತಬುದ್ಧಿಯಲ್ಲಿ ತೋರುವ ವಾಸ್ತವಸಂಗತಿಗಳಲ್ಲಿನ ಸ್ಪಷ್ಟ ಅರಿವು ಮತ್ತು ಧೀಶಕ್ತಿಯ ಕ್ರಿಯಾತ್ಮಕತೆ ಇವು ಸಮ್ಮಿಳಿತವಾಗಿವೆ. ಯುಕ್ತಿರಹಿತವಾದ ಶ್ರದ್ಧೆಯು ಕುರುಡು, ಶ್ರದ್ಧಾರಹಿತವಾದ ಯುಕ್ತಿಯು ಶುಷ್ಕ, ಬರಡು, ನಿಷ್ಪರಿಣಾಮಿ. ಆದ್ದರಿಂದಲೇ ಗೀತೆ ಮತ್ತು ಶ್ರೀಮದ್ಭಾಗವತವು ಭಕ್ತಿ ಮತ್ತು ಜ್ಞಾನದ ಸಮನ್ವಯಕ್ಕೆ ಒತ್ತುಕೊಡುತ್ತವೆ. ಭಾಗವತವು 'ಜ್ಞಾನವೈರಾಗ್ಯಗಳಿಂದ ಕೂಡಿದ ಭಕ್ತಿಯನ್ನು (ಜ್ಞಾನ-ವೈರಾಗ್ಯ-ಯುಕ್ತ್ಯಾಭಕ್ತ್ಯಾ) ಅಭ್ಯಸಿಸಬೇಕೆಂದು ಹೇಳುತ್ತದೆ. ಪದ್ಮಪುರಾಣವು ಭಾಗವತ ಮಾಹಾತ್ಮ್ಯಖಂಡದಲ್ಲಿ (೨-೭೧) ಆ ಶ್ರೇಷ್ಠ ಗ್ರಂಥವನ್ನು ಮುಂದಿನಂತೆ ಶ್ಲಾಘಿಸಿದೆ :

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾಯ ಪ್ರಕಾಶಿತಮ್ ॥

*ವೇದದ ಆಧಾರವಾಗುಳ್ಳ ಈ ಪುರಾಣವನ್ನು ಭಾಗವತ ಎನ್ನುತ್ತಾರೆ. ಭಕ್ತಿ, ಜ್ಞಾನ, ವೈರಾಗ್ಯವನ್ನು ನೆಲೆಗೊಳಿಸಲೆಂದೇ ಇದು ಪ್ರಕಾಶಗೊಂಡಿದೆ.*

ಇಂತಹ ಭಕ್ತಿಯು, ಭಗವಂತನ ರಹಸ್ಯದ ಹೃದಯವನ್ನು ಗ್ರಹಿಸಬಲ್ಲದು, ಅಂತಹ ಭಕ್ತಿಯನ್ನು ಆಚರಣೆಗೆ ತರುವುದು ಹೇಗೆ, ಹೇಗೆ ಅಸಂಖ್ಯಾತ ಭಕ್ತರು, ಸಂತರು, ದಿವ್ಯ ಅವತಾರಪುರುಷರು ಅದನ್ನು ತಮ್ಮ ಬದುಕಿನಲ್ಲಿ ವ್ಯಕ್ತಪಡಿಸಿದ್ದಾರೆ ಎಂಬುದೇ ಶ್ರೀಮದ್ಭಾಗವತದ ಕೇಂದ್ರವಿಷಯ. ಅಂತಹ ಭಕ್ತಿಯೇ ಭಗವದ್ಗೀತೆಯ ವಿಷಯವೂ ಆಗಿದೆ.

ಹೀಗೆ ಜ್ಞಾನಕ್ಕೆ ಶ್ರದ್ಧೆಯು ಅಗತ್ಯ. ಶ್ರದ್ಧೆಗೆ ಜ್ಞಾನವು ಅಗತ್ಯ. ಈ ರೀತಿಯಾದ ಅರಿವು ವಿವೇಕವಾಗಿ ಪಕ್ವಗೊಳ್ಳುತ್ತದೆ. ಹಾಗಲ್ಲದಿದ್ದರೆ ಆ ಜ್ಞಾನವು ಶುಷ್ಕ ಬೌದ್ಧಿಕ ಜ್ಞಾನವಾಗುತ್ತದೆ. ಮತ್ತು ಅಂತಹ ಶ್ರದ್ಧೆಯೂ ಕುರುಡುನಂಬಿಕೆಗಳು ಅಥವಾ ಪೊಳ್ಳಾದ ಭಾವಾವೇಶವಾಗುತ್ತವೆ. ನಮ್ಮ ಶ್ರೇಷ್ಠ

ಆಧ್ಯಾತ್ಮಿಕಚಿಂತಕರು ಅಂತಹ ಏಕಮುಖದ ಮನೋಭಾವನೆಯ ವಿರುದ್ಧ ನಮಗೆ ಸಾಕಷ್ಟು ಎಚ್ಚರಿಕೆ ನೀಡಿದ್ದಾರೆ.

ನನಗೆ ಪ್ರೇಮದ ಲಕ್ಷಣವೇನೆಂದು ಗೊತ್ತಿದೆ. ಅದರ ಬಗೆಗೆ ನಾನು ಒಂದು ಸಂಪುಟವನ್ನೇ ಬರೆದಿದ್ದೇನೆ, ಆ ವಿಷಯದಲ್ಲಿ ಮಹಾ ನಿಬಂಧವೊಂದನ್ನು ಬರೆದು ಡಾಕ್ಟರೇಟ್ ಪದವಿಯನ್ನು ಪಡೆದಿದ್ದೇನೆ ಎಂದು ಯಾವನಾದರೂ ಹೇಳಿದರೆ, ಅವನನ್ನು 'ನೀವು ಎಂದಾದರೂ ಪ್ರೀತಿಯನ್ನನು ಭವಿಸಿದ್ದೀರಾ ? ಎಂದು ಪ್ರಶ್ನಿಸಿ. ಅವನು ಇಲ್ಲ ಎಂದು ಉತ್ತರಿಸುತ್ತಾನೆ. ಹಾಗಾದಲ್ಲಿ ಅದರ ಬಗೆಗೆ ಸಂಪುಟಗಳಷ್ಟು ಜ್ಞಾನವಿದೆ ಎಂಬುದರ ಪ್ರಯೋಜನವೇನು ? ಪ್ರೀತಿಯನ್ನು ಕುರಿತಂತೆ ಎಲ್ಲಾ ಕಲಿತ ಲಕ್ಷಣಗಳನ್ನು ಕೇವಲ ತಿಳಿದುಕೊಂಡಿರುವುದಕ್ಕಿಂತಲೂ ಸ್ವಲ್ಪ ಮಟ್ಟಿಗಾದರೂ ಆ ಪ್ರೀತಿಯನ್ನನುಭವಿಸುವುದು ಅದಕ್ಕಿಂತ ಶ್ರೇಷ್ಠವಾದದ್ದು. ಇಂದ್ರಿಯಗಳ ಜ್ಞಾನದಿಂದ ತೋರುವ ವಿಶ್ವದ ವಾಸ್ತವಿಕ ಸತ್ಯವನ್ನು ಅರಿತುಕೊಳ್ಳಬಹುದು. ಆದರೆ ಮೌಲ್ಯಗಳನ್ನು ಮಾತ್ರ ಅನುಭವಿಸಲೇಬೇಕು. ಹಾಗೆ ಅನುಭವಿಸಿದಂತಹ ಮೌಲ್ಯಗಳೂ ವಾಸ್ತವಿಕಸಂಗತಿಗಳಾಗುತ್ತವೆ. ಆದರೆ ಅನುಭವದ ಬಹು ಗಹನವಾದ ಪ್ರಪಂಚಕ್ಕೆ ಅವು ಸೇರಿರುತ್ತವೆ. ಅದಕ್ಕಾಗಿಯೇ ಜ್ಞಾನವು ಕೇವಲ ಬೌದ್ಧಿಕ ಜ್ಞಾನವಾಗಿದ್ದರೆ ಅದನ್ನು ಗೌರವಿಸುತ್ತಾರೆ. ಆದರೆ ಅದಕ್ಕೆ ವಿಶೇಷವಾದ ಗೌರವವಿಲ್ಲ. ಅದು ತನ್ನ ಹಿನ್ನೆಲೆಯಲ್ಲಿ ಮತ್ತೊಂದು ಬಲವಾಗಿರುವ ಭಾವನಾತ್ಮಕ ಅನುಭವವನ್ನು ಪಡೆದಿರಲೇಬೇಕು. ಆದ್ದರಿಂದಲೇ ಕೃಷ್ಣನು ಗೀತೆಯಲ್ಲಿ 'ಅಜ್ಞಶ್ಚ ಅಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ !' ಶ್ರದ್ಧಾರಹಿತನಾದ ಮೂಢನು ಸದಾ ಸಂಶಯಪಡುತ್ತಾ ನಾಶವಾಗುತ್ತಾನೆ.(೪/೪೦) 'ನ ಹಿ ಜ್ಞಾನೇನ ಸದೃಶಂ'—ಜ್ಞಾನಕ್ಕೆ ಸಮಾನವಾದದ್ದು ಮತ್ತೊಂದಿಲ್ಲ (೪/೩೮) ಎನ್ನುತ್ತಾ ಕೃಷ್ಣನು ಮುಂದುವರೆದು 'ಶ್ರದ್ಧಾವಾನ್ ಲಭತೇ ಜ್ಞಾನಂ' ಶ್ರದ್ಧೆಯುಳ್ಳವನು ಜ್ಞಾನವನ್ನು ಗಳಿಸುತ್ತಾನೆ (೪/೩೯) ಎಂದು ದೃಢವಾಗಿ ಹೇಳಿದ್ದಾನೆ. ಶ್ರದ್ಧೆಯಿಂದ ಪೋಷಿತವಾದ ಜ್ಞಾನವೇ ಹೊಳೆಯುವಂಥದ್ದು ಹಾಗೂ ಮುಕ್ತಗೊಳಿಸುವಂಥದ್ದು.

## ೧೬. ಭೌತಿಕ ವಿಜ್ಞಾನದಲ್ಲಿ ಕಲ್ಪನೆಯ ಪ್ರಮುಖ ಪಾತ್ರ

ಭೌತಿಕ ವಿಜ್ಞಾನದ ಬಗೆಗೆ ನಾನು ಮೊದಲೇ ಹೇಳಿದಂತೆ ಪ್ರಕೃತಿಗೆ ಸಂಬಂಧಿಸಿದ ಸತ್ಯವನ್ನರಿಯ ಬಯಸುವ ವಿಜ್ಞಾನಿಯು ಪ್ರಕೃತಿಯಲ್ಲಿ ಸತ್ಯವು ಅಡಗಿದೆಯೆಂಬ ಮೂಲಭೂತವಾದ ದೃಢನಂಬಿಕೆ ಯನ್ನು ಹೊಂದಿರಬೇಕು. ಆ ದೃಢನಂಬಿಕೆಯಿಂದಲೇ ಪ್ರಕೃತಿಯ ಸತ್ಯಗಳನ್ನು ಪ್ರಕಾಶಪಡಿಸಬಲ್ಲವ ನಾಗುತ್ತಾನೆ. ಅಂತಲ್ಲದಿದ್ದರೆ ಅವನು ಕೇವಲ ವೈಜ್ಞಾನಿಕ ವಿದ್ವಾಂಸನಾಗಿ ಉಳಿಯುತ್ತಾನೆ. ಅವನು ವಿಭಿನ್ನ ವಿಷಯಗಳ ಮೇಲೆ ವೈಜ್ಞಾನಿಕ ಅಭಿಪ್ರಾಯಗಳನ್ನು ಉದ್ಧರಿಸಬಹುದು. ಆದರೆ, ಸ್ವತಃ ವಿಜ್ಞಾನಿಯಾಗಲಾರ.

ಶುದ್ಧವಿಜ್ಞಾನವು ಶುದ್ಧತರ್ಕ ಅಥವಾ ತೀಕ್ಷ್ಣಬುದ್ಧಿಯ ಪರಿಣಾಮವಷ್ಟೇ ಅಲ್ಲ, ವಿಜ್ಞಾನಿಯ ಅಂತರಂಗದಲ್ಲಿನ ಕೆಲವು ಗಾಢವಾದ ನಂಬಿಕೆ, ತನ್ನಲ್ಲಿ ಹಾಗೂ ಪ್ರಕೃತಿಯ ಸತ್ಯತೆಯಲ್ಲಿ ವಿಶ್ವಾಸ— ಇವುಗಳೂ ಅದರಲ್ಲಿ ಒಳಗೊಳ್ಳುತ್ತವೆ. ಭೌತವಿಜ್ಞಾನದ ಬಗೆಗೆ ಇರುವ ಈ ಸತ್ಯವನ್ನು ಎಷ್ಟು ಬೇಗ ನಾವು ಮನಗಾಣುತ್ತೇವೊ ಅಷ್ಟು ಚೆನ್ನಾಗಿ ಭೌತಿಕವಿಜ್ಞಾನದ ಸ್ಫೂರ್ತಿಯನ್ನು ನಾವು ಅರ್ಥ ಮಾಡಿಕೊಳ್ಳುವೆವು. ಮಾನವ ಮೇಲ್ಮೆ ಮತ್ತು ಸತ್ಯಾನ್ವೇಷಣೆಯಲ್ಲಿ ಕಲೆ ಮತ್ತು ಧರ್ಮಗಳಿಗೆ ಅದರೊಡನಿರುವ ನಿಕಟಸಂಬಂಧವನ್ನು ಅರ್ಥಮಾಡಿಕೊಳ್ಳುತ್ತೇವೆ. ಇವೆರಡರಲ್ಲಿ ಶ್ರದ್ಧೆಯು, ಕಲ್ಪನೆಯ ರೂಪದಲ್ಲಿ, ಯುಕ್ತಿಗಿಂತಲೂ ಹೆಚ್ಚಿನ ಪಾತ್ರವನ್ನು ನಿರ್ವಹಿಸುತ್ತದೆ.

ಭೌತಿಕವಿಜ್ಞಾನದಲ್ಲಿ ಸತ್ಯಾನ್ವೇಷಣೆಯ ರೂಪದಲ್ಲಿ ಕಾರ್ಯ ನಿರ್ವಹಿಸುವ ಯುಕ್ತಿ ಅಥವಾ

ವಿಚಾರವಷ್ಟೇ ಅಲ್ಲದೆ ಕಲ್ಪನೆಯೂ ಎಲ್ಲಾ ಶ್ರೇಷ್ಠ ದರ್ಜೆಯ ವೈಜ್ಞಾನಿಕ ಅನ್ವೇಷಣೆಗಳಲ್ಲೂ ಪ್ರಧಾನ ಪಾತ್ರ ವಹಿಸುತ್ತದೆ. ಕಲ್ಪನೆಯು ವಿಮರ್ಶಾತ್ಮಕ ಯುಕ್ತಿಯು, ಕ್ರಿಯಾತ್ಮಕ ಅಂತರ್ಬೋಧೆಯಾಗಿ ಬೆಳೆಯಲು ನೆರವಾಗುತ್ತದೆ. ನ್ಯೂಟನ್‌ನ ಗುರುತ್ವಾಕರ್ಷಣೆಯ ಸಾರ್ವತ್ರಿಕ ಸತ್ಯದ ಸಂಶೋಧನೆಯಲ್ಲಿ, ೨೦ನೇ ಶತಮಾನದ ಭೌತಶಾಸ್ತ್ರದಲ್ಲಿರುವ ಕ್ವಾಂಟಮ್ ಹಾಗೂ ಸಾಪೇಕ್ಷ ಸಿದ್ಧಾಂತಗಳ ಪ್ರಗತಿಯಲ್ಲಿ, ಜೆ.ಸಿ. ಬೋಸರು ಪ್ರತಿಪಾದಿಸಿದ ಜಡ ಚೇತನಗಳ ಮತ್ತು ಸಸ್ಯ ಹಾಗೂ ಪ್ರಾಣಿಗಳ ನಡುವೆ ಇರುವ ಏಕತೆಯನ್ನು ಪ್ರದರ್ಶಿಸಿದ ಸಂಶೋಧನೆಯಲ್ಲಿ ಮತ್ತು ಇನ್ನೂ ಅನೇಕ ನಿದರ್ಶನಗಳಲ್ಲಿ ಕಲ್ಪನೆಯ ಸೃಜನಾತ್ಮಕ ಪಾತ್ರವನ್ನು ನೋಡಬಹುದು. ಅದರ ಅಂತರ್ಬೋಧೆಯ ಉಪನಿರ್ಮಿತಿಗಳು ಶ್ರದ್ಧೆಯ ಮುಖ್ಯ ಘಟಕಗಳಾಗಿರುತ್ತವೆ. ಒಂದು ಸೇಬು ಕೆಳಕ್ಕೆ ಬೀಳುತ್ತಿರುವುದನ್ನು ನೋಡುತ್ತಾ ನ್ಯೂಟನ್‌ನು ಗುರುತ್ವಾಕರ್ಷಣದ ಅದೇ ಶಕ್ತಿಯೇ ಚಂದ್ರನನ್ನು ಭೂಮಿಯ ಸೆಳೆತಕ್ಕೆ ಸಿಕ್ಕುವಂತೆಯೂ, ಎಲ್ಲಾ ನಕ್ಷತ್ರ ಗ್ರಹಗಳು ಚಲಿಸುವಂತೆಯೂ ಭೌತಿಕ ವಸ್ತುವು ಇನ್ನೊಂದನ್ನು ಆಕರ್ಷಿಸುವಂತೆಯೂ ಮಾಡುತ್ತಿರುವುದೆಂಬ ಒಂದು ಸಾಮಾನ್ಯ ಸಿದ್ಧಾಂತವನ್ನು ರೂಪಿಸಿದನು.

ವೈಜ್ಞಾನಿಕ ಸತ್ಯಗಳ ಸಂಶೋಧನೆಯಲ್ಲಿ, ವಿಮರ್ಶಾತ್ಮಕ ವಿಚಾರಕ್ಕೆ ಸಹಾಯಕವಾಗಿ ಕಲ್ಪನೆ ಮತ್ತು ಅದರ ಫಲವಾದ ಅಂತರ್ಜ್ಞಾನಗಳ ಪ್ರಾಮುಖ್ಯವನ್ನು ಅನೇಕ ವಿಜ್ಞಾನಿಗಳು ಒತ್ತಿಹೇಳಿದ್ದಾರೆ. ಬರ್ಕ್ಲಿ ವಿಶ್ವವಿದ್ಯಾನಿಲಯದ ಭೌತಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಫ್ರಿಡ್ಜೋಫ್ ಕಾಪ್ರ ಎಂಬವರು ತಮ್ಮ ಇತ್ತೀಚಿನ ಆಕರ್ಷಣೀಯ ಪುಸ್ತಕದಲ್ಲಿ ಹೀಗೆ ಹೇಳುತ್ತಾರೆ (*The Tao of Physics*, p. ೩೧) :

> *ತಾರ್ಕಿಕ ಜ್ಞಾನ ಹಾಗೂ ತಾರ್ಕಿಕ ಚಟುವಟಿಕೆಗಳು ನಿಜಕ್ಕೂ ವೈಜ್ಞಾನಿಕ ಸಂಶೋಧನೆಯ ಪ್ರಧಾನ ಅಂಗಗಳಾಗಿರುತ್ತವೆ. ಆದರೆ ಅವೇ ಎಲ್ಲವೂ ಅಲ್ಲ. ವಿಜ್ಞಾನಿಗಳಿಗೆ ಹೊಸ ಒಳನೋಟವನ್ನು ಕೊಡುವ ಮತ್ತು ಅವರನ್ನು ಕ್ರಿಯಾಶೀಲರನ್ನಾಗಿಸುವ ಅಂತರ್ಬೋಧೆಯಿಂದ ಅದು ತುಂಬಲ್ಪಡದೇ ಹೋದರೆ ವಾಸ್ತವವಾಗಿ ಸಂಶೋಧನೆಯ ವೈಚಾರಿಕಭಾಗವೂ ನಿರರ್ಥಕವಾಗುತ್ತದೆ. ಈ ಒಳನೋಟಗಳು ಮೇಜಿನ ಮುಂದೆ ಕುಳಿತು ಚಿಂತನೆ ಮಾಡುವಾಗ ಸ್ಫುರಿಸದೆ, ಸ್ನಾನದ ವೇಳೆಯಲ್ಲಿ ಮನಸ್ಸು ಹಗುರಗೊಂಡಾಗ, ಕಾಡಿನಲ್ಲಿ ತಿರುಗಾಡುತ್ತಿರುವಾಗ, ಸಮುದ್ರದ ದಂಡೆಯಲ್ಲಿ ಅಡ್ಡಾಡುತ್ತಿರುವಾಗ, ತಟ್ಟನೆ ವಿಲಕ್ಷಣವಾದ ರೀತಿಯಲ್ಲಿ ಹೊಮ್ಮುತ್ತವೆ. ಏಕಾಗ್ರತೆಯುಳ್ಳ ಬೌದ್ಧಿಕ ಕ್ರಿಯೆಯ ನಂತರ ಹಗುರಗೊಳಿಸುವಿಕೆಯ ಈ ಕಾಲಗಳಲ್ಲಿ ಸ್ಫುರಣಾತ್ಮಕ ಬುದ್ಧಿಯು ಕ್ರಿಯಾಶೀಲವಾಗುವಂತೆ ತೋರುತ್ತದೆ. ಅದು ಕೂಡಲೇ ಸ್ಪಷ್ಟ ಒಳನೋಟಗಳನ್ನುಂಟುಮಾಡಬಲ್ಲದು. ಅಲ್ಲದೆ ಅವು ವೈಜ್ಞಾನಿಕ ಸಂಶೋಧನೆಗೆ ಹೆಚ್ಚಿನ ಸಂತೋಷ ಹಾಗೂ ಉಲ್ಲಾಸವನ್ನು ತಂದುಕೊಡುತ್ತವೆ.*

ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ಪಾಶವಿಕ ಶರೀರವನ್ನು, ಪ್ರಕೃತಿಯಲ್ಲಿ ವೈವಿಧ್ಯಮಯುವಾದ ಕ್ರಿಯೆ ಮತ್ತು ಅತ್ಯಂತ ಶಕ್ತಿಯುತ ಕೇಂದ್ರವಾಗಿ ಪರಿವರ್ತಿಸುತ್ತವೆ. ಆದರೆ ತಮ್ಮ ಇಂದ್ರಿಯಗಳ ಹಂತದಲ್ಲಿಯೇ ಈ ಕ್ರಿಯಾಶೀಲತೆಯು ಬಹುಮಟ್ಟಿಗೆ ಪರಸ್ಪರ ಸಂಬಂಧವಿಲ್ಲದ್ದು ಮತ್ತು ಯಾಂತ್ರಿಕ. ಆದ್ದರಿಂದಲೇ ಕೇವಲ ಭೌತಿಕ ಉಳಿಯುವಿಕೆಗೆ ಮೀರಿದ ಉದ್ದೇಶಗಳಿಗೆ ಅನರ್ಹದ್ದಾಗಿರುತ್ತದೆ. ಈ ಪರಸ್ಪರ ಹೊಂದಾಣಿಕೆಯನ್ನು ಪ್ರಕೃತಿಯು ಮಾನವ ಶರೀರದಲ್ಲಿ ಸಾಧಿಸುತ್ತದೆ. ಈ ನೂತನ ಶಕ್ತಿಯನ್ನು ನರಶಾಸ್ತ್ರಜ್ಞನಾದ ಗ್ರೇ ವಾಲ್ಟರ್ ಎಂಬುವನು ಕಲ್ಪನೆ ಎಂದು ಕರೆಯುತ್ತಾನೆ (*The Living Brain*, p. 2).

ಅದು ಯಾವುದೇ ಇಂದ್ರಿಯಪ್ರಚೋದನೆಗೆ ಯಾಂತ್ರಿಕವಾಗಿ ಕಾರ್ಯರೂಪದಲ್ಲಿ ಪ್ರತಿಕ್ರಿಯೆ ತೋರುವ ಮುನ್ನ ಉದ್ದೇಶಗಳನ್ನು ಕಲ್ಪಿಸಿಕೊಳ್ಳುವ ಮತ್ತು ಪರ್ಯಾಯ ಕಲ್ಪನೆಗಳಿಂದ ಆಯ್ದುಕೊಳ್ಳುವ ಜೀವಿಯ ಶಕ್ತಿಯಾಗಿದೆ. ಇಂತಹ ನೂತನ ಶಕ್ತಿಯನ್ನು ಗ್ರೇ ವಾಲ್ಟರ್‌ನು ಹೇಳುವಂತೆ ಮೇಲ್ಮಟ್ಟದ ಮಂಗ ಮಾನವನೂ ಹೊಂದಿರಲಾರ. ಅದು ಮಾನವನಿಗೆ ಪ್ರಕೃತಿಯ ಮೇಲಿನ ಆಧಿಪತ್ಯವನ್ನು ನೀಡಿತು. ಸಾಂಸ್ಕೃತಿಕ ವಿಕಾಸವೆಂದು ಹೆಸರುಳ್ಳ ಸಮಷ್ಟಿವಿಕಾಸದ ಮುಂದುವರಿಕೆಯಾದ, ಸ್ವತಃ ವಿಕಾಸದ ಹೊಸ ಆಯಾಮದ ಹಾದಿಯತ್ತ ಅವನನ್ನು ಮುನ್ನಡೆಸಿತು. ಗ್ರೇ ವಾಲ್ಟರ್ ಮುಂದುವರಿದು ಹಾಸ್ಯಧ್ವನಿಯಲ್ಲಿ, ಯಾರಾದರೂ ಈ ಹೊಸ ಸಾಕಾರಗೊಳಿಸುವ ಯೋಗ್ಯಶಕ್ತಿಯನ್ನು ಸಂದೇಹಿಸುವುದಾದರೆ ಈ ವಿಶಿಷ್ಟವಾದ ಶಕ್ತಿಯನ್ನು ಬೆಳೆಸಿಕೊಂಡಿರುವ ಮಾನವನಿಗಿಂತ ಅನ್ಯಜಾತಿಯ ಪರಿಣಾಮವನ್ನು ಪರಿಗಣಿಸಲಿ ಎನ್ನುತ್ತಾನೆ. ಉದಾಹರಣೆಗೆ ಸಿಂಹವಾಗಲಿ ಹುಲಿಯಾಗಲಿ ಅಥವಾ ಯಾವುದೇ ಪ್ರಾಣಿಯಾಗಲಿ ಈ ಹೊಸ ಸಾಮರ್ಥ್ಯವನ್ನು ಬೆಳೆಸಿಕೊಂಡಿದ್ದ ಪಕ್ಷದಲ್ಲಿ ಮಾನವಜೀವಿಗಳಾದ ನಾವು ಈ ವಿಷಯವನ್ನು ಇಂದು ಚರ್ಚಿಸಲು ಇಲ್ಲಿ ಇರುತ್ತಲೇ ಇರಲಿಲ್ಲ.

ಪ್ರಾಚೀನ ಭಾರತೀಯ ತತ್ತ್ವಜ್ಞಾನವು ಅರಿವಿನ ಕ್ಷೇತ್ರವನ್ನು ನಿಗೂಢ ಪ್ರಜ್ಞೆ ಅಂದರೆ ಸ್ವಪ್ನಸ್ಥಿತಿಯೆಂದು, ಅಜಾಗೃತ ಪ್ರಜ್ಞೆ ಅಂದರೆ ಗಾಢ ಸುಷುಪ್ತಿಸ್ಥಿತಿಯೆಂದು, ಜಾಗ್ರತಪ್ರಜ್ಞೆ ಅಂದರೆ ಎಚ್ಚರದ ಸ್ಥಿತಿಯೆಂದು ಮತ್ತು ಪ್ರಜ್ಞಾತೀತ ಅಂದರೆ ಸಮಾಧಿಸ್ಥಿತಿ ಎಂದು ವಿಭಾಗ ಮಾಡಿರುವುದನ್ನು ಪ್ರತಿಧ್ವನಿಸುತ್ತಿರುವ ಎರಡನೆಯ ಮಹಾಯುದ್ಧದ ನಂತರ ಬೆಳೆದ ಮನಃಶಾಸ್ತ್ರವು ಜ್ಞಾನದ ಮೂರನೆಯ ರೀತಿಯ ಸೇರ್ಪಡೆಯನ್ನು ಸೂಚಿಸುತ್ತದೆ. ಅದನ್ನು ಮೂರನೆಯ ಅರಿವು ಎನ್ನುತ್ತಾರೆ. ಇಲ್ಲಿಯವರೆಗೆ ಒಪ್ಪಿಕೊಂಡಿರುವ ಗ್ರಹಣಶಕ್ತಿಯ ಎರಡು ವಿಧವಾದ ಅಂದರೆ, ನಿಗೂಢ ಪ್ರಜ್ಞೆಗೆ ಅನ್ವಯಿಸುವ ಮುಖ್ಯ ಅರಿವು ಅಥವಾ ಕಲ್ಪನೆಯು ಹೆಚ್ಚು ಪಾತ್ರ ವಹಿಸುವ ಪ್ರಜ್ಞಾಪೂರ್ವ ಸ್ಥಿತಿ, ಜಾಗೃತ ಪ್ರಜ್ಞೆಗೆ ಅನ್ವಯಿಸಬಲ್ಲ ಅಥವಾ ಬುದ್ಧಿಯು ಪ್ರಧಾನ ಪಾತ್ರ ವಹಿಸುವ ವೈಚಾರಿಕವಾದ ಪ್ರಜ್ಞಾಸ್ಥಿತಿ—ಇವುಗಳಿಗೆ ಈ ಮೂರನೆಯದೊಂದು ಸೇರ್ಪಡೆಯಾಗಿದೆ. ಈ ಮೂರನೆಯ ಅರಿವು ಮೊದಲನೆಯದರ ಸಹಜತೆ ಮತ್ತು ಸೃಜನಾತ್ಮಕ ಶಕ್ತಿಯನ್ನೂ ಎರಡನೆಯದರ ಯಥಾರ್ಥತೆ ಹಾಗೂ ಸ್ಪಷ್ಟತೆಯನ್ನೂ ತನ್ನಲ್ಲಿಯೇ ತಾನು ಒಗ್ಗೂಡಿಸಿಕೊಂಡಿರುತ್ತದೆ..

ಚಿಂತನೆಯ ಈ ಹೊಸ ಬೆಳವಣಿಗೆಯಲ್ಲಿ, ಭಾರತೀಯ ಚಿಂತನೆಯು ಬಹಳ ಹಿಂದೆಯೆ ಅಂಗೀಕರಿಸಿರುವ ಮಾನವ ಮನಸ್ಸಿಗಿರುವ ಅತ್ಯಧಿಕ ವ್ಯಾಪ್ತಿ ಮತ್ತು ಸಾಧ್ಯತೆಗಳನ್ನು ಆಧುನಿಕ ಮಾನವನು ಆಳವಾಗಿ ತಿಳಿಯುತ್ತಿರುವುದನ್ನು ನಾವು ಕಾಣಬಹುದು. ಮಿತಿಯುಳ್ಳ ಮನಸ್ಸು ಪರಿಮಿತ ಸತ್ಯವನ್ನು ಮಾತ್ರ ಗ್ರಹಿಸಬಲ್ಲದು. ಸೀಮಾತೀತ ಸತ್ಯವನ್ನು ಅಪರಿಮಿತ ಚಿತ್ತವು ಮಾತ್ರ ಅನುಭವಿಸ ಬಲ್ಲದು. ವೇದಾಂತದ ಪ್ರಕಾರ ಚಿತ್ತದ ಶುದ್ಧೀಕರಣವೆಂದರೆ ಅದರ ಐಂದ್ರಿಯಕ ಪರಿಮಿತಿಗಳನ್ನು, ಅಹಂ ಕೇಂದ್ರಿತ ವಿಕಾರಗಳನ್ನು ವರ್ಜಿಸುವುದು. ಶ್ರೀರಾಮಕೃಷ್ಣರು ಒಂದು ಗಹನವಾದ ಸತ್ಯವನ್ನು ತಿಳಿಸಿದ್ದಾರೆ : ಶುದ್ಧ ಮನಸ್ಸು, ಶುದ್ಧ ಬುದ್ಧಿ ಮತ್ತು ಶುದ್ಧಾತ್ಮ ಎಲ್ಲವೂ ಒಂದೇ ಮತ್ತು ಒಂದೇ ಸತ್ಯ. ಜ್ಞಾತದಿಂದ ಅಜ್ಞಾತದವರೆಗೆ ಅನುಗಮನದ ಮೂಲಕ ನೂತನ ಸತ್ಯಗಳನ್ನು ಕಂಡುಹಿಡಿಯಲು ಸೃಜನಶಕ್ತಿಯು ಯುಕ್ತಿಗೆ ನೆರವಾಗುತ್ತದೆ. ಒಬ್ಬ ವಿಜ್ಞಾನಿಯು ಸ್ವಲ್ಪ ಅರಿವಿನೊಡನೆ ಪ್ರಾರಂಭಿಸಿ ಇಷ್ಟನ್ನು ನಾನು ತಿಳಿದಿರುವೆ, ಆದರೆ ಇದರ ಆಚೆ ಏನಿದೆ ಎಂದು ನನಗೆ ಗೊತ್ತಿಲ್ಲ, ಆದರೆ ಅದು ಇದೆ ಎಂದು ನನಗೆ ಮನವರಿಕೆಯಾಗಿದೆ, ನನ್ನ ಸೃಜನಶಕ್ತಿಯು ನಾನು ಏನನ್ನು ಅರಿತಿರುವೆನೋ ಅದರ ಆಚೆ ಗಹನವಾದ ಸತ್ಯಗಳಿವೆ ಎಂಬುದನ್ನು ನನಗೆ ತಿಳಿಸುತ್ತದೆ, ನಾನು ಅದರ ಅನ್ವೇಷಣೆ ಯನ್ನು ಮುಂದುವರಿಸುವೆ—ಎಂದು ಭಾವಿಸುತ್ತಾನೆ. ಇಲ್ಲಿ ಶ್ರದ್ಧೆಯ ಸ್ಫೂರ್ತಿಯನ್ನು ನಾವು

ಕಾಣಬಹುದು. ಅದಕ್ಕೆ ಸೃಜನಾತ್ಮಕ ಸಂದೇಹವನ್ನು ಅಂತರ್ಗತಗೊಳಿಸಿಕೊಂಡಿರುವ ಬಲವಿದೆ. ಅದೇ ರೀತಿಯಾಗಿ ಧಾರ್ಮಿಕ ಪ್ರಪಂಚಕ್ಕೆ ಪ್ರವೇಶಿಸಿದರೆ, ಅದರ ಹಿಂದೆ ಮತ್ತು ಐದು ಇಂದ್ರಿಯಗಳಿಂದ ಪ್ರಕಟವಾಗುವ ಈ ನಶ್ವರ ಜಗತ್ತಿನ ಆಚೆ, ಈ ಕ್ಷಯಿಸುವ ಮನೋದೈಹಿಕ ವ್ಯವಸ್ಥೆಯ ಹಿಂದೆ, ಇವೆಲ್ಲದರ ಮೇಲೂ ಆಧಿಪತ್ಯ ನಡೆಸುತ್ತಿರುವ 'ಅಹಂ'ನ ಹಿಂದೆ, ಗಹನವಾದ ಸತ್ಯಗಳು ಅಡಗಿವೆ ಎಂಬ ಸೂಚನೆಗಳನ್ನು ನಾವು ಪಡೆಯುತ್ತೇವೆ.

ಭೌತಿಕವಿಶ್ವದ ರಹಸ್ಯದೆಡೆಗೆ ವಿಜ್ಞಾನಿಯಿಂದ ಹೆಚ್ಚು ತೀಕ್ಷ್ಣವಾಗಿ ಮತ್ತು ಸಾಮಾನ್ಯವಾಗಿ ಪ್ರತಿಯೊಬ್ಬ ಮನುಷ್ಯನಿಂದಲೂ ಮೊದಲಿನ ಪರೀಕ್ಷೆಯಿಂದ ಪರಿಶುದ್ಧಗೊಳಿಸಲ್ಪಟ್ಟ ಹಾಗೂ ತೀವ್ರಗೊಳಿಸಲ್ಪಟ್ಟ ಈ ಶ್ರದ್ಧೆಯ ಬಲದಿಂದಲೇ ಮನುಷ್ಯನೊಳಗೆ ಅಡಗಿರುವ ಈ ನಿಗೂಢ ರಹಸ್ಯವನ್ನು ಸಮೀಪಿಸುತ್ತೇವೆ. ಜ್ಞೇಯ, ದೃಶ್ಯ ಹಾಗೂ ನಾಶವಾಗುವುದರ ಹಿಂದೆ ನಾಶವಾಗದ, ಗೋಚರವಾಗದ ತಿಳಿಯಲಾಗದ್ದು ಇದೆಯೆಂಬ ಮೂಲಭೂತವಾದ ಪವಿತ್ರ ಮನೋಭಾವನೆಯೇ ಧರ್ಮದಲ್ಲಿ ಶ್ರದ್ಧೆಯಾಗುತ್ತದೆ. ಐದು ಇಂದ್ರಿಯಗಳಿಂದ ಪ್ರಕಟಗೊಂಡಂತಿರುವ ಸತ್ಯವು ಅತ್ಯಲ್ಪ. ಆದರೂ ಅದು ಮಾನವಬುದ್ಧಿಗೆ ಆಕರ್ಷಣೀಯವಾಗಿದೆ. ಇಂದ್ರಿಯ ಪರಿವೇದನೆಯ ಸ್ತರದ ಆಚೆ ಅಡಗಿರುವ ಸತ್ಯದ ಅನ್ವೇಷಣೆ ಹಾಗೂ ಪರಿಶೋಧನೆ ಇನ್ನೆಷ್ಟರ ಮಟ್ಟಿಗೆ ಅಧಿಕವಾಗಿ ಆಕರ್ಷಿಸಬಲ್ಲದು ಮತ್ತು ಪ್ರತಿಫಲ ನೀಡಬಲ್ಲದು. ಆಧ್ಯಾತ್ಮಿಕ ಸಂಶೋಧನೆ ಹಾಗೂ ಸಾಧನೆಗಳ ಎಲ್ಲಾ ವಿಧಾನಗಳು ಪ್ರಾರಂಭದ ಸೃಜಾನಾತ್ಮಕ ಸಂಶಯದ ಘಟಕವೇ ಆಗಿರುವ ಈ ಮೂಲಭೂತ ಶ್ರದ್ಧೆಯ ಬಲದಿಂದಲೇ ಮುಂದುವರೆಯಬೇಕಾಗಿದೆ. ಸಿನಿಕತನದ ಮನೋಭಾವ ಮತ್ತು ಅದರ ಸೃಜನಶೀಲವಲ್ಲದ ಶುಷ್ಕಸ್ವಭಾವದ ಸಂಶಯದೊಂದಿಗೆ ಪ್ರಾರಂಭವಾಗುವ ಸಂಶೋಧನೆಯು ನಿಷ್ಫಲವಾಗುತ್ತದೆ ಎಂಬುದು ಸುಸ್ಪಷ್ಟ.

## ೧೭. ಶ್ರದ್ಧಸ್ವ ಸೌಮ್ಯ—ಸೌಮ್ಯನೇ, ಶ್ರದ್ಧೆ ಇಡು

ಛಾಂದೋಗ್ಯೋಪನಿಷತ್ತಿನಲ್ಲಿ ಶ್ವೇತಕೇತುವಿನ ಅಧ್ಯಾತ್ಮ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅವನ ತಂದೆಯಾದ ಆರುಣಿಯೊಡನೆ ನಡೆದ ದೀರ್ಘ ಸಂವಾದವು ವೈಜ್ಞಾನಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ರೋಚಕವಾದ ಕಥೆ. ಅದು ಜ್ಞಾತದ ಹಿನ್ನಲೆಯಲ್ಲಿರುವ ಅಜ್ಞಾತದ ರಹಸ್ಯವು ಎದುರಾದಾಗ ಮನುಷ್ಯನಿಗೆ ಅಗತ್ಯವಾಗಿರುವ ಈ ವಿಧವಾದ ಶ್ರದ್ಧೆ ಅಥವಾ ಸೃಜನಾತ್ಮಕ ನಂಬಿಕೆಯ ಆವಶ್ಯಕತೆಯನ್ನು, ಮಹತ್ವವನ್ನು ಉಜ್ವಲಗೊಳಿಸುತ್ತದೆ. ತತ್ವಜ್ಞಾನಿಯಾದ ತಂದೆಯು ತನ್ನ ಮಗನನ್ನು ಹನ್ನೆರಡನೇ ವಯಸ್ಸಿನಲ್ಲಿ ಗುರುವಿನ ಮನೆಗೆ ಅಧ್ಯಯನಕೋಸ್ಕರ ಕಳುಹಿಸುತ್ತಿರುವ ಕಥೆಯುಳ್ಳ ಸಂವಾದವನ್ನು ಈ ಉಪನಿಷತ್ತು ನಮಗೆ ಪರಿಚಯಿಸುತ್ತದೆ.

ಆ ಬಾಲಕನು ಹನ್ನೆರಡು ವರ್ಷಗಳ ಗುರುಕುಲವಾಸದ ಅಥವಾ ಗುರುಗಳ ಗೃಹದಲ್ಲಿಯೇ ವಾಸಿಸುತ್ತಾ ಅಧ್ಯಯನ ಮಾಡಿದ ತರುವಾಯ ಮನೆಗೆ ಹಿಂತಿರುಗುತ್ತಾನೆ. ಅವನನ್ನು ಮನೆಗೆ ಸ್ವಾಗತಿಸುವ ಸಂದರ್ಭದಲ್ಲಿ ತಂದೆಯು ಮಗನಿಗೆ ಕೇಳಿದ ಪ್ರಶ್ನೆ ಮತ್ತು ತಂದೆಯಿಂದ ಮಗನಿಗೆ ದೊರೆತ ಮುಂದಿನ ಶಿಕ್ಷಣ ಇವು ನಮ್ಮ ಕಾಲದಲ್ಲೇ ಅತ್ಯಗತ್ಯವಾದ ವಿದ್ಯಾಭ್ಯಾಸದ ಪುನಾರಚನೆಯಲ್ಲಿ ಹೆಚ್ಚಿನ ಪ್ರಸ್ತುತತೆಯನ್ನು ಪಡೆದಿವೆ (೬, ೧, ೨, ೩, ೪, ೬, ೭).

ಸ ಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ವೇದಾನಧೀತ್ಯ, ಮಹಾಮನಾ ಅನೂಚಾನಮಾನಿ ಸ್ತಬ್ಧ ಏವಾಯ; ತಂ ಹ ಪಿತಾ ಉವಾಚ ; ಶ್ವೇತಕೇತೋ, ಯನ್ನು ಸೋಮ್ಯ ಇದಂ ಮಹಾಮನಾ, ಅನುಚಾನಮಾನಿ, ಸ್ತಬ್ಧಃ ಅಸಿ, ಉತ ತಂ ಆದೇಶಂ ಅಪ್ರಾಕ್ಷ್ಯಃ ಯೇನ ಅಶ್ರುತಂ ಶ್ರುತಂ ಭವತಿ, ಅಮತಂ ಮತಂ, ಅವಿಜ್ಞಾತಂ ವಿಜ್ಞಾತಂ ಇತಿ.

ಕಥಂ ನು ಭಗವಃ ಸ ಆದೇಶೋ ಭವತಿ ? ಇತಿ—

ಅವನು ಹನ್ನೆರಡು ವರ್ಷದವನಾಗಿರುವಾಗಲೇ ಆಚಾರ್ಯರ ಬಳಿಗೆ ಹೋಗಿ ಇಪ್ಪತ್ತನಾಲ್ಕು ವರ್ಷದವನಾಗುವವರೆಗೆ ಎಲ್ಲಾ ವೇದಗಳನ್ನು ಅಧ್ಯಯನ ಮಾಡಿ ಮಹಾಮನನು (ನಾನು ಅಸಾಧಾರಣನು, ಮಿಕ್ಕವರಿಗೆ ಸಮಾನನಲ್ಲವೆಂದು ತನ್ನನ್ನು ತಿಳಿದುಕೊಂಡವನು), ಅಧ್ಯಯನ ಸಮರ್ಥನೂ ಗರ್ವಿಷ್ಠನೂ ಆಗಿ ಮನೆಗೆ ಹಿಂತಿರುಗಿದನು. (ಇದನ್ನು ಗಮನಿಸಿದ) ಅವನ ತಂದೆಯು ಹೀಗೆ ಕೇಳಿದನು, ಶ್ವೇತಕೇತುವೇ, ಸೌಮ್ಯ, ಹೀಗೆ ಮಹಾಮನನೂ, ಅಹಂಕಾರಿಯೂ, ಅಧ್ಯಯನದ ಬಗೆಗೆ ಗರ್ವಿಷ್ಠನೂ ಆಗಿರುವೆಯಲ್ಲ, ಆ ಆದೇಶವನ್ನೂ ಕೂಡ ಯಾವುದರಿಂದ ಅಶ್ರುತವಾದದ್ದು ಶ್ರುತವಾಗುವುದೋ, ಅಮತವಾದದ್ದು ಮತವು, ಅಜ್ಞಾತವು ವಿಜ್ಞಾತವು ಆಗುವುದೋ, ಅದನ್ನು ಕೂಡ ಕೇಳಿ ತಿಳಿದುಕೊಂಡಿರುವೆಯಾ.

ಪೂಜ್ಯನೆ, ಆ ಆದೇಶವು ಹೇಗೆ ಇರುತ್ತದೆ (ಹೀಗೆಂದು ಶ್ವೇತಕೇತು ಕೇಳಿದನು)

ಯಥಾ, ಸೋಮ್ಯ, ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್, ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ, ಏವಂ ಸ ಆದೇಶೋ ಭವತಿ ಇತಿ—

ಸೌಮ್ಯನೆ, ಹೇಗೆ ಒಂದು ಮೃತ್ಪಿಂಡವನ್ನು ಅರಿತುಕೊಂಡಿದ್ದರಿಂದ ಮೃಣ್ಮಯವಾದುದ್ದೆಲ್ಲವನ್ನೂ ಅರಿತಂತಾಗುವುದೋ ವಿಕಾರವೆಂಬುದು ವಾಚಾರಂಭಣವಾದ. ನಾಮಧೇಯವೋ, ಮೃತ್ತಿಕೆ ಎಂಬುದೇ ಸತ್ಯವೋ, ಹೀಗೆಯೇ, ಸೌಮ್ಯನೆ, ಆ ಬೋಧನೆಯು ಇರುತ್ತದೆ.

ನ ವೈ ನೂನಂ ಭಗವಂತಃ, ತೇ ಏತತ್ ಅವೇದಿಷುಃ ; ಯತ್ ಹಿ ಏತತ್ ಅವೇದಿಷ್ಯಂ, ಕಥಂ ಮೇ ನ ಅವಕ್ಷ್ಯಂ, ಇತಿ ; ಭಗವನ್, ತು ಏವ ಮೇ ತತ್ ಬ್ರವೀತು ಇತಿ. ತಥಾ, ಸೋಮ್ಯ ಇತಿ ಹ ಉವಾಚ—

ನಿಜವಾಗಿಯೂ ನನ್ನ ಪೂಜ್ಯ ಗುರುಗಳು ಇದನ್ನು ಅರಿತಿರಲಿಲ್ಲವೇನೋ, ಇದನ್ನು ಅವರು ಅರಿತಿದ್ದರೆ ಅದನ್ನು ಹೇಗೆ ತಾನೆ ನಮಗೆ ಹೇಳಿಕೊಡದೇ ಇರುತ್ತಿದ್ದರು ? ಪೂಜ್ಯನಾದ ನೀನೇ ನನಗೆ ಅದನ್ನು ಹೇಳಿಕೊಡಬೇಕು.

ಸೌಮ್ಯನೆ, ಹಾಗೆ ಆಗಲಿ ಎಂದನು (ತಂದೆ).

ಅವರಿಬ್ಬರ ನಡುವೆ ನಡೆದ ಸಂವಾದದ ಕೊನೆಯ ಭಾಗದಲ್ಲಿ ಉಪನಿಷತ್ತು ವಿವರಿಸುತ್ತಾ ಹೀಗೆ ಹೇಳುತ್ತದೆ (೬.೧೨/೧–೨) :

ನ್ಯಗ್ರೋಧ ಫಲಂ ಅತಃ ಆಹರ ಇತಿ ; ಇದಂ ಭಗವ ಇತಿ, ಭಿಂದಿ ಇತಿ ; ಭಿನ್ನಾನಿ ಭಗವ ಇತಿ ; ಕಿಮತ್ರ ಪಶ್ಯಸಿ ಇತಿ ; ಅನ್ನ್ಯ ಇವ ಇಮಾ ಧಾನಾ ಭಗವ ಇತಿ ಆಸಾಂ ಏಕಂ ಭಿಂದಿ ಇತಿ ; ಭಿನ್ನಾ, ಭಗವ ಇತಿ. ಕಿಮತ್ರ ಪಶ್ಯಸಿ ; ಇತಿ ; ನ ಕಿಂಚನ ಭಗವ ಇತಿ—

ಆಲದ ಹಣ್ಣನ್ನು ಅಲ್ಲಿಂದ ತೆಗೆದುಕೊಂಡು ಬಾ, ಪೂಜ್ಯನೆ ಇಗೋ ತಂದೆ. ಅದನ್ನು ಬಿಡಿಸು, ಪೂಜ್ಯನೆ, ಅದನ್ನು ಬಿಡಿಸಿದೆ, ಇಲ್ಲಿ ನಿನಗೇನು ಕಾಣುತ್ತದೆ ? ಪೂಜ್ಯನೇ, ಅಣುಗಳಾದ ಈ ಬೀಜಗಳು. ಅವುಗಳಲ್ಲಿ ಒಂದನ್ನು ಸೀಳು, ಪೂಜ್ಯನೆ, ಸೀಳಿದೆ. ಇಲ್ಲಿ ನಿನಗೇನು ಕಾಣುತ್ತದೆ ? ಪೂಜ್ಯನೆ, ಏನೂ ಕಾಣುತ್ತಿಲ್ಲ.

ತಂ ಹೋವಾಚ ; ಯಂ ವೈ ಸೋಮ್ಯ, ಏತಂ ಅಣಿಮಾನಂ ನ ನಿಭಾಲಯಸೆ, ಏತಸ್ಯ ವೈ, ಸೋಮ್ಯ, ಏಷೋಽಣಿಮ್ನಃ ಏವಂ ಮಹಾನ್ ನ್ಯಗ್ರೋಧೋ ತಿಷ್ಠತಿ, ಶ್ರದ್ಧಶ್ವ ಸೌಮ್ಯ ಇತಿ—

ಅವನಿಗೆ ಈ ರೀತಿ (ತಂದೆ) ಹೇಳಿದನು, ಸೌಮ್ಯ, ಯಾವ ಅಣುವಿನಲ್ಲಿ ಏನನ್ನೂ ಕಾಣದಿರುವೆಯೋ, ಇದೇ ಅಣುವಿನಿಂದಲೇ ಹೀಗೆ ದೊಡ್ಡದಾಗಿರುವ ಆಲದ ಮರವು ನಿಂತಿದೆ. ಸೌಮ್ಯನೇ, ಇದರಲ್ಲಿ ಶ್ರದ್ಧೆಯಿಡು.

ಬೋಧಕನ ಎಚ್ಚರಿಕೆಯ ಮಾತು ಶ್ರದ್ಧಸ್ವ, ಎಂಬುದರ ಪರಮ ಮಹತ್ವವನ್ನು ವಿಶದಪಡಿಸುತ್ತಾ ನಿರ್ಣಾಯಕ ಹಾಗೂ ಸೂಕ್ಷ್ಮವಾದ ಪರಿಶೋಧನೆಯ ಈ ಹಂತದಲ್ಲಿ ಈ ಭಾಗವನ್ನು ಶಂಕರರು ವ್ಯಾಖ್ಯಾನಿಸುತ್ತಾ ಹೀಗೆ ಹೇಳುತ್ತಾರೆ :

ಸತಃ ಏವ ಅಣಿಮಾನಃ ಸ್ಥೂಲಂ ನಾಮರೂಪಾದಿ ಕಾರ್ಯಂ ಜಗದುತ್ಪನ್ನಂ ಇತಿ । ಯದ್ಯಪಿ ನ್ಯಾಯಾಗಮಾಭ್ಯಾಂ ನಿರ್ಧಾರಿತೋ ಅರ್ಥಃ ತಥೈವ ಇತಿ ಅವಗಮ್ಯತೇ । ತಥಾ ಅಪಿ ಅತ್ಯಂತಸೂಕ್ಷ್ಮೇಷು ಅರ್ಥೇಷು ಬಾಹ್ಯವಿಷಯಾಸಕ್ತಮನಸಃ ಸ್ವಭಾವಪ್ರವೃತ್ತ್ಯಾಽ ಅಸತ್ಯಾಂ ಗುರುತರಾಯಾಂ ಶ್ರದ್ಧಾಯಾಂ ದುರವಗಮತ್ವಂ ಸ್ಯಾತ್, ಇತಿ ಆಹ ಶ್ರದ್ಧಸ್ವ ಇತಿ । ಶ್ರದ್ಧಾಯಾಂ ಸತ್ಯಾಂ ಮನಸಃ ಸಮಾಧಾನಂ ಬುಭುತ್ಸಿತೇ ಅರ್ಥೇ ಭವೇತ್ ತತಶ್ಚ ತದರ್ಥಾವಗತಿಃ—

ಸೂಕ್ಷ್ಮವಾದ ಸತ್ಯದಿಂದಲೇ ಸ್ಥೂಲವಾದ ನಾಮರೂಪಾದಿಗಳನ್ನುಳ್ಳ ಕಾರ್ಯವಾದ ಈ ಜಗತ್ತು ಹುಟ್ಟಿದೆಯೆಂದು ಶ್ರದ್ಧೆಯಿಂದ ತಿಳಿದುಕೋ. ನ್ಯಾಯ ಆಗಮ ಇವುಗಳಿಂದ ನಿಶ್ಚಯಿಸಿದ ಅರ್ಥವು ಹಾಗೆಯೇ ಎಂದು ತೀರ್ಮಾನವಾಗುತ್ತದೆ. ಆದರೂ ಅತ್ಯಂತ ಸೂಕ್ಷ್ಮವಾದ ವಿಷಯಗಳಲ್ಲಿ ಹೊರಗಿನ ವಿಷಯಗಳಲ್ಲಿ ಆಸಕ್ತವಾದ ಮನಸ್ಸು, ಸ್ವಭಾವದಿಂದಲೇ ಹೊರಗಡೆ ಪ್ರವೃತ್ತವಾಗಿರುವುದರಿಂದ ಬಹಳ ಹೆಚ್ಚಿನ ಶ್ರದ್ಧೆಯಿಲ್ಲದಿದ್ದರೆ ನಿಶ್ಚಯಿಸುವುದು ಕಷ್ಟವಾದೀತು ಎಂದು ಶ್ರದ್ಧೆಯಿಡು ಎಂದು ಹೇಳಿರುತ್ತಾನೆ. ಶ್ರದ್ಧೆಯಿದ್ದರೆ ಮಾತ್ರವೇ ಅರಿತುಕೊಳ್ಳಬೇಕಾಗಿರುವ ಅರ್ಥವು ಮನಸ್ಸಿನಲ್ಲಿ ನಿಲ್ಲುತ್ತದೆ. ಆದುದರಿಂದ ಆ ಅರ್ಥದ ನಿಶ್ಚಯವೂ ಆಗುತ್ತದೆ.

ಮೇಲೆ ಹೇಳಿದ ಭಾಗಗಳು ಆಧುನಿಕ ಭೌತಶಾಸ್ತ್ರದಲ್ಲಿರುವ 'ಕ್ಷೇತ್ರ'ವೆಂದರೆ ಯಾವುದರಿಂದ ಸೂಕ್ಷ್ಮಕಣಗಳು ಉಗಮವಾಗುತ್ತವೋ ಮತ್ತು ಯಾವುದರೊಳಗೆ ಅದೃಶ್ಯವಾಗುತ್ತವೋ ಅದು. ಅದು ಅತಿ ಸೂಕ್ಷ್ಮ ಮತ್ತು ಇಂದ್ರಿಯಾನುಭವಾತೀತ. ಅದು ವಸ್ತುವಲ್ಲದ್ದು, ಆದರೆ ಅದೇ ಎಲ್ಲವೂ ಆಗಿರುವುದು.

ಮತ್ತೊಮ್ಮೆ ಪ್ರೊ. ಕಾಪ್ರ ಅವರನ್ನು ಉದ್ಧರಿಸುವುದಾದರೆ (ಅದೇ ಪು. ೨೨೧–೨೩) :

*"ಭೌತಕಣಗಳು ಮತ್ತು ಶೂನ್ಯ ಇವೆರಡರ ನಡುವೆ ಸಾಂಪ್ರದಾಯಿಕವಾಗಿ ಇದ್ದ ಭೇದವನ್ನು ತ್ಯಜಿಸಲು, ಆಧುನಿಕ ಭೌತಶಾಸ್ತ್ರದ ಕ್ಷೇತ್ರಸಿದ್ಧಾಂತಗಳು ನಮ್ಮನ್ನು ಒತ್ತಾಯಪಡಿಸುತ್ತಿವೆ. ಈ ಕ್ಷೇತ್ರವು ಎಲ್ಲಾ ಕಣಗಳಿಗೂ ಮತ್ತು ಅವುಗಳ ಪರಸ್ಪರ ಪರಿಣಾಮಕ್ಕೂ ಆಧಾರವಾಗಿದೆ ಎಂದು ಕಂಡುಬಂದಿದೆ.*

*'ಶೂನ್ಯ'ವೆಂದರೆ ಏನೂ ಇಲ್ಲ ಎಂದರ್ಥವಲ್ಲ. ಇದಕ್ಕೆ ಪ್ರತಿಯಾಗಿ ಅದು ಕೊನೆಯಿಲ್ಲದೆ ಅಸ್ತಿತ್ವಕ್ಕೆ ಬರುವ ಹಾಗೂ ಅದೃಶ್ಯವಾಗುವ ಅಸಂಖ್ಯಾತ ಕಣಗಳನ್ನು ಹೊಂದಿದೆ.*

*ಹಾಗಾದರೆ ಇಲ್ಲಿ ಆಧುನಿಕ ಭೌತಶಾಸ್ತ್ರದಲ್ಲಿ ಪೌರ್ವಾತ್ಯದೇಶದ ಅಧ್ಯಾತ್ಮ ಯೋಗದ ಶೂನ್ಯಕ್ಕೆ ಅತ್ಯಂತ ಸದೃಶವಾದದ್ದು ಇದೆ. ಪೌರ್ವಾತ್ಯರ ಶೂನ್ಯದಂತೆ ಕ್ಷೇತ್ರಸಿದ್ಧಾಂತ ಎಂದು ಕರೆಯಲ್ಪಡುವ ಭೌತಿಕ ಶೂನ್ಯತೆಯು ಕೇವಲ ಏನೂ ಇಲ್ಲದ ಒಂದು ಸ್ಥಿತಿಯಲ್ಲ. ಆದರೆ, ಕಣಪ್ರಪಂಚದ ಎಲ್ಲಾ ರೂಪಗಳ ಸಾಮರ್ಥ್ಯವನ್ನು ಅದು ಒಳಗೊಂಡಿದೆ. ಈ ರೂಪಗಳು ಅದಕ್ಕೆ ಬದಲಾಗಿ ಸ್ವತಂತ್ರವಾದ ಭೌತಿಕವಸ್ತುಗಳಲ್ಲ. ಆದರೆ ಅದು ಶೂನ್ಯವು ಆಧಾರವಾಗಿ ಉಳ್ಳ ಕೇವಲ ಕ್ಷಣಿಕ ಆವಿರ್ಭಾವಗಳು. ಶೂನ್ಯದಲ್ಲಿನ ಚಲನಾತ್ಮಕ ಗುಣದ ಈ ಸಂಶೋಧನೆಯನ್ನು ಅನೇಕ ಭೌತಶಾಸ್ತ್ರಜ್ಞರು ಆಧುನಿಕ ಭೌತಶಾಸ್ತ್ರದ (ಇತ್ತೀಚಿನ) ಅತ್ಯಂತ ಪ್ರಮುಖ ಶೋಧನೆಗಳಲ್ಲಿ ಒಂದೆಂದು ಭಾವಿಸಿದ್ದಾರೆ.*

ಅಶಿಕ್ಷಿತ ಮಾನವ ಮನಸ್ಸು ಸ್ಥೂಲವಾದುದನ್ನು ಗ್ರಹಿಸುತ್ತದೆ. ಐದು ಇಂದ್ರಿಯಗಳ ಅನುಭವಕ್ಕೆ ಬಂದುದೇ ಸತ್ಯವೆಂದು, ಅಸ್ತಿತ್ವವುಳ್ಳದ್ದೆಂದು ಭಾವಿಸುತ್ತದೆ. ಅದು ಯಾವುದು ಸೂಕ್ಷ್ಮವೋ ಮತ್ತು ಯಾವುದು ಇಂದ್ರಿಯಗಳ ವಲಯದ ಆಚೆ ಇದೆಯೋ ಅದನ್ನು ಶೂನ್ಯವೆಂದು, ಅಸತ್ಯವೆಂದು, ಅಸ್ತಿತ್ವವಿಲ್ಲ ದ್ದೆಂದು ಪರಿಗಣಿಸುತ್ತದೆ. ಅಸ್ತಿತ್ವವು ಶೂನ್ಯದಲ್ಲಿ ಲೀನವಾಗುವ ಆಲೋಚನಾ ಪ್ರಪಾತದ ಕಟ್ಟಕಡೆಯ ಅಂಚಿನಲ್ಲಿ ಮಾನವನ ವಿಚಾರಶಕ್ತಿಯು ಸ್ತಬ್ಧವಾಗಿ ನಿಲ್ಲುವುದು. ಧರ್ಮದಲ್ಲಾಗಲೀ ಭೌತವಿಜ್ಞಾನದ ಪರಿಧಿಗೊಳಪಟ್ಟ ಅಣುವಿನ ಭೌತಶಾಸ್ತ್ರದ ಕ್ಷೇತ್ರದಲ್ಲಾಗಲಿ, ಜೀವನ ಮತ್ತು ಮಾನವನ ನೈಜಸ್ವರೂಪವನ್ನು ನಿರ್ಧರಿಸುವಲ್ಲಿ ಆರ್ ಎನ್ ಎ ಮತ್ತು ಡಿ ಎನ್ ಎ ಗಳಲ್ಲಿ ಯಾವುದು ಜೀವನದ ಭೌತಿಕ ಮತ್ತು ರಾಸಾಯನಿಕ ಮೂಲವಾಗಿದೆ ? ವಸ್ತುತಃ ಜೀವನವೆಂದರೇನು ? ಇವುಗಳಿಗಿರುವ ವ್ಯತ್ಯಾಸವನ್ನು ವಿವೇಚಿಸುವ ತಳಿಶಾಸ್ತ್ರದಲ್ಲಾಗಲಿ, ಸತ್ಯವನ್ನರಸಲು ಮತ್ತು ಶೂನ್ಯವೇ ಶುದ್ಧ ಅಸ್ತಿತ್ವ, ಸತ್ಯಸ್ಯಸತ್ಯ ಎಂದು ಗುರುತಿಸಲು ಸ್ಥಗಿತಗೊಂಡು ನಿಂತ ವಿಚಾರಶಕ್ತಿಯನ್ನು, ಸೃಜನಾತ್ಮಕ ಹಾಗೂ ದಿವ್ಯಶ್ರದ್ಧೆಯಿಂದ ಪುರಿದುಂಬಿಸಬೇಕು. ಸತ್ಯಸ್ಯ ಸತ್ಯದ ಅರಿವಿನ ಬೆಳಕಿನಲ್ಲಿ ಭೌತಿಕ ಅಥವಾ ಜೈವಿಕ ಅಥವಾ ಮಾನಸಿಕ ಶಕ್ತಿಗಳೆಲ್ಲವೂ ಸತ್ಯಸ್ಯ ಸತ್ಯವೆಂದು ಸಾಧಿತವಾಗುತ್ತವೆ. ಬೃಹದಾರಣ್ಯಕ ಉಪನಿಷತ್ತಿನ ಸ್ಪಷ್ಟ ಮಾತುಗಳಲ್ಲಿ—

> ಸ ಯಥಾ ಊರ್ಣನಾಭಿಃ ತಂತುನಾ ಉಚ್ಚರೇತ್, ಯಥಾ ಅಗ್ನೇಃ ಕ್ಷುದ್ರಾ, ವಿಸ್ಫುಲಿಂಗಾ ವ್ಯುಚ್ಚರಂತಿ : ಏವಮೇವ ಅಸ್ಮಾತ್ ಆತ್ಮನಃ ಸರ್ವೇ ಪ್ರಾಣಾಃ, ಸರ್ವೇ ಲೋಕಾಃ ಸರ್ವೇ ದೇವಾಃ, ಸರ್ವಾಣಿ ಭೂತಾನಿ ವ್ಯುಚ್ಚರಂತಿ, ತಸ್ಯೋಪನಿಷದ್ ಸತ್ಯಸ್ಯ ಸತ್ಯಮಿತಿ, ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್—

ಅದು ಹೇಗೆ ಜೇಡನು, ತಾನೇ ಸೃಷ್ಟಿಸಿದ ದಾರದ ಬಲೆಯಲ್ಲಿ ಮುಂದುವರೆಯುವುದೋ, ಹೇಗೆ ಬೆಂಕಿಯಿಂದ ಸಣ್ಣ ಕಿಡಿಗಳು ಸಿಡಿಯುವುವೋ, ಅಂತೆಯೇ ಆತ್ಮನಿಂದ ಎಲ್ಲಾ (ದೈಹಿಕ, ಮನೋದೈಹಿಕ) ಪ್ರಾಣಗಳು, ಎಲ್ಲಾ ಲೋಹಗಳು, ಎಲ್ಲಾ ದೇವತೆಗಳು, ಎಲ್ಲಾ ಭೂತಗಳು(ವಸ್ತು) ಹೊಮ್ಮುತ್ತವೆ. ಅದರ ಉಪನಿಷತ್ತು (ರಹಸ್ಯ ಹೆಸರು) 'ಸತ್ಯಸ್ಯ ಸತ್ಯವು' ಎಂದು, ಪ್ರಾಣಗಳೇ ನಿಜಕ್ಕೂ ಸತ್ಯವು ; ಇದು (ಆತ್ಮನು) ಅವುಗಳಿಗೆ (ಪ್ರಾಣಗಳಿಗೆ) ಸತ್ಯವು.

ಛಾಂದೋಗ್ಯ ಉಪನಿಷತ್ತು ತನ್ನ ಮುಂದಿನ ಶ್ಲೋಕದಲ್ಲಿಯೇ ತಂದೆಯು ಮಗನಿಗೆ ಹೇಳುವ ಮಾತುಗಳಲ್ಲಿ ಈ ಸತಸ್ಯ ಸತ್ಯವನ್ನು ಉದ್ಘೋಷಿಸುತ್ತದೆ. ಅದು ಶುದ್ಧ ಚೈತನ್ಯಸ್ವರೂಪವಾಗಿರುವುದಲ್ಲದೆ ವಿಶ್ವದ ಮತ್ತು ಮಾನವನ ಆತ್ಮವೇ ಆಗಿರುತ್ತದೆ.

> ಸ ಯ ಏಷೋ ಅಣಿಮಾ, ಐತತ್ ಆತ್ಮಂ ಇದಂ ಸರ್ವಂ । ತತ್ ಸತ್ಯಂ, ಸ ಆತ್ಮಾ ತತ್ ತ್ವಂ ಅಸಿ, ಶ್ವೇತಕೇತೋ ।

ಅತ್ಯಂತ ಸೂಕ್ಷ್ಮವಾದ ಯಾವ ಇದು, ವ್ಯಕ್ತವಾಗಿರುವ ಈ ವಿಶ್ವವೆಲ್ಲವೂ ಈ ಆತ್ಮಸ್ವರೂಪವೇ ಆಗಿದೆ. ಅದು ಸತ್ಯ. ಅವನೇ ಆತ್ಮ. ನೀನು ಅದೇ ಆಗಿದ್ದೀಯೆ, ಶ್ವೇತಕೇತುವೇ,

## ೧೮. ಪರಮಸತ್ಯವು ಅಖಂಡ ಸತ್‌ಚಿತ್ ಆನಂದ

ಪರಮಾಣುವಿನ ಸೂಕ್ಷ್ಮ ಕಣವಾದ ಹೆಡ್ರಾನ್‌ನ ಪ್ರತಿಕ್ರಿಯೆಗಳನ್ನು, ಕಣಗಳು ನಿರಂತರ ಸೃಷ್ಟಿ ಮತ್ತು ಲಯವಾಗುವ ಶಕ್ತಿಪ್ರವಾಹವೆಂದು ಕಣ-ಭೌತಶಾಸ್ತ್ರವು ವರ್ಣಿಸುತ್ತದೆ ಮತ್ತು ಅತ್ಯಂತ ಕ್ಷಣಿಕವಾದ ಹೆಡ್ರಾನ್ ಸ್ಥಿತಿಯನ್ನು ಅನುರಣನವೆಂದು ವಿವರಿಸುತ್ತದೆ. ಈ ವಿವರಣೆಯಿಂದ ಅದೊಂದು ಘಟನೆಯಾಗಿ ಕಂಡುಬರುತ್ತದೆಯೇ ಹೊರತು ಒಂದು ಭೌತವಸ್ತುವಾಗಿ ಅಲ್ಲ, ಮತ್ತು ಇದು ಹಿಂದೂ ವಿಶ್ವದರ್ಶನವಾದ "ಸ್ಫೋಟ" ಭಾವನೆಯನ್ನು ಪ್ರತಿಧ್ವನಿಸುತ್ತದೆ. ಅದು ಈ ಘಟನೆಗಳ ಸ್ವರೂಪಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಎಬ್ಬಿಸುತ್ತದೆ. ಆಧುನಿಕ ಭೌತಶಾಸ್ತ್ರವು ವಸ್ತುವಿನ

ನಿಜಸ್ವರೂಪದ ಅನ್ವೇಷಣೆಯಲ್ಲಿ ನಿರತವಾಗಿದೆ. ಪರಮಾಣುವಿನ ಮಟ್ಟದಲ್ಲಿ ಮತ್ತು ಅದರ ಮೇಲ್‌ಸ್ತರದಲ್ಲಿ ಸ್ಥಿರವಾದ ಪರಮಾಣುವಿನ ಮತ್ತು ಅಣುಗಳಿಗೆ ಸಂಬಂಧಿಸಿದ ರಚನೆಯ ರೂಪಗಳನ್ನು ನೋಡುತ್ತೇವೆ. ಅದು ಮಾನವನ ಇಂದ್ರಿಯಾನುಭವಕ್ಕೆ ತೋರುವ ನಮ್ಮ ಸಾಧಾರಣವಾದ ಭೌತಿಕ ವಿಶ್ವವನ್ನು ರಚಿಸುತ್ತದೆ. ಪರಮಾಣುವಿನ ಕೆಳಸ್ತರದಲ್ಲಿ ಭೌತಶಾಸ್ತ್ರವು ಎಲ್ಲಾ ವಸ್ತುಗಳನ್ನು ಶಕ್ತಿಯ ರೂಪದಲ್ಲಿ ತೋರಿಸಿಕೊಡುತ್ತದೆ. ಸಾಪೇಕ್ಷಿಕ ಮತ್ತು ಕ್ವಾಂಟಂ ರೂಪಗಳಲ್ಲಿಯೇ ಅದರ ವಿವರಣೆಯು ಯೋಗ್ಯವೆನಿಸುತ್ತದೆ. ಅಂದರೆ, ಸರ್ ಜೇಮ್ಸ್ ಜೀನ್ಸ್ ಹೇಳಿದಂತೆ ನಮ್ಮ 'ಮಾನವ ಕನ್ನಡಕ'ವನ್ನು ತೆಗೆದ ಮೇಲೆಯೇ ಪ್ರಕೃತಿಯನ್ನು ನಾವು ವೀಕ್ಷಿಸುವುದು.

ಶಕ್ತಿಯ ಉಂಡೆಗಳಂತೆ ಹೆಡ್ರಾನ್‌ಗಳು ಮತ್ತು ಅನುರಣನಗಳು ಇನ್ನೂ ವಸ್ತುಗಳಾಗಿವೆ. ವಸ್ತುವಿನ ಮೂಲಭೂತ ಸ್ಥಿತಿಯನ್ನು ಅರಿಯುವ ಸಂಶೋಧನೆಯು ಪ್ರಾಚೀನ ಗ್ರೀಕ್ ತತ್ತ್ವಜ್ಞಾನಿಗಳ ಅಣುವಿನಿಂದ ಮೊದಲಾಗಿ, ಸಾಂಪ್ರದಾಯಿಕ ಭೌತಶಾಸ್ತ್ರದ ಅಣುಗಳ ಮೂಲಕ, ಕಣಗಳು ಮತ್ತು ಕ್ವಾಂಟಂ ಕ್ಷೇತ್ರದವರೆಗೂ ಮತ್ತು ಈಗ ಇಪ್ಪತ್ತನೇ ಶತಕದ ಭೌತಶಾಸ್ತ್ರದ ಅನುರಣನಗಳವರೆಗೂ (Resonances) ಬಹುದೂರ ಸಾಗಿದೆ.

ವೇದಾಂತದ ದೃಷ್ಟಿಯಿಂದ ಪರಿಗಣಿಸಲು ಕುತೂಹಲಕಾರಿಯಾದ ಅಂಶವೆಂದರೆ ಪ್ರಾಥಮಿಕ ಕಣಗಳು. ನಿಜಕ್ಕೂ ರಚನಾರಹಿತವಾಗಿರುವುದರಿಂದ ನಿಜವಾಗಿಯೂ ಪ್ರಾಥಮಿಕ ಕಣಗಳೆನಿಸಿಕೊಳ್ಳುತ್ತವೆಯೋ, ಅಷ್ಟೇ ಅಲ್ಲದೆ, ಪರಸ್ಪರ ಪ್ರತಿಕ್ರಿಯೆಯ ಪ್ರಕ್ರಿಯೆಯಲ್ಲಿ ಅವುಗಳ ಭಾಗವಹಿಸುವಿಕೆಯಿಂದ ಅವು ಪ್ರಾಥಮಿಕ ಅಣುಗಳಾಗಿ ಉಳಿಯಲು ಸಾಧ್ಯವೇ ಎಂಬ ಪ್ರಶ್ನೆಯನ್ನು ಇಂದಿನ ಕೆಲವು ಅಣುಭೌತಶಾಸ್ತ್ರಜ್ಞರು ಎತ್ತುವರು. ಪ್ರೊ. ಕಾಪ್ರಾನ ಹೇಳಿಕೆಯ ಪ್ರಕಾರ ಇದು ಏನನ್ನು ಸೂಚಿಸುತ್ತದೆಂದರೆ (ಅದೇ ಪುಸ್ತಕ, ಪು. ೨೭೩.೪) :

*ಅನುಭವಕ್ಕೆ ಬಂದಿರುವ ಕಣಗಳು ಒಂದು ರೀತಿಯ ಆಂತರಿಕ ವಿನ್ಯಾಸವನ್ನು ಹೊಂದಿರಬೇಕು. ಏಕೆಂದರೆ ಹಾಗಿದ್ದಲ್ಲಿ ಮಾತ್ರ ಕಣಗಳು ವೀಕ್ಷಕನೊಡನೆ ಪ್ರತಿಕ್ರಿಯಿಸುವುವು ಮತ್ತು ಕಾಣಸಿಗುವುವು ಎಂಬುದು ಒಂದು ಮುಖ್ಯವಾದ ನಿರ್ಣಯ. ಎಸ್-ಮ್ಯಾಟ್ರಿಕ್ಸ್ ಸಿದ್ಧಾಂತದ ಪ್ರಮುಖ ಶಿಲ್ಪಿಗಳಲ್ಲೊಬ್ಬನಾದ ಜೊಫ್ರೆ ಚ್ಯೂ ಹೇಳುವಂತೆ ಒಂದು ನೈಜ ಪ್ರಾಥಮಿಕ ಕಣವು ಪೂರ್ಣ ಆಂತರಿಕ ವಿನ್ಯಾಸರಹಿತವಾಗಿದ್ದರೆ ತನ್ನ ಆಂತರಿಕವಿನ್ಯಾಸವನ್ನು ಕಂಡುಕೊಳ್ಳಲು ಅವಕಾಶಕೊಡುವ ಯಾವ ಶಕ್ತಿಗಳಿಗೂ ಅದು ಒಳಪಡುವುದಿಲ್ಲ. ಒಂದು ಕಣವು ಆಂತರಿಕ ವಿನ್ಯಾಸವನ್ನು ಹೊಂದಿದೆ ಎಂಬುದು ಅದರ ಅಸ್ತಿತ್ವದ ಭಾವಮಾತ್ರದಿಂದಲೇ ಧ್ವನಿತವಾಗುತ್ತದೆ ಅಥವಾ ಸೂಚಿತವಾಗುತ್ತದೆ.*

ಪ್ರೊ. ಕಾಪ್ರನು ಉದ್ಧರಿಸಿರುವ ಪ್ರೊ. ಜೊಫ್ರೆ ಚ್ಯೂ ಅವರ ಮಾತಿನಲ್ಲಿ ವೇದಾಂತವು ತನ್ನದೇ ಆದ ನಿರ್ಣಯದ ಪ್ರತಿಧ್ವನಿಯನ್ನು ಕಾಣುತ್ತದೆ. ರಚನಾವಿನ್ಯಾಸರಹಿತ ಅವಿಭಾಜ್ಯತೆಯು ದ್ರವ್ಯ ಮತ್ತು ಶಕ್ತಿಗಳ ಲಕ್ಷಣಗಳಾಗಲಾರದು ಮಾತ್ರವಲ್ಲದೆ ನಾಲ್ಕು ಆಯಾಮಗಳ ದೇಶ-ಕಾಲಗಳಾಗಲಿ, ಮುಂದೆ ಕಂಡುಹಿಡಿಯಬಹುದಾದ ಕ್ವಾರ್ಕ್ಸ್‌ಗಳಾಗಲಿ ಆಗಿರಲಾರವು ಮತ್ತು ಆಂತರಿಕ ರಚನಾ ವಿನ್ಯಾಸವನ್ನು ಪಡೆದಿರುವ ಪ್ರತಿಯೊಂದೂ, ಅದು ದೃಶ್ಯವಾಗಿರುವುದರಿಂದ, ಮಿಥ್ಯವಾಗಿರಲೇಬೇಕು. ಏಕೆಂದರೆ ಅವು ಪ್ರತಿಕ್ಷಣವೂ ಬದಲಾಗುವ ಸ್ವಭಾವವುಳ್ಳವು, ಎಂದು ವೇದಾಂತವು ಯುಗಗಳ ಹಿಂದೆಯೇ ಕಂಡುಹಿಡಿಯಿತು. ಆದ್ದರಿಂದಲೇ ವೇದಾಂತವು ತನ್ನ ಪರಾವಿದ್ಯೆ ಅಥವಾ ಉನ್ನತವಿಜ್ಞಾನದಲ್ಲಿ ರಚನಾಸಾಹಿತ್ಯ ಮತ್ತು ಅವಿಭಾಜ್ಯ ಸತ್ಯವನ್ನು ದೃಕ್‌ನಲ್ಲಿ (ದರ್ಶಕ) ಕಂಡಿತು. ಉಳಿದುದೆಲ್ಲವೂ ಅದರ 'ವ್ಯವಹಾರಕ್ಕಾಗಿ ಕಾಣಿಸಿಕೊಳ್ಳುವ ನಾಮರೂಪಗಳು (ವಾಚಾರಂಭಣಂ ವಿಕಾರೋ ನಾಮಧೇಯಮ್) ಎಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ.

ವೇದಾಂತವು ದೃಕ್ಕೆಂಬುದು ಚಿತ್ ಅಥವಾ ಶುದ್ಧ ಚೈತನ್ಯವಾಗಿದೆಯೆಂದೂ ಅದು ದೃಕ್ ಮತ್ತು ದೃಶ್ಯಗಳೆರಡರ ಹಿನ್ನೆಲೆಯೆಂದೂ ಕಂಡುಹಿಡಿಯಿತು. ವೈವಿಧ್ಯಮಯ ಬಾಹ್ಯ ಜಗತ್ತಿನ ಮತ್ತು ಅಹಂ-ಕೇಂದ್ರಿತ ಪ್ರಜ್ಞಾವಿಕಾರಗಳ ಹಿಂದಿರುವ ಸತ್ಯವೇ ಅದು. ಅದು ಅಖಂಡ ಅಥವಾ ಅವಿಭಾಜ್ಯ ಅಥವಾ ಅದು ನೈಜವಾಗಿ ಪ್ರಾಥಮಿಕವಾಗಿರಬಲ್ಲದು ಎಂದು ವೇದಾಂತವು ಘೋಷಿಸಿದೆ. ಈ ತತ್ತ್ವವನ್ನು ಅಖಂಡ ಸತ್-ಚಿತ್ ಆನಂದ-ಅವಿಭಾಜಿತ ಅಸ್ತಿತ್ವ, ಚೈತನ್ಯ, ಆನಂದ ಎಂದು ಕರೆಯುತ್ತಾರೆ.

ಅಪರಿಚೇದ್ಯವಾದ ಈ ಸಚ್ಚಿದಾನಂದವು 'ಜ್ಯೋತಿಷಾಂ ಜ್ಯೋತಿಃ' ಬೆಳಕಿನ ಬೆಳಕಾಗಿದೆ. ವೇದಾಂತತತ್ತ್ವದ ನಿರ್ಗುಣ ಪರಬ್ರಹ್ಮವೂ ವೇದಾಂತ ಧರ್ಮದ ಸಗುಣ ಈಶ್ವರನೂ ಅದೇ. ಜ್ಞಾನಿಯು ವಿಚಾರವನ್ನವಲಂಬಿಸಿ, ನಿತ್ಯಾನಿತ್ಯವಸ್ತುವಿವೇಕವನ್ನು ಅನುಸರಿಸಿ ಅದರ ನಿರ್ಗುಣ ಮತ್ತು ನಿರಾಕಾರ ಸ್ಥಿತಿಯನ್ನು ಒತ್ತಿ ಹೇಳಿದರೆ, ಭಕ್ತನು ಶ್ರದ್ಧೆ ಮತ್ತು ಭಕ್ತಿಯನ್ನನುಸರಿಸಿ ಅದರ ಸಗುಣ ಸಾಕಾರರೂಪವನ್ನು ಒತ್ತಿ ಹೇಳುವನು. ಶ್ರೀರಾಮಕೃಷ್ಣರು ಹೇಳುವಂತೆ ಈ ರೂಪವು ತಂಪಾಗಿಸುವ ಭಕ್ತಿಯ ಪರಿಣಾಮದಿಂದಾಗಿ ಘನೀಭೂತಗೊಂಡ ಅದೇ ದಿವ್ಯ ಚೈತನ್ಯಸಾಗರವಾಗಿದೆ. ವೇದಾಂತದ ಭಕ್ತಿ ಧ್ಯಾನದಲ್ಲಿ, ಭಕ್ತನು ಘನೀಭೂತಗೊಂಡ ಅಪರಿಮಿತ ಸಚ್ಚಿದಾನಂದ ಜ್ಯೋತಿಯು ಪ್ರಜ್ವಲಿಸುವ ದಿವ್ಯ ರೂಪವನ್ನು, ಸಂಪೂರ್ಣ ಅರಳಿದ ಅರವಿಂದವೆಂದು ಭಾವಿಸಿ, ತನ್ನ ಹೃದಯದಲ್ಲಿ ಧ್ಯಾನಿಸುವನು. ಅನಂತರ ಧ್ಯಾನದ ಕೊನೆಯಲ್ಲಿ ಅದನ್ನು ಅದರಲ್ಲಿ ಸಮಾಲೀನಗೊಳಿಸುವನು. ಅತ್ಯಂತ ಪ್ರಾಚೀನವಾದ ಋಗ್ವೇದವು 'ಪರಮಸತ್ಯವು ಒಂದೇ, ಅದನ್ನು ಜ್ಞಾನಿಗಳು ಅನೇಕ ಹೆಸರಿನಿಂದ ಸಂಬೋಧಿಸುವರು' ಎಂದು ಘೋಷಿಸುತ್ತದೆ. ನಮ್ಮ ಕಾಲದಲ್ಲಿನ ಶ್ರೀರಾಮಕೃಷ್ಣರು ದೇವರನ್ನು ಕಾಣಲು ಎಷ್ಟು ಧರ್ಮಗಳಿವೆಯೋ ಅಷ್ಟೇ ಮಾರ್ಗಗಳೂ ಇವೆ ಎಂದು ಸಾರಿರುವರು— ಯತೋ ಮತ್ ತತೋ ಪಥ್. ವೇದಾಂತದಿಂದ ಗ್ರಹಿಸಿದ ಈ ದಿವ್ಯ ಏಕತೆಯು, ಭಾರತವನ್ನು ಧರ್ಮ ಧರ್ಮಗಳಲ್ಲಷ್ಟೇ ಅಲ್ಲದೆ ವಿಜ್ಞಾನ ಮತ್ತು ಧರ್ಮ, ಶ್ರದ್ಧೆ ಮತ್ತು ತರ್ಕ, ಅಧ್ಯಾತ್ಮ ಮತ್ತು ಲೌಕಿಕ, ವಿಚಾರ ಹಾಗೂ ಆಚಾರಗಳ ನಡುವೆಯೂ ಕಾರ್ಯಶೀಲ ಸಹಿಷ್ಣುತೆ ಮತ್ತು ಸಾಮರಸ್ಯಗಳ ದೃಷ್ಟಿ ಮತ್ತು ಅನುಷ್ಠಾನದಿಂದ ಸಚೇತನಗೊಳಿಸಿದೆ. ಶ್ರೀಮದ್ಭಾಗವತವೂ ಈ ತತ್ತ್ವ ಅಥವಾ ಪರಾಸತ್ಯವೆನಿಸಿದ ವಿಶ್ವವ್ಯಾಪಿಯಾದ ಏಕತೆಯನ್ನು ತನ್ನ ಸುಪ್ರಸಿದ್ಧ ಶ್ಲೋಕವೊಂದರಲ್ಲಿ ಹೀಗೆ ತಿಳಿಸುತ್ತದೆ :

ವದಂತಿ ತತ್ ತತ್ತ್ವವಿದಃ ತತ್ತ್ವಂ ಯತ್ ಜ್ಞಾನಮದ್ವಯಮ್ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥ (೧-೧೧-೧೧)

*ತತ್ತ್ವವನ್ನರಿತವರು ಅದು ಒಂದೇ ಆಗಿದೆ ಮತ್ತು ಅದು ಎರಡಿಲ್ಲದ ಶುದ್ಧ ಚೈತನ್ಯಬ್ರಹ್ಮವೆಂದು ಅಥವಾ (ಅನುಭಾವಿಗಳು ಅವನನ್ನು) ಪರಮಾತ್ಮನೆಂದು (ಭಕ್ತರು ಅದನ್ನು) ಭಗವಂತನೆಂದು (ಸಗುಣ ದೇವರು) ಸಾರಿದ್ದಾರೆ.*

ಜ್ಞಾನಿಯು ತತ್ತ್ವದ ಸತ್ ಹಾಗೂ ಚಿತ್‌ನ ಸ್ವರೂಪಗಳಿಗೆ ಒತ್ತನ್ನೀಯುತ್ತಾನೆ. ಭಕ್ತನಾದರೋ ಇದರೊಡನೆ ಆನಂದಸ್ವರೂಪಕ್ಕೂ ಒತ್ತುಕೊಡುತ್ತಾನೆ. ಈ ತೆರನಾದ ಆನಂದವೇ ಎಲ್ಲ ಕಲೆಗಳಿಗೂ ಸ್ಫೂರ್ತಿ ನೀಡುತ್ತದೆ.

ಉಪನಿಷತ್ತುಗಳು ಮುಂದುವರಿದು ಈ ಆತ್ಯಂತಿಕ ಪರಮಸತ್ಯದ ಸೌಂದರ್ಯಸ್ವರೂಪಕ್ಕೆ ಒತ್ತುಕೊಡುತ್ತಾ—

ರಸೋ ವೈ ಸಃ, ರಸಂ ಹಿ ಏವ ಅಯಂ ಲಬ್ಧ್ವಾ ಆನಂದೀಭವತಿ—

ಅವನು (ಬ್ರಹ್ಮನು ಭಗವಾನ್ ಎನ್ನಲ್ಪಡುವ) ರಸಸ್ವರೂಪವೇ ಆಗಿದ್ದಾನೆ (ಆನಂದ). ಜೀವಿಗಳು ಈ ರಸದ ಅಲ್ಪಾಂಶವನ್ನು ಪಡೆದು ಜೀವನದಲ್ಲಿ ಆನಂದವನ್ನನುಭವಿಸುತ್ತಾರೆ ಎಂದು ಹೇಳುತ್ತವೆ.

ಗೀತೆಯು ಈ ಸತ್ಯದ ಪರಿಶುದ್ಧ ಚೈತನ್ಯದ ಸ್ವರೂಪವನ್ನು ಒಂದೇ ಮತ್ತು ಅದ್ವಯ ಎಂದೂ, ಎಲ್ಲ ವಸ್ತುಗಳು ಹಾಗೂ ಅದರ ಶಕ್ತಿಯ ಮೊತ್ತವೆಂದೂ ಮತ್ತು ವಿಶ್ವದಲ್ಲಿನ ಎಲ್ಲಾ ವ್ಯಕ್ತಿಗಳು ಚೈತನ್ಯದ ಕೇಂದ್ರಗಳೆಂದೂ ಮತ್ತು ಅದರ ಸಂಗಮವೆಂದೂ ಐದು ಶ್ರೇಷ್ಠ ಶ್ಲೋಕಗಳಲ್ಲಿ ಪ್ರತಿಪಾದಿಸುತ್ತದೆ (೧೩/೧೫-೧೭ ಮತ್ತು ೨೭, ೩೦).

ಬಹಿರಂತಶ್ಚ ಭೂತಾನಾಂ ಅಚರಂ ಚರಮೇವ ಚ ।
ಸೂಕ್ಷ್ಮತ್ವಾದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥

*ಅದು ಜೀವಿಗಳ ಹೊರಗೂ ಒಳಗೂ ಇದೆ ; ಚರವೂ ಅಚರವೂ ಆಗಿದೆ. ಅದು ಸೂಕ್ಷ್ಮವಾಗಿರುವುದರಿಂದ ಅರಿಯಲಸಾಧ್ಯವಾಗಿದ್ದು ದೂರವೂ ಇದೆ, ಸಮೀಪವೂ ಇದೆ.*

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥

ಜ್ಞೇಯವು ಅವಿಭಕ್ತ ಆದರೂ ಭೂತಗಳಲ್ಲಿ ವಿಭಕ್ತವಾಗಿರುವಂತೆ ಕಾಣುತ್ತದೆ. ಅದು ಎಲ್ಲ ವಸ್ತುಗಳ ರಕ್ಷಕ, ಸಂಹಾರಕ ಮತ್ತು ಸ್ರಷ್ಟಾರ.

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿಸರ್ವಸ್ಯಧಿಷ್ಠಿತಮ್ ॥

*ಅದನ್ನು ಬೆಳಕಿನ ಬೆಳಕು ಎನ್ನುತ್ತಾರೆ ಅಥವಾ ತಮಸ್ಸಿನ (ಅಜ್ಞಾನ ಮತ್ತು ಭ್ರಾಂತಿ) ಆಚೆಗಿದೆ ಎನ್ನುತ್ತಾರೆ. ಅದು ಜ್ಞಾನವೂ ಜ್ಞಾನವಿಷಯವೂ ಆಗಿದೆ, ಮತ್ತು ಜ್ಞಾನಗಮ್ಯವೂ ಆಗಿದೆ ಅದು ಎಲ್ಲಾ ಜೀವಿಗಳ ಹೃದಯದಲ್ಲಿ ನೆಲೆಸಿರುತ್ತದೆ.*

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ।

*ಯಾವನು ಸರ್ವ ಜೀವಿಗಳಲ್ಲಿ ಸಮನಾಗಿ ಇರುವ ನಶ್ವರ ವಸ್ತುಗಳಲ್ಲಿ ಅವಿನಾಶಿಯಾಗಿ ಇರುವ ಪರಮೇಶ್ವರನನ್ನು ನೋಡುತ್ತಾನೆಯೋ ಅವನು ನಿಜವಾಗಿ ನೋಡುತ್ತಾನೆ.*

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥

*ಯಾವಾಗ ಜೀವಿಗಳ ವಿವಿಧತೆಯು ಅದ್ವಯಾತ್ಮನಲ್ಲಿಯೇ ನೆಲೆಸಿದೆ ಎಂದು ಮತ್ತು ಆತ್ಮನಿಂದಲೇ ವಿಕಾಸಗೊಳ್ಳುವನು ಎಂದು ನೋಡುತ್ತಾನೆಯೋ ಆಗ ಆ ಬ್ರಹ್ಮನನ್ನು ಹೊಂದುತ್ತಾನೆ.*

ಶಂಕರರು ಬ್ರಹ್ಮಸೂತ್ರದ ತಮ್ಮ ವ್ಯಾಖ್ಯಾನದಲ್ಲಿ ಆತ್ಮದ ಏಕತೆಯನ್ನು ಪ್ರತಿಪಾದಿಸುವುದೇ ಎಲ್ಲ ವೇದಾಂತಗಳ ಗುರಿ—ಆತ್ಮೈಕತ್ವ ವಿದ್ಯಾಪ್ರತಿಪತ್ತಯೇ ಸರ್ವೇ ವೇದಾಂತಾಃ ಆರಭ್ಯಂತೇ ಎಂದು ಹೇಳಿದ್ದಾರೆ.

ಇದೇ ಹೇಳಿಕೆಯನ್ನೇ ಪ್ರತಿಧ್ವನಿಸುತ್ತ ಇರ್ವಿನ್ ಶ್ರೋಡಿಂಜರ್ ಹೇಳುತ್ತಾನೆ (*What is life.* p. ೯೦-೯೧) :

*ಏಕಮಾತ್ರ ಚೈತನ್ಯವು ಅನೇಕವಾಗಿ ಎಂದೂ ಅನುಭವಕ್ಕೆ ಬರುವುದಿಲ್ಲ, ಚೈತನ್ಯವು ಒಂದೇ : ಅದು ಅನೇಕ ಎಂಬುದು ತಿಳಿಯಲಾಗದು (ಅಜ್ಞೇಯ) ಇರುವುದು ಒಂದೇ ವಸ್ತು ; ನಮಗೆ ಕಾಣುವ ಅನೇಕವು ಆ ಒಂದು ವಸ್ತುವಿನ ವಿವಿಧ ಮುಖಗಳು. ಈ ಬಹುತ್ವಕ್ಕೆ ಕಾರಣ ತಪ್ಪುಗ್ರಹಿಕೆ (ಭಾರತೀಯ ಮಾಯೆ).*

## ೧೯. ದೃಕ್-ದೃಶ್ಯ ವಿವೇಕ

ಕ್ವಾಂಟಂಕ್ಷೇತ್ರ ಅಥವಾ ನಾಲ್ಕು ಆಯಾಮವುಳ್ಳ ದೇಶಕಾಲವನ್ನು ಭೌತಶಾಸ್ತ್ರವು ಐಂದ್ರಿಯಕ ಪರೀಕ್ಷೆಗೆ ಹೊರತಾದುದು ಎಂದು ನಿರೂಪಿಸುತ್ತದೆ. ಅದರ ಪ್ರತಿರೂಪವನ್ನು ವೇದಾಂತದ ಚಿತ್ತಾಕಾಶ ದಲ್ಲಿ, ಚಿತ್ತದ ಶೂನ್ಯದಲ್ಲಿ ಕಾಣಬಹುದು. ಇದು ಜ್ಞಾನಕ್ಷೇತ್ರ ಅಥವಾ ಚೈತನ್ಯಕ್ಷೇತ್ರ. ಇದರಲ್ಲಿ ದೃಕ್ ಮತ್ತು ದೃಶ್ಯ, ಜ್ಞಾತೃ ಮತ್ತು ಜ್ಞೇಯವೆಂಬ ಅಥವಾ ದರ್ಶಕ ಮತ್ತು ದರ್ಶನವೆಂಬ ಎರಡು ಧ್ರುವಗಳಾಗಿರುತ್ತವೆ. ಸಾಂಪ್ರದಾಯಿಕ ಭೌತಶಾಸ್ತ್ರದ ಪರಿಭಾಷೆಯಲ್ಲಿ ಪರಿವೀಕ್ಷಕನೆಂದು ತೋರುತ್ತಿರುವ ಹಾಗೂ ಕ್ವಾಂಟಂ ಸಾಧ್ಯತೆಗಳ ಪರಿಭಾಷೆಯಲ್ಲಿ ಪರಿವೀಕ್ಷಿತ ಎಂದು ತೋರುತ್ತಿರುವ ಪ್ರಸ್ತುತ ಅವೆರಡಕ್ಕೂ ಇರುವ ಪರಸ್ಪರ ವಿರೋಧವನ್ನು ಪರಿಹರಿಸಿಕೊಳ್ಳುವುದಾದಲ್ಲಿ ವೇದಾಂತದ ಸತ್ಯವು ಗೋಚರವಾಗುವುದು. ವೇದಾಂತವು ಚಿತ್ತ ಮತ್ತು ವಸ್ತುವನ್ನು ಒಂದೇ ಸತ್ಯದ ಸೂಕ್ಷ್ಮ ಹಾಗೂ ಸ್ಥೂಲರೂಪಗಳೆಂದು ತಿಳಿಸುತ್ತದೆ. ಆದ್ದರಿಂದ ಪಾಶ್ಚಾತ್ಯ ಚಿಂತನೆಯು ಮನಸ್ಸು ಮತ್ತು ದೇಹಗಳ ಸಂಘರ್ಷ ಹಾಗೂ ಮನಸ್ಸು ಮತ್ತು ವಸ್ತುಗಳ ನಡುವೆ ಪರಸ್ಪರ ಸಂಘರ್ಷವಿದೆ ಎಂಬ ಭೀತಿಯು ಪಾಶ್ಚಾತ್ಯರಿಗೆ ಹಿಂದೆ ಇದ್ದಂತೆ ಮತ್ತು ಈಗಲೂ ಇರುವಂತೆ ಭಾರತವು ಎಂದೂ ಅಂತಹ ಭ್ರಾಂತಿಗೆ ಒಳಗಾಗಿರಲಿಲ್ಲ. ಆದರೆ ಮನಸ್ಸು ವಸ್ತುವಿನ ಸೂಕ್ಷ್ಮಾಂಶದ ಅಸ್ತಿತ್ವವಾಗಿರುವುದರಿಂದ ಅದು ಜಡವಸ್ತುವಿನಂತೆ ಭೌತಜಗತ್ತಿನಂತೆ ಇಂದ್ರಿಯಗ್ರಾಹ್ಯವಾಗುವುದಿಲ್ಲ.

ಈ ಚಿತ್ತ ಅಥವಾ ಮನಸ್ಸನ್ನು ಕುರಿತು ಶ್ರೇಷ್ಠ ನರಶಾಸ್ತ್ರಜ್ಞನಾದ ಚಾರ್ಲ್ಸ್ ಎಡಿಂಗ್‌ಟನ್ನ್‌ನು ಆಧುನಿಕ ನರಶಾಸ್ತ್ರದ ದೃಷ್ಟಿಯಿಂದ ಹೀಗೆ ತಿಳಿಸಿದ್ದಾನೆ : 'ಚಿತ್ತವು ಇಂದ್ರಿಯದ ಅವಧಾರಣೆಯನ್ನು ಅವಲಂಬಿಸದೆ ಉಳಿಯುತ್ತದೆ, ಅಷ್ಟೇಕೆ ಅದಿಲ್ಲದೆಯೇ ಅದು ಸ್ಥಿರವಾಗಿ ಉಳಿಯುತ್ತದೆ.'

ಚಿತ್ತದ ಬಗೆಗೆ ಷೆರಿಂಗ್‌ಟನ್ನನು ಹೇಳಿದ ಮಾತಿಗೆ ಅನುಗುಣವಾಗಿಯೇ ಶ್ರೇಷ್ಠಮಟ್ಟದ ಗಣಿತ-ಭೌತಶಾಸ್ತ್ರಜ್ಞನಾದ ಎಡಿಂಗ್‌ಟನ್ನನು ಸಹ ವಸ್ತುವನ್ನು ಕುರಿತಂತೆ ಆಧುನಿಕ ಭೌತಶಾಸ್ತ್ರದ ದೃಷ್ಟಿಯಿಂದ ಹೀಗೆ ತಿಳಿಸಿದ್ದಾನೆ : "ಅನುಭವದಲ್ಲಿ ಪ್ರಜ್ಞೆಯೇ ನೇರವಾಗಿ ತಿಳಿದುಬರುವ ವಸ್ತು ವಾಗಿರುತ್ತದೆ. (ಸಾಕ್ಷಾತ್ ಅಪರೋಕ್ಷ ವಸ್ತುವಾಗಿರುತ್ತದೆ.) ಮಿಕ್ಕಿದ್ದೆಲ್ಲಾ ದೂರದ ಅನುಮಿತಿ."

ಈ ಚಿತ್ತಾಕಾಶವು ಇನ್ನೂ ದೃಕ್ ಮತ್ತು ದೃಶ್ಯದ, ದರ್ಶಕ ಹಾಗೂ ದರ್ಶನದ ಭೇದಾಂಶವನ್ನು ಒಳಗೊಂಡಿರುತ್ತದೆ. ಆದ್ದರಿಂದ ಅದು ಇನ್ನೂ ಹೆಚ್ಚಿನ ಗಹನವಾದ ಅನ್ವೇಷಣೆಯನ್ನು ಪ್ರಚೋದಿಸು ತ್ತದೆ. ಈ ಭೇದವು ಅಂತಿಮವಾಗಿ ಚಿದಾಕಾಶದಿಂದ ಕಾರ್ಯ-ಕಾರಣ ರಹಿತವಾಗಿ ದರ್ಶಿಸಲ್ಪಡುವ ಚಿತ್ತಿನ ಬಯಲು ಅಥವಾ ಚಿದಾಕಾಶ ಅಥವಾ ಶುದ್ಧಚೈತನ್ಯದಲ್ಲಿ ನಿವಾರಿತವಾಗುತ್ತದೆ.

ವೇದಾಂತವು (ದೃಕ್ ದೃಶ್ಯವಿವೇಕ—ದ್ರಷ್ಟಾರ ಹಾಗೂ ದೃಶ್ಯದ ನಡುವೆ ಇರುವ ವ್ಯತ್ಯಾಸ : (ಶ್ಲೋಕಗಳು ೧ ಮತ್ತು ೩೦) ನಿಜವಾದ ದೃಕ್ ಅಥವಾ ಆತ್ಮನ ಅನ್ವೇಷಣೆ ಮತ್ತು ಸಂಶೋಧನೆಯನ್ನು ಎರಡು ಪ್ರಸಿದ್ಧ ಶ್ಲೋಕಗಳಲ್ಲಿ ವಿವರಿಸುತ್ತದೆ :

ರೂಪಂ ದೃಶ್ಯಂ ಲೋಚನಂ ದೃಕ್, ತತ್ ದೃಶ್ಯಂ ದೃಕ್ ತು ಮಾನಸಮ್ ।
ದೃಶ್ಯಾ ಧೀವೃತ್ತಯಃ, ಸಾಕ್ಷೀ ದೃಗೇವ ನ ತು ದೃಶ್ಯತೇ ॥

*ರೂಪವು ದೃಶ್ಯವಾದರೆ ನಯನವು ದೃಕ್ (ದ್ರಷ್ಟಾರ) ಆಗುತ್ತದೆ. ನಯನವು ದೃಶ್ಯವಾದರೆ*

*ಆಗ ಮನಸ್ಸು ದೃಕ್ ಆಗುತ್ತದೆ; ಮನಸ್ಸಿನ ವೃತ್ತಿಗಳೇ(ಸ್ಪಂದನಗಳ್), ದೃಶ್ಯವಾದಾಗ ಸಾಕ್ಷಿಯು ಅಂದರೆ (ಇವುಗಳ) ಆತ್ಮವೇ ದೃಕ್ ಆಗುತ್ತದೆ. ಅದು ಯಾವಾಗಲೂ ದೃಕ್ಕೆ ಆಗಿರುತ್ತದೆ. (ಅದು ಸ್ವಪ್ರಕಾಶವಾಗಿರುವುದರಿಂದ) ಎಂದಿಗೂ ದೃಶ್ಯವಾಗುವುದಿಲ್ಲ.*

ದೇಹಾಭಿಮಾನೇ ಗಲಿತೇ ವಿಜ್ಞಾತೇ ಪರಮಾತ್ಮನಿ ।
ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಸಮಾಧಯಃ ॥

*ಯಾವಾಗ ದೇಹಾಭಿಮಾನವು ಕರಗುವುದೋ ಆಗ ಪರಮಾತ್ಮ ತತ್ತ್ವದ ಅರಿವಾಗುವುದು. ಆಗ ಎಲ್ಲೆಲ್ಲಿ ಮನಸ್ಸು ಚಲಿಸುತ್ತದೋ ಅಲ್ಲೆಲ್ಲಾ ಸಮಾಧಿಯ ಅನುಭವವಾಗುತ್ತದೆ.*

ಹೀಗೆ ವೇದಾಂತವು ಅದರ ಮೂಲಭೂತವಾದ ಅಂಶದಲ್ಲಿ ಸಂಪೂರ್ಣ ಚೈತನ್ಯವನ್ನಾಗಿಯೇ ಈ ವಿಶ್ವವನ್ನು ನಮ್ಮ ಮುಂದಿಡುತ್ತದೆ. ಅದು ವಿಶ್ವವನ್ನಾಗಲೀ ಅಥವಾ ಅದರ ವಸ್ತುಗಳನ್ನಾಗಲಿ ವಿನಾಶ ಮಾಡುವುದಿಲ್ಲ, ಆದರೆ ಅವೆರಡರ ನೈಜಸ್ವರೂಪವನ್ನು ಪ್ರಕಾಶಪಡಿಸುತ್ತದೆ. ಹಾಗೆಯೇ ಆಧುನಿಕ ಕ್ವಾಂಟಂ ಸಿದ್ಧಾಂತ ಮತ್ತು ಸಾಪೇಕ್ಷ ಭೌತಶಾಸ್ತ್ರವು ಪ್ರಪಂಚವು ಒಂದು ಶಕ್ತಿಯ ಸಾಗರವೆಂದು ನಿರೂಪಿಸಿ ಭೌತಪ್ರಪಂಚದ ಸ್ಥಿರವೆನಿಸಿದ ವಸ್ತುಗಳನ್ನು ನಾಶಮಾಡುವುದಿಲ್ಲ. ಸಾಂಪ್ರದಾಯಿಕ ಭೌತಶಾಸ್ತ್ರವು ನಿರ್ದೇಶಿಸುವ ಸ್ಥಿರವಾದ, ಪರಿಚಿತವಾದ ಜಗತ್ತು ಕ್ವಾಂಟಂ ಮತ್ತು ಸಾಪೇಕ್ಷತಾ ಭೌತಶಾಸ್ತ್ರವು ನಿರ್ದೇಶಿಸುವ ಜಗತ್ತಿನ ಸೀಮಿತರೂಪ ಎಂದು ಪ್ರತಿಪಾದಿಸುತ್ತದೆ. ಜ್ಞಾನವು ನಾಶ ಮಾಡುವುದಿಲ್ಲ, ಆದರೆ ಅನಾವರಣ ಮಾಡುತ್ತದೆ ಎನ್ನುತ್ತದೆ ವೇದಾಂತ. ಭೌತಶಾಸ್ತ್ರವು 'ದ್ರವ್ಯ'ವನ್ನು 'ದ್ರವ್ಯಸತ್ತಾವಾದ'ವೆಂಬ ಮತೀಯ ಕಲ್ಪನೆಯಿಂದ ಪ್ರತ್ಯೇಕಿಸಿದಾಗ, ತನ್ನ ಅಧ್ಯಯನದ ವಿಷಯವಾದ ಭೌತಿಕ ಪ್ರಪಂಚವು ತನ್ನ ನಿಜಸ್ವರೂಪವಾದ ಶುದ್ಧಚೈತನ್ಯವನ್ನು ಪ್ರಕಾಶಪಡಿಸುತ್ತದೆ—ಎಂದು ವೇದಾಂತ ಹೇಳುತ್ತದೆ. ಥಾಮಸ್ ಹಕ್ಸ್ಲೀಯು ಹೇಳುವಂತೆ ದ್ರವ್ಯವಸ್ತುವಾದವು ಭೌತವಿಜ್ಞಾನದ ಕ್ಷೇತ್ರಕ್ಕೆ ಮಧ್ಯ ಪ್ರವೇಶಿಗ. ದ್ರವ್ಯವಾದರೋ ಅದಕ್ಕೆ ಕಾರ್ಯೋಪಯೋಗಿಯಾದ ಭಾವನೆ.

ನಾವು ನೋಡುವ ಹಾಗೂ ತಿಳಿದಿರುವ ಭೌತಿಕ ವಿಶ್ವವನ್ನು ನಾವು ಎಂದೂ ಅನುಭವಿಸಲಾರೆವು. ಹಾಗೆಯೇ ನಾವು ಅನುಭವಿಸುವ ಚೈತನ್ಯವನ್ನು ನಾವು ಎಂದೂ ವೀಕ್ಷಿಸಲಾರೆವು ಹಾಗೂ ತಿಳಿಯಲಾರೆವು. ವೇದಾಂತವು ದರ್ಶನದಂತೆ ಅರಿವು ಮತ್ತು ಅನುಭವವನ್ನು ಜೊತೆಗೂಡಿಸುತ್ತದೆ. ಅದೇ ವಿವೇಕದ ಅರ್ಥ. ಪಾಶ್ಚಾತ್ಯ ಚಿಂತಕರು ಮಾಡುವ ಆರೋಪವೆಂದರೆ ವೇದಾಂತವೆಂಬುದು ತತ್ತ್ವಶಾಸ್ತ್ರವಲ್ಲವೇ ಅಲ್ಲ. ಅದು ಕೇವಲ ಮತಧರ್ಮವೆಂಬುದು ಈ ದೃಷ್ಟಿಯಿಂದ ನಿಜ. ನಿಶ್ಚಯವಾಗಿಯೂ ವೇದಾಂತವು ಕೇವಲ ತಾರ್ಕಿಕ ಕಾರಣವನ್ನವಲಂಬಿಸಿರುವ ಊಹಾತ್ಮಕ ತತ್ತ್ವಜ್ಞಾನವಲ್ಲ, ಅದು ಸತ್ಯದ ಅನುಭವಕ್ಕೇ ಒತ್ತುಕೊಡುತ್ತದೆ. ಇದು ವೇದಾಂತಕ್ಕೆ ಧಾರ್ಮಿಕ ಸ್ವರೂಪವನ್ನು ನೀಡುತ್ತದೆ. ವೇದಾಂತವು ಸಂಪೂರ್ಣವಾಗಿ ಸೀಮಿತವಾಗಿರುವ ಮತ್ತು ಸೋಪಾಧಿಕವಾಗಿರುವ ಜಾಗ್ರದವಸ್ಥೆಯ ಅನುಭವದಿಂದ ಉದ್ಭವಿಸುವ ಊಹಾತ್ಮಕ ತರ್ಕದ ಮಿತಿಗಳನ್ನು ಗಮನಿಸುತ್ತದೆ. ಅಸ್ತಿತ್ವದ ಭಾಗವನ್ನು ಮಾತ್ರ ಅಧ್ಯಯನ ಮಾಡುವ ಪಾಶ್ಚಾತ್ಯ ತತ್ತ್ವಶಾಸ್ತ್ರ ಹಾಗೂ ಸಾಂಪ್ರದಾಯಿಕ ಭೌತಶಾಸ್ತ್ರವು(ಅಸ್ತಿತ್ವದ) ಅನಾತ್ಮದ ಅಂಶವನ್ನು ಮಾತ್ರವೇ ವ್ಯಕ್ತಪಡಿಸುತ್ತದೆ. ಆದರೆ ಪಾಶ್ಚಾತ್ಯ ನಿಗೂಢ ಮನಶ್ಶಾಸ್ತ್ರವು ಹಾಗೂ ಇಪ್ಪತ್ತನೆ ಶತಕದ ಭೌತಶಾಸ್ತ್ರವು ಅಖಂಡ ಅಸ್ತಿತ್ವದ ಸೂಕ್ಷ್ಮ ಆಯಾಮವನ್ನು ಅಂದರೆ ಸ್ವಪ್ನದ ಸ್ಥಿತಿಯಲ್ಲಿ ಗೋಚರಿಸುವ ಆತ್ಮವಿಷಯಕ ಅಂಶವನ್ನು ಸ್ಪರ್ಶಿಸಿದೆ. ಸ್ವಪ್ನಸ್ಥಿತಿಯು ದೃಕ್ ಮತ್ತು ದೃಶ್ಯ ಇವು ಒಂದೇ ಚಿತ್ತವೋ ಎಂಬಂತೆ ಪ್ರಕಟಪಡಿಸುತ್ತದೆ. ಆದರೆ ಅದು ತಿಳಿದುಬರುವುದು ಜಾಗ್ರದವಸ್ಥೆಗೆ ಬಂದಮೇಲೆ ; ಸ್ವಪ್ನಾವಸ್ಥೆಯಲ್ಲಾದರೂ ಜಾಗ್ರದವಸ್ಥೆ

ಯಲ್ಲಿಯಂತೆಯೇ ದೃಗ-ದೃಶ್ಯ ಭೇದಗಳು ಮುಂದುವರಿಯುತ್ತದೆ. ಸುಷುಪ್ತಿಯ ಸ್ಥಿತಿಯಲ್ಲಿ ಎಲ್ಲ ದೃಶ್ಯವಸ್ತುಗಳೂ ಶೂನ್ಯದಲ್ಲಿ ಅದೃಶ್ಯವಾಗುತ್ತವೆ. ಹಾಗೂ ಜಾಗ್ರದವಸ್ಥೆಯಲ್ಲಿ ಮತ್ತೆ ತೋರುತ್ತವೆ. ವೇದಾಂತವು ಏನೇನೂ ಇಲ್ಲದ ಈ ಸ್ಥಿತಿಯನ್ನು ಎಲ್ಲಾ ದೃಶ್ಯವಸ್ತುಗಳ ಐಕ್ಯವೆಂದೂ ಎಲ್ಲ ಜಾಗ್ರದವಸ್ಥೆಯ ಮತ್ತು ಸ್ವಾಪ್ನಿಕ ಚಿತ್ರಣಗಳ ಐಕ್ಯವೆಂದೂ ತಿಳಿಸುತ್ತದೆ. ಇದೇ ಆತ್ಮನ ಆತ್ಯಂತಿಕ ಸತ್ಯ. ಇದು ನೂತನ ಜಾಗ್ರದವಸ್ಥೆಯಲ್ಲಿ ಅಂದರೆ ನಾಲ್ಕನೆಯದೆನಿಸುವ ತುರೀಯವೆಂದು ಕರೆಯಲ್ಪಡುವ ಇಂದ್ರಿಯಾತೀತ ಸ್ಥಿತಿಯಲ್ಲಿ ಅನುಭವಕ್ಕೆ ಬರುತ್ತದೆ.

ಇದರ ನಿಜಸ್ವರೂಪವನ್ನರಿಯಲು ಕೇವಲ ಉಹಾತ್ಮಕವಾದದ್ದಾಗದೆ, ಮನುಷ್ಯನಿಗೆ ನಿಚ್ಚಳವಾದ ವೈಚಾರಿಕ ಬಲದ ಜೊತೆಯಲ್ಲೇ ಪವಿತ್ರತಮವಾದ ಶ್ರದ್ಧಾಬಲದ ಅಗತ್ಯವಿದೆ. ಈ ಗಹನವಾದ ಸ್ತರದಲ್ಲಿ ಶ್ರದ್ಧೆ ಮತ್ತು ಯುಕ್ತಿ, ಶುದ್ಧ ಧರ್ಮ ಹಾಗೂ ಪರಿಶುದ್ಧ ವಿಜ್ಞಾನವು ಒಂದಾಗುತ್ತವೆ. ಸನಿಹಕ್ಕೆ ಬರುತ್ತವೆ. ಸತ್ಯದ ಸಂಪೂರ್ಣ ಅರಿವಿಗೆ ಮತ್ತು ಜೀವನದ ಪರಿಪೂರ್ಣತೆಗೆ ಮಾನವನಿಗೆ ಇವೆರಡೂ ಅತ್ಯಗತ್ಯ. ಪ್ರೊ. ಕಾಫ್ರಾನ ಮಾತಿನಲ್ಲಿ ಹೇಳುವುದಾದರೆ (ಪೂರ್ವೋಕ್ತ ಪು. ೩೦೬) :

*ಆಧುನಿಕ ಭೌತವಿಜ್ಞಾನಿಯು ವೈಚಾರಿಕ ಮನಸ್ಸಿನ ಅತಿವಿಶಿಷ್ಟತೆಯ ಮೂಲಕ ಪ್ರಪಂಚವನ್ನನುಭವಿಸುತ್ತಾನೆ. ಅನುಭಾವಿಯು ಅತಿವಿಶಿಷ್ಟವೆನಿಸಿದ ಅಂತರ್ದೃಷ್ಟಿಯ ಮನಸ್ಸಿನ ಮೂಲಕ ಅನುಭವಿಸುತ್ತಾನೆ. ಈ ಮಾರ್ಗಗಳೆರಡೂ ಸಂಪೂರ್ಣವಾಗಿ ಬೇರೆ ಮತ್ತು ಭೌತಿಕಪ್ರಪಂಚದ ಬಗೆಗೆ ಒಂದು ನಿಶ್ಚಿತ ಅಭಿಪ್ರಾಯಕ್ಕಿಂತಲೂ ಮಿಗಿಲಾದದ್ದನ್ನು ಒಳಗೊಂಡಿವೆ. ಏನೇ ಇರಲಿ ; ಭೌತವಿಚಾರದಲ್ಲಿ ನಾವು ಹೇಳಲು ಕಲಿತಿರುವಂತೆ ಅವೆರಡೂ ಪೂರಕಗಳಾಗಿವೆ. ಅವೆರಡರಲ್ಲಿ ಯಾವುದೂ ಮತ್ತೊಂದನ್ನು ಒಳಗೊಂಡಿಲ್ಲ, ಒಂದನ್ನು ಮತ್ತೊಂದಾಗಿ ರೂಪಾಂತರಗೊಳಿಸಲು ಸಾಧ್ಯವಿಲ್ಲ. ಆದರೆ ಪ್ರಪಂಚದ ಅತಿಶಯಜ್ಞಾನಕ್ಕೆ ಪರಸ್ಪರ ಪೂರಕಗಳಾಗಿರುವ ಅವೆರಡೂ ಆವಶ್ಯಕ. ಚೀನಾ ದೇಶದ ಪ್ರಾಚೀನ ನಾಣ್ಣುಡಿಯ ಮೂಲಕ ತಿಳಿಸುವುದಾದರೆ, ಅನುಭಾವಿಗಳು ಟಾವೋವಿನ ಬೇರುಗಳನ್ನು ಗ್ರಹಿಸಿಕೊಳ್ಳುವರು, ಅದರ ಶಾಖೆಗಳನ್ನಲ್ಲ. ವಿಜ್ಞಾನಿಗಳು ಅದರ ಶಾಖೆಗಳನ್ನು ಗ್ರಹಿಸಿಕೊಳ್ಳುವರು, ಬೇರುಗಳನ್ನಲ್ಲ. ವಿಜ್ಞಾನಕ್ಕೆ ಅನುಭಾವದ ಅಗತ್ಯವಿರದು ಹಾಗೂ ಅನುಭಾವಕ್ಕೆ ವಿಜ್ಞಾನದ ಅಗತ್ಯವಿರದು ; ಆದರೆ ಮಾನವನಿಗೆ ಅವೆರಡೂ ಅತ್ಯಗತ್ಯ.*

## ೨೦. ಶ್ರುತಿಯು ಆಪ್ತವಾಕ್ಯ

ಧರ್ಮಕ್ಕೆ ಸಂಬಂಧಿಸಿದಂತೆ ಅದೃಶ್ಯದಲ್ಲಿ ಅಂತಹ ಶ್ರದ್ಧೆಯ ಪ್ರಮಾಣ ಮತ್ತು ಪ್ರಯೋಜನದ ಬಗೆಗೆ ಮತ್ತೊಂದು ವಿಚಾರವಿದೆ. ಇಂದ್ರಿಯಪ್ರಪಂಚಕ್ಕೆ ಅತೀತವಾದುದ್ದನ್ನು ಅನುಭವಿಸಿದ ಜನರು ಇದ್ದರು, ಈಗಲೂ ಇದ್ದಾರೆ. ಅವರು ಆತ್ಮನನ್ನು, ಪರಮಾತ್ಮನನ್ನು, ಎಲ್ಲರ ಆತ್ಮ ಒಂದೇ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. 'ನಿರ್ವಿಕಲ್ಪೋ ಹ್ಯಯಂ ದೃಷ್ಟಃ ಪ್ರಪಂಚೋಪಶಮಂ ಅದ್ವಯಃ'. ಮಾಂಡೂಕ್ಯ ಕಾರಿಕೆಯು ಪ್ರತಿಪಾದಿಸುವಂತೆ (೨.೩೫) ಸತತವೂ ಪರಿವರ್ತನೆಯುಳ್ಳ ಪ್ರಪಂಚವು ಕರಗಿಹೋಗುವ ನಿರ್ವಿಕಲ್ಪವಾದ ಈ ಅದ್ವಯ (ದ್ವೈತವಲ್ಲದ) ಸತ್ಯವು ಅನುಭವಿಸಲ್ಪಟ್ಟಿದೆ. ವೇದಾಂತ ಮತ್ತು ಬೌದ್ಧಮತದ ಪರಿಭಾಷೆಯಲ್ಲಿ ಲೋಕೋತ್ತರ ಎನಿಸಿಕೊಳ್ಳುವ ಅಂದರೆ ಲೋಕಕ್ಕತೀತವಾದ ಅನಿತ್ಯ ಹಾಗೂ ಸಾಪೇಕ್ಷಾತ್ಮಕ ಇಂದ್ರಿಯಪ್ರಪಂಚವನ್ನು ಮೀರಿದ ಸತ್ಯವನ್ನು ಅವರು ಅನುಭವಿಸಿದ್ದಾರೆ. ಈ ಅನುಭವಗಳ ದಾಖಲೆಗಳು ಉಳಿದ ಮಾನವಪ್ರಪಂಚಕ್ಕೆ ಪುಸ್ತಕರೂಪದಲ್ಲಿ ಭಾರತದಲ್ಲಿ ಉಪನಿಷತ್ತುಗಳಂತೆ ಮತ್ತು ಅದೇ ರೀತಿಯ ಗ್ರಂಥಗಳು ಬೇರೆ ದೇಶದಲ್ಲೂ ದೊರೆಯುತ್ತವೆ.

ಹೀಗೆ ಯಾರಾದರೂ ಈ ಅಭೀಪ್ಸೆಯನ್ನಿಟ್ಟುಕೊಂಡು ಮುಂದುವರೆಯುವುದಾದರೆ ಅವನ

ಹಿನ್ನೆಲೆಯಲ್ಲಿ ಅವನಿಗೆ ಎರಡು ಶಕ್ತಿಯ ಮೂಲಗಳಿರುತ್ತವೆ. ಮೊದಲನೆಯದಾಗಿ, ಸಾಮಾನ್ಯ ದೃಷ್ಟಿಯಲ್ಲಿ ವಿಶ್ವವು ಅರ್ಥಪೂರ್ಣವಾದುದೆಂಬ ಅರಿವು—ಅಂದರೆ ಅವನನ್ನು ಆವರಿಸಿರುವ ಇಂದ್ರಿಯ ಪ್ರಪಂಚದ ಹಿಂದೆ ಮತ್ತು ಈ ಜೈವಿಕ ಮನುಷ್ಯನ ಹಿಂದೆ ಅವನು ಅನ್ವೇಷಿಸಬೇಕಾದ ಗಹನವಾದ ಸತ್ಯಗಳಿವೆ. ಎರಡನೆಯದಾಗಿ, ಲೋಕೋತ್ತರವೆನಿಸಿದ ಜ್ಞಾನದ ಆ ಅನುಭವವನ್ನು ಈಗಾಗಲೇ ಸಮರ್ಥರಾದ ನೂರಾರು ಜನ ಸ್ತ್ರೀ-ಪುರುಷರು ಪರಿಶೋಧಿಸಿದ್ದಾರೆ. ಅವರು ಅದರಿಂದ ಗಳಿಸಿದ ಒಳನೋಟಗಳು ಇನ್ನುಳಿದ ಮಾನವತೆಯ ಮಾರ್ಗದರ್ಶನಕ್ಕಾಗಿ ಲಭಿಸುತ್ತಿವೆ. ಸವಾಲಾಗಿರುವ ಈ ಅಜ್ಞಾತ ಪ್ರದೇಶದ ವಿಶಿಷ್ಟಹಾದಿಯಲ್ಲಿ ಉಪಕ್ರಮಿಸುವ ಸಾಧಕನು ಆಧ್ಯಾತ್ಮಿಕ ಪಥವನ್ನು ಪ್ರಾರಂಭಿಸಿದ, ಮೊದಲಿನವರು ಗಳಿಸಿದ ಅಂತರ್ದರ್ಶನಗಳನ್ನು ನಂಬಬೇಕು. ವಿಶ್ವಾಸಾರ್ಹರೂ, ಸತ್ಯವಂತರೂ ಆದ ಅವರು ತಮ್ಮನ್ನು ಕುರುಡಾಗಿ ನಂಬಬೇಕೆಂದು, ತಮ್ಮನ್ನು ಅನುಸರಿಸಬೇಕೆಂದು ನಮಗೆ ಕರೆ ನೀಡುವುದಿಲ್ಲ. ಬದಲಾಗಿ ಪ್ರಪಂಚದ ಎಲ್ಲಾ ಧರ್ಮಗಳ ಶಾಸ್ತ್ರದಲ್ಲಿ ಒಳಗೊಂಡಿರುವ ಆಧ್ಯಾತ್ಮಿಕ ಒಳನೋಟಗಳನ್ನು ತಮ್ಮ ಸಂಶೋಧನೆಗಳ ಪ್ರಾರಂಭಿಕ ಹಂತಗಳಾಗಿ ಉಪಯೋಗಿಸಿಕೊಂಡು, ಅವುಗಳನ್ನು ತಾವೇ ಪ್ರಯೋಗಕ್ಕೆ ಒಳಪಡಿಸಿ ತಮ್ಮ ಅನುಭವದ ಮೂಲಕ ಪುನಃ ತಾಳೆ ನೋಡಬೇಕೆಂದು ಕರೆ ನೀಡುತ್ತಾರೆ. ಶ್ರುತಿ ಅಥವಾ ಉಪನಿಷತ್ತುಗಳನ್ನು ಆಪ್ತವಾಕ್ಯ ಎಂದು ಹಿಂದೂಗಳು ಕರೆಯುವುದರ ಔಚಿತ್ಯವಿರುವುದೇ ಇಲ್ಲಿ. ಮಾನವಕುಲದ ಅಂತಹ ಎಲ್ಲಾ ಪವಿತ್ರ ಗ್ರಂಥಗಳ ಮೌಲ್ಯ ಹಾಗೂ ಮಿತಿಗಳನ್ನು ಕುರಿತು ಶ್ರೀರಾಮಕೃಷ್ಣರು ಒಂದು ದೃಷ್ಟಾಂತದ ಮೂಲಕ ವಿನೋದಪೂರ್ವಕವಾಗಿ ತಿಳಿಸುತ್ತಾರೆ. "ವೇದಗಳು, ಬೈಬಲ್, ಖುರಾನ್ ಮುಂತಾದ ಪವಿತ್ರ ಗ್ರಂಥಗಳಲ್ಲಿ ಸತ್ಯ ಹಾಗೂ ದೇವರಿರುವುದಿಲ್ಲ. ಅವು ಸತ್ಯ ಅಥವಾ ದೇವರ ಬಗೆಗೆ ಮಾಹಿತಿಯನ್ನು ನೀಡುತ್ತವೆ. ಮಾನವನು ಸತ್ಯವನ್ನು ಅಥವಾ ದೇವರನ್ನು ಕಾಣಲು ತಾನೇ ಆ ವಿಷಯಗಳನ್ನು ಬಳಸಿಕೊಳ್ಳಬೇಕು. ಹಿಂದೂಗಳ ಪಂಚಾಂಗವು ಆ ವರ್ಷದಲ್ಲಿ ಮಳೆ ಬೀಳುವಿಕೆಯನ್ನು ಮುಂದಾಗಿಯೇ ತಿಳಿಸುತ್ತದೆ. ಆದರೆ ನೀನು ಆ ಪಂಚಾಂಗವನ್ನು ಹಿಂಡಿದರೆ ನೀರಿನ ಒಂದು ಹನಿಯನ್ನೂ ಪಡೆಯಲಾರೆ. ಅಂತೆಯೇ ಸತ್ಯ ಅಥವಾ ದೇವರ ದರ್ಶನವನ್ನು ಮಾಡಬೇಕಾದರೆ, ನೀನು ಹಿಂಡಬೇಕಾದ್ದು ಧರ್ಮಗ್ರಂಥಗಳನ್ನಲ್ಲ, ಬದಲಾಗಿ ನಿನ್ನ ಅನುಭವಗಳನ್ನು"—ಎಂದು ರಾಮಕೃಷ್ಣರು ಮುಗಿಸುತ್ತಾರೆ.

## ೨೧. ಶ್ರೀರಾಮಕೃಷ್ಣರ ಉದಾಹರಣೆ

ಆಧ್ಯಾತ್ಮಿಕ ಸಾಧನೆಯಲ್ಲಿ ಶ್ರದ್ಧೆಗಿರುವ ಸ್ಥಾನ ಇದೇ. ದಕ್ಷಿಣೇಶ್ವರದಲ್ಲಿ ಕಾಳಿ ದೇವಾಲಯದಲ್ಲಿ ಅರ್ಚಕರಾಗಿದ್ದು ಆಧ್ಯಾತ್ಮಿಕ ಸಾಧನೆಯನ್ನು ಆರಂಭಿಸಿದ ಶ್ರೀರಾಮಕೃಷ್ಣರು ಸಂಶಯ ಹಾಗೂ ಪ್ರಶ್ನೆಗಳ ಮೂಲಕ ಮುಂದುವರಿದರು.

'ತಾಯಿಯೇ, ಅಮ್ಮಾ, ನೀನು ನಿಜವಾಗಿಯೂ ಇದ್ದೀಯಾ ? ಗ್ರಂಥಗಳು ಮತ್ತು ಸಂತರು ವಿಶ್ವದ ಹಿನ್ನೆಲೆಯಲ್ಲಿರುವ ಶುದ್ಧಚೈತನ್ಯದ ಆನಂದಮಯವಾದ ದಿವ್ಯಶಕ್ತಿಯನ್ನೇ 'ನೀನು' ಎನ್ನುತ್ತಾರೆ. ಈ ನಿನ್ನ ಮೃಣ್ಮಯಮೂರ್ತಿಯಲ್ಲಿ—ಚಿನ್ಮಯಮೂರ್ತಿಯನ್ನು ಅಥವಾ ಪರಿಶುದ್ಧ ಚೈತನ್ಯದ ಸ್ವರೂಪವನ್ನು ಅರಿಯಲು ಪ್ರಯತ್ನಿಸಿರುವೆ. ನೀನು ಈ ಸ್ವರೂಪದಲ್ಲಿರುವೆಯಾ ? ಪರಿವರ್ತನಗೊಳ್ಳುತ್ತಿರುವ ಈ ಪ್ರಪಂಚದ ಹಿನ್ನೆಲೆಯಲ್ಲಿ ನೀನೊಬ್ಬಳೇ ನಿಜವಾಗಿಯೂ ದಿವ್ಯ ಸತ್ಯವಾಗಿಯೂ ನೆಲೆಸಿರುವೆಯಾ ? ದಯಮಾಡಿ ನಿನ್ನ ನಿಜಸ್ವರೂಪವನ್ನು ನನಗೆ ತೋರಿಸು. ನಾನು (ಬಲ್ಲವರಿಂದ) ಕೇಳಿದ್ದೇನೆ. ರಾಮಪ್ರಸಾದ ಕಮಲಾಕಾಂತ ಮುಂತಾದ ಸಂತಕವಿಗಳಿಗೆ ನೀನು ನಿನ್ನ ನಿಜಸ್ವರೂಪವನ್ನು ತೋರಿಸಿದ್ದೀಯೆ ಎಂದು ನಾನು ಕೇಳಿಬಲ್ಲೆ. ಹಾಗಿದ್ದ ಪಕ್ಷದಲ್ಲಿ, ನನಗೆ ನಿನ್ನ

ನಿಜಸ್ವರೂಪವನ್ನು ತೋರಿಸು. ನಾನು ನಿನ್ನ ಮಗುವಿನಂತೆ. ನೀನಲ್ಲದೆ ಮತ್ತಾರು ನನಗೆ ಮಾರ್ಗದರ್ಶನ ಮಾಡಿಸುವವರು ?'

ಈ ರೀತಿಯ ಸೃಜನಾತ್ಮಕ ಶ್ರದ್ಧೆಯು ಅದರ ಶುದ್ಧ ಮತ್ತು ಸ್ಪಷ್ಟ ಕಲ್ಪನೆಯೊಡನೆ ಸತ್ಯದ ಮೇಲಿರುವ ಅತ್ಯಧಿಕ ಪ್ರೇಮದಿಂದ ಸುಭದ್ರತೆಗೊಳಿಸಲ್ಪಟ್ಟಿರುವ ಮತ್ತು ಅದರ ಅನ್ವೇಷಣೆಯಲ್ಲಿ ಕ್ರಿಯಾತ್ಮಕ ಶಿಸ್ತನ್ನು ಅನುಷ್ಠಾನಿಸುವ ರಾಮಕೃಷ್ಣರ ರೂಪದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಆಧುನಿಕ ಜಗತ್ತಿನ ಒಬ್ಬ ಅತ್ಯದ್ಭುತ ವಿಜ್ಞಾನಿಯೊಬ್ಬನನ್ನು ನೀಡಿದೆ.

ರಾಮಕೃಷ್ಣರ ಈ ತೆರನಾದ ವಿಧಾನವು ಉಪನಿಷತ್ತುಗಳ ಕಾಲದಿಂದಲೂ ಭಾರತದೇಶದಲ್ಲಿ ಧರ್ಮದ ಪರಮ ಪ್ರಮಾಣೀಕೃತ ಸಂಪ್ರದಾಯ ಹಾಗೂ ಬುದ್ಧನಿಂದ ಆಧುನಿಕ ಕಾಲದವರೆಗೆ— ಇರುವುದನ್ನು ನಾವು ಕಾಣಬಹುದು. ಭಾರತೀಯ ಆಧ್ಯಾತ್ಮಿಕ ಸಂಪ್ರದಾಯದಲ್ಲಿ ಸಂಶಯದ ಪರಿಣಾಮವಾಗಿ ಮೂಡಿಬರುವ ಪ್ರಶ್ನೆ, ಪ್ರಶ್ನಿಸುವ ಮನೋಭಾವದ ಜೊತೆಯಲ್ಲೇ ತೇಜಸ್ವಿಯಾದ ಶ್ರದ್ಧೆಯ ಅಸ್ತಿತ್ವವನ್ನು ನೋಡಬಹುದು. ಅವರ ಶ್ರದ್ಧೆಯು ಸಂಪ್ರದಾಯವನ್ನು ಸುಮ್ಮನಾಗಿಸಲಿಲ್ಲ. ಆದರೆ ಅದನ್ನು ಅಧಿಕವಾಗಿ ಸೃಜನಶೀಲವನ್ನಾಗಿಸಿತು. ಮತ್ತು ತೀವ್ರಗೊಳಿಸಿತು. ಸಮಗ್ರ ಭೌತವಿಜ್ಞಾನದಲ್ಲಿ ಇದೇ ರೀತಿಯಲ್ಲಿ ಸಂಶಯದ ಪಾತ್ರವಿರುತ್ತದೆ. ಇದು ಭಾರತೀಯ ಸಂಪ್ರದಾಯದಲ್ಲಿರುವ ಬಾಂಧವ್ಯವನ್ನು ಮತ್ತು ಔದಾರ್ಯವನ್ನು ಆಧುನಿಕ ಭೌತವಿಜ್ಞಾನದ ಜೊತೆಯಲ್ಲೇ ವಿವರಿಸುತ್ತದೆ.

### ೨೨. ನಂಬುವ ಮನಸ್ಸು ಮತ್ತು ನಂಬದ ಮನ ಇವುಗಳಿಗಿರುವ ಸಂಘರ್ಷ

ಶ್ರದ್ಧೆಯೇ ಆಧಾರವಾಗಿರುವ ಸಂಶಯವು ಕ್ರಿಯಾತ್ಮಕವಾಗಿರುತ್ತದೆ. ಅಂತಹ ಸಂಶಯವು ಆರೋಗ್ಯಕರ ಮತ್ತು ಅತ್ಯವಶ್ಯಕ, ಆದರೆ ಕೇವಲ ಸಂಶಯವು ಅತಿಯಾದದ್ದಾದರೆ ಅದು ಕೆಟ್ಟದ್ದು. ಅತ್ಯಧಿಕವಾಗಿ ನಂಬುವ ಪ್ರವೃತ್ತಿ ಕೆಟ್ಟದ್ದಾದರೆ ಅಂತೆಯೇ ಅತ್ಯಧಿಕವಾದ ಸಂಶಯಪಡುವುದು ಮತ್ತು ಅಪನಂಬಿಕೆಯು ಅಷ್ಟೇ ಕೆಟ್ಟದು. ಆಧುನಿಕರಲ್ಲಿ ನಮ್ಮಲ್ಲಿ ಅನೇಕರು ಈ ತೆರನಾದ ಅಪನಂಬಿಕೆಯ ಪ್ರವೃತ್ತಿಯನ್ನು ಅನಾರೋಗ್ಯಕರವಾದ ಮಟ್ಟದವರೆಗೆ ಬೆಳೆಸಿಕೊಂಡಿದ್ದಾರೆ. ನಮ್ಮ ಸಂಪ್ರದಾಯದಲ್ಲಿ ಅನೇಕರು ಅನಾರೋಗ್ಯಕರಮಟ್ಟದವರೆಗೆ ನಂಬುವ ಪ್ರವೃತ್ತಿ ಉಳ್ಳವರಾಗಿದ್ದಾರೆ. ಮೊದಲನೆಯದರ ಅತಿರೇಕದ ಸ್ವರೂಪವೆಂದರೆ, ನಾನು ಮೊದಲೇ ಸಿನಿಕತನ ಎಂದು ಸೂಚಿಸಿದಂತೆ ಎರಡನೆಯದರ ಅತಿರೇಕವನ್ನು ಪೆದ್ದತನವೆಂದು ವಿವರಿಸಿದ್ದಾರೆ. ನೀವೊಬ್ಬ ಸಿನಿಕನಿಗೆ ಇಂತಹ ಮನುಷ್ಯ ಒಬ್ಬ ಪ್ರಾಮಾಣಿಕ ಎಂದು ಹೇಳಿ. ಅವನು ಕೂಡಲೇ ನಿರಾಕರಿಸುತ್ತಾನೆ. 'ಹೋ, ನಾನು ಅದನ್ನು ನಂಬುವುದಿಲ್ಲ, ನನಗೆ ಜನರ ಬಗ್ಗೆ ಹೆಚ್ಚು ಅನುಭವವಿದೆ. ಯಾರಾದರೂ ಪ್ರಾಮಾಣಿಕ ರಾಗಿರಬಲ್ಲರು ಎಂಬುದನ್ನು ನಾನು ನಂಬುವುದಿಲ್ಲ.' ಅಪನಂಬಿಕೆಯ ಸ್ವಭಾವದ ಈ ರೀತಿಯೇ ಸಿನಿಕತನದ ದಬ್ಬಾಳಿಕೆ. ಅದು ಆಧ್ಯಾತ್ಮಿಕ ಮರಣವನ್ನು ತೋರಿಸುತ್ತದೆ. ಅಂದರೆ ಸಿನಿಕತನವುಳ್ಳ ಯಾವನೂ ಭೌತವಿಜ್ಞಾನಿಯಾಗಲಾರ. ಅಥವಾ ಆಧ್ಯಾತ್ಮಿಕ ಅನ್ವೇಷಕನಾಗಲಿ ಬೋಧಕನಾಗಲಿ ಆಗಲಾರ. ಮಾನಸಿಕವ್ಯಾಧಿಯಾಗಿ ಇದು—ದೌಹಿಕ ರೋಗಗಳಾದ ಕಾಲರ, ಸಿಡುಬು, ಕುಷ್ಠ ಮತ್ತಿತರ ತೀವ್ರರೋಗ ಮುಂತಾದವುಕ್ಕಿಂತಲೂ ಭಯಾನಕವಾದುದು. ಅದು ಸೃಜನಶೀಲತೆಯ ಸಾವನ್ನು ಸಾರುತ್ತದೆ. ಅದು ಮನುಷ್ಯನ ಆಂತರಿಕ ಬಡತನವನ್ನು ತಿಳಿಸುತ್ತದೆ. ಅಂತಹ ವ್ಯಕ್ತಿಯು ಯಾವುದೇ ನೂತನ ತತ್ತ್ವವನ್ನು ಆವಿಷ್ಕರಿಸಲಾರ. ಅವನು ಜೀವನದಲ್ಲಿ ಯಾವುದೇ ಮೌಲ್ಯಗಳನ್ನು ಅನುಭವಿಸಲಾರ. ಅಂತಹ ವಿಶಿಷ್ಟವ್ಯಕ್ತಿಯಲ್ಲಿ ಸತ್ಯ ಮತ್ತು ಅದರ ಅರ್ಥವನ್ನು ಅರಿಯಬಯಸುವ ಪ್ರಚೋದನೆಯೇ ಬತ್ತಿಹೋಗಿರುತ್ತದೆ. ಈ ರೀತಿಯಾದ ಅನ್ವೇಷಣೆಯ ಪ್ರಚೋದನೆ, ಅದರ

ಹಿನ್ನೆಲೆಯಲ್ಲಿರುವ ಶ್ರದ್ಧೆಯೇ ವಿಜ್ಞಾನ ಮತ್ತು ಧರ್ಮದ ಪ್ರಮುಖ ಪ್ರಾಣಶಕ್ತಿಗಳಾಗಿವೆ. ೧೯೨೯ರ ಸರಸ್ವತಿ ಭಾಷಣದಲ್ಲಿನ ಸರ್ ಆರ್ಥರ್ ಎಡಿಂಗ್‌ಟನ್ ಹೀಗೆ ಹೇಳುತ್ತಾರೆ (*Science and the unseen world*, p. ೫೪) : ವೈಚಾರಿಕ ಅನ್ವೇಷಣೆಯನ್ನು ಮುಂದಿಡದೆ ಇರುವವರೆಗೂ, ನೀವು ವಿಜ್ಞಾನ ಇಲ್ಲವೆ ಧರ್ಮದ ನೈಜ ಸತ್ಯವನ್ನು ಅರಿಯಲಾರಿರಿ."

## ೨೫. ಶ್ರದ್ಧೆ ಮತ್ತು ಮೀನು ಹಿಡಿಯುವ ದೃಷ್ಟಾಂತ ಕಥೆ

ಶ್ರೀರಾಮಕೃಷ್ಣರು ಈ ಸತ್ಯವನ್ನು ಮತ್ತು ಎಲ್ಲ ಧರ್ಮಗಳ ಧ್ಯಾನದ ತಂತ್ರವನ್ನು ಮೀನು ಹಿಡಿಯುವ ಉದಾಹರಣೆಯ ಮೂಲಕ ವಿವರಿಸುತ್ತಾರೆ. ನಾವು ಮೀನು ಹಿಡಿಯಬಯಸುವುದಾದರೆ, ಏನು ಮಾಡುತ್ತೇವೆ ? ಮೀನು ಹಿಡಿಯುವ ಗಾಳವನ್ನು ಮತ್ತು ದಾರವನ್ನು ತೆಗೆದುಕೊಳ್ಳುತ್ತೇವೆ. ಅದರ ಕೊಂಡಿಗೆ ಆಕರ್ಷಕವಾದ ವಸ್ತುವನ್ನು ಸಿಕ್ಕಿಸುತ್ತೇವೆ, ಕೊಳಕ್ಕೆ ಹೋಗುತ್ತೇವೆ, ಮತ್ತು ತಿಂಡಿಯಿರುವ ದಾರವನ್ನು ಕೊಳದೊಳಕ್ಕೆ ಎಸೆಯುತ್ತೇವೆ. ನಂತರ ನಾವು ಗಮನಿಸುತ್ತಾ ಶಾಂತವಾಗಿ ಕುಳಿತಿರುತ್ತೇವೆ. ನಾವು ವಾಸ್ತವವಾಗಿ ಆ ಕೊಳದಲ್ಲಿ ಯಾವುದೇ ಮೀನನ್ನು ನಿಜಕ್ಕೂ ನೋಡಿಲ್ಲದಿರಬಹುದು. ಆದರೆ ನಾವು ಬೇರೆಯವರು ಅಲ್ಲಿ ಮೀನನ್ನು ಹಿಡಿದಿದ್ದಾರೆ ಎಂಬುದನ್ನು ಕೇಳಿರುವುದರಿಂದ ಕೊಳದಲ್ಲಿ ಮೀನಿದೆ ಎಂಬ ದೃಢ ನಂಬಿಕೆ ನಮಗಿದೆ. ಕೆಲವು ವೇಳೆ ಬಹಳ ಕಾಲದವರೆಗೆ ನಾವು ಅಲ್ಲಿ ಕುಳಿತುಕೊಳ್ಳಬೇಕಾಗಬಹುದು. ಒಂದೆರಡು ಘಂಟೆಗಳ ತರುವಾಯ ಮೀನನ್ನು ಹಿಡಿಯಲು ನಮಗಾಗದಿದ್ದರೂ ಆ ಕೊಳದಲ್ಲಿ ಮೀನಿಲ್ಲ ಎಂದು ನಾವು ತೀರ್ಮಾನಿಸುವುದಿಲ್ಲ. ಈ ಮುನ್ನ ಸೂಚಿಸಿರುವ ಉಪನಿಷತ್ತಿನ ಆಗ್ರಹಪೂರ್ವಕವಾದ 'ಶ್ರದ್ಧಸ್ವ ಸೌಮ್ಯ', ಸೌಮ್ಯನೇ ಶ್ರದ್ಧೆಯಿಡು' ಎಂಬ ಮಾತಿಗೆ ಕಿವಿಗೊಟ್ಟು, ಮರುದಿನ ಬರುತ್ತೇವೆ. ನಾವು ಯಾವುದೇ ಮೀನನ್ನು ಹಿಡಿಯದಿರಬಹುದು. ಆದರೆ ನಮ್ಮ ಪ್ರಯತ್ನವನ್ನು ಮುಂದುವರೆಸುತ್ತೇವೆ. ಈ ನಮ್ಮ ಪಟ್ಟುಬಿಡದ ಪ್ರಯತ್ನಗಳಿಗೆ ಯಾವುದು ಆಶ್ರಯವಾಗಿರುತ್ತದೆ? ಕೊಳದಲ್ಲಿ ಮೀನುಗಳಿವೆ ಎಂಬ ದೃಢ ನಂಬಿಕೆ.ಈ ಮೂಲಶ್ರದ್ಧೆಯು ನಮಗಿಂತ ಮುನ್ನ ಬಂದಿದ್ದವರು ಮೀನು ಹಿಡಿಯುವ ತಮ್ಮ ಪ್ರಯತ್ನಗಳಲ್ಲಿ ಯಶಸ್ವಿಯಾಗಿದ್ದರು ಎಂಬ ಜ್ಞಾನದಿಂದ ಮತ್ತಷ್ಟು ಬಲವಾಗುತ್ತದೆ. ಇದರ ಅಭಿಪ್ರಾಯವೇನೆಂದರೆ ಕೊಳದಲ್ಲಿ ಮೀನುಗಳಿವೆ, ನಾವು ಇನ್ನೂ ಯಾವುದನ್ನೂ ಹೊರತೆಗೆದಿಲ್ಲ, ನಾವು ದೃಢವಾಗಿ ಪ್ರಯತ್ನಿಸಿದರೆ ಜಯ ಸಾಧಿಸುತ್ತೇವೆ ; ಭೌತವಿಜ್ಞಾನ ಮತ್ತು ಧರ್ಮದಲ್ಲಿನ ಸತ್ಯದ ಎಲ್ಲಾ ಸಂಶೋಧನೆಯ ಹಿನ್ನೆಲೆಯಲ್ಲಿ ದೃಢವಾದ ಶ್ರದ್ಧೆಯಿಂದ ಸ್ಫೂರ್ತಿಗೊಂಡ ವಿಧಾಯಕ ಮನೋಭಾವ ಮತ್ತು ಪ್ರಯತ್ನ ಇರುತ್ತವೆ.

ಉಪನಿಷತ್ತಿನ ಋಷಿಗಳು ಈ ವರ್ಗಕ್ಕೆ ಸೇರಿದವರು. ಭಗವಂತನ ಸತ್ಯಸ್ವರೂಪಕ್ಕೋಸ್ಕರ ಮಾನವನಲ್ಲಿರುವ ಆತ್ಮದ ಸತ್ಯತೆಯನ್ನು ಕುರಿತು ಅವರು ಅನ್ವೇಷಣೆಯಲ್ಲಿ ದಿನಗಟ್ಟಲೆ, ವರ್ಷಾನುಗಟ್ಟಲೆ ಪಟ್ಟುಹಿಡಿದು ಮುಂದುವರೆದರು. ಅವರು ಮಾನವನಿಗೆ ಅಸಾಧ್ಯವಾದ ಎಲ್ಲಾ ಅಡಚಣೆಗಳನ್ನು ಎದುರಿಸಿದರು. ಅವರ ಇಂದ್ರಿಯಗಳನ್ನು ಶಿಸ್ತಿಗೊಳಪಡಿಸಿದರು. ಚಿತ್ತವನ್ನು ಪ್ರಶಾಂತಗೊಳಿಸಿದರು. ಅವೆರಡರ ಶಕ್ತಿಗಳನ್ನು ಕೇಂದ್ರೀಕರಿಸಿದರು. ಅವುಗಳನ್ನು ಅಂತರಂಗದ ಪ್ರಪಂಚದೊಳಗಡೆ ಪ್ರವೇಶಿಸುವಂತೆ ಮಾಡಿದರು. ತಮಗೂ ಹಾಗೂ ಮಾನವತೆಗೂ ಆನಂದ ತಂದಿದ್ದ ವೇದಾಂತ ಮತ್ತು ಬೌದ್ಧಮತದ ಮೂಲಕ ನಮಗೆ ಪ್ರಾಪ್ತ ವಾಗಿರುವ ವಿಶ್ವವ್ಯಾಪಿ ಆಧ್ಯಾತ್ಮಿಕ ತತ್ತ್ವಗಳನ್ನು ಎಲ್ಲರ ಅಭ್ಯುದಯಕ್ಕಾಗಿ ಕಂಡುಹಿಡಿದರು.

ರಾಮಕೃಷ್ಣರ ದೃಷ್ಟಾಂತ ಕಥೆಯನ್ನು ಮುಂದುವರಿಸುವುದಾದರೆ : ಬಹಳ ಹೊತ್ತು ಗಮನಿಸಿದ ನಂತರ ಗಾಳದ ತುದಿಯ ಬೆಂಡು ಅಲುಗಾಡುವುದು ತೋರುತ್ತದೆ. ಇದು ನಮಗೆ ಕಾಣಿಸುವ

ಭಾಗ. ಇದರಿಂದ ನೀರೊಳಗಡೆ ನಡೆಯುತ್ತಿರುವ ಕಾಣದ ಘಟನೆಗಳ ಬಗೆಗೆ ನಮಗೆ ಸೂಚನೆ ದೊರೆಯುತ್ತದೆ. ನಿಶ್ಚಯವಾಗಿಯೂ ಮೀನೊಂದು ಒಳಗಡೆಯಿರುವ ಆಹಾರವನ್ನು ಕಚ್ಚುತಿದೆ ಎಂದು ಗೊತ್ತಾಗುತ್ತದೆ. ಆದರೆ ಅದು ಕೂಡಲೇ ಹೊರಟುಹೋಗುತ್ತದೆ ಮತ್ತು ನಮ್ಮನ್ನು ಕಾಯುವಂತೆ ನಿರೀಕ್ಷಿಸುವಂತೆ ಮಾಡುತ್ತದೆ. ಇದರಿಂದಾಗಿ ನಮ್ಮಲ್ಲಿದ್ದ ಪ್ರಾರಂಭದ ಶ್ರದ್ಧೆಯು ಮತ್ತಷ್ಟು ದೃಢವಾಗುತ್ತದೆ. ಸ್ವಲ್ಪ ಸಮಯದ ನಂತರ ನಾವು ಬೆಂಡು ಅಲ್ಲಾಡುತ್ತಿರುವುದನ್ನು ಗಮನಿಸುತ್ತೇವೆ. ಗಾಳವನ್ನು ಎಳೆದಂತಾಗುತ್ತದೆ. ಆಗ ನಾವು ದೊಡ್ಡ ಮೀನು ಆಹಾರವನ್ನು ನುಂಗಿದೆ ಯೆಂದು ತೀರ್ಮಾನಿಸುತ್ತೇವೆ. ನಾವು ಕೊಂಡಿಯ ಸಮೇತ ದಾರವನ್ನು ಎಳೆಯುತ್ತೇವೆ. ಈಗ ನಮ್ಮ ಕೈಗೆ ಮೀನು ದೊರಕುತ್ತದೆ. ಆಧ್ಯಾತ್ಮಿಕ ಜೀವನದಲ್ಲಿ ಮನಸ್ಸೆಂಬ ಕೊಂಡಿಗೆ ನಾವು ಸಿಕ್ಕಿಸುವ ಆಹಾರವೆಂದರೆ ಭಗವತ್ಪ್ರೇಮ, ಪರಿಶುದ್ಧ ಚಾರಿತ್ರ್ಯ, ಭಗವಂತನ ಹಂಬಲದಲ್ಲಿ ಪ್ರಾಮಾಣಿಕತೆ ; ಇವು ಭಗವಂತನನ್ನು ಆಕರ್ಷಿಸುತ್ತವೆ.

ಸರ್ವೋತ್ಕೃಷ್ಟ ವಿಜ್ಞಾನವಾದ ಆಧ್ಯಾತ್ಮಿಕತೆಯ ಸುಮಧುರವಾದ ಫಲವನ್ನು ನೀಡಿದ ಪಥಪ್ರದರ್ಶಕ ಋಷಿಗಳ ಈ ಕ್ಲಿಷ್ಟವಾದ ಕಠಿಣತೆಯ ಸಾಧನ ವಿಧಾನವನ್ನು ವಿವರಿಸುತ್ತಾ ಗುರುವಾದ ಯಮನು ಶಿಷ್ಯನಾದ ಯುವ ನಚಿಕೇತನಿಗೆ ಕಠೋಪನಿಷತ್ತಿನ ಒಂದು ಸಂಕ್ಷಿಪ್ತ ಶ್ಲೋಕದಲ್ಲಿ ಹೀಗೆ ಹೇಳುತ್ತಾನೆ :

> ಪರಾಂಚಿ ಖಾನಿ ವ್ಯತೃಣಾತ್ ಸ್ವಯಂಭೂಃ ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ।
> ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುಃ ಅಮೃತತ್ವಮಿಚ್ಛನ್ ॥

"ಸ್ವಯಂಭೂ ಬಹಿರ್ಮುಖವಾದ ಇಂದ್ರಿಯಗಳನ್ನು ಹೊರಗೆ ಹೋಗುವಂತೆ ಮಾಡಿರುತ್ತಾನೆ. ಆದುದರಿಂದ ಮನುಷ್ಯನು ಹೊರಗೆ ನೋಡುತ್ತಾನೆ. (ಬಾಹ್ಯಪ್ರಪಂಚವನ್ನು ಅನುಭವಿಸುತ್ತಾನೆ.) ಆದರೆ, ಅಂತರಾತ್ಮನನ್ನು ನೋಡುವುದಿಲ್ಲ. ಯಾವನೋ ಒಬ್ಬ ಧೀರಸಾಧಕನು ಅಮೃತತ್ವವನ್ನು ಬಯಸುತ್ತಾ ಇಂದ್ರಿಯ ಸಮೂಹವನ್ನು ಹಿಂತಿರುಗಿಸಿ ಪ್ರತ್ಯಗಾತ್ಮನನ್ನು ನೋಡುತ್ತಾನೆ."

## ೨೪. ಶ್ರದ್ಧೆ ಮತ್ತು ದೃಢನಿಷ್ಠೆ

ಆಧ್ಯಾತ್ಮಲೋಕದಲ್ಲಿ ಸಿದ್ಧಿಯನ್ನು ಹೊಂದಲು ಅಗತ್ಯವಿರುವ ಧೈರ್ಯ ಮತ್ತು ದೃಢನಿಷ್ಠೆಗಳು ಭೌತವಿಜ್ಞಾನದ ಅನ್ವೇಷಣೆಯಲ್ಲಿಯೂ ಇರಬೇಕಾಗುವುದರ ಜೊತೆಗೆ ಅಲ್ಲಿಯೂ ಅಧ್ಯಾತ್ಮದಲ್ಲಿರುವಂತೆ ಸವಾಲುಗಳು, ಸೋಲುಗಳು ಮತ್ತು ನಿರಾಶೆಗಳು ಇರುವುದು ಸಹಜ. ಸಫಲವಾಗಿರುವ ವೈಜ್ಞಾನಿಕ ಅನ್ವೇಷಣೆಯು ಹಿಂದೆ ಅನೇಕ ಸೋಲುಗಳು ಮತ್ತು ನಿರಾಶೆಗಳು ಅಡಗಿರುತ್ತವೆ. ಪ್ರತ್ಯೇಕಗೊಳಿಸಿದ ರೇಡಿಯಂ ಅನ್ನು ಕಂಡುಹಿಡಿದ ಮೇಡಂ ಕ್ಯೂರಿ ಅವರನ್ನೇ ಉದಾಹರಣೆಗೆ ತೆಗೆದುಕೊಳ್ಳಿ. ಪರಿಣಾಮಕಾರಿಯಾದ ಆ ಸಂಶೋಧನೆಯ ಹಿಂದೆ, ಅಷ್ಟೇನೂ ಸಜ್ಜಾಗಿರದ ತೇವವಿರುವ ನೆಲಮಾಳಿಗೆಯಲ್ಲಿ ನಡೆಸುತ್ತಿದ್ದ ಪಿಚ್‌ಬ್ಲೆಂಡ್‌ನ ಸಂಶೋಧನೆಯಲ್ಲಿ ನಿರಾಶಾದಾಯಕ ವರ್ಷಾನುವರ್ಷಗಳು ಅಡಗಿವೆ. ಯಾವುದನ್ನು ಭಾರತವು ತಪಸ್ಸೆಂದು ಕರೆಯುತ್ತದೋ ಅಂತಹ ಹುಮ್ಮಸ್ಸಿನ ಅಥವಾ ಕಠೋರ ಶಿಸ್ತಿನ ಸತ್ಯಾನ್ವೇಷಣೆಯಲ್ಲಿ ಅವಳು ಶ್ರೇಷ್ಠ ವಿಜ್ಞಾನಿಯಾದ ತನ್ನ ಪತಿಯ ಪ್ರೋತ್ಸಾಹವನ್ನು ನೆರವನ್ನೂ ಪಡೆದಿದ್ದಳು. ಹೀಗೆ ಭೌತವಿಜ್ಞಾನ ಹಾಗೂ ಧರ್ಮವಿಜ್ಞಾನದ ತಪಸ್ಸು ಮತ್ತು ಸಾಧನಗಳು ಇವೆರಡರ ವಿಧಾನ, ಉತ್ಸಾಹ ಮತ್ತು ಮನೋಭಾವಗಳಲ್ಲೆಲ್ಲ ನಿಕಟವಾದ ಗುಣಸಾಮ್ಯವಿರುವುದನ್ನು ನಾವು ಕಾಣುತ್ತೇವೆ. ಎದೆಗುಂದದ ದೃಢಪ್ರಯತ್ನದ ಗುಣಸ್ವಭಾವವನ್ನುಳ್ಳ ಅಂತಹ ಎಲ್ಲ ತಪಸ್ಸಿನ ಬಗೆಗೆ ಗೌಡಪಾದರು ತಮ್ಮ ಮಾಂಡೂಕ್ಯಕಾರಿಕೆಯ ಪ್ರಸಿದ್ಧ ಪದ್ಯವೊಂದರಲ್ಲಿ ಪ್ರಸ್ತಾಪಿಸುತ್ತಾರೆ. (೩.೪೧)

ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣ್ಯೆಕಬಿಂದುನಾ ।
ಮನಸೋ ನಿಗ್ರಹಸ್ತದ್ವತ್ ಭವೇತ್ ಅಪರಿಖೇದತಃ ॥

*ಸಮುದ್ರವನ್ನು ಕುಶಾಗ್ರದಿಂದ ಒಂದೊಂದು ತೊಟ್ಟಾಗಿ ಎತ್ತಿಹಾಕುವುದು ಹೇಗೋ ಅದರಂತೆ ಬೇಸರವಿಲ್ಲದೆ ಮನಸ್ಸಿನ ನಿಗ್ರಹವಾಗುತ್ತವೆ.*

ಶುದ್ಧವಿಜ್ಞಾನ ಮತ್ತು ಧರ್ಮ ಇವೆರಡರ ಹಿಂದಿರುವ ಉತ್ಸಾಹವು ಒಂದೇ. ಅದೆಂದರೆ ಸತ್ಯಕ್ಕಾಗಿ ಪಟ್ಟುಬಿಡದ ಅನ್ವೇಷಣೆ ; ವ್ಯತ್ಯಾಸವಿರುವುದು ಕೇವಲ ಅನ್ವೇಷಣೆಯ ಕ್ಷೇತ್ರದಲ್ಲಿ ಮಾತ್ರ. ಭೌತವಿಜ್ಞಾನಿಗಳು ಇಂದ್ರಿಯಗಳಿಗೆ ನೆರವಾಗುವ ಸಾಧನೆಗಳ ಮೂಲಕ ಪಂಚೇಂದ್ರಿಯಗಳಿಂದ ವ್ಯಕ್ತವಾಗುವ ಪ್ರಪಂಚದಲ್ಲಿ ಭೌತವಿಶ್ವದಲ್ಲಿ ಸತ್ಯವನ್ನರಸುತ್ತಾರೆ. ಧರ್ಮಸಂಬಂಧಿ ವಿಜ್ಞಾನದ ಅನ್ವೇಷಕನು ತೈತ್ತಿರೀಯೋಪನಿಷತ್ ಹೇಳುವಂತೆ 'ಯತೋ ವಾಚೋ ನಿರ್ವತಂತೇ ಅಪ್ರಾಪ್ಯ ಮನಸಾ ಸಹ' ಎಲ್ಲಿ ಮಾತು ಮತ್ತು ಮನಸ್ಸು ಮುಟ್ಟಲಾರದೆ ಹಿಂತಿರುಗುತ್ತವೆಯೋ ಅದರಾಚೆ ಐದು ಇಂದ್ರಿಯಗಳು ವ್ಯಕ್ತಪಡಿಸದ ಪ್ರಪಂಚದಿಂದಾಚೆ ಅನುಭವದಲ್ಲಿ ನಿಹಿತವಾಗಿರುವ ಆ ಸತ್ಯಕೋಸ್ಕರ ಅರಸುತ್ತಾನೆ. ಆತ್ಮ ಮತ್ತು ದೇವರು ಈ ವರ್ಗಕ್ಕೆ ಸೇರುತ್ತವೆ. ಅದು ಉಪನಿಷತ್ತುಗಳ ಕಾಲದಿಂದ ಶ್ರೀರಾಮಕೃಷ್ಣರವರೆಗೆ ದೀರ್ಘಕಾಲದ ಪರೀಕ್ಷಾಪ್ರಯೋಗಗಳು ಮತ್ತು ತಾರ್ಕಣೆಗಳು ಇವುಗಳ ಫಲವಾಗಿ ಮೂಡಿದ ಭಾರತದ ಒಡಂಬಡಿಕೆಯಾಗಿದೆ.

## ೨೫. ವಿಜ್ಞಾನ ಮತ್ತು ಧರ್ಮದಲ್ಲಿ ಸತ್ಯವನ್ನರಸುವ ತಪಸ್ಸು

ಭಾರತದಲ್ಲಿ ಧರ್ಮದ ಕ್ಷೇತ್ರದಲ್ಲಿ ಮುಖ್ಯಪ್ರಶ್ನೆಯೆಂದರೆ ಮತ, ಪಂಥ ಮತ್ತು ಸಿದ್ಧಾಂತಗಳಲ್ಲಿ ನಂಬಿಕೆಯಿಡುವುದಷ್ಟೇ ಅಲ್ಲ. ಆದರೆ ಆತ್ಮದ ಸತ್ಯತೆಯನ್ನು ಕುರಿತು, ದೇವರ ಸತ್ಯತೆಯನ್ನು ಕುರಿತು ಪರಿಶೋಧಿಸುವುದು ಮತ್ತು ಅನುಭವಿಸುವುದು ಮುಖ್ಯವಾದುದು. ಕೇವಲ ನಂಬಿಕೆ ಏನೂ ಅಲ್ಲ. ಪ್ರಾರಂಭದಲ್ಲೇ ನಾನು ಹೇಳಿದಂತೆ ನಾನು ನಂಬುತ್ತೇನೆ ಎಂದು ಯಾವ ಅವಿವೇಕಿಯಾದರೂ ಹೇಳಬಲ್ಲ. ಯಾವನಾದರೂ ನಂಬುತ್ತಾನೆ. ಆದರೂ ವರ್ಷಾನುಗಟ್ಟಲೆ ಆ ಮನುಷ್ಯನು ನೀತು ನಾರುವ ಕೊಳದಂತೆ ಉಳಿಯುತ್ತಾನೆ. ಆ ನಂಬುಗೆಯು ಪರಸ್ಪರ ಅವನ ಮಾನವೀಯ ಸಂಬಂಧ ಗಳಲ್ಲಾಗಲಿ ಅಥವಾ ಅವನ ಚಾರಿತ್ರ್ಯದಲ್ಲಾಗಲಿ ಯಾವ ವ್ಯತ್ಯಾಸವನ್ನೂ ಉಂಟುಮಾಡಿರುವುದಿಲ್ಲ. ಆದರೆ ಧರ್ಮಸಂಬಂಧಿ ವಿಜ್ಞಾನದ ಹಾದಿಯಲ್ಲಿ ನಡೆಯುವವನು ಸ್ಥಗಿತವಾದ ಧರ್ಮಶ್ರದ್ಧೆಯು ನೀಡುವ ಸುಖಕರವಾದ ನಂಬುಗೆಯಲ್ಲಿ ಸಂತೃಪ್ತನಾಗಿರಲಾರ. ಅವನು ತನ್ನ ನಂಬುಗೆಯನ್ನು ಪ್ರಶ್ನಿಸುವ ಅದನ್ನು ಪರೀಕ್ಷಿಸುವ ಧೈರ್ಯ ಮಾಡುತ್ತಾನೆ. ಅದನ್ನು ಸತ್ಯವೆಂದು ನಂಬುವವರೆಗೂ ಅವನು ಸಮಾಧಾನವನ್ನು ಹೊಂದಿರಲಾರ. ಭಾರತೀಯ ಇತಿಹಾಸವು ಸಮಾಜದ ಎಲ್ಲ ವರ್ಗದಿಂದ ಮತ್ತು ಎಲ್ಲಾ ಸ್ತರದಿಂದ ಬಂದ ಆಧ್ಯಾತ್ಮಿಕ ಸಾಧಕರ ವಿವರಣೆಗಳಿಂದ ತುಂಬಿದೆ. ಅವರು ಅಂತಹ ಸತ್ಯ ನಂಬುಗೆಗಳನ್ನು ಅನುಭವಿಸಿದರು. ಧರ್ಮದ ಕ್ಷೇತ್ರದಲ್ಲಿ ವೈಜ್ಞಾನಿಕ ಸಂಶೋಧಕರಾದರು ಹಾಗೂ ಸಂತರೆನಿಸಿಕೊಂಡರು. ಪ್ರಾಸಂಗಿಕವಾಗಿ ಇದು ವೈಜ್ಞಾನಿಕ ಮನೋಭಾವ ಮತ್ತು ಆಧ್ಯಾತ್ಮಿಕ ಮನೋಭಾವವು ಮುಕ್ತ ಸಮಾಜದಲ್ಲಿ ಜಾತಿ, ವರ್ಗ, ಶಿಕ್ಷಣ ಅಥವಾ ಆರ್ಥಿಕಮಟ್ಟ ಇವುಗಳನ್ನು ಪರಿಗಣಿಸದೆ ಮೇಲೇರಲು ಮತ್ತು ಅಭ್ಯುದಯ ಹೊಂದಲು ಸಾಧ್ಯ ಎಂಬ ಸತ್ಯವನ್ನು ತೋರಿಸಿ ಕೊಡುತ್ತದೆ. ಅವರು ಪರಮಾತ್ಮನ ಬೆಳಕನ್ನು ಅನುಭವಿಸುವುದಕ್ಕೆ ಮುನ್ನ ವರ್ಷಾನುಗಟ್ಟಲೆ ಅರ್ಪಣಾಮನೋಭಾವದಿಂದ ತಪಗೈದರು, ಪ್ರಾರ್ಥಿಸಿದರು, ಹೋರಾಡಿದರು ಮತ್ತು ಕ್ಲೇಶಪಟ್ಟರು, ಬದುಕಿದರು ಮತ್ತು ಕ್ರಿಯಾಶೀಲರಾದರು. ಭೌತವಿಜ್ಞಾನದ ಸಂಶೋಧನೆಗಳಲ್ಲಿಯೂ ಅದರ ಹಿಂದೆ ಅಂತಹ ತಪಸ್ಸಿರುತ್ತದೆ. ಅನೇಕ ಉದಾಹರಣೆಗಳಲ್ಲೊಂದೆನಿಸಿದ ಈ ಮುನ್ನವೇ ಸೂಚಿಸಿದ ಮೇಡಂ

ಕ್ಯೂರಿಯ ಜೀವನವು ಅದನ್ನು ಸ್ಪಷ್ಟಪಡಿಸುತ್ತದೆ. ಶುದ್ಧ ವಿಜ್ಞಾನದಲ್ಲಿ ನಮ್ಮ ಮಕ್ಕಳಿಗೆ ತರಬೇತಿ ನೀಡುವುದು, ಕಾಲಕ್ರಮದಲ್ಲಿ ಪರಿಶುದ್ಧ ಧರ್ಮದ ಅಧ್ಯಯನದಲ್ಲಿ ಅವರನ್ನು ಅರ್ಹಗೊಳಿಸುತ್ತದೆ. ಎಲ್ಲಾ ವಿಜ್ಞಾನಿಗಳಲ್ಲಿಯೂ ಸತ್ಯದ ಅನ್ವೇಷಣೆಯು ಇಂದ್ರಿಯಗಳ ಮೂಲಕ, ಕೇವಲ ನೋಡುವಿಕೆಯನ್ನು ಅವಲೋಕನರೂಪದಲ್ಲಿ ಪರಿವರ್ತಿಸುವುದರ ಮೂಲಕ ಆರಂಭವಾಗುತ್ತದೆ. ಸತ್ಯದ ಅನ್ವೇಷಣೆಯಲ್ಲಿ ಇಂದ್ರಿಯಗಳು ಹಾಗೂ ಮನಸ್ಸಿಗೆ ತರಬೇತಿ ನೀಡಿ ಅವುಗಳನ್ನು ಪರಿಣಾಮಕಾರಿಯಾದ ಉಪಕರಣಗಳನ್ನಾಗಿಸುವುದು ಹಾಗೂ ಚಾರಿತ್ರ್ಯ ದಕ್ಷತೆಯೇ ಶಿಕ್ಷಣವೆನಿಸುತ್ತದೆ ಮತ್ತು ಧರ್ಮವು ಮುಖ್ಯವಾಗಿ ಮುಂದುವರೆದ ಶಿಕ್ಷಣ.

## ೨೬. ಮೂಲಭೂತವಾದ ವೈಜ್ಞಾನಿಕ ಶಿಕ್ಷಣ

ನಮ್ಮ ರಾಷ್ಟ್ರದ ಮಕ್ಕಳು ಇಂತಹ ಶಿಕ್ಷಣವನ್ನು ಹೆಚ್ಚು ಹೆಚ್ಚು ಪಡೆದಂತೆ ಅಷ್ಟರಮಟ್ಟಿಗೆ ರಾಷ್ಟ್ರದ ಚಟುವಟಿಕೆಗಳಿಗೆ ತರಬೇತಿ ಪಡೆದ ವ್ಯಕ್ತಿಗಳು ದೊರಕುತ್ತಾರೆ. ಆದರೆ ಇಂದು ನಾವು ಅದರಿಂದ ಬಹಳ ದೂರದಲ್ಲಿದ್ದೇವೆ. ನಮ್ಮ ವರ್ತಮಾನದ ಶಿಕ್ಷಣವು ಹೆಚ್ಚಾಗಿ ಮೆದುಳಿಗೆ ತುಂಬುತ್ತಿದೆಯೆ ಹೊರತು ಇಂದ್ರಿಯಗಳು ಮತ್ತು ಮನಸ್ಸಿಗೆ ತರಬೇತಿ ನೀಡುತ್ತಿಲ್ಲ. ನಮ್ಮ ವಿಶ್ವವಿದ್ಯಾನಿಲಯದ ಅನೇಕ ಪದವೀಧರರಲ್ಲಿ ವಿಜ್ಞಾನಪದವೀಧರರೂ ಸೇರಿದಂತೆ ಈ ಅವಲೋಕನ ಶಕ್ತಿಯು ಪರಿಮಿತಿಯುಳ್ಳದ್ದಾಗಿದೆ. ಸ್ವತಂತ್ರವಾಗಿ ಆಲೋಚಿಸುವ, ತೀರ್ಮಾನಿಸುವ ಮತ್ತು ನಿರ್ಣಯ ತೆಗೆದುಕೊಳ್ಳುವ ಶಕ್ತಿಯಂತೂ ಕಡಿಮೆಯೇ. ಆದ್ದರಿಂದ ನಮ್ಮ ದೇಶಕ್ಕೆ ಬೇಕಾಗಿರುವುದು ಕೇವಲ ಹೆಚ್ಚು ವಿಜ್ಞಾನದ ಪದವೀಧರರಲ್ಲ. ಆದರೆ ವೈಜ್ಞಾನಿಕ ಮನೋಭಾವವುಳ್ಳ ಗುಂಪೇ ಬೇಕಾಗಿದೆ. ಅವರ ಮೂಲಕ ಎಲ್ಲ ಲೌಕಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಶ್ರೇಷ್ಠ ದರ್ಜೆಯ ವ್ಯಕ್ತಿಗಳು ಮೂಡಿ ಬರುತ್ತಾರೆ. ಅಂತಹ ಅದ್ಭುತ ರೀತಿಯ ಮನಸ್ಸು ಭಾರತದಲ್ಲಿನ ಅರವತ್ತೈದು ಕೋಟಿ ಜನರನ್ನು ಮೇಲೆತ್ತುವ ಮತ್ತು ಮೇಲೆಬ್ಬಿಸುವ ವಿದ್ಯುತ್‌ಸ್ಪರ್ಶವನ್ನು ತರಬಲ್ಲದು. ಸಂಖ್ಯಾ ದೃಷ್ಟಿಯಲ್ಲಿ ನಾವು ದೊಡ್ಡವರು, ಆದರೆ ಗುಣಾತ್ಮಕವಾಗಿ ನಾವು ಚಿಕ್ಕವರು. ನಮ್ಮ ರಾಷ್ಟ್ರೀಯ ಮನಸ್ಸನ್ನು ಶ್ರದ್ಧೆಯಿಂದ ತರಬೇತುಗೊಳಿಸಬೇಕು, ಕಲ್ಪನೆಯುಳ್ಳ ಸೃಜನಶೀಲತೆಯು ಮತ್ತು ಆಲೋಚನಾತ್ಮಕ ವಾದ ವಿಮರ್ಶಾಶಕ್ತಿಯು ಅದರಿಂದ ಒಡಮೂಡುತ್ತದೆ. ಅದುವೇ ಮೂಲಭೂತ ವಿಜ್ಞಾನದ ಶಿಕ್ಷಣ. ಪ್ರಾಥಮಿಕ ತರಗತಿಗಳಿಂದ ಮುಂದಕ್ಕೆ ನಮ್ಮ ಮಕ್ಕಳಿಗೆ ಅಂತಹ ಶಿಕ್ಷಣವನ್ನು ನೀಡಬೇಕಾದ ಅಗತ್ಯವಿದೆ. ಭೌತವಿಜ್ಞಾನದ ಚರಿತ್ರೆಯಿಂದ ಆರಿಸಿಕೊಂಡ ಪ್ರಮಾಣಭೂತವಾದ ಕಥೆಗಳ ಮೂಲಕ ನಮ್ಮ ಮಕ್ಕಳಿಗೆ ನಾವು ಸ್ಫೂರ್ತಿ ನೀಡಬೇಕು. ಉದಾಹರಣೆಗೆ ಉಗಿಯ ಶಕ್ತಿಯನ್ನು ವೀಕ್ಷಿಸಿದ ಬಾಲಕನಾದ ವಾಟ್ಸ್‌ನ ಕಥೆ. ಈತನ ಶೋಧನೆ ಮುಂದೆ ಸ್ಟೀಫನ್‌ಸನ್‌ನಿಗೆ ಉಗಿಬಂಡಿಯನ್ನು ನಿರ್ಮಿಸುವಲ್ಲಿ ಸಹಾಯ ಮಾಡಿತು. ವಾಟ್ಸ್‌ನು ಚಿಕ್ಕವಯಸ್ಸಿನ ಬಾಲಕನಾಗಿದ್ದಾಗ ತನ್ನ ಕುಟುಂಬದ ಇತರ ವ್ಯಕ್ತಿಗಳೊಡನೆ ಬೆಳಗಿನ ಉಪಹಾರ ಮಾಡಲು ಕುಳಿತಿದ್ದ. ಅವನ ತಾಯಿಯು ತಿಂಡಿಯನ್ನು ಸಿದ್ಧಪಡಿಸುತ್ತಿದ್ದಳು. ಟೀಯನ್ನು ಸಿದ್ಧಪಡಿಸಲು ನೀರು ತುಂಬಿದ ಕುದಿಯುವ ಪಾತ್ರೆಯನ್ನು ಒಲೆಯ ಮೇಲಿಟ್ಟಿದ್ದಳು, ನೀರು ಕುದಿಯುತ್ತಿತ್ತು ; ಬಾಲಕನು ಪಾತ್ರೆಯನ್ನು ನೋಡಿದ, ಆದರ ಮುಚ್ಚಳವು ಮೇಲಕ್ಕೇಳುತ್ತಿದ್ದುದನ್ನು ಗಮನಿಸಿದ. ಅವನು ಕೇವಲ ಅದನ್ನು ನೋಡಲಿಲ್ಲ. ವಿಶಿಷ್ಟ ದೃಶ್ಯವೆಂಬಂತೆ ವೀಕ್ಷಿಸಿದ. ತಾಯಿಯು ಉಪಾಹಾರದ ಸಹಭಾಗಿಗಳೊಡನೆ ಸೇರಿಕೊಳ್ಳಲು ಅವನನ್ನು ಕೂಗಿ ಕರೆದಳು. ಆದರೆ ಅವನಿಗೆ ಅದು ಕೇಳಿಸಲಿಲ್ಲ. ಅವನು ತನ್ನೆದುರಿಗಿದ್ದ ಆ ದೃಶ್ಯದಲ್ಲಿ ತನ್ಮಯನಾಗಿದ್ದ. ಆ ಅವಲೋಕನದ ಅವಧಿಯಲ್ಲಿ ಅವನ ಮನಸ್ಸು ಅದರ ಮಹತ್ವವನ್ನು ಕಾಲ್ಪನಿಕವಾಗಿ ಗ್ರಹಿಸಿತು. ಆವಿಯ ಹಿಂದೆ ಒಂದು ಶಕ್ತಿಯಿದೆ, ಅದು ಮುಚ್ಚಳವನ್ನು

ಯಾವಾಗಲೂ ಮೇಲೇಳುವಂತೆ ಮಾಡುತ್ತದೆ. ಆ ಆವಿಯ ಶಕ್ತಿಯನ್ನು ಶಿಸ್ತಿಗೊಳಪಡಿಸಿ ಮಾನವನ ಪ್ರಯೋಜನಕ್ಕೆ ಬಳಸಿಕೊಳ್ಳಬಹುದು.

ಈ ಅನುಭವದಿಂದ ಮಹತ್ವದ ಸಂಶೋಧನೆಯಾದ ಆವಿಯ ಯಂತ್ರವು ಆವಿರ್ಭವಿಸಿತು. ಅದು ಆಧುನಿಕ ಕೈಗಾರಿಕಾ ಕ್ರಾಂತಿಯ ಮೊದಲ ಘಟ್ಟದ ಹಿನ್ನೆಲೆಯಲ್ಲಿರುವ ಬಹು ಮುಖ್ಯ ಅಂಶಗಳಲ್ಲೊಂದಾಗಿತ್ತು. ಇಂತಹ ವೈಜ್ಞಾನಿಕ ಕುತೂಹಲ, ಜಿಜ್ಞಾಸೆಯುಳ್ಳ ಅವಲೋಕನ ಶಕ್ತಿ ಮತ್ತು ಸತ್ಯಪ್ರೇಮ ಇವುಗಳನ್ನು ನಮ್ಮ ಮಕ್ಕಳಲ್ಲಿ ಬೃಹತ್ ಪ್ರಮಾಣದಲ್ಲಿ ತುಂಬಿದರೆ ಅದು ಭಾರತದಲ್ಲಿ ಅತ್ಯಗತ್ಯವಾಗಿರುವ ವೈಜ್ಞಾನಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಕ್ರಾಂತಿಯನ್ನು ಉಂಟು ಮಾಡುತ್ತದೆ.

### ೨೭ ಆಧುನಿಕ ಭಾರತ ವಿಜ್ಞಾನಿಯೊಬ್ಬನ ನಿದರ್ಶನ

ನಮ್ಮ ದೇಶದ ಆಂಧ್ರಪ್ರದೇಶದಲ್ಲಿನ ಗತಿಸಿದ ಅಂತಹ ಒಬ್ಬ ಯುವಕ ಡಾ. ಎಲಪ್ರಗಡ ಸುಬ್ಬರಾವ್‌ನಲ್ಲಿ ಇಂತಹ ವೈಜ್ಞಾನಿಕ ಮತ್ತು ಆಧ್ಯಾತ್ಮಿಕ ದಾಹದ ಅದ್ಭುತವಾದ ಇತ್ತೀಚಿನ ನಿದರ್ಶನವು ನಮಗಿದೆ. ಕೆಲ ವರ್ಷಗಳ ಹಿಂದೆ ನವದೆಹಲಿಯ ಅಮೇರಿಕನ್ ರಿಪೋರ್ಟರ್‌ನಲ್ಲಿ ಆತನ ಕಥೆಯನ್ನು ಓದಿ ನಾನಂತೂ ತುಂಬಾ ಪ್ರಭಾವಿತನಾದೆ. ನಾವು ವೈಜ್ಞಾನಿಕ ರಾಷ್ಟ್ರವಾಗುವುದಕ್ಕೆ ಮುನ್ನವೇ ಮಾನವಪ್ರೇಮ, ಜಿಜ್ಞಾಸಾ ಪ್ರವೃತ್ತಿ ಮತ್ತು ಸತ್ಯನಿಷ್ಠೆ ಇವುಗಳಿಂದ ಕೂಡಿದ ಅಂತಹ ಸುಬ್ಬರಾವ್‌ರಲ್ಲಿದ್ದ ಸ್ಫೂರ್ತಿಯನ್ನು ನಮ್ಮ ಲಕ್ಷಾಂತರ ಯುವಕರಲ್ಲಿ ನಾವು ಜಾಗೃತಗೊಳಿಸಬೇಕು ಎಂಬ ಭಾವನೆ ಉಂಟಾಯಿತು. ಅವನೇನು ಮಾಡಿದ? ವಿದ್ಯಾರ್ಥಿಯಾಗಿ ಮದ್ರಾಸಿನ ಶಾಲೆಯಲ್ಲಿದ್ದ ಅವನು ಅತ್ಯಂತ ಪ್ರತಿಭಾವಂತನಾಗಿದ್ದ, ಆದರೆ ಅತಿ ಬಡವ. ಅವನ ಸಹೋದರನು ತೀವ್ರ ರೀತಿಯ ಅತಿಸಾರರೋಗ ಒಂದಕ್ಕೆ ತುತ್ತಾಗಿದ್ದ. ಆ ಕಾಲದಲ್ಲಿ ಗುಣಪಡಿಸಲಾಗದ ರೋಗವೆನಿಸಿಕೊಂಡಿದ್ದ ಆದರಿಂದಾಗಿ ದಿನದಿನಕ್ಕೂ ಅವನ ಸಹೋದರನು ಕ್ಷೀಣಿಸುತ್ತಿದ್ದನ್ನು ಆ ಬಾಲಕನು ಗಮನಿಸಿದ. ಅವನ ಪ್ರೀತಿಯ ಸಹೋದರನು ಸಾಯುತ್ತಿದ್ದುದನ್ನು ಅಸಹಾಯಕನಾಗಿ ಗಮನಿಸುತ್ತಿದ್ದ. ಅವನ ಭಾವನೆಯು, ತೀವ್ರವಾದ ಚಿಂತನೆಯಿಂದ ದಹಿಸುತ್ತಿತ್ತು. ನನ್ನ ಸೋದರನು ಹೀಗೇಕೆ ಸಾಯುತ್ತಿದ್ದಾನೆ ? ಇಂತಹ ತೀವ್ರವಾದ ರೋಗಕ್ಕೆ ಪರಿಹಾರವಿಲ್ಲವೇ ಎಂದೆನಿಸಿತು ಅವನಿಗೆ. ಅವನು ಅಂದೇ ಅಲ್ಲಿಯೇ ಅದಕ್ಕೆ ಪರಿಹಾರವನ್ನು ಕಂಡುಹಿಡಿಯಲು ತನ್ನ ಜೀವನವನ್ನೇ ಸಂಪೂರ್ಣವಾಗಿ ಸಮರ್ಪಿಸುವೆನೆಂದು ತನ್ನೊಳಗೆ ಪ್ರತಿಜ್ಞೆ ಮಾಡಿದ. ಅದುವೇ ಸ್ವಾಧ್ಯಾಯ ಮತ್ತು ತಪಸ್ಸಿನ ಸಂಗಮ. ಅನಂತರ ಅವನು ಸಾಯುವವರೆಗೂ ಸ್ವಯಂ ಶಿಸ್ತು ಮತ್ತು ಅಧ್ಯಯನ ಸಂಶೋಧನೆಯನ್ನು ಮುಂದುವರೆಸಿದನು. ಈ ಸಮ್ಮಿಳಿತವನ್ನು ವಾಲ್ಮೀಕಿ ರಾಮಾಯಣವು ಮತ್ತು ಭಾರತೀಯ ಸಂಸ್ಕೃತಿಯ ಇನ್ನಿತರ ಶ್ರೇಷ್ಠ ಗ್ರಂಥಗಳು ಅತಿಶಯವಾಗಿ ಪ್ರಶಂಸಿಸಿವೆ ಮತ್ತು ಅಮೂಲ್ಯವೆಂದು ಭಾವಿಸಿವೆ. ಬಡವನೂ ಚಿಕ್ಕವನೂ ಆದ ಶಾಲೆಯಲ್ಲಿ ಓದುತ್ತಿರುವ ಆ ಬಾಲಕನು ಎಂತಹ ನಿರ್ಧಾರವನ್ನು ತೆಗೆದುಕೊಳ್ಳಬೇಕಾಯಿತು. ಆದರೆ ಅಂತಹ ನಿರ್ಧಾರಗಳ ಹಿಂದೆ ಸತ್ಯಪ್ರೇಮ, ಮಾನವಪ್ರೇಮ ಮತ್ತು ಧೈರ್ಯ ಅಡಗಿರುತ್ತದೆ. ಅಪ್ರಬುದ್ಧಮತಿಗಳಿಗೆ ಅವು ವ್ಯರ್ಥ ನಿರ್ಧಾರಗಳೆಂದು ನಿಂತುಹೋಗುತ್ತವೆ. ಆದರೆ ಅವು ಮಾನವೀಯ ಆತ್ಮದ ನಿಶ್ಶಬ್ದವಾದ ಮುಂದಿನ ಸೃಷ್ಟ್ಯಾತ್ಮಕ ಬದಲಾವಣೆಗಳಾಗುತ್ತವೆ. ಸತ್ಯಪ್ರೇಮ ಮತ್ತು ಮಾನವಪ್ರೇಮ ಅನೇಕ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ಸಂಶೋಧನೆಗಳಲ್ಲಿ ಜೊತೆಯಾಗಿಯೇ ಸಾಗುತ್ತಿವೆ. ಅಂತೆಯೇ ಕಾರಾಗೃಹದ ಸುಧಾರಣೆಯಂತಹ ಅನೇಕ ಸಾಮಾಜಿಕ ನಿರ್ವಹಣೆಗಳಲ್ಲಿಯೂ ಜೊತೆಯಾಗಿಯೇ ಹೋಗುತ್ತವೆ. ಆಧುನಿಕ ಶಸ್ತ್ರಚಿಕಿತ್ಸೆಯಲ್ಲಿ ಎಲ್ಲಾ ರೋಗಾಣುನಿರೋಧಕ ಪ್ರಯತ್ನಗಳು ಮತ್ತು ಔಷಧಿಗಳಲ್ಲಿ

ಪೆನಿಸಿಲಿನ್ ಮುಂತಾದ ಕೆಲವು ಆವಿಷ್ಕಾರಗಳು ಅಂತಹ ವೈಜ್ಞಾನಿಕ ಉದಾಹರಣೆಗಳಾಗುತ್ತವೆ. ಮಾನವನ ಮೇಲಿದ್ದ ಬುದ್ಧನ ದಯೆಯು ೨೫೦೦ ವರ್ಷಗಳ ಹಿಂದೆ ಬುದ್ಧಗಯೆಯಲ್ಲಿ ಬೋಧಿ ವೃಕ್ಷದ ಕೆಳಗೆ ಮಾಡಿದ ಐತಿಹಾಸಿಕವಾದ ಆತನ ಧ್ಯಾನದ ಅವಸ್ಥೆಯಲ್ಲಿ ಗಹನವಾದ ಆಧ್ಯಾತ್ಮಿಕ ಸತ್ಯಗಳನ್ನು ಕಂಡು ಹಿಡಿಯುವಂತೆ ಮಾಡಿತು. ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆಯೆಂಬ ಶಸ್ತ್ರಸಜ್ಜಿತರಾಗಿ ಕಾರಾಗೃಹಕ್ಕೆ ತೆರಳಿದುದು ರಾಜಕೀಯ ಗುಲಾಮಗಿರಿಯ ದೀರ್ಘಕಾಲದ ಕಾರಾಗೃಹದಿಂದ ಮತ್ತು ಅಸಹಾಯಕತೆಯಿಂದ ನಮ್ಮ ದೇಶದ ಲಕ್ಷಾಂತರ ಜನರನ್ನು ಮುಕ್ತಗೊಳಿಸುವ ಸಲುವಾಗಿಯೇ.

ಪ್ರೌಢಶಿಕ್ಷಣವು ಮುಗಿದ ನಂತರ ಕಿರಿಯನಾದ ಸುಬ್ಬರಾವ್‌ಗೆ ವೈದ್ಯಶಾಸ್ತ್ರವನ್ನು ಅಧ್ಯಯನ ಮಾಡಲು ಗೆಳೆಯರು ಸಹಾಯ ಮಾಡಿದರು. ಅವನು ಕ್ರಮವಾಗಿ ಎಂ.ಬಿ.ಬಿ.ಎಸ್. ಮತ್ತು ಎಂ.ಎಸ್. ವ್ಯಾಸಂಗವನ್ನು ಮುಗಿಸಿದನು. ಆದರೆ ಅಲ್ಲೆಲ್ಲಾ ಆ ಮಾರಕರೋಗಕ್ಕೆ ಪರಿಹಾರ ಕಂಡು ಹಿಡಿಯುವುದು ಹೇಗೆ ಎಂಬ ಒಂದೇ ಒಂದು ಭಾವನೆಯು ಅವನ ಮನಸ್ಸನ್ನಾಕ್ರಮಿಸಿತ್ತು. ಅದರಿಂದಾಗಿ ಮದ್ರಾಸಿನಲ್ಲಿ ವೈದ್ಯಕೀಯ ವ್ಯಾಸಂಗವನ್ನು ಮುಗಿಸಿದ ತರುವಾಯ ಅವನು ಸಂಶೋಧನೆಯನ್ನು ಮಾಡಬಯಸಿದ. ಆದರೆ ಅಂದು ಭಾರತದಲ್ಲಿ ಅಂತಹ ಸಂಶೋಧನಾ ಸೌಲಭ್ಯಗಳು ಎಲ್ಲಿದ್ದವು ? ಹೀಗಾಗಿ ಅವನು ೧೯೨೩ರಲ್ಲಿ ಮೊದಲು ಇಂಗ್ಲೆಂಡ್‌ಗೆ ತೆರಳಿದ. ಅನಂತರ ಅಮೇರಿಕದಲ್ಲಿನ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿನ ಸಂಶೋಧನಾ ತಂಡವೊಂದನ್ನು ಸೇರಿದ. ಜೊತೆಯಲ್ಲೇ ಶ್ಲಾಘನೀಯವಾದ ಸಂಶೋಧನಾಕಾರ್ಯವನ್ನು ಅಲ್ಲಿ ನಡೆಸುತ್ತಾ ಅವನು ಕಷ್ಟಪಟ್ಟು ಕೆಲಸ ಮಾಡಿ ಜೀವರಸಾಯನಶಾಸ್ತ್ರದಲ್ಲಿ ಪದವಿಯನ್ನು ಪಡೆದ. ಈ ಅವಧಿಯಲ್ಲೇ ವೆಚ್ಚವನ್ನು ನಿಭಾಯಿಸುವ ಸಲುವಾಗಿ ಅವನು ಮನೆಕೆಲಸಗಳನ್ನು ಮಾಡಿದ. ಅನಂತರ ೧೯೪೦ರಲ್ಲಿ ನ್ಯೂಯಾರ್ಕಿನ ಅಮೆರಿಕನ್ಸ್ ಸೈನಮೆಡ್ ಕಂಪೆನಿಯ ಲೆಡರ್ಲಿ ಪ್ರಯೋಗಾಲಯದಿಂದ ಬಂದಿದ್ದ ಆಹ್ವಾನವನ್ನು ತಮ್ಮ ಸಂಶೋಧನೆಗಾಗಿ ಅದರ ಸೌಲಭ್ಯಗಳನ್ನು ಬಳಸಿಕೊಳ್ಳಲು ಅವನು ಒಪ್ಪಿಕೊಂಡನು. ಆಸಕ್ತಿ ಮತ್ತು ಪ್ರತಿಭೆಯಿಂದ ಪ್ರಭಾವಿತಗೊಂಡ ಆ ಔಷಧ ಸಂಶೋಧನಾ ಕಾರ್ಯಾಗಾರದ ಆಡಳಿತಮಂಡಳಿಯು ಅವನ ಸಂಶೋಧನೆಯಲ್ಲಿ ಮುಂದುವರೆಯುವಂತೆ ಅವನಿಗೆ ಪ್ರೋತ್ಸಾಹವನ್ನು ನೀಡಿತು. ಮತ್ತು ೧೯೪೨ರಿಂದ ಅದರ ವಿಜ್ಞಾನಿಗಳ ತಂಡದ ಸಂಶೋಧನಾ ಕಾರ್ಯವನ್ನು ನಿರ್ದೇಶಿಸುವ ಕಾರ್ಯವನ್ನು ಅವನಿಗೆ ಒಪ್ಪಿಸಿತು.

ಅನೇಕ ವರ್ಷಗಳವರೆಗೆ ಸಂಶೋಧನೆಯು ಪ್ರಯೋಗದೊಡನೆ ಮುಂದುವರೆಯಿತು. ಇತರ ವೈಜ್ಞಾನಿಕ ಅನ್ವೇಷಕರಂತೆ ವಾಂಛಿತ ಫಲವನ್ನು ಪಡೆಯದೆ ಆತನು ಅನೇಕ ಬಾರಿ ನಿರಾಶೆ ಹಾಗೂ ಖಿನ್ನತೆಯನ್ನು ಅನುಭವಿಸಿರಬೇಕು. ಅಂತಿಮವಾಗಿ ಅವನು ಫೋಲಿಕ್ ಆ್ಯಸಿಡ್‌ನ ಒಂದು ಸಣ್ಣ ಕಣವನ್ನು ಪ್ರತ್ಯೇಕಗೊಳಿಸುವಲ್ಲಿ ಯಶಸ್ವಿಯಾದ. ಕೊನೆಗೆ ಆತನ ತಂಡವು ೧೯೪೫ನೇ ಇಸವಿಯಲ್ಲಿ ಹಳದಿಯ ಪುಡಿಯ ರೂಪದಲ್ಲಿ ಕೃತಕ ಫೋಲಿಕ್ ಆ್ಯಸಿಡ್‌ನ್ನು ಉತ್ಪಾದಿಸುವಲ್ಲಿ ಯಶಸ್ವಿಯಾಯಿತು. ಅದು ಶ್ರೇಷ್ಠ ಆವಿಷ್ಕಾರವಾಗಿತ್ತು. ಅನಂತರ ಆಸ್ಪತ್ರೆಯಲ್ಲಿನ ರೋಗಿಗಳ ಮೇಲೆ ಅದನ್ನು ಪ್ರಯೋಗಿಸಿದಾಗ ಅದರ ಪರೀಕ್ಷೆ ಸಮಯ ಒದಗಿಬಂದಿತು. ಯಾವಾಗ ಅದನ್ನು ಪ್ರಯೋಗಿಸಲಾಯಿತೋ ಆಗ ಅದರ ಫಲಿತಾಂಶವು ಅತ್ಯದ್ಭುತವಾಗಿತ್ತು. ಅದು ಈ ಮಾರಕರೋಗಕ್ಕೆ ಅತ್ಯಾಶ್ಚರ್ಯಕರವಾದ ಪರಿಹಾರವಾಗಿ ಕೊಡಲೇ ಮಾರುಕಟ್ಟೆಯನ್ನು ಪ್ರವೇಶಿಸಿತು.

ಆತನು ಈ ಸಂಶೋಧನೆಗೆ ವೈಯಕ್ತಿಕ ಮನ್ನಣೆ ಪಡೆಯಲಿಲ್ಲ. ಆದರೆ ಈ ಮನ್ನಣೆಯನ್ನು ತನ್ನ ತಂಡದ ಸದಸ್ಯರಿಗೆ ಕೊಟ್ಟನು. ಇದಾದ ಕೊಡಲೇ ಆತ ಮತ್ತು ಆತನ ಗುಂಪು ಆರೋಮಿಸಿನ್ ಎಂಬ ಮತ್ತೊಂದು ಅದ್ಭುತ ಔಷಧಿಯನ್ನು ಕಂಡುಹಿಡಿಯಿತು. ಆ ಎಲ್ಲಾ ದಿವಸಗಳಲ್ಲಿ ತನ್ನ

ಸುತ್ತಮುತ್ತಲಿನ ಇತರ ಜನರ ನೋವುಗಳನ್ನು ನಿವಾರಿಸುವ ಸಲುವಾಗಿ ತನ್ನ ಸ್ವಂತ ಆದಾಯವನ್ನು ಉಚಿತವಾಗಿ ಕೊಟ್ಟನು. ಡಾ. ಎಲಪ್ರಗಡ ಸುಬ್ಬರಾವ್‌ರವರು ೫೩ನೇ ವಯಸ್ಸಿನಲ್ಲಿಯೇ ಅಮೇರಿಕಾ ದಲ್ಲಿ ೧೯೪೮ರಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ತನ್ನಂತಹ ಲಕ್ಷಾಂತರ ಮಂದಿಗೆ ತನ್ನ ಕಾರ್ಯದ ಮೂಲಕ ಭರವಸೆ ನೀಡುತ್ತಾ ಜೀವದಾನ ಮಾಡಿ ಮೃತನಾದನು.

ಲೆಡರ್ಲಿ Laboratories ಗುಜರಾತ್ ರಾಜ್ಯದ ಬುಲ್ಸರ್‌ನ ತಮ್ಮ ಕಾರ್ಯಾಗಾರದಲ್ಲಿ ಆತನ ಪ್ರತಿಮೆಯನ್ನು ಅವನ ಜ್ಞಾಪಕಾರ್ಥವಾಗಿ ಸ್ಥಾಪಿಸಿ ಗೌರವಿಸಿದೆ. ಅದರ ಕೆಳಗಡೆ ಆತನನ್ನು ವಿಜ್ಞಾನಿ, ಶಿಕ್ಷಕ, ತತ್ವಜ್ಞಾನಿ, ಮಾನವತಾವಾದಿ ಎಂದು ವರ್ಣಿಸುತ್ತಾ "ವಿಜ್ಞಾನವು ಜೀವನವನ್ನು ಕೇವಲ ದೀರ್ಘಗೊಳಿಸುತ್ತದೆ, ಧರ್ಮವು ಅದನ್ನು ಆಳವಾಗಿಸುತ್ತದೆ" ಎಂಬ ಬರಹವೊಂದು ನಮೂದಿತ ವಾಗಿದೆ.

ಆತನ ಜೀವನವು ಮಹಾಭಾರತದ ಉದ್ಯೋಗಪರ್ವದಲ್ಲಿ ಬರುವ ರಾಣಿಯಾದ ತಾಯಿ ವಿದುಲೆಯು ತನ್ನ ಮಗನಾದ ರಾಜಪುತ್ರ ಸಂಜಯನಿಗೆ, ಚಿಕ್ಕದಾದರೂ ಅತ್ಯಂತ ಮಹತ್ವದ್ದಾಗಿರುವ ಆಕೆಯ ಉದ್ಗಾರವು ನೀಡಿದ ಸ್ಫೂರ್ತಿಯನ್ನು ಉದಾಹರಣೆಯನ್ನಾಗಿಸಿದೆ : ಮುಹೂರ್ತಂ ಜ್ವಲಿತಂ ಶ್ರೇಯಃ ನ ತು ಧೂಮಾಯಿತಂ ಕ್ವಚಿತ್, 'ಬಹಳ ಕಾಲ ಹೊಗೆಯಾಡುವುದಕ್ಕಿಂತ ಸ್ವಲ್ಪ ಕಾಲ ಪ್ರಜ್ವಲಿಸುವುದು ಲೇಸು' ; ಶುದ್ಧವಿಜ್ಞಾನಕ್ಕೆ ಸವಿಮರ್ಶ ಜಿಜ್ಞಾಸೆಯೊಡನೆ ಭಾವನಾಸಮೃದ್ಧಿಯಿಂದ ಕೂಡಿದ ಅದ್ಭುತ ಶ್ರದ್ಧೆಯೂ ಬೇಕಾಗಿದೆ ಎಂಬುದನ್ನು ತೋರಿಸಲು ಈ ಯುವಕ ಸುಬ್ಬರಾವ್‌ನ ಉದಾಹರಣೆಯನ್ನು ಕೊಟ್ಟಿದ್ದೇನೆ. ಅದರ ಕಲ್ಪನಾಶ್ರೀಮಂತಿಕೆಯಿಂದ ಕೇವಲ ವಿಜ್ಞಾನವಷ್ಟೇ ಅಲ್ಲ ಮಾನವೀಯತೆಯೂ ಹೊರಹೊಮ್ಮುತ್ತದೆ ಎಂಬುದನ್ನು ದೃಢಪಡಿಸುತ್ತದೆ. ಧರ್ಮದ ಕ್ಷೇತ್ರದಲ್ಲಿ ನಮ್ಮ ಭಕ್ತಿಸಂಪ್ರದಾಯದಲ್ಲಿ ಇಂತಹ ಭಾವನೆಯ ಸಮೃದ್ಧಿ ಇದೆ ; ಮತ್ತು ನಮ್ಮ ಜ್ಞಾನಸಂಪ್ರದಾಯದಲ್ಲಿ ಈ ವಿಧವಾದ ಸವಿಮರ್ಶ ಜಿಜ್ಞಾಸೆಯೂ ಇದೆ.

## ೨೮. ಹನುಮಂತನ ಪ್ರಾಚೀನ ಉದಾಹರಣೆ

ಜ್ಞಾನದ ಉದ್ದೇಶವೆಂದರೆ, ಶ್ರದ್ಧೆ ಮತ್ತು ಕಲ್ಪನೆಗಳನ್ನು ಒಂದು ಶಿಸ್ತಿಗೆ ಒಳಪಡಿಸುವುದು. ಇದರ ಪರಿಣಾಮವಾಗಿ ಈ ಮೂರೂ ವೀರತನದ ಕ್ರಿಯೆಯನ್ನು ಮತ್ತು ಸಮರ್ಪಿತಭಾವವನ್ನು ಹೊಂದಿದಂತೆ ಸಮಾಜಾಭಿಮುಖವಾದ ಇಚ್ಛಾಶಕ್ತಿಯಾಗಿ ಹೊರಹೊಮ್ಮುತ್ತವೆ. ಗೀತೆಯಲ್ಲಿನ ಬುದ್ಧಿಯೋಗದ ಸಮಷ್ಟಿ ಆಧ್ಯಾತ್ಮಯೋಗವೆಂದರೆ ಇದೇ.

ನಮ್ಮ ರಾಷ್ಟ್ರೀಯ ಆಧ್ಯಾತ್ಮಿಕ ಸಂಪ್ರದಾಯದಲ್ಲಿ ಈ ತೆರನಾದ ಸಮಷ್ಟಿಯೋಗಕ್ಕೆ ಅತ್ಯಂತ ಸುಂದರವಾದ ನಿದರ್ಶನವೆಂದರೆ ಹನುಮಂತ. ಅವನು ಒಮ್ಮೆಯೇ ಭಾವಭರಿತ ಭಕ್ತನಾಗಿದ್ದ. ನಮ್ಮ ರಾಮನಾಮ ಸ್ತೋತ್ರಗಳು ತಿಳಿಸುವಂತೆ ಅವನು ಜ್ಞಾನಿ, ಬುದ್ಧಿಮತಾಂ ವರಿಷ್ಠಂ, ಬುದ್ಧಿವಂತ ಮನುಷ್ಯರಲ್ಲಿ ಶ್ರೇಷ್ಠನು. ಹೀಗೆ ಕಲ್ಪನೆ, ಭಾವನೆಗಳು ಮತ್ತು ಭಾವವನ್ನಾಧರಿಸದ ಭಕ್ತಿ ಒಂದೆಡೆಯಿದೆ. ಮತ್ತೊಂದೆಡೆ ವಿಚಾರ ಹಾಗೂ ವಿವೇಚನೆಯನ್ನು ಅವಲಂಬಿಸಿರುವ ಜ್ಞಾನವಿದೆ. ಅದರ ಹಿನ್ನಲೆಯಲ್ಲಿ ಪ್ರಬಲವಾದ ಅರ್ಪಿತ ಮನೋಭಾವ ಮತ್ತು ಪರಾಕ್ರಮದ ಕ್ರಿಯೆಗಳು ಇವೆರಡು ಅವನಲ್ಲಿ ಪ್ರಸ್ಫುಟಗೊಂಡಿದ್ದವು. ಭಗವದ್ಗೀತೆಯು ಬೋಧಿಸುವಂತೆ ಯಾವನು ಸ್ಪಷ್ಟವಾದ ಆಲೋಚನೆ, ಸಮೃದ್ಧಭಾವನೆ, ಕಲ್ಪನೆಗಳು, ದೃಢನಿರ್ಧಾರ ಇವನ್ನು ಮೇಳೈಸಿ ಕೊಂಡಿರುವನೊ ಅವನೇ ನಿಜವಾದ ಭಕ್ತ. ಅದೇ ಭಾರತದ ಸನಾತನಧರ್ಮದ ಅಥವಾ ಶಾಶ್ವತ ಧರ್ಮದ ಗಹನವಾದ ಬೋಧನೆ. ಯಾವುದಾದರೊಂದು ಅಥವಾ ಪ್ರತಿಯೊಂದು ವಿವೇಕವಿಲ್ಲದ ನಂಬುಗೆಯಾಗಲಿ, ಅಂಧಶ್ರದ್ಧೆಯಾಗಲಿ ಧರ್ಮದ ಅಂಗವಾಗುವುದಿಲ್ಲ. ಮಾನವನಿಗೆ ಸಂಬಂಧಿಸದ

ಅಥವಾ ನೈತಿಕ ಹಾಗೂ ಆಧ್ಯಾತ್ಮಿಕ ಪ್ರಭಾವವಿರದ ಕಾಗೆ ಗುಬ್ಬಚ್ಚಿಗಳ ಕಥೆಗಳನ್ನು ನಂಬುವುದು ಧರ್ಮದ ಅಂಗವೆನಿಸುವುದಿಲ್ಲ. ಮಾಟ, ಯಕ್ಷಿಣೀವಿದ್ಯೆ ಮತ್ತು ಪವಾಡಗಳನ್ನು ನಂಬುವುದು ಧರ್ಮದ ಭಾಗವಾಗುವುದಿಲ್ಲ.

ಧರ್ಮವು ಸತ್ಯದ ಬಾಹ್ಯೇಂದ್ರಿಯದ ಹೊರ ಪರದೆಯನ್ನು ಭೇದಿಸಿ ಅಮರ ಮತ್ತು ದಿವ್ಯದ ಅನ್ವೇಷಣೆಯಲ್ಲಿರುವ ಮಾನವನ ಮನಸ್ಸಿಗೆ ಸಂಬಂಧಿಸಿದ ಒಂದು ಆಳವಾದ ವಿದ್ಯೆ. ಭೌತ ವಿಜ್ಞಾನಗಳ ಶಿಸ್ತಿನ ಮೂಲಕ ಮತ್ತು ಸಾಮಾಜಿಕ—ರಾಜಕೀಯ ಶಿಸ್ತಿನಿಂದ ಕೂಡಿದ ನೈತಿಕತೆ ಯಿಂದ ಅಹಂಪ್ರವೃತ್ತಿಯ ವಿಸ್ತರಣೆಯ ಮೂಲಕ ಪ್ರಾಥಮಿಕ ಹಂತದಲ್ಲಿ ನಾವು ಇದನ್ನು ಸಾಧಿಸುತ್ತೇವೆ. ಇದರಿಂದ ಮಾನವನು ಪ್ರೀತಿ, ಅರ್ಪಣೆ ಮತ್ತು ಸೇವಾ ಮನೋಭಾವವನ್ನು ಬೆಳೆಸಿಕೊಂಡು ಮನೋಸಾಮಾಜಿಕವಾಗಿ ವಿಕಾಸಹೊಂದುತ್ತಾನೆ. ಆದರೆ ಅತ್ಯಂತ ಆಳದಲ್ಲಿರುವ ಆತ್ಯಂತಿಕ ಸತ್ಯವು ಉನ್ನತ ಅಧ್ಯಾತ್ಮವಿದ್ಯೆಯಾದ ಧಾರ್ಮಿಕ ಪ್ರಯೋಗದ ಮೂಲಕವೇ ಪಡೆಯುವಂತಹುದು. ಈ ಆಧ್ಯಾತ್ಮವಿದ್ಯೆ ಎಲ್ಲರ ಜನ್ಮಸಿದ್ಧ ಹಕ್ಕು. ಈ ಸತ್ಯವು ಮಾನವನ ಅಂತರಾತ್ಮವಾಗಿಯೂ ಹೊರಜಗತ್ತಿನ ಅನಂತ ಪರಬ್ರಹ್ಮವಾಗಿಯೂ—ಪ್ರಕೃತಿ ಮತ್ತು ಮಾನವನ ಐಕ್ಯಕ ಆತ್ಮವಾಗಿ—ಸಾಕ್ಷಾತ್ಕರಿಸಲ್ಪಡುತ್ತದೆ.

## ೨೯. ಆಂತರಿಕ ಒಳನೋಟದ ಫಲ ಮತ್ತು ಅದರ ವಿಧಾನಗಳು

ಹೇಗೆ ಈ ಕಣ್ಣುಗಳು ಆ ಸತ್ಯವನ್ನು ತೋರಿಸಬಲ್ಲವು ? ಹೇಗೆ ತಾನೇ ಈ ಕಿವಿಗಳು ಅದನ್ನು ವ್ಯಕ್ತಪಡಿಸಬಲ್ಲವು ? ಇಂದ್ರಿಯಗಳಿಂದ ಸಾಧ್ಯವಿಲ್ಲ. ಇಂದ್ರಿಯಗಳಿಗೆ ವಶವಾಗಿರುವ ಬುದ್ಧಿಯು ಅದನ್ನು ತೋರಿಸಲಾರದು. ಆದರೆ, ಪರಿಶುದ್ಧವಾದ, ಏಕಾಗ್ರತೆಯುಳ್ಳ, ಶುದ್ಧಭಾವನೆ, ಶುದ್ಧ ಬುದ್ಧಿ, ಶುದ್ಧ ಸಂಕಲ್ಪಗಳನ್ನು ತನ್ನೊಳಗೆ ಸಮ್ಮಿಳಿತಗೊಳಿಸಿಕೊಳ್ಳುತ್ತದೆ. ಮನಸ್ಸೇ ಬುದ್ಧಿಯೆನಿಸಿ ಕೊಳ್ಳುತ್ತದೆ. ಈ ಧೀ ಶಕ್ತಿಯೇ ಸತ್ಯದ ಆಂತರ್ಯಕ್ಕೆ ಪ್ರವೇಶಿಸಬಲ್ಲದು. ಕಠೋಪನಿಷತ್ತಿನಲ್ಲಿ ಯಮನು ನಚಿಕೇತನಿಗೆ ವಿವರಿಸಿದಂತೆ (೬,೭–೯) :

ಇಂದ್ರಿಯೇಭ್ಯಃ ಪರಂ ಮನೋ
ಮನಸಃ ಸತ್ತ್ವಮುತ್ತಮಮ್ ।
ಸತ್ತ್ವಾದಧಿ ಮಹಾನಾತ್ಮಾ
ಮಹತೋ ಅವ್ಯಕ್ತಮುತ್ತಮಮ್ ॥

*ಇಂದ್ರಿಯಗಳಿಗಿಂತ ಮನಸ್ಸು ಶ್ರೇಷ್ಠವಾದದ್ದು, ಮನಸ್ಸಿಗಿಂತ ಬುದ್ಧಿ ಉತ್ತಮ, ಬುದ್ಧಿಗಿಂತ ಮಹತ್ ಎಂಬ ಆತ್ಮನು ಅಧಿಕನು, ಮಹತ್ತಿಗಿಂತ ಅವ್ಯಕ್ತ (ಪ್ರಕೃತಿಯ ಅವಿಕೃತ ಸ್ಥಿತಿ) ಶ್ರೇಷ್ಠವಾದದ್ದು.*

ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ
ಯಂ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ

*ಆದರೆ ಅದಕ್ಕಿಂತಲೂ ವ್ಯಾಪಕವಾದ ಲಿಂಗವಿಲ್ಲದ (ಯಾವುದರಿಂದ ಅರಿಯುತ್ತೇವೋ ಅದಕ್ಕೆ ಲಿಂಗ ಎಂದು ಹೆಸರು) ಪುರುಷನೇ ಶ್ರೇಷ್ಠನು. ಅವನನ್ನು ಅರಿತು ಜೀವಿಯು ಮುಕ್ತನಾಗುತ್ತಾನೆ. ಮತ್ತು ಅಮೃತತ್ವವನ್ನು ಹೊಂದುತ್ತಾನೆ.*

ನ ಸಂದೃಶೇ ತಿಷ್ಠತಿ ರೂಪಮಸ್ಯ
ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।

ಹೃದಾ ಮನೀಷಾ ಮನಸಾ ಅಭಿಕ್ಲುಪ್ತೋ
ಯ ಏತತ್ ವಿದುಃ ಅಮೃತಾಸ್ತೇ ಭವಂತಿ ॥

*ಇವನ ರೂಪವು ದೃಗ್ಗೋಚರವಾಗುವುದಿಲ್ಲ. ಯಾವನೂ ಇವನನ್ನು ಕಣ್ಣಿನಿಂದ ನೋಡಲಾರ. ಮನಸ್ಸನ್ನು ನಿಯಂತ್ರಿಸುವ ಬುದ್ಧಿಯಿಂದ, ಮನನರೂಪದ ಸಮ್ಯಕ್‌ದರ್ಶನದಿಂದ ಪ್ರಕಾಶಿತನಾದರೆ ಆಗ ಆತ್ಮನನ್ನು ಅರಿಯಬಹುದು. ಯಾರು ಇದನ್ನು ತಿಳಿದುಕೊಳ್ಳುತ್ತಾರೋ ಅವರು ಅಮೃತರಾಗುತ್ತಾರೆ.*

ನೀವು ಭೌತಿಕದೇಹವನ್ನು ಕತ್ತರಿಸಿ ತೆಗೆಯಿರಿ, ಅದನ್ನು ಪರೀಕ್ಷಿಸಿ, ನೀವು ಅಲ್ಲಿ ಆತ್ಮನನ್ನು ಕಾಣಬಲ್ಲಿರಾ ? ಅದು ಸಾಧ್ಯವಾಗದು, ಏಕೆಂದರೆ ಅದು ಆತ್ಮ ; ಅದು ಅನಾತ್ಮವಲ್ಲ, ಅದು ದೃಕ್‌ದ್ರಷ್ಟಾರ, ವೀಕ್ಷಿಸುವವನು, ಅದು ದೃಶ್ಯವಲ್ಲ ; ಅದು ನೋಡಲ್ಪಡುವುದಿಲ್ಲ. ಭೌತಿಕ ವಿಜ್ಞಾನವು ಅಲ್ಲಿ ಅಪ್ರಸ್ತುತ. ಅದರ ಕಾರ್ಯ ಅಲ್ಲಿಗೆ ಮುಗಿಯುವುದು. ಶುದ್ಧ ವಿಜ್ಞಾನ ತನ್ನ ಕ್ಷೇತ್ರದಲ್ಲಿ, ದೃಶ್ಯಪ್ರಪಂಚವನ್ನು ಕಂಡುಹಿಡಿಯುವ ಪ್ರಯಾಣದ ಅಂತ್ಯದಲ್ಲಿ ಅನ್ವೇಷಕನನ್ನು ಅಜ್ಞಾತವಾದ ದೃಕ್ ಎಂಬ ದಡದಲ್ಲಿ ಇಳಿಸುತ್ತದೆ. 'ಸೂಕ್ಷ್ಮದೃಷ್ಟಿಯುಳ್ಳವರು ಆತ್ಮನನ್ನು ದರ್ಶಿಸಬಹುದು' ಎಂದು ಕೊನೆಯ ಶ್ಲೋಕವು ಹೇಳುತ್ತದೆ. ಮನಸ್ಸು ಮತ್ತು ಇಂದ್ರಿಯಗಳ ಶಕ್ತಿಗಳನ್ನು ಅಂತರ್ಯದ ಕಡೆಗೆ ತಿರುಗಿಸುವ, ಚಿತ್ತೈಕಾಗ್ರತೆ ಮತ್ತು ನೈತಿಕ ಶೀಲವೇ ಆಧಾರವಾಗಿರುವ ಅಂತರ್ದೃಷ್ಟಿ ಮಾತ್ರವೇ ಪರಮಾತ್ಮನನ್ನು ದರ್ಶಿಸಬಲ್ಲದು.

ಐಂದ್ರಿಯಕ ಕ್ಷೇತ್ರದ ಅನುಭವದಲ್ಲಿ ಶ್ರುತಿಯು (ಉಪನಿಷತ್ತುಗಳು) ಪ್ರಮಾಣವಲ್ಲ ಎಂಬುದನ್ನು ಭಾರತೀಯ ಸಂಪ್ರದಾಯವು ಸಮರ್ಥಿಸುತ್ತದೆ. ಅಲ್ಲಿ ನಾವು ಭೌತಿಕ ವಿಜ್ಞಾನಗಳೇ ಪ್ರಮಾಣ ಎಂಬುದನ್ನು ನಾವು ಅನುಸರಿಸಬೇಕು. ನಮ್ಮ ಶರೀರಕ್ಕೆ ರೋಗ ಉಂಟಾದಾಗ ನಾವು ಭೌತಿಕ ವಿಜ್ಞಾನದಿಂದಾದ ಔಷಧಿಯ ನೆರವನ್ನು ಪಡೆಯಬೇಕಾಗಿದೆ. ಅದು ಆಧುನಿಕ ಅಲೋಪತಿ ಅಥವಾ ಯೋಗ ಪೋಷಿತ ಮನೋರೋಗ ಚಿಕಿತ್ಸೆ ಆಗಿರಬಹುದು. ರೋಗವನ್ನು ನಿವಾರಿಸಿಕೊಳ್ಳಲು ನಕಲಿ ವೈದ್ಯನ ಬಳಿಗಾಗಲಿ ಅಥವಾ ಧಾರ್ಮಿಕ ಜಾದೂಗಾರರ ಬಳಿ ಹೋಗುವುದು ಮೂರ್ಖತನವಾಗುತ್ತದೆ. ಆದರೆ ರೋಗಗಳು ಆಧ್ಯಾತ್ಮಿಕ ಕೊರತೆಗೆ ಸಂಬಂಧಿಸಿದ್ದಾಗಿದ್ದರೆ, ಹಿಂದೂ ಸಂಪ್ರದಾಯವು ಷಡ್ರಿಪುಗಳೆಂದು ಸೂಚಿಸುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಂದ ಉದ್ಭವಿಸುವ, ಆಧ್ಯಾತ್ಮಿಕತೆಯ ಅಭಾವದಿಂದ ಉಂಟಾದ, ರೋಗಗಳಾಗಿದ್ದರೆ ಅದರ ನಿವಾರಣೆಗೆ ಆಧ್ಯಾತ್ಮಿಕ ವಿಜ್ಞಾನವನ್ನು ಅಶ್ರಯಿಸುವುದೇ ಯುಕ್ತ. ಭೌತಿಕ ಆಹಾರ, ವಸ್ತ್ರ ಮತ್ತು ವಸತಿಗಳ ಉತ್ಪತ್ತಿಗಾಗಿ ಮನುಷ್ಯನು ಭೌತಿಕ ವಿಜ್ಞಾನಗಳನ್ನೇ ಆಶ್ರಯಿಸಬೇಕು. ಆದರೆ ಪ್ರೇಮ, ಕರುಣೆ, ದಯೆ, ಅರ್ಪಣೆ, ಶಾಂತಿ, ಸಂತೃಪ್ತಿ ಇವುಗಳನ್ನು ಪಡೆಯಲು ಮಾನವನು ಆಂತರಿಕ ಜೀವನದ ವಿಜ್ಞಾನವನ್ನೇ ಅವಲಂಬಿಸಬೇಕು. ಅದೇ ಧರ್ಮ, ಆಧ್ಯಾತ್ಮಿಕ ವಿಜ್ಞಾನ.

ನಾವು ಭೌತವಿಜ್ಞಾನದ ಕ್ಷೇತ್ರದಲ್ಲಿ ಇಂದ್ರಿಯಗಳನ್ನು ಮತ್ತು ಅವು ನೀಡುವ ವಿಷಯಗಳನ್ನು ಅವಲಂಬಿಸಿದ್ದೇವೆ. ಆದರೆ ಧರ್ಮವಿಜ್ಞಾನದ ಕ್ಷೇತ್ರದಲ್ಲಿ ನಾವು ಇಂದ್ರಿಯಗಳಿಗೆ ಮತ್ತು ಇಂದ್ರಿಯ ಪ್ರಚೋದಿತ ಚಿತ್ತಕ್ಕೆ ಮತ್ತು ಅವುಗಳಿಂದ ವ್ಯಕ್ತವಾದ ಪ್ರಪಂಚಕ್ಕೆ ವಿದಾಯ ಹೇಳುತ್ತೇವೆ. ಆಧ್ಯಾತ್ಮಿಕ ವಿಜ್ಞಾನದಲ್ಲಿ ಧ್ಯಾನವು ಒಂದು ವಿಶಿಷ್ಟ ಸಾಧನ. ಅದರಲ್ಲಿ ಮೊದಲು ನಾವು ನಿರ್ವಹಿಸಬೇಕಾದ್ದು ಇಂದ್ರಿಯಗಳು ಮತ್ತು ಇಂದ್ರಿಯಗಳಿಂದ ಪ್ರಚೋದಿತ ಚಿತ್ತದಿಂದ ದೂರವಿರಬೇಕು. ಅವು ಆ ಕ್ಷೇತ್ರದಲ್ಲಿ ನಮಗೆ ಯಾವ ಪ್ರಯೋಜನಕ್ಕೂ ಬಾರದು. ಏಕೆಂದರೆ ನಾವು ಇಂದ್ರಿಯಗಳು ವ್ಯಕ್ತಪಡಿಸುವ ಸತ್ಯದ ಅನ್ವೇಷಣೆಯಲ್ಲಿ ತತ್ಪರರಾಗಿಲ್ಲ. ಅದರಿಂದ ದೊರೆಯುವ ಸತ್ಯವಲ್ಲದೆ

ಬೇರೇನೂ ಇಲ್ಲ ಎಂದಾಗಿದ್ದರೆ, ನಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳುವುದರಲ್ಲಿ ಇಂದ್ರಿಯಗಳಿಂದ ದೂರವಿರುವಲ್ಲಿ ಮತ್ತು ಚಿತ್ತವನ್ನು ಶಾಂತಗೊಳಿಸುವ ಪ್ರಯತ್ನದಲ್ಲಿ ಯಾವ ಅರ್ಥವೂ ಇಲ್ಲ. ಇದಕ್ಕೆ ಬದಲಾಗಿ ನಾವು ನಮ್ಮ ಇಂದ್ರಿಯಗಳನ್ನು ಹೊರಚಾಚಿರುತ್ತೇವೆ. ಅವುಗಳ ಶಕ್ತಿಯನ್ನು ಹೊರಗೆ ಚೆಲ್ಲುತ್ತೇವೆ. ನಮ್ಮ ಸಾಧಾರಣವಾದ ಪ್ರಾಪಂಚಿಕ ಜೀವನದಲ್ಲಿ ನಾವು ಮಾಡುವುದು ಇದನ್ನೇ. ಆದರೆ ಆಳವಾದ, ವಿಶಾಲವಾದ ಹೆಚ್ಚು ಅರ್ಥಪೂರ್ಣವಾದ ಸತ್ಯದ ಆಯಾಮವು, ಅಂದರೆ ನಮ್ಮ ಸ್ವಂತ ವ್ಯಕ್ತಿತ್ವವು, ಇಂದ್ರಿಯಾನುಭವವನ್ನು ಮೀರಿದ ಸ್ತರದಲ್ಲಿ ನಮ್ಮನ್ನು ನಿರೀಕ್ಷಿಸುತ್ತಿದೆ ಎಂಬುದನ್ನು ನಾವು ಅರಿಯಬೇಕು. ಅದನ್ನು ನಾವು ಅನುಭವಿಸಬೇಕಾದಲ್ಲಿ ಚಿತ್ತವನ್ನು ಶಾಂತಗೊಳಿಸಬೇಕು, ಇಂದ್ರಿಯಗಳನ್ನು ಶಿಸ್ತಿಗೊಳಪಡಿಸಬೇಕು. ಹಿಂದೂ ಸಂಪ್ರದಾಯದಲ್ಲಿ ಈ ಪ್ರಕ್ರಿಯೆಗಳನ್ನು ಕ್ರಮವಾಗಿ ಶಮ ಮತ್ತು ದಮ ಎಂದು ಕರೆಯಲಾಗಿದೆ. ಇದನ್ನು ಸುದೀರ್ಘ ಜೀವವಿಕಾಸದ ಮೂಲಕ ಪ್ರಕೃತಿಯು ನಮಗೆ ಸಾಧಿಸಿಕೊಟ್ಟಿರುವ ಭೌತಿಕ ಸಂತುಲನದ (homeostasis) ಮಾನಸಿಕ ಪ್ರತಿರೂಪ ಎಂದು ಕರೆಯಬಹುದು.

ಆಧುನಿಕ ಭೌತವಿಜ್ಞಾನವು ಈಗ ಮನಸ್ಸೆಂಬ ಹೊಸ ದತ್ತಾಂಶವನ್ನು ಎದುರಿಸುವ ಹಂತವನ್ನು ತಲುಪಿದೆ ಮತ್ತು ನ್ಯೂಕ್ಲಿಯರ್ ಭೌತಶಾಸ್ತ್ರದಲ್ಲಿ ಪ್ರಜ್ಞೆಯು ಸುಸ್ಪಷ್ಟ ವಿಷಯವಾಗಿದೆ. ಇಪ್ಪತ್ತನೆ ಶತಮಾನದ ಜೀವಶಾಸ್ತ್ರವು, ಮಾನವ ಹಂತದಲ್ಲಿ ಜೀವವಿಕಾಸವು ಮನೋ-ಸಾಮಾಜಿಕ ಹಂತವನ್ನು ತಲುಪುತ್ತದೆ ಎಂಬ ವಿಷಯವನ್ನು ಒತ್ತಿ ಹೇಳುತ್ತದೆ. ಸಮರೋತ್ತರ ಇತರ ವೈಜ್ಞಾನಿಕ ಬರಹಗಾರರೂ ಈ ಉತ್ತೇಜಕ ಸಾಧ್ಯತೆಯನ್ನು ಉಲ್ಲೇಖಿಸುತ್ತಾರೆ. ಸೀಮನ್‌ನ ಎಲೆಕ್ಟ್ರೋ ಮೆಡಿಕಾ ಎಂಬ ನಿಯತಕಾಲಿಕೆಯಲ್ಲಿ ಪ್ರಕಟವಾಗಿರುವ ಹೆಚ್. ಶಿಪ್ಪರ್‌ಗೇ ಎಂಬುವನು ಬರೆದಿರುವ 'ಔಷಧಿಯ ಪ್ರಗತಿಯ ಮುಖಗಳು' ಎಂಬ ಲೇಖನದಲ್ಲಿ ಅಂತಹ ಒಂದು ವಿಷಯವು ಇವೆ (೫ : ೧೯೭೦ನೇ ಸಂಚಿಕೆ) ಅದರಲ್ಲಿ ಹೀಗಿದೆ (೩೦೦) :

*ನಾವು ವಿಶ್ವವನ್ನು ಮತ್ತು ಚಂದ್ರನ ಹಿಂಬದಿಯಲ್ಲಿರುವುದನ್ನು ಇನ್ನೂ ಸಂಪೂರ್ಣ ಅರಿತಿಲ್ಲದಿರುವಾಗಲೇ ನಮ್ಮೆದುರಿನಲ್ಲಿ ಮತ್ತೊಂದು ನೂತನ ವಿಶ್ವವು, ಅಂದರೆ ನಿಸರ್ಗದ ಸಂಪೂರ್ಣ ಅಂತರಂಗವು, ಆತ್ಮದ ಸಾಮ್ರಾಜ್ಯವೆಂದು ಈ ಹಿಂದೆ ಕರೆಯಲ್ಪಡುತ್ತಿದ್ದ ಗಾಢತೆಯ ಆಯಾಮವು, ಗೋಥೇಯು ಹೇಳುವ 'ಅಂತರಂಗದ ಮತ್ತೊಂದು ವಿಶ್ವವು' ನಮಗಾಗಿ ನಿರೀಕ್ಷಿಸುತ್ತಿದೆ. ಇದು ವಾಸ್ತವಿಕವಾಗಿ ಒಂದು ಅನಂತ ವಿಶ್ವಸಂಘಾತವಾಗಿದೆ. ನಮ್ಮ ಆಧುನಿಕ ಪ್ರಪಂಚದ ನೋಟವು ಎಲ್ಲಿಯೂ ಒಂದು ನಿರ್ದಿಷ್ಟ ಪ್ರಪಂಚವನ್ನು ತೋರಿಸುವ ಬದಲಿಗೆ ಪ್ರಪಂಚಗಳನ್ನು, ಸನ್ನಿವೇಶಗಳನ್ನು, ಮಾನವಶಾಸ್ತ್ರಗಳನ್ನು, ತುಣುಕುಗಳನ್ನು, ಉತ್‌ಪ್ಲವನದ ಮಗ್ಗಲುಗಳನ್ನು ತೋರುತ್ತದೆ. ಎರಡನೆಯ ಸಹಸ್ರ ಕಾಲಮಾನದ ಅಂತಿಮಕಾಲದ ಗಾಂಭೀರ್ಯ ಒತ್ತಡ ಮತ್ತು ಚಲನಶೀಲವಾದ ದೃಶ್ಯಪರಂಪರೆಯ ಪ್ರತಿಯೊಂದು (ಘಟನೆಯೂ)ನಾವು ಎರಡನೆಯ ಜ್ಞಾನೋದಯದ ಮಧ್ಯಭಾಗದಲ್ಲಿದ್ದೇವೆ ಎಂಬ ತೀರ್ಮಾನವನ್ನು ಸೂಚಿಸುತ್ತದೆ.*

ಚಾರ್ಲ್ಸ್ ಶೆರಿಂಗ್‌ಟನ್‌ನು "Man and his Nature" ಎಂಬ ವಿಷಯದ ಮೇಲೆ ತನ್ನ ಗಿಫರ್ಡ್ ಭಾಷಣದಲ್ಲಿ ಈ ಹಿಂದೆ ಸೂಚಿಸಿದಂತೆ ತನ್ನ ವಿಷಯವಾದ ನರಶಾಸ್ತ್ರದ ವಿಷಯದಲ್ಲಿ ಕಾಡುತ್ತಿರುವ ಮನಸ್ಸು ಮತ್ತು ಚೈತನ್ಯದ ಇಂತಹ ರಹಸ್ಯವನ್ನು ಕುರಿತು ಈ ಮುನ್ನ ಪ್ರಸ್ತಾಪಿಸಿರುವಂತೆ ಸೂಚಿಸಿದ್ದಾನೆ. (ಪು. ೨೫೫, ಪೆಂಗ್ವಿನ್ ಪ್ರಕಾಶನ, ೧೯೫೧) :

*ಅರಿವು ಪತ್ಯಕ್ಷಾನುಭವವು ಯಾವುವನ್ನಾದರೂ '(ಏನನ್ನಾದರೂ) ಗ್ರಹಿಸುವಂತಾಗಲು (ಮನಸ್ಸಿನ) ಸಹಾಯ ಬೇಕಾಗಿರುವುದರಿಂದ, ಮನಸ್ಸು ನಮ್ಮ ವಿಶೇಷ ಪ್ರಪಂಚದಲ್ಲಿ ಒಂದು*

*ಛಾಯೆಗಿಂತಲೂ ಮೂರ್ತವಾಗಿ ಪರಿಣಮಿಸುವುದು. ಅದು ಅದೃಶ್ಯ, ಅಸ್ಪರ್ಶ ಸ್ಥೂಲ ವಿವರಣೆಗೂ ನಿಲುಕದ ವಸ್ತು. ಅದು ಒಂದು ವಸ್ತುವೇ ಅಲ್ಲ. ಅದು ಐಂದ್ರಿಯಕ ದೃಢೀಕರಣವಿಲ್ಲದೆ ಉಳಿಯುವುದು, ಅಷ್ಟೇಕೆ ಅದಿಲ್ಲದೆ ಚಿರಕಾಲ ಉಳಿಯುತ್ತದೆ.*

ಇದರ ಜೊತೆ ಜೊತೆಯಾಗಿಯೇ ಭೌತಪ್ರಪಂಚದ ಸ್ವರೂಪ ಎಂಬ ವಿಷಯದ ಮೇಲೆ ಗಿಫರ್ಡ್ ಭಾಷಣ ಮಾಲೆಯಲ್ಲಿನ ಪೀಠಿಕಾ ಭಾಗದಲ್ಲಿ ವಸ್ತುವಿನ ರಹಸ್ಯವನ್ನು ಕುರಿತು, ಈ ಹಿಂದೆಯೇ ತಿಳಿಸಿರುವಂತೆ ಸರ್, ಆರ್ಥರ್ ಎಡಿಂಗ್‌ಟನ್‌ನು ಹೇಳಿರುವುದು ಓದುವುದು ಆಸಕ್ತಿದಾಯಕ.

*ಭೌತಿಕಪ್ರಪಂಚ ದಲ್ಲಿ ಪರಿಚಿತ ಜೀವನನಾಟಕದ ನೆರಳಿನ ನಕ್ಷೆಯ ಪ್ರದರ್ಶನವನ್ನು ನಾವು ವೀಕ್ಷಿಸುತ್ತೇವೆ. ನನ್ನ ಮೊಳಕೈನ ನೆರಳು ಮೇಜಿನ ನೆರಳಿನ ಮೇಲೆ ಕಾಗದದ ನೆರಳಿನ ಮೇಲೆ ಮಸಿಯ ನೆರಳು ಹರಿಯುತ್ತಿರುವಂತೆ ನಿಂತಿದೆ... ಭೌತವಿಜ್ಞಾನವು ನೆರಳಿನ ಪ್ರಪಂಚವನ್ನು ಕುರಿತು ವಿಚಾರಿಸುತ್ತಿದೆ ಎಂಬ ಅರಿವೇ ಇತ್ತೀಚಿನ ಪ್ರಗತಿಗಳಲ್ಲಿ ಅತ್ಯಂತ ಮಹತ್ವ ಗಳಲ್ಲೊಂದಾಗಿದೆ.*

## ೩೦. ಕ್ರಿಯಾತ್ಮಕ ಆಧ್ಯಾತ್ಮಿಕತೆ ಮತ್ತು ಜಡಧಾರ್ಮಿಕತೆಯ ವಿರೋಧ

ವೇದಾಂತವು ಸಾಧಿಸಿರುವ ಅಂತಹ ಆಂತರಿಕ ಸೂಕ್ಷ್ಮಗ್ರಹಣದ ಬೆಳಕಿನಲ್ಲಿ, ಭೌತವಿಜ್ಞಾನ ವಾಗಿರಲಿ ಅಥವಾ ಧಾರ್ಮಿಕವಿಜ್ಞಾನವಾಗಿರಲಿ ಶ್ರದ್ಧೆ ಯುಕ್ತಿಗಳಲ್ಲಿ ಅನ್ಯೋನ್ಯ ಸಹಕಾರ ಅಗತ್ಯ ಎಂಬುದೇ ಭಾರತದ ಒಡಂಬಡಿಕೆಯಾಗಿದೆ. ಅದು ಸತ್ಯದ ಮತ್ತು ಮಾನವನ ಪರಿಪೂರ್ಣತೆಗೆ ಸಂಬಂಧಿಸಿದ ಅನ್ವೇಷಣೆ ಎನಿಸಿರುವುದಾದರೆ ಅವು ಎಂದೂ ಪರಸ್ಪರ ವಿರೋಧಿಗಳಲ್ಲ. ವೈಚಾರಿಕತೆ ಯನ್ನು ಎಷ್ಟೆಷ್ಟು ಬಲಪಡಿಸಿಕೊಳ್ಳುತ್ತೇವೋ ಅಷ್ಟಷ್ಟು ನಮ್ಮ ಧಾರ್ಮಿಕ ಜೀವನ ಸದೃಢವಾಗುತ್ತದೆ. ಯಾವುದೇ ಮೂರ್ಖತನದ ಭ್ರಾಮಕ ಕಲ್ಪನೆ ಅಥವಾ ಅವಿವೇಕದ ತಾತ್ಕಾಲಿಕ ಭಾವವು ಭಕ್ತಿಯಾಗುವುದಿಲ್ಲ. ದೇವರೇ ಸ್ವತಃ ಅನಂತ ಪ್ರೇಮಸ್ವರೂಪ. ಇಂತಹ ಧ್ಯೇಯದ ಕಡೆಗೆ ನಿರ್ದೇಶಿತ ವಾದ ಭಾವವೇ ಭಕ್ತಿ. ರಾಮಕೃಷ್ಣರು ಹೇಳಿದ್ದಾರೆ—'ಭಕ್ತನಾಗಿರು ಆದರೆ ಮೂರ್ಖನಾಗಿರಬೇಡ'— ಎಂದು. ಜ್ಞಾನದ ಅಥವಾ ವಿಚಾರದ ಬಲವಾಗಲಿ ಇಲ್ಲದ ಭಕ್ತರೆಂದು ಅಂಗೀಕೃತವಾಗಿರುವ ಅನೇಕ ಅವಿವೇಕಿಗಳು ನಮ್ಮ ದೇಶದಲ್ಲಿದ್ದಾರೆ. ಇಂತಹ ಭಕ್ತರನ್ನು ಕಪಟ ಗುರುಗಳು ಮತ್ತು ಮಂತ್ರವಾದಿ ಗಳು ಸುಲಭವಾಗಿ ಮೋಸಗೊಳಿಸಿದ್ದಾರೆ. ನಿಜವಾದ ಭಕ್ತನು ಯಾವನಿಂದಲೂ, ಎಂದೂ ವಂಚನೆ ಗೊಳಗಾಗಲಾರ. ಆದರೆ ದುರದೃಷ್ಟವಶಾತ್ ನಮ್ಮ ದೇಶದಲ್ಲಿ ಅನೇಕ ಭಕ್ತರು ಇಂತಹ ಧೂರ್ತರಿಗೆ ಸುಲಭವಾದ ಆಹುತಿಯಾಗಿರುವುದನ್ನು ನಾನು ಬಲ್ಲೆ. ಅವರು ತಮ್ಮ ಧಾರ್ಮಿಕ ಜೀವನದಲ್ಲಿ ವಿಚಾರ ಮತ್ತು ಎಲ್ಲಾ ತಿಳುವಳಿಕೆಯನ್ನು ತ್ಯಜಿಸಿದುದರಿಂದಾಗಿ ಈ ರೀತಿಯ ವಂಚನೆಗೆ ಒಳಗಾಗು ತ್ತಾರೆ. ಅವರು ಸತ್ಯದಲ್ಲಿ ಆಸಕ್ತರಲ್ಲ ; ಆದರೆ ಸ್ವಲ್ಪ ಭಾವುಕತನದಲ್ಲಿ ಅಥವಾ ಧಾರ್ಮಿಕ ಭಾವೋದ್ರೇಕ ಪ್ರವೃತ್ತಿಯಲ್ಲಿ ಆಸಕ್ತಿಯುಳ್ಳವರು. ನಮ್ಮ ಜನರು ಧರ್ಮವನ್ನು ಅದು ಒಂದು ವಿಜ್ಞಾನವೆಂದೂ, ವಿಜ್ಞಾನವಾಗಿರುವುದಾದರೆ ಯಾವುದೇ ಭೌತವಿಜ್ಞಾನದಂತೆ ಅದು ಶ್ರದ್ಧೆ ಮತ್ತು ವಿವೇಚನೆಯ ಆಧಾರದ ಮೇಲಿದೆ ಎಂದೂ ಅರ್ಥಮಾಡಿಕೊಳ್ಳುವುದಾದರೆ ಆಗ ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚಾಗಿ ನಾವು ನೈಜಧರ್ಮವನ್ನು ಕ್ರಿಯಾಶೀಲ ಆಧ್ಯಾತ್ಮಿಕತೆಯನ್ನಾಗಿ ಕಾಣುತ್ತೇವೆ. ಅಲ್ಲದೇ ಅಧಿಕಾಧಿಕ ವಾಗಿ ಸಧ್ಯದಲ್ಲಿರುವ ಗದ್ದಲಮಯದ ಪ್ರದರ್ಶನಾತ್ಮಕತೆ ಜಡಧಾರ್ಮಿಕತೆ ಅಥವಾ ಧಾರ್ಮಿಕ ಮೆರಗನ್ನು ಪಡೆದಿರುವ ಧಾರ್ಮಿಕತೆ ಮಾಯವಾಗುವುದನ್ನು ನೋಡಬಲ್ಲೆವು.

## ೩೧. ಶ್ರದ್ಧೆ ಮತ್ತು ವಿವೇಚನೆ ಹಾಗೂ ಪವಾಡಗಳಿಗಿರುವ ವಿರೋಧ

ಎಲ್ಲಿಯವರೆಗೆ ಜನರು ಯಕ್ಷಿಣೀವಿದ್ಯೆ ಹಾಗೂ ಪವಾಡಗಳ ಬೆನ್ನುಬೀಳುವರೋ ಎಲ್ಲಿಯವರೆಗೆ ಅವರು ನಿಜವಾದ ಮಾವಿನಹಣ್ಣಿಗೂ ಯಕ್ಷಿಣಿಯ ಮಾವಿನಹಣ್ಣಿಗೂ ನಡುವೆ ಇರುವ ವ್ಯತ್ಯಾಸವನ್ನು ಅರಿಯಲಾರರೋ ಅಲ್ಲಿಯವರೆಗೆ ಶ್ರದ್ಧೆ, ವಿಚಾರ (ಯುಕ್ತಿ) ಮತ್ತು ಅನುಭವಗಳನ್ನಾಧರಿಸಿದ ಧರ್ಮಸಂಬಂಧಿ ವಿಜ್ಞಾನವು ಬೆಳೆಯಲಾರದು. ಇಂದ್ರಜಾಲವನ್ನು ಧರ್ಮದೊಡನೆ ಬೆರೆಸುವುದು ಧರ್ಮವನ್ನು ಕೀಳುಮಟ್ಟಕ್ಕಿಳಿಸಿದಂತೆ, ಧರ್ಮವನ್ನು ಕೊಂದಂತೆ. ಶ್ರದ್ಧೆ, ವಿಚಾರ ಹಾಗೂ ಅನುಭವ ವನ್ನವಲಂಬಿಸಿದ ಆಧುನಿಕ ಭೌತವಿಜ್ಞಾನವು ಸಹ ಇಂದ್ರಜಾಲದ ವಿದ್ಯೆಯಿಂದ ಪ್ರತ್ಯೇಕಿಸಲ್ಪಟ್ಟಾಗಲೇ ಪ್ರಗತಿ ಹೊಂದಿತು. ಧರ್ಮಸಂಬಂಧಿ ವಿಜ್ಞಾನದಲ್ಲೂ ಅದೇ ಮಾತು ಸತ್ಯ. ಭೌತವಿಜ್ಞಾನದ ನಿಜವಾದ ಐಂದ್ರಜಾಲಿಕ ವಿದ್ಯೆ ಹಾಗೂ ಪವಾಡವೆಂದರೆ ಸ್ಪಷ್ಟವಾದ ಆಲೋಚನೆ, ಮಾನವನ ಸಾಮಾಜಿಕ ಕ್ಷೇಮ ಹಾಗೂ ಭೌತಿಕ ಸರ್ವತೋಮುಖ ಅಭ್ಯುದಯ ಮತ್ತು ತಾಂತ್ರಿಕ ಅಚ್ಚರಿಗಳು ; ಅದರಂತೆಯೇ ಧರ್ಮಸಂಬಂಧಿ ವಿಜ್ಞಾನದ ನಿಜವಾದ ಇಂದ್ರಜಾಲ ಮತ್ತು ಪವಾಡಗಳೆಂದರೆ ನಿರ್ಭೀತಿ, ಚಾರಿತ್ರ್ಯ, ಬಲ, ಶಾಂತಿ, ಪ್ರೇಮ, ಸೇವೆ ಮತ್ತು ಅರ್ಪಣಾ ಮನೋಭಾವ.

ಭಾರತದ ಶ್ರೇಷ್ಠ ಆಧ್ಯಾತ್ಮಿಕ ಗುರುಗಳು ಪರೀಕ್ಷಿತ ಹಾಗೂ ಪರೀಕ್ಷಣೀಯ ಸತ್ಯಾನ್ವೇಷಕರಾಗಿದ್ದರು. ಆಧುನಿಕ ಭೌತವಿಜ್ಞಾನಿಗಳ ಸತ್ಯದಂತೆ ಉಪನಿಷತ್ತುಗಳು, ಗೀತೆ ಹಾಗೂ ಬೋಧಕರಾದ ಬುದ್ಧ, ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದ ಮುಂತಾದವರಿಗೆ ಸಂಬಂಧಿಸಿದ ಗ್ರಂಥ ಗಳಿಂದಲೂ ಇಂತಹ ಸತ್ಯಗಳ ದರ್ಶನವಾಗುತ್ತದೆ.

ವಾಸ್ತವವಾಗಿ ಬುದ್ಧನು ಹೇಳಿದ ಒಂದು ಮಹತ್ವದ ಮಾತನ್ನು ಭಾರತ ಹಾಗೂ ವಿದೇಶಗಳ ಪ್ರತಿಯೊಂದು ಸಭೆಯಲ್ಲಿಯೂ ಪುನರುಚ್ಚರಿಸಬಯಸುತ್ತೇನೆ. ಆ ಉಪದೇಶವೆಂದರೆ ಯಾರ ಬೋಧನೆಯನ್ನೇ ಆಗಲಿ, ನಂಬುವ ಮುನ್ನ ಅದನ್ನು ವೈಚಾರಿಕವಾಗಿ ಪರೀಕ್ಷಿಸುವುದು. ಬೌದ್ಧ ಸಾಹಿತ್ಯದಲ್ಲಿ ಇದು ಕಾಲಾಮಾರಿಗೆ ನೀಡಿದ ಬೋಧನೆಯೆಂದು ಪ್ರಸಿದ್ಧವಾಗಿದೆ. ಗೋಪ್ಯವಾದ ವಿಷಯವನ್ನು ಕುರಿತಂತೆಯೂ ಬುದ್ಧನು ಹೇಳಿದ ವಿಚಾರವನ್ನು ಭಾರತದ ಎಲ್ಲಾ ವಿದ್ಯಾರ್ಥಿಗಳನ್ನು ಅಂದರೆ, ವಿಜ್ಞಾನ ಮತ್ತು ಧರ್ಮಕ್ಕೆ ಸಂಬಂಧಿಸಿದ ವಿದ್ಯಾರ್ಥಿಗಳನ್ನು ನಾನು ಮನಸ್ಸಿನಲ್ಲಿಟ್ಟುಕೊಂಡು ಹೇಳಬಯಸುತ್ತೇನೆ. ಅದರಿಂದಾಗಿ ನಾವು ಭೌತಿಕ ಬಾಹ್ಯಪ್ರಪಂಚ ಮತ್ತು ಆಂತರಿಕ ಆಧ್ಯಾತ್ಮಿಕ ಪ್ರಪಂಚಗಳೆರಡರಲ್ಲೂ ನಮ್ಮ ದೇಶದಲ್ಲಿ ಒಂದು ಸಮಗ್ರ ವೈಜ್ಞಾನಿಕ ಕ್ರಾಂತಿಯನ್ನೇ ಮಾಡಬಹುದು. ಆನಂದನನ್ನು ಸಂಬೋಧಿಸುತ್ತಾ ಬುದ್ಧನು ಹೇಳಿದನು : 'ರಹಸ್ಯವು ಎಂದೂ ತಥಾಗತನಿಗೆ (ಬುದ್ಧ) ಸೇರುವುದಿಲ್ಲ.' ಬುದ್ಧನ ಬೋಧನೆ ಸದಾ ಮುಕ್ತವಾದುದು. ಅದು ಅವನೇ ವಿವರಿಸಿದಂತೆ 'ಏಹಿ ಪಸ್ಸ, ಏಹಿ ಪಸ್ಸ' ಬಂದು ವೀಕ್ಷಿಸು ಎಂದು. ಬುದ್ಧನು ಮತ್ತೂ ಹೇಳಿದ, 'ಓ ಆನಂದನೆ, ರಹಸ್ಯವು ಮೂರು ವರ್ಗಗಳಿಗೆ ಮೀಸಲಾದದ್ದು.' ಅವು ಯಾವುವು ? 'ರಹಸ್ಯವು—ಪೌರೋಹಿತ್ಯ ಜ್ಞಾನಕ್ಕೆ, ಮಿಥ್ಯಾಸಿದ್ಧಾಂತಗಳಿಗೆ ಮತ್ತು ವೇಶ್ಯೆಯರಿಗೆ ಮಾತ್ರ ಸೇರಿರುತ್ತವೆ' ಇವು ಬುದ್ಧನ ಮಹತ್ವದ ಮಾತುಗಳು. ನಮ್ಮ ಜನರು ಬುದ್ಧನ ಈ ಎರಡು ಉಕ್ತಿಗಳ ಸತ್ವವನ್ನು ಅರಗಿಸಿಕೊಳ್ಳುವುದಾದರೆ ನಾವು ಭಾರತದಲ್ಲಿ ನಿಜವಾದ ಧರ್ಮ ಮತ್ತು ನಿಜವಾದ ಭೌತವಿಜ್ಞಾನದ ವಿಕಾಸವನ್ನು ಕಾಣಬಲ್ಲೆವು.

## ೩೨. ಉಪಸಂಹಾರ

ಸತ್ಯವನ್ನರಿಯುವ ತೀವ್ರಾಸಕ್ತಿ ಮತ್ತು ತೀರ್ಮಾನಗಳನ್ನು ಪ್ರಯೋಗಕ್ಕೊಳಪಡಿಸುವ ನಿರ್ಬಂಧ ಗಳುಳ್ಳ ವೈಜ್ಞಾನಿಕಸ್ವಭಾವ ಮತ್ತು ಮನೋಭಾವವು, ವೇದಾಂತದಲ್ಲಿ ತಿಳಿದಿರುವಂತೆ, ಭೌತವಿಜ್ಞಾನ ಹಾಗೂ ಧರ್ಮ ಎರಡಕ್ಕೂ ಸಮಾನವಾದ ತರಬೇತಿಯಾಗಿವೆ. ಒಬ್ಬ ವಿಜ್ಞಾನಿಯು ತನ್ನ

ಪ್ರಯೋಗಾಲಯದಲ್ಲಿ ಕೆಲವು ಸತ್ಯಗಳನ್ನು ಕಂಡುಹಿಡಿಯುತ್ತಾನೆ. ಅವನು ಅದನ್ನು ವೈಜ್ಞಾನಿಕ ನಿಯತಕಾಲಿಕೆಯೊಂದರಲ್ಲಿ ಪ್ರಕಟಿಸುತ್ತಾನೆ. ಮತ್ತೊಬ್ಬ ವಿಜ್ಞಾನಿಯು ಅದನ್ನು ತಾಳೆನೋಡುತ್ತಾನೆ ಮತ್ತು ಪರೀಕ್ಷಿಸುತ್ತಾನೆ. ಇದು ಇಷ್ಟಕ್ಕೇ ನಿಲ್ಲುವುದಿಲ್ಲ. ಇನ್ನಿತರ ಸಂಶೋಧಕರು ಪುನಃ ತಾಳೆ ನೋಡುತ್ತಾರೆ. ಹೀಗೆ ಅದು ಅಂತಿಮವಾಗಿ ದೃಢಪಟ್ಟ ವೈಜ್ಞಾನಿಕಸತ್ಯವಾಗಿ ಪ್ರಕಟವಾಗುತ್ತದೆ. ಅಂತೆಯೇ ನಮ್ಮ ಉಪನಿಷತ್ತಿನಲ್ಲಿನ ಧಾರ್ಮಿಕ ಪ್ರಪಂಚದಲ್ಲೂ ಇಂತಹ ಕ್ರಮವೇ ಇರುತ್ತದೆ. ಋಷಿಯೊಬ್ಬನು ಮನುಷ್ಯನ ಭೌತಿಕ, ನರವ್ಯೂಹ ಮತ್ತು ಮಾನಸಿಕ ಆಯಾಮಗಳ ಹಿನ್ನಲೆಯಲ್ಲಿರುವ ಪರಮಸತ್ಯವೊಂದನ್ನು ಕಂಡುಹಿಡಿದ ಮತ್ತು ಅವನು ಅದನ್ನು ಆತ್ಮವೆಂದೂ, ದಿವ್ಯಾತ್ಮವೆಂದೂ ಕರೆದ. ಮತ್ತೊಬ್ಬ ಋಷಿಯು ಈ ಸವಾಲಾಗಿರುವ ತೀರ್ಮಾನವನ್ನು ಕೈಗೆತ್ತಿಕೊಂಡು ಪುನಃ ಪರಿಶೀಲಿಸಿದ. ಅದನ್ನು ನಿಜವೆಂದು ಕಂಡುಕೊಂಡ. ಅನಂತರ ಅದು ಇತರ ಅನೇಕ ಋಷಿಗಳ ಪರೀಕ್ಷೆಯಲ್ಲಿಯೂ ಉತ್ತೀರ್ಣವಾಯಿತು. ಅಂತಿಮವಾಗಿ ಅದು ಮನುಷ್ಯನಿಗೆ ಸಂಬಂಧಿಸಿದ ಸತ್ಯವಾಗಿ ಮಾನವೀಯ ಸಾಧ್ಯತೆಗಳ ಸತ್ಯವಾಗಿ, 'ತತ್ ತ್ವಂ ಅಸಿ'—ಅದು ನೀನೇ ಆಗಿದ್ದೀಯೆ ಎಂದು ಹೊರಹೊಮ್ಮಿತು.

ಆದ್ದರಿಂದ ಇದು ಕೇವಲ ಅಭಿಪ್ರಾಯವಲ್ಲ ಅಥವಾ ವ್ಯಕ್ತಿಗತ ನಿಲುವೂ ಅಲ್ಲ, ಮಾನವನಿಗೆ ಸಂಬಂಧಿಸಿದ, ಎಲ್ಲಾ ಮಾನವರಿಗೂ ಸೇರಿದ ಗಹನ ಸತ್ಯ ಇದು. ಯಾರೇ ಆದರೂ ಅದನ್ನು ಪುನಃ ಕಂಡುಹಿಡಿಯಬಹುದು. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ವಿವರಿಸುವಂತೆ ಅದು ವಸ್ತುತಂತ್ರಜ್ಞಾನ ; ವಸ್ತುವನ್ನಾಧರಿಸಿದ ಜ್ಞಾನ ಅಥವಾ ವಾಸ್ತವಿಕ ಸಂಗತಿ ಅಥವಾ ಸತ್ಯ.

ಆದುದರಿಂದ ಅದರ ಸಂದೇಶವು 'ವೇದಾಹಮೇತಂ', ನಾನು ಅದನ್ನು ಸಾಧಿಸಿಕೊಂಡಿರುವೆನು, ನಾನು ಅದನ್ನು ತಿಳಿದುಕೊಂಡಿರುವೆನು, ಯಾವನಾದರೂ ಕೂಡ ಅದನ್ನು ಸಾಧಿಸಬಲ್ಲನು ಎಂಬುದೇ ವಿನಾ, ನಾನು ಅದರಲ್ಲಿ ನಂಬಿಕೆಯಿಟ್ಟಿದ್ದೇನೆ ಮಾತ್ರ ಎಂದಲ್ಲ. ದೃಢೀಕರಿಸಿದ ಮತ್ತು ದೃಢೀಕರಿಸಲ್ಪಡಬಹುದಾದ ಸತ್ಯವನ್ನು ನಿವೇದಿಸುತ್ತಿರುವಾಗ ಭಾಷೆಯನ್ನು ಗಮನಿಸಿ. ಉಪನಿಷತ್ತಿನ ಆ ಪ್ರಾಚೀನ ಋಷಿಗಳಿಂದ ಮೂರು ಸಾವಿರ ವರುಷಗಳ ಕಾಲದಿಂದೀಚಿನ ನಮ್ಮ ಕಾಲದ ಶ್ರೀರಾಮಕೃಷ್ಣರ ವರೆವಿಗೂ ಸಾಗಿಬಂದಿರುವ ಭಾರತೀಯ ಆಧ್ಯಾತ್ಮಿಕತೆಯ ವಿಶ್ವಾಸಾರ್ಹ ಮನೋಭಾವ ಮತ್ತು ಭಾಷೆಯ ವೈಶಿಷ್ಟ್ಯವೇ ಇದು. ಈ ವೈಶಿಷ್ಟ್ಯವು ಭಾರತೀಯ ಆಧ್ಯಾತ್ಮಿಕತೆಯ ಚಿರಂತನ ಶಕ್ತಿಯನ್ನೂ ಎಲ್ಲ ಪ್ರಾಚೀನ ಮತ್ತು ಆಧುನಿಕ ಭೌತವಿಜ್ಞಾನದ ವಿಮರ್ಶಾತ್ಮಕ ವೈಚಾರಿಕ ಮನೋಭಾವವನ್ನೂ ಪ್ರಶಂಸಿಸಿ ಅರ್ಥಮಾಡಿಕೊಳ್ಳುವುದು ಮಾತ್ರವಲ್ಲದೆ ಅದನ್ನು ಸ್ವಾಗತಿಸುವ ಪ್ರವೃತ್ತಿಯನ್ನೂ ವಿವರಿಸುತ್ತದೆ.

ಅನು : ಡಾ. ಇಮ್ಮಡಿ ಶಿವಬಸವಸ್ವಾಮಿಗಳು

೧೬

# ಧರ್ಮ ಮತ್ತು ವಿಚಾರಪ್ರವೃತ್ತಿ*

## ೧. ಪೀಠಿಕೆ

ಧರ್ಮದ ಮೇಲೆ ಆಧುನಿಕ ವಿಚಾರದ ಪ್ರಭಾವ ಕುರಿತಾದ ಅಧ್ಯಯನ ಸಾಮಾನ್ಯವಾಗಿ ಜೀವನ ಮತ್ತು ಮನಸ್ಸಿನ ಮೇಲೆ ಆ ವಿಚಾರದ ಪ್ರಭಾವವನ್ನು ಅಭ್ಯಸಿಸುವುದರ ಒಂದು ಭಾಗವಾಗಿದೆ. ಈ ಪ್ರಭಾವ ಮಹತ್ತರ ಕ್ರಾಂತಿಕಾರಿ ಪರಿಣಾಮದ್ದು. ಪಶ್ಚಿಮ ಯೂರೋಪಿನ ಕೆಲವು ಕೇಂದ್ರಗಳಲ್ಲಿ ಮೊದಲಿಗೆ ಆರಂಭವಾಗಿ ಹೆಚ್ಚು ವೇಗ, ಸತ್ವಗಳೊಂದಿಗೆ ಮುನ್ನಡೆಯುತ್ತ ಸಾಗಿದ ಅದರ ಸ್ಪಂದನ ನಾಗರಿಕ ಪ್ರಪಂಚದ ನಾಲ್ಕೂ ಮೂಲೆಗಳನ್ನು ಮುಟ್ಟಿ ಕಳೆದ ಮುನ್ನೂರು ವರ್ಷಗಳಲ್ಲಿ ಮನುಷ್ಯನ ಪರಿಸರ, ವಿಚಾರಧಾರೆ, ಜೀವನಗತಿ ಎಲ್ಲವನ್ನೂ ತೀವ್ರವಾದ ರೀತಿಯಲ್ಲಿ ಬದಲಿಸಿಬಿಟ್ಟಿದೆ. ಈ ಶತಮಾನಗಳಲ್ಲಿ ಬೆಳೆದುಬಂದ ತಾರ್ಕಿಕ ವಿಚಾರ ಪ್ರವೃತ್ತಿಯು ವಿಮುಕ್ತ, ಜ್ಞಾನೋದಯಕಾರಕ, ವಿಚ್ಛಿದ್ರಕಾರಕ, ವಿನಾಶಕಾರಕ, ರಚನಾತ್ಮಕ, ಸೃಷ್ಟ್ಯಾತ್ಮಕ ಪರಿಣಾಮಗಳನ್ನು ಉಂಟುಮಾಡಿದೆ.

## ೨. ಆಧುನಿಕ ವಿಜ್ಞಾನ : ಅದರ ಮನೋಭಾವ ಮತ್ತು ವಿಧಾನ

ಈ ಅದ್ಭುತ ಪರಿಣಾಮಗಳನ್ನು ಮಾಡಿದಂಥ ವಿಚಾರಧಾರೆಯ ಸ್ವಭಾವ ಎಂಥದು ? ವಿಚಾರಕ್ಕೆ ಅನ್ವಯಿಸುವಂತೆ ಆಧುನಿಕ ಎಂಬ ಪದಕ್ಕೆ ನಾವು ಏನು ಅರ್ಥಕೊಡುತ್ತೇವೆ ? ವಿಚಾರವನ್ನು ಇಷ್ಟೊಂದು ಸ್ಫೋಟಕವೂ ಕ್ರಾಂತಿಕಾರಕವೂ ಆಗಿ ಮಾಡಿರುವಂಥ ಆಧುನಿಕ ವಿಚಾರಧಾರೆಯ ವಿಶಿಷ್ಟ ಲಕ್ಷಣವೇನು ? ಈ ಪ್ರಶ್ನೆಗಳಿಗೆ ದೊರೆಯುವ ಉತ್ತರ ನಮಗೆ ಆಧುನಿಕ ಪ್ರಪಂಚದಲ್ಲಿ ಮಾನವನ ಸೇವೆಯಲ್ಲಿ ಧರ್ಮ, ರಾಜಕಾರಣ ಮತ್ತು ಶಿಕ್ಷಣಗಳ ಪಾತ್ರ ಕುರಿತು ಪುನರ್ಪರಿಶೀಲಿಸಲು ಸಹಾಯಮಾಡುತ್ತದೆ.

ಆಧುನಿಕ ಪ್ರಪಂಚದ ಶಿಲ್ಪಿ ವಿಜ್ಞಾನ. ಆಧುನಿಕ ವಿಚಾರವೆಂದರೆ ವೈಜ್ಞಾನಿಕ ವಿಚಾರ. ಪ್ರಕೃತಿ ಮತ್ತು ಅನುಭವವನ್ನು ವಾಸ್ತವ ದೃಷ್ಟಿಯಿಂದ ವಿವೇಚಿಸುವುದೇ ವಿಜ್ಞಾನದ ಉದ್ದೇಶ. ಕಾರ್ಲ್ ಪಿಯರ್ಸನ್ ಹೇಳುವಂತೆ ('ಗ್ರಾಮರ್ ಆಫ್ ಸೈನ್ಸ್', ೧೯೦೦, ಪು. ೬):

> *ವಿಷಯಗಳ ವರ್ಗೀಕರಣ, ಅವುಗಳ ಪರಿವಿಡಿ ಮತ್ತು ಪರಸ್ಪರ ಮಹತ್ವದ ತಿಳಿವಳಿಕೆ—ಇವು ವಿಜ್ಞಾನದ ಕರ್ತವ್ಯ. ವೈಯಕ್ತಿಕ ಭಾವನೆಯ ಸೋಂಕಿಲ್ಲದೆ ಈ ವಿಷಯಗಳ ಆಧಾರದ ಮೇಲೆ ನಿಷ್ಪಾಕ್ಷಿಕ ತೀರ್ಮಾನಕ್ಕೆ ಬರುವ ಅಭ್ಯಾಸವೇ ವೈಜ್ಞಾನಿಕ ಮನೋವೃತ್ತಿ ಎನ್ನಬಹುದು.*

---

* ೧೯೫೦ರ ಅಕ್ಟೋಬರ್ ೧೩ರಂದು ದೆಹಲಿಯ ಆಕಾಶವಾಣಿ ಕೇಂದ್ರದಿಂದ ಪ್ರಸಾರವಾದ ಭಾಷಣ.

ವೈಜ್ಞಾನಿಕ ಮನೋಭಾವದ ಈ ಗುಣ ಮತ್ತು ಅದರ ದೃಷ್ಟಿಕೋನಗಳು ನಿಸರ್ಗದ ನಾನಾ ಕ್ಷೇತ್ರಗಳ ರಹಸ್ಯಗಳನ್ನು ಬೆಳಕಿಗೆ ತಂದು ನಿಸರ್ಗ ಶಕ್ತಿಗಳನ್ನು ಮಾನವನ ಸೇವೆಗೆ ಬಳಸಿಕೊಳ್ಳಲು ನೆರವಾಗಿವೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಖಗೋಳಶಾಸ್ತ್ರ, ಗಣಿತಶಾಸ್ತ್ರ, ಜೀವಶಾಸ್ತ್ರ, ಮನಶ್ಶಾಸ್ತ್ರಗಳ ನಾನಾ ಕ್ಷೇತ್ರಗಳಲ್ಲಿ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ರಂಗಗಳಲ್ಲಿ ಗಳಿಸಿರುವ ಸಾಧನೆಗಳು ಮಾನವ ಬೆಳವಣಿಗೆಯ ಒಂದು ಪ್ರಭಾವಶಾಲಿ ದಾಖಲೆಯೆನಿಸುತ್ತವೆ ; ಈ ಸಾಧನೆಗೆ ಹೋಲಿಸಿದರೆ ಅನೇಕ ಯುಗಗಳ ಗತ ಸಾಧನೆಗಳು ಅಲ್ಪವೆನಿಸುತ್ತವೆ. ಆಧುನಿಕ ವಿಚಾರದ ವಿಧಾನ ಮತ್ತು ಫಲಿತಾಂಶಗಳು ಇವು.

## ೩. ಪಶ್ಚಿಮದಲ್ಲಿ ವಿಜ್ಞಾನ ಮತ್ತು ಧರ್ಮ

ವಿಜ್ಞಾನದ ವಿಶಿಷ್ಟ ಲಕ್ಷಣವಾದ ಸ್ವತಂತ್ರ ವಿಚಾರ ಮನೋವೃತ್ತಿಯೇ ಈ ಅಸಾಧಾರಣ ಸಾಧನೆಯ ಹಿಂದಿರುವ ಪ್ರೇರಕಶಕ್ತಿಯಾಗಿದೆ. ಪ್ರಶ್ನಿಸುವ, ಗಂಭೀರ ಉದ್ದೇಶಪೂರ್ಣತೆಯಿಂದ ಪ್ರಶ್ನಿಸುವ, ದೊರೆತ ಉತ್ತರಗಳನ್ನು ಪರೀಕ್ಷಿಸಿ ತಾಳೆನೋಡುವ ಬುದ್ಧಿ ಒಂದು ಸತ್ವಪೂರ್ಣ ಲಕ್ಷಣವನ್ನು ಹೊಂದಿದೆ ; ಅದರಿಂದಲೇ ವಸ್ತು ಮತ್ತು ವಿಚಾರಗಳ ಪ್ರಪಂಚದಲ್ಲಿ ಅದು ಮುನ್ನಡೆಯಲು ಶಕ್ತವಾಗುತ್ತದೆ. ಹಾಗೆ ಮುನ್ನಡೆಯುವಾಗ ಅದು ಸತ್ವಪರೀಕ್ಷೆಗೊಳಪಡದಂಥ ಸಿದ್ಧಾಂತಗಳು ಮತ್ತು ಹಿತಕರ ನಂಬಿಕೆಗಳ ಶಾಂತಿಯನ್ನು ಕದಡುತ್ತದೆ. ವಿಜ್ಞಾನವೆಂದರೆ ಸರಿನೋಡಿದ ಜ್ಞಾನ. ಮೊಂಡುತನದ ನಂಬಿಕೆಗಳು, ಸಿದ್ಧಾಂತಗಳು ಮತ್ತು ಪರೀಕ್ಷಿಸಿ ನೋಡದ ನಂಬಿಕೆಗಳಿಗೆದುರಾಗಿ ಪರೀಕ್ಷಿಸಿ ನೋಡಿದ ಜ್ಞಾನದ ಪ್ರಭಾವವೇ ಆಧುನಿಕ ವೈಜ್ಞಾನಿಕ ವಿಚಾರ ಧೋರಣೆಯ ಒಂದು ಸ್ಫೋಟಕ ಲಕ್ಷಣವಾಗಿದೆ. ಈ ಮೂಢನಂಬಿಕೆಗಳ ಸಂಘಟಿತ ವಿರೋಧವು ವೈಜ್ಞಾನಿಕ ಪರಿಶೋಧನೆಯನ್ನು ನಿಗ್ರಹಿಸಲು ಮೊದಲಿಂದ ಎಲ್ಲ ಹಂತಗಳಲ್ಲೂ ಪ್ರಯತ್ನಿಸಿತು ; ಆದರೆ ವಿಚಾರಧಾರೆ ಮತ್ತು ಜ್ಞಾನದರ್ಶನಗಳ ಪ್ರವಾಹದೆದುರಿಗೆ ಅಜ್ಞಾನ ಮತ್ತು ಪೂರ್ವಗ್ರಹಪೀಡಿತ ವಿಚಾರಗಳ ಕೋಟೆಯ ಗೋಡೆಗಳು ಒಂದೊಂದಾಗಿ ಉರುಳಿಬಿದ್ದವು. ಇದು ಉಪನಿಷತ್ತುಗಳ (ಮುಂಡಕೋಪನಿಷತ್ತು III,೧-೬) ಮಹಾವಾಕ್ಯವನ್ನು ಎತ್ತಿ ತೋರಿಸಿತು : "ಸತ್ಯಮೇವ ಜಯತೇ, ನಾನೃತಂ" (ಸತ್ಯಕ್ಕೇ ಜಯ, ಅಸತ್ಯಕ್ಕಲ್ಲ).

ಹೀಗೆ ಈಚಿನ ಶತಮಾನಗಳಲ್ಲಿ ವಿಜ್ಞಾನದ ಇತಿಹಾಸ ಕೇವಲ ಅಭಿಪ್ರಾಯ, ಪೂರ್ವಗ್ರಹಪೀಡೆ, ಮೊಂಡು ವಾದಗಳಿಗೆ ವಿರುದ್ಧವಾಗಿ ಮುಕ್ತ ಸ್ವತಂತ್ರ ವಿಚಾರಪ್ರವೃತ್ತಿಯ ಇತಿಹಾಸವೇ ಆಗಿದೆ. ಮಾನವ ಚೇತನದ ಈ ಅದ್ಭುತ ಸಾಹಸದಿಂದಾಗಿ ದೊರೆತಿರುವ ಬೌದ್ಧಿಕ ಮತ್ತು ಭೌತಿಕ ಫಲಗಳು ಅಪಾರ. ಫಲದಾಯಿನಿಯಾಗಿ ವಿಜ್ಞಾನ ಬೆಳೆದು ನೀಡಿದ ಪರಿಶೋಧನೆಗಳ ಸಮೃದ್ಧ ಬೆಳೆಯಿಂದ ನಾವು ಬಾಳುತ್ತಿರುವ ಪ್ರಪಂಚ ಗುರುತಿಸಲಾಗದಷ್ಟು ಬದಲಾಗಿ ಹೋಗಿದೆ.

## ೪. ವಿಜ್ಞಾನದ ವಿಜಯ ಮತ್ತು ಧರ್ಮಕ್ಕೆ ಹಿಡಿದ ಗ್ರಹಣ

ವಿಜ್ಞಾನದ ಯಶಸ್ಸೆಂದರೆ ಅದರ ವಿರೋಧಿಯ ಸೋಲು ಎಂದರ್ಥ. ವಿಜ್ಞಾನ ಮತ್ತು ಅದರ ವಿಚಾರಶೀಲತೆಗಳಿಗೆ ವಿರೋಧಮಾಡಿದ ಪೂರ್ವಗ್ರಹ ವಿಚಾರ ಮತ್ತು ಅಂಧಶ್ರದ್ಧೆಯ ಶಕ್ತಿಗಳು—ಅದರಲ್ಲೂ ಆಧುನಿಕ ಯೂರೋಪಿನ ಇತಿಹಾಸದಲ್ಲಿ—ಧರ್ಮದ ಕಡೆಯಿಂದ ಬಂದದ್ದು ಇತಿಹಾಸದ ವಿಷಾದಕರ ಸಂಗತಿಗಳಲ್ಲೊಂದಾಗಿದೆ. ಕಳೆದ ಶತಮಾನದ ಅಂತ್ಯದ ವೇಳೆಗೆ ವಿಜ್ಞಾನ ಉನ್ನತ ಘನತೆ ಮತ್ತು ಅಧಿಕಾರಗಳಿಗೇರಿದ್ದರೆ ಧರ್ಮಕ್ಕೆ ಕಳಂಕ ಬಂದು ಮೊದಲಿಗೆ ಅದೊಂದು ಅಪಾಯಕಾರಿ ತಪ್ಪೆಂದೂ ಆಮೇಲೆ ಅದೊಂದು ನಿರುಪದ್ರವಿ ಭ್ರಮೆಯೆಂದೂ ಭಾವಿಸಲ್ಪಟ್ಟಿತು.

ಹತ್ತೊಂಬತ್ತನೆಯ ಶತಮಾನವು ಹೀಗೆ ಯೂರೋಪಿನಲ್ಲಿ ಧರ್ಮದ ಅವನತಿಯನ್ನು ಕಂಡಿತು. ಆದರೆ ಮಾನವನಿಗೂ, ಅವನ ನಾಗರಿಕತೆಗೂ ಅಪಾರ ಮೌಲ್ಯದ್ದಾದುದೇನನ್ನೋ ದೂರಮಾಡಿಬಿಟ್ಟಿದ್ದೇವೆಂಬ ಆತಂಕ ಅನೇಕ ವಿಚಾರವಂತರ ಮನದಲ್ಲಿ ಇದ್ದೇ ಇತ್ತು ; ಧರ್ಮದ ಅರ್ಥ ಮತ್ತು ವ್ಯಾಪ್ತಿ ವಿಜ್ಞಾನದ ಚೇತನಕ್ಕನುಗುಣವಾಗಿರುವಂತೆ ಮಾಡಲು ಧರ್ಮದ ಪುನರ್ವಿಮರ್ಶೆಗೆ ಅವರು ಪ್ರಯತ್ನಿಸಿದರು. ಮಾನವನ ಬಗೆಗೆ ಒಂದು ಸುಸಂಬದ್ಧ ದೃಷ್ಟಿ ಮತ್ತು ಆಧ್ಯಾತ್ಮಿಕ ಜೀವನದ ಬಗ್ಗೆ ಹೆಚ್ಚು ನೈಜವಾದ ಕಲ್ಪನೆಯ ಆಧಾರದ ಮೇಲೆ ನಂಬಿಕೆ ಮತ್ತು ವಿವೇಕಗಳ ನಡುವಣ ಅಂತರವನ್ನು ನಿವಾರಿಸಿ ಆಧುನಿಕ ಮಾನವನ ಬೌದ್ಧಿಕ ಜೀವನವನ್ನು ಪುನಾರೂಪಿಸುವ ಈ ಮಹಾಕಾರ್ಯಕ್ಕೆ ಭಾರತೀಯ ವಿಚಾರಧಾರೆಯ ಕಾಣಿಕೆ ಚಿರಸ್ಥಾಯಿಯಾದುದು, ಅಸಮಾನವಾದದ್ದು.

## ೫. ಭಾರತದ ಉಪನಿಷತ್ತುಗಳಲ್ಲಿ ವೈಜ್ಞಾನಿಕ ಮನೋಧರ್ಮ

ಉಪನಿಷತ್ತುಗಳ ಕಾಲದಿಂದ ಭಾರತವು ಧರ್ಮದ ಬಗ್ಗೆ ಒಂದು ದೃಷ್ಟಿಯನ್ನು ಪಟ್ಟುಬಿಡದೆ ಅನುಸರಿಸಿಕೊಂಡು ಬಂದಿದೆ. ಧರ್ಮವೆಂದರೆ ಮಾನವ ಚೇತನದ ಒಂದು ಮಹಾಸಾಹಸ—ಬದುಕಿನ ಅಂತರಾರ್ಥ ಗ್ರಹಿಸಲು ಒಂದು ಜೀವನ—ಪ್ರಯತ್ನ ಎಂಬ ಭಾವನೆ ಅದು. ಭಾರತದಲ್ಲಿ ಧರ್ಮನಿಷ್ಠೆ ಎಂಬುದು ವ್ಯಕ್ತಿ ವಿರಮಿಸಬಹುದಾದ ಒಂದು ಅನುಕೂಲಕರ ನಂಬಿಕೆಯಲ್ಲ, ಆಧ್ಯಾತ್ಮಿಕ ಅನುಭೂತಿಗಾಗಿ ಆತ್ಮವನ್ನು ಬೆಳಗುವ ದೀವಟಿಗೆ ಅದು. ಈ ಅಪೇಕ್ಷೆ ಮತ್ತು ಹೋರಾಟಗಳಿಲ್ಲದಿದ್ದರೆ, ಆಸ್ತಿಕರ ನಂಬಿಕೆಗೂ ನಾಸ್ತಿಕರ ಅಪನಂಬಿಕೆಗೂ ವ್ಯತ್ಯಾಸವೇ ಇರದು. ಬಹುತೇಕ ಜನರಿಗೆ ನಂಬಿಕೆ ಎಂಬುದು, 'ವಿಚಾರ ಮಾಡದಿರಲು, ಅಸಡ್ಡೆಯಿಂದಿರಲು' ಇನ್ನೊಂದು ಹೆಸರು, ಅಷ್ಟೇ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಈ ವರ್ಗದ ಜನರಿಗೆ—ಅದರಲ್ಲೂ ಒಂದು ಚರ್ಚಿನಡಿ ಅಥವಾ ಮತೀಯ ರಾಜ್ಯವಾಗಿ ಸಂಘಟಿತರಾಗಿದ್ದಲ್ಲಿ ಧರ್ಮನಿಷ್ಠೆ ಎಂಬುದು ಉಗ್ರ ರೀತಿಯ ಮತಾಂತರ ಅಥವಾ ಜೆಹಾದ್‌ನಂಥ ಹೋರಾಟ ನಡೆಸುವುದು ಎಂದಾಗಿರುತ್ತದೆ. ಆಂತರಿಕ ಆಧ್ಯಾತ್ಮಿಕ ಅಪೇಕ್ಷೆಯಿಂದ ಪ್ರೇರಿತವಾದ ಶ್ರದ್ಧೆ ಅವರಿಗೆ ಅರ್ಥವಾಗುವುದಿಲ್ಲ. ಒಂದು ಧಾರ್ಮಿಕ ಹೃದಯದ ಈ ಬಯಕೆಯನ್ನು ಯಾವೊಂದು ಮೂಢನಂಬಿಕೆ, ಪಂಥ ಅಥವಾ ಉಗ್ರ ಕೃತ್ಯಗಳು ಸಮಾಧಾನಪಡಿಸಲಾರವು ; ಆಧ್ಯಾತ್ಮಿಕ ಸಿದ್ಧಿಗೆ ಅದೇ ಆಹಾರ. ಧರ್ಮ ಎಂಬುದು ಆಂತರಿಕ ಅನುಭವದ ವಿಷಯ ; ಆಧ್ಯಾತ್ಮಿಕ ಸಂಗತಿಗಳ ಸಂಪರ್ಕ ಹೊಂದುವ ವಿಷಯ ; ಅದು ಕೇವಲ ನಂಬಿಕೆ ಅಥವಾ ಅನುಸರಣೆಯ ವಿಷಯವಲ್ಲ. ಅದರಿಂದಲೇ ಭಾರತದಲ್ಲಿ ನಿಷ್ಠಾವಂತರನ್ನು ಮತ ಮತ್ತು ಸಿದ್ಧಾಂತದ ಆಧಾರದ ಮೇಲೆ ಸಂಘಟಿಸಬಲ್ಲ, ತನ್ನ ಅಭಿಪ್ರಾಯಗಳಿಗೂ ನಿರ್ಣಯಗಳಿಗೂ ದೈವದತ್ತ ಅಧಿಕಾರವುಂಟೆನ್ನುವ ಸರ್ವಶಕ್ತ ಧರ್ಮಸಂಸ್ಥೆಯೊಂದೂ ಬೆಳೆದುಬರಲಿಲ್ಲ. ಧರ್ಮ ಎಂದರೆ ಶೋಧನೆ, ಅನುಸರಣೆಯಲ್ಲ ಎಂಬ ಅರ್ಥವಿರುವ ಯಾವೆಡೆಯಲ್ಲೂ ಅಂಥ ಅಧಿಕಾರ ಪೀಠ ಬೆಳೆಯಲಾರದು. ಸಿದ್ಧಾಂತ ಅಥವಾ ಪಂಥೀಯ ದೃಷ್ಟಿಯಿಂದ ವಿಭಿನ್ನವಾಗಿ ಧರ್ಮದ ಬಗ್ಗೆ ಆಧ್ಯಾತ್ಮಿಕ ದೃಷ್ಟಿ ಇದ್ದರೆ ಧರ್ಮ ಸಹನಶೀಲವೂ ತನ್ನದೇ ಕ್ಷೇತ್ರದಲ್ಲಿ ಪರಿಶೋಧನಶೀಲವೂ ಆಗಿರುತ್ತದಷ್ಟೇ ಅಲ್ಲ, ಅದು ಜೀವನದ ಎಲ್ಲ ರಂಗಗಳಲ್ಲೂ ಈ ಸದ್ಗುಣವನ್ನು ಬೆಳೆಸುತ್ತದೆ. ಧರ್ಮದ ಅರ್ಥ ಕುರಿತು ಶೋಧನೆ ನಡೆಸುವ ಪ್ರವೃತ್ತಿ ಧರ್ಮಾರ್ಥಿಯನ್ನು ಧರ್ಮಶಾಸ್ತ್ರದ ಪದಗಳಿಂದ, ಸಂಪ್ರದಾಯದ ಆದೇಶದಿಂದ ಆಚೆಗೊಯ್ಯುತ್ತದೆಂದು ಭಗವದ್ಗೀತೆ ಹೇಳುತ್ತದೆ (೬-೪೪). ಅವನು ತಾನೇ ಪ್ರಯೋಗಶೀಲನಾಗುತ್ತಾನೆ, ಕೇವಲ ನಂಬಿಕೆಯುಳ್ಳವನಾಗಿ ಉಳಿಯುವುದಿಲ್ಲ. ಭಾರತೀಯ ಧಾರ್ಮಿಕ ವಿಚಾರಧಾರೆಯಲ್ಲಿ ಅದರ ಅಭಿಪ್ರಾಯಗಳ ರಚನೆಗೆ ಜಿಜ್ಞಾಸೆಯ ಹಾದಿ ಅನುಸರಿಸಲು ಅವಕಾಶವಿದೆ—ಅದು ಬ್ರಹ್ಮಜಿಜ್ಞಾಸೆಯಾದರೂ ಸರಿ, ಧರ್ಮ ಜಿಜ್ಞಾಸೆಯಾದರೂ ಸರಿ.

## ೬. ಭಾರತೀಯ ಬದುಕು ಚಿಂತನೆಗಳ ಮೇಲೆ ಅದರ ಪ್ರಭಾವ

ಧರ್ಮ ಮತ್ತು ವಿಚಾರಧಾರೆಗಳ ಬಗೆಗಿನ ಈ ಉದಾತ್ತ ದೃಷ್ಟಿ, ಮನುಷ್ಯನ ಬೌದ್ಧಿಕ ಜೀವನದ ಬಗ್ಗೆ ಸಂಘಟಿತ ದೃಷ್ಟಿಯ ಫಲವಾಗಿ ಬೆಳೆದು ಬಂದದ್ದು ; ಇದನ್ನು ಭಾರತ ತನ್ನ ಉಪನಿಷತ್ತುಗಳಿಂದ ಕಲಿಯಿತು. ಎಲ್ಲ ವಿಧದ ನಿಷ್ಠೆಗಳನ್ನೂ ಅದು ಸಾರ್ವಲೌಕಿಕವಾಗಿ ಅಂಗೀಕರಿಸುತ್ತದೆ ; ಎಲ್ಲ ವಿಧದ ಜ್ಞಾನವನ್ನೂ—ಅದು ಪವಿತ್ರವೇ ಆಗಿರಲಿ, ಜಾತ್ಯತೀತವೇ ಆಗಿರಲಿ—ಅದು ಗೌರವಿಸುತ್ತದೆ. "ನಾವು ಸಾಧಿಸಬೇಕಾದ ಎರಡು ಬಗೆಯ ಜ್ಞಾನವುಂಟು ; ಒಂದು, ಪರಾ (ಸರ್ವೋಚ್ಚ) ; ಎರಡು, ಅಪರಾ (ಸಾಮಾನ್ಯ)" ಎಂದು ಮುಂಡಕೋಪನಿಷತ್ತು ಹೇಳುತ್ತದೆ (೧.೧-೪). ವೇದಗಳು, ವಿಜ್ಞಾನಗಳು, ನಶಿಸುವ ಅಥವಾ ಬದಲಾಗುವ ವಿಷಯಗಳಿಗೆ ಸಂಬಂಧಿಸಿದ ಕಲೆಗಳು 'ಅಪರಾ' ವರ್ಗಕ್ಕೆ ಸೇರುತ್ತವೆ. ಆದರೆ ಅವಿನಾಶಿಯಾದುದನ್ನು ಅರಿಯುವುದು ಪರಮ ಜ್ಞಾನವೆನಿಸುತ್ತದೆ.'ಅಪರಾ' ವರ್ಗದ ಜ್ಞಾನ ಪಡೆದುಕೊಳ್ಳಲು ಈ ಪರಮ ಜ್ಞಾನ ಆಧಾರವಾಗುತ್ತದೆ-ಬ್ರಹ್ಮವಿದ್ಯೆ ಎಂಬುದು ಸರ್ವವಿದ್ಯಾ ಪ್ರತಿಷ್ಠಾ ಎಂದು ಇದೇ ಉಪನಿಷ್ತತು (೧. ೧-೧) ಸ್ಪಷ್ಟಪಡಿಸುತ್ತದೆ.

## ೭. ಮತಾಂಧತೆ ಮತ್ತು ಸ್ವತಂತ್ರ ವಿಚಾರ

ಆಧುನಿಕ ವಿಜ್ಞಾನ ಮನುಷ್ಯನ ಬೌದ್ಧಿಕ ವ್ಯಾಪ್ತಿಯನ್ನು ಹಿಗ್ಗಿಸಿದೆ. ಅದರಿಂದಾಗಿ ಉಪನಿಷತ್ತುಗಳು ಹೇಳುವ ಪರಾ ವಿದ್ಯೆ (ಪರಮಜ್ಞಾನ)ಯ ನಿಗೂಢತೆ ಮತ್ತು ಮಹತ್ವಗಳತ್ತ ಇನ್ನೂ ಚುರುಕಾದ ದೃಷ್ಟಿ ಕೇಂದ್ರೀಕರಿಸಲು ಅವಕಾಶವಾಗಿದೆ. ಜೆ. ಆರ್ಥರ್ ಥೆಮ್ಸನ್ ಹೇಳುವಂತೆ ('ಇಂಟ್ರಡಕ್ಷನ್ ಟು ಸೈನ್ಸ್, ಹೋಮ್ ಯೂನಿವರ್ಸಿಟಿ ಲೈಬ್ರರಿ ಮುದ್ರಣ, ೧೯೩೪, ಪು. ೨೦೬) :

> *ತನ್ನ ಬೌದ್ಧಿಕ ವ್ಯಾಪ್ತಿಯ ಕೊನೆಯಲ್ಲಿ ಮನುಷ್ಯ ಯಾವಾಗಲೂ ಧಾರ್ಮಿಕ ಪ್ರವೃತ್ತಿಯವನಾಗಿರುತ್ತಾನೆ.*

ಆದ್ದರಿಂದ ಕಳೆದ ಕೆಲವು ದಶಕಗಳಲ್ಲಿ ಅನೇಕ ವಿಜ್ಞಾನಿಗಳು ತಮ್ಮ ವಿಜ್ಞಾನಶಾಸ್ತ್ರಗಳ ಮಿತಿಗಳನ್ನು ದಾಟಿ, ಅಜ್ಞೇಯವಾದುದರ ಸಮಸ್ಯೆಯ ಬಗ್ಗೆ ನಮ್ರತೆ ಮತ್ತು ಭಕ್ತಿಭಾವಗಳಿಂದ ಪರಿಶೋಧಿಸಲು ಪ್ರಯತ್ನಿಸಿದ್ದಾರೆ. ಇದನ್ನು ಜೆ. ಎ. ಥಾಮ್ಸನ್ ಅದೇ ಪುಸ್ತಕದಲ್ಲಿ (ಪುಟ ೨೦೪) ಉಲ್ಲೇಖಿಸಿರುವ ಕೋಲ್‌ರಿಜ್‌ನ ಮಾತುಗಳು ಚೆನ್ನಾಗಿ ವ್ಯಕ್ತಪಡಿಸುತ್ತವೆ :

> *ಎಲ್ಲ ಜ್ಞಾನದ ಆದಿ ಮತ್ತು ಅಂತ್ಯ ಆಶ್ಚರ್ಯವೇ ಆಗಿದೆ. ಆದರೆ ಮೊದಲನೆ ಅಚ್ಚರಿ ಎಂದರೆ ಅಜ್ಞಾನದ ಶಿಶು, ಎರಡನೆಯದು ಆರಾಧನೆಯ ತಾಯಿ.*

ಅಂಧತತ್ವಾನುಸರಣೆ ಮತ್ತು ಇದಮಿತ್ಥಂ ಎಂಬ ಹಠಭಾವನೆ ನೈಜ ವಿಜ್ಞಾನದಷ್ಟೇ ನೈಜ ಧರ್ಮಕ್ಕೂ ಶತ್ರುಗಳಾಗಿವೆ. ಇಂದೂ ಕೂಡ ಕೆಲ ವಿಜ್ಞಾನಿಗಳು ವಿಜ್ಞಾನದ ವ್ಯಾಪ್ತಿ ಮತ್ತು ಕಾರ್ಯದ ಬಗ್ಗೆ ಸಂಕುಚಿತ ದೃಷ್ಟಿ ತಳೆದು ಅಂಧತತ್ವಾನುಸರಣೆಯಿಂದ ಜ್ಞಾನದ ಮುನ್ನಡೆ ಮತ್ತು ಸಂಘಟಿತ ಅನುಭವವನ್ನು ತಡೆಗಟ್ಟಬೇಕೆಂದು ವಾದಿಸುವುದುಂಟು. ಈ ಮುಂಚೆ ಇಂಥ ದೃಷ್ಟಿ ಧರ್ಮಕ್ಕೆ ಅಪಾಯಕಾರಿಯಾಗಿದ್ದಂತೆಯೇ ಈಗ ಅದು ವಿಜ್ಞಾನಕ್ಕೆ ಅಪಾಯಕಾರಿಯಾಗಿದೆ. ಮುಕ್ತ ವಿಚಾರಧಾರೆಯ ಬಗೆಗೆ ಹೆಚ್ಚಿನ ನಿಷ್ಠೆ, ವಿಜ್ಞಾನದ ಉದ್ದೇಶ ಮತ್ತು ಗುಣಧರ್ಮದ ಬಗೆಗೆ ಹೆಚ್ಚು ವಿಶಾಲವಾದ ಕಲ್ಪನೆ ಇದ್ದರೆ ಮಾತ್ರ ಈ ಅಪಾಯವನ್ನು ತಪ್ಪಿಸಬಹುದು.

## ೮. ಇಪ್ಪತ್ತನೆಯ ಶತಮಾನದ ಪರಿಷ್ಕೃತ ಮನೋಭಾವ

ಹತ್ತೊಂಬತ್ತನೆಯ ಶತಮಾನ ಘರ್ಷಣೆ, ವಿಭಜನೆಗಳ ಶತಮಾನವಾಗಿತ್ತು. ಇಪ್ಪತ್ತನೆಯ

ಶತಮಾನ ವಿಜ್ಞಾನ ಮತ್ತು ಧರ್ಮಗಳ ಪ್ರಾಮಾಣಿಕ ಪ್ರಯತ್ನದ ಫಲವಾಗಿ ರಾಜಿ ಮತ್ತು ಸಂಘಟನೆಯ ಶತಮಾನವೆನಿಸಬಹುದು. ವಿಜ್ಞಾನ, ಧರ್ಮಗಳೆರಡೂ ತಮ್ಮನ್ನು ಪುನರ್ಪರಿಶೀಲಿಸಿ ಕೊಂಡು ಪರಸ್ಪರರನ್ನು ಅರಿತುಕೊಳ್ಳಲು ಪ್ರಯತ್ನಿಸಿವೆ. ೧೯ನೆಯ ಶತಮಾನದಲ್ಲಿ ವಿಜ್ಞಾನ ಇದೇ ಸರಿ ಎಂಬ ಖಡಾಖಂಡಿತ ಮನೋಭಾವದಿಂದ ಕೂಡಿತ್ತು ; ಆದರೆ ೨೦ನೆಯ ಶತಮಾನದ ವಿಜ್ಞಾನ ದಲ್ಲಿ ನಮ್ರತೆ ಎದ್ದು ಕಾಣುತ್ತದೆ. ತನಗೆ ಪ್ರಯೋಜನಕರವಾದ ವಿಚಾರಪ್ರವೃತ್ತಿ ತನ್ನ ರಂಗಕ್ಕೆ ಸೇರದ ಇತರ ಕ್ಷೇತ್ರಗಳಲ್ಲೂ ಅಭಿವ್ಯಕ್ತವಾಗಬಲ್ಲದು, ವೈಯಕ್ತಿಕ ಭಾವನೆಯಿಂದ ಮುಕ್ತವಾದ ಇಂಥ ಮನೋವೃತ್ತಿಯೇ ಒಂದು ಅಧ್ಯಯನವನ್ನು ವೈಜ್ಞಾನಿಕವಾಗಿಸಬಲ್ಲದು—ಕೇವಲ ಆ ಅಧ್ಯಯನದ ವಿಷಯವಷ್ಟೇ ಅಲ್ಲ ಎಂಬುದನ್ನು ವಿಜ್ಞಾನ ಮನಗಂಡಿದೆ. ಜೆ. ಎ. ಥಾಮ್ಸನ್ ಅವರ ಮಾತುಗಳಲ್ಲೇ ಹೇಳಬೇಕೆಂದರೆ (ಅದೇ ಗ್ರಂಥ, ಪು. ೫೮) ;

*ವಿಜ್ಞಾನ ಯಾವುದೇ ನಿರ್ದಿಷ್ಟ ಸಂಗತಿಗಳಿಂದ ತುಂಬಿದ್ದಲ್ಲ. ಅದನ್ನು ಬೌದ್ಧಿಕ ಮನೋವೃತ್ತಿ ಎಂದು ಬಣ್ಣಿಸಲಾಗಿದೆ. ಯಾವುದೇ ನಿರ್ದಿಷ್ಟ ವಿಚಾರ ವಿಧಾನಗಳಿಂದ ಅದು ಬಂಧಿಸಲ್ಪಟ್ಟಿಲ್ಲ ; ಸಾಕ್ಷ್ಯಾಧಾರದ ಮೇಲೆ ಆದ ತೀರ್ಮಾನಗಳನ್ನು ಮಾತ್ರ ಒಪ್ಪಿಕೊಳ್ಳಬೇಕೆಂಬ ತಾರ್ಕಿಕ ವಿವೇಚನೆಯ ಪ್ರಾಮಾಣಿಕ ಪ್ರಯತ್ನ ಅದು. ಒಂದು ಹೊಸ ಸಮಸ್ಯೆಯನ್ನೆದುರಿಸುವ ವಾಣಿಜ್ಯೋದ್ಯಮಿಯಿಂದ, ಒಂದು ರಚನಾತ್ಮಕ ಮಸೂದೆಯನ್ನು ರೂಪಿಸುವ ಒಬ್ಬ ರಾಜಕಾರಣಿಯಿಂದಲೂ ನಮಗೆ ವೈಜ್ಞಾನಿಕ ವಿಧಾನದಲ್ಲಿ ಒಳ್ಳೆಯ ಪಾಠ ಸಿಗಬಹುದು.*

ವಿಜ್ಞಾನವನ್ನು ಹೀಗೆ ಒಂದು ಶಾಸ್ತ್ರ ಮತ್ತು ಗುಣಧರ್ಮ ಎಂದು ಕಾಣುವ ವಿಶಾಲ ದೃಷ್ಟಿಯಿಂದ ನೋಡಿದಾಗ ಧರ್ಮವು ಅಂತರಂಗ ಜಗತ್ತಿನ ಸಂಗತಿಗಳನ್ನು ಅಧ್ಯಯನ ಮಾಡುವುದೂ ಒಂದು ವೈಜ್ಞಾನಿಕ ಅಧ್ಯಯನವೇ ಎನ್ನಬಹುದು.

### ೯. ವಿವೇಕಾನಂದರು ಮತಶ್ರದ್ಧೆಯನ್ನು ಟೀಕಿಸಿದ್ದು

ಧರ್ಮದ ಬಗ್ಗೆ ಭಾರತೀಯ ಮನೋಭಾವ ಇದೇ ಆಗಿದೆ. ಯೂರೋಪಿನಲ್ಲಿ ಇಂಥ ದೃಷ್ಟಿ ಇಲ್ಲದಿದ್ದುದರಿಂದಲೇ ಧರ್ಮವು ಜ್ಞಾನದ ಮುನ್ನಡೆಯ ಸವಾಲನ್ನೆದುರಿಸುವುದರಲ್ಲಿ ಬರಬರುತ್ತ ದುರ್ಬಲವಾಗಿ ಹೋಯಿತು. ಆ ಅನಾದರಣೆ ಆಧುನಿಕ ಮಾನವನ ಮೇಲೆ ಏನು ಪರಿಣಾಮ ಮಾಡಿದೆಯೆಂಬುದನ್ನು ಸ್ವಾಮಿ ವಿವೇಕಾನಂದರು ೧೮೯೬ರಲ್ಲಿ ಇಂಗ್ಲೆಂಡಿನಲ್ಲಿ 'ವಿವೇಚನೆ ಮತ್ತು ಧರ್ಮ' ಎಂಬ ಉಪನ್ಯಾಸದಲ್ಲಿ ಹೀಗೆ ಸಾರಾಂಶದಲ್ಲಿ ಹೇಳಿದರು ('ಕಂಪ್ಲೀಟ್ ವರ್ಕ್ಸ್', ಸಂ. ೧, ಹನ್ನೊಂದನೆಯ ಮುದ್ರಣ, ಪು. ೩೬೭) :

*ಆಸ್ತಿಭಾರಗಳೆಲ್ಲ ಶಿಥಿಲವಾಗಿ ಹೋಗಿವೆ ; ಆಧುನಿಕ ಮಾನವ ಬಹಿರಂಗದಲ್ಲಿ ಏನೇ ಹೇಳಿದರೂ ತನ್ನ ಹೃದಯಾಂತರಂಗದಲ್ಲಿ ತಾನಿನ್ನು 'ನಂಬಲಾರ' ಎಂಬುದನ್ನು ಬಲ್ಲ. ಪುರೋಹಿತರ ಒಂದು ಸಂಘಟಿತ ಮಂಡಲಿ ಹೇಳುತ್ತದೆಂದು, ಕೆಲವು ಪುಸ್ತಕಗಳಲ್ಲಿ ಬರೆದಿದೆ ಯೆಂದು, ತನ್ನ ಜನ ಬಯಸುತ್ತಾರೆಂದು ಕೆಲವೊಂದು ವಿಷಯಗಳನ್ನು ನಂಬುವುದು ತನಗೆ ಅಸಾಧ್ಯವೆಂದು ಆಧುನಿಕ ಮಾನವ ಬಲ್ಲ.*

ವಿಜ್ಞಾನ ಮತ್ತು ಧರ್ಮದ ನಡುವಣ ಘರ್ಷಣೆಯನ್ನು ನಿವಾರಿಸುವ ದೃಷ್ಟಿಯಿಂದ, ಧರ್ಮದ ಬಗ್ಗೆ ತರ್ಕಬದ್ಧ ದೃಷ್ಟಿ ಅಗತ್ಯವೆಂದು ಪ್ರತಿಪಾದಿಸುತ್ತ ಅವರು ಮುಂದುವರಿದು ಹೀಗೆ ನುಡಿದರು (ಅಲ್ಲೇ) :

*ಇತರ ಎಲ್ಲ ವಿಜ್ಞಾನಶಾಸ್ತ್ರಗಳು ತಮ್ಮನ್ನು ಸಮರ್ಥಿಸಿಕೊಳ್ಳುವಂತೆ ಸತಾರ್ಕಿಕ ಸಂಶೋಧನೆಗಳಿಂದ ಧರ್ಮವು ತನ್ನನ್ನು ಸಮರ್ಥಿಸಿಕೊಳ್ಳಬೇಕೆ? ವಿಜ್ಞಾನ ಮತ್ತು ಹೊರಗಿನ*

*ಜ್ಞಾನಗಳಿಗೆ ಅನ್ವಯಿಸುವಂಥ ಪರಿಶೋಧನಾ ವಿಧಾನಗಳನ್ನು ಧರ್ಮಜ್ಞಾನಕ್ಕೂ ಅನ್ವಯಿಸ ಬೇಕೆ? ನನ್ನ ಅಭಿಪ್ರಾಯದಲ್ಲಿ ಹಾಗೆಯೇ ಮಾಡಬೇಕು ; ಅದನ್ನು ಎಷ್ಟು ಜಾಗ್ರತೆಯಾಗಿ ಮಾಡಿದರೆ ಅಷ್ಟು ಉತ್ತಮ ಎಂದೂ ನನಗನ್ನಿಸುತ್ತದೆ. ಇಂಥ ಪರಿಶೋಧನೆಗಳಿಂದ ಒಂದು ಧರ್ಮ ನಾಶವಾಗುವುದಾದಲ್ಲಿ ಇಷ್ಟು ಕಾಲವೂ ಅದು ಅಸಮಂಜಸವಾದ, ನಿರರ್ಥಕ ಮೂಢ ನಂಬಿಕೆಯೇ ಆಗಿದ್ದಿರಬೇಕು ; ಇಂಥ ಧರ್ಮ ಎಷ್ಟು ಬೇಗೆ ಹೋದರೆ ಅಷ್ಟೂ ಕ್ಷೇಮ. ಅಂಥ ಪರೀಕ್ಷೆಯಿಂದ ಈ ಕಳೆಯೆಲ್ಲ ನಿವಾರಣೆಯಾಗಿ ಧರ್ಮದ ಅವಶ್ಯ ಅಂಶಗಳು ವಿಜಯ ಶಾಲಿಯಾಗುತ್ತವೆ.*

### ೧೦. ವೇದಾಂತ ಮತ್ತು ವಿಜ್ಞಾನಗಳ ಸಮನ್ವಯ

ವೈಜ್ಞಾನಿಕ ಅಧ್ಯಯನದ ಯಾವುದೇ ವಿಭಾಗದಲ್ಲಿ ಸೂಕ್ತ ವಾಸ್ತವಾಂಶಗಳನ್ನು ಸಂಗ್ರಹಿಸಿ ಅವನ್ನು ತರ್ಕಯುಕ್ತವಾಗಿ ಅರ್ಥೈಸುವುದರಲ್ಲಿ ವಿಚಾರಪ್ರವೃತ್ತಿ ವ್ಯಕ್ತಪಡುತ್ತದೆ. ಆಂತರಿಕ ಜೀವನದ ಸಂಗಾತಿಗಳಿಗಾಗಿ ನಡೆಯುವ ನಿರಂತರ ಶೋಧನೆಯೇ ಧರ್ಮಾಚರಣೆ ; ಈ ಸಂಗತಿಗಳನ್ನು ರಾಗ ದ್ವೇಷರಹಿತ ದೃಷ್ಟಿಯಿಂದ ಪರಾಮರ್ಶಿಸುವುದೇ ಧರ್ಮಶಾಸ್ತ್ರ. ನಮ್ಮ ಆಂತರಿಕ ಜೀವನದ ರಹಸ್ಯ ವನ್ನು ನಮಗೆ ದಾರಿತೋರುವ ಬೆಳಕು, ನಮ್ಮನ್ನು ರೂಪಿಸುವ ಸೂತ್ರಗಳನ್ನು ಅರಿಯುವುದೇ ಅದರ ಉದ್ದೇಶ. ತನ್ನ ಶರೀರ ಮತ್ತು ಅದರ ಸುತ್ತಲಿನ ಪ್ರಪಂಚದಿಂದ ರೂಪುಗೊಂಡ 'ಪರಿಚಿತ ಮಾನವ' ಪ್ರಾಕೃತಿಕ ವಿಜ್ಞಾನಗಳ ಅಧ್ಯಯನವಸ್ತುವಾದರೇ 'ಅಪರಿಚಿತ ಮಾನವ' ಧರ್ಮವಿಜ್ಞಾನದ ಅಧ್ಯಯನ ವಸ್ತುವಾಗುತ್ತಾನೆ.

### ೧೧. ಉಪಸಂಹಾರ

ಈ ಎರಡೂ ವಿಜ್ಞಾನಗಳ ಸಂಯೋಜನೆ, ಭಾರತದಲ್ಲಿ ಬಲ್ಲಂತೆ, ವೇಧಾಂತದ ಉನ್ನತ ಕಾರ್ಯ. ಈ ದೇಶದಲ್ಲಿ ಉಪನಿಷತ್ತುಗಳ ಕಾಲದಿಂದ ವೇದಾಂತವು ಮಾಡಿರುವ ಕೆಲಸ ಇದೇ. ನಮ್ಮ ರಾಷ್ಟ್ರೀಯ ವಿಚಾರಧಾರೆ ಮತ್ತು ಸಂಸ್ಕೃತಿಯ ಮೇಲೆ ಪರಿಣಾಮಕಾರಿ ಪ್ರಭಾವ ಬೀರಿ, ವೇದಾಂತವು ನಿಷ್ಠೆ, ವಿವೇಚನೆಗಳ ನಡುವಣ ಪರಸ್ಪರ ವಿರೋಧವನ್ನು ಇಲ್ಲವಾಗಿಸಿದೆಯಷ್ಟೇ ಅಲ್ಲ, ಅಸಹನೆ, ಹಿಂಸೆ ಮತ್ತು ಅಭಿಪ್ರಾಯದಮನದಂಥ ಅಪಾಯಕಾರಿ ರೂಪದಲ್ಲಿ ಈ ವಿರೋಧ ಪ್ರದರ್ಶಿತ ವಾಗುವುದನ್ನೂ ತಪ್ಪಿಸಿದೆ. ವಿಜ್ಞಾನ ಮತ್ತು ಧರ್ಮ ಪರಸ್ಪರರ ಬಗೆಗಿನ ವೈಷಮ್ಯಗಳನ್ನು ದೂರಮಾಡಿ ಪರಸ್ಪರರಿಗೆ ಸಮೀಪವಾಗಿ ಬಂದಿದ್ದು ಮಾನವನಿಗೆ ಸೇವೆ ಮಾಡಲು, ಅವನ ನಾಗರಿಕತೆಯನ್ನು ಉಳಿಸಲು ದೀಕ್ಷಾಬದ್ಧವಾಗಿರುವ ಇಂದಿನ ಸನ್ನಿವೇಶದಲ್ಲಿ ವಿಜ್ಞಾನ ಮತ್ತು ಧರ್ಮದ ಬಗ್ಗೆ ವೇದಾಂತ ದೃಷ್ಟಿ ಅತ್ಯಗತ್ಯವಾಗಿದೆ. ಧರ್ಮದ ನಿಷ್ಠೆ, ವಿಜ್ಞಾನದ ವಿವೇಚನೆ ಎರಡೂ ಸಮ್ಮಿಳಿತವಾದಂಥ ಈ ರೀತಿಯ ಸಂಯೋಜಿತ ತತ್ತ್ವಜ್ಞಾನ ಆಧುನಿಕ ಮಾನವನನ್ನು ಪುನಾರೂಪಿಸಿ ಅವನ ವ್ಯಕ್ತಿತ್ವದ ಸಮಗ್ರತೆಯನ್ನೂ ಅವನ ಪ್ರಪಂಚದೊಡನೆ ಅವನ ಏಕತೆಯನ್ನೂ ಪುನಃ ಸ್ಥಾಪಿಸಬಲ್ಲದು.

ಅನು : ಎಸ್. ಕೆ. ರಾಮಕೃಷ್ಣಮೂರ್ತಿ

## ೧೭
# ವೇದಾಂತ ಮತ್ತು ವಿಜ್ಞಾನ*

### ೧. ಪೀಠಿಕೆ

ವಿಜ್ಞಾನವು ವಿಶಾಲವಾದ ವಿಷಯ. ವೇದಾಂತವೂ ವಿಶಾಲ ವಿಷಯವೇ. ಇವೆರಡರ ನಡುವಣ ನಿಕಟ ಸಂಪರ್ಕವನ್ನು ಎಪ್ಪತ್ತು ವರ್ಷಗಳಿಗೂ ಹಿಂದೆ ಸ್ವಾಮಿ ವಿವೇಕಾನಂದರು ನಿರೂಪಿಸಿದರು. ವಿಜ್ಞಾನ ಮತ್ತು ವೇದಾಂತಗಳ ನಡುವೆ ನಿಕಟ ಸಂಬಂಧವಿದೆಯೆಂಬ ಈ ಭಾವನೆಯನ್ನು ಪ್ರಪಂಚ ದಾದ್ಯಂತ, ಅದರಲ್ಲೂ ಭಾರತದಲ್ಲಿ ಪ್ರಚಾರಮಾಡುವುದಗತ್ಯ. ಇವೆರಡರ ನಡುವಣ ನಿಕಟ ಸಂಪರ್ಕದ ಆಧಾರದ ಮೇಲೆಯೇ ಈ ದೇಶದಲ್ಲಿನ ವಿದ್ಯಾಭ್ಯಾಸ ರೂಪುಗೊಳ್ಳಬೇಕೆಂದು ವಿವೇಕಾ ನಂದರು ಹೇಳಿದರು. ಕಾಲಕ್ರಮದಲ್ಲಿ, ಬರಬರುತ್ತ ಭಾರತದ ರಾಜಕೀಯ ಮತ್ತು ಆಡಳಿತ ಮುಖಂಡರು ಶಿಕ್ಷಣದಲ್ಲಿ ವೇದಾಂತ ವಿಷಯವನ್ನು ಅಳವಡಿಸುವ ಅಗತ್ಯವನ್ನು ಹೆಚ್ಚುಹೆಚ್ಚಾಗಿ ಮನಗಂಡಿದ್ದಾರೆ. ಇತ್ತೀಚೆಗೆ ತಾನೆ ಪ್ರಧಾನಮಂತ್ರಿ ಜವಾಹರಲಾಲ್ ನೆಹರೂ ಅವರು ಈ ದೇಶಕ್ಕೆ ವಿಜ್ಞಾನ, ಆಧ್ಯಾತ್ಮಿಕತೆ ಎರಡೂ ಬೇಕೆಂದು ಹೇಳಿದರು. ರಾಜಕೀಯ ಮತ್ತು ಧರ್ಮ ಪ್ರಪಂಚಕ್ಕೆ ಸಾಕಷ್ಟು ಹಾನಿಮಾಡಿವೆ, ಈಗ ಬೇಕಾಗಿರುವುದು ವಿಜ್ಞಾನ ಮತ್ತು ಆಧ್ಯಾತ್ಮಿಕ ಎಂದು ಆಚಾರ್ಯ ವಿನೋಭಾ ಭಾವೆ ಅವರು ಹೇಳಿದುದನ್ನು ಪ್ರಸ್ತಾಪಿಸಿ ನೆಹರೂ ಹಾಗೆಂದರು.

### ೨. ವೇದಾಂತದ ಧ್ಯೇಯವಾಕ್ಯ : ಸತ್ಯಮೇವ ಜಯತೇ

ನಮಗೆ ವಿಜ್ಞಾನ ಮತ್ತು ವೇದಾಂತ ಅಗತ್ಯವಾಗಿದೆಯೆಂದು ಹೇಳುವ ಇನ್ನೊಂದು ರೀತಿ ಇದು. ಪ್ರಧಾನಮಂತ್ರಿಗಳು ಈಚೆಗೆ ಈ ಸಂಗತಿಯನ್ನು ಪದೇಪದೇ ಒತ್ತಿ ಹೇಳುತ್ತಿದ್ದಾರೆ. ಎಲ್ಲ ರೀತಿಯ ಶಿಕ್ಷಣದಲ್ಲೂ ನಾವು ವಿಜ್ಞಾನ ಮತ್ತು ವೇದಾಂತದ ಮೂಲ ಸಂಗತಿಗಳನ್ನು ಗ್ರಹಿಸಬೇಕು. ಇದು ವಿದ್ಯಾರ್ಥಿಯನ್ನು ನಿಜವಾಗಿ ಆಧುನಿಕನನ್ನಾಗಿ, ಪ್ರಗತಿಪರನನ್ನಾಗಿ ಮಾಡುತ್ತದೆ. ಅದರ ಮೂಲಕ ಅವನಿಗೆ ಲಭ್ಯವಾಗುವ ಜ್ಞಾನಪ್ರವಾಹ ಕಾಲಾನುಕ್ರಮದಲ್ಲಿ ಭಾರತೀಯ ಜೀವನದ ಪ್ರತಿಯೊಂದು ಕ್ಷೇತ್ರಕ್ಕೂ ಪುಷ್ಟಿ ನೀಡಬಲ್ಲದು. ಒಂದಲ್ಲ ಒಂದು ಕ್ಷೇತ್ರದಲ್ಲಿ ಸುಶಿಕ್ಷಿತ ವಿದ್ಯಾರ್ಥಿಗಳನ್ನು ಹಳ್ಳಿಗಳಲ್ಲಿ ಸೇವೆ ಸಲ್ಲಿಸಲು ಕರೆಯಲಾಗುತ್ತದೆ ; ಅವರು ಹಳ್ಳಿಗಳ ಜನರಿಗೆ ವಿಜ್ಞಾನ ವೇದಾಂತಗಳ ಮೂಲ ಸಂಗತಿಗಳನ್ನೂ, ಉಪಯುಕ್ತತೆಯನ್ನೂ ಅರುಹಬೇಕು. ವಿದ್ಯೆ ಕಲಿಯುವಾಗ ಈ ಯುವಜನರು ಈ ಮಹತ್ವದ ವಿಷಯದ ಬಗ್ಗೆ ಸ್ಪಷ್ಟ ಅರಿವನ್ನು ಹೊಂದಿದಲ್ಲಿ ಅವರು ಜೀವನದಲ್ಲೂ ತಮ್ಮ ಕೆಲಸದಲ್ಲೂ ಹೆಚ್ಚು ದಕ್ಷರಾಗುತ್ತಾರೆ ; ಅದರಿಂದ ಅವರ ವ್ಯಕ್ತಿತ್ವಗಳೂ ಸಂಪನ್ನವಾಗುತ್ತವೆ.

---

* ೧೯೬೩ರ ಫೆಬ್ರುವರಿ ೧೮ರಂದು ಕಲ್ಕತ್ತೆಯ ರಾಮಕೃಷ್ಣ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್‌ನ 'ಮಾನವತಾವಾದ ಮತ್ತುಸಾಂಸ್ಕೃತಿಕ ಅಧ್ಯಯನ'ಗಳ ಶಾಲೆಯಲ್ಲಿ ನೀಡಿದ ಉಪನ್ಯಾಸ.

ಹೀಗೆ ಅವರು ತಮ್ಮ ಸಂಪರ್ಕಕ್ಕೆ ಬರುವ ವ್ಯಕ್ತಿಗಳಿಗೆ ಶಕ್ತಿಸಾಮರ್ಥ್ಯದ ಸ್ಫೂರ್ತಿಚಿಲುಮೆಯಾಗುತ್ತಾರೆ.

ನಮ್ಮ ರಾಷ್ಟ್ರೀಯ ಸಂಸ್ಕೃತಿಯ ತಳಪಾಯದಲ್ಲಿ ವೇದಾಂತದ ಚಿರ ಒಳನೋಟಗಳಿವೆ. ಉಪನಿಷತ್ತುಗಳ ಋಷಿಗಳು ಸಾಧಿಸಿ ನಮಗೆ ಬಿಟ್ಟುಹೋಗಿರುವ ಆಸ್ತಿ ಇದು. ಈ ಸೂಕ್ಷ್ಮ ಪರಿಜ್ಞಾನವನ್ನು ಅಭಿವ್ಯಕ್ತಗೊಳಿಸುವ ದನಿಗೆ ಒಂದು ಅದ್ಭುತ ಭವ್ಯತೆ, ಶಕ್ತಿಗಳಿವೆ. ಕಾಲದ ಸತ್ವಪರೀಕ್ಷೆಯನ್ನು ಎದುರಿಸಿ ವೇದಾಂತವು ಮಾನವ ಇತಿಹಾಸದ ಅತ್ಯಂತ ಜ್ಞಾನವಂತ ಯುಗವಾದ ಇಂದಿಗೂ ವಿನೂತನವಾಗಿ, ದೃಢವಾಗಿ ಉಳಿದುಬಂದಿರುವುದರಿಂದ ಅದು ಸತ್ಯದ ಸ್ವರವನ್ನು ಗ್ರಹಿಸಿದೆ ಎಂದರ್ಥ.

ಸತ್ಯಮೇವ ಜಯತೇ—'ಸತ್ಯವೊಂದಕ್ಕೇ ಜಯ'. ಭಾರತ ಗಣರಾಜ್ಯದ ಧ್ಯೇಯಮಂತ್ರ ಇದು. ಈ ಮಾತನ್ನು ಮುಂಡಕೋಪನಿಷತ್ತಿನಿಂದ ಆರಿಸಿಕೊಂಡಿದೆ. ಅಸತ್ಯ ಬರುತ್ತದೆ, ಹೋಗುತ್ತದೆ ; ಸತ್ಯ ಸ್ಥಿರವಾಗಿ ಉಳಿಯುತ್ತದೆ. ತನ್ನ ಸೂಕ್ಷ್ಮ ಪರಿಜ್ಞಾನದಲ್ಲಿ ಅತ್ಯುನ್ನತ ಸತ್ಯವನ್ನು ವೇದಾಂತವು ಗ್ರಹಿಸಿಕೊಂಡಿರುವುದು ಅದರ ಶಾಶ್ವತತೆ, ನಿರಂತರತೆಗಳಿಗೆ ಸಾಕ್ಷಿ.

## ೩. ವಸ್ತುಗಳ 'ಒಳಗು', 'ಹೊರಗು'

ಸತ್ಯವೇ ವೇದಾಂತದ ಉದ್ದೇಶ ; ವಿಜ್ಞಾನದ ಉದ್ದೇಶವೂ ಸತ್ಯವೇ. ವ್ಯಕ್ತಿಗಳ ಸಂಪರ್ಕ, ರಾಗದ್ವೇಷಗಳಿಂದ ಮುಕ್ತವಾಗಿ ನಿಷ್ಠೆಯಿಂದ ಸತ್ಯವನ್ನು ರಚಿಸುವುದೇ ವಿಜ್ಞಾನ ಎಂದು ಮಹಾನ್ ವಿಜ್ಞಾನಿಗಳು ಅರ್ಥಮಾಡಿದ್ದಾರೆ. ಪ್ರಾಮಾಣಿಕ, ವಿಮರ್ಶಾತ್ಮಕ ಸತ್ಯಶೋಧನೆಯೇ ವಿಜ್ಞಾನ. ಏಕಾಗ್ರತೆ, ಉದ್ದೇಶಪೂರ್ಣತೆ ನಿರ್ಲಿಪ್ತತೆ ಮತ್ತು ಸೂಕ್ಷ್ಮಗ್ರಹಣಗಳಿಗೆ ಬುದ್ಧಿಯನ್ನು ಒದಗಿಸಿದಾಗ ನಿಸರ್ಗದ ಸತ್ಯವನ್ನು ಅರಿಯಲು ಶಕ್ತರಾಗುತ್ತೇವೆ. ಅನುಭವದಲ್ಲಡಗಿರುವ ಸತ್ಯವನ್ನು ಅರಿಯಲು ವೇದಾಂತವೂ ತನ್ನದೇ ಆದ ವಿಧಾನವನ್ನು ಸೂಚಿಸುತ್ತದೆ. ಇಲ್ಲೂ ನಾವು ಅದೇ ಗುಣಗಳನ್ನು ಕಾಣುತ್ತೇವೆ : ಸ್ಪಷ್ಟತೆ, ಉದ್ದೇಶಪೂರ್ಣತೆ, ಸೂಕ್ಷ್ಮಗ್ರಹಣಶಕ್ತಿ. ವಿಜ್ಞಾನದಲ್ಲಾಗಲಿ ವೇದಾಂತದಲ್ಲಾಗಲಿ ಅಧ್ಯಯನದ ವಿಷಯ ಅನುಭವ—ಮನುಷ್ಯನಿಗೆ ಆಗಬಹುದಾದ ಯಾವುದೇ ಅನುಭವ—ಮನುಷ್ಯನ ಅನುಭವಪ್ರಪಂಚ. ವಿಜ್ಞಾನ, ವೇದಾಂತಗಳೆರಡೂ ಅನುಭವಪ್ರಪಂಚವನ್ನು ಶಾಂತಿಯಿಂದ, ಉದ್ದೇಶಪೂರ್ಣವಾಗಿ, ರಾಗದ್ವೇಷರಹಿತವಾಗಿ ಅಧ್ಯಯನ ಮಾಡಿರುವುದರಿಂದ ನಮಗೆ ಪರಸ್ಪರ ಹೋಲುವಂಥ ಒಳನೋಟಗಳು ದೊರೆತಿವೆ.

ಆದ್ದರಿಂದ ಒಂದು ಸಂಗತವಾದ ಪ್ರಶ್ನೆ ಏಳುತ್ತದೆ : ಎರಡು ವಿಭಿನ್ನ ಅಧ್ಯಯನಗಳು, ಎರಡು ಮಾರ್ಗಗಳು, ಎರಡು ಶಾಸ್ತ್ರಗಳು ಏಕಿರಬೇಕು ? ಒಂದೇ ಶಾಸ್ತ್ರ ಸಾಲದೆ ? ವೇದಾಂತ ಏಕೆ ಬೇಕು ?

ಹೌದು, ಎರಡೂ ಅಗತ್ಯವೇ. ಅಧ್ಯಯನದ ವಿಷಯವಾದ ಅನುಭವ ಬಹು ವಿಶಾಲವಾದುದು. ಒಂದೇ ಶಾಸ್ತ್ರ ಅದನ್ನು ಪೂರ್ಣವಾಗಿ ಗ್ರಹಿಸಲಾರದು. ಶುದ್ಧ ವಿಜ್ಞಾನದ ಒಂದೇ ಶಾಸ್ತ್ರದಲ್ಲೂ ಪರಿಶೋಧನೆಯ ಹಲವು ಕ್ಷೇತ್ರಗಳಿವೆ : ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಮನಶ್ಶಾಸ್ತ್ರ, ಖಗೋಳಶಾಸ್ತ್ರ ಇತ್ಯಾದಿ. ಪ್ರತಿ ಇಲಾಖೆಯೂ ಅನುಭವದ ಒಂದು ಭಾಗವನ್ನು ಆಯ್ದುಕೊಂಡು ಅಧ್ಯಯನ ಮಾಡುತ್ತದೆ. ಇವೆಲ್ಲ ಅಧ್ಯಯನಗಳ ಹಿಂದೆ ಅಧ್ಯಯನವಸ್ತುವಾದ ಪ್ರಪಂಚ ಒಂದೇ ಎಂಬ ಸಾಮಾನ್ಯ ಅರಿವಿದೆ. ದೇಶ-ಕಾಲಗಳ ಪ್ರಪಂಚಕ್ಕೆ, ಇಂದ್ರಿಯಗಳಿಂದ ವ್ಯಕ್ತಪಡುವ ಪ್ರಪಂಚಕ್ಕೆ ಸಂಬಂಧಿಸಿದಂತೆ ಆಧುನಿಕ ವಿಜ್ಞಾನದ ವಿವಿಧ ಭಾಗಗಳು ಆಳವಾದ ಅಧ್ಯಯನದ ನಂತರ ನಮಗೆ ಕೆಲವು ಒಳನೋಟಗಳನ್ನು ನೀಡಿವೆ ; ಇವುಗಳ ನೆರವಿನಿಂದ ಬಾಹ್ಯಪ್ರಕೃತಿಯ ಬಗ್ಗೆ ತಿಳಿವಳಿಕೆ

ಯನ್ನೂ, ಅದರ ಮೇಲೆ ಹತೋಟಿಯನ್ನೂ ಹೊಂದಿರಲು ಸಾಧ್ಯವಾಗಿದೆ. ಮಾನವಾವತರಣ ಕಾಲದಿಂದ—ಅದರಲ್ಲೂ ಕೆಲವು ಶತಮಾನಗಳಲ್ಲಿ—ವಿಜ್ಞಾನದ ಸಾಧನೆಯಿದು. ಅದರ ಸೈದ್ಧಾಂತಿಕ ಮತ್ತು ಕಾರ್ಯಶೀಲ ಸಾಧನೆಗಳು ಇಂದು ಎಲ್ಲೆಲ್ಲೂ ಕಾಣಬರುತ್ತವೆ.

ಇನ್ನು ಹೆಚ್ಚಿಗೆ ತಿಳಿಯಬೇಕಾದುದೇನಿದೆ ? ವೇದಾಂತವೂ ಬಹುಕಾಲದ ಹಿಂದೆ ಇದೇ ಪ್ರಶ್ನೆ ಕೇಳಿತು. ಈ ಜಗತ್ತು ಏನು ? ಮನುಷ್ಯ ಎಂದರೇನು ? ಅವನ ಅಂತಿಮ ಗುರಿಯೇನು ? ಇವೇ ಮುಂತಾದ ಪ್ರಶ್ನೆಗಳನ್ನು ಕುರಿತು ಉಪನಿಷತ್ತುಗಳ ಮಹಾ ವಿಚಾರವಂತರು ಪರಾಮರ್ಶಿಸಿದುದೇ ವೇದಾಂತದ ಹಿರಿಮೆಯಾಗಿದೆ. ಅನುಭವಜಗತ್ತು ಎರಡು ಸ್ಥೂಲ ವರ್ಗಗಳಿಂದ ಕೂಡಿದ್ದಾಗಿದೆ ಎಂದು ಅವರು ಬಹು ಹಿಂದೆಯೇ ಕಂಡುಕೊಂಡರು. ಅವು: ಬಾಹ್ಯಸಂಬಂಧಿ ಮತ್ತು ಆತ್ಮ ಸಂಬಂಧಿ. ವೇದಾಂತವನ್ನೂ, ಇಂದು ವಿಜ್ಞಾನ ಎತ್ತ ಸಾಗಿದೆಯೆಂಬುದನ್ನೂ ಅರಿಯಲು ಈ ತಿಳಿವಳಿಕೆ ಮೂಲ ಅಗತ್ಯವೆಂಬುದನ್ನು ಮುಖ್ಯವಾಗಿ ಗಮನಿಸಬೇಕು. ಇಡೀ ವಿಶ್ವಕ್ಕೆ ಈ ವರ್ಗೀಕರಣವನ್ನು ಅನ್ವಯಿಸಿ ನೋಡಿದಾಗ, ಆಧುನಿಕ ವಿಜ್ಞಾನ ಇವೆರಡರಲ್ಲಿ ಒಂದನ್ನು—ಬಾಹ್ಯಸಂಬಂಧಿ ಅನುಭವಪ್ರಪಂಚವನ್ನು—ಅಧ್ಯಯನ ಮಾಡಿರುವುದು ತಿಳಿಯುತ್ತದೆ. ಆದರೆ ಆಧುನಿಕ ವಿಜ್ಞಾನ ಆತ್ಮಸಂಬಂಧಿ ಅನುಭವವನ್ನು ತಿಳಿಯಲೂ ಪ್ರಯತ್ನಿಸುತ್ತಿದೆ. ಮನಶ್ಶಾಸ್ತ್ರ ಇಂಥ ಒಂದು ವಿಜ್ಞಾನ ಶಾಸ್ತ್ರ. ಆದರೆ ಶರೀರ ವಿಜ್ಞಾನದ ಪಾತ್ರ ಅತಿಯಾಗಿರುವುದು ಪಾಶ್ಚಿಮಾತ್ಯ ಮನಶ್ಶಾಸ್ತ್ರದ ಒಂದು ಕೊರತೆಯಾಗಿದೆ. ದೇಶ-ಕಾಲ ವಿಧಾನವನ್ನು ಅನುಸರಿಸುವುದರಿಂದ ನಮಗೆ ವಸ್ತುಗಳ 'ಹೊರಗು' ತಿಳಿಯಬಹುದೇ ವಿನಾ ಅವುಗಳ 'ಒಳಗು' ತಿಳಿಯುವುದಿಲ್ಲ. ಪಶ್ಚಿಮದ ಮನಶ್ಶಾಸ್ತ್ರ ಬಹುತೇಕವಾಗಿ ವರ್ತನಾತ್ಮಕ ಮನಶ್ಶಾಸ್ತ್ರ ; ಮಾನವನ ವರ್ತನೆಯನ್ನು ಅಧ್ಯಯನ ಮಾಡುವುದರ ಮೂಲಕ ಮಾನವನ ಮನಸ್ಸನ್ನು ಅರಿಯುವ ಪ್ರಯತ್ನ ಅದು. ಆದರೆ ಪಶ್ಚಿಮದ ಮನಶ್ಶಾಸ್ತ್ರಜ್ಞರು ಈ ಬಗೆಯ ಮಿತಿಯನ್ನು ಭೇದಿಸಿ ಮುನ್ನಡೆದು ಮನೋವಿಶ್ಲೇಷಣೆಯ ಮೂಲಕ 'ಗಹನ ಮನ ಶ್ಶಾಸ್ತ್ರ' ಎಂದು ಕರೆಯಬಹುದಾದಂಥ ಆಳವಾದ ಅಧ್ಯಯನವನ್ನೂ ಆರಂಭಿಸಿದ್ದಾರೆ. ಮನಸ್ಸಿನ ಅಧ್ಯಯನವನ್ನು ವರ್ತನೆಯ ಮೇಲ್ಪದರಗಳಿಂದ ಇನ್ನೂ ಆಳಕ್ಕೊಯ್ಯಬಾರದೇಕೆ ? ಅದರ ಆಳಗಳನ್ನು ಆತ್ಮಪರೀಕ್ಷೆಯಿಂದ ಪರಿಶೀಲಿಸೋಣ. ಇದೇ ಆಳವಾದ ಮನಶ್ಶಾಸ್ತ್ರದ ಆರಂಭ. ಆಧುನಿಕ ಮನಶ್ಶಾಸ್ತ್ರದ ಒಂದು ಮಹಾಚಳವಳಿಯ ಆರಂಭ ಇದು. ಇದನ್ನು ದೃಢವಾಗಿ, ಆಳವಾಗಿ ಮುಂದುವರಿಸಿದಲ್ಲಿ ಮನುಷ್ಯನ ನೈಜ ಸ್ವಭಾವ ಏನೆಂಬ ಸತ್ಯ ದೊರೆಯುವುದು. ಈ ಸತ್ಯವನ್ನು ಭಾರತದಲ್ಲಿ ವೇದಾಂತವು ಯುಗಯುಗಾಂತರಗಳ ಹಿಂದೆಯೇ ಅರಿತಿತ್ತು—ಮನುಷ್ಯನು ನಿತ್ಯ, ಅಮೃತ ಆತ್ಮ.

### ೪. ಸಮಗ್ರ ಅನುಭವದ ಅಧ್ಯಯನ

ಉಪನಿಷತ್ತುಗಳೂ, ವೇದಾಂತವೂ ನೇರವಾಗಿ ವಸ್ತುಗಳ ಅಂತರಂಗದ ಅಧ್ಯಯನಕ್ಕೆ ತೊಡಗಿದವು. ಪಂಚೇಂದ್ರಿಯಗಳಿಗೆ ವ್ಯಕ್ತವಾದಂಥ ಪ್ರಪಂಚವು ಒಟ್ಟು ಅಸ್ತಿತ್ವದ ಒಂದು ಸಣ್ಣ ಅಂಶವೆಂಬುದನ್ನು ಅವು ಮೊದಲಲ್ಲೇ ಕಂಡುಕೊಂಡವು. ಅದು ನಮಗೆ ನೀಡುವ ವಸ್ತುಗಳ ಬಾಹ್ಯನೋಟ ಒಟ್ಟು ವಾಸ್ತವತೆಯ ಒಂದು ತೆಳುಪದರವಷ್ಟೇ ಆಗಿದೆ. ಆಧುನಿಕ ವೈಜ್ಞಾನಿಕ ಪರಿಶೋಧನೆಯೂ ಈ ತೀರ್ಮಾನವನ್ನು ಸಮರ್ಥಿಸಿದೆ. ಹೀಗೆ ಆಧುನಿಕ ವಿಜ್ಞಾನದ ತೀರ್ಮಾನದ ಪ್ರಕಾರವೇ ವಿಜ್ಞಾನದ ವ್ಯಾಪ್ತಿಯೇ ಮಿತವಾದುದು. ಆದರೆ ವಿಜ್ಞಾನ ತಾನೇ ಮಿತವಾದುದಲ್ಲ. ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಖಗೋಳಶಾಸ್ತ್ರದಂಥ ವಿಜ್ಞಾನದ ವಿಭಾಗಗಳು ಮಿತವಾಗಬಹುದು, ಆದರೆ ವಿಜ್ಞಾನವೇ ಮಿತವಾದುದಲ್ಲ. ಏಕೆಂದರೆ, ಸಮಗ್ರ ಅನುಭವದ ಪ್ರಾಮಾಣಿಕ, ವಿಮರ್ಶಾತ್ಮಕ ಅಧ್ಯಯನ ವಿಜ್ಞಾನದ ಕರ್ತವ್ಯ ; ವಿಜ್ಞಾನಶಾಸ್ತ್ರಗಳೇ ಆಗಲಿ, ಇತರ ಶಾಸ್ತ್ರಗಳೇ ಆಗಲಿ ಅಧ್ಯಯನ ಮಾಡುವ

ಅನುಭವಪ್ರಪಂಚ ಒಂದೇ ಎಂಬುದನ್ನೂ ನಾವು ಈಗಾಗಲೇ ಕಂಡಿದ್ದೇವೆ. ಬಾಹ್ಯದಿಂದಲೇ ಆಗಲಿ ಆಂತರಿಕವಾಗಿಯೇ ಆಗಲಿ ಪರಿಶೀಲಿಸುವ ಸತ್ಯ ಒಂದೇ. ಪ್ರಾಚೀನ ಉಪನಿಷತ್ತುಗಳ ವಿಚಾರವಂತರು ಮಾನವರ ಪರಿಜ್ಞಾನದ ಮುಂದೆ ಇಟ್ಟಂಥ ಉದ್ದೇಶ ಇದೇ—ಸತ್ಯದ ಸಮಗ್ರತೆ, ವಿಜ್ಞಾನವಾದ ಅನಾತ್ಮ ಮತ್ತು ಧರ್ಮವಾದ ಆತ್ಮದ ಜ್ಞಾನಗಳ ಮಿಲನ. "ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ ತತ್ ಜ್ಞಾನಂ ಮತಂ ಮಮ"—"ನನ್ನ ಅಭಿಪ್ರಾಯದಲ್ಲಿ ಕ್ಷೇತ್ರ (ಅನಾತ್ಮ) ಮತ್ತು ಕ್ಷೇತ್ರಜ್ಞ (ಆತ್ಮ)ರ ತಿಳಿವಳಿಕೆಯೇ ನಿಜವಾದ ಜ್ಞಾನ" ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ (೧೩.೨).

ವೇದಾಂತ ಎಂಬ ಪದದಲ್ಲೇ ಈ ಸಾರ್ವಲೌಕಿಕ ಭಾವನೆ ನಮಗೆ ಕಂಡುಬರುತ್ತದೆ. ವೇದ ಎಂದರೆ ಜ್ಞಾನ, ಪ್ರಾಮಾಣಿಕ ವಿಮರ್ಶಾತ್ಮಕ ಜ್ಞಾನ, ಸತ್ಯಕ್ಕೆ ಸಂಬಂಧಿಸಿದ ಅರಿವು. ಅದು ಯಾವೊಬ್ಬ ವ್ಯಕ್ತಿಯ ಅಭಿಪ್ರಾಯವಲ್ಲ. ವೇದಾಂತ ಎಂದರೆ ಅಂತಕ್ಕೆ, ಅಂತಿಮ ನಿರ್ಣಯಕ್ಕೆ ಒಯ್ಯಲ್ಪಡುವ ಇಡೀ ಜ್ಞಾನವಿಧಾನ, ಜ್ಞಾನದ ಪರಿಪೂರ್ಣತೆ. ಜ್ಞಾನವು ಅಪರಾ ಮತ್ತು ಪರಾ ಎಂಬ ಎರಡು ವಿದ್ಯೆಗಳಿಗೆ ಸೇರಿದುದೆಂದು ಉಪನಿಷತ್ತುಗಳು ಅರಿತವು. ಇಂದ್ರಿಯಗಳ ಮೂಲಕ ವ್ಯಕ್ತಪಡುವ ಅನುಭವಪ್ರಪಂಚದ ಅರಿವು ಅಪರಾ ವಿದ್ಯೆ—ಸಾಮಾನ್ಯ ಜ್ಞಾನ. ಎಡಿಂಗ್‌ಟನ್ ಹೇಳುವಂತೆ 'ರಚನೆಯ ಸ್ವರೂಪದ ತಿಳಿವಳಿಕೆ ನೀಡುವ ವಿಜ್ಞಾನ ಇದು ; ಒಳಹುರುಳಿನ ಅರಿವನ್ನು ಅದು ನೀಡದು'. ವಿಜ್ಞಾನವು ನಮಗೆ ವಿಶ್ವದಲ್ಲಿ ಏನಿದೆ ಎಂಬುದರ ಒಂದು ಸಂಕ್ಷಿಪ್ತ, ಕಲ್ಪನಾತ್ಮಕ ವರದಿ ನೀಡುವುದಷ್ಟೇ ಎಂದು ಪ್ರಮುಖ ವಿಜ್ಞಾನಿಗಳು ಹೇಳುತ್ತಾರೆ. ನಾವು ಇನ್ನೂ ವಿಶ್ವವಸ್ತುವಿನಿಂದ, ವಾಸ್ತವತೆಯಿಂದ ಬಹು ದೂರದಲ್ಲಿದ್ದೇವೆಂದು ಅವರೆನ್ನುತ್ತಾರೆ. ಇಪ್ಪತ್ತನೆಯ ಶತಮಾನವು ನಮಗೆ ತೋರಿಸುವ ಪ್ರಪಂಚ ನಮ್ಮ ಅನುಭವದಿಂದ ದೂರವಾದ ಒಂದು ಅಮೂರ್ತ ಪ್ರಪಂಚವಾಗಿದೆ ಎಂದು ಸರ್ ಜೇಮ್ಸ್ ಜೀನ್ ಹೇಳುತ್ತಾರೆ. ಐನ್‌ಸ್ಟೈನರ ಸಾಪೇಕ್ಷವಾದದಲ್ಲಿ ಆಕಾಶ ಮತ್ತು ಕಾಲ ಒಂದುಗೂಡಿ ಆಕಾಶ-ಕಾಲ ನಿರಂತರತೆ ದೊರೆಯುತ್ತದೆ ; ಇಲ್ಲಿ ಪ್ರಪಂಚದ ಎಲ್ಲ ಘಟನೆಗಳೂ, ರೂಪಗಳೂ ವಿವಿಧ ವಿನ್ಯಾಸವುಳ್ಳದ್ದಾಗಿವೆಯಷ್ಟೆ. ಈ ರೀತಿ ಇಪ್ಪತ್ತನೆ ಶತಮಾನದ ವಿಜ್ಞಾನವು ತೋರ್ಪಡಿಸುವ ಪ್ರಪಂಚ ಇಂದ್ರಿಯಾನುಭವಕ್ಕೆ ಸಿಗುವ ಪರಿಚಿತ ಪ್ರಪಂಚದಡಿಯಿರುವ ಅಪರಿಚಿತ ಪ್ರಪಂಚವಾಗಿದೆ. ಭೌತವಿಜ್ಞಾನಗಳು ಆಳವಾಗಿ ಒಳಹೊಗದಿದ್ದರೂ ಜ್ಞಾನವಾಗಿ ವಿಜ್ಞಾನವು ಆಳದಿಂದಾಳಕ್ಕೆ ಹೋಗುತ್ತ ಅಸ್ತಿತ್ವದ ಅಂತರಾಳ ಮುಟ್ಟಬಹುದು.

'ವಿಜ್ಞಾನ' ಎಂದರೂ ಜ್ಞಾನವೇ, ಸರಿನೋಡಿದ ಜ್ಞಾನ ; ಎಲ್ಲ ಮಟ್ಟಗಳಲ್ಲಿ ಅನುಭವದ ಬಗ್ಗೆ ಪ್ರಾಮಾಣಿಕ, ವಿಮರ್ಶಾತ್ಮಕ ಅಧ್ಯಯನದಿಂದ ದೊರೆತ ಜ್ಞಾನ. ಆದರೆ 'ವೇದ' ಎಂಬ ಪದಕ್ಕೆ ಇನ್ನೂ ಗಹನವಾದ ಮಹತ್ವವುಂಟು. ಇದೂ ಅನುಭವದ ಬಗ್ಗೆ ಪ್ರಾಮಾಣಿಕ, ವಿಮರ್ಶಾತ್ಮಕ ಅಧ್ಯಯನದಿಂದ ಪರೀಕ್ಷಿಸಿ ಪಡೆದ ಜ್ಞಾನ ಎಂದೇ ಅರ್ಥವಾದರೂ ವೇದದ ಕಲ್ಪನೆಯಲ್ಲಿ ಈ ಅಧ್ಯಯನ ಆಕಾಶ-ಕಾಲಗಳ ಪ್ರಪಂಚದಿಂದಾಚೆಗೆ ವಸ್ತುಗಳ 'ಅಂತರಂಗ' ಕ್ಷೇತ್ರಕ್ಕೆ ವ್ಯಾಪಿಸುತ್ತದೆ. ವಸ್ತುಗಳ ಆಂತರ್ಯದ ಅರಿವೇ ಈ ಅಧ್ಯಯನವನ್ನು 'ವೇದಾಂತ'ವಾಗಿಸುತ್ತದೆ. ವೇದದ ಅಥವಾ ಜ್ಞಾನದ ಅಂತ. ಹೀಗೆ ಅದು ಪರವಿದ್ಯೆಯ—ಪರಮಜ್ಞಾನದ—ಮಟ್ಟಕ್ಕೇರುತ್ತದೆ. ಎಲ್ಲ ವಿಜ್ಞಾನ ಶಾಸ್ತ್ರಗಳು ಮತ್ತು ಕಲೆಗಳೂ (ವೇದಶಾಸ್ತ್ರಗಳು ಕೂಡ) ಅಪರಾವಿದ್ಯೆಗೆ ಸೇರಿವೆ, ಏಕೆಂದರೆ ಅವು ನಮಗೆ ರಚನೆಯ ಸ್ವರೂಪ, ಪದಗಳ ಜ್ಞಾನ ಕುರಿತು ತಿಳಿಸುತ್ತವೆಯೇ ವಿನಾ ವಸ್ತುಗಳ ಒಳಹುರುಳು ಮತ್ತು ಅರ್ಥಗಳನ್ನಲ್ಲ ಎಂದು ಮುಂಡಕೋಪನಿಷತ್ತು ಹೇಳುತ್ತದೆ. ಪ್ರಪಂಚದ ರೂಪದಲ್ಲಿ ನಮಗೆ ಕಾಣುವ ಈ ಬದಲಾಗುವ ಜಗತ್ತಿನ ಹಿಂದಿರುವ ಅವಿನಾಶಿಯಾದ ಸತ್ಯವನ್ನು ನಮಗೆ ಅರಿವು ಮಾಡಿಕೊಡುವುದು ಪರಾವಿದ್ಯೆ. ಮುಂಡಕೋಪನಿಷತ್ತು ಹೇಳುವಂತೆ "ಅಥ ಪರಾ ಯಯಾ ತತ್ ಅಕ್ಷರಂ ಅಧಿಗಮ್ಯತೇ". ಅನುಭವದ ಸಮಗ್ರತೆಯ ಮೇಲೆ ಹಿಡಿತ ಹೊಂದಿರಲು ವೇದಾಂತಕ್ಕೆ

ಸಾಧ್ಯವಾದುದು ಇದರಿಂದಲೇ : ಇದು ಆಳವಾದದ್ದು, ಸಮಗ್ರವಾದದ್ದು, ಎಂತಲೇ ದೃಢವಾದದ್ದು. ವೇದಾಂತ ವಿಜ್ಞಾನವನ್ನು ಒಪ್ಪಿಕೊಂಡು ಇನ್ನೂ ಮುಂದಕ್ಕೆ ಸಾಗುತ್ತದೆ. ವಿಜ್ಞಾನ ಇನ್ನೂ ವೈಜ್ಞಾನಿಕ ವಾಗಿ, ಇನ್ನೂ ಆಳವಾಗಿ ಅನುಭವವನ್ನು ಅಧ್ಯಯನ ಮಾಡಿ ಸತ್ಯವನ್ನು ಮುಟ್ಟಲೆಂದು ವೇದಾಂತ ಇಂದು ವಿಜ್ಞಾನಕ್ಕೆ ಸವಾಲು ಹಾಕುತ್ತದೆ. ಆಧುನಿಕ ಯುಗದಲ್ಲಿ ಸ್ವಾಮಿ ವಿವೇಕಾನಂದರ ಮೂಲಕ ವೇದಾಂತ ಮಾಡಿದ ಕೆಲಸ ಇದೇ. ಮಾನವನ ಒಳಬದುಕಿನಿಂದ ದೊರೆಯುವ ಅನಾನುಕೂಲಕರ ಸಂಗತಿಗಳನ್ನು ಆಧುನಿಕ ವಿಜ್ಞಾನಿಗಳು ಎಷ್ಟೋ ವೇಳೆ ಬದಿಗಿರಿಸಿಬಿಡುತ್ತಾರೆ. ಆದರೆ ಇಪ್ಪತ್ತನೆಯ ಶತಮಾನದಲ್ಲಿ ಈ ಸಂಗತಿಗಳನ್ನು ಎದುರಿಸಿ ಅವುಗಳ ಅರ್ಥ ತಿಳಿಯಲು ಪ್ರಯತ್ನಿಸುವ ಧೈರ್ಯ ಶಾಲಿ ವಿಜ್ಞಾನಿಗಳಿದ್ದಾರೆ. ಅವರ ತೀರ್ಮಾನಗಳಿಗೆ ಪ್ರಾಚೀನ ವೇದಾಂತದ ಒಳನೋಟದಲ್ಲಿ ಪ್ರಬಲ ಸಮರ್ಥನೆ ದೊರೆಯುತ್ತದೆ.

## ೫. ಆತ್ಮವಿಕಾಸದ ಗುರಿ

ಹೀಗೆ ವೇದಾಂತ ಮತ್ತು ಆಧುನಿಕ ವಿಜ್ಞಾನ ಸತ್ವ ಮತ್ತು ಮನೋವೃತ್ತಿಗಳಲ್ಲಿ ಪರಸ್ಪರರಿಗೆ ಹತ್ತಿರವಾಗಿವೆ. ಎರಡೂ ಆಧ್ಯಾತ್ಮಿಕ ಶಾಸ್ತ್ರಗಳೇ. ಉದ್ದೇಶಗಳಲ್ಲೂ ಅನೇಕ ತೀರ್ಮಾನಗಳಲ್ಲೂ ಸಹ ಎರಡೂ ಪರಸ್ಪರರಿಗೆ ಸಮೀಪವಾಗಿವೆ. ಭೌತಿಕಪ್ರಪಂಚದ ವ್ಯವಸ್ಥಾನಿಯಮದಲ್ಲೂ ಇವೆರಡೂ ನಿಕಟವಾಗಿರುವ ಹಲವು ಅಂಶಗಳನ್ನು ಕಾಣುತ್ತೇವೆ. ಸ್ವಾಮಿ ವಿವೇಕಾನಂದರು ಹೇಳಿದಂತೆ ಒಂದು ಸ್ವಯಂವಿಕಾಸದ ಗುರಿ ಕುರಿತು ಪೀಠಿಕಾ ಸಮ್ಮತಿ ಇರುವುದು ವಿಜ್ಞಾನ ವೇದಾಂತಗಳೆರಡರ ವಿಶ್ವಶಾಸ್ತ್ರ ದಲ್ಲೂ ಮೂಲಭೂತ ನಿಲುಮೆಯಾಗಿದೆ. ಈ ವಿಶ್ವದ ಹಿಂದೆ ಒಂದು ಆತ್ಮವಿಕಾಸದ ಗುರಿಯಾದ ಬ್ರಹ್ಮ ಇರುವುದಾಗಿ ವೇದಾಂತ ಹೇಳುತ್ತದೆ. ಈ ಜಗತ್ತಿನ ಹಿಂದೆ ಒಂದು ಆತ್ಮವಿಕಾಸದ ಗುರಿ—ಫ್ರೆಡ್ ಹಾಯ್ಲ್ ಅವರ ಮಾತಿನಲ್ಲಿ ಹಿನ್ನೆಲೆಯ ವಸ್ತು—ಇದೆಯೆಂದು ವಿಜ್ಞಾನ ಹೇಳುತ್ತದೆ. ವಿಶ್ವವಿಕಾಸ ತತ್ವವನ್ನು ಎರಡೂ ನಂಬುತ್ತವೆ. ಇಂಥ ಸಾಮ್ಯಗಳು ಹಲವಿವೆ. ಉಪನಿಷತ್ತುಗಳಲ್ಲಿ ನಿರೂಪಿಸಿರುವ ಸತ್ಯಗಳು ಅಪೌರುಷೇಯವಾದವು : ಅವಕ್ಕೆ ಯಾವೊಬ್ಬ ವ್ಯಕ್ತಿಯ ಅಪ್ಪಣೆ ಅನಗತ್ಯ. ವೈಜ್ಞಾನಿಕ ಸತ್ಯಗಳೂ ಹೀಗೆಯೇ ವ್ಯಕ್ತಿಸಂಬಂಧವಾಗಿರದೆ ಉದ್ದೇಶಪೂರ್ಣವಾದವು. ಅವಕ್ಕೂ ಯಾವೊಬ್ಬ ವ್ಯಕ್ತಿಯ ಒಪ್ಪಿಗೆ ಬೇಕಿಲ್ಲ. ಅವು ವ್ಯಕ್ತಿಸಂಬಂಧವಾಗಿಲ್ಲದುದರಿಂದಲೇ ಅವು ಸಾರ್ವಲೌಕಿಕವಾಗಿದ್ದು ಪ್ರಪಂಚದ ಲಕ್ಷಣ ಕುರಿತು ಸ್ಪಷ್ಟ ಒಳನೋಟ ನೀಡುತ್ತವೆ. ಅದೇ ವಿಜ್ಞಾನ.

ಭಾರತೀಯ ಋಷಿಗಳೂ ಅನುಭವವನ್ನು ಅಧ್ಯಯನ ಮಾಡಿದರು. ಮೊದಲಿಗೆ ಅವರು ಬಾಹ್ಯ ಅನುಭವವನ್ನು, ವಸ್ತುಗಳ ಬಾಹ್ಯಸ್ಥಿತಿಯನ್ನು ಅಧ್ಯಯನ ಮಾಡಿದರು. ಈ ನಮ್ಮ ಭೂಮಿ, ಇತರ ಗ್ರಹಗಳು, ಭೂಮಿಯ ಮೇಲಿನ ಸಕಲವೂ—ಮಾನವ ಶರೀರ ಮತ್ತು ಮನಸ್ಸು ಸಹ—ನಿರಂತರ ಬದಲಾವಣೆಗೊಳಗಾಗುತ್ತಿರುತ್ತದೆಂದು ಅವರು ಕಂಡುಕೊಂಡರು. ಆಗ ಅವರು ಒಂದು ಮೂಲಭೂತ ಪ್ರಶ್ನೆ ಕೇಳಿದರು : ಈ ಬದಲಾವಣೆಯ ಪ್ರಪಂಚದಲ್ಲಿ ಬದಲಾಗದಿರುವುದು ಏನು ? ಅನುಭವದಲ್ಲಿ ಎಲ್ಲೋ ಅಡಗಿರುವ ಆ ನಿತ್ಯಸತ್ಯಕ್ಕಾಗಿ ಎಲ್ಲಿ ಅರಸಬೇಕು ? ಹೊರಗಡೆಯಂತೂ ಅಲ್ಲ ಎಂದು ಅವರು ತೀರ್ಮಾನಿಸಿದರು. ನಾವು ಒಳಗಡೆ ಹುಡುಕೋಣ, 'ಮಾನವ' ಎಂಬ ಅದ್ಭುತ ವಸ್ತುವನ್ನು ಅಧ್ಯಯನ ಮಾಡೋಣ. ಮಾನವ ಪ್ರಜ್ಞೆ ಎಂಬ ಅದ್ಭುತವನ್ನು ಅಧ್ಯಯನ ಮಾಡೋಣ. ಉಪನಿಷತ್ತುಗಳಲ್ಲಿ ಈ ಅಧ್ಯಯನ ಅತ್ಯಂತ ಉದ್ದೇಶಪೂರ್ಣ, ರಾಗದ್ವೇಷರಹಿತ ರೀತಿಯಲ್ಲಿ ಹಂತಹಂತವಾಗಿ ಮುನ್ನಡೆಯುವುದನ್ನು ಕಾಣುತ್ತೇವೆ. ನಿಸರ್ಗದಿಂದ ಈ ಪ್ರಶ್ನೆಗೆ ಉತ್ತರ ಪಡೆದು ನಿಸರ್ಗ ವಿಕಾಸದ ಸರ್ವೋತ್ಕೃಷ್ಟ ಉತ್ಪನ್ನವೆನಿಸಿರುವ ಮಾನವನ ಸ್ವಭಾವವೇನೆಂಬ ಅದ್ಭುತ ತೀರ್ಮಾನಕ್ಕೆ ಬರುವವರೆಗೂ ಈ ಅಧ್ಯಯನ ನಿಲ್ಲಲಿಲ್ಲ. ತನ್ನ ನೈಜಸ್ವಭಾವದಲ್ಲಿ ಮನುಷ್ಯನು

ಆತ್ಮ ; ಹುಟ್ಟು ಸಾವುಗಳಿಲ್ಲದ ಪರಿಶುದ್ಧ. ವಿಶ್ವವೂ ಆತ್ಮನೇ. ಅದು ಪೂರ್ತಿ ಅಧ್ಯಾತ್ಮಿಕ. ಈ ಒಳನೋಟ ಮತ್ತು ಅದರ ಹಿಂದಿನ ವಿಧಾನವೇ ವೇದಾಂತ.

'ಸುಮ್ಮನೆ ನಮ್ಮನ್ನು ಅವಲಂಬಿಸಿ ; ನಾವು ಹೇಳಿದುದನ್ನು ನಂಬಿ' ಎಂದು ಆ ಮಹಾಗುರುಗಳು ಹೇಳಲಿಲ್ಲ. ಹಾಗೆ ಮಾಡಿದ್ದಿದ್ದರೆ ಮೊಂಡುವಾದವೆನಿಸಿ ಶಾಸ್ತ್ರಾಂಧ ಧರ್ಮಗಳಂತೆ ಅವರ ಮಾರ್ಗ ಅವೈಜ್ಞಾನಿಕವೆನಿಸುತ್ತಿತ್ತು. ಪ್ರತಿಯಾಗಿ ಅವರು ಪ್ರತಿಪಾದಿಸಿದರು : ಪ್ರಯೋಗ ಮಾಡಿ ನೋಡಿ, ಅರಿಯಲೆತ್ನಿಸಿ ಮಾನವ ವ್ಯಕ್ತಿತ್ವದ ಅಪಾರ ಪ್ರಮಾಣ ನಮಗೆ ಕಂಡ ಬಗೆಯನ್ನು ನೀವೇ ತುಲನೆ ಮಾಡಿನೋಡಿ. ಮಾನವಸ್ವಭಾವದ ಭವ್ಯದರ್ಶನವನ್ನು ಎಲ್ಲರೂ ಸಾಕ್ಷಾತ್ಕರಿಸಿಕೊಳ್ಳಬಹುದು : ಅದು ಎಲ್ಲರ ಆಜನ್ಮಸಿದ್ಧ ಹಕ್ಕು.

> *ಕೇಳಿರಿ ಮಕ್ಕಳೇ, ನಭದಲ್ಲಿರುವ ನೀವೂ ಕೇಳಿರಿ! ಮಾನವ ವ್ಯಕ್ತಿತ್ವದ ಈ ಅಪಾರ ಪ್ರಮಾಣವನ್ನು, ಸೂರ್ಯನ ಉಜ್ವಲ ಪ್ರಕಾಶವನ್ನು, ಎಲ್ಲ ಅಂಧಕಾರದಾಚೆಗಿನ ಬೆಳಕನ್ನು ನಾನು ಅರಿತುಕೊಂಡಿದ್ದೇನೆ. ಆತನನ್ನು ಸಾಕ್ಷಾತ್ಕರಿಸಿಕೊಂಡರೆ ಮಾತ್ರ ನೀವು ಪುನರಪಿ ಮರಣದಿಂದ ಮುಕ್ತರಾಗುವಿರಿ. ಮುಕ್ತಿಗೆ ಬೇರೆ ಮಾರ್ಗವೇ ಇಲ್ಲ" ಎಂದು ಶ್ವೇತಾಶ್ವತರೋಪನಿಷತ್ತಿನ ಋಷಿ ಸಾರಿದ್ದಾನೆ (II. ೫. III. ೮).*

ಆದ್ದರಿಂದ ವೇದಾಂತದ ಭಾಷೆ ಪರೀಕ್ಷಿಸಿ ಪ್ರಯೋಗಮಾಡಿ ಅರಿತುಕೊಳ್ಳುವ ಭಾಷೆ. ವಿಜ್ಞಾನದ ನೈಜ ಭಾಷೆಯೂ ಇದೇ. ಬಂದು ನೋಡಿ ಎಂದ ಬುದ್ಧ. ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರಿಗೆ ಹೇಳಿರುವುದೇನು ? 'ನಾನು ದೇವರನ್ನು ಕಂಡಿದ್ದೇನೆ ; ನೀನೂ ಕಾಣಬಲ್ಲೆ. ನೀನೇ ಪ್ರಯೋಗಮಾಡಿ ನೋಡಿಕೊ' ಹೀಗೆ ಧರ್ಮದ ಭಾಷೆ ಇಂದು ಆಧುನಿಕ ವಿಜ್ಞಾನದಲ್ಲಿ ನಮಗೆ ಸುಪರಿಚಿತವಾಗಿರುವ ಭಾಷೆಯೇ ಆಗಿದೆ. ನಾವು ಆತ್ಮನ ಸತ್ಯವನ್ನು ಅರಿತುಕೊಂಡರೆ ನಮ್ಮ ಅಂತರಂಗ ವ್ಯಕ್ತಿತ್ವ , ನಮ್ಮ ಇಡೀ ಜೀವನ ಬದಲಾಗಿ ಹೋಗುತ್ತದೆಂದು ವೇದಾಂತ ಹೇಳುತ್ತದೆ. ನಮಗೆ ನಮ್ಮ ಅನಂತ ಪ್ರಕೃತಿಯ ಸಾಕ್ಷಾತ್ಕಾರವಾಗುತ್ತದೆ ; ನಾವು ಪರಮಾನಂದಭರಿತರಾಗುತ್ತೇವೆ. ಸತ್ಯವನ್ನು ಮನುಷ್ಯ ತಾನಾಗಿ ಅರಿತುಕೊಳ್ಳಬೇಕೆಂಬ ಸವಾಲನ್ನು ವೇದಾಂತ ಮುಂದೊಡ್ಡುತ್ತದೆ. ಸತ್ಯವನ್ನು ಅರಸಿ ಜೀವನದಲ್ಲಿ ಸತ್ಯದರ್ಶನ ಮಾಡಿಸಬೇಕೆಂಬ ಉತ್ಕಟಾಕಾಂಕ್ಷೆ ಉಪನಿಷತ್ತುಗಳಲ್ಲಿ ತುಂಬಿದೆ. ಸತ್ಯ, ಹೆಚ್ಚಿನ ಸತ್ಯ—ಆನಂದ, ಸುಖಗಳಿಗೆ ಅದೇ ಹಾದಿ. ಸತ್ಯಜ್ಞಾನದ ಮುನ್ನಡೆ ಮತ್ತು ಮಾನವನ ನೋವಿನ ಶಮನ—ಇವೇ ವಿಜ್ಞಾನ ಮತ್ತು ವೇದಾಂತಗಳೆರಡರ ಉದ್ದೇಶಗಳು. ಎಡಿಂಗ್‌ಟನ್ ಹೇಳುತ್ತಾರೆ ('ಸೈನ್ಸ್ ಅಂಡ್ ದಿ ಅನ್‌ಸೀನ್ ವರ್ಲ್ಡ್' ಪು. ೫೪) :

> *ಅನ್ವೇಷಣೆಗೆ ಆದ್ಯತೆ ನೀಡಿದರೆ ಮಾತ್ರ ವಿಜ್ಞಾನ ಅಥವಾ ಧರ್ಮದ ನಿಜವಾದ ಸತ್ವವನ್ನು ಅರಿಯಬಹುದು.*

### ೬. ವಿಕಾಸಾತ್ಮಕ ದರ್ಶನ

ಕಳೆದ ನೂರು ವರ್ಷಗಳಲ್ಲಿ ವಿಜ್ಞಾನದ ಬೆಳವಣಿಗೆಯನ್ನು ನಾವು ಅವಲೋಕಿಸಿದಲ್ಲಿ, ವಿಜ್ಞಾನದ ಉನ್ನತ ಹಂತಗಳು ದಿಗಂತದಲ್ಲಿ ಕಾಣಿಸಿಕೊಳ್ಳುತ್ತಿರುವುದರ ಜತೆಗೇ ವಿಜ್ಞಾನದಲ್ಲಿ ಐಹಿಕವಲ್ಲದ ಮನೋದೃಷ್ಟಿಯೊಂದು ಬೆಳೆಯುತ್ತಿರುವುದನ್ನು ನಾವು ಗುರುತಿಸಬಹುದು. ಈ ಉಪನ್ಯಾಸ ಮುಗಿಸುತ್ತ ನಾನು ಈ ವಿಷಯ ಪ್ರಸ್ತಾಪಿಸಬಯಸುವೆ.

ವೈಜ್ಞಾನಿಕ ಪರಿಶೋಧನೆಯ ವಸ್ತುವಾದ ಪ್ರಕೃತಿಯು ಮರ್ತ್ಯ. ಆದರೆ ಪ್ರಕೃತಿಯಲ್ಲೇ ಅಮರ್ತ್ಯ ರೀತಿಯದಾದ ವಿಷಯವನ್ನೂ ವಿಜ್ಞಾನ ಗುರುತಿಸುತ್ತಿದೆ. ಅದೇನೆಂಬುದನ್ನು ಪತ್ತೆಮಾಡಲು ಕೆಲ

ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ. ಡಾರ್ವಿನ್ನನ 'ದಿ ಆರಿಜಿನ್ ಆಫ್ ಸ್ಪೀಷೀಸ್' ಕೃತಿಯ ಪ್ರಕಟನೆಯ ಶತಮಾನೋತ್ಸವ ೧೯೫೯ರಲ್ಲಿ ಜರುಗಿತು. ಚಿಕಾಗೋ ವಿಶ್ವವಿದ್ಯಾನಿಲಯದ ಆಶ್ರಯ ದಲ್ಲಿ ಪ್ರಸಿದ್ಧ ವಿಜ್ಞಾನಿಗಳು 'ಡಾರ್ವಿನ್ನನ ನಂತರ ವಿಕಾಸ' ಎಂಬ ಬಗ್ಗೆ ಒಂದು ವಿಚಾರಗೋಷ್ಠಿ ನಡೆಸಿದರು. ಗೋಷ್ಠಿಯ ಅಧ್ಯಕ್ಷರಾಗಿ ಸರ್ ಜೂಲಿಯನ್ ಹಕ್ಸ್‌ಲೀ ಅವರು ಮಾಡಿದ ಒಂದು ಭಾಷಣ ಅದ್ಭುತವಾಗಿತ್ತು. ಇದುವರೆಗೆ ವಿಜ್ಞಾನ ಎತ್ತಿಹಿಡಿದಿರುವ ಭೌತಿಕ ವಿಶ್ವದ ಚಿತ್ರದಲ್ಲಿ, ನಾವು ಪ್ರತಿಯೊಬ್ಬರೂ ನಮ್ಮನಮ್ಮಲ್ಲೇ ಕಂಡುಕೊಂಡಿರುವ ಆಂತರಿಕ ವಿಶ್ವದ ಚಿತ್ರದಲ್ಲಿ ಏನೋ ಒಂದು ಬಿರುಕು ಕಾಣಿಸುತ್ತಿದೆ ; ಅದರ ಮೂಲಕ, ಕಳೆದ ನೂರು ವರ್ಷಗಳಲ್ಲಿ ವಿಕಾಸಸಿದ್ಧಾಂತ ಕುರಿತಾದ ಅಧ್ಯಯನದ ಫಲವಾಗಿ, ವಿಶ್ವದ ಆಳದಲ್ಲಿನ ರಹಸ್ಯದ ನಸುನೋಟವನ್ನು ನಾವು ಕಾಣಲು ಸಾಧ್ಯ ವಾಗಿದೆ ಎಂದು ಈ ಭಾಷಣ ತೋರಿಸಿಕೊಟ್ಟಿತು. ಹಕ್ಸ್‌ಲೀ ಅವರ ಈ ವಿಶೇಷ ಭಾಷಣಕ್ಕೆ 'ವಿಕಾಸಾತ್ಮಕ ದರ್ಶನ' ಎಂಬ ಸ್ವಾರಸ್ಯ ಶಿರೋನಾಮೆ ಕೊಡಲಾಗಿತ್ತು. ತನ್ನ ಸುದೀರ್ಘ ವಿಕಾಸಾನು ಭವದಲ್ಲಿ ಅಂಧವೂ, ನಿರರ್ಥಕವೂ ಆಗಿದ್ದ ನಿಸರ್ಗ ತನ್ನ ಇತ್ತೀಚಿನ ಉತ್ಪನ್ನವಾದ ಮಾನವನಲ್ಲಿ ತನ್ನನ್ನು ತಾನೇ ಅರಿತು ಕೊಂಡಿದೆ ಎಂದು ಅವರು ಹೇಳಿದರು. ಕೇವಲ ವಿಶ್ವಕಣಗಳಾಗಿ ಆರಂಭವಾದ ಈ ಪ್ರಕೃತಿ ವಿಶ್ವವಿಕಾಸದ ನಾನಾ ಹಂತಗಳನ್ನು ಹಾಯ್ದು ಬೆಳೆಯುತ್ತ ಜೈವಿಕ ಹಂತದಲ್ಲಿ ಜೀವಕೋಶ ವಾಯಿತು : ಮುಂದಿನ ಬೆಳವಣಿಗೆಯಲ್ಲಿ ನರತಂತು, ನರಮಂಡಲ, ಮಿದುಳಿನ ವ್ಯವಸ್ಥೆ ರೂಪು ಗೊಂಡವು. ಮಾನವನ ಹಂತದಲ್ಲಿ ಈ ಮಿದುಳಿನ ವ್ಯವಸ್ಥೆ ಹೊಸ ಪ್ರಮಾಣ ತಳೆದು ಆತ್ಮಜ್ಞಾನದ ಹಂತಕ್ಕೆ ಬಂದಿತು.

ಎಲ್ಲ ಪ್ರಾಣಿಗಳಿಗೂ ಹೊರಗಿನ ಪ್ರಪಂಚದ ಅರಿವಿದೆ ; ಮನುಷ್ಯನಿಗೆ ಮಾತ್ರ ಒಳಪ್ರಪಂಚದ ಅರಿವೂ ಉಂಟು. ನಿಸರ್ಗದ ಹೃದಯದಲ್ಲಿನ ಈ ಅದ್ಭುತ ಬೆಳವಣಿಗೆಯನ್ನು ವಿಜ್ಞಾನವು ಶೋಧಿಸ ಬೇಕು. ಕಳೆದ ನೂರು ವರ್ಷಗಳಲ್ಲಿ ಜೀವಶಾಸ್ತ್ರ ಕ್ಷೇತ್ರದಲ್ಲಿನ ಎಲ್ಲ ಬೆಳವಣಿಗೆ ಇಂಥ ಪರಿ ಶೋಧನೆಯ ವೈಜ್ಞಾನಿಕ ಅಗತ್ಯವನ್ನು ಎತ್ತಿತೋರಿಸುತ್ತದೆ. ಪ್ರಾಚೀನಾನ್ವೇಷಕ ಟೈಲ್‌ಹಾರ್ಡ್ ಡಿ ಚಾರ್ಡಿನ್ ಅವರ ಮಾತಿನಲ್ಲಿ "ವಿಶ್ವಕ್ಕೆ ಬಾಹ್ಯವಿರುವಂತೆಯೇ ಒಂದು ಒಳಗೂ ಇದೆಯೆಂದು ನಾವು ಈಗ ಅರಿತಿದ್ದೇವೆ. ಮಾನವನಲ್ಲಿ ನಿಸರ್ಗವು ತನ್ನ ಒಳನೋಟ ನೀಡಿದೆ. ಈ ಸಂಗತಿ ವಿಜ್ಞಾನ ದಲ್ಲಿ ಇದುವರೆಗೆ ಲಭ್ಯವಿರಲಿಲ್ಲ ; ಈಗ ಅದು ತಿಳಿದಿರುವುದರಿಂದ ವಿಜ್ಞಾನವು ಎಲ್ಲ ಅಸ್ತಿತ್ವದ ಮಹಾರಹಸ್ಯವಾದ ಮನುಷ್ಯನ ನಿಜವಾದ ಆತ್ಮವನ್ನು ಹುಡುಕಲು ಪ್ರಯತ್ನಿಸಬಹುದು." ಮನುಷ್ಯನು ಪ್ರಕೃತಿಯ ಒಂದು ಕಿರು ಪ್ರತಿರೂಪವಾಗಿ ಕಾಣುತ್ತಾನೆ ; ಯೋಚನೆ, ಅಹಮಿಕೆ, ಸ್ವಯಂ ತಿಳಿವಳಿಕೆ ಮುಂತಾದ ನಿಗೂಢ ಗುಣಗಳನ್ನುಳ್ಳ ಮಾನವನಲ್ಲಿ ವೈಜ್ಞಾನಿಕ ಬುದ್ಧಿ ಪ್ರಕೃತಿಯ ಈ ಆಳವಾದ ರಹಸ್ಯದ ಸುಳಿವನ್ನು ಗ್ರಹಿಸಿದೆ.

ಯುಗಯುಗಾಂತರಗಳ ಹಿಂದೆ ಭಾರತದಲ್ಲಿ ವೇದಾಂತ ಇದನ್ನು ಕಂಡುಹಿಡಿಯುವುದರಲ್ಲಿ ಯಶಸ್ವಿಯಾಯಿತು. ವಿಶ್ವದ ಒಳರೂಪ-ಪ್ರತ್ಯಕ್‌ರೂಪವನ್ನು, ಮನುಷ್ಯನ ಪ್ರಕೃತ್‌ರೂಪದ ಮೂಲಕ ಅದು ಅರಿತಿತ್ತು. ಇತರ ರೂಪಗಳು ಇಂದ್ರಿಯಗಳ ಮೂಲಕ ನಮಗೆ ಪರಿಚಿತವೇ ಇವೆ. ಆದರೆ ಅವಶ್ಯ ಬೌದ್ಧಿಕ ತರಪೇತನ್ನು ಪಡೆದು ಇಂದ್ರಿಯಗಳ ಹತೋಟಿ ಮುಂತಾದ ನೈತಿಕ ಶಿಸ್ತುಗಳನ್ನು ಪಾಲಿಸಿ 'ಸ್ವ-ರೂಪ'ದತ್ತ ಗಮನ ಕೇಂದ್ರೀಕರಿಸಿದಾಗಲೇ ಪ್ರತ್ಯಕ್‌ರೂಪದ ನೈಜ ಅರಿವು ನಮಗೆ ದೊರೆಯುವುದು. ಪ್ರಾಚೀನ ಭಾರತದ ಋಷಿಗಳು ಹೀಗೆ ಸಾಧನೆ ಮಾಡಿದರು ; ಅವರು ನಡೆಸಿದ ಪ್ರಯೋಗಗಳ ಕೆಲವು ಸಂಗ್ರಹಿತ, ಸರಳ ವಿವರಣೆಗಳು ಉಪನಿಷತ್ತುಗಳಲ್ಲಿ ಕಾಣಸಿಗುತ್ತವೆ. ಕಠೋಪನಿಷತ್ತಿನಲ್ಲಿ (೪-೧) ಇಂಥ ಒಂದು ಪ್ರಸ್ತಾಪವಿದೆ : ಒಬ್ಬ ಧೀರ ತನಗೆ ತಾನೇ ಹೇಳಿಕೊಂಡ : "ಒಳಗೇನಿದೆ ಎಂಬುದನ್ನು ತಿಳಿಯಲು ಪ್ರಯತ್ನಿಸುವೆ". ಬುದ್ಧಿಯೂ, ಇಂದ್ರಿಯಗಳೂ ಹೊರಗಡೆಗೆ

ನೋಡುವುದು ಸಹಜ. ಅವನ್ನು ಒಳಗಡೆಗೆ ತಿರುಗಿಸುವುದು ಅಗಾಧ ಕೆಲಸ. ಆದರೆ ಈ ಮನುಷ್ಯ ಧೀರ. ಆತ ಅದನ್ನು ಸಾಧಿಸಿದ. ಆಗ ಅವನಿಗೆ ಆಶ್ಚರ್ಯಾನಂದಾತಿರೇಕ. ತನ್ನ ಮಾನವ ವ್ಯಕ್ತಿತ್ವದ, ಎಲ್ಲ ಮಾನವ ವ್ಯಕ್ತಿತ್ವದ ಅಪಾರ ಪ್ರಮಾಣವನ್ನು, ತನ್ನ ಆತ್ಮನೇ ಆದ ದೈವೀಕ, ಅವಿನಾಶಿ ಸತ್ಯವನ್ನು ಅವನು ಅರಿತ. ಬುದ್ಧಿಯನ್ನೂ ಇಂದ್ರಿಯಶಕ್ತಿಗಳನ್ನೂ ಅಂತರ್ಮುಖಿಯಾಗಿಸುವ ಪ್ರಚಂಡ ತಂತ್ರದ ಮೂಲಕ ಅವನು ಪ್ರತ್ಯಗಾತ್ಮನನ್ನು ಕಂಡುಕೊಂಡ. ವಿಶ್ವದ ಆತ್ಮವೂ ಅದೇ. ಬುದ್ಧಿಯನ್ನು ಹದಗೊಳಸಿ ಅದರ ಶಕ್ತಿಯನ್ನು ಹಂತಹಂತವಾಗಿ, ವೈಜ್ಞಾನಿಕ ರೀತಿಯಲ್ಲಿ, ಅಂತರ್ಮುಖಿಯಾಗಿ ತಿರುಗಿಸಿದರೆ—ಕತ್ತಿಯಲುಗಿನ ಮೇಲೆ ನಡೆಯುವಷ್ಟೇ ಕಠಿಣ. ಇದು—ನಾವೊಂದು ಹೊಸ ಜಗತ್ತಿನಲ್ಲಿ, ಮಾನವ ವ್ಯಕ್ತಿತ್ವದ ಹೊಸ ಗಾತ್ರವೊಂದನ್ನು ಜನನಮರಣಗಳಿಲ್ಲದ ಆತ್ಮವನ್ನು, ಶುದ್ಧ ಜ್ಞಾನದ ಸ್ವಭಾವವನ್ನು ಅರಿತುಕೊಳ್ಳುತ್ತೇವೆ. ಉಪನಿಷತ್ತುಗಳು, ವೇದಾಂತ ಮಾಡಿದ ಕೆಲಸ ಇದೇ. ನಮ್ಮ ಕಾಲದವರೆಗೂ ಭಾರತ ಮಾಡುತ್ತ ಬಂದಿರುವ ಕೆಲಸ ಇದೇ. ಅಂತರಂಗ ವಿಶ್ವದ ಪರಿಶೋಧನೆ ನಡೆಸಿದವರಲ್ಲಿ ಈಚಿನವರು ಶ್ರೀರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರು.

## ೭. ಶಿಕ್ಷಣದ ಗುರಿ ಮತ್ತು ವಿಧಾನ

ಉದ್ದೇಶ, ಮನೋಭಾವಗಳಲ್ಲಿ ವಿಜ್ಞಾನ ಮತ್ತು ವೇದಾಂತ ಉಭಯ ಸಾಮಾನ್ಯವಾಗಿದ್ದರೂ ಅವುಗಳ ಕ್ಷೇತ್ರಗಳು ಬೇರೆ ಬೇರೆ. ವ್ಯಕ್ತಿಯ ದೈನಂದಿನ ಜೀವನದಲ್ಲಿ ನಮ್ಮ ಆಹಾರ, ಬಟ್ಟೆ, ವಸತಿ ಮೊದಲಾದ ವಿಷಯಗಳಲ್ಲಿ ವೇದಾಂತ ತಲೆಹಾಕದು. ಈ ವಿಷಯಗಳಲ್ಲಿ ವಿಜ್ಞಾನವೇ ನಮಗೆ ಅತ್ಯುತ್ತಮ ಮಾರ್ಗದರ್ಶಿ. ಏಕೆಂದರೆ ಮಾನವಪ್ರಜ್ಞೆಯ ಆ ಕ್ಷೇತ್ರದಲ್ಲಿ ಸತ್ಯಶೋಧನೆ ವಿಜ್ಞಾನದ ಗುರಿ. ಆತ್ಮಕ್ಕೆ ಸಂಬಂಧಪಡದ, ಮಾನವನ ಜೀವನಸಾಫಲ್ಯಕ್ಕೆ ಅಗತ್ಯ ಸ್ಥಿತಿಗಳನ್ನು ಉಂಟುಮಾಡುವ ಯಂತ್ರಶಾಸ್ತ್ರಾತ್ಮಕ ಗುರಿ ಅದು. ಆದರೆ ಒಂದು ಮನೆ ಕಟ್ಟಿ, ನಮ್ಮ ಯೋಗಕ್ಷೇಮಕ್ಕೆ ಸಕಲವನ್ನೂ ಮಾಡಿಕೊಂಡ ಮೇಲೆ ಮುಂದೇನು ? ಇವೇ ಕೊನೆಯಲ್ಲ. ಆದ್ದರಿಂದ ಈ ಬಾಹ್ಯ ಅನುಕೂಲಗಳ ಪ್ರಯೋಜನ ಪಡೆದುಕೊಂಡು ಚಿರಂತನ ಮೌಲ್ಯಗಳಿಗೆ, ಬದುಕಿನ ಅರ್ಥ ಮತ್ತು ಮಹತ್ವಕ್ಕಾಗಿ, ಆತ್ಮಾನುಭೂತಿಗಾಗಿ ಶೋಧನೆ ಮುಂದುವರಿಸಬೇಕೆಂದು ವೇದಾಂತ ಹೇಳುತ್ತದೆ. ವಿಕಾಸದ ಗುರಿ ಇದೇ ; ಮನುಷ್ಯ ಪ್ರಕೃತಿಯ ನಿಧಾನವೂ, ನಿರರ್ಥಕವೂ ಆದ ವಿಧಾನಗಳನ್ನು ಅವಲಂಬಿಸದೆ ಈ ಗುರಿಸಾಧನೆ ಪ್ರಯತ್ನವನ್ನು ತ್ವರಿತಗೊಳಿಸಬಹುದು ಎಂದು ಆಧುನಿಕ ಜೀವಶಾಸ್ತ್ರವೂ, ಪ್ರಾಚೀನ ವೇದಾಂತವೂ ಹೇಳುತ್ತವೆ. ಮಾನವನಿಗೆ ಆಧ್ಯಾತ್ಮಿಕ ಶಿಕ್ಷಣ—ಇದೇ ಅವನ ಸುಖ-ಕಲ್ಯಾಣಗಳಿಗೆ ವೇದಾಂತದ ವಿಶೇಷ ಕೊಡುಗೆ. ಆದ್ದರಿಂದ ವಿಜ್ಞಾನ ಮತ್ತು ಧಾರ್ಮಿಕತೆಗಳ ಸಮ್ಮಿಳನ ಶಿಕ್ಷಣದ ಅಸ್ತಿಭಾರವಾಗಿರಬೇಕು. ಸ್ವಾಮಿ ವಿವೇಕಾನಂದರು ಶಿಕ್ಷಣದ ಗುರಿ ಮತ್ತು ವಿಧಾನವನ್ನು ವಿವರಿಸಿದಂತೆ (ಕನ್ವರ್ಸೇಷನ್ಸ್ ಅಂಡ್ ಡೈಲಾಗ್ಸ್, ಕಂಪ್ಲೀಟ್ ವರ್ಕ್ಸ್, ಸಂ. ೫, ಏಳನೆಯ ಮುದ್ರಣ, ಪು. ೩೬೬):

*ನಮಗೆ ಪಾಶ್ಚಿಮಾತ್ಯ ವಿಜ್ಞಾನ, ವೇದಾಂತ ಎರಡೂ ಜತೆಯಾಗಿ ಬೇಕು ; ಬ್ರಹ್ಮಚರ್ಯ ನಮಗೆ ಮಾರ್ಗದರ್ಶಿ ಧ್ಯೇಯವಾಗಿರುವಂತೆಯೇ ಶ್ರದ್ಧೆ ಮತ್ತು ಆತ್ಮನಿಷ್ಠೆಗಳೂ ಬೇಕು.*

ಅಂತರಂಗ ವಿಶ್ವದ ಸತ್ಯಗಳನ್ನು ಶೋಧಿಸಿದ ಮಹಾಋಷಿಗಳು ತಮ್ಮದೇ ಆದ ರೀತಿಯಲ್ಲಿ ಮಹಾವಿಜ್ಞಾನಿಗಳೂ ಆಗಿದ್ದರು. ವ್ಯಕ್ತಿಸ್ವರೂಪದ್ದಲ್ಲದ, ಉದ್ದೇಶಪೂರ್ಣವಾದ, ಸಾರ್ವಲೌಕಿಕವಾದ ವೇದಾಂತ ಸತ್ಯಗಳು ಸತ್ಯ ಮತ್ತು ಮಾನವ ಕಲ್ಯಾಣಗಳ ಪರ ಅವರು ನಡೆಸಿದ ಸಾಧನೆಗಳ ಫಲ. ಆಧುನಿಕ ವಿಚಾರವಂತರು ಆಧುನಿಕ ವಿಜ್ಞಾನದಲ್ಲಿ ಹೀಗೆಯೇ ವ್ಯಕ್ತಿಸ್ವರೂಪದ್ದಲ್ಲದ, ಉದ್ದೇಶಪೂರ್ಣವಾದ, ಸಾರ್ವಲೌಕಿಕವಾದ ಕೆಲವು ಸತ್ಯಗಳನ್ನು ನಿರೂಪಿಸಿದ್ದಾರೆ. ಇಂದು ಇವೆರಡೂ ಪರಸ್ಪರ

ಹತ್ತಿರ ಬಂದಿದೆ. ವಿವೇಕಾನಂದರಲ್ಲಿ ನಾವು ವಿಜ್ಞಾನ, ಧರ್ಮಗಳೆರಡರ ಸತ್ವಗಳ ಮಿಲನವನ್ನು ಕಾಣುತ್ತೇವೆ. ವಿಜ್ಞಾನ ಮತ್ತು ಧಾರ್ಮಿಕತೆಗಳೆರಡನ್ನೂ ಮೈಗೂಡಿಸಿಕೊಂಡರೆ ಕೋಟ್ಯಂತರ ಯುವ ಜನರು ಹೆಚ್ಚು ಸಂಪನ್ನವ್ಯಕ್ತಿಗಳಾಗುತ್ತಾರೆ ; ಸ್ವಾಮಿ ವಿವೇಕಾನಂದರಂತೆ ಅವರೂ ಎಲ್ಲ ಮಾನವ ಶಕ್ತಿಯ ಸುಸಂಘಟನೆಯ ಅನುಭವ ಪಡೆಯುತ್ತಾರೆ. ಇಲ್ಲಿ ಯಾವ ಎರಡು ಶಕ್ತಿಗಳಿಗೂ ಘರ್ಷಣೆ ಯಿಲ್ಲ. ಅವು ಇತರ ಶಕ್ತಿಗಳೊಡನೆ ಕೂಡಿಕೊಂಡು ಸರ್ವತೋಮುಖ ಪರಿಪೂರ್ಣತೆ ರೂಪುಗೊಳ್ಳು ತ್ತದೆ.

ವಿವೇಕಾನಂದರ ಗುಣಪರಿಪೂರ್ಣತೆ ಕುರಿತು ರೊಮೇ ರೋಲಾ ಅವರು ಹೀಗೆ ಬರೆಯುತ್ತಾರೆ ('ಲೈಫ್ ಆಫ್ ವಿವೇಕಾನಂದ', ಮೂರನೆ ಮುದ್ರಣ, ಪು. ೩೧೦) :

*ಸಮಷ್ಟಿತಿ ಮತ್ತು ಸಂಯೋಜನೆ—ಈ ಎರಡು ಪದಗಳಲ್ಲಿ ವಿವೇಕಾನಂದರ ರಚನಾತ್ಮಕ ಪ್ರತಿಭೆಯನ್ನು ಅಡಕಮಾಡಿ ಹೇಳಬಹುದು. ಅವರು ಚೇತನದ ಎಲ್ಲ ಮಾರ್ಗಗಳನ್ನೂ ಸ್ವೀಕರಿಸಿ ದರು ; ನಾಲ್ಕು ಯೋಗಗಳು, ವೈರಾಗ್ಯ ಮತ್ತು ಸೇವೆ, ಕಲೆ ಮತ್ತು ವಿಜ್ಞಾನ, ಧರ್ಮ ಮತ್ತು ಅತ್ಯಂತ ಆಧ್ಯಾತ್ಮಿಕವಾದುದರಿಂದ ಹಿಡಿದು ಅತ್ಯಂತ ಕಾರ್ಯಾನ್ವಿತವಾದುದರವರೆಗೆ ಕ್ರಿಯೆ—ಎಲ್ಲವನ್ನೂ ಅವರು ಸ್ವೀಕರಿಸಿದ್ದರು. ಅವರು ಬೋಧಿಸಿದ ಪ್ರತಿಯೊಂದು ಮಾರ್ಗಕ್ಕೂ ಅವರದೇ ಆದ ಮಿತಿಯಿತ್ತು ; ಆದರೆ ಅವರು ತಾವೇ ಆ ಎಲ್ಲ ಮಾರ್ಗಗಳನ್ನೂ ಕ್ರಮಿಸಿದ್ದರು. ನಾಲ್ಕು ಕುದುರೆಗಳ ರಥದಂತೆ ಅವರು ಸತ್ಯದ ನಾಲ್ಕೂ ದಾರಿಗಳನ್ನೂ ಹಿಡಿದು ಏಕಕಾಲದಲ್ಲಿ ಅವೆಲ್ಲದರ ಮೂಲಕವೂ ಏಕತೆಯತ್ತ ಮುನ್ನಡೆದಿದ್ದರು. ಎಲ್ಲ ಮಾನವಶಕ್ತಿಯ ಸಾಮರಸ್ಯದ ಮೂರ್ತಿಸ್ವರೂಪರಾಗಿದ್ದರವರು.*

## ೮. ಉಪಸಂಹಾರ

ಸ್ವಾಮಿ ವಿವೇಕಾನಂದರ ಅಭಿಪ್ರಾಯದಲ್ಲಿ ನೈಜವಾದ ಶಿಕ್ಷಣ ಮತ್ತು ಧರ್ಮಗಳ ಉದ್ದೇಶ ಇದೇ. ವೇದಾಂತ ನಿಷ್ಠೆ ಕುರಿತಾದ ಕೆಲ ಮಾತುಗಳಲ್ಲಿ ಅವರು ಮಾನವನ ಸಂಪೂರ್ಣ ಐಹಿಕ ಹಾಗೂ ಪಾರಮಾರ್ಥಿಕ ಶಿಕ್ಷಣದ ವ್ಯಾಪ್ತಿಯನ್ನು ಸಂಗ್ರಹಮಾಡಿ ಹೇಳಿದ್ದಾರೆ. ಇಲ್ಲಿ ಭಾರತೀಯರ ಧರ್ಮದೃಷ್ಟಿಯ ಬೆಳಕಿನಲ್ಲಿ ತಿಳಿಯುವಂತೆ ಒಂದು ಸಮಗ್ರ ಜೀವನ ವೇದಾಂತದಲ್ಲಿ ವಿಜ್ಞಾನವೂ ಧರ್ಮವೂ ಒಂದುಗೂಡುತ್ತವೆ. ('ಕಂಪ್ಲೀಟ್ ವರ್ಕ್ಸ್' ಸಂ. ೧, ಹನ್ನೊಂದನೆಯ ಮುದ್ರಣ, ಪು. ೧೨೪) :

*ಪ್ರತಿಯೊಂದು ಆತ್ಮವೂ ದೈವಿಕ ಸಾಮರ್ಥ್ಯವುಳ್ಳದ್ದಾಗಿದೆ.*

*ಬಾಹ್ಯ ಮತ್ತು ಅಂತರಂಗ ಪ್ರಕೃತಿಯನ್ನು ನಿಯಂತ್ರಿಸುವುದರ ಮೂಲಕ ಈ ಗುಣವನ್ನು ಅಭಿವ್ಯಕ್ತಪಡಿಸುವುದೇ ಗುರಿಯಾಗಬೇಕು.*

*ದುಡಿಮೆ ಅಥವಾ ಉಪಾಸನೆ ಅಥವಾ ಮಾನಸಿಕ ಹತೋಟಿ ಅಥವಾ ತತ್ವಜ್ಞಾನ—ಈ ಯಾವುದೇ ಅಥವಾ ಎಲ್ಲ ವಿಧಾನಗಳಿಂದ ಅದನ್ನು ಸಾಧಿಸಿ ಮುಕ್ತರಾಗಿ.*

*ಧರ್ಮದ ಒಟ್ಟು ತತ್ವ ಇದೇ. ಸಿದ್ಧಾಂತಗಳು, ಆಚರಣೆಗಳು, ಪುಸ್ತಕಗಳು, ದೇವಾಲಯ ಗಳು ಅಥವಾ ಸ್ವರೂಪಗಳೆಲ್ಲ ಆನುಷಂಗಿಕ ವಿವರಗಳು.*

**ಅನು : ಕೆ. ಎಸ್. ರಾಮಕೃಷ್ಣಮೂರ್ತಿ**

೧೮

# ಧರ್ಮದ ಬಗೆಗೆ ವೈಜ್ಞಾನಿಕ ದೃಷ್ಟಿ*

## ೧. ಪೀಠಿಕೆ

ಧರ್ಮದ ಬಗ್ಗೆ ವೈಜ್ಞಾನಿಕ ದೃಷ್ಟಿಯಿಂದ ಅಧ್ಯಯನ ಮಾಡುವುದು ಎಲ್ಲ ಮಾನವ ಜ್ಞಾನ ಮತ್ತು ಅನುಭವದ ಬಗ್ಗೆ ವೈಜ್ಞಾನಿಕ ರೀತಿಯಲ್ಲಿ ವ್ಯಾಪಕ ಅಧ್ಯಯನದ ಒಂದು ಭಾಗವೇ ಆಗಿದೆ. ಆಧುನಿಕ ವಿಜ್ಞಾನದಿಂದಾಗಿ ಬೆಳೆದು ಬಂದಿರುವ ಒಂದು ಆಧುನಿಕ ಸಂಗತಿ ಇದು. ಈ ಆಧುನಿಕ ವೈಜ್ಞಾನಿಕ ದೃಷ್ಟಿಯ ಪ್ರಭಾವದ ವ್ಯಾಪ್ತಿ ಕ್ರಾಂತಿಕಾರಕವಾದದ್ದು, ಅದರ ಫಲಿತಾಂಶಗಳು ವ್ಯಾಪಕ ವಾದವು. ನಾಲ್ಕು ಶತಮಾನಗಳ ಹಿಂದೆ ಪಶ್ಚಿಮ ಯೂರೋಪಿನ ಕೆಲವು ಕೇಂದ್ರಗಳಲ್ಲಿ ಸತ್ಯಪ್ರಿಯತೆ, ಮುಕ್ತ ಶೋಧನಾಸಕ್ತಿ ಮತ್ತು ವಿಮರ್ಶಾತ್ಮಕ ದೃಷ್ಟಿಗಳಾಗಿ ಆರಂಭವಾದ ಆಧುನಿಕ ವೈಜ್ಞಾನಿಕ ದೃಷ್ಟಿ ಪ್ರಬಲಗೊಂಡು ಮುನ್ನಡೆಯುತ್ತ ಈ ಕೇವಲ ನಾಲ್ಕುನೂರು ವರ್ಷಗಳಿಂದ ಮಾನವನ ಜ್ಞಾನ ಮತ್ತು ತಿಳಿವಳಿಕೆ ಅಗಾಧವಾಗಿ ಬೆಳೆದಿವೆಯಷ್ಟೇ ಅಲ್ಲ ; ಅದರಿಂದ ಮಾನವ ಮತ್ತು ಅವನ ಪರಿಸರ ಗಾಢ ರೀತಿಯಲ್ಲಿ ಪರಿವರ್ತಿತವಾಗಿ ಅವನ ಜೀವನ ಮತ್ತು ಕ್ರಿಯಾವಿಧಾನ, ಮನೋಭಾವ ಗಳೂ ತುಂಬಾ ಬದಲಾಗಿವೆ.

## ೨. ಆಧುನಿಕ ವಿಜ್ಞಾನ ಮತ್ತು ಮುಕ್ತ ಪರಿಶೋಧನಾ ಸತ್ವ

ಇಂಥ ಕ್ರಾಂತಿಕಾರಿ ಫಲಿತಾಂಶಗಳನ್ನು ನೀಡಲು ಈ ವೈಜ್ಞಾನಿಕ ಸತ್ವ ಮತ್ತು ದೃಷ್ಟಿಗಳಲ್ಲೇನಿದೆ ? ನಾನು ಮೊದಲೇ ಹೇಳಿದಂತೆ ಈ ಕ್ರಾಂತಿಕಾರಿ ಸಾಧನೆಗಳ ಮೂಲದಲ್ಲಿ ಎರಡು ಮೌಲ್ಯಗಳಿವೆ— ಸತ್ಯದ ಹಂಬಲ ಮತ್ತು ಮುಕ್ತ ವಿಮರ್ಶಾತ್ಮಕ ಪರಿಶೋಧನೆಯ ಮನೋಭಾವ. ಇಂದು ನಮಗೆ ಈ ವಿಷಯಗಳು ಸಾಮಾನ್ಯವಾಗಿಹೋಗಿವೆ. ಆದರೆ ನಾಲ್ಕು ಶತಮಾನಗಳ ಹಿಂದೆ ಪರಿಸ್ಥಿತಿಯೇ ಬೇರೆಯಾಗಿತ್ತು. ಪ್ರಾಚೀನ ಗ್ರೀಕರು ಈ ಸತ್ಯದ ಹಂಬಲ ಮತ್ತು ಮುಕ್ತ ವಿಚಾರವಂತಿಕೆಯನ್ನು ಬೆಳೆಸಿಕೊಂಡಿದ್ದು ಸಮಕಾಲೀನ ಮಾನವ ಜ್ಞಾನವನ್ನು—ಅದರಲ್ಲೂ ವಿಶೇಷವಾಗಿ ಸಮಾಜ ವಿಜ್ಞಾನ ಗಳ ಕ್ಷೇತ್ರದಲ್ಲಿ—ಮುನ್ನಡೆಸಿದ್ದರು. ಅಲ್ಪಕಾಲದ್ದಾದರೂ ಭವ್ಯವಾಗಿದ್ದ ಗ್ರೀಕ್ ಸಂಸ್ಕೃತಿ ಮತ್ತು ನಾಗರಿಕತೆಗಳ ಅವನತಿಯ ನಂತರ ರೋಮ್ ಇದೇ ಕ್ಷೇತ್ರದಲ್ಲಿ ಈ ಸಂಪ್ರದಾಯವನ್ನು ವಿಚಾರ ದಲ್ಲಿ ಸಣ್ಣ ಪ್ರಮಾಣದಲ್ಲಾದರೂ ಆಚರಣೆಯಲ್ಲಿ ದೊಡ್ಡ ರೀತಿಯಲ್ಲಿ ಮುಂದುವರಿಸಿಕೊಂಡು ಬಂದಿತು. ಆದರೆ ಕ್ರಿ.ಶ. ಐದನೆಯ ಶತಮಾನದ ಆರಂಭದಲ್ಲಿ ರೂಕ್ಷ ದಾಳಿಕಾರರಿಂದ ರೋಮನ್

---

* ಸ್ವಾಮಿ ಅಭೇದಾನಂದ ಜನ್ಮಶತಾಬ್ದಿ ಸಂಸ್ಮರಣ ಸಂಚಿಕೆಗೆ (The Basis of Indian Culture, Calcutta) ನೀಡಿದ ಲೇಖನ.

ನಾಗರಿಕತೆ ನಾಶವಾದ ನಂತರ ಪಶ್ಚಿಮ ಜಗತ್ತಿನಲ್ಲಿ ವೈಜ್ಞಾನಿಕ ಶೋಧನೆ ಮತ್ತು ಜ್ಞಾನದ ಜ್ಯೋತಿ ನಂದಿಹೋಯಿತು. ಆಗ್ಗೆ ಕವಿದ ಅಂಧಕಾರ ಎಂಟುನೂರು ವರ್ಷಗಳಿಗೂ ಹೆಚ್ಚು ಕಾಲ ಸಾಗಿ ಬಂದಿತು.

ಆದರೆ ಈ ಮಂಕುಕವಿದಿದ್ದ ಅವಧಿಯಲ್ಲೂ ಒಂದು ಜ್ಯೋತಿ—ಧರ್ಮದ ಜ್ಯೋತಿ—ಮಿಣುಗುಟ್ಟುತ್ತಿತ್ತು. ಮಹಾನ್ ಕ್ರೈಸ್ತಯೋಗಿಗಳ ಒಂದು ಪರಂಪರೆ ಈ ಜ್ಯೋತಿಯನ್ನು ಅಪೂರ್ವ ನಿಷ್ಠೆಯಿಂದ ಕಾಪಾಡಿಕೊಂಡು ಬಂದಿತು. ಆದರೆ ಧರ್ಮದ ಬಗ್ಗೆ ಅವರ ವೈಜ್ಞಾನಿಕ ದೃಷ್ಟಿಗೆ ಆಗಿನ ಚರ್ಚ್ ಸಂಸ್ಥೆಯಿಂದ ನೆರವಿಗೆ ಬದಲಾಗಿ ಅಡ್ಡಿ ಆತಂಕಗಳೇ ಎದುರಾಗುತ್ತಿದ್ದವು. ಶತಮಾನಗಳು ಉರುಳಿದಂತೆ ಚರ್ಚ್ ಸಂಸ್ಥೆ ಬೌದ್ಧಿಕ ಕ್ಷೇತ್ರದಲ್ಲಿ ಅಂತಿಮ ಸಿದ್ಧಾಂತಗಳ ಮತ್ತು ಭೌತಿಕ ಕ್ಷೇತ್ರದಲ್ಲಿ ಸಂಪತ್ತು ಅಧಿಕಾರಗಳಂಥ ಸ್ವಾರ್ಥಹಿತಗಳ ಬಲೆಯಲ್ಲಿ ಸಿಕ್ಕಿಕೊಂಡಿತ್ತು. ಹೀಗೆ ಸಂಘಟಿತವಾಗಿ ಬೇರೂರಿದಂಥ ಧಾರ್ಮಿಕ ಅಥವಾ ರಾಜಕೀಯ ಪ್ರಭುತ್ವಕ್ಕೆ ಸಂದೇಹಪಡುವ ವಿಚಾರವಂತಿಕೆ ಮತ್ತು ಪ್ರಶ್ನಿಸುವ ಮನೋಭಾವ ಸಹಜವಾಗಿಯೇ ಹಿಡಿಸದು ; ಇದು ಧರ್ಮದ ಕ್ಷೇತ್ರದಲ್ಲಷ್ಟೇ ಅಲ್ಲ, ಭೌತ ವಿಜ್ಞಾನ ಮತ್ತು ಎಲ್ಲ ಶುದ್ಧ ಜ್ಞಾನದ ಕ್ಷೇತ್ರಗಳಲ್ಲೂ ಹಾಗೆಯೇ. ಸತ್ಯಪ್ರೇಮ ಮತ್ತು ಸತ್ಯಶೋಧನೆಗಳಿಗೆ ಎಲ್ಲ ಬಗೆಯ ಅಂತಿಮ ಅಂಧ ಸಿದ್ಧಾಂತಗಳೂ ಶತ್ರುಗಳೇ. ಮಾನವನ ಸತ್ಯಪ್ರಿಯತೆ ಮತ್ತು ಜ್ಞಾನಶೋಧನೆಗಳು ಸಮಕಾಲೀನ ಚರ್ಚ್ ಮತ್ತು ಸರಕಾರಗಳ ಅಧಿಕಾರವನ್ನು ಮರುಮಾತಿಲ್ಲದೆ ಅಂಗೀಕರಿಸುವ ಪ್ರವೃತ್ತಿಯಡಿ ಕುಗ್ಗಿಹೋಗಿದ್ದವು ; ಪ್ರಾಚೀನ ಲೇಖಕರು ಮತ್ತು ಅವರ ಪುಸ್ತಕಗಳಲ್ಲಿನ ಪ್ರವೃತ್ತಿಯೂ ಅದೇ ಆಗಿತ್ತು. ಈ ಪ್ರವೃತ್ತಿಯ ನೊಗವನ್ನು ಇಳಿಸಲು ಪ್ರಯತ್ನಿಸಿದ ಕೆಲವು ದಿಟ್ಟತನದ ಚೇತನಗಳು ಹಿಂಸೆ, ಮರಣಗಳ ಪಣ ತೆರಬೇಕಾಯಿತು. ಮಾನವನ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಇದು ಅತ್ಯಂತ ಕರಾಳ ಸಂಗತಿ.

## ೩. ಆಧುನಿಕ ವಿಜ್ಞಾನದ ಉದಯ

ಆದರೆ, ಅನತಿಕಾಲದಲ್ಲೇ ಹೊಸ ಉದಯವೊಂದು ಬಾನಿನಲ್ಲಿ ಗೋಚರವಾಗತೊಡಗಿತು. ಇದು ಎರಡು ಮೂಲಗಳಿಂದ ಹೊರಹೊಮ್ಮುತ್ತಿತ್ತು ; ಪ್ರಥಮವಾಗಿ ಸ್ಪೇನಿನ ಉನ್ನತ ಶಿಕ್ಷಣ ಕೇಂದ್ರಗಳಿಂದ ಹಿಂದಿರುಗಿದ ಐರೋಪ್ಯ ವಿದ್ಯಾರ್ಥಿಗಳಿಂದ ; ಪ್ರಾಚೀನ ಗ್ರೀಕ್ ಮತ್ತು ಪ್ರಾಚೀನ ಭಾರತೀಯ ಜ್ಞಾನವನ್ನು ಮೈಗೂಡಿಸಿಕೊಂಡಿದ್ದು ಯೂರೋಪಿನ ಅಂಧಕಾರಯುಗದಲ್ಲಿ ವಿವೇಚನೆಯ ಬೆಳಕನ್ನು ಬೆಳಗಿದ್ದ ಅರಬ್ ಸಂಸ್ಕೃತಿ, ನಾಗರಿಕತೆಗಳು ಈ ಸ್ಪ್ಯಾನಿಷ್ ಜ್ಞಾನ ನೆಲೆಗಳನ್ನು ಪೋಷಿಸಿದ್ದವು. ಎರಡನೆಯದಾಗಿ, ಮುನ್ನಡೆಯುತ್ತಿದ್ದ ತುರ್ಕಿಷ್ ಜನ ಕಾನ್‌ಸ್ಟಾಂಟಿನೋಪಲನ್ನು ವಶಪಡಿಸಿಕೊಂಡ ಮೇಲೆ, ತಮ್ಮ ಪ್ರಾಚೀನ ಜ್ಞಾನಭಂಡಾರದೊಡನೆ ಪಶ್ಚಿಮ ಯೂರೋಪಿಗೆ ಬಂದ ಗ್ರೀಕ್ ಪಂಡಿತರಿಂದ ; ಇವರ ನೆರವಿನಿಂದ ಪಶ್ಚಿಮ ಯೂರೋಪ್ ಗ್ರೀಕ್ ಸಂಸ್ಕೃತಿ ಮತ್ತು ಜ್ಞಾನಗಳನ್ನು ಪುನರುಜ್ಜೀವಿತಗೊಳಿಸಲು ಅವಕಾಶವಾಯಿತು.

ಹದಿನೈದನೆಯ ಶತಮಾನದ ಅಂತ್ಯದ ಸುಮಾರಿಗೆ ಪಶ್ಚಿಮ ಯೂರೋಪಿನಲ್ಲಿ ಪುನರುಜ್ಜೀವನದ ಅನುಭವ ಆಗತೊಡಗಿತು. ಪಶ್ಚಿಮ ಯೂರೋಪಿನ ಜನರ ಮಾನಸಿಕ ಜೀವನದಲ್ಲಿ ಪರಿವರ್ತನೆಯ ಗಾಳಿ ಬೀಸತೊಡಗಿತು. ಆ ಜನರ ಯೌವನೋತ್ಸಾಹ, ಸತ್ವಗಳು ಈ ಆರಂಭದ ಹುರುಪನ್ನು ಎಲ್ಲೆಡೆ ಮಾನವ ಪರಿವರ್ತನೆಯ ಒಂದು ಮಹಾಶಕ್ತಿಯಾಗಿ ಮಾರ್ಪಡಿಸಿದವು. ಶುದ್ಧ ವೈಜ್ಞಾನಿಕ ಮನೋಭಾವ ಮತ್ತು ವಿಧಾನಗಳನ್ನು ನಿಧಾನವಾಗಿಯಾದರೂ ದೃಢ ರೀತಿಯಲ್ಲಿ ಪರಿಷ್ಕರಿಸಲಾಗುತ್ತಿತ್ತು.

ಹದಿನೈದನೆಯ ಶತಮಾನದ ದ್ವಿತೀಯಾರ್ಧದಲ್ಲಿ ಪಶ್ಚಿಮ ಯೂರೋಪಿನಲ್ಲಿ ಮೃದುವಾಗಿ ಬೀಸುತ್ತಿದ್ದ ಈ ಬದಲಾವಣೆಯ ಗಾಳಿಯ ಪ್ರಭಾವವನ್ನು ಆಧುನಿಕ ವಿಜ್ಞಾನದ ಚರಿತ್ರೆಯಲ್ಲಿನ

ಒಂದು ಘಟನೆ ಚೆನ್ನಾಗಿ ಪ್ರದರ್ಶಿಸುತ್ತದೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪಂಡಿತರ ತಂಡವೊಂದು ಗ್ರಂಥಾಲಯ ಭವನದಲ್ಲಿ ಸಭೆ ಸೇರಿ ಪ್ರಾಣಿಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಮಹತ್ವಪೂರ್ಣ ಸಮಸ್ಯೆಯನ್ನು ಪರಿಹರಿಸಲು ತೊಡಗಿದ್ದರು. ಆ ಸಮಸ್ಯೆ : ಒಂದು ಕುದುರೆಗೆ ಎಷ್ಟು ಹಲ್ಲುಗಳಿವೆ ? ಇಂಥ ಸಮಸ್ಯೆಗಳನ್ನು ಪರಿಹರಿಸುವ ಪ್ರಾಚೀನ ವಿಧಾನವನ್ನು ಅವರು ಅನುಸರಿಸಿದ್ದರು. ಅಂದರೆ ಪ್ರಾಚೀನ ಪ್ರಮಾಣಗ್ರಂಥಗಳ ಪರಿಶೀಲನೆ. ಗ್ರಂಥಾಲಯದಿಂದ ಪ್ರಾಚೀನ ಗ್ರಂಥಗಳನ್ನು ಹೊರಗೆಳೆದು ಪರಿಶೀಲಿಸುವುದರಲ್ಲಿ ಪಂಡಿತರಲ್ಲಿ ಸ್ಪರ್ಧೆಯೇ ನಡೆದಿತ್ತು. ಬಹುಮಂದಿ ಪರಿಶೀಲಿಸಿದ್ದು ಅರಿಸ್ಟಾಟಲ್ ಏನು ಹೇಳಿದ್ದಾನೆಂದು. ಆತನ ಅಧಿಕಾರವಾಣಿಗೆ ಎಲ್ಲರೂ ಬದ್ಧರು ; ಜತೆಗೆ ಅದಕ್ಕೆ ಮಧ್ಯಯುಗದ ಚರ್ಚಿನ ಘೋಷಣೆಯೂ ದೊರೆತಿದ್ದು ಪರಮವೇದವೆನಿಸಿತ್ತು. ಪಂಡಿತರು ನಾನಾ ಪ್ರಾಚೀನ ಶಾಸ್ತ್ರಜ್ಞರನ್ನು ಉಲ್ಲೇಖಿಸಿ ತಮ್ಮ ವಾದವನ್ನು ಮಂಡಿಸುವುದರಲ್ಲೋ ಇತರರ ವಾದವನ್ನು ಅಲ್ಲಗಳೆಯುವುದರಲ್ಲೋ ಮಗ್ನರಾಗಿದ್ದಾಗ ಒಬ್ಬ ತರುಣ ಪಂಡಿತ ಸದ್ದಿಲ್ಲದೆ ಹೊರಕ್ಕೆ ನಡೆದು ಕೆಲನಿಮಿಷಗಳಲ್ಲೇ ಒಂದು ಕುದುರೆಯೊಡನೆ ಹಿಂದಿರುಗಿ ಅದನ್ನು ಸಭಾಭವನದ ಮಧ್ಯದಲ್ಲಿ ನಿಲ್ಲಿಸಿದ. ಇದನ್ನು ಕಂಡು ಅವಾಕ್ಕಾದ ಪಂಡಿತರಿಗೆ ಆತ ಹೇಳಿದ : ಮಾನ್ಯರೇ, ಒಂದು ಕುದುರೆಗೆ ಎಷ್ಟು ಹಲ್ಲುಗಳಿವೆಯೆಂದು ತಿಳಿಯಬೇಕೆ ? ಇದೋ, ಒಂದು ಜೀವಂತ ಕುದುರೆ ಇಲ್ಲಿದೆ. ದಯವಿಟ್ಟು ಅದರ ಬಾಯಿತೆರೆದು ಹಲ್ಲುಗಳನ್ನು ಎಣಿಸಿ, ಸತ್ಯಸಂಗತಿಯನ್ನು ನೀವೇ ಅರಿತುಕೊಳ್ಳಿ. ತರುಣ ಪಂಡಿತನ ಈ ಉದ್ಧಟತನವನ್ನು, ಒಂದು ಕುದುರೆಗೆ ಅರಿಸ್ಟಾಟಲ್ ಮತ್ತಿತರ ಪಂಡಿತರು ಹೇಳಿರುವುದಕ್ಕಿಂತ ಹೆಚ್ಚು ಅಥವಾ ಕಡಿಮೆ ಹಲ್ಲುಗಳಿವೆಯೆಂದು ಅವನು ನಂಬಿದ್ದುದನ್ನು ಖಂಡಿಸಿದರು.

ಆದರೆ ಆಗಿನ ವೈಜ್ಞಾನಿಕ ಗಾಳಿಯಿಂದ ಪ್ರಭಾವಿತನಾಗಿದ್ದ ಆ ತರುಣ ಪಂಡಿತ ಕಲ್ಲಿನಂತೆ ವಿಚಲಿತನಾಗದೆ ಉಳಿದಿದ್ದ. ಬೈಬಲ್ ಹೇಳುವಂತೆ ನಿರ್ಮಾತೃಗಳು ತಿರಸ್ಕರಿಸಿ ಹೊಸ ಕಟ್ಟಡಕ್ಕೆ ತಲೆ ಗಲ್ಲಾಗುವಂಥ ಕಲ್ಲು ಅದು.

## ೪. ವೈಜ್ಞಾನಿಕ ವಿಧಾನ

ಆಧುನಿಕ ವಿಜ್ಞಾನದ ಹೊಸ ಭವ್ಯ ಸೌಧ ಇದೇ. ವಾಸ್ತವಾಂಶಗಳೇ ಅದರ ಇಟ್ಟಿಗೆಗಳು, ಅಭಿಪ್ರಾಯಗಳಲ್ಲ. ಹೊಸದಾಗಿ ನಿರೂಪಿತವಾದ ತಾರ್ಕಿಕ ವಿಧಾನದಲ್ಲಿ ಅದರ ನಕಾಸೆ ಮೂಡಿಬಂದಿತು. ಮಾನವ ತನ್ನ ಕಣ್ಣೆದುರಿಗೆ ತೆರೆದಿರುವ ಪ್ರಕೃತಿ ಎಂಬ ಪುಸ್ತಕವನ್ನು ಅಧ್ಯಯನ ಮಾಡಲಿ : ಆ ಅಧ್ಯಯನ ಪರಿಣಾಮಕಾರಿಯಾಗಲು ಸೂಕ್ತ ಮನೋಭಾವ ಮತ್ತು ವಿಧಾನಗಳಿಂದ ತನ್ನ ಬುದ್ಧಿಯನ್ನು ಹದ ಮಾಡಿಕೊಳ್ಳಲಿ ಎಂದು ಅದು ಕರೆ ನೀಡಿತು. ಬಹು ತ್ವರಿತಗತಿಯಲ್ಲಿ, ಸಮೃದ್ಧ ಪ್ರಮಾಣದಲ್ಲಿ ಪ್ರಕೃತಿಯಿಂದ ರಹಸ್ಯಗಳನ್ನು ಬಯಲಿಗೆಳೆದ ವೈಜ್ಞಾನಿಕ ಸತ್ವ, ವಿಧಾನ ಮತ್ತು ಮನೋಭಾವ ಇದೇ ; ಮಾನವನ ಜ್ಞಾನವನ್ನು ಅಧಿಕಾರವಾಗಿ ಮಾರ್ಪಡಿಸಿ ಅದು ವಿಶ್ವವ್ಯಾಪಿ ಪ್ರಮಾಣದ ಒಂದು ಹೊಸ ಸಂಸ್ಕೃತಿ, ನಾಗರಿಕತೆ ರೂಪುಗೊಳ್ಳಲು ಕಾರಣವಾಗಿದೆ.

ಈ ಅದ್ಭುತ ಸಾಧನೆಗಳ ಹಿಂದಿನ ಪ್ರೇರಕ ಶಕ್ತಿಯನ್ನು ನಾವು ಅರಿತುಕೊಳ್ಳುವುದಗತ್ಯ. ವಿಜ್ಞಾನದ ಸತ್ವ—ವಿಧಾನಗಳಲ್ಲಿ ಹದಗೊಂಡ ಮಾನವ ಬುದ್ಧಿಶಕ್ತಿಯೇ ಆ ಪ್ರೇರಕ ಶಕ್ತಿ. ಈ ರೀತಿಯ ಮಾನಸಿಕ ಶಿಸ್ತಿನ ಲಕ್ಷಣವೇನು ? ವಿಜ್ಞಾನಿ ಕಾರ್ಲ್ ಪಿಯರ್ಸನ್ ಹೇಳುತ್ತಾರೆ ('ಗ್ರಾಮರ್ ಆಫ್ ಸೈನ್ಸ್', ೧೯೦೦ರ ಮುದ್ರಣ, ಪು. ೬) :

*ವಾಸ್ತವ ಸಂಗತಿಗಳ ವರ್ಗೀಕರಣ, ಅವುಗಳ ಕ್ರಮ ಮತ್ತು ಸಂಬಂಧಕ ಮಹತ್ವ—ಇವನ್ನು ತಿಳಿದುಕೊಂಡು ಈ ಸಂಗತಿಗಳ ಆಧಾರದ ಮೇಲೆ, ವೈಯಕ್ತಿಕ ಭಾವನೆಯ ಸೋಂಕಿಲ್ಲದ ರೀತಿಯಲ್ಲಿ, ತೀರ್ಮಾನಕ್ಕೆ ಬರುವ ಅಭ್ಯಾಸವನ್ನು ವೈಜ್ಞಾನಿಕ ರೀತಿಯ ಬುದ್ಧಿ ಎನ್ನಬಹುದು.*

ವಾಸ್ತವ ಸಂಗತಿಗಳನ್ನು ಅರಸುವ, ಅವನ್ನು ಪ್ರಶ್ನಿಸುವ, ಗಂಭೀರ ಉದ್ವೇಶದಿಂದ ಪ್ರಶ್ನಿಸುವ, ದೊರೆತ ಉತ್ತರಗಳನ್ನು ಪರೀಕ್ಷಿಸಿ ನೋಡುವಂಥ ಬುದ್ಧಿಗೆ ಒಂದು ಸತ್ವಶಾಲಿತನವಿದೆ ; ಯಾವುದೇ ಪರಿಶೋಧನೆ ಅಥವಾ ಪ್ರಯತ್ನದಲ್ಲೂ ಅದು ಮುನ್ನಡೆಯಬಲ್ಲದು.

## ೫. ವಿಜ್ಞಾನ ಮತ್ತು ಧರ್ಮ : ಪಾಶ್ಚಾತ್ಯ ದೃಷ್ಟಿ

ಭೌತವಿಜ್ಞಾನಗಳ ವಿವಿಧ ಕ್ಷೇತ್ರಗಳಲ್ಲಿ ಈ ರೀತಿಯ ವೈಜ್ಞಾನಿಕ ಶಿಸ್ತಿನಡಿ ಮಾನವನ ಬುದ್ಧಿಶಕ್ತಿ ಮುನ್ನಡೆಯುವುದನ್ನು ಪ್ರದರ್ಶಿಸುವುದರ ಮೂಲಕ ಆಧುನಿಕ ಪಾಶ್ಚಿಮಾತ್ಯ ಇತಿಹಾಸ ನಮ್ಮನ್ನಾಕರ್ಷಿಸುತ್ತದೆ. ಭೌತವಿಜ್ಞಾನಿಗಳು ಕ್ರಾಂತಿಕಾರಿ ರೀತಿಯಲ್ಲಿ ಮುನ್ನಡೆದಿದ್ದಾಗ, ಕಳೆದ ಶತಮಾನದಲ್ಲಿ ಈ ಭೌತವಿಜ್ಞಾನ ಕ್ಷೇತ್ರಗಳಿಗೆ ಸೇರದ ಯಾವುದೇ ಜ್ಞಾನವೂ ವೈಜ್ಞಾನಿಕವಲ್ಲ ಎಂದು ಭಾವಿಸಲಾಗಿತ್ತು. ಅಂಥ ಜ್ಞಾನವನ್ನು ಖಾಸಗಿ ನಂಬಿಕೆ ಅಥವಾ ನಿಷ್ಠೆ ಎನ್ನಬಹುದೇ ವಿನಾ ಪರೀಕ್ಷಿಸಿ ನೋಡಿದ ಸತ್ಯ ಅಥವಾ ವಿಜ್ಞಾನ ಎನ್ನಲಾಗದು. ಧರ್ಮದ ಬಗ್ಗೆ ಪಶ್ಚಿಮದ ದೃಷ್ಟಿ ಇದರಲ್ಲಿ ಮೊದಲಿನ ಜಾತಿಗೆ ಸೇರಿದುದಾಗಿತ್ತು ; ಅಂತಿಮ ದಿವ್ಯದರ್ಶನದ ಫಲಸ್ವರೂಪವಾದ ಧರ್ಮವನ್ನು ನಿಷ್ಠೆಯಿಂದ ಅಂಗೀಕರಿಸಬೇಕು, ಮನುಷ್ಯನ ಬುದ್ಧಿಶಕ್ತಿ ಅದನ್ನು ಪ್ರಶ್ನಿಸಲಾಗದು; ಅದು ಅತಿ ಲೌಕಿಕದೊಡನೆ ವ್ಯವಹರಿಸುತ್ತಿತ್ತು, ವಿವೇಚನೆಯನ್ನು ಸಾಧನವಾಗಿರಿಸಿಕೊಂಡು ವಿಜ್ಞಾನ ನೈಸರ್ಗಿಕವಾದುದರ ಬಗ್ಗೆ ವ್ಯವಹರಿಸುತ್ತಿತ್ತು. ವಿಜ್ಞಾನ, ಧರ್ಮಗಳ ಬಗ್ಗೆ ಪಶ್ಚಿಮದ ದೃಷ್ಟಿ ನೈಸರ್ಗಿಕಕ್ಕೆದುರಾಗಿ ಅತಿ ಲೌಕಿಕ, ವಿಜ್ಞಾನಕ್ಕೆದುರಾಗಿ ಧರ್ಮ, ವಿವೇಚನೆಗೆದುರಾಗಿ ನಿಷ್ಠೆ, ಲೌಕಿಕಕ್ಕೆ ಎದುರಾಗಿ ಪವಿತ್ರವೆನಿಸಿದಂಥದ್ದು—ಹೀಗೆ ಹಲಬಗೆಯ ದ್ವಂದ್ವ ದೃಷ್ಟಿಕೋನಗಳಿಗೂ ಪರಸ್ಪರ ವಿರುದ್ಧ ಭಾವನೆಗಳಿಗೂ ಎಡೆಕೊಟ್ಟಿತು. ಪಾಶ್ಚಿಮಾತ್ಯ ಧರ್ಮ ಈ ಅಸಂಗತಗಳನ್ನು ಅಂತರ-ಕ್ರೈಸ್ತ ಮತ್ತು ಕ್ರೈಸ್ತ-ಕ್ರೈಸ್ತೇತರ ಸಂಬಂಧಗಳ ಕ್ಷೇತ್ರಕ್ಕೂ ಒಯ್ದಿತು.

ಹೀಗೆ ಧರ್ಮ ಮತ್ತು ವಿಜ್ಞಾನ ಸಮಾನಾಂತರವಾಗಿ ಸಾಗುವುದು ಒಂದು ಅಲ್ಪಾವಧಿಯ ಸಾಮಾಜಿಕ ಅನುಕೂಲಸಿಂಧು ಸಾಧನವಾಗಬಲ್ಲದಷ್ಟೆ. ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಇದೇ ಪರಿಸ್ಥಿತಿ ಇತ್ತು ; ಹಿಂದಿನ ಮೂರು ಶತಮಾನಗಳಲ್ಲಿನ ವಿಜ್ಞಾನದ ಬೆಳವಣಿಗೆಯನ್ನು ಧರ್ಮ ದಮನಗೊಳಿಸಲಾಗಲಿಲ್ಲ. ಆಧುನಿಕ ವಿಜ್ಞಾನ ಜಯಭೇರಿ ಬಾರಿಸಿತು. ಧರ್ಮವೇ ಮೊದಲಿಗೆ ಒಂದು ಅಪಾಯಕಾರಿ ತಪ್ಪು ಎನಿಸಿದ್ದು ಕೊನೆಗೆ ಒಂದು ನಿರುಪದ್ರವಿ ಭ್ರಮೆ ಎನಿಸಿ ಹಿಂದೆ ಬಿದ್ದಿತು.

ವಿಜ್ಞಾನದ ಬಗ್ಗೆ ಅಜ್ಞಾನ ಮತ್ತು ಪೂರ್ವಾಗ್ರಹ ಭಾವನೆ ಧರ್ಮದ ಕಡೆಯಿಂದ ಬಂದದ್ದು ದುರದೃಷ್ಟಕರ. ಆದರೆ ಇದು ಕೇವಲ ಒಂದು ಪಾಶ್ಚಿಮಾತ್ಯ ಅನುಭವ ಎಂಬುದನ್ನು ಗಮನಿಸಬೇಕು ; ನಾನು ಮುಂಚೆ ಹೇಳಿದಂತೆ ಅದು ಧರ್ಮ ಮತ್ತು ವಿಜ್ಞಾನದ ಬಗ್ಗೆ ಅಧಿಕೃತ ಪಾಶ್ಚಿಮಾತ್ಯ ದೃಷ್ಟಿಕೋನದ ಫಲವಾಗಿತ್ತು. ಆದರೆ ಎಲ್ಲೆಡೆಗಳಲ್ಲಿನಂತೆ ಪಶ್ಚಿಮದ ಮುಮುಕ್ಷುಗಳು ಧರ್ಮದ ಬಗ್ಗೆ ಹೊಂದಿದ್ದ ದೃಷ್ಟಿಕೋನ ಪ್ರಯೋಗಶೀಲವೂ, ಅನುಭವಶೀಲವೂ ಆಗಿದ್ದು ವೈಜ್ಞಾನಿಕ ರೀತಿಯದಾಗಿತ್ತು. ಆದರೆ ಅವರ ಈ ದೃಷ್ಟಿಕೋನ ಮತ್ತು ದನಿ ಸಂಘಟಿತ ಚರ್ಚುಗಳ ತತ್ತ್ವಾಂಧ ದೃಷ್ಟಿ ಮತ್ತು ಮನೋಭಾವ ನಿಗ್ರಹಿಸಿಟ್ಟುಬಿಟ್ಟಿತ್ತು. ಇದರ ಪರಿಣಾಮವಾಗಿ ಧರ್ಮಕ್ಷೇತ್ರದಲ್ಲಿ ಪಶ್ಚಿಮವು ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳಲಾಗಲಿಲ್ಲ. ಧರ್ಮ ಮತ್ತು ವಿಜ್ಞಾನದ ನಡುವೆಯಷ್ಟೇ ಅಲ್ಲ, ಕ್ರೈಸ್ತ ಮತ್ತು ಕ್ರೈಸ್ತೇತರ ನಿಷ್ಠೆಗಳ ನಡುವೆಯೂ ಕ್ರೈಸ್ತಧರ್ಮದಲ್ಲೇ ವಿವಿಧ ಪಂಥಗಳ ನಡುವೆಯೂ ಅಸಹನೆ, ದ್ವೇಷ ಮತ್ತು ಘರ್ಷಣೆಗಳು ಪದೇಪದೇ ಸಂಭವಿಸಲು ಇದೇ ಕಾರಣ.

ಆದರೆ ಕಳೆದ ಶತಮಾನದಲ್ಲಿ ವಿಜ್ಞಾನದ ಬಗ್ಗೆ ಪಾಶ್ಚಿಮಾತ್ಯ ದೃಷ್ಟಿ ವಿಜ್ಞಾನವನ್ನು ಭೌತವಿಜ್ಞಾನದೊಡನೆ ಸಮನಾಗೆಣಿಸಿ ವಾಸ್ತವಸಂಗತಿಗಳ ಜಗತ್ತು ಮತ್ತು ಮೌಲ್ಯಗಳ ಜಗತ್ತನ್ನು

ಪ್ರತ್ಯೇಕಿಸುವ ಕಾಯಂ ಗೋಡೆ ನಿರ್ಮಿಸಲು ಪ್ರಯತ್ನಿಸಿತು. ಇದರಿಂದ ಮೌಲ್ಯಗಳ ಜಗತ್ತಿನ ಬಗ್ಗೆ ಭರ್ತ್ಸನೆ ಮೂಡಿ ಮಾನವ ಜೀವನ ಒಂದು ಮೂಲಭೂತ ರೀತಿಯಲ್ಲಿ ಬಡವಾಗಿ ಹೋಯಿತು.

ಇಪ್ಪತ್ತನೆಯ ಶತಮಾನದ ವಿಜ್ಞಾನ ಧರ್ಮಕ್ಕೆ ಅಧಿಕೃತವಾಗಿ ಸಪ್ರಮಾಣ ಆಧಾರವನ್ನು ಕಂಡುಕೊಳ್ಳದಿದ್ದರೂ ಅನೇಕ ಪ್ರತಿಷ್ಠಿತ ವಿಜ್ಞಾನಿಗಳು ಅಸ್ತಿತ್ವವನ್ನು ತಿಳಿಯಲು ತಮ್ಮ ವಿಜ್ಞಾನಕ್ಕಿರುವ ಮಿತಿಗಳನ್ನು ಒಪ್ಪಿಕೊಂಡು ಅಸ್ತಿತ್ವದ ಬಗ್ಗೆ ಧರ್ಮ ಮತ್ತು ಕಲೆ ತಮ್ಮದೇ ಆದ ವಿಶಿಷ್ಟ ದೃಷ್ಟಿಕೋನಗಳನ್ನು ಹೊಂದಿರುವುದೂ ಸಮಂಜಸವೆಂದು ಮಾನ್ಯ ಮಾಡಿದ್ದಾರೆ.

## ೬. ವಿಜ್ಞಾನ ಮತ್ತು ಧರ್ಮ : ಭಾರತೀಯ ದೃಷ್ಟಿ

ಈ ದೃಷ್ಟಿಯಿಂದ, ಈ ಹಿನ್ನೆಲೆಯಲ್ಲಿ ಧರ್ಮದ ಬಗ್ಗೆ ಭಾರತೀಯ ದೃಷ್ಟಿಗೆ ಮಹತ್ವ ಬರುತ್ತದೆ. ಉಪನಿಷತ್ತುಗಳ ಕಾಲದಿಂದ ನಮ್ಮ ಕಾಲದವರೆಗೂ ಭಾರತದ ಧರ್ಮದಲ್ಲಿ ಅಸ್ತಿತ್ವದ ಅರ್ಥ ಮತ್ತು ನಿಗೂಢತೆಗಳನ್ನಾವರಿಸಿರುವ ತೆರೆಯನ್ನು ಭೇದಿಸುವ ವಿಧಾನವನ್ನರಸುತ್ತ ಬಂದಿದೆಯೇ ವಿನಾ ನಂಬಿಕೆಗಾಗಿ ಒಂದು ಅಂಧಸಿದ್ಧಾಂತಕ್ಕಾಗಿ ಹುಡುಕಿಲ್ಲ. ಅನುಭವದ ಆಳವಾದ ಅಧ್ಯಯನದ ಮೂಲಕ ಸತ್ಯವನ್ನು ಶೋಧಿಸುವ ಭಾರತೀಯ ಮನಸ್ಸಿನ ಈ ಉತ್ಕಟೇಚ್ಛೆ ಉಪನಿಷತ್ತುಗಳಲ್ಲಿ ಸೊಗಸಾಗಿ ಕಾಣಬರುತ್ತದೆ. ರಾಬರ್ಟ್ ಅರ್ನೆಸ್ಟ್ ಹ್ಯೂಮ್ ಹೇಳುವಂತೆ ('ದಿ ಥರ್ಟೀನ್ ಪ್ರಿನ್ಸಿಪಲ್ ಉಪನಿಷದ್ಸ್', ಪು. ೩೦, ಟಿಪ್ಪಣಿ) :

> *ಸತ್ಯಕ್ಕಾಗಿ ಪ್ರಾಮಾಣಿಕ ರೀತಿಯಲ್ಲಿ ಶೋಧನೆ ನಡೆಸುವುದು ಉಪನಿಷತ್ತುಗಳ ಒಂದು ಭವ್ಯ, ಪ್ರಶಂಸನೀಯ ಲಕ್ಷಣವಾಗಿದೆ.*

ಉಪನಿಷತ್ತುಗಳಲ್ಲಿ ನಮಗೆ ದೊರೆಯುವ ಒಳನೋಟಗಳು ಪರೀಕ್ಷಿಸಿ ನೋಡಿದ್ದಾಗಿದ್ದು, ಪರೀಕ್ಷಿಸಿ ನೋಡಬಹುದಾಗಿದ್ದು, ಕಾಲದ ಸತ್ವಪರೀಕ್ಷೆಯಲ್ಲಿ ವಿಜಯಿಯಾಗಿ ನಿಂತಿವೆ. ಭೌತವಿಜ್ಞಾನಗಳ ಕ್ಷೇತ್ರದಲ್ಲಿ ಆಧುನಿಕ ಕ್ರಾಂತಿಕಾರಿ ಮುನ್ನಡೆಗಳಿಂದ ಕೂಡ ಅವುಗಳ ಸತ್ಯಮೌಲ್ಯದ ಮೇಲೆ ಯಾವ ಪರಿಣಾಮವೂ ಆಗಿಲ್ಲ ; ಬದಲಾಗಿ, ತಾರ್ಕಿಕ ಆಧಾರವನ್ನು ಎತ್ತಿ ತೋರಿಸಿ ಅವುಗಳ ಧಾರ್ಮಿಕ ಗುಣವನ್ನು ಹೆಚ್ಚಿಸಿವೆ. ಧರ್ಮದ ಬಗ್ಗೆ ಭಾರತೀಯ ದೃಷ್ಟಿಯನ್ನು ಬಲ್ಲವರಿಗೆ ಇದು ಅಚ್ಚರಿಯ ಸಂಗತಿಯೇನಲ್ಲ. ಏಕೆಂದರೆ ಈ ಒಳನೋಟಗಳು ಇನ್ನೊಂದು ಕ್ಷೇತ್ರದಲ್ಲಿ—ಅಭೌತಿಕವಾದ ಮನುಷ್ಯನ ಆಂತರಿಕ ಜೀವನದ ಕ್ಷೇತ್ರದಲ್ಲಿ—ಅಂಥದೇ ವೈಜ್ಞಾನಿಕ ಪರಿಶೋಧನೆಯ ಫಲವಾಗಿವೆ.

ಎಡಿಂಗ್‌ಟನ್ ಅವರ ಮಾತುಗಳಲ್ಲಿ ('ಸೈನ್ಸ್ ಅಂಡ್ ದಿ ಅನ್‌ಸೀನ್ ವರ್ಲ್ಡ್', ಪು. ೫೪) :

> *ಅನ್ವೇಷಣೆಗೆ ಆದ್ಯತೆ ನೀಡಿದರೆ ಮಾತ್ರ ವಿಜ್ಞಾನ ಅಥವಾ ಧರ್ಮದ ನಿಜವಾದ ಸತ್ವವನ್ನು ಅರಿಯಬಹುದು.*

ಮುಕ್ತ ವಿಚಾರಶೀಲತೆಯನ್ನು ನಿಗ್ರಹಿಸಿಡುವ ತತ್ತ್ವಾಂಧತೆ ಮತ್ತು ಇದೇ ಸರಿ ಎಂಬ ಹಟಭಾವನೆ ವಿಜ್ಞಾನದಷ್ಟೇ ಧರ್ಮಕ್ಕೂ ಶತ್ರುಗಳು. ವಿಜ್ಞಾನದ ವ್ಯಾಪ್ತಿ ಮತ್ತು ಕಾರ್ಯದ ಬಗ್ಗೆ ಸಂಕುಚಿತ ದೃಷ್ಟಿ ಹೊಂದಿ, ತತ್ತ್ವಾಂಧ ಮಾರ್ಗಹಿಡಿದು, ಜ್ಞಾನದ ಮುನ್ನಡೆಯೂ ಅನುಭವದ ಸಂಘಟನೆಯೂ ನಿಲ್ಲಬೇಕೆನ್ನುವ ವಿಜ್ಞಾನಿಗಳನ್ನು ಈ ಶತಮಾನದಲ್ಲೂ ಕಾಣಬಹುದು. ಈ ಹಿಂದೆ ಇಂಥ ಭಾವನೆ ಧರ್ಮಕ್ಕೆ ಅಪಾಯವೆಸಗಿದಂತೆ ಈಗ ವಿಜ್ಞಾನಕ್ಕೂ ಅಪಾಯ ಮಾಡುತ್ತದೆ. ಮುಕ್ತ ಪರಿಶೋಧನಶೀಲತೆ ಬಗ್ಗೆ ಹೆಚ್ಚಿನ ನಿಷ್ಠೆ, ವಿಜ್ಞಾನದ ಉದ್ದೇಶ ಮತ್ತು ಮನೋಭಾವ ಕುರಿತು ವಿಶಾಲ ಕಲ್ಪನೆ ಇದ್ದರೆ ಮಾತ್ರ ಈ ಅಪಾಯದಿಂದ ತಪ್ಪಿಸಿಕೊಳ್ಳಬಹುದು.

ತತ್ಸಾಂಧ ಧರ್ಮದ ಭಾರ ಅಧಿಕವಿರುವಂಥ ಧರ್ಮವಿಜ್ಞಾನ ಕುರಿತು ವಿವೇಕಾನಂದರು 'ಧರ್ಮ ಮತ್ತು ವಿಜ್ಞಾನ' ಎಂಬ ಉಪನ್ಯಾಸದಲ್ಲಿ ಹೇಳುತ್ತಾರೆ ('ಕಂಪ್ಲೀಟ್ ವರ್ಕ್ಸ್' ಸಂ. ೬. ಆರನೆಯ ಮುದ್ರಣ, ಪು. ೮೧) :

*ಅನುಭವವೊಂದೇ ಜ್ಞಾನದ ಮೂಲ. ಪ್ರಪಂಚದಲ್ಲಿ ಖಚಿತತೆಯಿಲ್ಲದಂಥ ಏಕೈಕ ವಿಜ್ಞಾನ ವೆಂದರೆ ಧರ್ಮ ; ಏಕೆಂದರೆ ಅದನ್ನು ಅನುಭವವಿಜ್ಞಾನವಾಗಿ ಬೋಧಿಸುವುದಿಲ್ಲ, ಇದು ಹೀಗಿರಬಾರದು. ಅನುಭವದಿಂದ ಧರ್ಮವನ್ನು ಬೋಧಿಸಬಲ್ಲ ಕೆಲವರಾದರೂ ಇದ್ದೇ ಇರು ತ್ತಾರೆ. ಅವರನ್ನು ಮುಮುಕ್ಷುಗಳೆನ್ನುತ್ತಾರೆ. ಯಾವುದೇ ಧರ್ಮದಲ್ಲೂ ಈ ಮುಮುಕ್ಷುಗಳು ಒಂದೇ ರೀತಿ ಮಾತನಾಡುತ್ತಾರೆ, ಒಂದೇ ಸತ್ಯವನ್ನು ನುಡಿಯುತ್ತಾರೆ. ಇದೇ ನಿಜವಾದ ಧರ್ಮ ವಿಜ್ಞಾನ. ಪ್ರಪಂಚದ ನಾನಾ ಭಾಗಗಳಲ್ಲಿ ಗಣಿತಶಾಸ್ತ್ರ ಹೇಗೆ ವಿಭಿನ್ನವಾಗಿಲ್ಲವೋ ಹಾಗೆಯೇ ಮುಮುಕ್ಷುಗಳಲ್ಲೂ ಭಿನ್ನಾಭಿಪ್ರಾಯವಿರದು. ಅವರೆಲ್ಲ ಒಂದೇ ರೀತಿ ಇರುವವರು. ಅವರ ಅನುಭವ ಒಂದೇ ತೆರನಾದುದು ; ಅದೇ ಕಟ್ಟಳೆಯಾಗುತ್ತದೆ.*

ಭೌತವಿಜ್ಞಾನಗಳು ಮತ್ತು ಧರ್ಮವಿಜ್ಞಾನದ ನಡುವಣ ನಿಕಟ ಪರಸ್ಪರ ಸಂಪರ್ಕವನ್ನು ವಿವರಿ ಸುತ್ತ ವಿವೇಕಾನಂದರು ಹೇಳುತ್ತಾರೆ : (ಅದೇ ಗ್ರಂಥ, ಸಂ. ೨, ಒಂಬತ್ತನೆಯ ಮುದ್ರಣ, ಪು. ೪೩೨) :

*ಪಿಂಡಾಂಡ ಮತ್ತು ಬ್ರಹ್ಮಾಂಡ, ಅಂತರಂಗ ಮತ್ತು ಬಾಹ್ಯ ಎಂಬ ಎರಡು ಜಗತ್ತು ಗಳಿವೆ. ಅನುಭವದ ಮೂಲಕ ನಾವು ಅವೆರಡರಿಂದಲೂ ಸತ್ಯವನ್ನು ಪಡೆಯುತ್ತೇವೆ. ಆಂತರಿಕ ಅನುಭವದಿಂದ ಬಂದದ್ದು ಮನಶ್ಶಾಸ್ತ್ರ, ಅಧ್ಯಾತ್ಮಶಾಸ್ತ್ರ ಮತ್ತು ಧರ್ಮ. ಬಾಹ್ಯ ಅನುಭವ ದಿಂದ ಬಂದದ್ದು ಭೌತವಿಜ್ಞಾನಗಳು. ಪರಿಪೂರ್ಣವಾದ ಸತ್ಯ ಇವೆರಡೂ ಜಗತ್ತುಗಳಲ್ಲಿನ ಅನುಭವದೊಂದಿಗೆ ಸಾಮರಸ್ಯ ಹೊಂದಿರಬೇಕು. ಪಿಂಡಾಂಡವು ಬ್ರಹ್ಮಾಂಡವನ್ನೂ, ಬ್ರಹ್ಮಾಂಡವು ಪಿಂಡಾಂಡವನ್ನೂ ಪ್ರಮಾಣಪಡಿಸಬೇಕು. ಭೌತಿಕ ಸತ್ಯಕ್ಕೆ ಸಮನಾದಂಥ ಸತ್ಯ ಅಂತರಂಗ ವಿಶ್ವದಲ್ಲೂ, ಅಂತರಂಗ ವಿಶ್ವದ ಸತ್ಯಕ್ಕೆ ರುಜುವಾತು ಬಾಹ್ಯ ಪ್ರಪಂಚದಲ್ಲೂ, ದೊರೆಯಬೇಕು.*

## ೭. ನಿಸರ್ಗದ 'ಒಳಗು', 'ಹೊರಗು'

ಮನುಷ್ಯನ, ಅವನ ಮೂಲಕ ವಿಶ್ವದ, ಈ ಆಂತರಿಕ ಲಕ್ಷಣ ಆಧುನಿಕ ವೈಜ್ಞಾನಿಕ ವಿಚಾರ ಧಾರೆಯಲ್ಲಿ ನಿಧಾನವಾಗಿ ಗೋಚರವಾಗತೊಡಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಜೀವಶಾಸ್ತ್ರ ಕ್ಷೇತ್ರದಲ್ಲಿನ ಕೆಲವು ಕ್ರಾಂತಿಕಾರಕ ಪ್ರವೃತ್ತಿಗಳನ್ನು ಎತ್ತಿತೋರಿಸುತ್ತ ಪ್ರಸಿದ್ಧ ಪ್ರಾಚೀನಾನ್ವೇಷಕ ದಿವಂಗತ ಪಿಯರೆ ಟೈಲ್‌ಹಾರ್ಡ್ ಡಿ ಚಾರ್ಡಿನ್ ಕೇಳುತ್ತಾರೆ ('ದಿ ಫಿನಾಮೆನನ್ ಆಫ್ ಮ್ಯಾನ್', ೧೯೫೯, ಪು. ೫೨) :

*ವಿಜ್ಞಾನ ಇದುವರೆಗೆ ಎಂದಾದರೂ ಪ್ರಪಂಚವನ್ನು ಹೊರಗಿನಿಂದ ಬಿಟ್ಟು, ಇನ್ನಾವುದಾದರೂ ರೀತಿ ಗಮನಿಸಿದೆಯೇ ?*

ಹಾಗೆಂದು ಕೇಳಿ ಅವರು ಮುಂದುವರಿದರು (ಅದೇ ಗ್ರಂಥ, ಪು. ೫೫) :

*ಭೌತವಿಜ್ಞಾನಿಯ ದೃಷ್ಟಿಯಲ್ಲಿ—ಕೊನೇಪಕ್ಷ ಇರುವವರೆಗಾದರೂ, ಬಾಹ್ಯಸ್ವರೂಪವಿಲ್ಲದೆ ಏನೂ ನ್ಯಾಯವಾಗಿ ಅಸ್ತಿತ್ವವಿಲ್ಲ. ಏಕಾಣುಜೀವಿಶಾಸ್ತ್ರಜ್ಞರದೂ ಇದೇ ಬೌದ್ಧಿಕ ದೃಷ್ಟಿಕೋನ ;*

*ಏಕಾಣುಜೀವಿರಾಶಿಗಳನ್ನು (ಅನೇಕ ತೊಂದರೆಗಳ ಜತೆಗೆ) ಪ್ರಯೋಗಾಲಯದ ಪರೀಕ್ಷಕ ದ್ರವ್ಯವೆಂದೇ ಪರಿಗಣಿಸಲಾಗುತ್ತದೆ. ಸಸ್ಯಗಳ ಕ್ಷೇತ್ರದಲ್ಲಿ ಈ ಕೆಲಸ ಇನ್ನೂ ಕಷ್ಟ. ಅಕಶೇರುಕ ಕೀಟಗಳ ವರ್ತನೆ ಬಗ್ಗೆ ಅಧ್ಯಯನ ಮಾಡುವ ಜೀವಶಾಸ್ತ್ರಜ್ಞನಿಗೆ ಅದು ಜೂಜಾಟವೇ ಆಗುತ್ತದೆ. ಕಶೇರುಕಗಳ ವಿಷಯದಲ್ಲಿ ಇಂಥ ದೃಷ್ಟಿ ನಿರರ್ಥಕವಾಗುತ್ತದೆ. ಕೊನೆಗೆ ಮನುಷ್ಯನ ವಿಷಯಕ್ಕೆ ಬಂದಾಗ ಅದು ಪೂರ್ತಿ ಕುಸಿದು ಬೀಳುತ್ತದೆ. ಮನುಷ್ಯನ ಅಂತರಂಗ ಅಸ್ತಿತ್ವವನ್ನು ಇನ್ನು ಅಲ್ಲಗಳೆಯುವಂತಿಲ್ಲ ; ಏಕೆಂದರೆ ಅದು ನೇರ ಅಂತರ್ದೃಷ್ಟಿ ಮತ್ತು ಎಲ್ಲ ಜ್ಞಾನದ ಸತ್ವಗಳ ವಸ್ತುವಾಗಿದೆ.*

ಚಾರ್ಡಿನ್ ಮತ್ತೂ ಹೇಳುತ್ತಾರೆ (ಅದೇ ಗ್ರಂಥ, ಪು. ೫೬) :

*ನಮ್ಮಲ್ಲಿ ವ್ಯಕ್ತಿಗಳ ಹೃದಯದಲ್ಲಿ ಒಂದು 'ಒಳಗು' ಅನುಭವಕ್ಕೆ ಬರುತ್ತದೆಂಬುದನ್ನು ಅಲ್ಲಗಳೆಯುವುದು ಅಸಾಧ್ಯ. ಒಂದು ಬಿರುಕಿನಿಂದ ನೋಡಿದಂತೆ ಅದು ಕಾಣುತ್ತದೆ. ಒಂದಲ್ಲ ಒಂದು ಪ್ರಮಾಣದಲ್ಲಿ ಅನಾದಿಕಾಲದಿಂದ ನಿಸರ್ಗದಲ್ಲಿ ಎಲ್ಲೆಲ್ಲೂ ಈ 'ಒಳಗು' ಇದ್ದೇ ಇರಬೇಕೆಂದು ಖಚಿತಪಡಿಸಲು ಇಷ್ಟು ಸಾಕು. ವಿಶ್ವ ದ್ರವ್ಯದಲ್ಲೇ ಒಂದು ಹಂತದಲ್ಲಿ ಒಂದು ಅಂತರಂಗ ಲಕ್ಷಣವಿರುವುದರಿಂದ, ಅದರ ರಚನೆಗೆ ಒಂದು ದ್ವಿಲಕ್ಷಣವಿದ್ದಂತಾಯಿತು. ಅಂದರೆ ದೇಶಕಾಲಗಳ ಪ್ರತಿಯೊಂದು ಪ್ರದೇಶದಲ್ಲೂ (ಉದಾಹರಣೆಗೆ ಈ ರಚನೆ ತರಿತರಿಯಾಗಿರುವಂತೆ) ವಸ್ತುಗಳ ಬಾಹ್ಯ ರಚನೆಯ ಜತೆಗೇ ಆಂತರಿಕ ರಚನೆಯೂ ಒಂದಿದೆ.*

### ೮. ವೇದಾಂತ : ಒಳಗು, ಹೊರಗುಗಳ ಸಂಯೋಜನೆ

ಭಾರತೀಯ ವಿಚಾರಧಾರೆಯ ಪ್ರಕಾರ, ಪ್ರಕೃತಿಯ ವಿಕಾಸದ ಅಪೂರ್ವ ಉತ್ಪನ್ನವೊಂದಾದ ಮನುಷ್ಯನ ಅಂತರಂಗವನ್ನು ಪರಿಶೋಧಿಸುವುದರ ಮೂಲಕ ನಿಸರ್ಗದ ಆಂತರ್ಯವನ್ನು ಅಧ್ಯಯನ ಮಾಡುವುದೇ ಧರ್ಮ. ಭೌತವಿಜ್ಞಾನಗಳಿಂದ ದೊರೆಯುವ ಬಾಹ್ಯಜ್ಞಾನ ಮತ್ತು ಧರ್ಮದಿಂದ ದೊರೆಯುವ ಅಂತರ್ಜ್ಞಾನಗಳ ಸಂಯೋಜನೆಯನ್ನು ಭಾರತ ತನ್ನ ವೇದಾಂತದಲ್ಲಿ ಸಾಧಿಸಿದೆ. ಇದನ್ನೇ ಬ್ರಹ್ಮವಿದ್ಯೆ ಎಂದು ಕರೆಯಲಾಗಿದೆ. ಬ್ರಹ್ಮ ಎಂದರೆ ಭೌತ ಮತ್ತು ಅಭೌತ ಅಸ್ತಿತ್ವದ ಸಮಗ್ರತೆ. ಬ್ರಹ್ಮವಿದ್ಯೆಯನ್ನು ಸರ್ವವಿದ್ಯಾಪ್ರತಿಷ್ಠಾ ಎಂದಿದ್ದಾರೆ ; 'ವೇದಾಂತ ಎಲ್ಲ ಜ್ಞಾನದ ಆಧಾರ' ಎಂದು ಮುಂಡಕೋಪನಿಷತ್ತು ಸಾರಿದೆ (I, i, 1). "ಕ್ಷೇತ್ರ ಕ್ಷೇತ್ರಜ್ಞಯೋರ್ ಜ್ಞಾನಂ ಯತ್ ತತ್ ಜ್ಞಾನಂ ಮತಂ ಮಮ"—"ನನ್ನ ಅಭಿಪ್ರಾಯದಲ್ಲಿ ಕ್ಷೇತ್ರ (ಅನಾತ್ಮ) ಮತ್ತು ಕ್ಷೇತ್ರಜ್ಞ (ಆತ್ಮ)ರ ತಿಳಿವಳಿಕೆಯೇ ನಿಜವಾದ ಜ್ಞಾನ" ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ (೧೩.೨).

### ೯. ಧರ್ಮದ ಬಗೆಗೆ ವೈಜ್ಞಾನಿಕ ದೃಷ್ಟಿ

ಹಾಗೆ ನಿರೂಪಿಸಲಾದ ಧರ್ಮಕ್ಕೆ ವೈಜ್ಞಾನಿಕ ಸಮಂಜಸತೆ ಏನು ? ತತ್ಸಾಂಧ ಧರ್ಮದೊಡನೆ ಘರ್ಷಣೆಯಲ್ಲಿ ಗೆದ್ದು ಬಂದ ೧೯ನೆಯ ಶತಮಾನದ ವಿಜ್ಞಾನ ತನ್ನದೇ ಭೌತಿಕವಾದ ಕಟ್ಟಿಗೆ ಸಿಕ್ಕಿಬಿದ್ದು ಧರ್ಮದ ಬಗ್ಗೆ ವೈಜ್ಞಾನಿಕ ರೀತಿಯಲ್ಲಿ ವಿಚಾರಮಾಡಲು ಅಸಮರ್ಥವಾಯಿತು. ಆ ಶತಮಾನವು ಘರ್ಷಣೆ, ಒಡಕುಗಳ ಶತಮಾನವಾಗಿತ್ತು. ಈ ಶತಮಾನವು ರಾಜಿ ಮತ್ತು ಐಕ್ಯತೆಗಳ ಶತಮಾನವೆನಿಸುವ ಸಂಭವವಿದೆ ; ವಿಜ್ಞಾನ ಕ್ಷೇತ್ರದಲ್ಲಿ ಕ್ರಾಂತಿಕಾರಕ ಸಾಧನೆಗಳು, ತಮ್ಮನ್ನೇ ಪುನರ್ವಿಶ್ಲೇಷಣೆ ಮಾಡಿಕೊಂಡು ಪರಸ್ಪರರನ್ನು ಅರಿಯಲು ವಿಜ್ಞಾನ, ಧರ್ಮಗಳು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿರುವುದು—ಇವುಗಳ ಫಲ ಅದು. ೧೯ನೆಯ ಶತಮಾನದ ವಿಜ್ಞಾನ ತಾನೇ ಸರಿ ಎಂಬ ಹಠದ ಮನೋಭಾವ ಹೊಂದಿತ್ತು ; ಈ ಶತಮಾನದ ವಿಜ್ಞಾನದಲ್ಲಿ ನಮ್ರತೆ ಎದ್ದು ಕಾಣುತ್ತದೆ.

ವಾಸ್ತವಾಂಶಗಳನ್ನು ಅಪೇಕ್ಷಿಸಿ ತೀರ್ಮಾನಗಳನ್ನು ಪರೀಕ್ಷಿಸಿ ನೋಡುವ ತಾರ್ಕಿಕ ಪರಿಶೋಧನಾಸಕ್ತಿ ತನ್ನ ಇಲಾಖೆಗಳ ಮಿತಿಯಿಂದಾಚೆಗೆ ಇತರ ಕ್ಷೇತ್ರಗಳಲ್ಲೂ ಅಭಿವ್ಯಕ್ತವಾಗಬಹುದು, ವೈಯಕ್ತಿಕ ಭಾವನೆಗಳ ಸೋಂಕಿಲ್ಲದೆ ಅಂಥ ಪರಿಶೋಧನೆ ನಡೆಸುವ ಮನೋಭಾವವೇ ಒಂದು ಅಧ್ಯಯನ ವನ್ನು ವೈಜ್ಞಾನಿಕವಾಗಿಸುವುದು, ಅಧ್ಯಯನದ ವಿಷಯವಷ್ಟೇ ಅಲ್ಲ ಎಂಬುದನ್ನು ಈ ಶತಮಾನದ ವಿಜ್ಞಾನ ಮನಗಂಡಿದೆ. ಪ್ರಸಿದ್ಧ ಜೀವಶಾಸ್ತ್ರಜ್ಞ ಜೆ. ಎ. ಥಾಮ್ಸನ್ ಹೇಳುವಂತೆ ('ಇನ್‌ಟ್ರಡಕ್ಷನ್ ಟು ಸೈನ್ಸ್', ಹೋಂ ಯೂನಿವರ್ಸಿಟಿ ಲೈಬ್ರರಿ ಮುದ್ರಣ, ಪು. ೫೮):

*ವಿಜ್ಞಾನ ಯಾವುದೇ ನಿರ್ದಿಷ್ಟ ಸಂಗತಿಗಳಿಂದ ತುಂಬಿದ್ದಲ್ಲ. ಅದನ್ನು ಬೌದ್ಧಿಕ ಮನೋ ವೃತ್ತಿ ಎಂದು ಬಣ್ಣಿಸಲಾಗಿದೆ. ಯಾವುದೇ ನಿರ್ದಿಷ್ಟ ವಿಚಾರ ವಿಧಾನಗಳಿಂದ ಅದು ಬಂಧಿಸ ಲ್ಪಟ್ಟಿಲ್ಲ : ಸಾಕ್ಷ್ಯಾಧಾರದ ಮೇಲೆ ಆದ ತೀರ್ಮಾನಗಳನ್ನು ಮಾತ್ರ ಒಪ್ಪಿಕೊಳ್ಳಬೇಕೆಂಬ ತಾರ್ಕಿಕ ವಿವೇಚನೆಯ ಪ್ರಾಮಾಣಿಕ ಪ್ರಯತ್ನ ಅದು. ಒಂದು ಹೊಸ ಸಮಸ್ಯೆಯನ್ನೆದುರಿಸುವ ವಾಣಿಜ್ಯೋದ್ಯಮಿಯಿಂದ, ಒಂದು ರಚನಾತ್ಮಕ ಮಸೂದೆಯನ್ನು ರೂಪಿಸುವ ಒಬ್ಬ ರಾಜಕಾರಣಿಯಿಂದಲೂ ನಮಗೆ ವೈಜ್ಞಾನಿಕ ವಿಧಾನದಲ್ಲಿ ಒಳ್ಳೆಯ ಪಾಠ ಸಿಗಬಹುದು.*

ಧರ್ಮದ ಬಗ್ಗೆ ಭಾರತೀಯ ದೃಷ್ಟಿ ಇದು. ಈ ದೃಷ್ಟಿಯನ್ನು ಕಡೆಗಣಿಸಿದುದರಿಂದಲೇ, ಶತಮಾನ ಗಳುರುಳಿದಂತೆ ಪಶ್ಚಿಮದಲ್ಲಿ ಮುನ್ನಡೆಯುತ್ತಿದ್ದ ಜ್ಞಾನದ ಸವಾಲನ್ನೆದುರಿಸಲು ಧರ್ಮ ಅಶಕ್ತ ವಾಗುತ್ತ ಬಂದಿತು. ವೇದಾಂತದಲ್ಲಿ ಕಾಣುವ ಭಾರತೀಯ ದೃಷ್ಟಿಯ ಈ ವಿಶಿಷ್ಟ ಲಕ್ಷಣವನ್ನು ಪ್ರಸ್ತಾಪಿಸುತ್ತ ರೊಮೇ ರೋಲಾ ಹೇಳುತ್ತಾರೆ ('ದಿ ಲೈಫ್ ಆಫ್ ವಿವೇಕಾನಂದ ಅಂಡ್ ದಿ ಯೂನಿವರ್ಸಲ್ ಗಾಸ್ಪೆಲ್', ಮೂರನೆಯ ಮುದ್ರಣ, ೧೯೬೭, ಪು. ೧೯೬):

*ನೈಜ ವೇದಾಂತ ಸತ್ವವು ಪೂರ್ವಕಲ್ಪಿತ ಭಾವನೆಗಳ ವ್ಯವಸ್ಥೆಯಿಂದ ಆರಂಭವಾಗುವುದಿಲ್ಲ. ಪರಿಶೀಲಿಸಬೇಕಾದ ಸಂಗತಿಗಳು ಮತ್ತು ಅವುಗಳ ಸಮೀಕರಣಕ್ಕೆ ನಿರೂಪಿಸಿರುವ ಆಧಾರ ಕಲ್ಪನೆಗಳ ವಿಷಯದಲ್ಲಿ ವೇದಾಂತದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಮತ್ತು ಅಸಮಾನ ಧೈರ್ಯ ಇವೆ. ಪುರೋಹಿತ ವ್ಯವಸ್ಥೆಯ ಒತ್ತಡವಿಲ್ಲದ ಕಾರಣ, ವಿಶ್ವದ ಅಸ್ತಿತ್ವಕ್ಕೆ ಧಾರ್ಮಿಕ ವಿವರಣೆ ಹುಡುಕಲು ಪ್ರತಿಯೊಬ್ಬನೂ ತನಗಿಷ್ಟ ಬಂದಲ್ಲಿ ಪರಿಶೋಧನೆ ನಡೆಸಲು ಸ್ವತಂತ್ರನಾಗಿದ್ದಾನೆ.*

೧೮೯೬ರಲ್ಲಿ ಇಂಗ್ಲೆಂಡಿನಲ್ಲಿ 'ವಿವೇಚನೆ ಮತ್ತು ಧರ್ಮ' ಎಂಬ ಉಪನ್ಯಾಸದಲ್ಲಿ ಸ್ವಾಮಿ ವಿವೇಕಾನಂದರು ಆಧುನಿಕ ಮಾನವನ ಮೇಲೆ ಧರ್ಮದ ಬಗೆಗಿನ ವೈಜ್ಞಾನಿಕ ದೃಷ್ಟಿಯ ಅನಾದರಣೆಯ ಪರಿಣಾಮ ಏನಾಗಿದೆಯೆಂಬುದನ್ನು ಹೀಗೆ ಬಣ್ಣಿಸಿದರು ('ಕಂಪ್ಲೀಟ್ ವರ್ಕ್ಸ್', ಸಂ. ೧, ಹನ್ನೊಂದನೆಯ ಮುದ್ರಣ, ಪು. ೩೬೬):

*ಆಸ್ತಿಭಾರಗಳೆಲ್ಲ ಶಿಥಿಲವಾಗಿ ಹೋಗಿವೆ ; ಆಧುನಿಕ ಮಾನವ ಬಹಿರಂಗವಾಗಿ ಏನೇ ಹೇಳಿದರೂ ಅಂತರಂಗದಲ್ಲಿ ತಾನಿನ್ನು 'ನಂಬಲಾರ' ಎಂಬುದನ್ನು ಬಲ್ಲ. ಪುರೋಹಿತರ ಒಂದು ಸಂಘಟಿತ ಮಂಡಲಿ ಹೇಳುತ್ತದೆಂದು, ಕೆಲವು ಪುಸ್ತಕಗಳಲ್ಲಿ ಬರೆದಿದೆಯೆಂದು, ತನ್ನ ಜನ ಬಯಸುತ್ತಾರೆಂದು ಕೆಲವೊಂದು ವಿಷಯಗಳನ್ನು ನಂಬುವುದು ತನಗೆ ಅಸಾಧ್ಯವೆಂದು ಆಧುನಿಕ ಮಾನವ ಬಲ್ಲ. ಜನಪ್ರಿಯ ನಿಷ್ಠೆಗೆ ಸಮ್ಮತಿಸುವ ಅನೇಕ ಜನರೂ ಇದ್ದಾರೆನ್ನಿ ; ಆದರೆ ಅವರು ವಿಚಾರಮಾಡುವುದಿಲ್ಲವೆಂದು ನಮಗೆ ಖಚಿತವಾಗಿ ಗೊತ್ತು. ಅವರ ಈ ನಂಬಿಕೆಯನ್ನು 'ವಿಚಾರಮಾಡದ ಅನಾದರಣೆ' ಎಂದು ಬಣ್ಣಿಸಬಹುದು. ಧರ್ಮದ ಎಲ್ಲ ಕಟ್ಟಡಗಳನ್ನೂ ನಾಶಮಾಡದೆ ಈ ಹೋರಾಟ ಇನ್ನು ಹೆಚ್ಚು ಕಾಲ ಸಾಗದು.*

ಮನುಷ್ಯನ ಪೂರ್ಣ ಸಾಫಲ್ಯಕ್ಕಾಗಿ ವಿಜ್ಞಾನ ಮತ್ತು ಧರ್ಮ ಪರಸ್ಪರರಿಗೆ ಬೇಕು. ಈ ಎರಡು ಮಹಾಕ್ಷೇತ್ರಗಳ ನಡುವಣ ಸಮಕಾಲೀನ ಘರ್ಷಣೆ ನಿವಾರಿಸಲು ಧರ್ಮದ ಬಗ್ಗೆ ತಾರ್ಕಿಕ ದೃಷ್ಟಿ ಅಗತ್ಯವೆಂದು ಪ್ರತಿಪಾದಿಸುತ್ತ ಅವರು ಹೇಳಿದರು (ಅದೇ ಗ್ರಂಥ) :

*ಇತರ ಎಲ್ಲ ವಿಜ್ಞಾನಶಾಸ್ತ್ರಗಳು ತಮ್ಮನ್ನು ಸಮರ್ಥಿಸಿಕೊಳ್ಳುವಂತೆ ಸತಾರ್ಕಿಕ ಸಂಶೋಧನೆಗಳಿಂದ ಧರ್ಮವೂ ತನ್ನನ್ನು ಸಮರ್ಥಿಸಿಕೊಳ್ಳಬೇಕೆ? ವಿಜ್ಞಾನ ಮತ್ತು ಹೊರಗಿನ ಜ್ಞಾನಗಳಿಗೆ ಅನ್ವಯಿಸುವಂಥ ಪರಿಶೋಧನಾ ವಿಧಾನಗಳನ್ನು ಧರ್ಮಜ್ಞಾನಕ್ಕೂ ಅನ್ವಯಿಸಬೇಕೆ ? ನನ್ನ ಅಭಿಪ್ರಾಯದಲ್ಲಿ ಹಾಗೆಯೇ ಮಾಡಬೇಕು. ಅದನ್ನು ಎಷ್ಟು ಜಾಗ್ರತೆಯಾಗಿ ಮಾಡಿದರೆ ಅಷ್ಟೂ ಉತ್ತಮ ಎಂದೂ ನನಗನ್ನಿಸುತ್ತದೆ. ಇಂಥ ಪರಿಶೋಧನೆಗಳಿಂದ ಒಂದು ಧರ್ಮ ನಾಶವಾಗುವುದಾದಲ್ಲಿ ಇಷ್ಟು ಕಾಲವೂ ಅದು ಅಸಮಂಜಸವಾದ ನಿರರ್ಥಕ ಮೂಢನಂಬಿಕೆಯೇ ಆಗಿದ್ದಿರಬೇಕು. ಇಂಥ ಧರ್ಮ ಎಷ್ಟು ಬೇಗ ಹೋದರೆ ಅಷ್ಟೂ ಕ್ಷೇಮ. ಅಂಥ ಧರ್ಮದ ನಾಶವೇ ಬಹು ಒಳ್ಳೆಯದೆಂದು ನಾನು ದೃಢವಾಗಿ ನಂಬಿದ್ದೇನೆ. ಅಂಥ ಪರೀಕ್ಷೆಯಿಂದ ಈ ಕಳೆಯೆಲ್ಲ ನಿವಾರಣೆಯಾಗಿ ಧರ್ಮದ ಅವಶ್ಯ ಅಂಶಗಳು ವಿಜಯಶಾಲಿಯಾಗುತ್ತವೆ. ಆಗ ಅದು ವೈಜ್ಞಾನಿಕವಾಗುತ್ತದೆ. ಕೊನೇ ಪಕ್ಷ ಭೌತಶಾಸ್ತ್ರ ಅಥವಾ ರಸಾಯನಶಾಸ್ತ್ರದ ತೀರ್ಮಾನಗಳಷ್ಟಾದರೂ ವೈಜ್ಞಾನಿಕವಾಗುತ್ತದೆ. ಅಷ್ಟೇ ಅಲ್ಲ, ಅದಕ್ಕೆ ಇನ್ನೂ ಹೆಚ್ಚಿನ ಬಲ ಬರುತ್ತದೆ. ಏಕೆಂದರೆ ಭೌತಶಾಸ್ತ್ರ ಅಥವಾ ರಸಾಯನಶಾಸ್ತ್ರಕ್ಕೆ ಇಲ್ಲದಂಥ ಆಂತರಿಕ ಆದೇಶ ಧರ್ಮಕ್ಕಿರುತ್ತದೆ.*

## ೧೦. ಧರ್ಮದ ಬಗ್ಗೆ ವೈಜ್ಞಾನಿಕ ದೃಷ್ಟಿಯ ಫಲ

ಯಾವುದೇ ವಿಷಯದ ವೈಜ್ಞಾನಿಕ ಅಧ್ಯಯನದಲ್ಲಿ ಸಂಬಂಧಪಟ್ಟ ವಾಸ್ತವಾಂಶಗಳ ಸಂಗ್ರಹಣೆ, ಅವುಗಳಿಗೆ ತರ್ಕಬದ್ಧ ಅರ್ಥವಿವರಣೆ, ಸರಿನೋಡುವ ಅಂತಿಮ ಸವಾಲನ್ನೆದುರಿಸುವುದು—ಈ ವಿಷಯಗಳಲ್ಲಿ ವೈಜ್ಞಾನಿಕ ಸತ್ವ ಮತ್ತು ದೃಷ್ಟಿಕೋನ ವ್ಯಕ್ತಪಡುತ್ತವೆ. ಉಪನಿಷತ್ತುಗಳ ಕಾಲದಿಂದಲೂ ಧರ್ಮದ ಬಗ್ಗೆ ಭಾರತೀಯ ದೃಷ್ಟಿ ಇದೇ ಆಗಿದೆ. ಈ ದೃಷ್ಟಿಯ ಪ್ರಕಾರ ಧರ್ಮಾಚರಣೆಯೆಂದರೆ ಮನುಷ್ಯನ ಅಂತರಂಗ ಜೀವನದ ಸಂಗತಿಗಳನ್ನು ಅರಿಯಲು ನಿರಂತರ ಅನ್ವೇಷಣೆಯೇ ಆಗಿದೆ. ಈ ಅಂತರಂಗದಾಳದಲ್ಲಿ ದೇವರ ಸತ್ಯವನ್ನು ಕಾಣಬಹುದು. ಇದನ್ನೇ ಸತ್, ಚಿತ್, ಆನಂದ ಬ್ರಹ್ಮ ಎಂದು ಬಣ್ಣಿಸಿರುವುದು. ಮಧ್ಯಮಟ್ಟದ ಆಳಗಳಲ್ಲಿ ಉನ್ನತ ಮೌಲ್ಯಗಳ ಅರಿವಾಗುತ್ತವೆ: ಇವು ಮನುಷ್ಯನ ನೈತಿಕ ಮತ್ತು ಸಾಂಸ್ಕೃತಿಕ ಅನುಭವಗಳಲ್ಲಿ ವ್ಯಕ್ತಪಡುತ್ತವೆ. ಈ ಸಂಗತಿಗಳ ಬಗ್ಗೆ ರಾಗದ್ವೇಷರಹಿತ ಅಧ್ಯಯನವೇ ಧರ್ಮಶಾಸ್ತ್ರ, ಆಧ್ಯಾತ್ಮಿಕ ಜೀವನದ ವಿಜ್ಞಾನ ಮತ್ತು ಕಲೆ.

ಧರ್ಮದ ಬಗ್ಗೆ ಭಾರತೀಯ ದೃಷ್ಟಿಯನ್ನೂ, ಧರ್ಮ ಮತ್ತು ವಿಜ್ಞಾನದ ನಡುವಣ ತಪ್ಪು ತಿಳಿವಳಿಕೆಗೆ ಕಾರಣವನ್ನೂ ವಿವರಿಸುತ್ತ ಸ್ವಾಮಿ ವಿವೇಕಾನಂದರು ಹೇಳುತ್ತಾರೆ ('ಕಂಪ್ಲೀಟ್ ವರ್ಕ್ಸ್', ಸಂ. ೬, ಆರನೆಯ ಮುದ್ರಣ, ಪು. ೮೧) :

*ರಸಾಯನಶಾಸ್ತ್ರ ಮತ್ತು ಇತರ ನೈಸರ್ಗಿಕ ವಿಜ್ಞಾನಗಳು ಭೌತಿಕ ಪ್ರಪಂಚದ ಸತ್ಯ ಕುರಿತು ವ್ಯವಹರಿಸುವಂತೆಯೇ ಧರ್ಮವು ಆಧ್ಯಾತ್ಮಿಕ ಪ್ರಪಂಚದ ಸತ್ಯಗಳ ಬಗ್ಗೆ ವ್ಯವಹರಿಸುತ್ತದೆ. ರಸಾಯನಶಾಸ್ತ್ರ ನಿಸರ್ಗದ (ಬಾಹ್ಯ) ಪುಸ್ತಕ ಓದಬೇಕು. ಧರ್ಮವನ್ನು ಅರಿಯಲು ನಿಮ್ಮ ಬುದ್ಧಿ ಮತ್ತು ಹೃದಯವೇ ಪುಸ್ತಕ. ಋಷಿಗೆ ಎಷ್ಟೋ ವೇಳೆ ಭೌತವಿಜ್ಞಾನದ ಬಗ್ಗೆ ಅಜ್ಞಾನವಿರಬಹುದು ; ಏಕೆಂದರೆ ಅವನು ತಪ್ಪು ಪುಸ್ತಕವನ್ನು—ಅಂತರಂಗವನ್ನು—ಓದಿರುತ್ತಾನೆ.*

*ವಿಜ್ಞಾನಿಗೂ ಧರ್ಮದ ಬಗ್ಗೆ ಅಜ್ಞಾನವಿರಲು ಸಾಧ್ಯ, ಏಕೆಂದರೆ ಅವನೂ ತಪ್ಪು ಪುಸ್ತಕವನ್ನು—ಬಾಹ್ಯಪ್ರಪಂಚವನ್ನು—ಓದಿರುತ್ತಾನೆ.*

## ೧೧. ಆಧುನಿಕ ವಿಜ್ಞಾನ ಮತ್ತು ಮಾನವನ ರಹಸ್ಯ

ಆಧುನಿಕ ವಿಜ್ಞಾನದಲ್ಲಿ ಬಾಹ್ಯ ಪ್ರಕೃತಿಯ ವಿಕಾಸದ ಒಂದು ಫಲವಾದ ಮನುಷ್ಯನ ಬುದ್ಧಿಶಾಲಿತನದಿಂದಾಗಿ ಆ ಪ್ರಕೃತಿಯ ರಹಸ್ಯಗಳು ಒಂದಾದಮೇಲೊಂದರಂತೆ ಮಾನವನಿಗೆ ಲಭ್ಯವಾಗಿವೆ. ಆದರೆ ಆ ಬುದ್ಧಿ ಇಂದು ಪ್ರಕೃತಿಯ ನಿಗೂಢತೆಯ ಹೃದಯ ಭೇದಿಸಲು ತಾನು ಅಸಮರ್ಥವೆಂದು ಒಪ್ಪಿಕೊಳ್ಳುತ್ತದೆ. ಏಕೆಂದರೆ ಆ ನಿಗೂಢತೆಗೂ ಮಿಗಿಲಾದ ಮತ್ತು ಗಾಢವಾದ ನಿಗೂಢತೆಯೊಂದಿದೆ—ಅದೇ ಮನುಷ್ಯ. ಲಿಂಕನ್ ಬಾರ್ನೆಟ್ ಹೇಳುತ್ತಾರೆ ('ದಿ ಯೂನಿವರ್ಸ್ ಅಂಡ್ ಡಾ|| ಐನ್‌ಸ್ಟೈನ್,' ಮೆಂಟರ್ ಆವೃತ್ತಿ, ಪು. ೧೨೬-೨೭) :

*ವೈಜ್ಞಾನಿಕ ವಿಚಾರಶೀಲತೆಯ ಬೆಳವಣಿಗೆಯಲ್ಲಿ ಒಂದು ಸಂಗತಿ ಸುಸ್ಪಷ್ಟವಾಗಿದೆ: ಭೌತಿಕ ಪ್ರಪಂಚದಾಚೆಗಿನ ನಿಗೂಢತೆಯತ್ತ ಗಮನ ಸೆಳೆಯದಂಥ ಭೌತ ಜಗತ್ತಿನ ರಹಸ್ಯವಾವುದೂ ಇಲ್ಲ. ಬುದ್ಧಿಶಕ್ತಿಯ ಎಲ್ಲ ಹೆದ್ದಾರಿಗಳೂ, ಸಿದ್ಧಾಂತ ಮತ್ತು ಕಲ್ಪನೆಯ ಕಿರುದಾರಿಗಳೂ, ಅಂತಿಮವಾಗಿ ಮಾನವನನ್ನೊಯ್ಯುವುದು ಒಂದು ಮಹಾ ಆಳಕ್ಕೆ ; ಅದನ್ನು ಅಳೆಯಲು ಮಾನವನಿಗೆ ಸಾಧ್ಯವಾಗಿಲ್ಲ. ಏಕೆಂದರೆ ಮಾನವನ ಅಸ್ತಿತ್ವದ ಸ್ಥಿತಿ, ಅವನ ಇತಿಮಿತಿ ಮತ್ತು ನಿಸರ್ಗದ ಸಂಪರ್ಕ-ಇವೇ ಅವನಿಗೆ ಬಂಧನವಾಗಿವೆ. ತನ್ನ ದಿಗಂತಗಳನ್ನು ಅವನು ವಿಸ್ತರಿಸಿದಷ್ಟೂ, ನೀಲ್ಸ್ ಬೋರ್ ಹೇಳುವಂತೆ "ಅಸ್ತಿತ್ವದ ಮಹಾನಾಟಕದಲ್ಲಿ ನಾವು ಪ್ರೇಕ್ಷಕರು, ಪಾತ್ರಧಾರಿಗಳು ಎರಡೂ ಆಗಿದ್ದೇವೆ. ಹೀಗಾಗಿ ಮಾನವ ತಾನೇ ಒಂದು ಮಹಾರಹಸ್ಯವಾಗಿದ್ದಾನೆ" ಎಂಬ ಸಂಗತಿ ಹೆಚ್ಚು ಸ್ಪಷ್ಟವಾಗುತ್ತದೆ. ತಾನಿರುವ ವಿಶಾಲ ವಿಶ್ವವನ್ನು ಅವನು ಅರಿಯಲಾರ ; ಏಕೆಂದರೆ ಅವನು ತನ್ನನ್ನೇ ಅರಿಯಲಾರ. ತನ್ನ ಜೈವಿಕ ಕಾರ್ಯವಿಧಾನಗಳ ಬಗ್ಗೆ ಅವನ ಗ್ರಹಿಕೆ ಅತ್ಯಲ್ಪ. ತನ್ನ ಸುತ್ತಲಿನ ಪ್ರಪಂಚವನ್ನು ತಿಳಿಯಲು, ವಿವೇಚಿಸಿ ನೋಡಲು, ಕನಸು ಕಾಣಲು ತನಗಿರುವ ಅಸಮಾನ ಸಾಮರ್ಥ್ಯ ಕುರಿತು ಅವನ ತಿಳಿವಳಿಕೆ ಇನ್ನೂ ಕಮ್ಮಿ. ತನ್ನನ್ನು ತಾನು ಮೀರಿ ಮನಸ್ಸಿನ ಕಾರ್ಯದಲ್ಲಿ ತನ್ನನ್ನು ತಾನು ಅರಿಯಬಲ್ಲಂಥ ಉದಾತ್ತ, ನಿಗೂಢತಮ ಗುಣ ತನ್ನಲ್ಲಿರುವುದು ಅವನಿಗೆ ಗೊತ್ತೇ ಇರದು.*

## ೧೨. ವೇದಾಂತ ಮತ್ತು ಮಾನವನ ರಹಸ್ಯ

ಭಾರತೀಯ ವಿಚಾರಧಾರೆಯಲ್ಲಿ ವಿಜ್ಞಾನ ಮತ್ತು ಧರ್ಮ ಸಂಧಿಸುವುದು ಇಲ್ಲಿ. ವಸ್ತುಗಳ ಬಾಹ್ಯ ಲಕ್ಷಣಗಳನ್ನು ತಿಳಿಯಬಯಸುವ ಭೌತವಿಜ್ಞಾನಗಳು ಬಿಟ್ಟಲ್ಲಿಂದ ಮುಂದಕ್ಕೆ ಅಸ್ತಿತ್ವದ ನಿಗೂಢತೆಯನ್ನು ಧರ್ಮವು ಪರಿಶೋಧಿಸುತ್ತದೆಂದು ವೇದಾಂತ ಹೇಳುತ್ತದೆ. 'ಮನುಷ್ಯನ ಉದಾತ್ತ, ನಿಗೂಢತಮ ಗುಣ' ಎಂದು ಲಿಂಕನ್ ಬಾರ್ನೆಟ್ ಹೇಳುವ ರಹಸ್ಯವನ್ನು ಅರಿತು ಬಾರ್ನೆಟ್ ಹೇಳುವಂತೆ ತನ್ನ ಅಸ್ತಿತ್ವದ ಸ್ಥಿತಿಯಿಂದಲೇ ಬಂಧಿತನಾಗಿರುವ ಮಾನವನಿಗೆ ಆಧ್ಯಾತ್ಮಿಕ ಮುಕ್ತಿ ನೀಡುವುದೇ ಧರ್ಮವಿಜ್ಞಾನದ ಉದ್ದೇಶ. ತನ್ನ ಪರಿಮಿತ ವ್ಯಕ್ತಿತ್ವದ ಅಪರಿಮಿತ ವ್ಯಾಪ್ತಿಯನ್ನು ಅರಿತುಕೊಳ್ಳುವುದರ ಮೂಲಕ ಮಾನವ ಇದನ್ನು ಸಾಧಿಸುತ್ತಾನೆ. ಬಂಧಿತ ದೇವರೇ ಮನುಷ್ಯ, ವಿಮುಕ್ತ ಮಾನವನೇ ದೇವರೆಂದು ಶ್ರೀ ರಾಮಕೃಷ್ಣ ಪರಮಹಂಸರು ಹೇಳಿದ್ದಾರೆ. ಅಂತರಂಗ ಕುರಿತಾದ ಈ ಪರಿಶೋಧನೆಯ ವಿಧಾನ, ಅದರ ಫಲವಾಗಿ ನಿಯತಿ ಮತ್ತು ಭಯದಿಂದ ಮುಕ್ತರಾಗುವ ಬಗೆಯನ್ನು ಒಂದು ಉಪನಿಷತ್ತಿನಲ್ಲಿ (ಕಠೋಪನಿಷತ್, ೪. I) ಪರಿಣಾಮಕಾರಿಯಾಗಿ

ನಿರೂಪಿಸಲಾಗಿದೆ :

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ
ತಸ್ಮಾತ್ ಪರಾನ್ ಪಶ್ಯತಿ ನಾನ್ತರಾತ್ಮನ್ ;
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್
ಆವೃತ್ತಚಕ್ಷುಃ ಅಮೃತತ್ವಮಿಚ್ಛನ್

*ಸ್ವಯಂಭು ಇಂದ್ರಿಯಗಳನ್ನು (ಬುದ್ಧಿಯೂ ಸೇರಿ) ಬಹಿರ್ಮುಖವಾಗಿ ನೋಡುವ ಪ್ರವೃತ್ತಿಯುಳ್ಳಂಥ ಒಂದು ದೋಷದೊಂದಿಗೆ ಸೃಷ್ಟಿಸಿದ. ಆದ್ದರಿಂದ ಜೀವರು ಬಾಹ್ಯದಲ್ಲಿನ ವಿನಾಶಿ ಸಂಗತಿಗಳನ್ನು ಅರಿಯುವರೇ ವಿನಾ ಒಳಗಿರುವ ಅಂತರಾತ್ಮನನ್ನು ಅರಿಯುವುದಿಲ್ಲ. ಅಮೃತತ್ವವನ್ನು ಬಯಸಿದ ಒಬ್ಬ ಧೀರ, ಬುದ್ಧಿಶಾಲಿ ಅನ್ವೇಷಕ ತನ್ನ ಇಂದ್ರಿಯಶಕ್ತಿಗಳನ್ನು (ಬುದ್ಧಿಯನ್ನೂ ಕೂಡ) ಅಂತರ್ಮುಖಿಯಾಗಿಸಿ ಒಳಗಿನ ಆತ್ಮವನ್ನು ಸಾಕ್ಷಾತ್ಕರಿಸಿಕೊಂಡ.*

ಉಪನಿಷತ್ತುಗಳ ಋಷಿಗಳು ವೈಜ್ಞಾನಿಕ ಪರಿಷ್ಕಾರದೊಂದಿಗೆ ಈ ವಿಧಾನವನ್ನು ಅನುಸರಿಸಿದರು. ಬುದ್ಧನಿಂದ ಶ್ರೀ ರಾಮಕೃಷ್ಣ ಪರಮಹಂಸರವರೆಗೆ ಆಧ್ಯಾತ್ಮಿಕ ಅನ್ವೇಷಕರ ಒಂದು ಪರಂಪರೆಯೇ ಅದೇ ಮಾರ್ಗದ ಯುಕ್ತತೆಯನ್ನು ಎತ್ತಿಸಾರಿತು. ಈ ವಿಧಾನದ ಫಲವನ್ನು ಉಪನಿಷತ್ತುಗಳ ಒಂದು ಅಮೋಘ ವಚನ ಸೊಗಸಾಗಿ ನಿರೂಪಿಸಿದೆ. ಅದನ್ನು ಸ್ವಾಮಿ ವಿವೇಕಾನಂದರು ೧೮೯೩ರಲ್ಲಿ ಚಿಕಾಗೋದಲ್ಲಿ ಧರ್ಮಗಳ ಪರಿಷತ್ತಿನಲ್ಲಿ ಭಾಷಣ ಮಾಡಿದಾಗ ಉದ್ಘೋಷಿಸಿದರು ('ಕಂಪ್ಲೀಟ್ ವರ್ಕ್ಸ್', ಸಂ. ೧, ಹನ್ನೊಂದನೆಯ ಮುದ್ರಣ, ಪು. ೧೧) :

ಶೃಣ್ವಂತು ವಿಶ್ವೇ ಅಮೃತಸ್ಯಪುತ್ರಾಃ ಆಯೇ ಧಾಮಾನಿ ದಿವ್ಯಾನಿ ತಸ್ಥುಃ ;
ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್ ;
ತಮೇವ ವಿದಿತ್ವಾ ಅತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ

*ಅಮೃತಪುತ್ರರೇ, ಕೇಳಿ ; ಮೇಲಣ ಲೋಕಗಳಲ್ಲಿರುವವರೂ ಕೇಳಿ. ಎಲ್ಲ ಕತ್ತಲಿನಾಚೆ, ಸೂರ್ಯನಂತೆ ಪ್ರಕಾಶಿಸುವ ಮಾನವ ವ್ಯಕ್ತಿತ್ವದ ಅನಂತ ಪರಿಮಾಣವನ್ನು ನಾನು ಅರಿತುಕೊಂಡಿದ್ದೇನೆ.*

*ಪರಮಾತ್ಮನನ್ನು ಅರಿತುಕೊಳ್ಳುವುದರಿಂದ ಮಾತ್ರ ಮನುಷ್ಯ ಪರಿಮಿತಿಯನ್ನೂ ಸಂತತವಾದ ಮರಣವನ್ನೂ ಜಯಿಸಬಲ್ಲ, ಸಾಫಲ್ಯದ ಗುರಿಸಾಧನೆಗೆ ಬೇರೆ ದಾರಿಯೇ ಇಲ್ಲ.*

### ೧೩. ವಿಜ್ಞಾನ ಮತ್ತು ಧರ್ಮದ ಸಂಯೋಜನೆ

ಪ್ರಾಚೀನ ವೇದಾಂತದಲ್ಲಿ ಆಧ್ಯಾತ್ಮಿಕವಾಗಿ ಹದಗೊಂಡ ಮಾನವನ ಬುದ್ಧಿಶಕ್ತಿಗೆ ಆಂತರಿಕ ಪ್ರಕೃತಿ ತನ್ನ ರಹಸ್ಯಗಳನ್ನು ನೀಡಿದೆ. ಅದರಿಂದ ಅವನು ಆಧುನಿಕ ಭೌತವಿಜ್ಞಾನಕ್ಕೆ ಬಿಡಿಸಲಾಗದ ಕಗ್ಗಂಟಾಗಿರುವ ಬಾಹ್ಯ ಪ್ರಕೃತಿಯ ರಹಸ್ಯವನ್ನು ಬಿಡಿಸಲು ಶಕ್ತನಾದುದಷ್ಟೇ ಅಲ್ಲ, ಬ್ರಹ್ಮ ಮತ್ತು ಆತ್ಮನ ಆಧ್ಯಾತ್ಮಿಕ ಏಕತೆಯಲ್ಲಿ ಬಾಹ್ಯ ಮತ್ತು ಅಂತರಂಗಗಳ, ವಸ್ತುಗಳ ಒಳಗು-ಹೊರಗುಗಳ ಐಕ್ಯತೆಯನ್ನು ಘೋಷಿಸಬಲ್ಲವನಾದ.

ಧರ್ಮವಿಜ್ಞಾನಕ್ಕೆ ವೇದಾಂತವು ಒದಗಿಸಿರುವ ನೀತಿ ನಿಯಮಗಳು ಅಂತರರಾಷ್ಟ್ರೀಯವೂ, ಎಲ್ಲರಿಗೂ ಅರ್ಥವಾಗುವಂಥವೂ ಆಗಿವೆ. ಅವುಗಳ ನೆರವಿನಿಂದ ಪ್ರಪಂಚದ ವಿವಿಧ ಧರ್ಮಗಳು ತಮ್ಮನ್ನು ತಾವೇ ಅರಿತುಕೊಳ್ಳಬಹುದು, ಪರಸ್ಪರರ ಧರ್ಮಗಳನ್ನು ಅರಿತುಕೊಳ್ಳಬಹುದು. ಭೌತ ವಿಜ್ಞಾನಗಳನ್ನು ಅರಿತುಕೊಳ್ಳಬಹುದು. ಎಲ್ಲ ಭೌತ ಅಥವಾ ಪ್ರತ್ಯಕ್ಷಪ್ರಮಾಣ ಜ್ಞಾನಕ್ಕೆ ಆಧುನಿಕ ವಿಜ್ಞಾನ ಸಲ್ಲಿಸಿರುವ ಸೇವೆಯೂ ಇದೆ.

## ೧೪. ಉಪಸಂಹಾರ

ವೇದಾಂತ ಅಥವಾ ಪ್ರಕೃತಿಯ ಅಂತರಂಗ ಅರಿಯಲು ವೈಜ್ಞಾನಿಕ ದೃಷ್ಟಿ ಮತ್ತು ಪ್ರಕೃತಿಯ ಬಾಹ್ಯಸ್ವರೂಪವನ್ನು ಅರಿಯಲು ವೈಜ್ಞಾನಿಕ ದೃಷ್ಟಿಕೋನವಾದ ಆಧುನಿಕ ವಿಜ್ಞಾನ—ಇವೆರಡರ ಸಂಘಟನೆಯು ಇಂದು ಮಾನವ ಜನಾಂಗದ ಸಾಫಲ್ಯಕ್ಕೆ ಪರಿಪೂರ್ಣ ಶಿಕ್ಷಣವೆನಿಸುತ್ತದೆ. ತನ್ನ ಆತ್ಮಕಥೆಯಲ್ಲಿ ಜ್ಯೋತಿರ್ಭೌತ ವಿಜ್ಞಾನಿ ಆರ್. ಎ. ಮಿಲಿಕನ್ ಹೇಳುತ್ತಾರೆ :

*ಪ್ರಥಮತಃ ಧರ್ಮದ ಸತ್ಯ, ಎರಡನೆಯದಾಗಿ ವಿಜ್ಞಾನದ ಸತ್ಯ ಅಥವಾ ಜ್ಞಾನ—ಇವು ಸಕಲ ಮಾನವ ಕಲ್ಯಾಣ ಮತ್ತು ಪ್ರಗತಿಗೆ ಆಧಾರವಾದ ಎರಡು ಸ್ತಂಭಗಳಾಗಿವೆಯೆಂದು ನನಗನ್ನಿಸುತ್ತದೆ. ವಿಜ್ಞಾನವನ್ನು ಬೆಳೆಸಲು ವಿಶ್ವವಿದ್ಯಾಲಯಗಳೂ, ಸಂಶೋಧನಾಲಯಗಳೂ ಇವೆ. ಆದರೆ ಎಲ್ಲರಿಗೂ ಒಂದು ಮಹೋನ್ನತ ಅವಕಾಶ ಮೊದಲನೆಯದರಲ್ಲಿದೆ.*

ಅನು : ಎಸ್. ಕೆ. ರಾಮಕೃಷ್ಣಮೂರ್ತಿ

೧೯

# ಕ್ರೈಸ್ತರು ಮತ್ತು ಹಿಂದೂಗಳ ಮರೀಯ ಆಧ್ಯಾತ್ಮಿಕತೆ

ಬೇಲೂರು ರಾಮಕೃಷ್ಣ ಮಠ ಸಂಸ್ಥೆಯ ಸ್ವಾಮಿ ರಂಗನಾಥಾನಂದರು ನೆದರ್‌ಲ್ಯಾಂಡಿನ ಆಮ್‌ಸ್ಟರ್‌ಡ್ಯಾಮ್ ಬಳಿಯ ಆಮ್‌ಸ್ಟೆಲ್ ವೀನ್ ಎಂಬಲ್ಲಿನ ರೋಮನ್ ಕ್ಯಾಥಲಿಕ್ ಕಾನ್ವೆಂಟಿನ ಕಾರ್ಮೆಲೈಟ್ ಪಂಥದ ಸಂನ್ಯಾಸಿನಿಯರ ಜತೆ ನಡೆಸಿದ ಒಂದು ಪ್ರಶ್ನೋತ್ತರ ಲಿಖಿತ ರೂಪ ಇದು. ೧೯೭೨ನೆಯ ಸೆಪ್ಟೆಂಬರ್ ೧೫ರಂದು ಈ ಕಾರ್ಯಕ್ರಮ ನಡೆಯಿತು. ಆಗ ನೆದರ್‌ಲ್ಯಾಂಡ್ ಮತ್ತು ಬೆಲ್ಜಿಯಮ್ ದೇಶಗಳಲ್ಲಿ ಸ್ವಾಮೀಜಿ ಮೂರು ವಾರಗಳ ಕಾಲ ತಮ್ಮ ವಾರ್ಷಿಕ ಉಪನ್ಯಾಸ ಪ್ರವಾಸದಲ್ಲಿದ್ದಾಗ ಅವರು ಆಮ್‌ಸ್ಟೆಲ್‌ವೀನ್ ಕಾನ್ವೆಂಟಿನಲ್ಲಿ ಅತಿಥಿಯಾಗಿ ಮೂರು ದಿನ ತಂಗಿದ್ದರು. ಮೇಲೆ ಹೇಳಿದ ಪ್ರಶ್ನೋತ್ತರ ಗೋಷ್ಠಿಯಲ್ಲಿ ಭಾಗಿಯಾಗಿದ್ದ ಆಮಸ್ಟರ್‌ಡ್ಯಾಮ್ ವಿಶ್ವವಿದ್ಯಾನಿಲಯದ ಪ್ರಾಣಿವರ್ತನೆ (Animal Behaviour) ಎಂಬ ವಿಷಯದ ಅಧ್ಯಯನ ವಿಭಾಗದ ಪ್ರೊಫೆಸರ್ ಜೊ. ವಾನ್ ಆರ್ಶೋೀವನ್‌ರವರು ದುಭಾಷಿ ಪಾತ್ರ ವಹಿಸಿದರು. ಅವರೊಡನೆ ಅವರ ಪತ್ನಿ ಶ್ರೀಮತಿ ಹರ್ಮ ಆರ್ಶೋೀವನ್‌ರೂ ಇದ್ದರು. ಇಬ್ಬರೂ ಈ ಹಿಂದೆಯೇ ನೆದರ್‌ಲ್ಯಾಂಡಿನ ಅರ್ನ್‌ಹೆಮ್ ಬಳಿಯ ಊಸ್ಟರ್ ಬೀಕ್‌ನಲ್ಲಿ ನಡೆದಿದ್ದ ಒಂದು ವಾರದ ಆಧ್ಯಾತ್ಮಿಕ ಶಿಬಿರಕ್ಕೂ ಬಂದಿದ್ದರು. ಅಲ್ಲಿ ಸ್ವಾಮೀಜಿ ನಡೆಸಿದ ಉಪನಿಷತ್ತುಗಳು ಹಾಗೂ ಭಗವದ್ಗೀತೆ ಕುರಿತ ಅಧ್ಯಯನ ಶಿಬಿರದಲ್ಲಿ ಸುಮಾರು ೭೦ ಮಂದಿ ಭಾಗವಹಿಸಿದರು. ಕಾನ್ವೆಂಟಿನ ಸಂನ್ಯಾಸಿನಿಯರಲ್ಲಿ ಒಬ್ಬ ಸೋದರಿ ಮಾಡಿದ ಸ್ವಾಗತ ಭಾಷಣದ ನಂತರ ಸ್ವಾಮೀಜಿ ಪ್ರಾಸ್ತಾವಿಕವಾಗಿ ಹೀಗೆ ನುಡಿದರು :

ಸೋದರಿಯರೇ—ನನ್ನನ್ನು ಈ ಮೂರು ದಿನಗಳ ಕಾಲ ನಿಮ್ಮ ಜೊತೆ ಇರಲು ಆಹ್ವಾನಿಸಿದುದಕ್ಕೆ ಇಷ್ಟೊಂದು ಪ್ರೀತಿ ವಿಶ್ವಾಸಗಳನ್ನು ತೋರಿದುದಕ್ಕೆ ನಿಮಗೆ ನಾನು ಆಭಾರಿಯಾಗಿದ್ದೇನೆ. ಹೋದ ವರ್ಷ, ಅಂದರೆ ೧೯೭೧ನೆಯ ಸೆಪ್ಟೆಂಬರ್‌ನಲ್ಲಿ, ನಾನು ಕೇವಲ ಸ್ವಲ್ಪ ಕಾಲ ಇಲ್ಲಿಗೆ ಬಂದಿದ್ದೆ. ತದನಂತರ ನಾನು ಭಾರತಕ್ಕೆ ಹಿಂತಿರುಗುವ ದಾರಿಯಲ್ಲಿ ಪ್ಯಾರಿಸ್, ವಿಯನ್ನಾ, ಟ್ರಯಿಸ್ಟ್ (ಇಟಲಿ, ರೋಮ್ ಮತ್ತು ಆಥೆನ್ಸ್‌ಗಳಿಗೆ ಭೇಟಿ ಇತ್ತೆ. ಆ ಅವಧಿಯಲ್ಲಿ ನಾನು ನನ್ನ ಮುಂಬರುವ ಗ್ರಂಥ—'ಪ್ರವಾಸಿ ವೀಕ್ಷಿಸಿದ ಪ್ರಪಂಚ' (*A Pilgrim looks at the World*)ಕ್ಕಾಗಿ ಹಸ್ತಪ್ರತಿ ಸಿದ್ಧಪಡಿಸುತ್ತ ಕೆಲವು ತಿಂಗಳು ಕಳೆದೆ. ಈ ನನ್ನ ಪುಸ್ತಕದಲ್ಲಿ ನಾನು ಪ್ರವಾಸ ಮಾಡಿದ ೫೦ ಕಮ್ಯುನಿಸ್ಟ್ ಹಾಗೂ ಕಮ್ಯುನಿಸ್ಟೇತರ ದೇಶಗಳನ್ನು ಕುರಿತ ನನ್ನ ಟೀಕೆ ಟಿಪ್ಪಣಿ ಅನಿಸಿಕೆಗಳನ್ನೊಳಗೊಂಡ ಕಥನ ಇದೆ. ಈ ಗ್ರಂಥ ಕ್ರಮವಾಗಿ ೬೦೦ ಪುಟಗಳ, ೮೦೦ ಪುಟಗಳ ಎರಡು ಸಂಪುಟಗಳಾಗಿವೆ. ಇದರಲ್ಲಿ ಕಳೆದ ಬಾರಿ ನಾನು ನಿಮ್ಮನ್ನು ಭೇಟಿಯಾದಾಗಿನ ವಿವರಗಳು (ಊಟದ ಸಮಯದಲ್ಲಿ ನಮ್ಮ ನಡುವೆ ನಡೆದ ಸ್ವಾರಸ್ಯಕರವಾದ ಸಂಭಾಷಣೆಯೂ ಸೇರಿದಂತೆ) ನಿರೂಪಿತವಾಗಿವೆ. ೧೯೬೧ರಲ್ಲಿ ನಾನು ಇದೇ ದೇಶದಲ್ಲಿ ಭಾಷಣ ಮಾಡಲು ಪ್ರವಾಸ ಕೈಕೊಂಡಾಗಿನ ವರದಿಯೂ ಅದರಲ್ಲಿ ಇದೆ. ೧೯೭೭ರ ಕೊನೆಯ ಹೊತ್ತಿಗೆ ಈ ಪುಸ್ತಕ ಪ್ರಕಟವಾಗುವ ನಿರೀಕ್ಷೆ ಇದೆ.

ಚಿಲಿ ಗಣರಾಜ್ಯದ ಸ್ಯಾಂಟಿಯಾಗೊ ವಿಶ್ವವಿದ್ಯಾನಿಲಯದಲ್ಲಿ ೧೯೬೯ರ ಆಗಸ್ಟ್ ತಿಂಗಳಲ್ಲಿ ನಡೆದ ನನ್ನ ಭಾಷಣ ಕೇಳಲು ಹಲವಾರು ಕ್ಯಾಥಲಿಕ್ ಸಂನ್ಯಾಸಿನಿಯರು ಬಂದಿದ್ದರೆಂಬ ಸಂಗತಿ ನಿಮಗೆ ಆಸಕ್ತಿ ಉಂಟುಮಾಡಬಹುದು. ಆಗ ನಾನು ಉತ್ತರ ಹಾಗೂ ದಕ್ಷಿಣ ಅಮೆರಿಕಗಳಲ್ಲಿ ಭಾಷಣ ಮಾಡಲು ಪ್ರವಾಸ ಮಾಡುತ್ತಿದ್ದೆ. ಭಾಷಣವಾದ ಮೇಲೆ ಸಂನ್ಯಾಸಿನಿಯರಲ್ಲಿ ಒಂದು ಡಜನ್‌ಗಿಂತ ಹೆಚ್ಚು ಮಂದಿ ತಾವಾಗಿ ಮುಂದೆ ಬಂದು—ನೀವು ಕ್ರೈಸ್ತರು, ನಿಮ್ಮ ಪಾದ್ರಿ ಗುರುಗಳಿಗೆ ಮಾಡುತ್ತೀರಲ್ಲಾ ಹಾಗೆ—ನನ್ನ ಕೈಯನ್ನು ಎತ್ತಿಕೊಂಡು ಗೌರವಾದರಗಳಿಂದ ಮುತ್ತುಕೊಟ್ಟರು. ಉತ್ತರದ ಆಂಗ್ಲೊ ಅಮೆರಿಕನ್ನರಿಗಿಂತಲೂ ದಕ್ಷಿಣದ ಲ್ಯಾಟಿನ್ ಅಮೆರಿಕನ್ನರು, ಮತ್ತು ಆಂಗ್ಲೊ ಸ್ಯಾಕ್ಸನರು, ಡಚ್ಚರು, ಮತ್ತಿತರ ಐರೋಪ್ಯದೇಶಗಳವರಿಗಿಂತಲೂ ಐರೋಪ್ಯ ಲ್ಯಾಟಿನ್ನರಾದ ಇಟಲಿಯವರು ಸ್ಪೇನಿನವರು ಪೋರ್ಚುಗೀಸರು ಹೆಚ್ಚು ಭಾವಜೀವಿಗಳೆಂದು ನನಗೆ ಅನಿಸಿತು. ಅವರೊಂದಿಗೆ ಹೋಲಿಸಿದರೆ ಬ್ರಿಟಿಷರು, ಡಚ್ಚರು ಜರ್ಮನರು ಹೆಚ್ಚು ಶುಷ್ಕ ಹಾಗೂ ಭಾವರಹಿತರಾಗಿ ಕಾಣುತ್ತಾರೆ. ಡಚ್ಚರನ್ನು 'ಮಂಜುಗಡ್ಡೆಯ ಪೆಟ್ಟಿಗೆ'ಗಳೆಂದು ಕರೆಯುವುದೂ ಉಂಟು. ಹೆಚ್ಚಾಗಿ ಇದಕ್ಕೆ ಕ್ಯಾಲ್ವಿನ್ ಹಾಗೂ ಲೂಥರ್‌ರ ಪ್ರಭಾವ ಕಾರಣ. ನಿಮ್ಮ ಕ್ಯಾಥಲಿಕ್ ಧರ್ಮದಲ್ಲಿ ಹೆಚ್ಚು ಭಾವನಾಪರತೆ ಇದೆ—ಅದು ನಿಮ್ಮಲ್ಲಿ ದೈವಪ್ರೇಮ ಹಾಗೂ ಮಾನವಪ್ರೇಮದ ರೂಪವಾಗಿ ಅಭಿವ್ಯಕ್ತವಾಗಿದೆ. ಬುದ್ಧಿಗಿಂತಲೂ ಹೃದಯ ಹೆಚ್ಚು ಮುಖ್ಯವಾದುದು. ದೈವಭಕ್ತಿ, ಮಾನವಪ್ರೇಮ—ಇವುಗಳಿಗೆ ಹೃದಯವೇ ಕೇಂದ್ರ. ಭಾರತದಲ್ಲಿ ಇದನ್ನೇ ನಾವು ಭಕ್ತಿಯೆಂದು ಹೇಳುತ್ತೇವೆ. ನಮ್ಮ ಹೃದಯದಲ್ಲಿ ದೈವಪ್ರೇಮ ತುಂಬಿದಾಗ ಅದನ್ನು ನಾವು ಮಾನವಕೋಟಿಯತ್ತ ಹಾಯಿಸಬಹುದು. ಕ್ರೈಸ್ತಧರ್ಮದ ಕ್ಯಾಥಲಿಕ್ ಮತ ಒತ್ತಿ ಹೇಳುವುದು ಇದನ್ನೇ. ಭಾರತದಲ್ಲಿ ಪ್ರಬೋಧವಾಗಿರುವ ಈ ಭಕ್ತಿಯ ಪರಿಕಲ್ಪನೆಯನ್ನು ನೀವು ನಿಮ್ಮ ಕಾನ್ವೆಂಟ್ ಪುಸ್ತಕ ಭಂಡಾರದಲ್ಲಿ ಇರುವ ಸ್ವಾಮಿ ವಿವೇಕಾನಂದರ 'ಭಕ್ತಯೋಗ' ಎಂಬ ಪುಸ್ತಕದ ಡಚ್ ಆವೃತ್ತಿಯಲ್ಲಿ ನೋಡಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ ನಿಮ್ಮ ಕ್ಯಾಥಲಿಕ್ ಧರ್ಮ ಒಂದರಲ್ಲೇ ಈ ಭಕ್ತಿಯ ಪರಿಕಲ್ಪನೆ ಸಂಪೂರ್ಣ ಅಭಿವ್ಯಕ್ತಿ ಪಡೆದಿದೆ ಎನ್ನಬೇಕು. ಆದರೆ ಈ ಆಧುನಿಕ ಕಾಲದಲ್ಲಿ ಕ್ಯಾಥಲಿಕ್‌ರೂ ಸಹ ಈ ಭಕ್ತಿಭಾವನೆಯನ್ನು ಕಳೆದುಕೊಳ್ಳುತ್ತಿದ್ದಾರೆ. ಆದರೆ ಅವರು ಅದನ್ನು ಮತ್ತೆ ಗಳಿಸಿಕೊಂಡು ಉಳಿಸಿಕೊಂಡು ತಮ್ಮ ಹಾಗೂ ಇತರರ ಆಧ್ಯಾತ್ಮಿಕ ಜೀವನವನ್ನು ಶ್ರೀಮಂತಗೊಳಿಸಬೇಕು. ನನ್ನ ಪ್ರಕಾರ, ಏಸುಕ್ರಿಸ್ತನು ಬೋಧಿಸಿದ ಎರಡು ಮಹಾತತ್ತ್ವಗಳೆಂದರೆ : "ಹೃತ್ಪೂರ್ವಕವಾಗಿ ಆತ್ಮಪೂರ್ವಕವಾಗಿ ನಿನ್ನ ದೇವರನ್ನು ಪ್ರೀತಿಸು ; ನಿನ್ನ ನೆರೆಯವರನ್ನು ನಿನ್ನ ಹಾಗೆಯೇ ಪ್ರೀತಿಸು." ಯೇಸು ತನ್ನ ಹೇಳಿಕೆಯನ್ನು ಮುಕ್ತಾಯ ಮಾಡಿದುದು ಹೀಗೆ : "ಈ ಎರಡು ಸೂತ್ರಗಳೇ ಸಕಲ ಧರ್ಮಗಳಿಗೆ ಪ್ರವಾದಿಗಳಿಗೆ ಆಧಾರವಾಗಿವೆ."

ಈ ಎರಡೂ ಸೂತ್ರಗಳೂ ಸೇರಿ ಕೇವಲ ಒಂದಲ್ಲ—ಕ್ರೈಸ್ತಧರ್ಮವನ್ನು ರೂಪಿಸಿವೆ. ಆದರೆ ಆಧುನಿಕ ಯುಗದಲ್ಲಿ ಮೊದಲನೆಯ ಸೂತ್ರವನ್ನು ಉಪೇಕ್ಷಿಸಲಾಗಿದೆ ; ಬಹುತೇಕ ಮರತೇಬಿಡಲಾಗಿದೆ. ಆಧುನಿಕ ಮಾನವನಿಗೆ ದೇವರ ಮೇಲಿನ ಪ್ರೀತಿ ಎಂದರೆ ಏನೆಂಬುದೇ ಅರ್ಥವಾಗಿಲ್ಲ. ಆದರೆ ಅವನಲ್ಲಿನ್ನೂ ಮನುಷ್ಯನ ಮೇಲಿನ ಪ್ರೇಮ ಸ್ವಲ್ಪ ಮಾತ್ರ ಉಳಿದಿದೆ. ಅಮೆರಿಕ ಸಂಸ್ಥಾನಗಳ ಹಲವು ಚರ್ಚುಗಳಲ್ಲಿ—ಅದರಲ್ಲಿ ಕ್ಯಾಥಲಿಕ್ ಚರ್ಚುಗಳೂ ಸಹ ಸೇರಿವೆ—ದೇವರನ್ನು ಕುರಿತಾಗಲಿ, ದೇವರ ಮೇಲಿನ ಪ್ರೀತಿಯ ಬಗ್ಗೆಯಾಗಲಿ ಉಪದೇಶ ನಡೆಯುವುದು ತೀರಾ ವಿರಳ. ಹಲವೆಡೆ ಪಾದ್ರಿ (ಗುರು)ಗಳು ಹೆಚ್ಚಾಗಿ ಮಾನವಪ್ರೇಮ ಮತ್ತು ಮಾನವ ಸೇವೆ ಕುರಿತು ಉಪದೇಶ ನೀಡುತ್ತಾರೆ —ಇದನ್ನೇ ಅವರು ಸಾಮಾಜಿಕ ಅವೇಷ್ಟನ (involvement) ಎನ್ನುವುದುಂಟು. ಸರಿ, ಒಳ್ಳೆಯದು. ಆದರೆ ಮನುಷ್ಯ ಮತ್ತು ಅವನ ಸಮಸ್ಯೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಅವರು ದೇವಸ್ಥಾನ

–ಚರ್ಚುಗಳಿಗೆ ಹೋಗುವ ಅಗತ್ಯವೇ ಇಲ್ಲ. ಇದರಲ್ಲಿ ಅವರಿಗೆ ನೆರವಾಗಲು ಅಸಂಖ್ಯಾತ ನಾಗರಿಕ ಮತ್ತು ಸಾಮಾಜಿಕ ಸಂಸ್ಥೆಗಳಿವೆ. ಜನರು ಧರ್ಮಕ್ಕೆ ಮೊರೆಹೋಗುವುದು ದೇವರ ಕುರಿತ ಜ್ಞಾನ ಹಾಗೂ ಪ್ರೇಮವನ್ನು ಗಳಿಸಲೆಂದೇ. ಅಂಥ ಆ ಜ್ಞಾನ ಹಾಗು ಪ್ರೇಮಗಳ ಮೂಲಕ ಮಾನವರ ಬಗ್ಗೆ ಇನ್ನೂ ಹೆಚ್ಚು ಗಾಢ ಕಾಳಜಿ ಬೆಳೆಸಿಕೊಳ್ಳುವುದು ಅವರ ಉದ್ದೇಶ. ಆದರೆ ಧರ್ಮ ಮತ್ತು ಧಾರ್ಮಿಕ ಸಂಸ್ಥೆಗಳಾದ ಗುಡಿ-ಇಗರ್ಜಿಗಳು ಮನುಷ್ಯನಿಗೆ ಈ ತೆರನಾದ ಮೂಲಭೂತ ಆಧ್ಯಾತ್ಮಿಕ ಪರಿಪುಷ್ಟಿ ಒದಗಿಸದೆ ಹೋದರೆ ಅವು ಅರ್ಥಹೀನವಾಗುತ್ತವೆ, ಅನಗತ್ಯವೆನಿಸಿಕೊಳ್ಳುತ್ತವೆ. ಇದೇ ಇಂದು ನಮ್ಮ ಗುಡಿ-ಇಗರ್ಜಿಗಳು ಮತ ಧರ್ಮಗಳು ಎದುರಿಸುತ್ತಿರುವ ಸಮಸ್ಯೆ.

ಒಬ್ಬ ಸಂನ್ಯಾಸಿನಿ : ನಾನೊಂದು ಪ್ರಶ್ನೆ ಕೇಳಬಹುದೆ ?

ಸ್ವಾಮೀಜಿ : ಓಹೊ, ಅಗತ್ಯವಾಗಿ. ಈ ಸಭೆ ಸೇರಿರುವ ಉದ್ದೇಶವೇ ಅದು. ನಾನು ಭಾರತದಲ್ಲಿ ವಿದೇಶಗಳಲ್ಲಿ ನಾನಾ ಕಡೆ ಪ್ರವಾಸ ಮಾಡುವಾಗ, ಖಾಸಗಿ ಗೃಹಗಳಲ್ಲಿ ಅಥವಾ ಸಾರ್ವಜನಿಕ ಭಾಷಣ ಸಭೆಗಳ ಕೊನೆಯಲ್ಲಿ ಇಂಥ ಪ್ರಶ್ನೋತ್ತರ ಕಾರ್ಯಕ್ರಮಗಳು ಹಲವು ಬಾರಿ ನಡೆದಿವೆ. ಇಂಥ ಖಾಸಗಿ ಸಭೆಗಳಲ್ಲಿ ಸಾರ್ವಜನಿಕ ಕೂಟಗಳಿಗಿಂತ ಹೆಚ್ಚು ಆಪ್ತವೂ ಅನೌಪಚಾರಿಕವೂ ಆದ ವಾತಾವರಣವಿರುತ್ತದೆ.

ಕಳೆದ ನಲವತ್ತೈದು ವರ್ಷಗಳ ನಮ್ಮ ಮಠ-ಸಂಸ್ಥೆಯಲ್ಲಿನ ನನ್ನ ಜೀವನಾವಧಿಯಲ್ಲಿ ನಾನು ಕ್ರೈಸ್ತಧರ್ಮವನ್ನು ಅತ್ಯಂತ ದೃಢನಿಷ್ಠೆಯಿಂದ ಅಧ್ಯಯನ ಮಾಡಿದ್ದೇನೆ. ನಾನು 'ಹೊಸ ಒಡಂಬಡಿಕೆ' (The New Testament)ಯನ್ನು ಹಲವಾರು ಬಾರಿ ಓದಿರಲಿಕ್ಕೆ ಸಾಕು ; ಅದೇ ರೀತಿ ನಾನು ಹಲವು ಕ್ರೈಸ್ತ ಸಂತರ ಜೀವನ ಚರಿತ್ರೆಗಳನ್ನೂ ಓದಿದ್ದೇನೆ. ಉದಾಹರಣೆಗೆ ಅವಿಲಾದ ಸಂತ ಥೆರೆಸಾ, ಶಿಲುಬೆಯ ಸಂತ ಜಾನ್, ಅಸಿಸಿಯ ಸಂತ ಫ್ರಾನ್ಸಿಸ್ ಮಾಸ್ಟರ್ ಎಕ್‌ಹಾರ್ಟ್ ಮತ್ತು ಸಂತ ಬರ್ನಾರ್ಡ್‌ರ ಜೀವನಗಳು. ಥಾಮಸ್ ಕೆಂಪಿಸ್‌ರ 'ದಿ ಇಮಿಟೇಷನ್ ಆಫ್ ಕ್ರೈಸ್ಟ್' ಮತ್ತು ಬ್ರದರ್ ಲಾರೆನ್ಸ್‌ರ, ಆ ಪುಟ್ಟ ಪುಸ್ತಕ 'ದಿ ಪ್ರಾಕ್ಟಿಸ್ ಆಫ್ ದಿ ಪ್ರೆಸೆನ್ಸ್ ಆಫ್ ಗಾಡ್' ಮುಂತಾದವನ್ನು ಓದಿ ಅನನ್ಯ ಸ್ಫೂರ್ತಿ ಪಡೆದಿದ್ದೇನೆ. ಅವನ್ನು ಹಲವಾರು ಹಿಂದೂಗಳೂ ಓದಿ ಅವುಗಳಲ್ಲಿನ 'ಆಧ್ಯಾತ್ಮಿಕ ಆಹಾರ' ಅಥವಾ ಮೋಕ್ಷಸಾಧನವನ್ನು ಗ್ರಹಿಸಿದ್ದಾರೆ, ಮತಸಿದ್ಧಾಂತದ ಪಾಷಾಣವನ್ನಲ್ಲ. ಬ್ರದರ್ ಲಾರೆನ್ಸ್‌ನ ಪುಸ್ತಕದ ೪೦೦ ಪ್ರತಿಗಳನ್ನು ನಾನೇ ಒಮ್ಮೆ ಜನರಿಗೆ ಪುಕ್ಕಟೆ ಹಂಚಿದ್ದೇನೆ. ಕ್ರೈಸ್ತಮಠದಲ್ಲಿ ಅಡಿಗೆಯವನಾಗಿದ್ದ ಬ್ರದರ್ ಲಾರೆನ್ಸ್ ತಾನು ಅಡಿಗೆ ಮನೆಯಲ್ಲಿ ದುಡಿಯುತ್ತಾ ಊಟ ಬಡಿಸುತ್ತಿರುವಾಗ ಸಹ, ಪ್ರಭು ಭೋಜನ ಸಂಸ್ಕಾರದ ವೇಳೆಯಲ್ಲಿ ಮಂಡಿಯೂರಿ ನಮಿಸುವಾಗ ಎಷ್ಟು ಕಟ್ಟುಗ್ರವಾಗಿ ಭಗವದ್ ಆವೇಶಪೂರ್ಣನಾಗಿರುತ್ತಿದ್ದನೋ ಅಷ್ಟೇ ಉದ್ವಿಗ್ನನಾಗಿರುತ್ತಿದ್ದೆನೆಂದು ಹೇಳಿಕೊಂಡಿದ್ದಾನೆ.

ಸಂನ್ಯಾಸಿನಿ : ನಾನು ನಿಮ್ಮನ್ನು ಕೇಳಬೇಕೆಂದಿರುವುದು ಅದನ್ನೇ. ಏಸು ಹೇಳಿದ ದೈವಪ್ರೇಮ, ಮಾನವ ಪ್ರೇಮ ಎಂಬ ಎರಡು ವಿಭಿನ್ನ ಬೋಧನೆಗಳ ಕುರಿತು ಪ್ರಸ್ತಾಪಿಸಿದ್ದೀರಿ. ಆದರೆ ನಾವು ಮನುಷ್ಯನನ್ನು, ಮಾನವ ಸಮಾಜವನ್ನು ಭಗವಂತನ ವಿಶಿಷ್ಟ ವಿಸ್ತರಣೆಯೆಂದು ಗ್ರಹಿಸಬಹುದೇ ?

ಸ್ವಾಮೀಜಿ : ಹೌದು. ಇದೇ ಹಿಂದೂಧರ್ಮವು ಒತ್ತಿ ಹೇಳುವ ವಿಶಿಷ್ಟ ಬೋಧನೆ—ಮಾನವನು ಭಗವಂತನ ತೇಜಃಕಣವೆಂಬ ಮಾತು. ಆಗ ಮಾನವ ಸೇವೆಯೇ ಭಗವದಾರಾಧನೆಯಾಗುತ್ತದೆ. ಮನುಷ್ಯನನ್ನು ಅವನ ನಿಜಸ್ವರೂಪದಲ್ಲಿ ಅಂದರೆ ಭಗವಂತನ ತೇಜಃಕಣವೆಂಬ ಗ್ರಹಿಕೆಯಲ್ಲಿ ವೀಕ್ಷಿಸಿದಾಗ ಮಾತ್ರ ಇದು ಸಾಧ್ಯವಾಗುತ್ತದೆಯೇ ಹೊರತು ಕೇವಲ ನಮ್ಮ ಇಂದ್ರಿಯ ಗ್ರಹಿಕೆಗೆ ಸಿಕ್ಕುವ ಸೀಮಿತ, ದುರ್ಬಲ, ಹಲವೊಮ್ಮೆ ಪಾಪಭರಿತ ಸಾವಯವ ಜೀವಿಯಾಗಿ ಅಲ್ಲ. 'ಹೊಸ ಒಡಂಬಡಿಕೆ' ಸಹ ಇದೇ ಸತ್ಯವನ್ನು ಘೋಷಿಸುತ್ತಾ 'ಸ್ವರ್ಗಸಾಮ್ರಾಜ್ಯವೆಂಬುದು ನಿನ್ನೊಳಗೇ ಇದೆ' ಎನ್ನುತ್ತದೆ.

ಸಂನ್ಯಾಸಿನಿ : ನನ್ನ ಮಾತಿನ ಇಂಗಿತ ಅದಲ್ಲ. ಹಾಗೆ ಹೇಳುವುದರಿಂದ, ನನ್ನ ಅಭಿಪ್ರಾಯದಲ್ಲಿ, ಮನುಷ್ಯನಿಗೆ ಸಲ್ಲಬೇಕಾದ ಪೂರ್ಣ ಬೆಲೆಯನ್ನು ನಾವು ಕೊಟ್ಟಂತಾಗುವುದಿಲ್ಲ ; ಅವನಲ್ಲಿರುವ ಸತ್ವವೆಂಬುದು ಕೇವಲ ದೈವದತ್ತವಾದುದೆಂದು ಭಾವಿಸಿದರೆ ಅವನು ಮೌಲ್ಯನಿರ್ಣಯದ ನಿಜವಾದ ಕೇಂದ್ರಬಿಂದುವಾಗುವುದಿಲ್ಲ.

ಸ್ವಾಮೀಜಿ : ಹಾಗಾದರೆ, ನೀವು ಭಗವಂತನ ಮಹಿಮೆಯ ಸಲುವಾಗಿಯೇ ಮಾನವ ಪ್ರೇಮ-ಸೇವೆಗಳಲ್ಲಿ ಉದ್ಯುಕ್ತರಾಗಿಬಿಡಿ. ವೇದಾಂತದ ಪ್ರಕಾರ ಭಗವಂತ-ಮಾನವರ ನಡುವಣ ಪರಸ್ಪರ ವಿರೋಧವೆಂಬ ಪ್ರಶ್ನೆಯೇ ಇಲ್ಲ—ಏಕೆಂದರೆ, ವೇದಾಂತ ಬೋಧಿಸುವ ದೇವರೆಂಬುವನು ವಿಶ್ವಾತೀತನಲ್ಲ, ಅವನು ಮನುಷ್ಯನಲ್ಲಿ ಅಂತರ್ಗತನಾಗಿದ್ದು, ವಿಶ್ವದ ಒಳಗೇ ಇದ್ದಾನೆ. ಮಾನವನ ನಿಜವಾದ ಮಹತ್ವವಿರುವುದು ಅವನೊಬ್ಬ ಸೀಮಿತ ಸಾವಯವ ಜೀವಿಯಾಗಿರುವುದರಲ್ಲಲ್ಲ. ಅವನು ಭಗವತ್ಸ್ವರೂಪಿಯಾದ ಆತ್ಮನಾಗಿರುವುದರಲ್ಲಿ.

ಸಂನ್ಯಾಸಿನಿ : ನಮ್ಮೊಳಗಿನ ಅತಿ ಆಳದಲ್ಲಿರುವ 'ನಾನು' (ಅಹಂ) ಎಂಬ ಕಲ್ಪನೆ ಹಾಗೂ 'ಆತ್ಮ' ಎರಡೂ ಒಂದೆಯೇ ?

ಸ್ವಾಮೀಜಿ : ಹೌದು, ಹಾಗೆ ಹೇಳಬಹುದು. ಭಗವಂತನು ನಮ್ಮೊಳಗಿನ ಆಳದ ಇರವಿಗೆ ಮಾತ್ರ ವೇದ್ಯನಾಗುತ್ತಾನೆ. ಅದರಿಂದಲೇ ಮಾನವರ ನಡುವಣ ಆಧ್ಯಾತ್ಮಿಕ ಏಕತೆಯೆಂಬುದು ಸಾಧ್ಯ. ಈ ಸಾಧ್ಯತೆಯೇ ನಮ್ಮ ನೈತಿಕಪ್ರಜ್ಞೆಗೆ ಸಮರ್ಥನೆ ಒದಗಿಸಬಲ್ಲದು, ಹೊಸ ಒಡಂಬಡಿಕೆಯಲ್ಲಿ ಸಹ 'ನೀವೇ ಭಗವಂತನ ಆವಾಸಸ್ಥಾನವಲ್ಲವೇ ?' 'ಸ್ವರ್ಗಸಾಮ್ರಾಜ್ಯವೆಂಬುದು ನಿನ್ನೊಳಗೇ ಇದೆ' ಎಂಬಿತ್ಯಾದಿ ಏಸುವಿನ ಮಾತುಗಳು ಕಾಣಸಿಗುತ್ತವೆ.

ಇನ್ನೊಬ್ಬ ಸಂನ್ಯಾಸಿನಿ : ಭಾರತದಲ್ಲಿ ನೀವುಗಳು ಒಬ್ಬರನ್ನೊಬ್ಬರು ಅಭಿವಂದಿಸುವಾಗ ಯಾವಾಗಲೂ ಕೈಮುಗಿಯುತ್ತೀರಿ. ಈ ದೇಶದಲ್ಲಿ ಆ ರೀತಿ ಯಾರೂ ನಿಮಗೆ ಕೈಜೋಡಿಸಿ ನಮಸ್ಕರಿಸುವುದಿಲ್ಲವಲ್ಲಾ ?—ನಿಮಗೆ ನೋವಾಗುವುದಿಲ್ಲವೇ ?

ಸ್ವಾಮೀಜಿ : ಇಲ್ಲ. ಅದರಿಂದ ನಮಗೆ ಯಾವ ತೊಂದರೆಯೂ ಇಲ್ಲ. ಪರಸ್ಪರ ಶುಭಾಶಯ ಕೋರುವಲ್ಲಿ ಪ್ರತಿ ಸಂಸ್ಕೃತಿಯಲ್ಲೂ ಅದರದೇ ಆದ ರೀತಿನೀತಿಗಳು ಇರುತ್ತವೆ. ಅನ್ಯ ಸಂಸ್ಕೃತಿಯವರ ಆ ರೀತಿನೀತಿಗಳನ್ನು ನಾವು ಗೌರವಿಸುತ್ತೇವೆ—ಉದಾಹರಣೆಗೆ, ಪಾಶ್ಚಾತ್ಯರಲ್ಲಿರುವ ಹಸ್ತಲಾಘವದ ಪದ್ಧತಿ ಭಾರತದಲ್ಲಿ ಹೊಸದೇನೂ ಅಲ್ಲ. ಅದು ನಮ್ಮಲ್ಲಿ ಅತ್ಯಂತ ಪ್ರಾಚೀನ ಪದ್ಧತಿಯಾಗಿತ್ತೆಂದು ನಮ್ಮ ಸಂಪ್ರದಾಯದಿಂದ ತಿಳಿದುಬರುತ್ತದೆ. ನಮ್ಮ ಪುರಾಣ ಕಾವ್ಯ, ಮಹಾಭಾರತದಲ್ಲಿ ಈ ರೀತಿಯ ಅಭಿವಂದನೆ —'ಕರಸ್ಪರ್ಶ'—ಹಾಗೆಂದರೆ, ಸಂಸ್ಕೃತದಲ್ಲಿ, ಪರಸ್ಪರ ಕೈಮುಟ್ಟುವುದು' ಎಂಬ ಮಾತು ಹಲವೆಡೆ ಬರುತ್ತದೆ. *ಶ್ರೀಮದ್ ಭಾಗವತ* (ಭಗವತ್ಪ್ರೇಮ ಅಥವಾ ಭಕ್ತಿಯನ್ನು ಕುರಿತ ಮಹಾನ್‌ಗ್ರಂಥ)ದಲ್ಲಿ ಸುಂದರವಾದ ಶ್ಲೋಕವಿದೆ—ವಿಶ್ವವ್ಯಾಪಿಯೂ ಆತ್ಮನಿವಾಸಿಯೂ ಆದ ಭಗವಾನ್ ಮಹಾವಿಷ್ಣು ಮತ್ತು ಪ್ರಥಮಜನ್ಯ, ವಿಶ್ವರೂಪಿ ಬ್ರಹ್ಮ ಒಬ್ಬರನೊಬ್ಬರು ಅಭಿವಂದಿಸುವ ಸಂದರ್ಭವನ್ನು ಅಲ್ಲಿ ನೋಡಬಹುದು. : (*ಶ್ರೀಮದ್ ಭಾಗವತಮ್*. II, ೧೯, ೧೮)

ತಮ್ ಪ್ರೀಯಮಾನಂ ಸಮುಪಸ್ಥಿತಂ ತದಾ
ಪ್ರಜಾವಿಸರ್ಗೇ ನಿಜಶಾಸನಾರ್ಹಣಮ್ ।
ಬಭಾಷ ಈಷಸ್ಮಿತ-ರೋಚಿಷಾ ಗಿರಾ
ಪ್ರಿಯಾಃ ಪ್ರಿಯಂ ಪ್ರೀತಮನಾ ಕರೇ ಸ್ಪ್ರಶನ್ ॥

ಭಗವಂತನ ದರ್ಶನದಿಂದ ಪ್ರೇಮಾನಂದಗಳಲ್ಲಿ ಮುಳುಗಿರುವ, ಬ್ರಹ್ಮನಿಗೆ ಅತ್ಯಂತ ಪ್ರಿಯನಾದ, ಆತ್ಮನಿವಾಸಿ ಪರಮಾತ್ಮನಿಗೆ, ಬ್ರಹ್ಮನು ಈ ಲೋಕ ಸೃಷ್ಟಿಸಲು ಸರ್ವಶಕ್ತನೆಂಬುದನ್ನು ತಿಳಿದು ಸಂತೋಷವಾಯಿತು. ಬ್ರಹ್ಮನ ಕೈಯನ್ನು ತನ್ನ ಕೈಯಿಂದ ಸ್ಪರ್ಶಿಸಿ ದೇದೀಪ್ಯಮಾನವಾದ ನಗೆಯನ್ನು ನಕ್ಕು ಮಹಾವಿಷ್ಣುವು ಹೀಗೆಂದನು.

ಭಾರತದಲ್ಲಿ ನಾವು ಒಬ್ಬರನೊಬ್ಬರು ಅಭಿವಂದಿಸುವಾಗ ಎರಡು ಕೈಗಳನ್ನು ಜೋಡಿಸಿ ನಮಿಸುತ್ತೇವೆ. ನಾವು ದೇವರಿಗೆ ಕೈಮುಗಿಯುವಂತೆ ಮನುಷ್ಯರಿಗೂ ಕೈಮುಗಿಯುತ್ತೇವೆ. ಏಕೆಂದರೆ ದೇವರು ಮನುಷ್ಯನ ಅಂತರಾತ್ಮದಲ್ಲೇ ಇರುವನಷ್ಟೆ. ನನಗೆ ತಿಳಿದಿರುವಂತೆ ಏಸುಕ್ರಿಸ್ತನ ಕಾಲದಲ್ಲೂ ಇದೇ ಸಂಪ್ರದಾಯವಿತ್ತು. ಕೈ ಕುಲುಕುವುದು ಇತರ ಸಂಪ್ರದಾಯಗಳಂತೆ ಯುರೋಪಿನಲ್ಲಿ ಆಮೇಲೆ ಬಂದ ನಡವಳಿಕೆ. ಉದಾಹರಣೆಗೆ ಉಡುಪಿನಲ್ಲಿ ಆದ ಬದಲಾವಣೆಗಳು. (ಯೆಹೂದ್ಯರ) ಪಾಸ್‌ಓವರ್ (ದಾಸ್ಯವಿಮೋಚನಾ ಹಬ್ಬ) ಧರ್ಮಾಚರಣೆಯಲ್ಲಿ ಹುದುಗುಹಾಕದ ಬ್ರೆಡ್‌ನ್ನು ಮುರಿಯುವ ಕ್ರಿಯೆ ಈಗ ಬದಲಾವಣೆಗೊಂಡು ಆಧುನಿಕ ಬ್ರೆಡ್ ಬಳಕೆಯಾಗುವುದು ಇತ್ಯಾದಿ. ಏಸುಕ್ರಿಸ್ತನೂ ಅವನ ಸುತ್ತಲಿನ ಜನಗಳು ಹಾಗೂ ಪ್ರಾಚೀನ ಗ್ರೀಕ್ ರೋಮ್ ದೇಶದವರು, ನಾವು ಭಾರತದಲ್ಲಿ ಇಂದಿಗೂ ಉಡುವ ಹಾಗೆ, ಉಡುಪು ಧರಿಸುತ್ತಿದ್ದರು—ಈಗ ನಾನು 'ಛದ್ದರ್' ಅಥವಾ ಅಂಗವಸ್ತ್ರ ಧರಿಸಿಲ್ಲವೇ ಹಾಗೆಯೇ, ಆಗ ಅವರುಗಳು ಅಂಗವಸ್ತ್ರವನ್ನು ಎಡ ಹೆಗಲಿನ ಮೇಲೆ ಹೊದ್ದು ಬಲಗೈಯನ್ನು ಮುಕ್ತ ಅಂಗಚಲನೆಗೋಸ್ಕರ ಹಾಗೆಯೇ ಬಿಡುತ್ತಿದ್ದರು. ಆ ಕಾಲದಲ್ಲಿ ಚಮಚ ಗಳಾಗಲಿ ಮುಳ್ಳು ಚಮಚಗಳಾಗಲಿ ಬಳಕೆಯಲ್ಲಿರಲಿಲ್ಲ. (ನಾನು ಎಲ್ಲೋ ಓದಿದ ಹಾಗೆ) ಇಂಗ್ಲೆಂಡಿನ ಚಕ್ರವರ್ತಿ ಎಂಟನೆಯ ಹೆನ್ರಿ ಸಹ ಕೈಯಿಂದಲೇ ಊಟ ಮಾಡುತ್ತಿದ್ದ. ಪ್ರಾಚೀನ ಪಾಶ್ಚಾತ್ಯ ಸಂಗೀತ, ಗ್ರಿಗೋರಿಯನ್ ಭಕ್ತಿಗೀತೆಗಳು ಪ್ರಾಚೀನ ಹಾಗೂ ಆಧುನಿಕ ಭಾರತೀಯ ಸಂಗೀತವನ್ನೇ ಹೋಲುತ್ತವೆ. ಹಳೆಯ ಶೈಲಿ ರೂಪಗಳನ್ನು ಬಿಟ್ಟು ಬೇರೆ ದಿಕ್ಕಿನಲ್ಲಿ ಬೆಳೆಯುತ್ತಿರುವುದು ಆಧುನಿಕ ಪಾಶ್ಚಾತ್ಯ ಸಂಗೀತವೇ. ಉದಾಹರಣೆಗೆ, ಈಗ ಕೇಳಿ : ಉಪನಿಷತ್ತಿನ, ವೇದಘೋಷದ ಶ್ಲೋಕವನ್ನು ನಾನು ನಿಮ್ಮ ಮುಂದೆ ಪಠಿಸುತ್ತೇನೆ. ಅದು ಪ್ರಾಚೀನ ಪಾಶ್ಚಾತ್ಯ ಭಕ್ತಿಗೀತೆಗಳಿಗೆ ಎಷ್ಟು ಸಮೀಪವಾಗಿದೆ ಎಂಬುದನ್ನು ಗಮನಿಸಿ : 'ಓಂ. ಸಹನಾವವತು ; ಸಹನೌ ಭುನಕ್ತು ; ಸಹ ವೀರ್ಯಂ ಕರವಾವಹೈ ; ತೇಜಸ್ವಿ ನಾವಧೀತಮಸ್ತು ; ಮಾ ವಿದ್ವಿಷಾವಹೈ ; ಓಂ ಶಾಂತಿಃ, ಶಾಂತಿಃ, ಶಾಂತಿಃ :—ಓಂ-ಗುರು ಶಿಷ್ಯರುಗಳಾದ ನಮ್ಮನ್ನು ಭಗವಂತನು ಕಾಪಾಡಲಿ ; ನಮ್ಮಿಬ್ಬರನ್ನೂ ಸಂಪುಷ್ಟಿಗೊಳಿಸಲಿ ! ಈ ಸಹಾಧ್ಯಾಯದ ಫಲವಾಗಿ ನಾವು ವೀರ್ಯವಂತರಾಗುವಂತಾಗಲಿ ! ಈ ಸಹಾಧ್ಯಾಯದ ಫಲವಾಗಿ ನಾವು ತೇಜೋವಂತರಾಗೋಣ ! ನಮ್ಮ ನಡುವೆ ದ್ವೇಷವುಂಟಾಗದಿರಲಿ ! ಓಂ, ಶಾಂತಿ, ಶಾಂತಿಃ, ಶಾಂತಿಃ' ಇದು ಬಹುಶಃ ೩-೪ ಸಹಸ್ರ ವರ್ಷಗಳ ಹಿಂದಿನ ಅತಿಪ್ರಾಚೀನ ಶಾಂತಿಮಂತ್ರ.

ಇನ್ನೊಬ್ಬ ಸಂನ್ಯಾಸಿನಿ : ಮಾನವಾಂತರಂಗದಲ್ಲಿರುವ ದೇವರನ್ನು ಕುರಿತು ನೀವು ಮಾತನಾಡುವಾಗ ನನಗೆ ಅನಿಸುತ್ತದೆ, ನೀವು ಮನುಷ್ಯನ ಮೌಲ್ಯವನ್ನು ಉಪೇಕ್ಷಿಸುತ್ತಿದ್ದೀರಿ ಎಂದು.

ಸ್ವಾಮೀಜಿ : ತದ್ವಿರುದ್ಧವಾಗಿ ಹೇಳಬೇಕೆಂದರೆ : ಮನುಷ್ಯನ ಮೌಲ್ಯ ಇದರಿಂದ ವರ್ಧಿಸುತ್ತದೆ ಅನಿಸುವುದಿಲ್ಲವೇ ನಿಮಗೆ ? ಅವನು ಒಂದು ಸಾವಯುವ ವ್ಯವಸ್ಥೆಯಿಂದ ಮನೋವೈಜ್ಞಾನಿಕ ವ್ಯವಸ್ಥೆಗೂ, ವೈಚಾರಿಕ ಜೀವಿಯ ಸ್ಥಿತಿಗೂ, ಅಂತಿಮವಾಗಿ ಆಧ್ಯಾತ್ಮಿಕ ವ್ಯಕ್ತಿಯ ಸ್ಥಿತಿಗೂ, ವಿಶ್ವ ವ್ಯಾಪಕ, ಸರ್ವಶಕ್ತ ಭಗವಂತನ ತೇಜಃಕಣದ ಸ್ವರೂಪಕ್ಕೂ ಏರುತ್ತ ಹೋಗುವನೆಂಬುದನ್ನು ನಾವು ಅರಿತು ಮೇಲೇರಿದಂತೆಲ್ಲ ಮನುಷ್ಯನ ಆಧ್ಯಾತ್ಮಿಕ ಮೌಲ್ಯವೂ ವೃದ್ಧಿಗೊಳ್ಳುತ್ತದೆ ಅಲ್ಲವೇ? ಭಗವಂತ ನಮ್ಮೊಳಗೇ ಇದ್ದಾನೆ. ಈ ಸತ್ಯ ಗೋಚರವಾದಾಗ ಮಾನವನು ತನ್ನ ಅನನ್ಯ ಅಂತಃ ಸತ್ವವನ್ನು ಅನಾವರಣಗೊಳಿಸಿದ. ಉಪನಿಷತ್ತುಗಳಲ್ಲಿ ಈ ಸತ್ಯ ಗೋಚರವಾದ ಮೇಲೆ ಮನುಷ್ಯ

ನನ್ನು ಕೇವಲ ಒಬ್ಬ ಪಾಪಾತ್ಮನೆಂದೋ, ಸೀಮಿತ ಶಕ್ತಿಯ ಕ್ಷುದ್ರನೆಂದೋ, ಒಬ್ಬ ಕೇವಲ ಅಸಹಾಯಕ ಜೀವಿಯೆಂದೋ ಬಗೆಯುವುದು ಅಸಾಧ್ಯವಾಯಿತು. ಪ್ರಕೃತಿಯ ಅತ್ಯುತ್ಕೃಷ್ಟ, ವಿಕಸಿತ ಸ್ವರೂಪಿಯಾದ ಮನುಷ್ಯನಿಗೆ ಪ್ರಕೃತಿಯು ಅವನಲ್ಲಿ ಅಂತರ್ಗತವಾದ ಅನಂತ ಸಾಧ್ಯತೆಗಳನ್ನು ಅವನು ಅರಿತು ತನ್ನನ್ನೇ ತಾನು ಮೀರಿಸಬಲ್ಲ ಸಾವಯವ ಶಕ್ತಿಯನ್ನು ವರವಾಗಿ ಕರುಣಿಸಿದೆ.

ನಾವು ಒಂದು ಮನೆಯಲ್ಲಿ ವಾಸಿಸುವಂತೆ, ಭಗವಂತ ನಮ್ಮೊಳಗೆ ವಾಸಿಸುತ್ತಾನೆ. ಇದರಿಂದ ನಮ್ಮ ಇರವು ವಿಸರ್ಜಿತವಾಯಿತೆಂದು ಅರ್ಥವಲ್ಲ. ನಾವು ಯಾವುದೋ ಹೆಚ್ಚು ಬಲವತ್ತರವಾದ ಶಕ್ತಿಯ ಸಹಾಯದಿಂದ ನಮ್ಮ ಅಸ್ತಿತ್ವವನ್ನುಳಿಸಿಕೊಳ್ಳುತ್ತೇವೆ. ಅನಂತಸ್ವರೂಪಿಯಾದ ಭಗವಂತ ನಮ್ಮೊಳಗೆ ಚಲಿಸಲುಪಕ್ರಮಿಸಿದಾಗ ನಮ್ಮ ಮಹತ್ವ ವರ್ಧಿಸುವುದೇ ವಿನಾ ಕ್ಷೀಣಿಸುವುದಿಲ್ಲ. ಗಂಡ ಹೆಂಡತಿಯನ್ನೋ ಅಥವಾ ಹೆಂಡತಿ ಗಂಡನನ್ನೋ ತನ್ನ ಹೃದಯಪೀಠದಲ್ಲಿ ಸ್ಥಾಪಿಸುವ ರೀತಿಯಲ್ಲಿ ನಾವು ಭಗವಂತನನ್ನು ನಮ್ಮೊಳಗೆ ಪ್ರತಿಷ್ಠಾಪಿಸಿಕೊಳ್ಳುತ್ತೇವೆ. ಅದರಿಂದ ಇಬ್ಬರ ವ್ಯಕ್ತಿತ್ವವೂ ಶ್ರೀಮಂತಗೊಂಡು ಪರಸ್ಪರ ಆಕರ್ಷಿತರಾಗುತ್ತೇವೆ.

ದೇವರು ಮನುಷ್ಯನಿಂದಾಚೆ ಇದ್ದಾನೆ. ಅವನು ವಿಶ್ವಾತೀತ ಎಂದು ಕಲ್ಪಿಸಿಕೊಂಡಾಗ ಮನುಷ್ಯ ನನ್ನು ಶೂನ್ಯಸ್ಥಿತಿಗೆ ಇಳಿಸಿದಂತಾಗುತ್ತದೆ. ಮನುಷ್ಯನ ಸಣ್ಣತನವೇ ದೇವರ ಮಹಿಮೆಯ ಅಳತೆಯಾಗಿ ಬಿಡುತ್ತದೆ. ಮನುಷ್ಯನ ಕುರಿತ ಪಾಶ್ಚಾತ್ಯ ದೇವತಾಶಾಸ್ತ್ರದಲ್ಲಿನ ಈ ನಿಲುಮೆಯನ್ನು ಭಗವಂತನು ವಿಶ್ವಾತೀತನಾಗಿ ಹೊರಗೆಲ್ಲೋ ಇದ್ದಾನೆ ಎಂಬ ಕಲ್ಪನೆಯನ್ನು ಬಹುತೇಕ ಪಾಶ್ಚಾತ್ಯ ಚಿಂತನೆ ವಿರೋಧಿ ಸುತ್ತದೆ. ಹೀಗೆ ಹೊರಗೆಲ್ಲೋ ಇರುವ ದೇವರ ಅಧಿಕಾರದ ವಿರುದ್ಧ ಆಧುನಿಕ ಚಿಂತನೆ, ಇಂದಿನ ಮಾನವ, ಸವಾಲು ಹಾಕುತ್ತಾರೆ. ಎಲ್ಲಾ ಹೊರಗಿನ ಅಧಿಕಾರದ ವಿರುದ್ಧ ಜನರು ದಂಗೆ ಏಳುತ್ತಿರುವ ಯುಗದಲ್ಲಿ ನಾವೀಗ ಜೀವಿಸುತ್ತಿದ್ದೇವೆ. ರಾಜರು, ಚಕ್ರವರ್ತಿಗಳು ಮತ್ತು ಪೂರ್ವೋಕ್ತ ವಿಶ್ವಾತೀತ ದೇವರು—ಇವರು ಯಾರೂ ತಮ್ಮ ಪ್ರಜೆಗಳು, ಭಕ್ತಾದಿಗಳು ಎಬ್ಬಿಸುತ್ತಿರುವ ದಂಗೆಯಿಂದ ತಪ್ಪಿಸಿ ಕೊಳ್ಳಲಾಗುತ್ತಿಲ್ಲ. ಗಣರಾಜ್ಯ ಅಥವಾ ಅರಸೊತ್ತಿಗೆಯಲ್ಲಿ ಹಿಂದೆ ಒಬ್ಬ ರಾಜ ಅಥವಾ ಚಕ್ರವರ್ತಿಯ ಕೈಯಲ್ಲಿ ಕೇಂದ್ರೀಕೃತವಾಗಿರುತ್ತಿದ್ದ ಅಧಿಕಾರ ಈಗ ಗಣರಾಜ್ಯದ ಕೋಟ್ಯಾನುಕೋಟಿ ಪ್ರಜೆಗಳ ಕೈಯಲ್ಲಿದೆ. ಅಂಥ ಅಧಿಕಾರ ಅಥವಾ ದಂಡಶಕ್ತಿ ಅಂತರಂಗದಿಂದ ಉದ್ಭವಿಸಿದಾಗ ಯಾವ ತೆರನಾದ ದಂಗೆಗೂ ಅವಕಾಶವಿಲ್ಲ. ಆದರೆ ವಿಶ್ವಾತೀತ ಎಂಬ ಅರ್ಥದ ದೇವರು ಸದಾ ವಿಚಾರವಂತರ, ವಿಜ್ಞಾನಿಗಳ ಮತ್ತು ಮಾನವತಾವಾದಿಗಳ ಆಕ್ರಮಣಕ್ಕೆ ಗುರಿಯಾಗುತ್ತಲೇ ಇರಬೇಕಾಗುತ್ತದೆ. ಹೀಗೆ ದಂಗೆ ಏಳುವ ಜನರೇನೂ ಅಧಾರ್ಮಿಕ ವ್ಯಕ್ತಿಗಳಲ್ಲ—ಎಷ್ಟೋ ವೇಳೆ ಅವರು ಹೊರ ತೋರ್ಕೆಯ ಆಸ್ತಿಕರಿಗಿಂತ ಹೆಚ್ಚು ಧರ್ಮಶ್ರದ್ಧೆ, ದೈವಭಕ್ತಿಯುಳ್ಳವರಾಗಿರುತ್ತಾರೆ.

ಮಾತ್ರವಲ್ಲ, ದೇವರು ಹಾಗೆ ಬಹುದೂರವಾಗಿದ್ದರೆ ಅವನು ಮನುಷ್ಯನ ಅನುಭವದಿಂದಾಚೆಯೇ ಉಳಿದು ಕೇವಲ ಮಾನವಶ್ರದ್ಧೆ ಅಥವಾ ನಂಬಿಕೆಯ ವಸ್ತುವಾಗುತ್ತಾನೆ ಅಷ್ಟೆ. ಹಿಂದೂ ಸಂತರಂತೆ, ಕ್ಯಾಥಲಿಕ್ ಪಂಥದ ಹಲವು ಸಂತರು ಕೇವಲ ದೈವಶ್ರದ್ಧೆ ಮಾತ್ರವಲ್ಲ—ಭಗವದನುಭವವನ್ನೂ ಪಡೆದವರಾಗಿದ್ದರು. ಹಿಂದೂ ಮತ್ತು ಬೌದ್ಧ ಮಠೀಯ ಆಧ್ಯಾತ್ಮಿಕತೆಯಂತೆ ಕ್ಯಾಥಲಿಕ್ ಮಠೀಯ ಆಧ್ಯಾತ್ಮಿಕತೆಯೂ ಭಗವದನುಭವ ಸಾಧ್ಯವೆಂಬ ನಂಬಿಕೆ ಅಥವಾ ಉನ್ನತ ಸತ್ಯದ ಆಧಾರದ ಮೇಲೆಯೇ ನಿಂತಿದೆ. ಅಂಥ ಆಧ್ಯಾತ್ಮಿಕತೆ, ಭಗವತ್ಸಾಕ್ಷಾತ್ಕಾರದಲ್ಲೇ ಜೀವಂತವಾಗಿರುತ್ತದೆ. ಅಂಥ ಧರ್ಮವು ಜಡ ಧಾರ್ಮಿಕತೆಗಾಗಲಿ, ಯಾವುದೋ ಮತತತ್ತ್ವಕ್ಕಾಗಲಿ ಅಂಟಿಕೊಳ್ಳುವುದಿಲ್ಲ. ಸಂತ ಅಗಸ್ಟಿನನು ತನ್ನ 'ತಪ್ಪೊಪ್ಪಿಗೆ' (Confessions)ಯಲ್ಲಿ ವರ್ಣಿಸುವ ತನ್ನ ಭಗವದನುಭವ, ಈ ಸಂದರ್ಭದಲ್ಲಿ ಉದ್ಬೋಧಕವಾಗುತ್ತದೆ. ಅತ್ಯಂತ ಭಾವಪ್ರಚೋದಕ ಪಂಕ್ತಿಯೊಂದರಲ್ಲಿ ಅವನು ಹೀಗೆ ಹೇಳುತ್ತಾನೆ :

*ನಾನು ಪೃಥ್ವಿಯನ್ನು ಕೇಳಿದೆ, ಅದು ಹೇಳಿತು: 'ನಾನು ಅವನಲ್ಲ' ನಾನು ಸಮುದ್ರವನ್ನು, ಅದರ ಅಗಾಧ ರೂಪಗಳನ್ನು ಹರಿದಾಡುವ ಜೀವಿ ಜಂತುಗಳನ್ನು ಕೇಳಿದೆ, ಅವು ಹೇಳಿದವು, 'ನೀನು ಹುಡುಕುತ್ತಿರುವ ದೇವರು ನಾವಲ್ಲ. ನೀನು ಮೇಲೆ ಹುಡುಕಿ ನೋಡು' ನಾನು ಚಲಿಸುವ ಗಾಳಿಯನ್ನು ಕೇಳಿದೆ; ಅದರಲ್ಲಿನ ಸರ್ವಜೀವಿಗಳನ್ನು ಕೇಳಿದಾಗ ಅವು ಹೇಳಿದವು: 'ಅನಾಕ್ಸಿಮಿನಿಸ್ ಮೋಸ ಹೋಗಿದ್ದಾನೆ ;ನಾವು ದೇವರಲ್ಲ' ನಾನು ಅಂತರಿಕ್ಷ, ಸೂರ್ಯ ಚಂದ್ರ ನಕ್ಷತ್ರಗಳನ್ನು ಕೇಳಿದೆ—'ನಾವು ಯಾರೂ ನೀನು ಹುಡುಕಾಡುತ್ತಿರುವ ದೇವರಲ್ಲ'. ಆಗ ನಾನು ನನ್ನ ಇಂದ್ರಿಯಗಳ ದ್ವಾರಗಳನ್ನು ಸುತ್ತುವರಿದ ಸಕಲ ಚರಾಚರಗಳನ್ನು ಕುರಿತು ಹೇಳಿದೆ: 'ನೀವು ಅವನಲ್ಲ ಎಂದು ಹೇಳಿ ನಾನು ಹುಡುಕುತ್ತಿರುವ ನನ್ನ ದೇವರ ಬಗ್ಗೆ ತಿಳಿಸಿದ್ದೀರಿ ; ಈಗ ಅವನ ಬಗ್ಗೆ ನನಗೆ ಏನಾದರೂ ಸ್ವಲ್ಪ ತಿಳಿಯಹೇಳಿ.' ಆಗ ಅವು ಗಟ್ಟಿಯಾದ ಧ್ವನಿಯಲ್ಲಿ ಹೇಳಿದವು ; 'ನಮ್ಮನ್ನು ಸೃಷ್ಟಿಸಿದವನು ಅವನೇ.' ಯಾಕೆಂದರೆ ಸತ್ಯ ನನಗೆ ಹೇಳಿತು : 'ಭೂಮಿವ್ಯೋಮಗಳಾಗಲಿ, ಬೇರೆ ಇನ್ನು ಯಾವುದೇ ಕಾಯವಾಗಲಿ ದೇವರಲ್ಲ." ಈಗ ನಾನು ನಿನಗೆ ಹೇಳುತ್ತೇನೆ: ಓ ನನ್ನ ಆತ್ಮವೆ, ನೀನು ನನ್ನ ಶ್ರೇಷ್ಠತರ ಅಂಗ ; ಯಾಕೆಂದರೆ ನೀನು ನನ್ನ ಇಡೀ ದೇಹವನ್ನು ಚುರುಕುಗೊಳಿಸಿ, ಅದಕ್ಕೆ ಯಾರೂ ಕೊಡಲಾಗದ ಜೀವವಿತ್ತಿರುವೆ; ಆದರೆ ನಿನ್ನ ದೇವರು ನಿನಗೂ ಸಹ, ನಿನ್ನ ಜೀವದೊಳಗಿನ ಜೀವವೇ ಆಗಿದ್ದಾನೆ*

'ನಿನ್ನ ಜೀವದೊಳಗಿನ ಜೀವ'—'ಪ್ರಾಣಸ್ಯ ಪ್ರಾಣಃ' ಎಂದು ಉಪನಿಷತ್ತುಗಳು ದೇವರನ್ನು ವರ್ಣಿಸುವುದಿಲ್ಲವೇ, ಹಾಗೆ !

ಇನ್ನೊಬ್ಬ ಸಂನ್ಯಾಸಿನಿ : ನಮ್ಮೊಳಗೆ ಅತ್ಯಂತ ಆಳದಲ್ಲಿರುವ 'ಅಹಂ' (Ego) ಮತ್ತು ಇದು—ಎರಡೂ ಒಂದೆಯೇ ?

ಸ್ವಾಮೀಜಿ : ಹೌದು, ನನ್ನ ಆತ್ಮದೊಳಗಿನ ಆತ್ಮವಾದ, ನಮ್ಮೆಲ್ಲರ ಭಿನ್ನ ಭಿನ್ನ ವೈಯಕ್ತಿಕ ಆತ್ಮಗಳ ಹಿಂದೆ ಅಡಗಿರುವ ವಿಶ್ವವ್ಯಾಪಿ ಆತ್ಮ ಅದು. ವೇದಾಂತವು ಭಗವಂತನನ್ನು ಅಂತರ್ಯಾಮಿ, ಒಳಗಿನ ನಿಯಂತ್ರಕ ಎಂದು ವರ್ಣಿಸುತ್ತದೆ. 'ಗೀತೆ' (vii, ೭)ಯು ಭಗವಂತನನ್ನು 'ಅಂತರಾತ್ಮನ್' ಒಳಗಿನ ಆತ್ಮ ಎಂದು ಚಿತ್ರಿಸುತ್ತದೆ—ಯಾವ ಒಳಗಿನ ಆತ್ಮ ಎಂಬುದರಲ್ಲಿ ನಾವೆಲ್ಲರೂ ಒಂದಾಗಿದ್ದೇವೆ. ದಾರವು ಮಣಿಗಳನ್ನೆಲ್ಲ ಒಂದುಗೂಡಿಸುವಂತೆ ಅವನು ಅಂತರ್ಯಾಮಿಯಾಗಿ ಸೂತ್ರದಂತೆ ನಮ್ಮನ್ನು ಒಂದುಗೂಡಿಸಿರುವನು. '*ಮಯಿ, ಸರ್ವಮಿದಮ್ ಪ್ರೋತಮ್ ಸೂತ್ರೇ ಮಣಿಗಣ ಇವ*'

ಭಗವಂತನು ನಮ್ಮ ಅಂತರಾತ್ಮನಾಗಿರುವುದರಿಂದಲೆ ನಮಗೆ ಅವನ ಅನುಭವವಾಗುತ್ತದೆ, ಸಾಕ್ಷಾತ್ಕಾರವಾಗುತ್ತದೆ. ಹೊಸ ಒಡಂಬಡಿಕೆಯಲ್ಲಿ ಏಸುವು ಭಗವಂತನ ಎರಡು ಸ್ವರೂಪಗಳನ್ನು ಕುರಿತು ಹೇಳುತ್ತಾನೆ. ಒಂದು : ದೂರದ, ಬಹುದೂರದ ಸ್ವರ್ಗದಲ್ಲಿರುವ ನನ್ನ ತಂದೆಯಾಗಿ, ಯಾರು ಆಧ್ಯಾತ್ಮಿಕವಾಗಿ ಸಾಧಾರಣ ಶಕ್ತಿಯುಳ್ಳವರಾಗಿದ್ದು, ಇಂದ್ರಿಯಗಳ ಮೂಲಕ ಸತ್ಯವನ್ನು ಕೇವಲ ಹೊರಗಿನಿಂದ ಮಾತ್ರ ಗ್ರಹಿಸಬಲ್ಲರೊ ಅಂಥವರ ಪಾಲಿನ ದೇವರು ಅವನು. ಆದ್ದರಿಂದಲೇ ಕಣ್ಣುಗಳನ್ನು ಅಗಲವಾಗಿ ತೆರೆದು, ತಲೆಎತ್ತಿ ದೂರ ದಿಗಂತದಾಚೆಯ ಆಕಾಶವನ್ನು ನೋಡುತ್ತಾ ಅತ್ಯಂತ ಉನ್ನತ ಸ್ವರ್ಗದಲ್ಲಿರುವ ಭಗವಂತನಲ್ಲಿ ಶ್ರದ್ಧೆ ಇಟ್ಟು ಅರ್ಪಿಸುವ ಪ್ರಾರ್ಥನೆ ಇದು. ಆದರೆ ಇನ್ನು ಕೆಲವರು ಸೂಕ್ಷ್ಮಾತಿಸೂಕ್ಷ್ಮ ಆಧ್ಯಾತ್ಮಿಕ ಸತ್ಯಗಳನ್ನು ಗ್ರಹಿಸಬಲ್ಲರು, ಅವರಿಗೆ ಇಂದ್ರಿಯಗಳ ಉಪದ್ರವವಿಲ್ಲ... ಅಂಥವರ ಸಲುವಾಗಿ ಏಸುವು ಹೇಳುವ ದೇವರು... ನಮ್ಮೊಳಗಿರುವ ಸ್ವರ್ಗಸಾಮ್ರಾಜ್ಯವೇ ಅವನು, ನಮ್ಮ ಆತ್ಮದೊಳಗಿನ ಆತ್ಮ ಅವನು... ಅವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಅಂತರಂಗದ ಪ್ರಾರ್ಥನೆ, ಕಣ್ಣುಮುಚ್ಚಿ ಕುಳಿತು ಅರ್ಪಿಸುವ ತಪಸ್ಸು, ನಿಶ್ಚಲ ಮನಸ್ಸಿನಿಂದ ನೀಡುವ ಗಂಭೀರ ಚಿಂತನೆ ಅಗತ್ಯ. ಹೊರಗಿನ ಪೂಜೆ ಪುನಸ್ಕಾರ, ಬಲಿವಿಧಿಗಳು

ಮೊದಲು ಹೇಳಿದ ಸಾಮಾನ್ಯರಿಗೆ ಮಾತ್ರ ಬೇಕಾದವುಗಳು. ಆದರೆ ಸೂಕ್ಷ್ಮ ಸಂವೇದನಾಶೀಲರಿಗೆ ಭಗವತ್ಸಾಕ್ಷಾತ್ಕಾರಕ್ಕೆ ಅಂತರಂಗಶುದ್ಧಿ ಒಂದೇ ಸಾಕು. 'ಯಾರು ನಿರ್ಮಲ ಹೃದಯರೋ ಅವರು ಪುಣ್ಯವಂತರು... ಅವರಿಗೆ ಭಗವಂತ ಕಾಣಸಿಗುತ್ತಾನೆ' (Blessed are the pure in heart, for they shall see God) ಅವರಿಗೆ ದೇವರು ಕೇವಲ ಶ್ರದ್ಧೆಯ ವಸ್ತುವಲ್ಲ—ಅವರು ಸತ್ಯವಾಗಿ ಭಗವಂತನ ನಿಜಸ್ವರೂಪ ಗ್ರಹಿಸಬಲ್ಲರು.

ಈ ಎರಡೂ ಮಾರ್ಗಗಳು ಸಮಂಜಸ. ಆದರೆ ಮೊದಲನೆಯದು ಎರಡನೆಯ ಮಾರ್ಗದತ್ತ ನಮ್ಮನ್ನು ಕೊಂಡೊಯ್ಯಬೇಕು. ಎರಡೂ ಮಾರ್ಗಗಳು ಸೇರಿ ಒಂದು ಸಂಪೂರ್ಣ ಶೈಕ್ಷಣಿಕ ಕ್ರಮವಾಗಿ ನಿಯೋಜಿತಗೊಳ್ಳುತ್ತವೆ. ಇದರ ಉದ್ದೇಶ ಕೇವಲ ದೇವರ ಕುರಿತ ಒಂದು ಸಿದ್ಧಾಂತವನ್ನು ನಂಬುವುದಲ್ಲ. ಇದರ ಉದ್ದೇಶ ನಿಧಾನವಾಗಿ ಹಂತಹಂತವಾಗಿ ಭಗವಂತನ ಕುರಿತ ಅರಿವನ್ನು ಮೂಡಿಸಿಕೊಂಡು ಅಂತಿಮವಾಗಿ, ಈ ಜನ್ಮದಲ್ಲೇ ಭಗವಂತನ ಸಾಕ್ಷಾತ್ಕಾರ ಸಿದ್ಧಿ ಗಳಿಸುವುದು. ಈ ದೃಷ್ಟಿಯಲ್ಲಿ ಮಠ ಅಥವಾ ಆಶ್ರಮವಾಸ ಅರ್ಥಪೂರ್ಣ. ಏಕೆಂದರೆ ಈ ವಾತಾವರಣ ನಮ್ಮ ದೇಹ ಮನಸ್ಸುಗಳು ಈ ಪ್ರಯೋಗಕ್ಕೆ ಅನುಕೂಲವಾದ ಭಗವಂತನ ಕುರಿತ ಅನುಭವ ಗಳಿಸಲು ತಕ್ಕುದಾದ ಪ್ರಯೋಗಾಲಯವಾಗುತ್ತದೆ. ಕೇವಲ ಇಲ್ಲಿ ಮಾತ್ರ ಧರ್ಮವು ದೇವತಾಶಾಸ್ತ್ರವಾಗುತ್ತದೆ, ಅನುಭವವಿಜ್ಞಾನವಾಗುತ್ತದೆ. ಯಾರಿಗೆ ಇಂಥ ಯೋಗ್ಯತೆ ಇದೆಯೋ ಅಂಥವರೆಲ್ಲರೂ ತಾಳೆ ಹಾಕಿ ನೋಡಬಲ್ಲ ಸತ್ಯವನ್ನು ಬೀರುವಂಥ ಶಾಸ್ತ್ರವಾಗುತ್ತದೆ.

ಕ್ರೈಸ್ತ ಹಾಗೂ ಇತರ ಧರ್ಮಗಳ ಸಂತರುಗಳು ಇದನ್ನು ಸಾಬೀತುಪಡಿಸಿದ್ದಾರೆ. ಅವರು ಭಗವತ್‌ಸಿದ್ಧಿಯನ್ನು ಪಡೆದು ತಮ್ಮ ಆ ಅನುಭವವನ್ನು ನಾನಾ ಸ್ತರಗಳ ಜ್ಞಾನ, ಅನುಭವಗಳ, ಪರಿಕಲ್ಪನೆ ಹಾಗೂ ಭಾಷೆಯ ಮೂಲಕ ಇತರರಿಗೆ ಸಂವಹನ ಮಾಡಿದರು. 'ಹೃದಯ ತುಂಬಿ ತುಳುಕಿದಾಗ ನಾಲಿಗೆ ನುಡಿಯುತ್ತದೆ' ಎಂಬ ಹಳೆಯ ಬೈಬಲ್ಲಿನ ವಾಕ್ಯವೊಂದಿದೆ. ಈಗ ಸ್ವಾಮಿ ವಿವೇಕಾನಂದರು 'ಮಾತಿನ ಜತೆಗೆ ಕೈಗಳು ಕಾಯಕವೆಸಗುತ್ತವೆ ಸಹ' ಎಂದು ಸೇರಿಸಿದ್ದಾರೆ.

ಒಬ್ಬ ಸಂನ್ಯಾಸಿ, ಸಂನ್ಯಾಸಿನಿ ಅಥವಾ ಭಕ್ತನ ಕೆಲಸಕ್ಕೂ ಬೇರೊಬ್ಬ, ಕೇವಲ ಪ್ರಾಪಂಚಿಕ ವ್ಯಕ್ತಿಯ ಕೆಲಸಕ್ಕೂ ಇರುವ ವ್ಯತ್ಯಾಸವೆಂದರೆ ಅಷ್ಟೇ. ನೀರಸಹೃದಯದ ಪ್ರಾಪಂಚಿಕ ವ್ಯಕ್ತಿಯು ತಾನು ಕೆಲಸ ಮಾಡುವುದರ ಜತೆಗೆ ಬಾಹ್ಯಪ್ರಪಂಚದ ಸುಖಸಂತೋಷಗಳನ್ನು ಅನುಭವಿಸುತ್ತಾನೆ, ಹೃದಯವನ್ನು ತುಂಬಿಕೊಳ್ಳುತ್ತಾನೆ. ಆಧ್ಯಾತ್ಮಿಕ ವ್ಯಕ್ತಿಯಾದರೋ ಅಂತರಂಗದ ಆನಂದವನ್ನು ಮಾನವ ಸಂಸರ್ಗ ಹಾಗೂ ಸೇವಾಕಾರ್ಯಗಳಿಗೆ ವಿನಿಯೋಗಿಸುತ್ತಾನೆ. ಉದಾಹರಣೆಗೆ ಒಬ್ಬ ಸಂನ್ಯಾಸಿನಿ ಆಸ್ಪತ್ರೆಯ (ನರ್ಸು) ದಾದಿಯಾಗಿ ಮಾಡುವ ಕಾಯಕ ಕರ್ತವ್ಯಗಳಲ್ಲಿ ಅವಳ ಅಂತರಂಗದಲ್ಲಿ ಉಕ್ಕುವ ಆನಂದ ಹಾಗೂ ಅರ್ಪಣಾ ಮನೋಭಾವದ ಛಾಪು ಮೂಡಿರುತ್ತದೆ. ದೇವರ ಧ್ಯಾನದಿಂದ ಅವಳು ಪಡೆಯುವ ದಿವ್ಯ ಸಂಪರ್ಕದ ಪ್ರಭಾವವೇ ಇದಕ್ಕೆ ಕಾರಣ. ಮಿಯಸ್ಟರ್ ಎಕ್‌ಹಾರ್ಟ್‌ನ ಒಂದು ಸುಂದರ ವಚನದಲ್ಲೂ ಇದೇ ಅರ್ಥಸೂಚನೆ ಇದೆ : 'ನಾವು ತಪಸ್ಸು ಧ್ಯಾನಗಳಿಂದ ಏನನ್ನು ಗಳಿಸುವೆವೋ ಅದನ್ನೇ ನಾವು ಮಾನವ ಸೇವೆ-ಪ್ರೇಮಗಳಲ್ಲಿ ಅಭಿವ್ಯಕ್ತಿಸುತ್ತೇವೆ. ಒಬ್ಬ ಸಂನ್ಯಾಸಿ, ಅಥವಾ ಸಂನ್ಯಾಸಿನಿ ಕೇವಲ ಹೊಟ್ಟೆ ತುಂಬಿಕೊಳ್ಳಲು ಕೆಲಸ ಮಾಡುವುದಿಲ್ಲ—ಅದನ್ನು ದೇವರು ಹೇಗೂ ಭರಿಸುತ್ತಾನೆ—ಅವರು ಸೇವೆ ಮಾಡುವುದರಿಂದ ಭಗವಂತನ ಅಪಾರ ಮಹಿಮೆಯನ್ನು ಲೋಕಕ್ಕೆ ಪ್ರಚುರ ಪಡಿಸುವುದೇ ಅವರ ಉದ್ದೇಶ.

ಇನ್ನೊಬ್ಬ ಸಂನ್ಯಾಸಿನಿ : ದೇವರು ಹೇಗೆ ತಾನೆ ನಮ್ಮ ಹೊಟ್ಟೆ ತುಂಬಿಸಬಲ್ಲ ?

ಸ್ವಾಮೀಜಿ : ನಾವು ನಮ್ಮ ಬಗ್ಗೆ ಕಿಂಚಿತ್ತು ಕಾಳಜಿ ಪಡದಿದ್ದರೆ ಆಗ ಭಗವಂತ ನಮ್ಮನ್ನು ಅತ್ಯಂತ ಕರುಣೆಯಿಂದ ಕಾಪಾಡುತ್ತಾನೆ. ತಮ್ಮ ಜೀವನದಲ್ಲಿ ಭಗವಂತನ ಮಹಾಮಹಿಮೆಯನ್ನು

ಮೂರ್ತಗೊಳಿಸಲು ಸರ್ವಪ್ರಯತ್ನ ಮಾಡುತ್ತಿರುವ ಪುಣ್ಯಾತ್ಮರ ಮೂಲಕ ಭಗವಂತ ನಮ್ಮ ಯೋಗಕ್ಷೇಮದ ಹೊಣೆಯನ್ನು ನಿಭಾಯಿಸುತ್ತಾನೆ. ದಿವ್ಯ ಸಮರ್ಪಣಾಕಾರ್ಯದಲ್ಲಿ ನಾವು ನಮ್ಮನ್ನು ತೊಡಗಿಸಿಕೊಂಡಾಗ ನಮ್ಮನ್ನು ನಾವು ಮರೆತು ಚಿಕ್ಕ ಮಕ್ಕಳಂತೆ, ಭಗವಂತನ ಚಿಕ್ಕ ಮಕ್ಕಳೋಪಾದಿಯಲ್ಲಿ ಅವನ ಗಮನವನ್ನೂ ಆಸರೆಯನ್ನು ನಮ್ಮೆಡೆಗೆ ಸೆಳೆದುಕೊಳ್ಳುತ್ತೇವೆ.

ಇನ್ನೊಬ್ಬ ಸಂನ್ಯಾಸಿನಿ : ದೇವರನ್ನು ಬಾಹ್ಯವಾಗಿ ಕಾಣಲೆಳಸುವವರೂ, ಅಂತರಂಗದಲ್ಲಿ ಅವನ ಸಾಕ್ಷಾತ್ಕಾರ ಸಿದ್ಧಿಸಿಕೊಳ್ಳಲೆಳಸುವವರೂ ಪರಸ್ಪರ ಪೂರಕವಾಗಿದ್ದು ಪರಸ್ಪರ ಪರಿಪೂರ್ಣತೆ ಸಾಧಿಸುತ್ತಾರೆಯೇ ?

ಸ್ವಾಮೀಜಿ : ಈ ಎರಡೂ ಸೀಮಿತ ಮಾರ್ಗಗಳಾಗಿದ್ದು, ಆ ಕಾರಣದಿಂದ ಆಧ್ಯಾತ್ಮಿಕವಾಗಿ ಎರಡರಲ್ಲೂ ಕೊರತೆ ಇರುವುದರಿಂದ ಒಂದರ ಕೊರತೆಯನ್ನು ಇನ್ನೊಂದು ತುಂಬಿಕೊಡಬಲ್ಲದು. ಆದರೆ ವೇದಾಂತ ಹೇಳುತ್ತದೆ : ಸಮಗ್ರ ಆಧ್ಯಾತ್ಮಿಕತೆ ಎಂದರೆ ದಿನಂಪ್ರತಿಯ ಕಾಯಕದಲ್ಲಿ, ಮಾನವ ಸಂಘ ಸಹವಾಸದಲ್ಲಿ ಹಾಗೂ ಧ್ಯಾನ, ಅಂತರಂಗದ ಅನುಭವದ ಮೂಲಕ ಭಗವಂತನನ್ನು ಅಂತರಂಗದೊಳಗೆ ಮತ್ತು ಬಾಹ್ಯ ವಸ್ತುಪ್ರಪಂಚದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವುದು ; ಏಕೆಂದರೆ ಭಗವಂತನು ಅನಂತಸ್ವರೂಪಿ, ವಿಶ್ವವ್ಯಾಪಿ. ಹೀಗೆ ದೇವರನ್ನು ಭೌತಿಕವಾಗಿ ಮತ್ತು ಅಂತಃಚಕ್ಷುವಿನ ಮೂಲಕ ನೋಡಲು ಸಾಧ್ಯ ಎನ್ನುವುದು ಶ್ರೀರಾಮಕೃಷ್ಣರು ಆಧುನಿಕ ಯುಗಕ್ಕೆ ನೀಡಿದ ವಿಶೇಷವಾದ ಸಂದೇಶ. ಭಗವಂತನನ್ನು ಹೊರಕಣ್ಣಿನಿಂದ ನೋಡಲು ಸಾಧ್ಯವಾಗುವುದು ಅವನನ್ನು ಅಂತಃಚಕ್ಷುವಿನ ಮೂಲಕ ನೋಡುವಂತಾದಾಗ ಮಾತ್ರ. ಅಂತರಂಗದ ಪಾರಮಾರ್ಥಿಕ ಬೆಳವಣಿಗೆಯಾದಾಗ ಮಾತ್ರ ಹೊರಗಡೆ ವಸ್ತುತಃ ಭಗವಂತನನ್ನು ಕಂಡು ಕಾಯಕದಲ್ಲಿ ಕೈಲಾಸಸಿದ್ಧಿ ಪಡೆಯಲು ಸಾಧ್ಯವಾದೀತು. ಒಬ್ಬ ಸಾಮಾನ್ಯ ರೈತನೋ, ಸರಳ ಗೃಹಿಣಿಯೋ ತನ್ನ ಕೆಲಸ ಕಾರ್ಯಗಳ ನಡುವೆಯೂ ಭಗವದನುಭವ ಪಡೆಯಬಹುದು. ಆ ವ್ಯಕ್ತಿ ಪಾರಮಾರ್ಥಿಕವಾಗಿ ಬೆಳೆದು ಪರಿಪಕ್ವವಾಗಿರಬೇಕು. ಪರಿಶುದ್ಧ ಹೃದಯಿಯಾಗಿರಬೇಕು, ಅಷ್ಟೆ. ಭಗವತ್ಸಾಕ್ಷಾತ್ಕಾರಕ್ಕೆ ವ್ಯಕ್ತಿಯ ವೃತ್ತಿ, ಜೀವನ ಮಾರ್ಗ ಮುಂತಾದ ಉಪಾಧಿಗಳು ಮುಖ್ಯವಲ್ಲ—ಅಂತರಂಗ ಶುದ್ಧಿಯೊಂದಿದ್ದರೆ ಸಾಕು. ವೃತ್ತಿ, ಜೀವನ ಮಾರ್ಗ ಮುಂತಾದವು ವೈಯಕ್ತಿಕ ಆಯ್ಕೆಗಳಾಗಿದ್ದು ಅಂತರಂಗಶುದ್ಧಿ ಎಂಬುದು ಸಾರ್ವತ್ರಿಕ, ಸಾರ್ವಲೌಕಿಕವಾದುದು.

ಇನ್ನೊಬ್ಬ ಸಂನ್ಯಾಸಿನಿ : ಧ್ಯಾನ ಅಥವಾ ಭಗವತ್ ಪ್ರಾರ್ಥನೆ ಕುರಿತು ನಾನೊಂದು ಪ್ರಶ್ನೆ ಕೇಳಲಿಚ್ಛಿಸುತ್ತೇನೆ. ನಾವು ಹೇಗೆ ಪ್ರಾರ್ಥನೆ ಮಾಡಬೇಕು, ಏತಕ್ಕೋಸ್ಕರ ಪ್ರಾರ್ಥನೆ ಮಾಡಬೇಕು ?

ಸ್ವಾಮೀಜಿ : ಪ್ರಾರ್ಥನೆಯಲ್ಲಿ ನಾನಾ ವಿಧಗಳಿವೆ—ಅವು ವ್ಯಕ್ತಿಯ ಆಧ್ಯಾತ್ಮಿಕ ಬೆಳವಣಿಗೆಯ ಮಟ್ಟವನ್ನು ಹೊಂದಿಕೊಂಡಿರುತ್ತವೆ. ಜನ ಪ್ರಾಪಂಚಿಕ ಸುಖಸಂತೋಷಗಳಿಗಾಗಿ ಪ್ರಾರ್ಥನೆ ಮಾಡುತ್ತಾರೆ, ಸತ್ತಮೇಲೆ ಸದ್ಗತಿಗಾಗಿ ಪ್ರಾರ್ಥಿಸುವವರಿದ್ದಾರೆ. ದೈಹಿಕ ಹಾಗೂ ಮಾನಸಿಕ ರೋಗಗಳ ನಿವಾರಣೆಗಾಗಿ ಪ್ರಾರ್ಥಿಸುವವರಿದ್ದಾರೆ, ನೈತಿಕ, ಪಾರಮಾರ್ಥಿಕ ಮೌಲ್ಯಗಳಿಗಾಗಿ ಪ್ರಾರ್ಥಿಸುವವರೂ ಉಂಟು ; ಕೆಲವರು ಹೃದಯ ಪರಿಶುದ್ಧಿ ಬಯಸಿದರೆ, ಭಗವದನುಗ್ರಹಕ್ಕಾಗಿ, ಭಗವತ್‌ದರ್ಶನಕ್ಕಾಗಿ ಹಂಬಲಿಸಿ ಪ್ರಾರ್ಥಿಸುವವರೂ ಹಲವು ಮಂದಿ. ಇದೆಲ್ಲವೂ ಪ್ರಾರ್ಥನೆಯೇ ಹೌದು. ಆದರೆ ಒಬ್ಬ ವ್ಯಕ್ತಿಯು ಆಧ್ಯಾತ್ಮಿಕವಾಗಿ ಪರಿಪಕ್ವನಾದ ಹಾಗೆಲ್ಲ ಪ್ರಾಪಂಚಿಕ ಆಮಿಷಗಳ ಹಂಬಲ ಕುಗ್ಗಿ ಅವನು ಅಂಥ ಪ್ರಾರ್ಥನೆ ನಿರಾಕರಿಸುತ್ತಾನೆ ಎಂದು ಸಕಲ ಸಾಧುಸಂತರೂ ಹೇಳುತ್ತಾರೆ. ದೈವಪ್ರೇಮವು ಆಗ ಒಂದು ಅನ್ವೇಷಣೆಯಾಗುತ್ತದೆ. ಸದ್ಗುಣಗಳು, ಸಲ್ಲಕ್ಷಣಗಳು ಅಂಥ ದೈವಪ್ರೇಮಕ್ಕೆ ಕಾರಣವಾಗುತ್ತದೆ. ಪ್ರಾಪಂಚಿಕ ಸೌಖ್ಯ ಫಲಗಳನ್ನು ಮಾನವ ಪ್ರಯತ್ನಗಳ—ಪರಸ್ಪರ ಸಹಕಾರದ ಪ್ರಯತ್ನಗಳ ಮೂಲಕ ಪಡೆಯಬಹುದು. ಇದೇ ಆಧುನಿಕ ಸರ್ವೋದಯ ಸಮಾಜದ

ಗೊತ್ತುಗುರಿಗಳು. ಆಧುನಿಕ ವಿಜ್ಞಾನ ಹಾಗೂ ತಂತ್ರಜ್ಞಾನಗಳ ನೆರವಿನಿಂದ ಎಲ್ಲಾ ಕಡೆ ಸಕಲ ಪ್ರಜೆಗಳಿಗೂ ಅವರ ಕನಿಷ್ಠ ಅಗತ್ಯಗಳನ್ನು—ಆಹಾರ, ವಸತಿ, ಬಟ್ಟೆ, ಶಿಕ್ಷಣ—ಇವನ್ನು ಒದಗಿಸುವ ಶಕ್ತಿ ಮನುಷ್ಯನಿಗೆ ಒದಗುತ್ತಿದೆ. ಅನೇಕ ದೇಶಗಳು ಈಗಾಗಲೆ ಈ ಅಗತ್ಯಗಳನ್ನು ತಮ್ಮ ಪ್ರಜೆಗಳಿಗೆ ಪೂರೈಸುತ್ತಿವೆ. ಅಮೇರಿಕ ಸಂಸ್ಥಾನದಲ್ಲಿ ಹಲವೆಡೆ ನನ್ನ ಭಾಷಣಗಳಲ್ಲಿ ಇದನ್ನು ಪ್ರಸ್ತಾಪಿಸಿ ನಾನು ಹೀಗೆ ಹೇಳಿದೆ : 'ಓ ಭಗವಂತ, ಈ ದಿನ ನಮಗೆ ದಿನನಿತ್ಯದ ಆಹಾರ ಕೊಡು' ಎಂದು ನೀವು ಪ್ರಾರ್ಥಿಸುವಿರೇಕೆ ? ನಿಮ್ಮ ಉದ್ಯೋಗಶೀಲತೆ, ಸಹಕಾರದ ದುಡಿಮೆಗಳ ಫಲವಾಗಿ ನಿಮ್ಮ ದೇಶದಲ್ಲಿ ಸಾಕಷ್ಟು ಹೇರಳ ಪ್ರಮಾಣದ ಆಹಾರವಿದೆ : ಅವರಿಗೆ ನಾನು ವಿನೋದಕ್ಕಾಗಿ ಹೇಳಿದೆ : ನೀವು ದಿನವೂ ಭಗವಂತನನ್ನು ಪ್ರಾರ್ಥಿಸಿ ಬೇಡಬೇಕಾದುದು ನಿಮಲ್ಲಿ ಏನು ಕೊರತೆಯಾಗಿದೆಯೋ ಅದನ್ನು. ಪ್ರತಿದಿನ ಬೆಳಿಗ್ಗೆ ಮನೆ ಬಿಡುವ ಮುನ್ನ ನೀವು ಬೇಡಬೇಕಾದುದು 'ಓ ಭಗವಂತ ಈ ದಿನ ನಮ್ಮ ಕಾರುಗಳನ್ನು "ಪಾರ್ಕ್" ಮಾಡಲು ಸಾಕಷ್ಟು ಸ್ಥಳಾವಕಾಶ ಕರುಣಿಸು' ಎಂದು.

ಇನ್ನೊಬ್ಬ ಸಂನ್ಯಾಸಿನಿ : ಒಬ್ಬ ವ್ಯಕ್ತಿಗೆ ಭಗವಂತನ ಸಾಕ್ಷಾತ್ಕಾರ ಲಭಿಸಿದ ಮೇಲೆಯೂ ಆ ವ್ಯಕ್ತಿಗೆ ದೇವರನ್ನು ಕುರಿತ ಸಮಸ್ಯೆಗಳು ಉದ್ಭವಿಸಲು ಸಾಧ್ಯವೇ ?

ಸ್ವಾಮೀಜಿ : ಇಲ್ಲ, ದೇವರನ್ನು ಕುರಿತ ಯಾವ ಸಮಸ್ಯೆಗಳೂ ಇರಲಾರವು ; ಆದರೆ ಆ ವ್ಯಕ್ತಿಯ ಸ್ವಂತ ದೈನಂದಿನ ಜೀವನದ ಸಮಸ್ಯೆಗಳು ಬಹುಶಃ ಇದ್ದಾವು. ಭಗವತ್ಸಾಕ್ಷಾತ್ಕಾರ ಲಭಿಸಿ ದಾಕ್ಷಣವೇ ಎಲ್ಲಾ ಸಮಸ್ಯೆಗಳು—ಉದಾಹರಣೆಗೆ ಖಾಯಿಲೆಕಸಾಲೆ ಮುಂತಾದ ಬಾಧೆಗಳು—ಮುಕ್ತಾಯವಾದವೆಂದು ಅರ್ಥವಲ್ಲ. ಸಾಧುಸಂತರಿಗೂ ಕ್ಯಾನ್ಸರ್ ಮುಂತಾದ ರೋಗಗಳು ಬರಬಹುದು. ಇವು ದೈಹಿಕ ರೋಗಗಳು—ಸಾಧುಸಂತರಿಗೆ ಇವು ಗೊತ್ತುಂಟು ಮತ್ತು ಅಂಥ ರೋಗಗಳನ್ನು, ಮನುಷ್ಯನ ಬುದ್ಧಿಚಾತುರ್ಯವು ನಿವಾರಿಸಲಾಗದಂಥ ರೋಗಗಳನ್ನು ಹೇಗೆ ಸಹಿಸಿಕೊಳ್ಳಬೇಕೆಂಬುದು ಸಹ ಆ ಸಾಧುಸಂತರಿಗೆ ಗೊತ್ತು. ಇಂಥ ಮನೋಭಾವವನ್ನು ವಿವರಿಸುತ್ತಾ ಶ್ರೀರಾಮಕೃಷ್ಣರು ಒಂದು ಹಾಡಿನ ಸಾಲನ್ನು ಉದ್ಧರಿಸಿ ಹೇಳುತ್ತಿದ್ದರು : ದೇಹೊ ಜಾನೇ , ದುಃಖ ಜಾನೇ, ಮೊನ್ ತುಮಿ ಆನಂದೇ ಥಾಕೋ—(ದೇಹ ಮತ್ತು ಅದರ ನೋವು ಸಂಕಟಗಳು ಒಂದನ್ನೊಂದು ಚೆನ್ನಾಗಿ ಬಲ್ಲವು. ಆದರೆ ಓ ಮನಸ್ಸೇ ! ನೀನು ಭಗವದಾನಂದದಲ್ಲಿ ಮುಳುಗಿರು !) ಭಗವಂತ ತನ್ನ ಭಕ್ತರಿಗೆ ಅವರ ಘೋರ ವೇದನೆಗಳನ್ನು ತಾಳಿಕೊಳ್ಳುವಂಥ ಶಕ್ತಿ-ಸಹಿಷ್ಣುತೆಗಳನ್ನು ನೀಡುತ್ತಾನೆ. ವೈಯಕ್ತಿಕ ನೋವು ನರಳಿಕೆಗಳಾಗಲಿ, ಸಾರ್ವಜನಿಕ ಕಾರ್ಯಗಳ ಹೊಣೆಗಾರಿಕೆ, ಭಾರ ಗಳಾಗಲಿ ಏನೇ ಬಂದರೂ ಭಗವದ್‌ಭಕ್ತರು ಅವುಗಳನ್ನು ಭಗವತ್ಪ್ರೇಮದ ಸಲುವಾಗಿ ಸಮಚಿತ್ತತೆ ಯಿಂದ ಸಹಿಸಿಕೊಳ್ಳಬಲ್ಲರು ; ಭಗವಂತ ಅತನಿಗೆ / ಆಕೆಗೆ ಅದಕ್ಕೆ ಅಗತ್ಯವಾದ ಶಕ್ತಿಯನ್ನು ಕರುಣಿಸುತ್ತಾನೆ. ಸಂತಪಾಲ್ ಹೇಳುತ್ತಾರೆ :

*ನೀನು ನಮ್ಮ ಮೇಲೆ ಹೊರಿಸಿದ ನಿನ್ನ ಶಿಲುಬೆಯನ್ನು ನಾವು ಹೊತ್ತಿದ್ದೇವೆ—ಸಾಯುವವರೆಗೂ ಅದನ್ನು ಹೊರಬಲ್ಲ ಶಕ್ತಿಯನ್ನು ದಯಪಾಲಿಸು!*

ಮಹಡಿಯ ಮೇಲೆ ಕಾಯಿಲೆಯಿಂದ ನರಳುತ್ತ ಮಲಗಿರುವ ನಿಮ್ಮ ಸೋದರಿ (ಸಂನ್ಯಾಸಿನಿ) ಇಲೋನಾ ಅವರಿಗೆ ನಾನು ಹೇಳಿದೆ : 'ನಿನ್ನ ದೈವಪ್ರೇಮವು ನಿನ್ನ ಕಾಯಿಲೆಯ ಕಷ್ಟವನ್ನು ತಾಳುವ ಅದರಿಂದ ಗುಣಹೊಂದುವ ಶಕ್ತಿಯನ್ನು ನೀಡುತ್ತದೆ. ಅವಿಲಾದ ಸಂತ ಥೆರೆಸಾ ಆತ್ಮಕಥನದಿಂದ ನಾನು ಆಕೆಗೆ ಒಂದು ಪ್ರಸಂಗವನ್ನು ನೆನಪಿಸಿದಾಗ ಆಕೆ ತುಂಬಾ ಸಂತೋಷಪಟ್ಟರು. ಥೆರೆಸಾಗೆ ಮುಪ್ಪು ಬಂದಿತ್ತು ; ಅವರು ತಮ್ಮ ಮೇಲ್ವಿಚಾರಣೆಗೊಳಪಟ್ಟ ಕಾನ್ವೆಂಟ್ ಒಂದನ್ನು ಪರಾಮರ್ಶಿಸಲು ಹೋಗಿದ್ದರು. ದಾರಿಯಲ್ಲಿ ಅವರು ಒಂದು ಹೊಳೆ ದಾಟಬೇಕಾಗಿ ಬಂತು. ಆಕೆ ನೀರಿನಲ್ಲಿ ಹಾಯ್ದು ಹೋಗುತ್ತ [illegible] ಪರ್ವತ ಸಾಲಿನಲ್ಲಿ

ಸುರಿದಿದ್ದ ಮಳೆಯ ಕಾರಣದಿಂದ ಪ್ರವಾಹವು ವಿಪರೀತ ಮೇಲೇರಿ ಬಂತು. ತಾನು ಇನ್ನೇನು ಕೊಚ್ಚಿಹೋಗುತ್ತೇನೆ ಎಂದನಿಸಿತು. ಆಗ ಆಕೆ ಭಕ್ತಿಯ ಕ್ರೋಧಾವೇಶದ ಮನಃಸ್ಥಿತಿಯಲ್ಲಿ ದೇವರನ್ನು ಕೇಳಿದರು : "ಭಗವಂತ ! ನಿನ್ನ ಭಕ್ತರನ್ನು ಹೀಗೆ ನಡೆಸಿಕೊಳ್ಳುವೆಯಲ್ಲಾ, ಇದು ಸರಿಯೇ ?" ಭಗವಂತನ ಪ್ರತ್ಯುತ್ತರ ಆಕೆಗೆ ಕೇಳಿಸಿತು : 'ಹೌದು. ನಾನು ಕೆಲವೊಮ್ಮೆ ನನ್ನ ಭಕ್ತರನ್ನು ಹೀಗೆ ಪರೀಕ್ಷಿಸುತ್ತೇನೆ.' ಅದಕ್ಕೆ ಥೆರೆಸಾ ಪ್ರೇಮದಿಂದ ಚುಚ್ಚು ಉತ್ತರ ಕೊಡುತ್ತಾ 'ಅಹ... ಆದ್ದರಿಂದಲೇ ನಿನ್ನ ಭಕ್ತರ ಸಂಖ್ಯೆ ಇಷ್ಟು ವಿರಳವಾಗುತ್ತಿದೆ !' ಅದು ನಿಜವಾದ ದೈವಭಕ್ತಳೊಬ್ಬಳ ಸುಂದರ, ನೇರ, ಆಪ್ತ ಚುಚ್ಚುಮಾತಾಗಿತ್ತು. ಭಗವಂತ—ಅವನ ಭಕ್ತರ ನಡುವೆ ದೂರವೇ ಇಲ್ಲ, ಅವರನ್ನು ಯಾವುದೂ ಪ್ರತ್ಯೇಕಿಸಲಾರದು. ಇಂಥ ಆಪ್ತಭಾವದಿಂದ ಶ್ರೀರಾಮಕೃಷ್ಣರು ನಮಗೆ ಭರವಸೆ ನೀಡುತ್ತಾರೆ : ನಾವು ದೇವರ ಬಳಿ ದೂರು ಒಯ್ಯಬಹುದು, ಅವನನ್ನು ಚುಚ್ಚುಮಾತುಗಳಿಂದ ನಿಂದಿಸಬಹುದು, ಅವನಿಗೆ ಪ್ರಾರ್ಥನೆ ಸಲ್ಲಿಸಬಹುದು—ಅವೆಲ್ಲವೂ ಭಕ್ತಿಯ ಕ್ರೀಡೆಗಳಾಗುತ್ತವೆ. ಭಕ್ತಿಯ ಈ ಉನ್ನತ ಸ್ತರದಲ್ಲಿ ಭಗವಂತನ ಮಹಾವೈಭವ ಮಾಯವಾಗಿ, ಅವನು ಭಕ್ತರ ಮುಂದೆ ಪ್ರೇಮವೇ ಮೂರ್ತಿವೆತ್ತಂತೆ ಕಾಣಿಸಿಕೊಳ್ಳುತ್ತಾನೆ.

ಇನ್ನೊಬ್ಬ ಸಂನ್ಯಾಸಿನಿ : 'ನಾವು ಭಗವಂತನನ್ನು ಒಬ್ಬ ಆಗಂತುಕ ಅಥವಾ ಪರಕೀಯನೆಂದು ಪರಿಗಣಿಸಿದಾಗ ನಾವು ನಮಗೆ ಹಾಗೂ ಇತರರಿಗೆ ಪರಕೀಯರಾಗುತ್ತೇವೆ'—ಹೀಗೆ ನಾವು ಅಂದು ಕೊಳ್ಳಬಹುದೇ !

ಸ್ವಾಮಿಜಿ : ಅಗತ್ಯವಾಗಿ ಈ ಪರಕೀಯತೆಯ ಭಾವನೆಗೆ ದೂರಪ್ರಜ್ಞೆ, ಅಥವಾ ಅನಾಥಪ್ರಜ್ಞೆಯೇ ಕಾರಣ. ಭಗವಂತ ನಮ್ಮೆಲ್ಲರೊಳಗೂ ಇರುವುದರಿಂದ, ಅವನ ಜತೆಯಲ್ಲಿನ ನಮ್ಮ ಆಪ್ತಭಾವನೆ, ಉಳಿದೆಲ್ಲರ ಜತೆಯೂ ಆ ಆಪ್ತಭಾವನೆಯನ್ನು ಬೆಳೆಸುತ್ತದೆ. ಆದರೆ ಭಗವಂತನಿಂದ ದೂರವಾದೆ ವೆಂಬ ಭಾವನೆ ಉಂಟಾದಾಗ, ನಮ್ಮ 'ಅಹಂ' ನಮ್ಮ ಅಂತರಾತ್ಮನಿಂದಲೇ ದೂರವಾಗಿರುವ ತಬ್ಬಲಿತನ ಕಾಡುತ್ತದೆ—ನಮ್ಮ ಹೆಂಡತಿ, ಗಂಡ, ತಂದೆ ತಾಯಿಗಳು ಅಥವಾ ಮಕ್ಕಳು, ಅಥವಾ ನಾಗರಿಕ-ನಾಗರಿಕರ ನಡುವೆ ಸಹ ಈ ತೆರನಾದ ಅನಾಥಪ್ರಜ್ಞೆ ಹುಟ್ಟಿಬಿಡುತ್ತದೆ. ನಿಜವಾಗಿ ಭಗವಂತ ಯಾರಿಗೂ ಪರಕೀಯನಲ್ಲ ; ಆದರೆ ನಾವು ಅವನನ್ನು ಹಾಗೆ ಭಾವಿಸಿಬಿಡುತ್ತೇವೆ. ಭಗವಂತ ಎಲ್ಲರಲ್ಲೂ ಇದ್ದಾನೆ, ಆದರೆ ಎಲ್ಲರೂ ಭಗವಂತನೊಳಗಿಲ್ಲ—ಆದ್ದರಿಂದಲೇ ಮಾನವ ಸಂಕಟ ಪಡುತ್ತಾನೆ—ಎನ್ನುತ್ತಾರೆ ಶ್ರೀರಾಮಕೃಷ್ಣರು. ವಿಚಾರಶೀಲ ತತ್ತ್ವಶಾಸ್ತ್ರದಲ್ಲಿನ ಅಂತಿಮ ಸತ್ಯ. ಧರ್ಮದಲ್ಲಿ ಆತ್ಯಂತಿಕ ಸತ್ಯವಾಗಿ ಪರಿಣಮಿಸುತ್ತದೆ.

ಒಬ್ಬ ಸಂನ್ಯಾಸಿನಿ : ನಾವು ಕಾನ್ವೆಂಟಿನ ಹೊರಗಡೆ ಮಾಡುವ ಕೆಲಸಕಾರ್ಯಗಳಿಗೂ ಧ್ಯಾನಪರ ಜೀವನಕ್ಕೂ ಹೊಂದಾಣಿಕೆ ಸಾಧ್ಯವೇ ! ಭಾರತದಲ್ಲಿ ಮಠೀಯ ಆಧ್ಯಾತ್ಮಿಕತೆ ಈ ಸಮಸ್ಯೆಯನ್ನು ಹೇಗೆ ಪರಿಹರಿಸಿದೆ ?

ಸ್ವಾಮೀಜಿ : ಭಾರತದಲ್ಲಿನ (ಮಠೀಯ) ಸಂನ್ಯಾಸಿ ಜೀವನ ಪ್ರಾರಂಭದಿಂದಲೂ ಸಂಪೂರ್ಣವಾಗಿ ಧ್ಯಾನಪರವಾಗಿತ್ತು. ಸಂನ್ಯಾಸಿಗಳು ಅಥವಾ ಸಂನ್ಯಾಸಿನಿಯರು ಮಠ ಅಥವಾ ಕಾನ್ವೆಂಟುಗಳಲ್ಲಿ ವಾಸಿಸುತ್ತಿದ್ದರು ಅಥವಾ ಪರಿವ್ರಾಜಕ ಜೀವನ ನಡೆಸುತ್ತಾ ಊರಿಂದ ಊರಿಗೆ ಅಲೆಯುತ್ತಾ ಗೃಹಸ್ಥರು ನೀಡುವ ಭಿಕ್ಷೆಯಿಂದ ಹೊಟ್ಟೆ ಹೊರೆಯುತ್ತಿದ್ದರು. ಅವರು ಕಾಡಿನಲ್ಲಿ ಅಥವಾ ಗುಹೆಯಲ್ಲಿ ಏಕಾಕಿಯಾಗಿಯೋ ಗುಂಪಾಗಿಯೋ ಇರುವಾಗ ಹತ್ತಿರದ ಯಾವುದೋ ಒಂದೊಂದು ಕುಟುಂಬದವರು ಅವರಿಗೆ ಊಟೋಪಚಾರ ನಡೆಸುತ್ತಿದ್ದರು. ಕೆಲವು ಗೃಹಸ್ಥರೇ ಈ ಉದ್ದೇಶಕ್ಕಾಗಿ ಸ್ಥಾಪಿಸಿದ ಛತ್ರ ಹಾಗೂ ಧರ್ಮಸಂಸ್ಥೆಗಳೂ ಈ ಕೆಲಸದಲ್ಲಿ ನಿರತರಾಗುತ್ತಿದ್ದವು. ಕೆಲವು ಸಾಹಸಿ ಸಂನ್ಯಾಸಿಗಳು ಕಂದಮೂಲಫಲಾದಿಗಳನ್ನೋ ಅಥವಾ ಆಕಸ್ಮಾತ್ತಾಗಿ ದೊರೆಯುವ ಯಾವುದೇ

ಆಹಾರವಸ್ತುಗಳನ್ನು ಭಕ್ಷಿಸಿ ಜೀವಿಸುತ್ತಿದ್ದರು. ಇವರ್‍ಯಾರೂ ಲೌಕಿಕ ವ್ಯವಹಾರಗಳ ಕಾಳಜಿಯುಳ್ಳವರಾಗಿರಲಿಲ್ಲ.

ಆದರೆ ಆಧುನಿಕ ಯುಗದ ಈ ಸಂಘಸಂಸ್ಥೆಗಳಲ್ಲಿ, ಹಲವು ಸಂನ್ಯಾಸಿ ಜೀವನದ ಕಾರ್ಯಕ್ರಮಗಳಲ್ಲಿ, ಬದಲಾವಣೆಯುಂಟಾಗುತ್ತಿದೆ. ಒಂದನೆಯದಾಗಿ ಅವರ ಜೀವನ ಮಠಗಳಲ್ಲಿ ಕೇಂದ್ರೀಕೃತವಾಗಿದೆ ; ಎರಡನೆಯದಾಗಿ (ಮೊದಲನೆಯದಕ್ಕೆ ಸಂಬಂಧಿಸಿದಂತೆಯೇ) ಸಂನ್ಯಾಸಿ-ಸಂನ್ಯಾಸಿನಿಯರು ಈಗ ಒಬ್ಬೊಬ್ಬರೇ ಹೊರಗೆ ಹೋಗಿ ಭಿಕ್ಷೆ ಬೇಡುವುದಿಲ್ಲ. ಸಂಸಾರಸ್ಥ ಭಕ್ತಾದಿಗಳು ಸ್ವಯಂ ಸೇವಾಭಾವನೆಯಿಂದ ನೀಡುವ ದತ್ತಿದಾನಗಳ ಆಧಾರದ ಮೇಲೆ ಸ್ಥಾಪಿಸುವ ಮಠೀಯ ಸಂಸ್ಥೆಗಳು ಸಂನ್ಯಾಸಿಗಳ ಯೋಗಕ್ಷೇಮ ನೋಡಿಕೊಳ್ಳುವುದೂ ಉಂಟು. ಈ ತೆರನಾದ ಜೀವನ ವ್ಯವಸ್ಥೆಯು ಪರಿವ್ರಾಜಕರ, ಕಾಡು-ಗವಿ-ಆಶ್ರಮಾದಿಗಳಲ್ಲಿ ವಾಸಿಸುವ ಜೀವನಕ್ರಮದ ಜತೆಯಲ್ಲೇ ನಡೆದುಕೊಂಡು ಬರುತ್ತಿದೆ. ಈ ರೀತಿಯ ಹಲವು ಆಧುನಿಕ ಧರ್ಮಸಂಸ್ಥೆ—ಮಠಗಳು ಈಗೀಗ ಬಡತನ, ಅನಕ್ಷರತೆ, ರೋಗರುಜಿನಗಳು ಮುಂತಾದ ಸಾಮಾಜಿಕ—ಲೌಕಿಕ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುತ್ತಿವೆ. ಇಂಥ ಉದ್ದೇಶಕ್ಕಾಗಿಯೇ ಕೆಲವರು ಸಂಘಸಂಸ್ಥೆಗಳನ್ನು ಸ್ಥಾಪಿಸಿ ಸಾರ್ವಜನಿಕ ಸೇವಾ ಕಾರ್ಯದಲ್ಲಿ ನಿರತರಾಗಿದ್ದಾರೆ. ನಾನು ಸೇರಿರುವ ಶ್ರೀರಾಮಕೃಷ್ಣ ಮಠ ಧಾರ್ಮಿಕ ಸಂಸ್ಥೆಯೇ ಈ ವಿಶಿಷ್ಟ ಕಾರ್ಯದಲ್ಲಿ ನಿರತವಾಗಿದೆ. ಪ್ರಾಚೀನ ಭಗವದ್ಗೀತೆಯ ತತ್ತ್ವಗಳ ಮುಖೇನ ವ್ಯಾಖ್ಯಾನಿಸಿ ರೂಪಿಸಿದ ವೇದಾಂತ ಹಾಗೂ ಶ್ರೀರಾಮಕೃಷ್ಣ-ಸ್ವಾಮಿ ವಿವೇಕಾನಂದರು ರೂಪಿಸಿದ ಸರ್ವಧರ್ಮ ಸಮನ್ವಯ ವೇದಾಂತದ ಬೆಳಕಿನಲ್ಲಿ ಈ ನಮ್ಮ ಸಂಸ್ಥೆ ಕಾರ್ಯನಿರತವಾಗಿದೆ. ಸೇವಾನಿರತ, ಕ್ರಿಯಾಶೀಲ ಬದುಕು ಹಾಗೂ ಧ್ಯಾನಪರ ಜೀವನ ಎರಡೂ ಜತೆಯಾಗಿ ಈ ಸಂಸ್ಥೆಯ ಜೀವನಕ್ರಮವನ್ನು ರೂಪಿಸುತ್ತಿದೆ. ಭಾರತವು ಈಗ ಕೈಗಾರಿಕಾ ಕ್ರಾಂತಿಯೊಂದನ್ನು ಎದುರಿಸುತ್ತಿದೆ ; ಇದರಿಂದಾಗಿ ಕ್ಷಿಪ್ರ ಗತಿಯ, ವ್ಯಾಪಕ, ಸಾಮಾಜಿಕ ಬದಲಾವಣೆಗಳುಂಟಾಗುತ್ತಿವೆ. ಸಹಜವಾಗಿಯೇ ಭಾರತದಲ್ಲಿನ ಮಠೀಯ ಧರ್ಮಸಂಸ್ಥೆಗಳ ರಚನಾ ವ್ಯವಸ್ಥೆ-ಕಾರ್ಯಕ್ರಮಗಳಲ್ಲಿಯೂ ಬದಲಾವಣೆಗಳು ಅಗತ್ಯವಾಗುತ್ತಿವೆ. ನಿಜವಾಗಿ ಇದು ಭಾರತದ ವಿವೇಚನೆ-ವಿಚಾರಶೀಲತೆಗಳಿಗೆ ಸವಾಲು ಒಡ್ಡುತ್ತಿದೆ. ಆದರೆ ಸ್ವಾಮಿ ವಿವೇಕಾನಂದರಂಥ ಧರ್ಮಬೋಧಕರ ಮೂಲಕ ಭಾರತದ ವಿವೇಚನಾಶೀಲತೆ ಈ ಸವಾಲನ್ನು ಎದುರಿಸುತ್ತಿದೆ. ಮಹಾನ್ ವ್ಯಕ್ತಿಯ ವಿಶೇಷ ಪ್ರಭಾವದಿಂದ ಆರ್ಷೇಯ (ಮಠೀಯ) ಆಧ್ಯಾತ್ಮಿಕತೆ ಹೊಸಶಕ್ತಿಯನ್ನು ರಾಷ್ಟ್ರೀಯ ಪ್ರಸ್ತುತತೆಯನ್ನು ಪಡೆದು ಲೌಕಿಕ ಸಮಾಜದೊಂದಿಗೆ ವಿಚಾರ ಪ್ರದೀಪ್ತ ಸಂಬಂಧ ಸ್ಥಾಪಿಸಿದೆ. ಈ ಕಾರಣದಿಂದ ಜನ-ಸಾಮಾನ್ಯರಿಗೆ ಇಂದಿನ ಆಧುನಿಕ ಪುರೋಗಾಮಿ ವಿಚಾರವಂತರಿಗೂ ಸಹ ಹಿಂದಿನಂತೆಯೇ ಸಂನ್ಯಾಸಿಗಳ ಬಗೆಗೆ ಗೌರವಾದರಗಳಿವೆ—ಸಾಧುಸಂನ್ಯಾಸಿಗಳ ಸೇವೆಯನ್ನು ಅವರು ಸಂತೋಷದಿಂದ ಕೈಕೊಳ್ಳುತ್ತಾರೆ—ಅಂತೆಯೇ ಮಠೀಯ ಸಂಸ್ಥೆಯ ಧಾರ್ಮಿಕ ವ್ಯಕ್ತಿಗಳು ವಿಶೇಷ ಸಂತೋಷದಿಂದ ಸಾಮಾಜಿಕ ಸೇವಾಕಾರ್ಯಗಳಲ್ಲಿ ಪಾಲುಗೊಳ್ಳುತ್ತಿದ್ದಾರೆ.

ಮತ್ತೊಬ್ಬ ಸಂನ್ಯಾಸಿನಿ : ಸಂನ್ಯಾಸಿನಿಯರಾದ ನಾವು ಕಾನ್ವೆಂಟಿನಲ್ಲಿ ವಾಸಿಸುತ್ತ, ಹೊರಗಡೆ ಸೇವೆ ಸಲ್ಲಿಸುತ್ತಾ ನಮ್ಮ ಖರ್ಚಿನಲ್ಲೇ ಕಾನ್ವೆಂಟನ್ನು ನಡೆಸುತ್ತಿದ್ದೇವೆ. ಪಾಶ್ಚಾತ್ಯ ಸಮಾಜವು, ಅದರಲ್ಲೂ ವಿಶೇಷವಾಗಿ ಎರಡನೆ ಮಹಾಯುದ್ಧಾನಂತರ ಕ್ರಾಂತಿಕಾರಕ ಬದಲಾವಣೆಗಳಿಗೆ ಪಕ್ಕಾಗುತ್ತಿದೆ. ಈಗೀಗ ಸಂನ್ಯಾಸಿನಿಯರಿಗೆ ಸಹಾಯ ಮಾಡುವುದರಲ್ಲಿ ಜನರ ಆಸಕ್ತಿ ಕಡಿಮೆಯಾಗುತ್ತಿದೆ—ಆದ್ದರಿಂದ ಹೆಚ್ಚಾಗಿ ನಾವುಗಳೇ ದುಡಿದು ಸಂಪಾದಿಸಿ ಕಾನ್ವೆಂಟು, ಮಠಗಳನ್ನು ನಡೆಸಬೇಕಾಗಿದೆ. ನಾವು ಭಿಕ್ಷೆ ಬೇಡುವ ಅಗತ್ಯವೇನಿಲ್ಲ. ಆಧುನಿಕ ಜೀವನದೊಂದಿಗೆ ನಾವು ಜತೆಗೂಡಬೇಕಾಗಿದೆ ; ಆದರೂ ನಾವು, ಸಂನ್ಯಾಸಿಗಳಾಗಿ ನಮ್ಮ ಅಂತರಂಗದ ಆಧ್ಯಾತ್ಮಿಕ ಜೀವನದಿಂದ ಪುಷ್ಟಿ

ಪಡೆಯಬೇಕಾಗಿದೆ. ಇದು ನಮ್ಮ ಮುಂದೆ ಕಷ್ಟದ ಸಮಸ್ಯೆಯೊಡ್ಡುತ್ತಿದೆ. ಈ ಬಗ್ಗೆ ನೀವು ಕೊಡುವ ಸಲಹೆಗಳೇನಾದರೂ ಇದೆಯೇ ?

ಸ್ವಾಮೀಜಿ : ಪಾಶ್ಚಾತ್ಯ ಜಗತ್ತು ಇಂದಿನ ಪರಿಸ್ಥಿತಿಗಳೊಂದಿಗೆ ಹೊಂದಿಕೊಳ್ಳಲು ಬಹು ಕಷ್ಟ ಪಡುತ್ತಿದೆ. ಪಾಶ್ಚಾತ್ಯರು ಈಗ ನಾಸ್ತಿಕರಾಗುತ್ತಿದ್ದಾರೆ, ಪಾರಮಾರ್ಥಿಕತೆಯನ್ನು ತ್ಯಜಿಸುತ್ತಿದ್ದಾರೆ ಎಂದು ಅದರ ಅರ್ಥವಲ್ಲ. ನಿಜವಾದ ಧರ್ಮವೆಂದರೇನೆಂಬುದರ ಮನಃಪೂರ್ವಕ ಅನ್ವೇಷಣೆಯಲ್ಲಿ ಅವರು ತೊಳಲುತ್ತಿದ್ದಾರೆ. ಆದರೆ ಅವರಿಗೆ ಧರ್ಮದಲ್ಲಿನ ವಿಚಾರರಹಿತ ತತ್ತ್ವಗಳ ಗೊಡ್ಡು ಸಂಪ್ರದಾಯದ ಕಂದಾಚಾರ ವಿಚಾರಗಳ ಬಗ್ಗೆ ತೀವ್ರ ಅತೃಪ್ತಿ ಇದೆ. ಹಳಸಲಾದ ಸಂಸ್ಥೀಕೃತ ಧರ್ಮದ ಅವೈಜ್ಞಾನಿಕ ಮನೋಭಾವ ಅವರಿಗೆ ಹಿಡಿಸದು. ಧರ್ಮದ ವಸಾಹತುಶಾಹಿ ಮತ್ತಿತರ ಪ್ರಾಪಂಚಿಕ ಸ್ವರೂಪಗಳನ್ನು ಕಂಡರೆ ಆಗದು. ಧರ್ಮಕ್ಕೆ ಸಂಬಂಧಿಸಿದ ವಿಚಾರಬದ್ಧವಾದ ಪಾರಮಾರ್ಥಿಕ ತತ್ತ್ವಗಳನ್ನು ಸೋದಾಹರಣವಾಗಿ ರೂಪಿಸಿದಾಗ, ಅವರು ಅವುಗಳಿಗೆ ಹೃತ್ಪೂರ್ವಕವಾಗಿ ಪ್ರತಿಸ್ಪಂದಿಸುತ್ತಾರೆ. ಆಗ ಹೊಸದೊಂದು ಧಾರ್ಮಿಕ ಕ್ರಾಂತಿಯ ಬಿರುಗಾಳಿಯೇ ಪಾಶ್ಚಾತ್ಯಲೋಕದ ಉದ್ವಗಲದ ಮೇಲೆ ಹಾಸಿ ಬೀಸೀತು. ಇದಕ್ಕೆ ಭಾರತವು ಶಕ್ತಿಪೂರ್ಣ ಕೊಡುಗೆ ನೀಡೀತು. ಪರಿಶುದ್ಧವೂ ವಿಚಾರಬದ್ಧವೂ ಆದ ಆಧ್ಯಾತ್ಮಿಕ ಕ್ರೈಸ್ತಧರ್ಮದ ಉದಯಕ್ಕೆ ಅದು ನೆರವಾಗಬಹುದು. ಏತನ್ಮಧ್ಯೆ ಇಂಥದೊಂದು ಅಪೇಕ್ಷಣೀಯ ಕ್ರಾಂತಿಯುಂಟಾಗುವಂತೆ ಮಾಡಲು ಇಂದಿನ ಸಂನ್ಯಾಸಿ-ಸಂನ್ಯಾಸಿನಿಯರು ತಮ್ಮ ಜೀವನ ಹಾಗೂ ಕಾರ್ಯಸಾಧನೆಗಳಲ್ಲಿ ಆಧ್ಯಾತ್ಮಿಕ ಆದರ್ಶಗಳನ್ನು ಎತ್ತಿಹಿಡಿಯಬೇಕು, ಸಮಗ್ರ ಪಾಶ್ಚಾತ್ಯ ಸಮಾಜಕ್ಕೆ ಸ್ಫೂರ್ತಿತರುವ ರೀತಿಯಲ್ಲಿ ಅವರು ಶಕ್ತಿಯ ದೀಪಸ್ತಂಭಗಳಾಗಿ ನಿಲ್ಲಬೇಕು. ಎಂದೆಂದಿಗೂ ತಮ್ಮ ಪವಿತ್ರ ಪರಿಶುದ್ಧ ಜೀವನ ರೀತಿಯ ಮೂಲಕ ಅವರು ದೈವಶ್ರದ್ಧೆಗೆ ಸಾಕ್ಷೀಭೂತರಾಗಿರಬೇಕು. ಅವರು ತಮ್ಮ ಕಾನ್ವೆಂಟು ಗಳನ್ನು, ಮಠ ಮಂದಿರ ವಿಹಾರಗಳನ್ನು ದೇವತಾಶಾಸ್ತ್ರದ ಪ್ರಯೋಗಶಾಲೆಯಂತೆ ಪರಿಗಣಿಸಬೇಕು. ಆದರೂ ಅವರು ಹೊರಗೂ ದುಡಿದು ಜೀವನೋಪಾಯಕ್ಕಾಗಿ ಶ್ರಮಿಸುತ್ತಾ ಲೌಕಿಕ ಪ್ರಪಂಚ ದೊಂದಿಗೆ ಬೆರೆಯುತ್ತಿರುವುದು ಅಗತ್ಯ. ತಮ್ಮ ಈ 'ಲೌಕಿಕ' ದುಡಿಮೆಯೂ ಸಹ ತಮ್ಮ ಆಧ್ಯಾತ್ಮಿಕ ಚಟುವಟಿಕೆಗಳ ಅವಿಭಾಜ್ಯ ಭಾಗವೆಂದೇ ಭಾವಿಸುತ್ತ, ಆಧ್ಯಾತ್ಮಿಕ ಧ್ಯಾನಚಿಂತನೆಗಳು ಹಾಗೂ ಸಕ್ರಿಯವಾದ ಲೋಕಸೇವಾಕಾರ್ಯಗಳು, ಪರಸ್ಪರ ಪೂರಕವೇ ಹೊರತು ವಿರೋಧಾತ್ಮಕವಲ್ಲವೆಂಬು ದನ್ನು ತೋರಿಸಿಕೊಡಬೇಕು. ಕಾಯಕದಲ್ಲಿ ನಿರತರಾಗಿರುವಾಗ ನೀವು ಭಗವಂತನಿಂದ ದೂರವಿರುವು ದಿಲ್ಲ. ಮುಂಬರುವ ಯುಗದಲ್ಲಿ (ಹಿಂದಿನ ಕಾಲದ ಹಾಗೆ) ತಪಸ್ಸು, ಧ್ಯಾನಾದಿ ಚಿಂತನೆಗಳು ಆಶ್ರಮವಾಸಿಗಳ ಬದುಕಿಗೆ ಮೀಸಲಾದ ಪ್ರತ್ಯೇಕ ಚಟುವಟಿಕೆಗಳಾಗಿ ಮಾತ್ರ ತಮ್ಮ ಪ್ರಾಮುಖ್ಯ ವನ್ನುಳಿಸಿಕೊಳ್ಳಲಾರವು ; ಬದಲಾಗಿ, ಪ್ರಾರ್ಥನೆ ಧ್ಯಾನಾದಿಗಳು ಹೆಚ್ಚು ಹೆಚ್ಚು ಆಕರ್ಷಕವಾಗುತ್ತ ವ್ಯಾಪಕವಾಗಿ ಸಂನ್ಯಾಸಿಗಳಷ್ಟೇ ಜನಸಾಮಾನ್ಯರೂ ಬಯಸುವಂತಾಗಬಹುದು ; ಅದು ವರ್ಷಕ್ಕೆ ಒಮ್ಮೆಯೋ ಎರಡು ಸಲವೋ ಅಲ್ಪಕಾಲದ ಹವ್ಯಾಸವಾಗಬಲ್ಲದು. ಈ ಅಲ್ಪಕಾಲಿಕ, ಆದರೆ ತೀವ್ರ, ಆಧ್ಯಾತ್ಮಿಕ ಅನುಭವವು ಅವರು ವರ್ಷವಿಡೀ ತಮ್ಮ ಭಗವತ್‌ಚಿಂತನೆಯನ್ನುಳಿಸಿಕೊಳ್ಳಲು ನೆರವಾಗಬಹುದು.

ಇನ್ನೊಬ್ಬ ಸಂನ್ಯಾಸಿನಿ : ಹೊರಗಿನ ಕಾರ್ಯಚಟುವಟಿಕೆಗಳಿಗಾಗಿ ನಾವು ಒಂದು ವಿಶಿಷ್ಟ ಮನೋಭಾವ ತಳೆದಿರಬೇಕೇ ?

ಸ್ವಾಮಿಜಿ : ಹೌದು ; ಧ್ಯಾನ, ಆರಾಧನೆ, ಪ್ರಾರ್ಥನೆಗಳ ಸಮಯದಲ್ಲಿ ನಾವು ತಳೆಯುವ ಆಧ್ಯಾತ್ಮಿಕ ಮನೋಭಾವವನ್ನೇ, ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ, ನಮ್ಮ ಕೆಲಸಕಾರ್ಯ ಗಳಲ್ಲೂ ಮುಂದುವರಿಸಿಕೊಂಡು ಹೋಗಬೇಕು. ಭಗವತ್‌ಚಿಂತನೆಯೇ ಕೇಂದ್ರವಾಗುಳ್ಳ ಜೀವನ

ನಡೆಸಲು ಪ್ರಯತ್ನಿಸಬೇಕು. ನೀವು ಮಾಡುವ ಕೆಲಸವು ಪ್ರಾಪಂಚಿಕ ಎಂಬ ಭಾವನೆ ನಿಮಗೆ ಇದ್ದರೆ ಅದು ಆಧ್ಯಾತ್ಮಿಕವಾಗಿ ನಿಮಗೆ ಪ್ರಯೋಜನವಾಗದು. ಆಧ್ಯಾತ್ಮಿಕ ಜೀವನವೆಂಬುದು ವಿಶ್ವ ವ್ಯಾಪಕವಾದುದು. ನಾವು ನಮ್ಮ ಕೇಂದ್ರವನ್ನು ಸೀಮಿತವಾದ ನಮ್ಮ 'ಅಹಮ್'ನಿಂದ ಬದಲಾಯಿಸಿ ದೇವರ ಕಡೆ ತಿರುಗಿಸಿದಾಗ, ಕೆಲಸಕಾರ್ಯಗಳ ಬಗ್ಗೆ ನಮ್ಮ ಮನೋಭಾವ ಮಾರ್ಪಾಡಾಗಬಹುದೇ ವಿನಾ ಆ ಕೆಲಸಕಾರ್ಯಗಳ ಮೂಲೋದ್ದೇಶವಲ್ಲ. ಜನಸಾಮಾನ್ಯರ ಜೀವನ-ಕಾರ್ಯಗಳು ಸಹ ಇದೇ ರೀತಿ ಪಾವಿತ್ರ್ಯ ಪಡೆಯಬಲ್ಲವು. ಹಿಂದೆ ನಮ್ಮ ಋಷಿಗಳು ಹೇಳಿದಂತೆ ಮುಂದೆ ರೂಪುಗೊಳ್ಳಲಿರುವ ಮಾನವಧರ್ಮ ಕ್ರಮಿಸುವ ಮಾರ್ಗ ಇದು. ಇನ್ನು ಮುಂದೆ ಹೆಚ್ಚು ಹೆಚ್ಚು ಜನರು ಕೇವಲ ವ್ಯಾವಹಾರಿಕ ಪ್ರಪಂಚದಲ್ಲೇ ಜೀವಿಸುವ ಬದಲು ಆಧ್ಯಾತ್ಮಿಕತೆಯತ್ತ ವಾಲುತ್ತಾರೆ. ಆಧ್ಯಾತ್ಮಿಕ ವಿಶ್ವವ್ಯಾಪಕ ತತ್ತ್ವವಾಗುತ್ತದೆ ; ಸಂನ್ಯಾಸಿಗಳ ಬದುಕಿಗಷ್ಟೆ ಅದು ಸೀಮಿತವಾಗಿರುವುದಿಲ್ಲ. ಆದರೆ ಅದರಲ್ಲಿ ಹತ್ತುಹಲವು ಹಂತಗಳು ಏರ್ಪಡಬಹುದು. ಕೆಲವರು ಹೆಚ್ಚು ಆಧ್ಯಾತ್ಮಿಕತೆಯುಳ್ಳವರಾಗಿದ್ದು ಇನ್ನು ಕೆಲವರು ಕಡಿಮೆ ಆಧ್ಯಾತ್ಮಿಕತೆಯಿಂದ ಕೂಡಿರಬಹುದು—ಆದರೆ ಪ್ರತಿಯೊಬ್ಬರೂ ಆಧ್ಯಾತ್ಮದ ಮಾರ್ಗವನ್ನೇ ಹಿಡಿಯುತ್ತಾರೆ. ಈ ವಿಚಾರವನ್ನು ಶ್ರೀರಾಮಕೃಷ್ಣರು ಸುಂದರವಾಗಿ ಹೇಳಿದ್ದಾರೆ : 'ಪ್ರಾಪಂಚಿಕ ಜೀವನದಲ್ಲೇ ಇರಿ, ಅದರಿಂದ ತೊಂದರೆ ಏನೂ ಇಲ್ಲ ; ಆದರೆ ಈ ಪ್ರಾಪಂಚಿಕತೆ ಸಂಪೂರ್ಣವಾಗಿ ನಿಮ್ಮನ್ನು ಆವರಿಸಿಕೊಳ್ಳದಂತೆ ಎಚ್ಚರವಹಿಸಿರಿ—ಏಕೆಂದರೆ ಅದರಿಂದ ಬದುಕು ಕೊಳೆತು ನಿಂತಿರುವ ನೀರಿನಂತಾಗುತ್ತದೆ. ದೋಣಿ ನೀರಿನ ಮೇಲಿರುತ್ತದೆ. ಅದೇ ಆ ದೋಣಿ ನಿಲ್ಲುವ ಸಮಸ್ಥಿತಿ. ಆದರೆ ನೀರು ದೋಣಿಯೊಳಗೆ ಬರದಂತೆ ನೋಡಿಕೊಳ್ಳಬೇಕು—ಯಾಕೆಂದರೆ ಅದು ದೋಣಿಯ ವಿಷಮಸ್ಥಿತಿ—ಆಗ ದೋಣಿಯ 'ಉದ್ದೇಶ' ವೇ ನಿಷ್ಫಲಗೊಳ್ಳುತ್ತದೆ.

ಈ ಪ್ರಪಂಚದಲ್ಲಿ ಕರ್ತವ್ಯದಲ್ಲಿ ನಿರತರಾಗಿ ಬಾಳುತ್ತಿರುವ ಸಾಹಸಿ ಸಂನ್ಯಾಸಿ ಸಂನ್ಯಾಸಿನಿಯರು, ಭಗವಂತನನ್ನು ಸದಾ ನೆನೆಯುತ್ತಾ ಈ ಪಾಠವನ್ನು ಎಲ್ಲರಿಗೂ ಬೋಧಿಸಬೇಕು. ಈ ಬೋಧನೆ ಕೇವಲ ವ್ಯಾವಹಾರಿಕ ಜಗತ್ತಿನ ಲೌಕಿಕರಿಂದ ನಡೆಯಲಾಗದು. ಅಥವಾ ಇದು ಸದಾ ಆಧ್ಯಾತ್ಮಿಕ ಚಿಂತನೆಯ ಲೋಕದಲ್ಲೇ ಜೀವಿಸುವ ಸಂನ್ಯಾಸಿಯಿಂದಲೂ ಸಾಧ್ಯವಾಗಲಾರದು ಯಾಕೆಂದರೆ ಅಂಥ ಬೋಧನೆಯಲ್ಲಿ ವಿಶ್ವಾಸಾರ್ಹತೆ ಇರುವುದಿಲ್ಲ.

ಇನ್ನೊಬ್ಬ ಸಂನ್ಯಾಸಿನಿ : ಧ್ಯಾನ ಚಿಂತನೆಗಳನ್ನು ಮಾಡುತ್ತ ಭಗವಂತನಲ್ಲೆ ಸದಾ ಕೇಂದ್ರೀಕೃತವಾಗಿರುವಂಥ ಮನೋಧರ್ಮ ಉಳಿಸಿಕೊಳ್ಳಲು ನಾವು ಎಲ್ಲರಿಂದ ದೂರದಲ್ಲಿ ಒಂಟಿಯಾಗಿಯೇ ಇರಬೇಕೇ ?

ಸ್ವಾಮಿಜಿ : ಹೌದು. ಪ್ರಾರಂಭದ ಹಂತಗಳಲ್ಲಿ, ಪ್ರತಿದಿನ ಸ್ವಲ್ಪ ಸ್ವಲ್ಪ ಕಾಲ ಒಂಟಿಯಾಗಿರಬೇಕು—ನಾವು ಆಧ್ಯಾತ್ಮಿಕವಾಗಿ ಶಕ್ತಿ ಗಳಿಸುವ ತನಕ. ಪ್ರಾರಂಭದ ಹಂತಗಳಲ್ಲಿ ನಾವು ಸದಾ ಲೌಕಿಕ ಜನ ಹಾಗೂ ಲೌಕಿಕ ಕರ್ಮಗಳ ಜತೆ ಬೆರೆಯುತ್ತಿದ್ದರೆ ನಮ್ಮ ಆಧ್ಯಾತ್ಮಿಕ ಶಕ್ತಿ ದುರ್ಬಲಗೊಳ್ಳುತ್ತದೆ. ಆದ್ದರಿಂದ ನಾವು ಆಗಾಗ ಅಂತರಂಗ ಜೀವನದೊಳಕ್ಕೆ ಸರಿದು ನವ ಚೈತನ್ಯವನ್ನು ಸ್ಫೂರ್ತಿಯನ್ನು ಗಳಿಸಿಕೊಳ್ಳಬೇಕು. ನಾವು ಒಂದು ವೇಳೆ ಯಾವಾಗಲಾದರೂ ಸೋದರ ಲಾರೆನ್ಸ್ (Brother Lawrence)ನಂತಾದರೆ, ಆಗ ಅವನಿಗೆ ಆದಹಾಗೆಯೇ, ನಮಗೂ ಸಹ ಕಾಯಕ ಭಗವದಾರಾಧನೆಗಳ ನಡುವೆ ಏನೂ ವ್ಯತ್ಯಾಸ ಕಾಣುವುದಿಲ್ಲ. ಆಗ ಸದಾಕಾಲ ಭಗವತ್‌ಚಿಂತನೆಯ ಪ್ರವಾಹವೇ ಹರಿಯುತ್ತದೆ. ಸಂತ ಥೆರೆಸಾ ಆಧ್ಯಾತ್ಮಿಕ ಹೋರಾಟವನ್ನು ನಮ್ಮ ಗದ್ದೆ ತೋಟಗಳ ನೀರಾವರಿ ಕೆಲಸಕ್ಕೆ ಹೋಲಿಸುತ್ತಾರೆ. ಪ್ರಥಮತಃ, ನಾವು ಒಂದು ಬಾವಿ ತೋಡಬೇಕು—ಆಮೇಲೆ ಪ್ರಯಾಸದಿಂದ ನೀರನ್ನು ಎತ್ತಿ ಗದ್ದೆಗಳಿಗೆ ನೀರುಣಿಸಬೇಕು ; ಅನಂತರ ನಾವು (ಪರ್ಷಿಯನ್)ರಾಟೆ

ಅಳವಡಿಸಿದಾಗ ಬಾವಿಯಿಂದ ನೀರಾವರಿ ಕೆಲಸ ನಿಭಾಯಿಸುವುದು ಅಷ್ಟು ಪ್ರಯಾಸವಾಗುವುದಿಲ್ಲ, ಹೆಚ್ಚು ಪರಿಣಾಮಕಾರಿಯೇ ಆಗುತ್ತದೆ. ಅಂತಿಮವಾಗಿ ಭಗವಂತ ಅನುಗ್ರಹಿಸುವ ವರ್ಷಧಾರೆ ಸುರಿದಾಗ ಪ್ರಯಾಸದ ದುಡಿಮೆ ಮುಗಿದು ನೀರಾವರಿ ಕಾರ್ಯ ತನ್ನಷ್ಟಕ್ಕೆ ತಾನೇ ಸಹಜವಾಗಿ ನಡೆದುಹೋಗುತ್ತದೆ. ಅಂತಿಮವಾಗಿ ಈ ಭಗವಂತನ ಅನುಗ್ರಹವು ಹೋರಾಡುತ್ತಿರುವ ಸಾಧಕನ ಮೇಲೆ ಇಳಿದು ಬರುವುದನ್ನು ಪ್ರತೀಕಿಸುತ್ತದೆ. ಅದು ಬರುವವರೆಗೂ ಎಲ್ಲವೂ ಹೋರಾಟವೇ—ಆದರೆ ಅದು ಜಂಜಡದ ಹೋರಾಟವಲ್ಲ, ಸಂತೋಷದ ಹೋರಾಟ. ಯಾಕೆಂದರೆ ಇದರ ಗುರಿ ಮತ್ತು ಮಾರ್ಗ ಎರಡೂ ಭಗವತ್ಕೃಪೆಯನ್ನು ಒಳಗೊಂಡಿರುತ್ತದೆ.

ಆದ್ದರಿಂದ ಸ್ವಾಮಿ ವಿವೇಕಾನಂದರು ಕೆಲಸಕಾರ್ಯಗಳೊಂದಿಗೆ ತಪಸ್ಸು ಧ್ಯಾನಾದಿ ಚಿಂತನೆಗಳೂ ಸೇರಿದಂಥ ಒಂದು ವಿಶಿಷ್ಟ ಕಾರ್ಯಕ್ರಮವನ್ನೇ ರೂಪಿಸಿದ್ದಾರೆ—ಪಾಶ್ಚಾತ್ಯರಿಗೆ ಸಂಬಂಧಿಸಿದಂತೆ ಅದರಲ್ಲಿ ಧ್ಯಾನಾದಿಗಳಿಗೆ ಹೆಚ್ಚು ಪ್ರಾಮುಖ್ಯವಿದ್ದರೆ ಭಾರತದಲ್ಲಿ ಸೇವಾ ಕಾರ್ಯ ಚಟುವಟಿಕೆಗಳ ಮೇಲೆ ಹೆಚ್ಚು ಒತ್ತು ಬೀಳುತ್ತದೆ. ಆಗಾಗ ಅಥವಾ ವಾರ್ಷಿಕವಾಗಿ ಹೆಚ್ಚು ತೀವ್ರ ಆಧ್ಯಾತ್ಮಿಕ ಅನುಭವಕ್ಕೋಸ್ಕರ ಧಾರ್ಮಿಕ ಏಕಾಂತವಾಸದ ಏರ್ಪಾಡು ಇರುತ್ತದೆ. ಪಾಶ್ಚಾತ್ಯರಿಗಾಗಿ ನಿಯೋಜಿಸಿದ ಕಾರ್ಯಕ್ರಮದಲ್ಲಿ ಧ್ಯಾನಾದಿಗಳಿಗೆ ಹೆಚ್ಚು ಪ್ರಾಮುಖ್ಯವಿದ್ದರೂ ಸ್ವಾಮಿ ವಿವೇಕಾನಂದರು ಅತ್ಯಗತ್ಯವಾಗಿ ಕಾರ್ಯಗತವಾಗತಕ್ಕ ಒಂದು ವಿಶಿಷ್ಟ ಬೋಧನಾಂಶವನ್ನು ಸೇರಿಸಿದ್ದಾರೆ—ಅದೇನೆಂದರೆ : ಜನಸೇವಾದಿ ಕೆಲಸ ಕಾರ್ಯಗಳನ್ನು ಒಂದು ಆಧ್ಯಾತ್ಮಿಕ ಶಿಸ್ತು ಎಂದು ಪರಿಗಣಿಸಬೇಕೆ, ಹೊರತು ಗುಲಾಮ ಚಾಕರಿ ಎಂದಲ್ಲ ಎಂಬುದೇ ಆ ವಿಶಿಷ್ಟ ಬೋಧನಾಂಶ. ಕೆಲಸ ಕಾರ್ಯಗಳು, ಬೆನ್ನುಮುರಿಯುವ ಚಾಕರಿ. ಆದ್ದರಿಂದ ಖುಷಿ, ಸಂತೋಷಗಳು ನಮಗೆ ಕೆಲಸದಿಂದ ಬಿಡುವು ಸಿಕ್ಕಿದ ವಿರಾಮದಲ್ಲಿ ಮಾತ್ರ ಲಭಿಸುವಂಥವು ಎಂಬ ತಪ್ಪು ಕಲ್ಪನೆ ದುರದೃಷ್ಟವಶಾತ್ ಆಧುನಿಕ ಪಾಶ್ಚಾತ್ಯರಲ್ಲಿ ವಿಪರೀತವಾಗಿ ಬೆಳೆದಿದೆ. ನಾವು ಮಾಡುವ ಕೆಲಸದಲ್ಲಿ ಸೇವಾಮನೋಭಾವ ಲೋಪವಾದಾಗ ಅದು ಮಂಕುಬಡಿದ ಗುಲಾಮ ಚಾಕರಿಯೇ ಆಗುತ್ತದೆ—ಆದ್ದರಿಂದ ಸುಖ ಸಂತೋಷಗಳನ್ನು ನಾವು ವಿರಾಮಕಾಲದಲ್ಲಿಯೇ ಹುಡುಕಿಕೊಂಡು ಹೋಗಬೇಕಾಗುತ್ತದೆ. ಹೀಗಾಗಿ ನಮ್ಮ ಮಗುವಿನ ಲಾಲನೆಪಾಲನೆ ಸಹ ಗುಲಾಮ ಚಾಕರಿ ಎನಿಸಿಬಿಡುವುದು—ಅದು ಪ್ರೀತಿ ಇಲ್ಲದ ಕೇವಲ ಯಾಂತ್ರಿಕ ದುಡಿಮೆಯಾಗಿ ಮಗುವಿಗೆ ಹೇಗೋ ತಾಯಿಗೂ ಹಾಗೆಯೇ ಅದು ಜೀವಸತ್ತ್ವ ಹಿಂಡಿದ ಕಾಟಾಚಾರದ ಕೆಲಸವಾಗುತ್ತದೆ. ಈ ಮನೋಭಾವ ಪಾಶ್ಚಾತ್ಯರಲ್ಲಿ, ಅದರಲ್ಲೂ ಅಮೆರಿಕ (U.S.A)ದಲ್ಲಿ, ವ್ಯಾಪಾಕವಾಗಿ ಹರಡುತ್ತಿದೆ ; ಇದರಿಂದ ಮನುಷ್ಯನು ಒಬ್ಬ ವ್ಯಕ್ತಿಯಾಗಿ ವಿಕಾಸವಾಗಬಲ್ಲ ಆಧ್ಯಾತ್ಮಿಕ ಬೆಳವಣಿಗೆ ಕುಂಠಿತವಾಗುತ್ತಿದೆ : ದೈಹಿಕ ಸ್ತರದಲ್ಲಿ ಜಡವಾಗಿ ನಿಂತಿರುವ 'ಅಹಮ್' ಜೀವಂತ ಚೇತನವಾಗಲು ಅಡ್ಡಿಯಾಗುತ್ತಿದೆ : ಅವನು ದೈಹಿಕ ಸ್ಥಿತಿಯಿಂದ ಸತ್ತ್ವಭರಿತ ಮನೋಸಾಮಾಜಿಕ ವಿಕಾಸ ಹೊಂದುವುದು ಕಷ್ಟವಾಗುತ್ತಿದೆ. ಈ ರೀತಿಯ ಜಡತ್ವವನ್ನು ಬರ್ಟ್‌ರಾಂಡ್ ರಸೆಲ್ 'ಬಿಲಿಯರ್ಡ್ ಚೆಂಡಿನಂಥ ವ್ಯಕ್ತಿ ಸ್ಥಿತಿ' ಎಂದಿದ್ದಾನೆ. ಈ ತೆರನಾದ ವ್ಯಕ್ತಿಗತ ಜಡತ್ವವೇ ಇಂದಿನ ವೈಯಕ್ತಿಕ ಹಾಗೂ ವಿಭಿನ್ನ ವ್ಯಕ್ತಿಗಳ ನಡುವಣ ಉದ್ವೇಗದ ಬಿಕ್ಕಟ್ಟುಗಳಿಗೆ ಅಸಂತೃಪ್ತಿಗಳಿಗೆ ಕಾರಣವಾಗಿದೆ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಹೇಳುವಂತೆ, ಭಗವದ್ಗೀತೆಯಲ್ಲಿ ಬೋಧಿಸಿರುವಂತೆ, ದಿನನಿತ್ಯದ ಕೆಲಸ ಕಾರ್ಯಗಳನ್ನು ಪ್ರೀತಿಯ ಹಾಗೂ ಅರ್ಪಣಾ ಮನೋಭಾವದ ಸೇವಾಕಾರ್ಯವೆಂದು ಭಾವಿಸುವ ಅಗತ್ಯ ಹೆಚ್ಚಾಗಿದೆ. ಕ್ರೈಸ್ತಧರ್ಮವೂ ಇದನ್ನೇ ಬೋಧಿಸುತ್ತದೆ.

ಜಡಮನುಷ್ಯರಾಗಿರುವವರನ್ನು ಜೀವಂತ 'ವ್ಯಕ್ತಿ'ಗಳನ್ನಾಗಿ ಪರಿವರ್ತಿಸಿ ಅವರು ವೈಯಕ್ತಿಕವಾಗಿ ಸಾಮಾಜಿಕವಾಗಿ ಕೃತಾರ್ಥತೆ ಗಳಿಸುವಂಥವರನ್ನಾಗಿ ಮಾಡಬಲ್ಲ ಆಧ್ಯಾತ್ಮಿಕ ಶಿಕ್ಷಣದ ಸಂದೇಶ

ವನ್ನು ಮಠೀಯ ಸಂನ್ಯಾಸಿ-ಸಂನ್ಯಾಸಿನಿಯರು ಎಲ್ಲ ಕಡೆ ಪ್ರಸಾರ ಮಾಡಬೇಕು. ಇಂಥ ಬೋಧನಾ ಕ್ರಮಕ್ಕೆ ಮಾದರಿ ಜೀವನ, ನೈಷ್ಠಿಕ ಅನುಷ್ಠಾನಗಳು ಆಸರೆಯಾದಾಗ ಮಾತ್ರ ಅದು ಯಶಸ್ವಿಯಾಗ ಬಲ್ಲದು. ನೀವು ಕಷ್ಟಪಟ್ಟು ದುಡಿದರೆ, ನಿಮ್ಮ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಿದರೆ, ಪ್ರೇಮ ಹಾಗೂ ಸಮರ್ಪಣಾಭಾವದಿಂದ ಜನಸೇವೆ ನಡೆಸಿದರೆ—ಲವಲವಿಕೆ, ಪ್ರಶಾಂತತೆಯಿಂದ ನೀವು ಎಲ್ಲವನ್ನೂ ಮೈಗೂಡಿಸಿಕೊಂಡು ಕಾರ್ಯನಿರತರಾದರೆ ಆಗ ಶ್ರೀಮಂತಗೊಂಡ ನಿಮ್ಮ ಬದುಕು-ಸಾಧನೆಗಳು, ಎಷ್ಟೋ ಮಂದಿ ಅತ್ಯಂತ ಯಶಸ್ವಿ ಪ್ರಾಪಂಚಿಕ ವ್ಯಕ್ತಿಗಳ ಆಂತರಿಕ ದಾರಿದ್ರ್ಯಕ್ಕಿಂತ ವಿಭಿನ್ನವಾಗು ತ್ತದೆ. ಒಂದು ವೇಳೆ ಅಂಥವರೇನಾದರೂ ನಿಮಗೆ ಈ ಆಂತರಿಕ ಸಂಪತ್ತೆಲ್ಲಾ ಹೇಗೆ ಲಭಿಸಿತೆಂದು ಕೇಳಿದರೆ, ಭಗವತ್ಕೃಪೆಯೇ ಅದಕ್ಕೆಲ್ಲಾ ಕಾರಣವೆಂದು ನೀವು ಅವರಿಗೆ ತಿಳಿಸಿದರೆ, ಭಗವಂತನ ಮಹಿಮೆಯನ್ನೂ ಮತ್ತು ಮಾನವ ಜೀವನದ ಸಾರ್ಥಕತೆಗೆ ಅದರಿಂದ ಸಿಕ್ಕುವ ಪಾರಮಾರ್ಥಿಕ ಮೌಲ್ಯವನ್ನು ಇದಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ತೋರಿಸಿಕೊಡುವುದಾದರೂ ಹೇಗೆ ? ಯೇಸುಕ್ರಿಸ್ತನ ಈ ಅಮೃತ ವಚನದ ಅಂತರಾರ್ಥವೇ ಇದು. 'ಸತ್ಕಾರ್ಯಗಳ ಫಲದಿಂದ ನೀವು ಅವನ್ನು ಅರಿಯಿರಿ.'

ಇನ್ನೊಬ್ಬ ಸಂನ್ಯಾಸಿನಿ : ಇದರಲ್ಲಿ ಯಶಸ್ಸು ಸಾಧಿಸುವಷ್ಟು ಶಕ್ತಿ ನಮ್ಮಲ್ಲಿದೆಯೇ ? ನನಗೆ ತಿಳಿಯದು.

ಸ್ವಾಮೀಜಿ : ಇದರಲ್ಲಿ ಬರಬಹುದಾದ ಕಿಂಚಿತ್ತು ಯಶಸ್ಸು ಕೂಡ ಇಂದಿನ ಮಾನವ ಸಮಾಜಕ್ಕೆ ಶಕ್ತಿ ಒದಗಿಸುವ ಆಕರವಾದೀತು. ಸಮಾಜವು ಶಕ್ತಿ ಮತ್ತು ಸ್ಫೂರ್ತಿಯನ್ನು ಪಡೆಯವುದು ಜನ ಗಳಿಂದಲೇ—ಅದು ಒಂದು ಸಣ್ಣ ಗುಂಪಾಗಿರಬಹುದು. ಆದರೆ ಅವರುಗಳ ಜೀವನವೇ ಕ್ರೈಸ್ತರ ಅನುಭಾವದ ಭಾಷೆಯಲ್ಲಿ ಹೇಳುವುದಾದರೆ, ಭಗವಂತನ ಅಸ್ತಿತ್ವಕ್ಕೆ ಸಾಕ್ಷೀಭೂತವಾಗಿ ನಿಲ್ಲುತ್ತದೆ. ಇಲ್ಲದಿದ್ದರೆ, ಈ ಸಂನ್ಯಾಸ ಜೀವನಕ್ಕೆ ಅರ್ಥವೇ ಇಲ್ಲ... ಒಬ್ಬ ಸಂನ್ಯಾಸಿ ಅಥವಾ ಸಂನ್ಯಾಸಿನಿಯಲ್ಲಿ ಪ್ರಜ್ವಲಿಸುವ ಬೆಳಕು ವಿಶಿಷ್ಟವಾದ ಹೊಸ ಬೆಳಕು—ಅದು ಅಂತಶ್ಚೇತನದ ಬೆಳಕು, ಭಗವಂತನ ದಿವ್ಯ ಬೆಳಕು. ಅದು ತನ್ನನ್ನು ಬೆಳಗಿದಂತೆಯೇ ಇತರರನ್ನು ಬೆಳಗುವಷ್ಟು ಜ್ವಲಂತವಾಗಿರಬೇಕು. 'ದೀಪವನ್ನು ಕೊಳಗದ ಅಡಿಯಲ್ಲಿರಿಸುವುದು—ಮತ್ತು ದೀಪವನ್ನು ದೀಪಸ್ತಂಭದಲ್ಲಿಡುವುದು—ಇವೆರಡರ ನಡುವಣ ವ್ಯತ್ಯಾಸ' ಎಂದು ಯೇಸು ಹೇಳಿದ ಮಾತಿನ ಅರ್ಥವೇ ಇದು. ದೀಪವನ್ನು ಸ್ತಂಭದ ಮೇಲೆ (ಅದರ ಸ್ಥಾನದಲ್ಲಿ) ಇಟ್ಟಾಗ ಅದು ಸುತ್ತೆಲ್ಲ ಬೆಳಕು ಚೆಲ್ಲಿ ಅಲ್ಲಿರುವ ಕತ್ತಲು ಹರಿಯುವಂತೆ ಮಾಡುತ್ತದೆ... ಆದ್ದರಿಂದ ನಿನ್ನೊಳಗಿನ ಬೆಳಕು ಎಲ್ಲರ ಮುಂದೆ ಪ್ರಕಾಶಿಸಲಿ... ಹೀಗೆ ಯೇಸು ಬೋಧಿಸುತ್ತಾನೆ.

ಇನ್ನೊಬ್ಬ ಸಂನ್ಯಾಸಿನಿ : ಧ್ಯಾನ-ತಪಸ್ಸು ಎಂದರೇನು ? ವಿವರಿಸುತ್ತೀರಾ ?

ಸ್ವಾಮೀಜಿ : ಭಗವಂತನನ್ನು ಕುರಿತ ತದೇಕಚಿತ್ತದ ಚಿಂತನೆ, ಧ್ಯಾನ—ನಿಮ್ಮೆಲ್ಲ ಕರಣಗಳನ್ನೂ ಬಾಹ್ಯಲೋಕದಿಂದ ಕರ್ಷಿಸಿ, ಮನಸ್ಸನ್ನು ಶಾಂತಿಯಲ್ಲಿ ಏಕಾಗ್ರತೆಯಲ್ಲಿಡುವುದು. ಧ್ಯಾನದಲ್ಲಿ ಮನುಷ್ಯನ ಅಂತಶ್ಚೇತನ ಜ್ಞಾನಪ್ರದವಾಗಿ, ನಮ್ಮೆಲ್ಲರ ವಿಶ್ವವ್ಯಾಪಿ ಅನಂತಸ್ವರೂಪಿಯಾದ ಭಗವಂತನತ್ತ ಹರಿಯುತ್ತದೆ. ಆಗ ಅಲ್ಲಿ ನೀವು ಮತ್ತು ಅವನು—ಇಬ್ಬರನ್ನುಳಿದು ಬೇರೇನೂ ಇರುವುದಿಲ್ಲ. ನೀವು ಆಗ ಭಗವಂತನೊಂದಿಗೆ ಸಂಸರ್ಗ ಹೊಂದಿರುವಿರಿ.

ಸಂನ್ಯಾಸಿನಿ : ನನಗೆ ತಿಳಿದ ಹಾಗೆ, ಧ್ಯಾನದಲ್ಲಿ ಯಾವ ಕ್ರಿಯಾವ್ಯಾಪಾರವೂ ಇರುವುದಿಲ್ಲ—ಮಾತು, ಯೋಚನೆ ಯಾವುದೂ ಇರುವುದಿಲ್ಲ ಅಲ್ಲವೇ ?

ಸ್ವಾಮೀಜಿ : ಯೋಚನೆ, ಮಾತು ಇದ್ದಾವು. ಆದರೆ ಎಲ್ಲವೂ ಅಂತರಂಗದಲ್ಲಿ ಭಗವಂತನ ಸಂಸರ್ಗದ ಸಂದರ್ಭದಲ್ಲಿ ನಡೆಯುವಂಥವು ; ಧ್ಯಾನದ ಆಳಕ್ಕಿಳಿದಾಗ ಅಂಥ ಮಾತು, ಯೋಚನೆ ಸಹ ಇಲ್ಲದಂತಾಗಿ ಆತ್ಮವು ಪರಮಾತ್ಮನೊಂದಿಗೆ ಪರಿಪೂರ್ಣವಾಗಿ ಲೀನವಾಗಿಬಿಡುತ್ತದೆ.

ಸಂನ್ಯಾಸಿನಿ : ಎಲ್ಲಾ ಯೋಚನೆಗಳನ್ನೂ ತ್ಯಜಿಸಿಬಿಡುವುದು ನಮಗೆ ಬಹು ಕಷ್ಟ.

ಸ್ವಾಮೀಜಿ : ಪ್ರಾಪಂಚಿಕ ಯೋಚನೆಗಳನ್ನು ಮಾತ್ರ ತ್ಯಜಿಸಬೇಕೆ ಹೊರತು, ಉಳಿದ ಯೋಚನೆಗಳನ್ನು ಬಿಡಬೇಕಾಗಿಲ್ಲ.

ಸಂನ್ಯಾಸಿನಿ : ಆದರೆ ಪ್ರಾಪಂಚಿಕ ಯೋಚನೆಗಳು ನಾವು ಧ್ಯಾನದಲ್ಲಿರುವಾಗಲೂ ನಮ್ಮನ್ನು ಅಟ್ಟಿ ಬರುತ್ತವಲ್ಲಾ ?

ಸ್ವಾಮೀಜಿ : ಅವು ನಮ್ಮನ್ನು ಅಟ್ಟಿ ಬರುತ್ತವೆ ಯಾಕಂದರೆ ಮುಂಚೆ ನಾವು ಸದಾ ಅವುಗಳನ್ನು ಅಟ್ಟಿ ತಿರುಗುತ್ತಿರುತ್ತೇವೆ.

ಇನ್ನೊಬ್ಬ ಸಂನ್ಯಾಸಿನಿ : ನಾವು ನಮ್ಮ ಯೋಚನೆಗಳನ್ನು ಸರಿಯಾದ ಆಧ್ಯಾತ್ಮಿಕ ಕಣ್ಣೆಲೆಯಲ್ಲಿರಿಸಿದಾಗ ಅವು ನಿಶ್ಚಲವಾಗುತ್ತವೆ; ಮತ್ತೆ ನಮ್ಮನ್ನು ಅವು ದುಗುಡಗೊಳಿಸುವುದಿಲ್ಲ. ನಮ್ಮ ಇಚ್ಛಾಶಕ್ತಿಯಿಂದ ಆ ಯೋಚನೆಗಳನ್ನು ಮನಸ್ಸಿನಿಂದ ಆಚೆಗೆ ಹಾಕುವುದು ಎಂದಲ್ಲ— ಯಾಕೆಂದರೆ, ಒಂದು ವೇಳೆ ಹಾಗೆ ಮಾಡಿದರೂ ಅವು ಪುನಃ ಬಂದು ನಮ್ಮನ್ನು ಪೀಡಿಸುವುದನ್ನು ತಪ್ಪಿಸಲು ಸಾಧ್ಯವಿಲ್ಲ.

ಸ್ವಾಮೀಜಿ : ಹೌದು ನಿಜ ; ಸರಿಯಾದ ಆಧ್ಯಾತ್ಮಿಕ ಕಣ್ಣೆಲೆ ಇಲ್ಲಿ ಅತ್ಯಂತ ಸಹಾಯಕ.

ಇನ್ನೊಬ್ಬ ಸಂನ್ಯಾಸಿನಿ : ಈ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರಲು ನಮಗೆ ಸಾಧ್ಯವುಂಟೇ ? ನಮಗೆ ಈ ಪ್ರಕ್ರಿಯೆಯನ್ನು ಪ್ರಭಾವಿಸಲಾಗದ ಕಾರಣ ಯೋಚನೆಗಳು ನಮ್ಮ ಮನಸ್ಸಿನಲ್ಲಿ ಉದ್ಭವಿಸಿಯೇ ತೀರುತ್ತವೆ.

ಸ್ವಾಮೀಜಿ : ಹೌದು. ಅವು ತಮ್ಮಷ್ಟಕ್ಕೆ ಬರುತ್ತವೆ ; ಆದ್ದರಿಂದಲೇ ನಾವು ಧ್ಯಾನವನ್ನು ಅಭ್ಯಾಸ ಮಾಡಿ ಈ ಸಮಗ್ರ ಕ್ರಿಯೆಯನ್ನು ಶಿಸ್ತುಗೊಳಿಸಲು ಬೇಕಾದ ಶಕ್ತಿಯನ್ನು ಸಂಚಯಿಸುತ್ತೇವೆ. ನಾವು ನಮ್ಮ ಮನಸ್ಸನ್ನು ಅದರ ರೀತಿಗಳನ್ನು ಹಾಗೆಯೇ ಬಿಟ್ಟರೆ ಅವು ನಮ್ಮನ್ನು ಪೀಡಿಸವು. ನಾವು ಅದನ್ನು ಶಿಸ್ತಿನಲ್ಲಿಡಲು ಯತ್ನಿಸಿದಾಗ ಅದು ಬಂಡೆದ್ದು ನಮ್ಮನ್ನು ಹಿಂಸಿಸುತ್ತದೆ. ಭಗವಂತನ ಕುರಿತ ಧ್ಯಾನದ ಮುಖೇನ ನಾವು ಮನಸ್ಸಿನ ಬಂಡಾಯ ಪ್ರಕೃತಿಯನ್ನು ನಿಧಾನವಾಗಿ ನಿಶ್ಚಲವಾಗಿ ನಿವಾರಿಸಿ ಅಂತಿಮವಾಗಿ ನಮ್ಮ ಆಧ್ಯಾತ್ಮಿಕ ಜೀವನದಲ್ಲಿ ಅದರ ಜತೆ ಗೆಳೆತನ (ಹೊಂದಾಣಿಕೆ) ಸಾಧಿಸಬಹುದು. ಪ್ರಾರಂಭದಲ್ಲಿ ಒಂದು ಇಡೀ ಗಂಟೆಯ ಧ್ಯಾನದಿಂದ ಕೇವಲ ಒಂದೆರಡು ನಿಮಿಷಗಳ ಶಾಂತಸ್ಥಿತಿ ಸಾಧಿಸಬಹುದು. ಇದು ಸಹ ಮಹತ್ವದ ಸಾಧನೆಯೇ. ಒಂದು ಟನ್ ಅದಿರಿನಿಂದ ಒಂದೆರಡು ಔನ್ಸ್ ಚಿನ್ನ ಸಿಕ್ಕಬಹುದು ; ಆದರೆ ಚಿನ್ನ, ಚಿನ್ನವೇ—ಅಷ್ಟರಮಟ್ಟಿಗಾದರೂ ನಮ್ಮ ಶ್ರೀಮಂತಿಕೆ ಹೆಚ್ಚುತ್ತದೆ, ಅಲ್ಲವೇ ?

ಸಂನ್ಯಾಸಿನಿ : ನಾನು ಹೇಳಿದುದರ ಅರ್ಥ ಅದಲ್ಲ ; ಕೇವಲ ಧ್ಯಾನದಲ್ಲಿ ಅಲ್ಲ, ಜೀವನದಲ್ಲಿ ಇದನ್ನು ಸಾಧಿಸಬೇಕೆನ್ನುವುದು ನನ್ನ ಅಭಿಪ್ರಾಯ. ನಾನು ನನ್ನದೇ ಆದ ಆಂತರಿಕ ಸಾಧನೋಪಾಯಗಳಿಂದ ಅಥವಾ ಭಗವಂತನ ಕೃಪಾಶಕ್ತಿಯಿಂದ ನನ್ನ ಒಳಬದುಕನ್ನು ಬದುಕಲಿಚ್ಛಿಸುತ್ತೇನೆ. ಆದರೆ ವಸ್ತುಜೀವನಸ್ಥಿತಿ ಈ ಪ್ರಕ್ರಿಯೆಯನ್ನು ಹದಗೆಡಿಸುತ್ತದೆ. ನಾನು ಅದನ್ನು ತಪ್ಪಿಸಲಾಗದ ಅಸಹಾಯಕತೆಯಲ್ಲಿದ್ದೇನೆ.

ಸ್ವಾಮೀಜಿ : ಸಾಮಾನ್ಯವಾಗಿ ಇದು ನಿಜ. ನಾವು ಈ ಧಾರ್ಮಿಕ ಜೀವನವನ್ನು ಆರಿಸಿಕೊಂಡದ್ದು ಭಗವದ್ಭಕ್ತಿಯಿಂದಲೇ. ಆಮೇಲೆ ನಾವು (ಹೊರನೋಟಕ್ಕೆ) ವಿರೋಧವೆಂದು ತೋರುವ ಎರಡು ಶಕ್ತಿಗಳ ನಡುವೆ ನಿಂತಿದ್ದೇವೆ. ಒಂದು ಕಡೆ ನಮ್ಮ ಹಿಂದಿನ (ಹಳೆಯ) ಪ್ರವೃತ್ತಿಗಳು. ಇನ್ನೊಂದು ಕಡೆ ಹೊಸದಾಗಿ ಉದಯಿಸಿದ ನಮ್ಮ ದೈವಪ್ರೇಮ. ಭಗವಂತನ ಪ್ರಬಲತರ ಆಕರ್ಷಣೆಗೊಳಗಾಗಿ ನೀವು ಸಂನ್ಯಾಸಿನಿಯಾದಿರಿ. ಆದರೆ ಈ ವಾಸ್ತವಿಕ ಪ್ರಪಂಚದ ಆಕರ್ಷಣೆ ಇನ್ನೂ ಹೆಚ್ಚು ಪ್ರಬಲ

ವಾಗಿದ್ದು ನಿಮ್ಮನ್ನು ಭಗವಂತನ ಆಕರ್ಷಣೆಯಿಂದಾಚೆಗೆ ಒಯ್ದುಬಿಡುತ್ತದೆ. ಇದನ್ನು ಎದುರಿಸಿ ಭಗವಂತನ ಹತ್ತಿರ ಹತ್ತಿರಕ್ಕೆ ಹೋಗಲು ನಿಮಗೆ ಧ್ಯಾನ, ಪ್ರಾರ್ಥನೆಗಳು ಅಗತ್ಯ. ನಿಮ್ಮ ಧ್ಯಾನದ ವೇಳೆಯಲ್ಲಿ, ನೀವು ದೇವರಿಗೆ ಸೇರಿರುವರೆಂಬ ಭಾವನೆ ತೀವ್ರಗೊಂಡು, ನೀವು ನಿಮ್ಮ ಬಾಹ್ಯ ಬದುಕನ್ನು ನಿಮ್ಮದೇ ಆದ ರೀತಿಯಲ್ಲಿ ವ್ಯವಸ್ಥೆಗೊಳಿಸಲು ಸಾಕಷ್ಟು ಅಂತರಂಗದ ಆಧ್ಯಾತ್ಮಿಕ ಸಂಪನ್ಮೂಲಗಳನ್ನು ಗಳಿಸುತ್ತೀರಿ. ಪ್ರತಿಯೊಬ್ಬರ ಜನ್ಮಸಿದ್ಧಹಕ್ಕಾದ ಆಧ್ಯಾತ್ಮಿಕ ಸ್ವಾತಂತ್ರ್ಯವೆಂದರೆ ಅದೇ. ಆದರೆ ಬಹಳ ಮಂದಿ ಜನ್ಮಸಿದ್ಧಹಕ್ಕನ್ನು ಕಾರ್ಯಗತಮಾಡುವುದಿಲ್ಲ, ಅಷ್ಟೇ.

ಇನ್ನೊಬ್ಬ ಸಂನ್ಯಾಸಿನಿ : ನಾವು ಈಗಾಗಲೇ ನಿಮಗೆ ತಿಳಿಸಿರುವಂತೆ ನಾವು ಕಾನ್ವೆಂಟಿನೊಳಗೆ ಸಂನ್ಯಾಸಿನಿಯರು. ಆದರೆ ಹೊರಗಡೆ ಕೆಲಸದ ಹುಡುಗಿಯರು ; ರೋಮನ್ ಕ್ಯಾಥಲಿಕ್ ಸಂನ್ಯಾಸಿ ಜೀವನದಲ್ಲಿ ಇದೊಂದು ಹೊಸ ಪ್ರಯೋಗ. ನಾವು ಹೊರಗೆ ಕೆಲಸ ಮಾಡುವಾಗ ಲೌಕಿಕ ಉಡುಪು ಧರಿಸುತ್ತೇವೆ. ಐದು ದಿನಗಳ ಕೆಲಸದ ನಂತರ ನನಗೆ ಹಾಯಾಗಿ ಎರಡು ದಿನಗಳ ರಜ ಸಿಕ್ಕುತ್ತದೆ. ಇದು (ಒಂದು ರೀತಿಯ) ಪಲಾಯನ ಅನ್ನುವಿರಾ ?

ಸ್ವಾಮೀಜಿ : ವ್ಯಾವಹಾರಿಕ ದೃಷ್ಟಿಯಿಂದ ನೋಡುವುದಾದರೆ, ಇದರಲ್ಲಿ ಏನೂ ತಪ್ಪಿಲ್ಲ ; ಇದೇನು ಪಲಾಯನವಲ್ಲ. ಆದರೆ ತಾತ್ತ್ವಿಕವಾಗಿ ನೋಡಿದಾಗ, ನೀವು ನಿಮ್ಮ ಆ ಐದು ದಿನಗಳ ಕೆಲಸವನ್ನು ಗುಲಾಮ ಚಾಕರಿ ಎಂದೆಣಿಸಿದರೆ ಮಾತ್ರ ಅದು ಪಲಾಯನವಾಗುತ್ತದೆ. ನಿಮಗೆ ನಿಮ್ಮ ದುಡಿಮೆಯ ನಂತರ, ಬದಲಾವಣೆ ಹಾಗು ವಿಶ್ರಾಂತಿಯ ಅಗತ್ಯವಿದೆ ; ಆದರೆ ನಿಮ್ಮ ಜೀವನ ತತ್ತ್ವದಲ್ಲಿ, ಕೆಲಸ ಮಾಡುವುದರಲ್ಲಿರುವ ಸಂತೋಷವೂ ಸೇರಿರಬೇಕು. ಆಗ ನೀವು ಬಲವಂತದ ಗುಲಾಮ ಚಾಕರಿಯಿಂದ ವಿಶ್ರಾಂತಿಯತ್ತ ಓಡುವ ವಿಹಾರಿಗಳಾಗದೆ ಸಂತೋಷದಿಂದ ಮತ್ತಷ್ಟು ಸಂತೋಷಕ್ಕೇರುವಂತಾಗುವಿರಿ. ಹಿಂದೊಮ್ಮೆ ನಾನು ಹೇಳಿದಂತೆ, ಮೊದಲು ಹೇಳಿದ ಆ ಪಲಾಯನ ತತ್ತ್ವವು ಹಾನಿಕರ, ಆಧುನಿಕ ಹಾಗೂ ಅತ್ಯಂತ ಪ್ರಾಪಂಚಿಕ.

ಇನ್ನೊಬ್ಬ ಸಂನ್ಯಾಸಿನಿ : ನಮ್ಮ ಶಕ್ತಿಯೆಲ್ಲವನ್ನೂ ಅವರಿಗೇ ವಿನಿಯೋಗಿಸಬೇಕೆನ್ನುವಷ್ಟು ಅತಿಯಾದ ನೆರವನ್ನು ಜನ ನಮ್ಮಿಂದ ನಿರೀಕ್ಷಿಸುತ್ತಾರೆ. ಇದನ್ನು ಎದುರಿಸುವುದಾದರೂ ಹೇಗೆ ?

ಸ್ವಾಮೀಜಿ : ಅದು ಸಹಜ, ಮಾನವೀಯ. 'ಯಾರಿಗೆ ಹೆಚ್ಚು ಸಂದಾಯವಾಗಿರುವುದೋ ಅವರಿಂದ ಹೆಚ್ಚನ್ನೇ ನಿರೀಕ್ಷಿಸಬೇಕು'—ಎಂಬ ಸೂಕ್ತಿಯನ್ನು ನೀವು ಗೌರವಿಸಬೇಕು. ನಮ್ಮ ಇತಿಮಿತಿಯೊಳಗೆ, ನಾವು ನಮ್ಮ ಅತ್ಯುತ್ಕೃಷ್ಟ ಸೇವೆಯನ್ನು ಸಲ್ಲಿಸಬೇಕು. ಧಾರ್ಮಿಕ ಕೆಲಸವು, ಸ್ವಾರ್ಥ, ಪ್ರಾಪಂಚಿಕ ಕೆಲಸದಷ್ಟು ನಿಮ್ಮನ್ನು ಆಯಾಸಗೊಳಿಸುವುದಿಲ್ಲ ಎಂಬ ಮಾತು ಸಹ ಸತ್ಯವಷ್ಟೆ.

ಸಂನ್ಯಾಸಿನಿ : ನಾನು ದಿನವೂ ಬೆಳಿಗ್ಗೆ ೭.೩೦ ಗಂಟೆಗೆ ಕಾನ್ವೆಂಟನ್ನು ಬಿಟ್ಟು ಕೆಲಸಕ್ಕೆ ಹೋಗುತ್ತೇನೆ. (ಸಂಜೆ) ೫.೩೦ ಗಂಟೆಗೆ ಹಿಂತಿರುಗಿ ಬರುತ್ತೇನೆ. ನನ್ನ ನಿಲುವು ಇಷ್ಟೇ: ಭಗವಂತನ ಸೇವೆಯೆಂದು ಭಾವಿಸಿ, ಹೋಗಿ ಕೆಲಸಮಾಡುವುದು. ನನ್ನ ಪ್ರಾರ್ಥನೆಯೂ ಸಹ ಅದೇ.

ಸ್ವಾಮೀಜಿ : ಅದೇ ಸರಿಯಾದ ನಿಲುವು. ನಿಮ್ಮ ಕೆಲಸದ ಮೂಲಕ ನೀವು ಭಗವಂತನ ಸೇವೆ ಮಾಡುತ್ತ ಜನರಿಗೆ ಸುಖ ಸಂತೋಷಗಳನ್ನು ಒದಗಿಸುತ್ತಿರುವಿರಿ. ನಿಮ್ಮದು ದಿನವಹಿ ೨೪ ಗಂಟೆಗಳ ಕೆಲಸ. ಜೀವನವಿಡೀ ಭಗವಂತನ ಸೇವೆಗೆ ನಿಮ್ಮನ್ನು ಅರ್ಪಿಸಿಕೊಂಡು ಕಾನ್ವೆಂಟಿನ ಒಳಗಡೆ ಧ್ಯಾನ, ವ್ಯಾಸಂಗಗಳಿಗಾಗಿ ಕಳೆಯುವಷ್ಟು ಕಾಲವನ್ನೇ ಹೊರಗಡೆಯ ಕೆಲಸಕ್ಕೂ ವಿನಿಯೋಗಿಸುತ್ತಿರುವಿರಿ. ನಿಜವಾದ ಸಂನ್ಯಾಸಿ ಜೀವನದ ಅರ್ಥವೇ ಅದು—ನಮ್ಮ ಬದುಕನ್ನು ಆಧ್ಯಾತ್ಮಿಕ ಪ್ರವಾಹದಿಂದ ತುಂಬಿಕೊಳ್ಳುವುದು.

ಸಂನ್ಯಾಸಿನಿ : ನಾವು ನಿದ್ರಿಸುವಾಗಲೂ ಇದೇ ನಿಲುವನ್ನು ತಾಳಬೇಕೇ ?

ಸ್ವಾಮೀಜಿ : ಭಗವತ್‌ಚಿಂತನೆ ಮಾಡುತ್ತ ನಿದ್ರಿಸುವಾಗ, ಅಂಥ ನಿದ್ರೆಯಲ್ಲಿ ದೈವಿಕ ಪರಿಮಳ ಲೀನವಾಗಿರುತ್ತದೆ. ಆಧ್ಯಾತ್ಮಿಕ ಚಿಂತನೆಯ ವ್ಯಕ್ತಿ ಭಗವಂತನ ತೊಡೆಯ ಮೇಲೇ ನಿದ್ರಿಸಿರುತ್ತಾನೆ. ಆಹಾರದಂತೆ ನಿದ್ರೆಯೂ ಪುಷ್ಟಿದಾಯಕ—ಆಹಾರ, ನಿದ್ರೆಗಳೆರಡೂ ಭಗವದನ್ವೇಷಣೆಗೆ ನಮ್ಮನ್ನು ಸಜ್ಜುಗೊಳಿಸುತ್ತವೆ. ಭಗವದ್ಭಕ್ತ ಮಾಡುವ ಎಲ್ಲ ಕೆಲಸವೂ ಭಗವಂತನಿಗೆ ಸಂಬಂಧಿಸಿದುದಾಗಿರುತ್ತದೆ. ನಿಮ್ಮಂಥ ಎಲ್ಲಾ ಸಂನ್ಯಾಸಿನಿಯರಿಗೆ, ಎಲ್ಲಾ ಸಂನ್ಯಾಸಿಗಳಿಗೆ ಕಾನ್ವೆಂಟ್ ಅಥವಾ ಮಠೀಯ ಸಂಸ್ಥೆ ಒಂದು ಕೋಟೆಯಂತಿರುತ್ತದೆ. ಗಂಟೆಗಟ್ಟಲೆ ನೀವು ಹೊರಗಡೆ ದುಡಿಯುತ್ತೀರಿ ; ಆದರೆ ಹೊರಗಿನ ಇಂದ್ರಿಯಗೋಚರ ಪ್ರಪಂಚದ ಒತ್ತಡ-ತುಯ್ತಗಳನ್ನು ನೀವು ತಡೆದುಕೊಳ್ಳಲಾರಿರಿ. ನೀವಿನ್ನೂ ಆಧ್ಯಾತ್ಮಿಕವಾಗಿ ಈ ಒತ್ತಡಗಳನ್ನು ತಾಳುವಷ್ಟು ಶಕ್ತರಾಗಿಲ್ಲ. ಅಂಥ ಸಮಯದಲ್ಲಿ ನೀವು ಕಾನ್ವೆಂಟಿಗೆ ಒಳಸರಿದು ಅಲ್ಲಿ ಕೋಟೆಯೊಳಗಿರುವ ಹಾಗೆ ಸುರಕ್ಷಿತವಾಗಿರುತ್ತೀರಿ. ಅದೊಂದು ರೀತಿಯ ಆಧ್ಯಾತ್ಮಿಕ ಭದ್ರತೆ. ಇದು ದೊರೆಯುವುದು ಕೇವಲ ಕೋಟೆ ಎಂಬ ಕಟ್ಟಡದಿಂದಲ್ಲ—ಅದೊಂದು ನಿಷೇಧರೂಪದ ವಸ್ತು—ಆದರೆ ನಿಮಗೆ ಸುರಕ್ಷಿತ ಭಾವನೆಯುಂಟಾಗುವುದು ನಿಮ್ಮ ಜತೆಯ ಇನ್ನಿತರ ಸಂನ್ಯಾಸಿನಿಯರ ಸಹವಾಸದಿಂದ. ಒಂದು ಧಾರ್ಮಿಕ ಸಮುದಾಯ ತನ್ನ ಸದಸ್ಯರುಗಳಿಗೆ ಆಧ್ಯಾತ್ಮಿಕ ಪುನಶ್ಚೇತನದ ವಾತಾವರಣ ಹಾಗೂ ಸಂಚಿತ ಧರ್ಮಶಕ್ತಿಯ ಭಾವನೆಯನ್ನು ಒದಗಿಸುತ್ತದೆ. ನಾವು ಆಧ್ಯಾತ್ಮಿಕವಾಗಿ ದುರ್ಬಲವಾಗಿರುವಾಗ ನಮಗೆ ಈ ತೆರನಾದ ಸುಭದ್ರತೆ ಬೇಕು. ನಿಜವಾಗಿ ಒಂದು ಆದರ್ಶಸ್ಥಿತಿಯೆಂದರೆ ನೀವು ಆಧ್ಯಾತ್ಮಿಕವಾಗಿ ಕಾನ್ವೆಂಟಿನೊಳಗೆ ಎಷ್ಟು ಸುರಕ್ಷಿತವಾಗಿರುವಿರೋ ಅಷ್ಟೇ ಸುರಕ್ಷಿತತೆಯ ಭಾವನೆ ನಿಮಗೆ ಮಾರುಕಟ್ಟೆಯಲ್ಲೂ ದೊರೆಯುವಂತಿರಬೇಕು. ಅಂಥ ಆದರ್ಶ ಸುಭದ್ರ ಧಾರ್ಮಿಕ ಸ್ಥಿತಿ ಬರುವವರೆಗೂ ನೀವು ಕಾನ್ವೆಂಟಿನ ಆಶ್ರಯದಲ್ಲಿರುವುದೇ ವಿವೇಕ ; ಅಷ್ಟೇ ಅಲ್ಲ. ನೀವು ನಿಮ್ಮ ನಿಮ್ಮ ಕ್ಲಿಪ್ತ ಧಾರ್ಮಿಕ ಆಚರಣೆಗಳ ಮೂಲಕ ಕಾನ್ವೆಂಟ್ ಒಳಗಿನ ಧಾರ್ಮಿಕ ವಾತಾವರಣವನ್ನು ಬಿಗಿಪಡಿಸಲು ಕ್ರಮ ತೆಗೆದುಕೊಳ್ಳಬೇಕು—ಧಾರ್ಮಿಕ ಅಧ್ಯಯನ, ವಿಚಾರವಿನಿಮಯಗಳನ್ನು ನಡೆಸುತ್ತಾ ಭಗವದನುಗ್ರಹದ ಅವತರಣಕ್ಕಾಗಿ ಕಾಯುತ್ತಿರಬೇಕು. ಆಗಲೇ ನಿಮಗೆ ಸಂಪೂರ್ಣ ಸುಭದ್ರತೆ ಲಭ್ಯ. (ಹಿಂದೂ ಧರ್ಮದ) ಶ್ರೀಮದ್‌ಭಾಗವತದಲ್ಲಿ ಪರಮಾತ್ಮನನ್ನು 'ಅಕುತೋಭಯಂ' ('ಭಯವೆಲ್ಲಿ?')—ಅಂದರೆ ನಿರ್ಭೀತ ಸ್ಥಿತಿಯಲ್ಲಿರುವವನು ಎಂದು ವರ್ಣಿಸಲಾಗಿದೆ. ಅದೇ ಗ್ರಂಥದಲ್ಲಿ ಧರ್ಮಜಿಜ್ಞಾಸುವನ್ನು 'ಗಚ್ಛತಾಮ್ ಅಕುತೋ ಭಯಂ' ಅಂದರೆ ನಿರ್ಭೀತಸ್ಥಿತಿಯತ್ತ ಸಾಗುತ್ತಿರುವವನು' ಎನ್ನಲಾಗಿದೆ.

ಇನ್ನೊಬ್ಬ ಸಂನ್ಯಾಸಿನಿ : ನವಚೈತನ್ಯ ಪಡೆಯಲು ನಾವು ಈ ಕೋಟೆಯೊಳಕ್ಕೆ ಹಿಂತಿರುಗಿ ಬರುವುದು ಅಗತ್ಯವೇ ?

ಸ್ವಾಮೀಜಿ : ಅದು ಕಡ್ಡಾಯವೇನಲ್ಲ ; ಕೋಟೆಯ ರಕ್ಷಣೆ ಅಗತ್ಯವೆನಿಸಿದಾಗ ಅದರ ಮೊರೆ ಹೋಗುತ್ತಾರೆ.

ಇನ್ನೊಬ್ಬ ಸಂನ್ಯಾಸಿನಿ : ಹೊರಗಡೆ ಕೆಲಸ ಮಾಡುವಾಗಲೂ (ಧಾರ್ಮಿಕ) ಸ್ಫೂರ್ತಿ ಪಡೆಯಬಹುದು.

ಸ್ವಾಮೀಜಿ : ಆಧ್ಯಾತ್ಮಿಕ ಬಲವಿದ್ದವರಿಗೆ ಎಲ್ಲೆಲ್ಲೂ ಸ್ಫೂರ್ತಿ ದೊರೆಕೀತು. ಉಳಿದ ಎಲ್ಲರೂ ಕಾನ್ವೆಂಟಿನೊಳಗಿನಿಂದಲೇ ಅಂಥ ಶಕ್ತಿ ರೂಢಿಸಿಕೊಂಡು, ಸಶಕ್ತರಾಗಿ ಹೊರಗಿನ ಕೆಲಸಕ್ಕೆ ಹೋಗಬೇಕು. ಹೊರಗಿನ ಪ್ರಪಂಚದ ವಾತಾವರಣದಲ್ಲಿ ಅತಿಯಾದ ಇಂಗಾಲಾಮ್ಲ ತುಂಬಿರುತ್ತದೆ—ಆದರೆ ಕಾನ್ವೆಂಟ್ ಒಳಗೆ ಅತ್ಯಗತ್ಯವಾದ ಆಮ್ಲಜನಕ ಹೆಚ್ಚಾಗಿ ಸಿಕ್ಕುತ್ತದೆ. (ನಗು.)

ಇನ್ನೊಬ್ಬ ಸಂನ್ಯಾಸಿ : ಹೊರಗಡೆ ಕೆಲಸ ಮಾಡುವಾಗ ಕೆಲವೊಮ್ಮೆ ಅದಕ್ಕೆ ವ್ಯತಿರಿಕ್ತವಾದ ಸ್ಥಿತಿಯೇ ಇರುತ್ತದೆ.

ಸ್ವಾಮೀಜಿ : ಶ್ರೀ ರಾಮಕೃಷ್ಣರು ಒಂದು ಸೊಗಸಾದ ಸಾಮತಿ ಕೊಡುತ್ತಾರೆ : ನೀವೇನಾದರೂ ರಸ್ತೆಯ ಬದಿಯಲ್ಲಿ ಒಂದು ಚಿಕ್ಕ ಗಿಡ ನೆಟ್ಟರೆ ಅದರ ಸುತ್ತ ಬೇಲಿ ಹಾಕುವಿರಿ—ಇಲ್ಲವಾದರೆ ಕುರಿ ಮೇಕೆಗಳು ಅದನ್ನು ತಿಂದುಹಾಕುತ್ತವೆ. ಆದರೆ ಆ ಗಿಡ ಬಲಿತು ದೊಡ್ಡದಾದಾಗ ನೀವು ಬೇಲಿ ತೆಗೆದುಹಾಕುತ್ತೀರಿ, ಏಕೆಂದರೆ ಅದಕ್ಕೆ ಬೇಲಿ ಅಗತ್ಯವಿಲ್ಲ. ಒಂದು ಆನೆಯನ್ನೂ ಸಹ ಆ ಅದಕ್ಕೆ ಕಟ್ಟಿ ಹಾಕಬಹುದು. ಅದೇ ರೀತಿ, ನಮ್ಮ ಆಧ್ಯಾತ್ಮಿಕ ಶಕ್ತಿ ಕುಂದಿರುವಾಗ ನಮಗೆ ಎಲ್ಲಾ ರೀತಿಯ ಭದ್ರತೆಗಳೂ ಬೇಕಾಗುತ್ತವೆ. ಅದನ್ನು ಉಪಯೋಗಿಸಿಕೊಳ್ಳದಿರುವುದು ಅವಿವೇಕವಾಗುತ್ತದೆ. ಈ ಹಂತದಲ್ಲಿ ಇಂದ್ರಿಯಗೋಚರ (ಲೌಕಿಕ) ಪ್ರಪಂಚದೊಡನೆ ಅತಿಯಾಗಿ ಬೆರೆತರೆ, ನಮ್ಮಲ್ಲಿರಬಹುದಾದ ಆಧ್ಯಾತ್ಮಿಕತೆಯ ಅಲ್ಪ ಶೇಖರಣೆ ಸತ್ತ್ವಗುಂದಿ ಕಟ್ಟಕಡೆಗೆ ನಾಶ ಹೊಂದಲೂ ಬಹುದು.

ಮತ್ತೊಬ್ಬ ಸಂನ್ಯಾಸಿನಿ : ಇದನ್ನು ನಾನು ಒಪ್ಪುವುದಿಲ್ಲ.

ಸ್ವಾಮೀಜಿ : ಹೌದು ಬಲಯುತರಾಗಿರುವೆವೆಂಬ ಮನವರಿಕೆ ನಿಮಗಿದ್ದರೆ ಆಗಬಹುದು.

ಸಂನ್ಯಾಸಿನಿ : ಯೇಸುವು ಪ್ರಪಂಚದ ನಡುವೆಯೇ ಇದ್ದು, ಪ್ರಪಂಚದ ಸಲುವಾಗಿ, ಜನರಿಗೋಸ್ಕರ ತನ್ನ ಧರ್ಮಬೋಧೆಯ ಕಾರ್ಯವನ್ನು ನಡೆಸಿದ.

ಸ್ವಾಮೀಜಿ : ಹೌದು, ಯೇಸುವು ಪ್ರಪಂಚದಲ್ಲಿ, ಪ್ರಪಂಚಕ್ಕೋಸ್ಕರ ದುಡಿದ. ಆದರೆ ಪ್ರಪಂಚದಲ್ಲಿ ಕೆಲಸ ಮಾಡುವುದಕ್ಕೂ ಪ್ರಾಪಂಚಿಕತೆಯ ನಡುವೆ ಕೆಲಸಮಾಡುವುದಕ್ಕೂ ಬ್ರಹ್ಮಾಂಡದಷ್ಟು ವ್ಯತ್ಯಾಸವಿದೆ. ಉದಾಹರಣೆಗೆ : ನೀವು ಒಂದು ಸಂಸ್ಥೆಯಲ್ಲಿ—ಒಂದು ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದೀರಿ ಎಂದಿಟ್ಟುಕೊಳ್ಳಿ. ಅದು ಪ್ರಪಂಚದಲ್ಲಿನ ಕೆಲಸವಾದರೂ ಪುಣ್ಯಕಾರ್ಯ. ನೀವು ನಿಮ್ಮ ಕೆಲಸ ಮುಗಿಸಿ ಕಾನ್ವೆಂಟಿಗೆ ಹಿಂತಿರುಗುವಿರಿ. ಇದು ಯೇಸು ಹೇಳಿದ, ಮಾಡಿತೋರಿಸಿದ ತತ್ತ್ವಕ್ಕನುಗುಣವಾಗಿದೆ. ಅದರ ಬದಲು ಈ ನಗರದಲ್ಲಿ ನಡೆಯುವ (ಕಾಕ್‌ಟೇಲ್) ಪಾನಕೂಟ ದಿನಗಳಲ್ಲಿ ನೀವು ಭಾಗವಹಿಸಿದಿರಿ ಎನ್ನೋಣ. ಅದು ಪ್ರಪಂಚದಲ್ಲಿ ಮಾಡುವ ಕಾರ್ಯವಲ್ಲ ; ಅದರಿಂದ ಪ್ರಾಪಂಚಿಕತೆಯೊಳಗೆ ಸಿಕ್ಕಿಬಿದ್ದು, ಲೋಕಸೇವಾಕಾರ್ಯ ಮಾಡುವ ನಿಮ್ಮ ಶಕ್ತಿಯನ್ನೇ ಕಳೆದುಕೊಂಡಂತಾಗುತ್ತದೆ.

ಸಂನ್ಯಾಸಿನಿ : ಯೇಸುವು ಕುರುಡರು ಕುಂಟರನ್ನು ಕಂಡು ಅವರ ಸೇವೆ ಮಾಡಿದ. ನಾನು ಹೊರಗಿನ ಪ್ರಪಂಚವನ್ನು ಹೊಕ್ಕಾಗ, ಲೋಕದ ದುಃಖ ದುಮ್ಮಾನಗಳೆಲ್ಲವೂ ನನ್ನನ್ನು ಎದುರಿಸುತ್ತವೆ—ಅವರ ನೋವು ನರಳಿಕೆಯ ಕರೆ ನನ್ನನ್ನು ತಾಕುತ್ತದೆ ; ಅವರ ಸಂಕಟಗಳಿಗೆ ಪ್ರತಿಸ್ಪಂದಿಸಿದಾಗ ಮಾತ್ರ ನನಗೆ (ಇವ್ಯಾಂಜಿಕ್) ಧರ್ಮಬೋಧೆಯ ವಾಸ್ತವಿಕತೆ ಅರ್ಥವಾಗುತ್ತದೆ.

ಸ್ವಾಮೀಜಿ : ಅದು ಒಳ್ಳೆಯದು. ಯಶಸ್ವಿಯಾಗಿ ಹಾಗೆ ಸ್ಪಂದಿಸಲು ವ್ಯಕ್ತಿಗೆ ಅಂಥ ಆಧ್ಯಾತ್ಮಿಕ ಬಲ ಅತ್ಯಗತ್ಯವಾಗುತ್ತದೆ. ಯಾರಿಗೆ ಈಜಲು ಬರುತ್ತದೆಯೋ ಅಂಥವರು ಮಾತ್ರ ನೀರಿನಲ್ಲಿ ಮುಳುಗಿದವರನ್ನು ಕಾಪಾಡಬಹುದು.

ಸಂನ್ಯಾಸಿನಿ : ಹೊರಗಿನ ಪ್ರಪಂಚದಲ್ಲಿನ ನೋವು ನರಳಿಕೆ ನನ್ನ ಗಮನವನ್ನು ಒತ್ತಾಯವಾಗಿ ಬೇಡುತ್ತಿದೆ ಎಂಬುದನ್ನು ಅರಿತಾಗ ಎಲ್ಲಾ ಸಾಧನಗಳನ್ನು ಪ್ರಯೋಗಿಸಿ—ಟಿ. ವಿ. ಮಾಧ್ಯಮವನ್ನು ಸಹ ಬಳಸಿ—ಅವರಿಗೆ ನೆರವಾಗಬೇಕೆನಿಸುತ್ತದೆ. ನನಗೆ ಈ ಕಾನ್ವೆಂಟ್ ಎಂಬ ಕೋಟೆಯೊಳಗೆ ಇರುವ ಅಗತ್ಯವಿಲ್ಲ. (ಇವ್ಯಾಂಜಿಲಿಕಲ್) ಧರ್ಮಪ್ರಚಾರ ಸತ್ಯವಾಗಿದ್ದರೆ ಅದು ನನ್ನನ್ನು ಹೊರಲೋಕದೊಳಕ್ಕೆ ಹೋಗೆಂದು ಒತ್ತಾಯಿಸಲೇಬೇಕು.

ಸ್ವಾಮೀಜಿ : ನಿಮ್ಮ ಈ ಭಾವನೆ ಪ್ರಶಂಸನೀಯ ; ಆದರೆ ಯಾರೂ ಸಹ ತಮ್ಮ ಇತಿಮಿತಿಗಳನ್ನು ಕಡೆಗಣಿಸಬಾರದು. ಯೇಸು ದೈವಿಕ ಪುರುಷ ; ಅವನು ನಿರ್ಭಯವಾಗಿ ಲೋಕದೊಂದಿಗೆ ಬೆರೆಯು

ಬಲ್ಲವನಾಗಿದ್ದ. ಪಾಪಿಗಳ ಜತೆ ಸಹ ಬೆರೆತು, ಅವರ ಸಹವಾಸವನ್ನೂ ಮಾಡುತ್ತಿದ್ದ, ಅವರನ್ನು ಉದ್ಧಾರಮಾಡುತ್ತಿದ್ದ. ಆದರೆ ಅಷ್ಟು ಶಕ್ತಿ ಇಲ್ಲದವರಿಗೆ ಅವರು ಧರ್ಮಪ್ರಚಾರದ ಕಾರ್ಯಕ್ಕೆ ಮನಸಾರೆ ಸ್ಪಂದಿಸುವಾಗಲೂ ಸಹ, ಸ್ವಲ್ಪಮಟ್ಟಿನ ಆಧ್ಯಾತ್ಮಿಕ ರಕ್ಷಣೆಯ ಮರೆಹೋಗಬೇಕು.

ಮತ್ತೊಬ್ಬ ಸಂನ್ಯಾಸಿನಿ : ಭಾರತದಲ್ಲಿ ಇಂಥ ಮಠೀಯ ಜೀವನಕ್ಕೂ, ಈ ರೀತಿಯ ಧರ್ಮ ಪ್ರಚಾರ ಕಾರ್ಯಗಳ ನಡುವೆ ವ್ಯತ್ಯಾಸವಿದೆಯೇ ?

ಸ್ವಾಮೀಜಿ : ನಾನು ಹಿಂದೆಯೇ ಹೇಳಿದಂತೆ, ಭಾರತದಲ್ಲಿನ ನಮ್ಮ ಸಾಂಪ್ರದಾಯಕ ಸಂನ್ಯಾಸಿ ಜೀವನದ ಹಿನ್ನೆಲೆ ಹೆಚ್ಚಾಗಿ ಧ್ಯಾನಚಿಂತನೆಗಳ ಸ್ವರೂಪ ಪಡೆದಿರುತ್ತದೆ. ನಮ್ಮ ಮಠಗಳ ಧರ್ಮ ಬೋಧೆ ಏನಿದ್ದರೂ ಗೃಹಸ್ಥಾಶ್ರಮಿಯರಿಗೆ ಧರ್ಮ, ತತ್ತ್ವಶಾಸ್ತ್ರಗಳನ್ನು ಪ್ರಸಾರ ಮಾಡುವುದಕ್ಕಷ್ಟೆ ಸೀಮಿತವಾಗಿದೆ. ಇಂಥ ಕಾರ್ಯಚಟುವಟಿಕೆಗಳು ಗೃಹಸ್ಥಾಶ್ರಮದಲ್ಲಿರುವವರ ಮತ್ತು ಅವರ ಲೌಕಿಕ ಸಂಸ್ಥೆಗಳ ಕೆಲಸವೆಂದು ಹಿಂದಿನಿಂದಲೂ ಪರಿಗಣಿಸಲಾಗುತ್ತಿದೆ. ಭಾರತದಲ್ಲಿ ಯಾವನೇ ಒಬ್ಬ ಸಂನ್ಯಾಸಿ ಸಿವಿಲ್ ಕಾಯಿದೆ ದೃಷ್ಟಿಯಲ್ಲಿ ಇದ್ದರೂ ಇಲ್ಲವೆಂದೇ ಲೆಕ್ಕ. ಆದರೆ ಭಾರತದ ಸಂನ್ಯಾಸಿ ಜೀವನದ ವ್ಯವಸ್ಥೆ ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದರಿಂದಾಗಿ ಧ್ಯಾನ, ಚಿಂತನೆ ಹಾಗೂ ಸಮಾಜ ಸೇವಾಕಾರ್ಯಗಳನ್ನು ಸಮನ್ವಯಗೊಳಿಸಿ ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ವೇದಾಂತದ ಆಧ್ಯಾತ್ಮಿಕತೆ ಹಾಗೂ ಸಮನ್ವಯ ತತ್ತ್ವದೃಷ್ಟಿಯಿಂದ ಸ್ಫೂರ್ತಿ ಪಡೆದು ಧಾರ್ಮಿಕ ಹಾಗೂ ಲೌಕಿಕ ಜೀವನ ವ್ಯವಸ್ಥೆಗಳ, ಮಾನವನ ಅಂತರಂಗ ಹಾಗೂ ಬಹಿರಂಗ ಜೀವನಗಳ ನಡುವೆ ಸಮನ್ವಯ ಸಾಧಿಸಲಾಗಿದೆ.

ಇನ್ನೊಬ್ಬ ಸಂನ್ಯಾಸಿನಿ : ನೀವು ಒಬ್ಬ ಭಾರತೀಯರು, ಹಿಂದೂ ಧರ್ಮಕ್ಕೆ ಸೇರಿದವರು, ಹೌದಲ್ಲವೇ ? ಆದರೆ ನೀವು ಇಷ್ಟು ಹೊತ್ತು ಕ್ರೈಸ್ತರಂತೆ ಮಾತನಾಡುತ್ತ, ಕ್ರೈಸ್ತಧರ್ಮದ ದೃಷ್ಟಿಕೋನವನ್ನೇ ಪ್ರತಿಪಾದಿಸುತ್ತಿರುವುದು ನನಗೆ ಮಹದಾಶ್ಚರ್ಯವನ್ನುಂಟುಮಾಡಿದೆ.

ಸ್ವಾಮೀಜಿ : ನೀವು ಹಿಂದೂಧರ್ಮದ ವ್ಯಾಪ್ತಿ ಮತ್ತು ಅದರ ಸರಿಯಾದ ಅರ್ಥ ಗ್ರಹಿಸಿ ಅದರ ಹಿಂದಿರುವ ವೇದಾಂತ ದರ್ಶನವನ್ನು ತಿಳಿದುಕೊಂಡರೆ ನಿಮಗೆ ಆಶ್ಚರ್ಯವಾಗಲಾರದು ; ಯಾಕೆಂದರೆ ಹಿಂದೂಧರ್ಮದ, ಭಾರತೀಯ ತತ್ತ್ವಶಾಸ್ತ್ರದ ಸೂತ್ರವಾಕ್ಯವೇ ಸರ್ವಗ್ರಾಹ್ಯತೆ ಮತ್ತು ಸರ್ವಧರ್ಮದ ಸಮನ್ವಯ ತತ್ತ್ವ—ಬೇರೆ ಧರ್ಮವನ್ನು ಅಲ್ಲಗಳೆದು ನಿರಾಕರಿಸುವುದು ಎಂದಿಗೂ ಸಲ್ಲದು. ಈ ತತ್ವಕ್ಕನುಗುಣವಾಗಿ ಹಿಂದೂ ಧರ್ಮವು ಯೇಸುಕ್ರಿಸ್ತನನ್ನು, ಕ್ರೈಸ್ತಧರ್ಮವನ್ನು ಒಪ್ಪಿಕೊಳ್ಳುತ್ತದೆ, ಯೇಸುವನ್ನು ಕ್ರೈಸ್ತರು ಪರಿಗಣಿಸುವಂತೆಯೇ ಒಬ್ಬ ಭಗವದವತಾರವೆಂದು ಭಾವಿಸುತ್ತದೆ—ಆದರೆ ನಮ್ಮ ದೃಷ್ಟಿಯಲ್ಲಿ ಅವನು ಹಲವಾರು ದೈವಿಕ ಅವತಾರಗಳಲ್ಲಿ ಒಬ್ಬ. ಕ್ರೈಸ್ತರಂತೆ ನಾವು ಅವನನ್ನು ಭಗವಂತನ ಏಕೈಕ ಪುತ್ರನೆಂದು ಭಾವಿಸುವುದಿಲ್ಲ. ಹಿಂದೂಗಳ ದೃಷ್ಟಿಯಲ್ಲಿ ಎರಡೂ ಧರ್ಮಗಳ ಆಧ್ಯಾತ್ಮಿಕ ತತ್ತ್ವಗಳ ನಡುವೆ ಮೂಲಭೂತ ಸಾಮರಸ್ಯವಿರುವುದು ಮಾತ್ರವಲ್ಲ—ಅವರು ಸಕಲ ಧರ್ಮಗಳನ್ನು ಸಮನ್ವಯ ದೃಷ್ಟಿಯಿಂದ ಪರಿಗ್ರಹಿಸುತ್ತಾರೆ. ವ್ಯತ್ಯಾಸ ಗಳೇನಿದ್ದರೂ ಪುರಾಣಕಥೆಗಳು (ಮಿಥಿಕಗಳು) ಮಠೀಯ ಸಿದ್ಧಾಂತಗಳು ಹಾಗೂ ಸಂಸ್ಥೀಕೃತ ಆಚರಣೆಗಳ ನಡುವೆ ಮಾತ್ರ. ಈಗ ನೋಡಿ ಯೇಸು ಮತ್ತು ಅವನ ಬೋಧೆಗಳ ಮೇಲೆ ರೂಪಗೊಂಡ ಕ್ರೈಸ್ತಧರ್ಮ, ಕ್ರೈಸ್ತ ಆಧ್ಯಾತ್ಮಿಕ ಅನುಭವಗಳು ಒಂದು ಕಡೆ ಇದ್ದರೆ, ಕ್ರಿಶ್ಚಿಯನ್ ಚರ್ಚು ಮುಂತಾದ ಧಾರ್ಮಿಕ ವ್ಯವಸ್ಥೆಗಳು—ನಿಮ್ಮ ಕ್ಯಾಥಲಿಕ್ ಪಂಥವಿದೆಯಲ್ಲಾ ಹಾಗೆ—ಅವು ಒಂದು ಕಡೆ ಇವೆ. ಕ್ಯಾಥಲಿಕ್ ಧರ್ಮ ವಿಶೇಷವಾಗಿ ರೋಮನ್ ಆಗಿದ್ದು ವಿಶಿಷ್ಟವಾಗಿ ಅದು ಪಾಶ್ಚಾತ್ಯಲೋಕದ್ದು. ಆದರೆ ಮೊದಲು ಹೇಳಿದ ಯೇಸುವಿನ ಬೋಧನೆಗಳನ್ನು ಆಧರಿಸಿದ ಕ್ರೈಸ್ತಪಂಥವು ಪೌರ್ವಾತ್ಯವಾಗಿದ್ದು ಭಾರತೀಯ ಮನೋಧರ್ಮಕ್ಕೆ ಹತ್ತಿರವಾಗಿದೆ.

ನಿಮ್ಮ ಆರಾಧನೆ, ಪ್ರಾರ್ಥನೆ, ಧ್ಯಾನ, ಅದಕ್ಕೂ ಮಿಗಿಲಾಗಿ ನಿಮ್ಮ ಕೆಲವು ಮತವಿಧಿವಿಧಾನ. (ಪ್ರಕ್ರಿಯೆ)ಗಳು ಭಾರತೀಯ ಧರ್ಮಪ್ರಕ್ರಿಯೆಗಳನ್ನೇ ಹೋಲುತ್ತವೆ. ಬ್ರಹ್ಮಚರ್ಯ ಮತ್ತು ಬಡತನ (ಆಸ್ತಿಯ ವೈಯಕ್ತಿಕ ಒಡೆತನದ ನಿರಾಕರಣೆ)ಗಳನ್ನೊಳಗೊಂಡ ನಿಮ್ಮ ಮಠೀಯ ಆಧ್ಯಾತ್ಮಿಕತೆ ಸಹ ನಮಗೆ ಪರಕೀಯವಲ್ಲ. ನಿಮ್ಮ ಮಠೀಯ ಆಧ್ಯಾತ್ಮಿಕ ವ್ಯವಸ್ಥೆಯ ಮೂರನೆಯ ವ್ರತವಾದ ಧಾರ್ಮಿಕ ವಿಧೇಯತೆಗೆ (obidience) ಹಿಂದೂ ಸಂನ್ಯಾಸೀ ಸಂಪ್ರದಾಯದಲ್ಲಿ ಸ್ಥಾನವಿಲ್ಲ. ಮಠೀಯ ಆಧ್ಯಾತ್ಮಿಕತೆ ಎನ್ನುವುದು ಮೂಲತಃ ಭಾರತೀಯ ಸಂಪ್ರದಾಯವಾಗಿದ್ದು ಅದರ ಅಭಿವ್ಯಕ್ತಿಯನ್ನು ಹಿಂದೂ, ಜೈನ ಹಾಗೂ ಬೌದ್ಧಧರ್ಮಗಳಲ್ಲಿ ಕಾಣಬಹುದು. ಅದನ್ನು ಯೆಹೂದ್ಯ, ಇಸ್ಲಾಂಗಳಂಥ ಹೆಚ್ಚಾಗಿ ಸಿಮಿಟಿಕ್ ಪಂಥದ ಮುಖ್ಯಧಾರೆ ಬಹಿಷ್ಕರಿಸುತ್ತವೆ. ಆದರೆ ಮಠೀಯ ಆಧ್ಯಾತ್ಮಿಕ ತತ್ತ್ವವನ್ನು ತನ್ನ ಪರಂಪರೆ ಹಾಗೂ ಪರಿಸರದಲ್ಲಿನ ಅತ್ಯಂತ ತೀವ್ರ ಶಕ್ತಿಗಳನ್ನು ವಿರೋಧಿಸಿ ಮೊದಲು ರೂಢಿಗೆ ತಂದವನು ಯೇಸು ಕ್ರಿಸ್ತ. ಆಮೇಲೆ ಮುಂದಿನ ೧೫೦೦ ವರ್ಷಗಳ ಕಾಲ ಕ್ಯಾಥಲಿಕ್ ಮಠೀಯ ಆಧ್ಯಾತ್ಮಿಕತೆಯು ಧಾರ್ಮಿಕ ಇತಿಹಾಸದಲ್ಲೆ ಒಂದು ಉಜ್ವಲ ಅಧ್ಯಾಯವನ್ನು ರಚಿಸಿತು. ಆದರೆ ರೆಫರ್ಮೇಷನ್ ಕಾಲದಲ್ಲಿ ಕ್ರೈಸ್ತ ಧರ್ಮದ ಇತರ ಹಳೆಯ ಅಂಶಗಳು ತಮ್ಮತನವನ್ನು ದೃಢಪಡಿಸಿ ಮುಂದೆ ಬಂದಾಗ ಕ್ಯಾಥಲಿಕ್ ಧರ್ಮಕ್ಕೆ ತಡೆಯುಂಟಾಯಿತು. ಇತರ ಜತೆಗೆ ಆಧುನಿಕ ಯುಗದ ಮುಕ್ತ ಲೌಕಿಕ ರೋಮನ್ ಅಂಶಗಳು ಸಹ ಪ್ರಬಲಗೊಂಡು ಸೇರಿ ಕ್ರೈಸ್ತ ಮಠೀಯ ಆಧ್ಯಾತ್ಮಿಕತೆಗೆ ಪ್ರಬಲವಾದ ಸವಾಲು ಒಡ್ಡಿವೆ. ಆದರೆ ಅದು ತನ್ನ ಪೌರ್ವಾತ್ಯ, ಸಹಜ ಧಾರ್ಮಿಕ ಅಂಶಗಳನ್ನು ಬಲಪಡಿಸಿಕೊಂಡರೆ ಈ ಸವಾಲುಗಳನ್ನು ಎದುರಿಸಿ ನಿವಾರಿಸಬಹುದು. ಈ ತೆರನಾದ ಧಾರ್ಮಿಕ ಪುನರುಜ್ಜೀವನ ಕಾರ್ಯಕ್ಕಾಗಿ ಆರ್ಷೇಯ ಹಿಂದೂತತ್ತ್ವಶಾಸ್ತ್ರ, ಪುರಾತನ ಅನುಭವಗಳಿಂದ ಅತ್ಯಮೂಲ್ಯ ನೆರವು ಪಡೆಯಬಹುದು. ವಿಧೇಯತೆಗೆ ಭಾರತೀಯ ಮಠೀಯ ಆಧ್ಯಾತ್ಮಿಕತೆಯಲ್ಲಿ ಸ್ಥಾನವಿಲ್ಲ—ಏಕೆಂದರೆ ಕ್ಯಾಥಲಿಕ್ ಧರ್ಮದಂತೆ, ಹಿಂದೂಧರ್ಮವು ವ್ಯವಸ್ಥೆಗೊಂಡ ಒಂದು ಪ್ರಬಲ ಚರ್ಚ್‌ನಂತೆ ಕೇಂದ್ರೀಕೃತ ಅಧಿಕಾರ ಪಡೆದಿಲ್ಲ.

ಸಂನ್ಯಾಸಿನಿ : ಆದರೆ ಒಂದು ಚರ್ಚ್ ಅಥವಾ ಕಾನ್ವೆಂಟ್‌ನಲ್ಲಿ ಒಂದು ವಿಶಿಷ್ಟ ಅಧಿಕಾರವಿರಬೇಕು ಎಂದು ನಿಮಗೆ ಅನಿಸುವುದಿಲ್ಲವೇ ?

ಸ್ವಾಮೀಜಿ : ಹೌದು, ಅದರ ಅಗತ್ಯವಿದೆ. ಆದರೆ ಅದರ ಬಗ್ಗೆ ಒಂದು ಪ್ರತಿಜ್ಞಾವಿಧಿ ಬೇಕಾಗಿಲ್ಲ. ಅದು ಒಂದು ಸಾಮಾಜಿಕ ಅಥವಾ ಸಾಮುದಾಯಿಕ ಸಂದರ್ಭದಲ್ಲಿ ಬೇಕಾಗುವ ಸಾಮಾನ್ಯವಾದ ಅವಶ್ಯಕತೆ. ಅದರ ಪ್ರತಿಯೊಬ್ಬ ಸದಸ್ಯನೂ ಮೇಲ್ವಿಚಾರಕ ಅಧಿಕಾರಿಯನ್ನು ಗೌರವಿಸುತ್ತಾ ಅವರಿಂದ ಬಂದ ನಿರ್ದೇಶನಗಳನ್ನು ಪಾಲಿಸುತ್ತಾನೆ. ಇದೊಂದು ವ್ಯಾವಹಾರಿಕ ಅಗತ್ಯವಾದರೂ ಇದೊಂದು ಧಾರ್ಮಿಕ ಪ್ರತಿಜ್ಞೆ ಆಗಬೇಕಾಗಿಲ್ಲ. ಅದರಲ್ಲೂ ಈಗ ಹಲವು ಮಂದಿ ಶತಮಾನಗಳಿಂದ ರೂಢಿಯಲ್ಲಿದ್ದ 'ಉಗ್ರ ಹಾಗೂ ಜಯಭೇರಿ'ಯ ಚರ್ಚಿನ ಪರಿಕಲ್ಪನೆಯನ್ನು ತ್ಯಜಿಸುತ್ತಿರುವುದರಿಂದ ಅಂಥ ಪ್ರತಿಜ್ಞೆಯ ಅಗತ್ಯವಿಲ್ಲ. ಈ ವಿಧೇಯತೆಯ ಪ್ರತಿಜ್ಞೆಯುಳ್ಳ ಚರ್ಚ್ ಸಂಸ್ಥೆಯೆಂದರೆ ನಿಮ್ಮ ರೋಮನ್ ಕ್ಯಾಥಲಿಕ್ ಮೂಲದ ಕ್ರೈಸ್ತಧರ್ಮ ; ಅದು ಒಂದು ಧಾರ್ಮಿಕ ಸಂಸ್ಥೆಯ ಅಗತ್ಯಕ್ಕೆ ಸ್ವಲ್ಪ ಮೀರಿದ, ಅದಕ್ಕೆ ಅಷ್ಟಾಗಿ ಹಿತವಲ್ಲದಷ್ಟು ನೇಮನಿಷ್ಠೆಯಿಂದ ಕೂಡಿದೆ. ಭಾರತದಲ್ಲಿ ಆಧ್ಯಾತ್ಮಿಕ ವ್ರತ (ಸಂನ್ಯಾಸಾಶ್ರಮದ ವ್ರತಗಳಲ್ಲಿ) ಬಡತನ ಮತ್ತು ಬ್ರಹ್ಮಚರ್ಯ—ಈ ಎರಡಕ್ಕೆ ಸಂಬಂಧಿಸಿವೆ. ಯಾರೊಬ್ಬ ಸಂನ್ಯಾಸಿ-ಸಂನ್ಯಾಸಿನಿಯೂ ವೈಯಕ್ತಿಕವಾಗಿ ಹಣ ಸಂಪಾದಿಸಬಾರದು—ಸ್ವಂತ ಬ್ಯಾಂಕ್ ಖಾತೆಯಲ್ಲಿ ತನ್ನ ಸ್ವಂತ ಸಂಪಾದನೆಯ ಹಣವಿಡಬಾರದು—ಜೀವನೋಪಾಯಕ್ಕಾಗಿ ಭಗವಂತನನ್ನು ಆಶ್ರಯಿಸತಕ್ಕದ್ದು—ಇವು ಮುಖ್ಯ ಸೂತ್ರಗಳು. ಆದರೆ ಸಂಸ್ಥೆಯು ತನ್ನ ಸದಸ್ಯರ ಪರವಾಗಿ ಈ ಕೆಲಸಗಳನ್ನು ಮಾಡಬಹುದು. ಮಠೀಯ ಆಧ್ಯಾತ್ಮಿಕ ಜೀವನದ ಉದ್ದೇಶವೆಂದರೆ :

ಬಹು ಕ್ಷುದ್ರವಾದ 'ನಾನು' ಎಂಬ ಸ್ವಾರ್ಥದ ತ್ಯಾಗ. ಇಂಗ್ಲಿಷ್ ಬರವಣಿಗೆಯಲ್ಲಿ —'ಶಿಲುಬೆ'ಯ ಅರ್ಥವೇ ಅದು ಎಂದು ನನ್ನ ಭಾವನೆ. ಅದರ ಆಕಾರದಲ್ಲಿನ 'I' ಅಕ್ಷರವನ್ನು ಮೊಟಕುಮಾಡಿದಾಗ ಅದು (†) ಶಿಲುಬೆ ಗುರುತಾಗುತ್ತದೆ ! ಈ ಸ್ವಾರ್ಥ (ಅಹಮ್)ನ್ನು ಕತ್ತರಿಸಿಬಿಡಿ. ಸೈಂಟ್‌ಪಾಲ್ ಹೇಳುತ್ತಾನೆ : 'ನಾನು. ಆದರೆ ನಾನಲ್ಲ—ನನ್ನಲ್ಲಿರುವವನು ಯೇಸುವೇ' (I and yet not I. but the Christ that liveth in me) ಕ್ರೈಸ್ತಧರ್ಮದ ಅನುಭಾವದ ಭಾಷೆಯಲ್ಲಿನ ಈ ಹಳೆಯ ಮನುಷ್ಯ—ಈ ಕ್ಷುದ್ರ 'ನಾನು' ಸತ್ತುಹೋಗಿದ್ದಾನೆ. ನಿಮ್ಮ ಕಾನ್ವೆಂಟಿನಲ್ಲಿ ನೀವು ನಿರಂತರವಾಗಿ ಸಾಧಿಸಲೆತ್ನಿಸುತ್ತಿರುವುದು ಈ ಆಧ್ಯಾತ್ಮಿಕ ಸ್ಥಿತಿಯನ್ನು.

ಇನ್ನೊಬ್ಬ ಸಂನ್ಯಾಸಿನಿ : ಅದು ಯಾಕೋ ಅತಿಯಾದ ಆದರ್ಶವೆನಿಸುತ್ತದೆ.

ಸ್ವಾಮೀಜಿ : ಹೌದು. ಅದು ಉದಾತ್ತವಾದ ಆದರ್ಶ ; ಅದು ಉದಾತ್ತವಾಗಿಯೇ ಇರಬೇಕು ; ಪ್ರತಿಯೊಬ್ಬರೂ ತಮ್ಮ ಶಕ್ತ್ಯಾನುಸಾರ —೫% ಅಥವಾ ೧೦% ಇತ್ಯಾದಿ —ಅದನ್ನು ಸಾಧಿಸಲು ಸರ್ವಪ್ರಯತ್ನ ಮಾಡಬೇಕು. ಯಾರಾದರೂ ಇದರಲ್ಲಿ ೧೦೦% ಯಶಸ್ಸು ಸಾಧಿಸಿದರೆ ಅದಕ್ಕೆ ಭಗವತ್ಕೃಪೆಯೇ ಕಾರಣ. ನಿರಂತರ ದುಡಿಮೆ, ಗುರಿಸಾಧಿಸುವ ಹೋರಾಟ, ಭಗವಂತನ ಆಶ್ರಯ— ಎಲ್ಲಾ ನಿಜವಾದ ಆಧ್ಯಾತ್ಮಿಕ ಜೀವನದ ಮಾರ್ಗವೇ ಇದು.

ಇನ್ನೊಬ್ಬ ಸಂನ್ಯಾಸಿನಿ : ಹಿಂದೂ ಧರ್ಮದಲ್ಲಿ ನೀವು ಮಂತ್ರಗಳನ್ನೇನಾದರೂ ಬಳಸುವಿರಾ ? ಅವುಗಳ ಧಾರ್ಮಿಕ ಪ್ರಸ್ತುತತೆಯೇನು ?

ಸ್ವಾಮೀಜಿ : ಪ್ರತಿ ಧರ್ಮದ ಆಧ್ಯಾತ್ಮಿಕ ಭಾಗದಲ್ಲಿ ಮಂತ್ರಗಳು ಅತಿಮುಖ್ಯ ಅಂಶಗಳು. ಹಿಂದೂಧರ್ಮದ ವೈಶಿಷ್ಟ್ಯವೆಂದರೆ ಅದು ಮಂತ್ರಗಳನ್ನೇ ಒಂದು ದರ್ಶನವಾಗಿ ಬೆಳೆಸಿದುದು. ಕ್ರೈಸ್ತಧರ್ಮ, ಅದರಲ್ಲೂ ಕ್ಯಾಥಲಿಕ್ ಪಂಥದಲ್ಲಿ 'ಯೇಸು, ಭಗವಂತನ ಪುತ್ರನೇ.... ಪಾಪಿಯಾದ ನನ್ನನ್ನು ಕಾಪಾಡು' ಎಂಬುದೊಂದು ಅಂಥ ಮಂತ್ರ. ಹಿಂದೂಧರ್ಮ ಇದನ್ನು ಸ್ವಲ್ಪ ಸೌಮ್ಯಗೊಳಿಸಿ ತಿದ್ದಿ ಕೊನೆಯೆರಡು ಪದಗಳಾದ 'ನಾನು ಪಾಪಿ' ಎಂಬುದನ್ನು ವರ್ಜಿಸುತ್ತದೆ. ಏಕೆಂದರೆ ಹಿಂದೂ ಧರ್ಮವು ಆಧ್ಯಾತ್ಮಿಕ ಪಿಪಾಸುವನ್ನು 'ದೇವರ ಮಗು—ಅವನಲ್ಲಿ ಭಗವಂತನ ಸಾಮ್ರಾಜ್ಯವಿದೆ' ಎಂಬುದಾಗಿ ಪರಿಗಣಿಸುವುದೇ ಅತ್ಯಂತ ಶ್ರೇಷ್ಠ ತತ್ತ್ವವೆಂದು ಭಾವಿಸುತ್ತದೆ. 'ಜಯ ಮೇರಿ !' (Ave maria) ಎಂಬುದು ಇನ್ನೊಂದು ಅಂಥ ಜಪ. ಹಲವು ಧರ್ಮಗಳವರು ಜಪಮಣಿ ಸರವನ್ನು ಸಹ ಬಳಸುತ್ತಾರೆ. ಭಾರತದಲ್ಲಿ, ಸಾವಿರಾರು ಜನ ದೈವಭಕ್ತರು ಮನೆಯೊಳಗೋ ದೇವಾಲಯ ದೊಳಗೋ ಅಥವಾ ಗಂಗೆಯಂಥ ಪವಿತ್ರ ನದಿಗಳ ದಡದಲ್ಲಿ ಕುಳಿತು, ಜಪಸರವನ್ನಿಟ್ಟು ಕೊಂಡೋ ಇಲ್ಲದೆಯೋ ಜಪ ಮಾಡುವುದನ್ನು ನೀವು ನೋಡಬಹುದು. 'ಮಂತ್ರ'ಗಳು ಸಾಮಾನ್ಯವಾಗಿ ಸಂಕ್ಷಿಪ್ತವಾಗಿದ್ದು ಅವು ಸಂಸ್ಕೃತದಲ್ಲಿರುತ್ತವೆ. ಈ ಮಂತ್ರಗಳು ಬಹುತೇಕ ಪರಮ ಪವಿತ್ರವಾದ 'ಓಂ'ಕಾರದಿಂದ ಪ್ರಾರಂಭವಾಗುತ್ತವೆ ; 'ಓಂಕಾರ'ವೆಂಬುದು ವಿಶ್ವವ್ಯಾಪಕ ಅನಂತ ರೂಪಿ. ಭಗವಂತನನ್ನು ಸೂಚಿಸುವ ಶಬ್ದಸಂಕೇತ. ಸಂಕ್ಷಿಪ್ತವಾದ ಮಂತ್ರ ಅತ್ಯಂತ ಪರಿಣಾಮಕಾರಿ. ಕೆಲವು ಕ್ರೈಸ್ತ ಸಂತರು ಹೇಳಿರುವ ಹಾಗೆ 'ಸಂಕ್ಷಿಪ್ತ ಪ್ರಾರ್ಥನೆ ಸ್ವರ್ಗವನ್ನು ಭೇದಿಸಿ ಭಗವಂತನನ್ನು ಮುಟ್ಟುತ್ತದೆ.' ('A Short Prayer pierceth heaven !').

ಸಂನ್ಯಾಸಿನಿ : 'ಜ್ಞಾನೋದಯ' ಅಥವಾ 'ಸಾಕ್ಷಾತ್ಕರಣ' ಎಂದರೇನು ?

ಸ್ವಾಮೀಜಿ : ಅದರ ಅರ್ಥ : ಭಗವಂತನ ಕುರಿತ ಪ್ರತ್ಯಕ್ಷವಾದ ಅನುಭವ ; ಯೇಸುಕ್ರಿಸ್ತನ ಅತ್ಯಂತ ಅರ್ಥಪೂರ್ಣವಾದ ಈ ಉಕ್ತಿಯೇ ಅದು. 'ಹೃದಯ ನೈರ್ಮಲ್ಯವಿದ್ದವರೇ ಭಾಗ್ಯವಂತರು. ಯಾಕೆಂದರೆ ಭಗವಂತನನ್ನು ಕಾಣುವವರು ಅವರೇ ' (*'Blessed are the pure in heart, for they shall see God'*).

ಸಂನ್ಯಾಸಿನಿ : ಈ ಸಾಕ್ಷಾತ್ಕಾರದ ಸ್ಥಿತಿಯನ್ನು ತಲುಪುವುದು ಹೇಗೆ ?

ಸ್ವಾಮೀಜಿ : ಅದನ್ನು ನಾವು ನಮ್ಮ ಬದುಕಿನ ಗುರಿಯನ್ನಾಗಿಟ್ಟುಕೊಂಡು ಸಾಧನೆಗೈಯಬೇಕು. ಧ್ಯಾನ, ಜಪತಪಾದಿ ಚಿಂತನೆಗಳು, ಪವಿತ್ರ ಅಧ್ಯಯನ, ಕರ್ತವ್ಯ ಕರ್ಮಗಳನ್ನು ಸೇವೆಯ ಅರ್ಪಣೆಯ ಮನೋಭಾವದಿಂದ ಮಾಡುವುದು—ಇವೆಲ್ಲವೂ ನಮ್ಮಿಂದ ನಿಜವಾಗಿ ಅನತಿ ದೂರದಲ್ಲಿರುವ ಅತ್ಯಂತ ಸಮೀಪದಲ್ಲಿರುವ, ಆದರೆ ನಮ್ಮ ಅಜ್ಞಾನದಿಂದಲೋ, ಆಧ್ಯಾತ್ಮಿಕ ಅಂಧತ್ವದಿಂದಲೋ ಬಹುದೂರವಿರುವಂತೆ ತೋರುವ ಭಗವಂತನ ಬಳಿ ಕೊಂಡೊಯ್ಯುತ್ತವೆ. ಆಧ್ಯಾತ್ಮಿಕ ಸಾಧನೆಯಿಂದ ಈ ಅಂಧತ್ವ ನಿಧಾನವಾಗಿ ನಿವಾರಣೆಯಾಗುತ್ತದೆ ; ಹಲವೊಮ್ಮೆ ಸಾಧಕ ದಾರಿ ತಪ್ಪಬಹುದು. ಅಥವಾ ಎಡವಬಹುದು ; ಆದರೆ ನಿಜವಾದ ಭಕ್ತ (ಸಾಧಕ) ಇದರಿಂದ ಎದೆಗುಂದುವುದಿಲ್ಲ. ತಾನು ಭಗವದನ್ವೇಷಣೆಯಲ್ಲಿ ತೊಡಗಿರುವಂತೆ ಭಗವಂತನೂ ಭಕ್ತನ ಅನ್ವೇಷಣೆಯಲ್ಲಿ ತೊಡಗಿರುತ್ತಾನೆಂಬುದು ಸಾಧಕನಿಗೆ (ಸಾಧಕಳಿಗೆ) ಚೆನ್ನಾಗಿ ಗೊತ್ತು. ಎಂದಾದರೊಂದು ದಿನ ಈ ಅನ್ವೇಷಣೆ ಭಗವತ್ಸಾಕ್ಷಾತ್ಕಾರದಲ್ಲಿ ಪರ್ಯವಸಾನ ಗೊಳ್ಳುತ್ತದೆ ಎಂಬುದನ್ನು ಸಾಧಕನು ಬಲ್ಲ. ಈ ಭಗವತ್ಸಾಕ್ಷಾತ್ಕಾರವು ಹಿಂದೆ ಹಲವು ಸ್ತ್ರೀಪುರುಷರಿಗೆ ಲಭಿಸಿದೆ. ಆದ್ದರಿಂದ ಅಂಥ ಭಗವದನುಭವವನ್ನು ಎಲ್ಲರೂ ಈಗಲೂ ಸಾಧಿಸಬಹುದು. ಈ ಮನವರಿಕೆಯೇ ಆಧ್ಯಾತ್ಮಿಕ ಅಧ್ಯವಸಾಯವೆಲ್ಲದರ ತಳಹದಿ. ಶ್ರೀರಾಮಕೃಷ್ಣರು ಇದನ್ನು ಮೀನು ಹಿಡಿಯುವ ಕೆಲಸಕ್ಕೆ ಹೋಲಿಸುತ್ತಾರೆ. ನಾವು ದಾರದ ತುದಿಯ ಗಾಳವನ್ನು ನೀರಿನೊಳಕ್ಕೆಸೆದು ಸಹನೆಯಿಂದ ಸದ್ದಿಲ್ಲದೆ ಕುಳಿತು ಕಾಯುತ್ತೇವೆ. ಕೆಲವೊಮ್ಮೆ ಮೀನುಗಳು ಗಾಳದ ಹತ್ತಿರ ಬರುವುವು, ಅದನ್ನು ಆಟವಾಡುವಂತೆ ಮೆಲ್ಲನೆ ಕಚ್ಚುವುವು ಸಹ—ನೀರ ಮೇಲಿನ ತೇಲಿನ ಅದಿರಾಟದಿಂದ ನಮಗೆ ಇದರ ಅರಿವಾಗುತ್ತದೆ. ಆದರೆ ಮೀನುಗಳು ಗಾಳಕ್ಕೆ ಸಿಕ್ಕದೆ ಚೆಲ್ಲಾಪಿಲ್ಲಿಯಾಗಿ ಬಿಡುತ್ತವೆ. ನಮಗೆ ಚೆನ್ನಾಗಿ ಗೊತ್ತು—ಹೊಂಡದಲ್ಲಿ ಮೀನು ಗಳಿವೆ. ಬೇರೆಯವರು ಅವನ್ನು ಹಿಡಿದಿದ್ದಾರೆ, ಒಂದು ಮೀನಿಗಾಗಿ ನಾವು ನೂರು ಸಲ ಹೆಣಗಿ ಸೋತಿದ್ದೇವೆ. ಆದರೂ ಅಂತಿಮವಾಗಿ ನಾವು ಯಶಸ್ವಿಯಾಗುತ್ತೇವೆ.—ಏನಿದ್ದರೂ ನಾವು ತಾಳ್ಮೆಯಿಂದ, ನಿರಂತರವಾಗಿ ಸರಿಯಾದ ತಂತ್ರವನ್ನನುಸರಿಸಿ ಕಾದಿರಬೇಕು—ಇವೆಲ್ಲವನ್ನೂ ನಾವು ಬಲ್ಲೆವು. ಈ ಗಾಳವೇ ಆಧ್ಯಾತ್ಮಿಕ ಸಾಧಕನ ಭಕ್ತಿಯ ಪ್ರತೀಕ.

ಇನ್ನೊಬ್ಬ ಸಂನ್ಯಾಸಿ : ಭಗವತ್ಸಾಕ್ಷಾತ್ಕಾರ ಎಲ್ಲರಿಗೂ ಸಾಧ್ಯವೇ ?

ಸ್ವಾಮೀಜಿ : ಸೈದ್ಧಾಂತಿಕವಾಗಿ, ಹೌದು ಸಾಧ್ಯ. ನಮ್ಮೆಲ್ಲರಲ್ಲೂ ಅಂತರಾತ್ಮನಾಗಿ ಇರುವ ಭಗವಂತನನ್ನು ಅನ್ವೇಷಿಸಿ ಅವನನ್ನು ಕಾಣಬಲ್ಲ ಸಾವಯವ ಶಕ್ತಿ ಪ್ರತಿ ಮಾನವ ಜೀವಿಯಲ್ಲೂ (ಮಾನಸಿಕ ಶಕ್ತಿ ವಿಶೇಷವಾಗಿ ಕುಂಠಿತವಾಗಿರುವವರನ್ನು ಬಿಟ್ಟು) ಇರುವ ಪ್ರಕೃತಿದತ್ತವಾದ ಗುಣ. ಆದರೆ ಎಲ್ಲರೂ ಈ ಶಕ್ತಿಯನ್ನು ಈ ಉದ್ದೇಶಕ್ಕಾಗಿ ಬಳಸುವುದಿಲ್ಲ ; ಹಲವರಂತೂ ಅತ್ಯಂತ ತೀವ್ರ ಜೈವಿಕ ಸೆಳೆತಗಳಿಗೆ ಸಿಕ್ಕಿದವರಾಗಿರುತ್ತಾರೆ ; ಇನ್ನು ಹಲವರಿಗೆ ಆಧ್ಯಾತ್ಮಿಕ ಜೀವನವೆಂದರೇನೆಂಬುವರ ಬಗ್ಗೆ ತಪ್ಪು ಕಲ್ಪನೆಗಳಿರುತ್ತವೆ ಅಥವಾ ಆಧ್ಯಾತ್ಮಿಕ ಜೀವನ ಕುರಿತ ಕಲ್ಪನೆಗಳನ್ನು ಮೂಢನಂಬಿಕೆಗಳೊಂದಿಗೆ ಮಾಟ, ಯಕ್ಷಿಣಿವಿದ್ಯೆಗಳೊಂದಿಗೆ ಕಲಬೆರಕೆ ಮಾಡಿಬಿಡುತ್ತಾರೆ. ಆದರೆ ಆಧುನಿಕ ಯುಗದಲ್ಲಿ, ಪ್ರತಿಯೊಬ್ಬ ಮನುಷ್ಯನಲ್ಲೂ ಅಡಗಿರುವ ಅಗಾಧ ಸಾಧ್ಯತೆಗಳ ಕುರಿತು ವೈಚಾರಿಕವಾದ ಅಭಿಪ್ರಾಯಗಳು ಬೆಳೆಯುತ್ತಿವೆ—ಧರ್ಮವೆಂದರೆ ಆಧ್ಯಾತ್ಮಿಕ ಬೆಳವಣಿಗೆ, ಆ ಬೆಳವಣಿಗೆಯ ಹಿಂದೆ ಮನುಷ್ಯನ ಭೌತಿಕ ಮಾನಸಿಕ ಆಯಾಮಗಳ ಬೆಳವಣಿಗೆ ಕುರಿತ ವೈಜ್ಞಾನಿಕ ತಾಂತ್ರಿಕ ವಿಚಾರಪರಂಪರೆ ಹೇಗೆ ರೂಪಗೊಂಡಿದೆಯೋ ಅದೇ ರೀತಿ ಇದರಲ್ಲಿಯೂ ಒಂದು ವೈಜ್ಞಾನಿಕ ತಾಂತ್ರಿಕ ವ್ಯವಸ್ಥೆ ಇದೆ ಎಂಬುದನ್ನು ಹೆಚ್ಚು ಹೆಚ್ಚು ಸ್ತ್ರೀಪುರುಷರು ಅರ್ಥಮಾಡಿ ಕೊಳ್ಳುತ್ತಿದ್ದಾರೆ—ಮನುಷ್ಯನ ಬಹುಮುಖ ಬೆಳವಣಿಗೆಯಿಂದ ಮಾತ್ರ ಅವನ ಸಮಗ್ರ, ಪೂರ್ಣ

ವಿಕಾಸ ಸಾಧ್ಯ ಎಂಬುದು ಈಗೀಗ ಸರ್ವವಿದಿತವಾಗಿದೆ. ಈ ಅರಿವು ವಿಶ್ವವ್ಯಾಪಕವಾದಾಗ, ಎಲ್ಲರೂ ತಮ್ಮ ತಮ್ಮ ಶಕ್ತ್ಯಾನುಸಾರ ಆಧ್ಯಾತ್ಮಿಕತೆಯ ವಿಕಾಸದತ್ತ ಹೆಜ್ಜೆ ಇಡಲು ಪ್ರಾರಂಭಿಸುತ್ತಾರೆ. ಕೆಲವರು ಮಾತ್ರ ಆ ಮಾರ್ಗದಲ್ಲಿ ಇನ್ನೂ ಹೆಚ್ಚು ಹೆಚ್ಚು ದೂರ ಮುನ್ನಡೆದು ಸಾಗುತ್ತಾರೆ. ಹಾಗೆ ಅರ್ಥಮಾಡಿಕೊಂಡ ಧರ್ಮವು ಯಾವುದೋ ವಿಶಿಷ್ಟ ಜನಾಂಗಕ್ಕೆ ಮಾತ್ರ ಸಂಬಂಧಿಸಿದುದಾಗಿ ಉಳಿಯದೆ, (ವೇದಾಂತವು ಹೇಳುವಂತೆ) ಅದು ವಿಶ್ವವ್ಯಾಪಕವೂ, ಮನುಷ್ಯನ ಸಮಗ್ರ ವಿಕಾಸಕ್ಕೆ ಸಂಬಂಧಿಸಿದ ಹಾಗೆ ವೈಜ್ಞಾನಿಕವೂ ಆಗುತ್ತದೆ. ಆಗ ಯಾರೂ ಸಹ, ಅವನು ನಾಸ್ತಿಕನಾಗಿರಲಿ, ಅಜ್ಞೇಯತಾವಾದಿ (agnostic)ಯಾಗಿರಲಿ, ಧರ್ಮದ ಪರಿಧಿಯಿಂದಾಚೆ ಇರಲು ಸಾಧ್ಯವಿರುವುದಿಲ್ಲ.

ಇನ್ನೊಬ್ಬ ಸಂನ್ಯಾಸಿನಿ : ಭಗವತ್ಸಾಕ್ಷಾತ್ಕಾರದ ನಂತರ ಎಲ್ಲಾ ಸಮಸ್ಯೆಗಳೂ ಬಗೆ ಹರಿಯುವವೇ ?

ಸ್ವಾಮೀಜಿ : ಹೌದು. ಅಂಥ ಸಾಕ್ಷಾತ್ಕಾರ ಸಾಧಿಸಿದವರಿಗೆ ಅದು ಸಾಧ್ಯ. ಉಳಿದವರು ತಮ್ಮ ಸಮಸ್ಯೆಗಳನ್ನು ಅಂಥ ಸಾಧಕರ ಮುಂದಿಟ್ಟಾಗ ಆ ಸಾಧಕರು ಸಮಸ್ಯೆಗಳನ್ನು ತಮ್ಮವೇ ಎಂದು ಭಾವಿಸಿ ಸಂಬಂಧಪಟ್ಟವರಿಗೆ ಸಹಾಯ/ಸಲಹೆ ನೀಡಬಹುದು. ಶ್ರೀರಾಮಕೃಷ್ಣರು ಹೇಳುತ್ತಾರೆ : ಪೂರಿ ಕರಿಯಲು ಲಟ್ಟಿಸಿದ ಕಣಕವನ್ನು ಕಾದ ಎಣ್ಣೆಯಲ್ಲಿ ಹಾಕುವಾಗ ಅದು 'ಚೊಯ್' ಎಂದು ಶಬ್ದ ಮಾಡುತ್ತಿರುತ್ತದೆ. ಅದು ಪೂರ್ತಿ ಬೆಂದ ಮೇಲೆ ಆ ಶಬ್ದ ನಿಲ್ಲುತ್ತದೆ. ಆದರೆ ಇನ್ನೊಂದು ಕಣಕವನ್ನು ಕರಿಯಲು ಬಾಂಡಲೆಯೊಳಕ್ಕೆ ಹಾಕಿದಾಗ ಅದು ಬೇಯುವವರೆಗೆ 'ಚೊಯ್' ಶಬ್ದ ಮತ್ತೆ ಪ್ರಾರಂಭವಾಗುತ್ತದೆ. ಇತ್ಯಾದಿ....

ಸಂನ್ಯಾಸಿನಿ : ನಾನು ಅದನ್ನು ನಂಬಲಾರೆ. ನಿಜವಾಗಿ, ನೀವು ಎಲ್ಲವನ್ನೂ ಒಪ್ಪಿಕೊಂಡು ಕಣ್ಣುಮುಚ್ಚಿದಾಗ, ಸರಿ, ಮುಂದೆ ಯಾವ ಸಮಸ್ಯೆಯೂ ಇರುವುದಿಲ್ಲ. ಇದರ ತರ್ಕ ಇಷ್ಟೇ ತಾನೇ ?

ಸ್ವಾಮೀಜಿ : ಇದರ ಅರ್ಥ : ಎಲ್ಲವನ್ನೂ ಒಪ್ಪಿಕೊಳ್ಳುವುದೆಂದಲ್ಲ. ನಿಮ್ಮ ಹೃದಯ ತುಂಬಿ ಬಂದಾಗ ನಿಮ್ಮ ಎಲ್ಲಾ ಸಮಸ್ಯೆಗಳು ಮುಗಿಯುತ್ತವೆ. ಈ ಲೋಕದ ಸಕಲ ಸಮಸ್ಯೆಗಳನ್ನೂ ನೀವು ಪರಿಹರಿಸಿದ ಮೇಲೆ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇನೆಂದರೆ ಅದು ಎಂದಿಗೂ ಆಗಹೋಗದ ಮಾತೇ ಸರಿ. (*ನಗೆ*)

ಇಲ್ಲಿ ಪ್ರಸ್ತುತವಾಗುವ ಒಂದು ಸಂಸ್ಕೃತ ಶ್ಲೋಕ ಇದೆ :

ಯ ಇಚ್ಛತಿ ಹರಿಂ ಸ್ಮರ್ತುಂ
ವ್ಯಾಪಾರಾಸ್ತಗತೇರಪಿ ;
ಸಮುದ್ರೇ ಶಾಂತಕಲ್ಲೋಲೇ
ಸ್ನಾತುಮಿಚ್ಛತಿ ದುರ್ಮತಿಃ

*ಯಾರು ಪ್ರಪಂಚದ ಸಮಸ್ಯೆಯೆಲ್ಲವೂ ಬಗೆಹರಿದ ನಂತರ ಭಗವಂತನನ್ನು ಧ್ಯಾನಿಸಿ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇವೆ ಎನ್ನುವರೋ ಅವರು, ಸಮುದ್ರದ ಅಲೆಗಳೆಲ್ಲವೂ ಪ್ರಶಾಂತವಾದ ಮೇಲೆ ಸ್ನಾನ ಮಾಡುತ್ತೇವೆ ಎನ್ನುವ ಮೂರ್ಖರಂತೆಯೇ ಸರಿ.*

ಇಲ್ಲಿ ಇನ್ನೊಂದು ವಿವೇಕದ ಆಲೋಚನೆಯೂ ಇದೆ. ಅದೇನೆಂದರೆ : ಈ ಲೋಕವೆಂಬುದು ಒಳಿತು ಕೆಡುಕುಗಳ ದ್ವಂದ್ವದಿಂದ ಕೂಡಿದ್ದು ಅದು ಯಾವಾಗಲೂ ಹಾಗೆಯೇ ಇರುತ್ತದೆ. ಒಬ್ಬ ಪರಿಪೂರ್ಣ ವ್ಯಕ್ತಿ ಇರುವುದು ಸಾಧ್ಯ, ಆದರೆ ಲೋಕವು ಪರಿಪೂರ್ಣವಾಗಿರಲಾರದು. ಆದರೆ ಹೆಚ್ಚು ಹೆಚ್ಚು ಜನ ನೈತಿಕ, ಧಾರ್ಮಿಕ ನಿಷ್ಠೆಯುಳ್ಳವರಾದರೆ, ಈ ಲೋಕ ಇನ್ನೂ ಸ್ವಲ್ಪ ಒಳ್ಳೆಯದಾಗಬಹುದು. ಎಷ್ಟೇ ಪ್ರಾಪಂಚಿಕತೆ ಹಾಗೂ ನಾಸ್ತಿಕತೆ ತುಂಬಿದ್ದರೂ ಪ್ರಪಂಚದಲ್ಲಿ ಈಗ ಒಂದು ರೀತಿಯ ಆಧ್ಯಾತ್ಮಿಕ ಹಸಿವಿನ ಅನುಭವ ವ್ಯಾಪಕವಾಗಿ ಹರಡುತ್ತಿದೆ. ಇದಕ್ಕಿಂತ

ಸ್ವಲ್ಪ ಉತ್ತಮತರವಾದ ಲೋಕವನ್ನು ಕಾಣಲು ಜನ ಬಯಸಿ ಹೋರಾಡುತ್ತಿರುವುದೇ ಇವತ್ತಿನ ಪ್ರಪಂಚದಲ್ಲಿ ಉದ್ಭವಿಸಿರುವ ಒಂದು ವಿಷಮ ಬಿಕ್ಕಟ್ಟು. ನಾವೆಲ್ಲರೂ ಸಂನ್ಯಾಸಿ-ಸಂನ್ಯಾಸಿನಿಯರು ಜನಸಾಮಾನ್ಯರು—ಎಲ್ಲರೂ ಸೇರಿ ಈ ವಿಷಮ ಬಿಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದ್ದೇವೆ. ನಾವು ಈ ಲೋಕವನ್ನು ಸ್ವಲ್ಪವಾದರೂ ಉತ್ತಮಗೊಳಿಸಬೇಕಾದರೆ ಅದು ನಮ್ಮೊಳಗಿನ ಅಂತರಂಗದ ಬಿಕ್ಕಟ್ಟನ್ನು ನಿವಾರಿಸಿಕೊಂಡು ಜಗತ್ತನ್ನು ಬಿಕ್ಕಟ್ಟಿನಿಂದ ಪಾರುಮಾಡಲು ನೆರವಾದಾಗ ಮಾತ್ರ ಸಾಧ್ಯವೇ ವಿನಾ ನಾವೇ ಬಿಕ್ಕಟ್ಟಿನಲ್ಲಿ ಸಿಕ್ಕಿ ಒದ್ದಾಡುತ್ತಿರುವ ಸ್ಥಿತಿಯಲ್ಲಿರುವಾಗ ಅದು ಸಾಧ್ಯವಾಗಲಾರದು. ಯಾರಿಗೂ ತಮ್ಮ ಬದುಕನ್ನು ದುರಂತ ನಾಟಕವನ್ನಾಗಿ ಮಾಡಿಕೊಳ್ಳಲು ಇಷ್ಟವಿರುವುದಿಲ್ಲ ಆದರೆ ಎಲ್ಲರಿಗೂ ಒಂದು ದುರಂತ ನಾಟಕವನ್ನು ಸಾಹಿತ್ಯವಾಗಿಯೋ, ನಾಟಕರಂಗಭೂಮಿಯ ಮೇಲೋ, ಸಿನಿಮಾ ಪರದೆಯ ಮೇಲೋ ನೋಡುವ ಇಚ್ಛೆ ಇರುತ್ತದೆ. ನಮ್ಮ ಬದುಕೇ ಒಂದು ದುರಂತ ನಾಟಕವಾದಾಗ ನಾವು ಅದರ ಸುರುಳಿಗಳೊಳಗೆ ಸಿಕ್ಕಿಬಿದ್ದು ಹೊರಗೆ ಬರಲಾರದ ಸ್ಥಿತಿಯಲ್ಲಿರುತ್ತೇವೆ. ಬೇರೆ ಯಾರಾದರೂ ಬಂದು ನಮ್ಮನ್ನು ಅದರಿಂದ ಬಿಡಿಸಬೇಕಾಗುತ್ತದೆ.

ಆದರೆ ಒಮ್ಮೆ ನಾವು ಆ ಬಂಧನದಿಂದ ಮುಕ್ತರಾದೆವೆಂದರೆ ಆಗ ನಾವು ಹದಗೊಳ್ಳುತ್ತೇವೆ. ಅನೇಕ ವೇಳೆ ನಾವು ಹೆಚ್ಚು ಕರುಣಾರ್ದ್ರ ಹೃದಯಿಗಳಾಗುತ್ತೇವೆ. ಹೆಚ್ಚು ಮಾನವೀಯತೆಯುಳ್ಳವರಾಗುತ್ತೇವೆ. ಒಂದು ವಿಷಮ (ಉತ್ಕಟ) ಸ್ಥಿತಿ ಅಥವಾ ದುರಂತದ ಮೂಲಕ ಹೆಣಗುತ್ತಾ ಸಾಗಿ ಪಾರಾಗುವ ಶಕ್ತಿಯನ್ನು ನಾವು ರೂಢಿಸಿಕೊಂಡಾಗ ವಿಷಮತೆಯಲ್ಲಿರುವ ಅಥವಾ ಬಿಕ್ಕಟ್ಟಿಗೆ ಸಿಕ್ಕಿರುವ ಈ ಲೋಕಕ್ಕೆ ಏನಾದರೂ ಸಹಾಯ ಮಾಡಬಲ್ಲ ಶಕ್ತಿ ಪಡೆದೇವು. ಈಜಲು ಬರುವ ಮನುಷ್ಯ ಮಾತ್ರ, ಮುಳುಗುತ್ತಿರುವವನನ್ನು ಕಾಪಾಡಿಯಾನು.

ಸಂನ್ಯಾಸಿನಿ : ನಾವು ಈ ಕಾನ್ವೆಂಟಿಗೆ ಸೇರಿದವರು ; ಅದರದೇ ಆದ ಒಂದು ಬದುಕು ಅದಕ್ಕಿದೆ. ಅದು ಈ ಲೋಕದ ಬಿಕ್ಕಟ್ಟು, ಸಮಸ್ಯೆಗಳಿಂದ ದೂರವಿರುತ್ತದೆ. ಈ ಕಾನ್ವೆಂಟು ಒಂದು ದೋಣಿ, ಈ ಲೋಕ ಒಂದು ಸಮುದ್ರ ಎನ್ನುವುದಾದರೆ, ಸಮುದ್ರವಿಲ್ಲದಿದ್ದರೆ ದೋಣಿಯ ಅಗತ್ಯವಾದರೂ ಏನು ? ನನಗೆ ಅನಿಸುತ್ತದೆ—ಈ ದೋಣಿಯ ಉದ್ದೇಶ ಸಫಲವಾಗಿಲ್ಲ ಎಂದು.

ಸ್ವಾಮೀಜಿ : ನೀರಿನ ಮೇಲೆ ಸಾಗುತ್ತಿರುವ ದೋಣಿಯು, ಮುರಿದುಬಿದ್ದು ನೀರಿನಲ್ಲಿ ಮುಳುಗಿದ ದೋಣಿಗಿಂತಲೂ ಎಷ್ಟೋ ವಾಸಿ. ಕಾನ್ವೆಂಟಿನ ನಿಮ್ಮ ಜೀವನ ಸುತ್ತಲಿನ ಪ್ರಪಂಚದ ಬಿಕ್ಕಟ್ಟು ಸಂಕಟಗಳ ಸಂಪರ್ಕ ಕಳೆದುಕೊಂಡಿಲ್ಲ. ಆಧ್ಯಾತ್ಮಿಕ ಪ್ರಜ್ಞೆಯೆಂಬ ಬೆಳಕನ್ನು ನಿಮ್ಮೊಳಗೆ ಬೆಳಗಿಸುತ್ತಾ ನೀವು ಸುತ್ತಲಿನ ಅಂಧಕಾರವನ್ನು ಬೆಳಗಲು ನೆರವಾಗುತ್ತಿರುವಿರಿ. ತಾನು ಒಂದೇ ಕಡೆ ನಿಂತಿರುವ ಒಂದು ಸ್ಥಾವರ ದೀಪಸ್ತಂಭವು ಸಮುದ್ರದಲ್ಲಿ ಬರುವ ಹಡಗುಗಳನ್ನು ಬಂದರಿನ ಸುರಕ್ಷಿತತೆಯೊಳಕ್ಕೆ ನಿರ್ದೇಶಿಸಲು ಅಗಾಧ ನೆರವು ನೀಡುತ್ತದೆ. ಅದು ತಾನೇ ಸಮುದ್ರದೊಳಗೆ ಮುಳುಗಿಹೋದಾಗ ಈ ನೆರವು ಸಾಧ್ಯವಿಲ್ಲ. ಇದೇ ಯೇಸುವಿನ ನೀತಿ ಸೂಕ್ತದ ಅರ್ಥ. "ನೀವು ಈ ಲೋಕದ ಬೆಳಕು : ಈ ಬೆಳಕೇ ಕತ್ತಲೆಯಿಂದಾವೃತಗೊಂಡರೆ, ಕತ್ತಲು ಇನ್ನೆಷ್ಟು ಘೋರವಾದೀತು—ಆದ್ದರಿಂದ ಎಲ್ಲಾ ಸಂನ್ಯಾಸಿ / ಸಂನ್ಯಾಸಿನಿಯರು, ನೀವೆಲ್ಲರೂ ನಿಮ್ಮೊಳಗಿನ (ಭಗವಂತನ) ದಿವ್ಯ ಜ್ಯೋತಿಯನ್ನು ಹೊರಗೆಲ್ಲ ಚೆಲ್ಲುತ್ತಾ—ಸೈಂಟ್‌ಜಾನ್‌ನ ಸುವಾರ್ತೆಯ ಸುಂದರ ವಾಕ್ಯದಲ್ಲಿ ಹೇಳುವುದಾದರೆ—'ಯಾವ ಬೆಳಕು ಈ ಲೋಕದಲ್ಲಿ ಉದಯಿಸುವ ಸಕಲ ಆತ್ಮಗಳನ್ನೂ ಬೆಳಗುವುದೋ'—ಆ ದಿವ್ಯ ಪ್ರಭೆಯನ್ನು ಚಿರಂತನವಾಗಿಟ್ಟು ಹೀಗೆ ಅನನ್ಯ ಲೋಕಸೇವೆ ಮಾಡುವುದು ನಿಮ್ಮೆಲ್ಲರಿಗೂ ಶ್ರೇಯಸ್ಕರ. ನಿಮ್ಮೆಲ್ಲರಿಗೂ ನನ್ನ ಸಪ್ರೇಮ ಶುಭಾಶಯಗಳು.

ಇನ್ನೊಬ್ಬ ಸಂನ್ಯಾಸಿನಿ : ಸ್ವಾಮೀಜಿ ನೀವು ಈ ಕಾನ್ವೆಂಟಿಗೆ ದಯಮಾಡಿಸಿ ನಮ್ಮ ಜತೆ ಇದ್ದು, ನಮ್ಮ ಹಲವಾರು ಪ್ರಶ್ನೆಗಳಿಗೆ ಉದ್ಬೋಧಕವಾದ ಉತ್ತರಗಳನ್ನು ನೀಡಿರುವಿರಿ. ಈ ಕಾನ್ವೆಂಟಿನ ನನ್ನ ಎಲ್ಲಾ ಸೋದರಿ ಸಂನ್ಯಾಸಿನಿಯರ ಪರವಾಗಿ ನಿಮಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ನಮ್ಮ ಪ್ರಶ್ನೆಗಳನ್ನು ಇಂಗ್ಲಿಷಿಗೂ, ಸ್ವಾಮೀಜಿಯವರ ಉತ್ತರಗಳ ಡಚ್ ಭಾಷೆಗೂ ಭಾಷಾಂತರ ಮಾಡಿ ನಮಗೆ ನೆರವಾಗಿರುವ ಪ್ರೊ. ಜೊ. ವಾನ್ ಆರ್ಶೊವೆನ್ ಮತ್ತು ಅವರ ಪತ್ನಿ ಹರ್ಮ್ರಾ ಅವರಿಗೂ ನಮ್ಮ ವಂದನೆಗಳು.

ಅನು : ಎಸ್. ಕೆ. ರಾಮಚಂದ್ರಮೂರ್ತಿ

೨೦

# ದೈವಾನುಗ್ರಹ*

## ೧. ಪೀಠಿಕೆ

ಈ ಸಂಜೆ, ನಾನು ದೈವಾನುಗ್ರಹದ ಬಗ್ಗೆ ಮಾತನಾಡುತ್ತೇನೆ. ಇದು ಕ್ರೈಸ್ತಧರ್ಮ, ಹಿಂದೂ ಧರ್ಮ, ಇಸ್ಲಾಂ ಮತ್ತು ಮಹಾಯಾನ ಬೌದ್ಧಧರ್ಮಗಳಲ್ಲಿ ಒಂದು ದೊಡ್ಡ ವಿಷಯ. ದೈವಾನುಗ್ರಹವು ಆಧ್ಯಾತ್ಮಿಕ ಪ್ರಗತಿ ಮತ್ತು ಸಿದ್ಧಿಯ ಶಿಖರವೆಂದು ಈ ಧರ್ಮಗಳಲ್ಲೆಲ್ಲ ಹೇಳಲಾಗಿದೆ. ಹೊಸ ಒಡಂಬಡಿಕೆಯಲ್ಲಿ (ಜಾನ್, ೧, ೧೭) ನೀವು ಈ ಹೇಳಿಕೆಯನ್ನು ನೋಡುವಿರಿ : 'ಮೋಸೆಸ್ ಕಟ್ಟಳೆಗಳನ್ನು ನೀಡಿದನು, ಆದರೆ ಅನುಗ್ರಹ ಮತ್ತು ಸತ್ಯ ಏಸುಕ್ರಿಸ್ತನಿಂದ ಬಂದವು' ಅದೊಂದು ಸುಂದರ ಭಾವನೆ. ನಮಗೆ ಅನುಗ್ರಹ, ಪ್ರೀತಿಗಳು ಬೇಕು ; ನಮಗೆ ಕಟ್ಟಳೆಯೂ ಬೇಕು. ಇವೆರಡೂ ಅಂಶಗಳನ್ನು ಭಗವದ್ಗೀತೆಯ ಯೋಗ ತತ್ತ್ವದಲ್ಲಿ ಹೇಳಲಾಗಿದೆ. ಈ ಲೋಕೋತ್ತರ ಕೃತಿಯು ಇಡೀ ಜೀವನದರ್ಶನವನ್ನು ಹೇಳುತ್ತದೆ ; ನಾವು ಅದನ್ನು ಹೆಚ್ಚು ಹೆಚ್ಚು ಅರ್ಥಮಾಡಿಕೊಂಡಷ್ಟೂ, ಮಾನವಜೀವನವೆಂಬ ಸಂಕೀರ್ಣ ವಿದ್ಯಮಾನದ ಬಗ್ಗೆ ನಮ್ಮ ಒಳನೋಟ ಹೆಚ್ಚುತ್ತಾ ಹೋಗುತ್ತದೆ.

ನಾವು ಹುಟ್ಟುತ್ತಲೇ ನಮಗೆ ಭಗವಂತನ ಅರಿವು ಇರುವುದಿಲ್ಲ. ನಮಗೆ ಬಾಹ್ಯ ಜಗತ್ತಿನ ಅರಿವು ಮಾತ್ರ ಇರುತ್ತದೆ ; ಭಗವಂತನ ಅರಿವು ನಮಗೆ ನಂತರ ಬರುತ್ತದೆ.

ಜಗತ್ತಿನ ಜನರ ಮತ್ತು ವಸ್ತುಗಳ ಜತೆ ವ್ಯವಹರಿಸುತ್ತಿರುವವರಿಗೆ ಭಗವಂತನ ಅರಿವನ್ನು ಪಡೆದು ಅವನ ಪ್ರೀತಿಗೆ ಸ್ಪಂದಿಸಿದ ಇತರರಿಗೂ ಪ್ರಸ್ತುತವಾದ ತತ್ತ್ವವನ್ನು ಭಗವದ್ಗೀತೆ ತಿಳಿಸುತ್ತದೆ. ಇವನ್ನು ಸಾಮಾನ್ಯವಾಗಿ ಜೀವನದ ಲೌಕಿಕ ಮತ್ತು ಧಾರ್ಮಿಕ ಅಂಶಗಳೆಂದು ಕರೆಯುತ್ತಾರೆ. ಇವೆರಡೂ ಗೀತೆಯ ತತ್ತ್ವದಲ್ಲಿ ಅಡಗಿವೆ ; ಅಂದರೆ ಈ ಗೀತಾತತ್ತ್ವ ಎಲ್ಲರಿಗೂ ಅವಶ್ಯ ಎಂದಾಯಿತು.

## ೨. ಆಧ್ಯಾತ್ಮಿಕ ಜೀವನದ ಹಂತಗಳು

ಆದ್ದರಿಂದ, ಈ ದೃಷ್ಟಿಕೋನದಿಂದ ಗೀತೆಯ ಏಳುನೂರು ಶ್ಲೋಕಗಳನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಮೊದಲಿಗೆ, ಮಾನವನ ಸುತ್ತ ಬಾಹ್ಯ ಸಾಮಾಜಿಕ ಪರಿಸರದ ಅರಿವು ನಮಗಿದೆ ; ತನ್ನ ಸ್ವಂತ ಬೆಳವಣಿಗೆಗೆ ಮತ್ತು ಸಮಾಜದ ಒಳಿತಿಗೆ ಯೋಗಕ್ಷೇಮಕ್ಕೆ ಹೇಗೆ ಈ ಪರಿಸರವನ್ನು ನಿಭಾಯಿಸಲು ಸವಾಲು ಒಡ್ಡುತ್ತಿದೆ. ಇಲ್ಲಿಯವರೆಗೆ, ಇದು ಪುರುಷಕಾರ ಅಥವಾ ಸ್ವಾವಲಂಬನೆ ಮತ್ತು ಸ್ವಪ್ರಯತ್ನ ಮತ್ತು ಜತೆಯ ಮಾನವಜೀವಿಗಳನ್ನೂ ಅವರ ಸಹಕಾರವನ್ನೂ ಅವಲಂಬಿಸುವುದು.

---

*೧೯೭೮ರ ಜೂನ್ ೨೦ರಂದು ಬೀಕನ್ ಯೋಗ ಸೆಂಟರ್‌ನಲ್ಲಿ (ಶಿವಾನಂದ ಆಶ್ರಮ), ಪರ್ತ್, ಪಶ್ಚಿಮ ಆಸ್ಟ್ರೇಲಿಯ, ನೀಡಿದ ಪ್ರವಚನವನ್ನು ಆಧರಿಸಿದ್ದು.

ಅನಂತರ ಈ ಭೌತಜಗತ್ತಿನ ಭೌತಮಾನವನನ್ನು ಮೀರಿ ಯಾವುದೋ ಒಂದು ಇದೆ ಎಂಬುವರ ಅರಿವು—ಮಾನವ ಜೀವನದ ಆಧ್ಯಾತ್ಮಿಕ ಆಯಾಮದ ಅಸ್ಪಷ್ಟ ಅರಿವು—ಬರುತ್ತದೆ. ಇಂಗ್ಲಿಷ್ ಕವಿ ವರ್ಡ್ಸ್‌ವರ್ತ್ ಹೇಳಿರುವಂತೆ 'ಅಮೃತತ್ವದ ಅರಿವು' ಬಂದರೂ ನಾವು ನಿಜವಾದ ಆಧ್ಯಾತ್ಮಿಕ ಬದ್ಧತೆಯಿಂದ ಮತ್ತು ಭಗವಂತನಿಗೆ ಅಪ್ಪಟವಾದ ಸಮರ್ಪಣ ಮನೋಭಾವದಿಂದ ತುಂಬ ದೂರ ಇದ್ದೇವೆ. ನಾವು ಆರಂಭಿಗರು; ನಾವು ಆಧ್ಯಾತ್ಮಿಕ ಜೀವನವನ್ನು ಪ್ರವೇಶಿಸಬಯಸುತ್ತೇವೆ. ಭಗವತ್ ಪ್ರಜ್ಞೆಯನ್ನು ಪಡೆದುಕೊಳ್ಳಲು ನಾವು ಶ್ರಮಿಸುತ್ತಿದ್ದೇವೆ. ನಾವು ಆಧ್ಯಾತ್ಮಿಕವಾಗಿ ಬಲಗೊಳ್ಳಬಯಸುತ್ತೇವೆ. ಈ ಹಂತದವರೆಗೆ ಮೂಲಭೂತವಾಗಿ ಸ್ವಾವಲಂಬನೆ ಮತ್ತು ಸ್ವಪ್ರಯತ್ನವೇ. ಆದರೆ ಮುಂದೆ ಅದು ನಿಧಾನವಾಗಿ ಭಗವಂತನಲ್ಲಿ ಶ್ರದ್ಧೆಯಾಗಿ ತುಂಬಿಹೋಗುತ್ತದೆ.

ಅಲ್ಲಿಂದ ಮುಂದಕ್ಕೆ, ಜೀವನವು ಮಾನವ ಮತ್ತು ಭಗವಂತ ಇವರ ನಡುವಣ ಒಡನಾಟ. ಮಾನವನ ಜೀವನಪ್ರಕ್ರಿಯೆಯಲ್ಲಿ ದೇವರು ಪ್ರಧಾನ ಸಂಗಾತಿಯಾದಾಗ ಆಧ್ಯಾತ್ಮಿಕ ಪ್ರಗತಿಯಾದಂತೆ, ಆಗ ಮಾನವನು ಹೆಚ್ಚು ಹೆಚ್ಚು ಶ್ರೀಮಂತನೂ ಆಧ್ಯಾತ್ಮಿಕವಾಗಿ ಬಲಿಷ್ಠನೂ ಆದನೆಂದು ಭಾವಿಸುತ್ತಾನೆ. ರಿಸರ್ವ್ ಬ್ಯಾಂಕಿನ ಅಪಾರ ಸಂಪನ್ಮೂಲದೊಂದಿಗೆ ಸಂಪರ್ಕ ಹೊಂದಿರುವ ಸಣ್ಣ ಬ್ಯಾಂಕು ತಾನು ಆರ್ಥಿಕವಾಗಿ ಬಲಿಷ್ಠವೆಂದು ಭಾವಿಸುವಂತೆ, ಮಾನವನು ತನ್ನ ಅಂತರಾತ್ಮದ ಆಧ್ಯಾತ್ಮಿಕ ಶ್ರೀಮಂತಿಕೆಯನ್ನರಿತಾಗ ತನ್ನ ಸೀಮಿತ ಜೀವನ ಸಂಪನ್ಮೂಲಗಳನ್ನು ಅರಿತುಕೊಳ್ಳುತ್ತಾನೆ. ಈ ಆಧ್ಯಾತ್ಮಿಕ ಬೆಳವಣಿಗೆಯ ಪರ್ವಕಾಲದಲ್ಲಿ, ಮಾನವನಿಗೆ ಆಧ್ಯಾತ್ಮಿಕ ಶಕ್ತಿಯು ಪ್ರಾಪ್ತಿಯಾದಂತೆ ಅನುಭವವಾಗಿ, ಅದು ಅವನನ್ನು ಮುಂದಿನ ಹೆಜ್ಜೆ—ಬಹುಮುಖ್ಯವಾದ ಹೆಜ್ಜೆ, ಮತ್ತು ಕೊನೆಯ ಹೆಜ್ಜೆ—ಇಡುವಂತೆ ಮಾಡುತ್ತದೆ. ಅದೆಂದರೆ ಭಗವಂತನಿಗೆ ಸಂಪೂರ್ಣವಾಗಿ ಶರಣಾಗತಿಯಾಗಿ ಎಲ್ಲವನ್ನೂ ದೇವರಿಗೆ ಬಿಟ್ಟು ತನ್ನದೇನೂ ಇಲ್ಲವೆಂದು ಕೈಬಿಡುವುದು.ದಕ್ಷಿಣ ಭಾರತದ ವೈಷ್ಣವ ದೇವತಾಶಾಸ್ತ್ರವು ಸ್ವಪ್ರಯತ್ನ ಅಥವಾ ಪುರುಷಕಾರ, ಮತ್ತು ದೈವಾನುಗ್ರಹ ಅಥವಾ ಶರಣಾಗತಿ (ಕೃಪೆ)ಯನ್ನು ಕ್ರಮವಾಗಿ 'ಕೋತಿಮರಿ ವಿಧಾನ' (baby monkey way) ಮತ್ತು 'ಬೆಕ್ಕಿನಮರಿ ವಿಧಾನ' (kitten way) ಎಂದು ಕರೆಯುತ್ತಾರೆ. ಕೋತಿ ಮರಿಯು ತನ್ನ ಕೈಯಿಂದ ತಾಯಿಯನ್ನು ಬಲವಾಗಿ ಹಿಡಿದುಕೊಳ್ಳುತ್ತದೆ ; ಆದರೆ ಬೆಕ್ಕಿನ ಮರಿಯು 'ಮಿಯಾವ್, ಮಿಯಾವ್' ಎನ್ನುತ್ತಾ ಇರುವಾಗ ಅದರ ತಾಯಿಯು ಅದನ್ನು ಪ್ರೀತಿಯಿಂದ ತನ್ನ ಹಲ್ಲುಗಳ ನಡುವೆ ಇಟ್ಟುಕೊಂಡು ಸುತ್ತಾಡುತ್ತದೆ.

ಸ್ಥೂಲವಾಗಿ ಹೇಳುವುದಾದರೆ, ಇವು ಹಿಂದೆ ಹೇಳಿದ ನಾಲ್ಕು ಮತಗಳಲ್ಲಿ ಮಾನವನ ಆಧ್ಯಾತ್ಮಿಕ ಜೀವನದ ಎರಡು ಹಂತಗಳು ; ಇವೆರಡರ ಹದವಾದ ಮಿಶ್ರಣದ ಮಧ್ಯದ ಹಂತವೊಂದಿದೆ. ಈ ವಿಷಯದ ಬಗ್ಗೆ, ಈ ಮೂರೂ ಹಂತಗಳು ಮತ್ತು ಅವುಗಳ ಪರಸ್ಪರ ಸಂಬಂಧಗಳ ಬಗ್ಗೆ, ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿರುವಂತೆ ಬೇರೆಲ್ಲಿಯೂ ಹೇಳಿಲ್ಲ.

## ೩. ಪುರುಷಕಾರ ಮತ್ತು ಕೃಪಾ

ನಮ್ಮ ಆಧ್ಯಾತ್ಮಿಕ ಜೀವನದ ಪ್ರಾರಂಭದಲ್ಲಿ ನಾವು ನೀತಿಸಂಹಿತೆಯ ಪ್ರಕಾರ ಶೀಲವನ್ನು ಬೆಳೆಸಿಕೊಳ್ಳಲು ಪ್ರಯತ್ನಿಸುತ್ತೇವೆ. ಮೋಸೆಸ್‌ನು ಇದನ್ನು ಕಟ್ಟಳೆಯಾಗಿ ನೀಡಿದ, ವೇದಾಂತವು ಇದನ್ನು ಧರ್ಮ ಎಂದು ಹೇಳುತ್ತದೆ. ಇತರ ಮಾನವಜೀವಿಗಳೊಡನೆ ಹೇಗೆ ವರ್ತಿಸಬೇಕು, ಅವರು ಬುಡಕಟ್ಟಿನ ಜನರಾಗಿರಲಿ, ಇನ್ನೂ ವಿಶಾಲವಾದ ರಾಷ್ಟ್ರೀಯ ಮಟ್ಟದವರಾಗಲಿ ಅಥವಾ ಅತ್ಯಂತ ವ್ಯಾಪಕವಾದ ಅಂತಾರಾಷ್ಟ್ರೀಯ ಮಟ್ಟದಲ್ಲೇ ಆಗಲಿ, ಹೇಗೆ ನಡೆದುಕೊಳ್ಳಬೇಕು ಎಂಬುದು ಇಲ್ಲಿ ಉಕ್ತವಾಗಿದೆ. ಈ ಶಿಕ್ಷಣವು ನೈತಿಕ ಗುಣಗಳನ್ನೂ ಶಿಷ್ಟಾಚಾರಗಳನ್ನೂ ಮಾನವೀಯತೆಯನ್ನೂ

ಬೆಳೆಸಿಕೊಂಡು, ನಮ್ಮ ಅಹಂಕಾರ ಮಮಕಾರಗಳನ್ನು ಮೀರಿ ಬೆಳೆಯಲು ನೆರವಾಗುತ್ತದೆ. ಅವನು ಅಥವಾ ಅವಳು ಈ ಹಂತದಲ್ಲೇ ತನ್ನನ್ನು ತಾನು ಮೀರಿ ಬೆಳೆಯುವ ಅನುಭವವನ್ನು ನೀಡುತ್ತದೆ. 'ನಮ್ಮ ತನವನ್ನು ಮೀರಿ ನಾವು ಮೇಲೇರದಿದ್ದರೆ ಮಾನವನೆಷ್ಟು ಅಲ್ಪ !' ಎಂದು ಇಂಗ್ಲಿಷ್ ಕವಿ ವರ್ಡ್ಸ್‌ವರ್ತ್ ಹಾಡಿದ. ಪಾರಮಾರ್ಥಿಕ ತುಯ್ತಕ್ಕೆ, ಇಂದ್ರಿಯಗಳ ಮಟ್ಟಕ್ಕಿಂತ ಮೇಲಿನ ಸತ್ಯದ ತುಯ್ತವನ್ನು ಗುರುತಿಸಿ, ಅದಕ್ಕೆ ಸ್ಪಂದಿಸುವಷ್ಟು ನಮ್ಮ ತಿಳಿವಳಿಕೆ ಪಕ್ವವಾಗುವುದು ಈ ಹಂತದಲ್ಲಿ. ಕೇವಲ ನೈತಿಕ ಮಟ್ಟಕ್ಕಿಂತ ಮೇಲಿನ ಆಧ್ಯಾತ್ಮಿಕ ಜೀವನದ ಆರಂಭ ಇದು. ಧರ್ಮದ ಭಾಷೆಯಲ್ಲಿ ಹೇಳುವುದಾದರೆ, ಅದು ಭಗವಂತನತ್ತ ಅದರ ತತ್ಸಮಾನ ಪರವಸ್ತುವಿನತ್ತ ಮನಃಪೂರ್ವಕ ತಿರುಗುವುದು. ಕೃಪೆಯೆಂಬ ಅಥವಾ ದೈವಾನುಗ್ರಹವೆಂಬ ತಂಗಾಳಿಯು ಈ ಹಂತದಲ್ಲಿ, ಸ್ವಪ್ರಯತ್ನದ ಸಂದರ್ಭದಲ್ಲೇ ವೇದ್ಯವಾಗುತ್ತದೆ. ಅನೇಕವೇಳೆ ನಮಗೆ ಅದರ ಅರಿವು ಇರುವುದಿಲ್ಲ ; ನಾವು ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಲು ಇಷ್ಟಪಡುವುದಿಲ್ಲ. ಅಂಥ ಮನೋಭಾವದಿಂದ ಯಾವ ತೊಂದರೆಯಿಲ್ಲವೆಂದು ಹೇಳಿ ಗೀತೆಯು ಮಾನವನಿಗೆ ಆಶ್ವಾಸನೆ ಕೊಡುತ್ತದೆ ; ನಿನ್ನ ಕಾಲಮೇಲೆ ನೀನು ನಿಂತುಕೊ ; ಈ ಸ್ವಾವಲಂಬನೆಯು ಒಳ್ಳೆಯದು ಮತ್ತು ಆರೋಗ್ಯಕರ ಮತ್ತು ಆವಶ್ಯಕ. ಈ ಸ್ವಾವಲಂಬನೆಯು, ಈ ಪುರುಷಕಾರವು ಏಕೆ ಅಗತ್ಯ, ಅದು ಏಕೆ ಒಳ್ಳೆಯದು ಮತ್ತು ಲಾಭಕರ ; ಮತ್ತು ಯಾವ ಹಂತದಲ್ಲಿ ನಾವು ಅದನ್ನು ತೊರೆದು ಪೂರ್ತಿಯಾಗಿ ದೈವಾನುಗ್ರಹವನ್ನು, ಈಶ್ವರಕೃಪೆಯನ್ನು ಅವಲಂಬಿಸುವ ಸ್ಥಿತಿಯಲ್ಲಿರುತ್ತೇವೆ ಎಂದೂ ಗೀತೆ ಹೇಳುತ್ತದೆ.

ಸ್ವಪ್ರಯತ್ನದ ಬಗ್ಗೆ ಒತ್ತಿ ಹೇಳಿರುವುದು ಏಸುಕ್ರಿಸ್ತನ ಧರ್ಮಾನುಶಾಸನದಲ್ಲಿ ಕಾಣಬಹುದು (ಮ್ಯಾತ್ಯು, ೭,೭-೮) :

*ಕೇಳು, ಆಗ ನಿನಗೆ ಕೊಡಲಾಗುವುದು, ಆಶ್ರಯಿಸು, ಆಗ ನಿನಗೆ ದೊರಕುವುದು; ಬಾಗಿಲು ತಟ್ಟು, ಆಗ ನಿನಗೆ ತೆರೆಯಲಾಗುವುದು.*

*ಕೇಳುವ ಪ್ರತಿಯೊಬ್ಬನಿಗೂ ಸಿಕ್ಕುತ್ತದೆ : ಆಶ್ರಯಿಸುವವನಿಗೆ ದೊರಕುವುದು ; ಮತ್ತು ಬಾಗಿಲು ತಟ್ಟುವವನಿಗೆ, ಅದು ತೆರೆಯಲಾಗುವುದು.*

### ೪. ಮಾನವನ ಜೀವಮಾನಪರ್ಯಂತ ಆಧ್ಯಾತ್ಮಿಕತೆ ತುಂಬಿದೆ

'ನಮ್ಮ ಆಧ್ಯಾತ್ಮಿಕ ಜೀವನವನ್ನು ಯಾವಾಗ ಆರಂಭಿಸಬೇಕು' ಎಂದು ನಾವು ಕೇಳುತ್ತೇವೆ. ಗೀತೆ ಮತ್ತು ಉಪನಿಷತ್ತುಗಳು ಉತ್ತರಿಸುತ್ತವೆ: ನೀವು ಚಿಕ್ಕವರಾಗಿದ್ದಾಗ, ನಿಮ್ಮ ದೇಹ ದೃಢಕಾಯವಾಗಿದ್ದಾಗ, ನಿಮ್ಮ ಮನಸ್ಸಿನಲ್ಲಿ ಉಲ್ಲಾಸ, ಹುರುಪು ಇದ್ದಾಗ. ಆದರೆ ಪರಲೋಕದ ಭಯಭಕ್ತಿಯ ಬಗೆಗೆ ಉತ್ತರ ತೀರ ಬೇರೆ. ಅದು ನಿಮಗೆ ಹೀಗೆ ಹೇಳುತ್ತದೆ: ನೀವು ಮುದುಕರಾಗಿ ನಿತ್ರಾಣವಾದಾಗ ಧರ್ಮದ ಬಗ್ಗೆ ಆಲೋಚಿಸಲು ಶುರು ಮಾಡಿ ! ನೀವು ಯೌವನ, ಪುರುಷತ್ವ ಇರುವಾಗ ದೇಹಸುಖವನ್ನು ಪೂರ್ತಿ ಅನುಭವಿಸಿ ; ದೇಹಸುಖ ಅನುಭವಿಸಲು ಕೈಲಾಗದಾಗ ಪರಲೋಕದ ಬಗ್ಗೆ ಯೋಚನೆ ಮಾಡಿ.

ವೇದಾಂತ ತತ್ತ್ವವು ಕ್ರಿಯೆ ಮತ್ತು ಚಿಂತನೆ, ಕೆಲಸ ಮತ್ತು ಪೂಜೆ, ಲೌಕಿಕ ಮತ್ತು ಪಾರಮಾರ್ಥಿಕಗಳ ನಡುವಣ ಸೇತುವನ್ನು ನಿರ್ಮಿಸುತ್ತದೆ. ಕಳೆದ ಶತಮಾನದ ಕೊನೆಯಲ್ಲಿ ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಸ್ವಾಮಿ ವಿವೇಕಾನಂದರು ಬೋಧಿಸಿದ್ದು ಈ ತತ್ತ್ವವನ್ನೇ. ಅದರ ಸಮನ್ವಯ ದೃಷ್ಟಿಯನ್ನು ಸೋದರಿ ನಿವೇದಿತ (ಮಿಸ್ ಮಾರ್ಗರೆಟ್ ನೋಬೆಲ್) ಹೀಗೆ ಬರೆಯುತ್ತಾರೆ (ಪೀಠಿಕೆ : Our Master and His Message, Complete Works of Swami Vivekananda, ಸಂ. I, ಪು. XV) :

*ಅನೇಕ ಮತ್ತು ಏಕ ಇವು ಬೇರೆ ಬೇರೆ ಸನ್ನಿವೇಶಗಳಲ್ಲಿ ಬೇರೆ ಬೇರೆ ಭಾವಗಳ ಮೂಲಕ ಕಂಡ ಒಂದೇ ಸತ್ಯ.*

*ಇದೇ ನಮ್ಮ ಗುರುವಿನ ಜೀವನದ ಪರಮೋಚ್ಚ ವೈಶಿಷ್ಟ್ಯ. ಏಕೆಂದರೆ ಇಲ್ಲಿ ಅವರು ಪೂರ್ವಪಶ್ಚಿಮಗಳಷ್ಟೇ ಅಲ್ಲದೆ ಭೂತಭವಿಷ್ಯತ್ತುಗಳ ಸಂಗಮವಾಗುತ್ತಾರೆ. ಅನೇಕ ಮತ್ತು ಏಕ ಎರಡೂ ಒಂದೇ ಸತ್ಯವಾದರೆ, ಎಲ್ಲ ರೀತಿಯ ಪೂಜೆ ಮಾತ್ರವಲ್ಲದೆ, ಎಲ್ಲ ಬಗೆಯ ಕೆಲಸವೂ, ಎಲ್ಲ ಬಗೆಯ ಹೋರಾಟವೂ, ಎಲ್ಲ ವಿಧದ ಸೃಷ್ಟಿಯೂ ಸಾಕ್ಷಾತ್ಕಾರ ಮಾರ್ಗಗಳಾಗುತ್ತವೆ. ಲೌಕಿಕ ಮತ್ತು ಪಾರಮಾರ್ಥಿಕ ಎಂಬ ಭೇದ ಇನ್ನು ಮುಂದೆ ಇಲ್ಲ. ದುಡಿಮೆಯೇ ಪ್ರಾರ್ಥನೆ, ತ್ಯಾಗವೇ ಆತ್ಮ ವಿಜಯ, ಜೀವನವೇ ಧರ್ಮ. ವಸ್ತುಗಳನ್ನು ಪಡೆದಿಟ್ಟುಕೊಳ್ಳುವುದು ಬಿಟ್ಟುಬಿಡುವಷ್ಟೇ ವಿಶ್ವಸನೀಯ.*

*ಈ ಸಾಕ್ಷಾತ್ಕಾರದಿಂದಾಗಿ ಸ್ವಾಮಿ ವಿವೇಕಾನಂದರು ಶ್ರೇಷ್ಠ ಕರ್ಮಬೋಧಕರಾಗಿದ್ದಾರೆ. ಅವರು ಬೋಧಿಸುವ ಕರ್ಮವು ಜ್ಞಾನ ಮತ್ತು ಭಕ್ತಿಗಳಿಗಿಂತ ಬೇರೆಯಾದುದಲ್ಲ. ಅವರ ಪಾಲಿಗೆ ಕಾರ್ಖಾನೆ, ಪಾಠಶಾಲೆ, ಹೊಲಗಳೂ, ಸಂನ್ಯಾಸಿಯ ಕುಟೀರ ಮತ್ತು ದೇವಸ್ಥಾನಗಳಷ್ಟೇ ಭಗವಂತನನ್ನು ಸಂಧಿಸಲು ಸತ್ಯವಾದ ಮತ್ತು ಯೋಗ್ಯವಾದ ಸ್ಥಳಗಳು. ಅವರ ದೃಷ್ಟಿಯಲ್ಲಿ ಮಾನವ ಸೇವೆ ಮತ್ತು ಭಗವತ್ ಸೇವೆಗೂ ಪುರುಷಕಾರ ಮತ್ತು ನಂಬಿಕೆಗೂ, ನೈತಿಕತೆ ಮತ್ತು ಆಧ್ಯಾತ್ಮಿಕತೆಗೂ ಯಾವ ವ್ಯತ್ಯಾಸವೂ ಇಲ್ಲ.*

ಅಂಥ ಸಮನ್ವಯ ಸಿದ್ಧಾಂತ ಈ ವಿಕಾಸಶೀಲ ಜಗತ್ತಿಗೆ ಮತ್ತು ಆಧುನಿಕ ಯುಗದ ಸ್ತ್ರೀಯರಿಗೂ ಪುರುಷರಿಗೂ—ಅವರು ಆಸ್ತಿಕರಾಗಿರಲಿ ನಾಸ್ತಿಕರಾಗಿರಲಿ—ಏನು ಎಂಬುದನ್ನು ಸ್ವಾಮಿ ವಿವೇಕಾನಂದರು ೧೮೯೬ರಲ್ಲಿ ಲಂಡನ್ನಿನಲ್ಲಿ ನೀಡಿದ ಉಪನ್ಯಾಸವೊಂದರಿಂದ ಉದ್ಧರಿಸಿ The Necessity of Religion ಹೇಳುವುದನ್ನು ಬಿಟ್ಟರೆ ಬೇರೇನೂ ಮಾಡಲಾರೆ. ಇದು ಹೃದಯಸ್ಪರ್ಶಿಯಾಗಿದೆ, ಹೆಚ್ಚು ಕಡಿಮೆ ಭವಿಷ್ಯವಾಣಿಯಂತಿದೆ. (Complete Works, ಸಂ. II, ಹತ್ತನೇ ಆವೃತ್ತಿ ಪು. ೬೭-೬೮) :

*ಮಾನವನ ಮನಸ್ಸು ವಿಶಾಲವಾದಂತೆ ಅವನ ಆಧ್ಯಾತ್ಮಿಕ ಚಿಂತನೆಯೂ ವಿಶಾಲವಾಗುತ್ತದೆ. ಮನುಷ್ಯನ ಭಾವನೆ ಜಗತ್ತಿನ ಮೂಲೆಮೂಲೆಗೂ ಮುಟ್ಟುವ, ಅದನ್ನು ಸಂಗ್ರಹಿಸಿ ಇಡಲಿಕ್ಕಾಗದ ಸಮಯ ಇಂದು ಬಂದಿದೆ. ಕೇವಲ ಭೌತಿಕ ಸಹಾಯದ ಮೂಲಕ ಇಡೀ ಪ್ರಪಂಚದ ಸಂಬಂಧವನ್ನು ಬೆಳೆಸಿರುವೆವು. ಆದುದರಿಂದ ಜಗತ್ತಿನ ಭವಿಷ್ಯ ಧರ್ಮಗಳು ವಿಶ್ವವ್ಯಾಪಿಯಾಗಬೇಕು, ವಿಶಾಲವಾಗಬೇಕು.*

*ಧರ್ಮದ ಮುಂದಿನ ಆದರ್ಶವು ಪ್ರಪಂಚದಲ್ಲಿ ಈಗ ಇರುವ ಶ್ರೇಷ್ಠವಾದುದು ಮತ್ತು ಶುಭವಾದುದನ್ನೆಲ್ಲಾ ಅಳವಡಿಸಿಕೊಂಡು ಮುಂದೆ ಇನ್ನೂ ವಿಕಾಸವಾಗುವುದಕ್ಕೆ ಸಾಕಷ್ಟು ಅವಕಾಶವನ್ನು ಕೊಡುವಂತಿರಬೇಕು. ಹಿಂದೆ ಇದ್ದ ಒಳ್ಳೆಯದನ್ನೆಲ್ಲಾ ಸಂರಕ್ಷಿಸಬೇಕು. ಆಗಲೇ, ಇರುವ ನಿಧಿಯನ್ನು ಮುಂದೆ ಹೆಚ್ಚುಮಾಡಲು ಅವಕಾಶ ಯಾವಾಗಲೂ ಇರಬೇಕು. ಧರ್ಮವು ಎಲ್ಲವನ್ನೂ ಒಳಕೊಳ್ಳುವಂತಿರಬೇಕು. ಇತರರನ್ನು ಅವರ ದೇವರು ತಮಗಿಂತ ಬೇರೆ ಎಂದು ನಿಕೃಷ್ಟದೃಷ್ಟಿಯಿಂದ ನೋಡಕೂಡದು. ನನ್ನ ಜೀವನದಲ್ಲೇ ನಾನು ದೇವರನ್ನು ನಂಬದ ಎಷ್ಟೋ ಆಧ್ಯಾತ್ಮಿಕ ಜೀವಿಗಳನ್ನು ನೋಡಿರುವೆನು; ಎಷ್ಟೋ ವಿಚಾರವಂತರನ್ನು ನೋಡಿದ್ದೇನೆ. ಅಂದರೆ ಅವರು ಯಾವುದನ್ನು ನಾವು ದೇವರೆಂದು ಕರೆಯುತ್ತೇವೆಯೋ ಅದನ್ನು ನಂಬದೆ ಇರಬಹುದು.*

ಬಹುಶಃ ನಾವು ತಿಳಿದುಕೊಂಡಿರುವುದಕ್ಕಿಂತ ಹೆಚ್ಚಾಗಿ ಅವರು ದೇವರನ್ನು ತಿಳಿದುಕೊಂಡಿರಬಹುದು. ನಿರ್ಗುಣ, ಸುಗುಣ, ಅನಂತ, ನೀತಿ ನಿಯಮಗಳು ಅಥವಾ ಆದರ್ಶಮನುಷ್ಯ, ಇವೆಲ್ಲವೂ ಧರ್ಮದ ವಿವರಣೆಯಲ್ಲಿ ಬರುವುವು. ಧರ್ಮ ಹೀಗೆ ವಿಶಾಲವಾದರೆ ಮಾನವನ ಕಲ್ಯಾಣಕ್ಕೆ ಅವುಗಳ ಶಕ್ತಿ ನೂರುಮಡಿ ಹೆಚ್ಚಿದಂತಾಗುತ್ತದೆ. ಅದ್ಭುತಶಕ್ತಿಯುಳ್ಳ, ಧರ್ಮಗಳು ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುವುದಕ್ಕಿಂತ ಹೆಚ್ಚಾಗಿ ಕೆಟ್ಟುದನ್ನು ಮಾಡಿವೆ. ಇದಕ್ಕೆ ಕಾರಣ ಆ ಧರ್ಮಗಳ ಸಂಕುಚಿತ ಭಾವನೆ.

ಆದಕಾರಣ ಧರ್ಮಗಳು ವಿಶಾಲವಾಗಬೇಕು, ಅನಂತವಾಗಬೇಕು. ಆಗ ಮಾತ್ರ ಧರ್ಮದ ಪೂರ್ಣ ಪ್ರಭಾವವನ್ನು ಕಾಣುತ್ತೇವೆ. ಧಾರ್ಮಿಕಶಕ್ತಿಯು ಈಗ ತಾನೇ ವ್ಯಕ್ತವಾಗಲು ಉಪಕ್ರಮಿಸಿದೆ. ಪ್ರಪಂಚದಲ್ಲಿ ಧರ್ಮವು ಅಳಿಯುತ್ತಿದೆ, ಆಧ್ಯಾತ್ಮಿಕ ಭಾವನೆ ಅಳಿಯುತ್ತಿದೆ ಎನ್ನುವುದನ್ನು ಹಲವಾರು ಬಾರಿ ಕೇಳುತ್ತೇವೆ. ಆದರೆ, ಅವುಗಳ ಬೆಳವಣಿಗೆ ಈಗ ತಾನೆ ಪ್ರಾರಂಭವಾಗಿದೆ ಎಂಬುದು ನನ್ನ ಅನಿಸಿಕೆ. ವಿಶಾಲವಾದ, ಪರಿಶುದ್ಧವಾದ ಧಾರ್ಮಿಕ ಶಕ್ತಿಯು ಮಾನವ ಜೀವನದಲ್ಲಿ ಹಾಸುಹೊಕ್ಕಾಗಿ ಪರಿಣಮಿಸುವುದು. ಎಲ್ಲಿಯವರೆಗೆ ಧರ್ಮವು ಎಲ್ಲೋ ಕೆಲವು ಆರಿಸಿದ ವ್ಯಕ್ತಿಗಳ ಕೈಯಲ್ಲಿ ಅಥವಾ ಕೆಲವು ಪುರೋಹಿತರ ಕೈಯಲ್ಲಿದ್ದಿತೋ ಆಗ ಅದು ದೇವಸ್ಥಾನ, ಚರ್ಚು, ಶಾಸ್ತ್ರ, ಆಚಾರ, ವ್ಯವಹಾರ—ಇವುಗಳಲ್ಲಿತ್ತು. ಆದರೆ ಎಂದು ನಾವು ನಿಜವಾದ ಆಧ್ಯಾತ್ಮಿಕ ಸಮಷ್ಟಿ ಭಾವನೆಗೆ ಬರುವೆವೋ ಆಗ ಮಾತ್ರವೇ ಧರ್ಮವು ಸತ್ಯವಾಗುವುದು, ಜೀವಂತವಾಗುವುದು, ಅದು ನಮ್ಮ ಸ್ವಭಾವದಲ್ಲಿ ವ್ಯಕ್ತವಾಗುವುದು; ನಮ್ಮ ಪ್ರತಿಯೊಂದು ಕಾರ್ಯಕಲಾಪಗಳಲ್ಲಿಯೂ ಇರುವುದು ; ನಮ್ಮ ಸಮಾಜದ ಅಂಗಾಂಗಗಳನ್ನು ಪ್ರವೇಶಿಸುವುದು, ಮತ್ತು ಹಿಂದೆಂದೂ ಇರದಿದ್ದ ಮಹಾಕಲ್ಯಾಣಪ್ರದವಾದ ಶಕ್ತಿಯಾಗುವುದು.

ಹೀಗಾಗಿ ವೇದಾಂತದ ಪ್ರಕಾರ ಆಧ್ಯಾತ್ಮಿಕ ಜೀವನವೆಂದರೆ ದೇವರು ಎಂಬ ಸಂಗಾತಿಯಿಲ್ಲದೆ ಮಾನವ ಏಕೈಕ ಮತ್ತು ಪರಮ ಕಾರಕಶಕ್ತಿಯಾಗಿರುವ ಲೌಕಿಕ ಹಂತವೂ ಸೇರಿಕೊಂಡಂತೆ, ಇಡೀ ಮಾನವನ ಜೀವನವ್ಯಾಪ್ತಿಯನ್ನೊಳಗೊಳ್ಳುತ್ತದೆ.

## ೫. ಪುರುಷಕಾರ : ಮಗುವಿನ ಅಭಿವೃದ್ಧಿಗೆ ಅದರ ಮಹತ್ತ್ವ

ಒಂದು ಪುಟ್ಟ ಮಗು ಹುಟ್ಟಿದಾಗ, ನಾವು ಅದಕ್ಕೆ ಸ್ವಾವಲಂಬನೆಯನ್ನು ಹೇಳಿಕೊಡುತ್ತೇವೆ ; ಅದಕ್ಕೆ ಅದರ ವೈಯಕ್ತಿಕ ಮನೋಭಾವವನ್ನು, ಅದರ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿ ಬೆಳೆಸಿಕೊಳ್ಳಲು ಸಹಾಯ ಮಾಡುತ್ತೇವೆ. ನಾವು ಮಗುವಿಗೆ ಸಂಪೂರ್ಣ ಶರಣಾಗತಿಯ ಲೋಕೋತ್ತರ ತತ್ತ್ವವನ್ನು ಹೇಳಿಕೊಡಲು ಸಾಧ್ಯವಿಲ್ಲ. ನಿಜವಾಗಿ ಹೇಳಬೇಕೆಂದರೆ, ಅದು ತನ್ನ ಬದುಕನ್ನು ಸಂಪೂರ್ಣವಾಗಿ ಪ್ರಕೃತಿಯನ್ನವಲಂಬಿಸುವುದರಿಂದ ಆರಂಭಿಸುತ್ತದೆ. ಹುಟ್ಟಿದ ಮೊದಮೊದಲ ದಿನಗಳಲ್ಲಿ ಮತ್ತು ತಿಂಗಳುಗಳಲ್ಲಿ ಅದು ಪೂರ್ತಿಯಾಗಿ ತನ್ನ ತಾಯಿಯನ್ನು ಅವಲಂಬಿಸಿರುತ್ತದೆ. ಆದರೆ ತಾಯಿ ಇದು ಹಾಗೇ ಮುಂದುವರಿಯಲು ಇಷ್ಟಪಡುವುದಿಲ್ಲ ; ತನ್ನ ಮಗು ಸ್ವತಂತ್ರವಾಗಿರಬೇಕು, ಸ್ವಾವಲಂಬಿಯಾಗಿರಬೇಕು ಎಂದು ಅವಳು ಬಯಸುತ್ತಾಳೆ. ಆಗ ಮಾತ್ರ ಅದು ಪೂರ್ಣವಾಗಿ ಬೆಳೆಯಬಲ್ಲುದು. ಅದೇ ರೀತಿ, ನಾವು ಆಧ್ಯಾತ್ಮಿಕ ಬದುಕಿನಲ್ಲಿ ಇನ್ನೂ ಮಕ್ಕಳಾಗಿದ್ದಾಗ, ನಾವು ಸ್ವಾವಲಂಬಿಗಳಾಗಬೇಕು ಎಂದು ಗೀತೆ ಉಪದೇಶ ನೀಡುತ್ತದೆ. ನೀವು ಮಗುವಾಗಿದ್ದಾಗ ನಿಮ್ಮ ತಾಯಿ ನಿನ್ನ ಕಾಲ ಮೇಲೆ ನಿಲ್ಲಲ್ಲು ಪ್ರಯತ್ನಿಸಬೇಕು ಎಂದು ನಿಮಗೆ ಹೇಳಿದ್ದಳು ; ನೀವು ಬಯಸಿದರೆ, ನಿಮ್ಮ ತಾಯಿ ನಿಮ್ಮ ಜೀವಮಾನಪರ್ಯಂತ ಹಾಗೆಯೇ ನಿಲ್ಲಿಸಿಕೊಂಡಿರಬಲ್ಲಳು ; ಆದರೆ ಆಗ ನಿಮಗೆ ಪೂರ್ತಿ ಬೆಳವಣಿಗೆ ಮತ್ತು ಸಿದ್ಧಿ ದೊರಕದು,

ನಿಮ್ಮ ಕಾಲುಗಳು, ಪಾದಗಳು ಗಟ್ಟಿಯಾಗಬೇಕು ; ಅದು ಆತ್ಮವಿಶ್ವಾಸದ ವ್ಯಾಯಾಮದಿಂದ ಮಾತ್ರ ಸಾಧ್ಯ. ಮಕ್ಕಳ ಶಿಕ್ಷಣಕ್ಕೆ ಇದು ಒಳ್ಳೆಯ ಉಪಾಯ. ಆತ್ಮಾವಲಂಬನೆಯ ಅಂಥ ವ್ಯಾಯಾಮದಿಂದ, ಮಗುವಿನ ದೇಹಬಲ ಮತ್ತು ಮನೋಬಲ ಬೆಳೆಯುವುದನ್ನು ನಾವು ಕಾಣುತ್ತೇವೆ. ಪ್ರತಿಸಲ ಅದು ಆತ್ಮಾವಲಂಬನೆಯಿಂದ ಬೆಳೆದು ಆತ್ಮವಿಶ್ವಾಸ ಗಳಿಸಿಕೊಂಡಾಗಲೂ ತಾಯಿಯು ಹೆಚ್ಚು ಹೆಚ್ಚು ಸಂತೋಷ ಪಡುತ್ತಾಳೆ ; ಮತ್ತು ಅದು ಹಾಗೆ ಬೆಳೆಯಲು ಹೆಚ್ಚೆಚ್ಚು ಪ್ರೋತ್ಸಾಹಿಸುತ್ತಾಳೆ. ಮಗು ಏನಾದರೂ ಮಾಡಿದರೆ ಆಕೆ ಚಪ್ಪಾಳೆ ತಟ್ಟುತ್ತಾಳೆ ; ಆಗ ಮಗು ತನ್ನ ಪ್ರಯತ್ನವನ್ನು ಹೆಚ್ಚಿಸಲು ಪ್ರೋತ್ಸಾಹಿಸುತ್ತದೆ. ಮಗು ತನ್ನ 'ಅಹಂ' ಅನ್ನು, ತನ್ನ ವೈಯಕ್ತಿಕತೆಯನ್ನು ಬೆಳೆಸಿಕೊಳ್ಳುವುದು ಹೀಗೆ. ಈ ರೀತಿ ಅದು ತನ್ನ ಶಕ್ತಿಸಾಮರ್ಥ್ಯಗಳನ್ನು ಹೊರಗೆಡಹುತ್ತದೆ.

### ೬. ಪುರುಷಕಾರ : ಗೀತೆಯ ಓಂನಾಮ

ಶಿಶುಶಿಕ್ಷಣದ ಬಗೆಗಿನ—ಅದರ ಬೆಳವಣಿಗೆ ಮತ್ತು ಅಭಿವೃದ್ಧಿಗಳ ಬಗೆಗಿನ—ಈ ಸತ್ಯವನ್ನು ನೀವು ವಿಶೇಷವಾಗಿ ಗಮನಿಸಬೇಕು, ಆಗ ಮಾತ್ರ ನಾವು, ಧರ್ಮ ಶಿಕ್ಷಣದಲ್ಲಿ ಮಕ್ಕಳಾಗಿ ನಾವು ಹೇಗೆ ಮುಂದುವರಿಯಬೇಕೆಂಬುದನ್ನು ಅರ್ಥಮಾಡಿಕೊಳ್ಳಬಹುದು. ನಾವು ದೇವರಿಗೆ ಶರಣಾಗುವುದರಿಂದ ಆರಂಭಿಸುವುದಿಲ್ಲ ; ಆದರೆ ಈ ಸ್ವಾವಲಂಬನೆಯ, ವೈಯಕ್ತಿಕ ಪ್ರಯತ್ನದ ಮನೋಭಾವದಿಂದ ಆರಂಭಿಸುತ್ತೇವೆ. ಇಲ್ಲದೆ ಇದ್ದರೆ, ಸಾವು ನಮ್ಮ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ಕುಂಠಿತರಾಗುತ್ತೇವೆ, ಸ್ವಾವಲಂಬನೆ ಮತ್ತು ಸ್ವಪ್ರಯತ್ನಗಳನ್ನು ಮಾಡದ ಮಗು ತನ್ನ ತಾಯಿಯನ್ನೇ ಪೂರ್ತಿ ಅವಲಂಬಿಸಿ, ತಾಯಿಯೂ ಅದನ್ನೇ ಪ್ರೋತ್ಸಾಹಿಸಿದಾಗ ಕುಂಠಿತವಾಗುವಂತೆ. ಮಾನವನ ಆಧ್ಯಾತ್ಮಿಕ ಪ್ರಗತಿ ಎಂದರೆ ವಿಕಾಸದ ಸತತವಾದ ಶಿಕ್ಷಣವೆಂಬ ಸತ್ಯ ಇಲ್ಲಿ ಉಕ್ತವಾಗಿದೆ. 'ಮಾನವನಲ್ಲಿ ಈಗಾಗಲೇ ಇರುವ ಪರಿಪೂರ್ಣತೆಯ ಅಭಿವ್ಯಕ್ತಿಯೇ ವಿದ್ಯೆ', ಮತ್ತು 'ಮಾನವನಲ್ಲಿ ಈಗಾಗಲೇ ಇರುವ ದೈವತ್ವದ ಅಭಿವ್ಯಕ್ತಿಯೇ ಧರ್ಮ' ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಆದ್ದರಿಂದಲೇ ಗೀತೆಯು ಅರ್ಜುನನ ಮೂಲಕ ಎಲ್ಲಾ ಸ್ತ್ರೀಪುರುಷರಿಗೆ ಹೀಗೆ ಎಚ್ಚರಿಕೆ ನೀಡುತ್ತದೆ (II. ೨-೩):

ಕುತಸ್ತ್ವಾ ಕಶ್ಮಲಮಿದಂ
ವಿಷಮೇ ಸಮುಪಸ್ಥಿತಮ್,
ಅನಾರ್ಯಜುಷ್ಟಂ ಅಸ್ವರ್ಗ್ಯಂ
ಅಕೀರ್ತಿಕರಂ ಅರ್ಜುನ—

*ಓ, ಅರ್ಜುನ! ಇಂಥ ವಿಷಮ ಪರಿಸ್ಥಿತಿಯಲ್ಲಿ, ನಿನಗೆ ಅನಾರ್ಯರಂಥ, ಅವಮಾನಕರವಾದ, ಸ್ವರ್ಗಪ್ರಾಪ್ತಿಗೆ ಅನುಕೂಲಕರವಲ್ಲದ ಈ ಗ್ಲಾನಿಯು ಹೇಗೆ ಬಂದಿತು ?*

ಕ್ಲೈಬ್ಯಂ ಮಾಸ್ಮಗಮಃ ಪಾರ್ಥ
ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಂ ಹೃದಯದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ

*ಓ ಪಾರ್ಥ ! ನೀನು ಷಂಡನಾಗಬೇಡ ! ಇದು ನಿನಗೆ ತರವಲ್ಲ ! ಶತ್ರುಘಾತಕನಾದ ನೀನು ಹೃದಯದೌರ್ಬಲ್ಯವನ್ನು ತೊಡೆದುಹಾಕಿ, ಎದ್ದೇಳು !*

ಎದ್ದೇಳಿ ! ನಿಮ್ಮ ಪೌರುಷವನ್ನು, ಸ್ತ್ರೀತ್ವವನ್ನು ದೃಢವಾಗಿ ಒತ್ತಿ ಹೇಳಿ : ನಿಮ್ಮ ಅಂತಸ್ಸತ್ತ್ವವನ್ನು ಬೆಳೆಸಿಕೊಳ್ಳಿ.' ಎಂಥ ಸೊಗಸಾದ, ಎಂಥ ಶಕ್ತಿಶಾಲಿಯಾದ ಉಪದೇಶ ! ಪ್ರಪಂಚದ ಧರ್ಮಗ್ರಂಥಗಳಲ್ಲೆಲ್ಲಾ, ಮಾನವನ ಆಧ್ಯಾತ್ಮಿಕ ಜೀವನದ ಮೊದಲ ದೊಡ್ಡ ಪಾಠವೆಂದರೆ ಸ್ವಾವಲಂಬನೆ ಎಂಬ ಸ್ಪಷ್ಟವಾದ ಉಪದೇಶ ದೊರಕುವುದು ಗೀತೆಯಲ್ಲಿ ಮಾತ್ರ.

ನೀವು ಗೀತೆಯ ಆರನೆ ಅಧ್ಯಾಯಕ್ಕೆ ಬಂದಾಗ—ಈ ಅಧ್ಯಾಯಕ್ಕೆ ಧ್ಯಾನಯೋಗ ಎಂದು ಹೆಸರು—ಈ ಸತ್ಯ ಅಲ್ಲಿ ಪುನರುಕ್ತವಾಗಿದೆ (ಶ್ಲೋಕಗಳು ೫ ಮತ್ತು ೬) :

ಉದ್ಧರೇತ್ ಆತ್ಮನಾತ್ಮಾನಂ
ನಾತ್ಮಾನಂ ಅವಸಾದಯೇತ್ ।
ಆತ್ಮೈವಹ್ಯಾತ್ಮನೋ ಬಂಧುಃ
ಆತ್ಮೈವ ರಿಪುರಾತ್ಮನಃ ॥

'ನಿನ್ನನ್ನು ನೀನು ಮೇಲಕ್ಕೆತ್ತಿಕೊಳ್ಳಬೇಕು ; ನಿನ್ನನ್ನು ನೀನು ಹಾಳುಮಾಡಿಕೊಳ್ಳಬಾರದು ; ಏಕೆಂದರೆ ನಿನಗೆ ನೀನೇ ಮಿತ್ರ, ನಿನಗೆ ನೀನೇ ಶತ್ರು.'

ನನಗೆ ನಾನೇ ಮಿತ್ರನಾಗಿರಲು ಹೇಗೆ ಸಾಧ್ಯ, ಅಥವಾ ನನಗೆ ನಾನೇ ಶತ್ರುವಾಗಿರಲು ಹೇಗೆ ಸಾಧ್ಯ ? ಇದನ್ನು ಮುಂದಿನ ಶ್ಲೋಕ (ಶ್ಲೋಕ ೬) ಸ್ಪಷ್ಟಪಡಿಸುತ್ತದೆ :

ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮಾನಾ ಜಿತಃ
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥

'ಒಬ್ಬನು ತನ್ನನ್ನು ತಾನು ಗೆದ್ದಾಗ (ಅಂದರೆ ಮನಸ್ಸನ್ನು, ಇಂದ್ರಿಯಗಳನ್ನು ಪೂರ್ತಿಯಾಗಿ ನಿಗ್ರಹಿಸಿದಾಗ) ಅವನು ತನಗೆ ತಾನು ಮಿತ್ರನಾಗುತ್ತಾನೆ ; ಆದರೆ ಅವನು ಹಾಗೆ ಶಿಸ್ತಿಗೊಳಪಡಿಸದಾಗ, ಅವನು ತನಗೆ ತಾನೇ ಶತ್ರುವಾಗುತ್ತಾನೆ.'

ಆದ್ದರಿಂದ, ನಮ್ಮ ಆಧ್ಯಾತ್ಮಿಕ ಜೀವನದ ಆರಂಭದಲ್ಲಿ, ನಾವು ನಮ್ಮ ಮೇಲೇ ಅವಲಂಬಿಸುತ್ತೇವೆ ಮತ್ತು ಅವಲಂಬಿಸುವಂತೆ ಉಪದೇಶಿಸಲ್ಪಟ್ಟಿದ್ದೇವೆ. ನಾವು ಸ್ವಾವಲಂಬನೆಯನ್ನು ಅನುಸರಿಸಿ ನಮ್ಮನ್ನು ನಾವು ಬಲಗೊಳಿಸಿಕೊಳ್ಳುತ್ತೇವೆ. ಹೀಗೆ ನಾವು ಮಾನವಾಭಿವೃದ್ಧಿ ಮತ್ತು ಪೂರ್ಣ ವಿಕಾಸದ ದೀರ್ಘ ಮುನ್ನಡೆಯನ್ನು ಆರಂಭಿಸುತ್ತೇವೆ. ಗೀತೆಯ ಆರಂಭದ ಅಧ್ಯಾಯಗಳೆಲ್ಲವೂ ಬಹುಮಟ್ಟಿಗೆ ಈ ಮಾನವನ ವ್ಯಕ್ತಿತ್ವವನ್ನು ಕುರಿತವು, ವೈಯಕ್ತಿಕ ಬೆಳವಣಿಗೆಯನ್ನು, ಶೀಲದ ಬಲವನ್ನು ಕುರಿತವು ; ಇದು ಅದರ ಸಮಗ್ರ ಆಧ್ಯಾತ್ಮಿಕತಾ ತತ್ತ್ವದ ಅವಿಭಾಜ್ಯ ಅಂಗ. ಇದೇ ಗೀತೆಯು ಉಪದೇಶಿಸುವ ಯೋಗ.

### ೬. ವಿವೇಕಾನಂದರ ಪುರುಷಪ್ರಯತ್ನದ ಆಧ್ಯಾತ್ಮಿಕತೆ

ನಾವು ಅನೇಕವೇಳೆ ಗುರುತಿಸದೆ ಮತ್ತು ಕಾರ್ಯಗತಗೊಳಿಸದೆ ಇರುವ ಮಹತ್ತ್ವಪೂರ್ಣವಾದ ಸತ್ಯವಿದು. ಸ್ವಾಮಿ ವಿವೇಕಾನಂದರು ಇದನ್ನು ಮಾನವನಿರ್ಮಾಣ ಶಿಕ್ಷಣದ ಮತ್ತು ಮಾನವ ನಿರ್ಮಾಣ ಧರ್ಮದ ಕೇಂದ್ರ ಸತ್ಯವೆಂದು ಪ್ರತಿಪಾದಿಸುತ್ತಾರೆ. ತಮ್ಮ 'My Plan of Campaign' ಎಂಬ ಉಪನ್ಯಾಸದಲ್ಲಿ ಅವರು ಹೀಗೆ ಹೇಳುತ್ತಾರೆ (Complete Works, ಸಂ. III, ೧೯೬೦ನೆ ಆವೃತ್ತಿ, ಪು. ೨೨೧-೨೨೪) :

*ನಮಗೆ ಇಂದು ಬೇಕಾಗಿರುವುದು ಶಕ್ತಿ, ಆದ್ದರಿಂದ ನಿಮ್ಮಲ್ಲಿ ಆತ್ಮವಿಶ್ವಾಸವಿಟ್ಟುಕೊಳ್ಳಿ... ಮೊದಲು ನಿಮ್ಮ ನರಗಳನ್ನು ಬಲಪಡಿಸಿ. ನಮಗೆ ಇಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು. ನಾವು ದೀರ್ಘಕಾಲ ಅತ್ತಿರುವೆವು. ಇನ್ನು ಅಳುವುದು ಸಾಕು. ನಿಮ್ಮ ಕಾಲಿನ ಮೇಲೆ ನಿಂತು ಪುರುಷಸಿಂಹರಾಗಿ. ಪುರುಷಸಿಂಹರನ್ನು ಮಾಡುವ ಸಿದ್ಧಾಂತ ನಮಗೆ ಬೇಕಾಗಿದೆ. ಸರ್ವತೋಮುಖವಾದ ಪುರುಷಸಿಂಹರನ್ನು ಮಾಡುವ ವಿದ್ಯಾಭ್ಯಾಸ ನಮಗೆ ಇಂದು ಬೇಕಾಗಿದೆ. ಸತ್ಯದ ಪರೀಕ್ಷೆ ಇಲ್ಲಿದೆ : ಯಾವುದು ನಿಮ್ಮನ್ನು*

ದೈಹಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ ದುರ್ಬಲರನ್ನಾಗಿ ಮಾಡುವುದೋ ಅದನ್ನು ವಿಷದಂತೆ ತ್ಯಜಿಸಿ. ಅದರಲ್ಲಿ ಜೀವವಿಲ್ಲ. ಅದು ಸತ್ಯವಾಗಿರಲಾರದು. ಸತ್ಯವು ಶಕ್ತಿವರ್ಧಕ, ಸತ್ಯವು ಪರಿಶುದ್ಧ ; ಸತ್ಯವೇ ಅನಂತಜ್ಞಾನ.

ಎರಡು ಜನಪ್ರಿಯವಾದ ಸುಭಾಷಿತಗಳು ಹೀಗಿವೆ :

ಉದ್ಯೋಗಿನಂ ಪುರುಷಸಿಂಹಂ ಉಪೈತಿ ಲಕ್ಷ್ಮೀ
ದೈವೇನ ದೇಯಮಿತಿ ಕಾಪುರುಷಾ ವದಂತಿ ।
ದೈವಂ ನಿಹತ್ಯ ಕುರು ಪೌರುಷಂ ಆತ್ಮಶಕ್ತ್ಯಾ
ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕೋऽತ್ರ ದೋಷಃ ॥

'ಅದೃಷ್ಟ ದೇವತೆಯಾದ ಲಕ್ಷ್ಮಿಯು ಉದ್ಯೋಗಶೀಲನಾದ ಪುರುಷಸಿಂಹನಾದವನಿಗೆ ಮಾತ್ರ ಒಲಿಯುತ್ತಾಳೆ ; ಅದೃಷ್ಟ ದೇವತೆ ಕೊಟ್ಟದ್ದನ್ನು ನಾವು ಪಡೆಯಬೇಕೆಂದು ಕೈಲಾಗದ ದುರ್ಬಲರು ಹೇಳುತ್ತಾರೆ. ದೈವವನ್ನು ಅವಲಂಬಿಸುವುದನ್ನು ಬಿಟ್ಟು ಸ್ವಾವಲಂಬನೆಯ ಬಲದ ಮೂಲಕ ನಿನ್ನ ಪೌರುಷ ತೋರಿಸು ; ಪ್ರಯತ್ನಪಟ್ಟೂ ನಿನ್ನ ಕಾರ್ಯ ಕೈಗೂಡದಿದ್ದರೆ ಏನು ದೋಷ ?'

ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ
ನ ಹಿ ಸುಪ್ತಸ್ಯ ಸಿಂಹಸ್ಯ ಪ್ರವಿಶಂತೇ ಮುಖೇ ಮೃಗಾಃ

'ಕಷ್ಟಪಟ್ಟು ಕೆಲಸ ಮಾಡುವುದರಿಂದ ಮಾತ್ರ ಕಾರ್ಯಸಿದ್ಧಿಯಾಗುವುದೇ ವಿನಾ ಹಗಲುಗನಸು ಕಾಣುವುದರಿಂದಲ್ಲ. ಸಿಂಹವು (ಸೋಮಾರಿತನದಿಂದ) ಮಲಗಿರುವಾಗ ಯಾವ ಜಿಂಕೆಯೂ ಅದರ ಬಾಯನ್ನು ಪ್ರವೇಶಿಸುವುದಿಲ್ಲ.'

ಇದೇ ಮೊಟ್ಟಮೊದಲ ಮಹಾಪಾಠ. ದೈಹಿಕ ಶಕ್ತಿಯನ್ನೂ ಮನೋಬಲವನ್ನೂ ಸಂಪಾದಿಸಿ : ನಿಮ್ಮ ಪ್ರತಿಭಾಶಕ್ತಿಯನ್ನೂ ಶಕ್ತಿಸಾಮರ್ಥ್ಯಗಳನ್ನೂ, ಕಾರ್ಯಸಾಮರ್ಥ್ಯವನ್ನೂ ಬೆಳೆಸಿಕೊಳ್ಳಿ, ಆತ್ಮವಿಶ್ವಾಸ ಬೆಳೆಸಿಕೊಳ್ಳಿ ; ಸ್ವಾವಲಂಬನೆಯನ್ನು ಆಚರಿಸಿ, ಪ್ರಾಮಾಣಿಕ ದುಡಿಮೆಯಿಂದ ಜ್ಞಾನವನ್ನೂ ಐಶ್ವರ್ಯವನ್ನೂ ಗಳಿಸಿ ; ನಿಮ್ಮ ಸಿರಿಸಂಪತ್ತನ್ನೂ ಸಂತೋಷವನ್ನೂ ಇತರರೊಂದಿಗೆ ಹಂಚಿಕೊಳ್ಳಿ ಮತ್ತು ಅವರ ವಿಶ್ವಾಸ, ಮೆಚ್ಚುಗೆಗಳನ್ನು ಸಂಪಾದಿಸಿ. ಇವೆಲ್ಲಾ ಆರಂಭದ ಹಂತಗಳಲ್ಲಿ ಆಧ್ಯಾತ್ಮಿಕ ಶಿಕ್ಷಣದ ಅಂಗಗಳು. ಸಂಪತ್ತಿನ ತ್ಯಾಗ, 'ಅಹಂ'ಕಾರದ ತ್ಯಾಗ, ಭಗವಂತನಿಗೆ ಸಂಪೂರ್ಣವಾಗಿ ಶರಣಾಗುವುದು ಆಮೇಲೆ ಬರುತ್ತದೆ, ಆರಂಭದಲ್ಲಲ್ಲ.

ಸ್ವಾಮಿ ವಿವೇಕಾನಂದರು ಮಾನವನ ಬೆಳವಣಿಗೆಯ ಬಗೆಗಿನ ಈ ಸತ್ಯವನ್ನು ಒತ್ತಿಹೇಳಿದರು ; ಏಕೆಂದರೆ, ಅನೇಕರು ದುರ್ಬಲರೂ ಕೆಲಸಕ್ಕೆ ಬಾರದವರೂ ಆದರೂ ತಮ್ಮ ನಡುವೆ ಇದ್ದವರಲ್ಲಿ ಈ ಭಾವನೆ ಇದ್ದುದು ಅವರಿಗೆ ಕಂಡುಬಂದಿತು. 'ದೇವರೇ, ನಾನು ಏನೂ ಅಲ್ಲ ; ನೀನೇ ಎಲ್ಲವೂ. ನಾನು ನಿನಗೆ ಶರಣಾಗುವೆ. ಅವರು ನಿಜವಾಗಿಯೂ ಏನೂ ಅಲ್ಲ ! ಅವರ ಶರಣಾಗತಿಯ ಹೇಳಿಕೆಯಲ್ಲಿ ಪ್ರಶಂಸಾರ್ಹವಾದದ್ದು ಏನೂ ಇಲ್ಲ ಎನ್ನುವುದು ಕಂಡಂತೆಯೇ ಇದೆ. ಈ ಜಗತ್ತಿಗೆ ನಾಲಾಯಕ್ಕಾದವನು ದೇವರಿಗೆ ಲಾಯಕ್ಕಾದವನೆಂದು ಭಾವಿಸುವುದು ಅರ್ಥಶೂನ್ಯ. ದೇವರು ತನಗೆ ತಾನೇ ಹೀಗೆ ಹೇಳಿಕೊಳ್ಳುತ್ತಾನೆ : "ಇವನನ್ನು ಕಟ್ಟಿಕೊಂಡು ನಾನೇನು ಮಾಡಲಿ ? ಇವನು/ಇವಳು ನನಗೆ ಹೊರೆಯೇ. ಇಂಥ ಭಕ್ತನನ್ನು ಇಟ್ಟುಕೊಂಡಿರುವುದು ಸಂತೋಷದ ವಿಷಯವೇನೂ ಅಲ್ಲ. ಭಕ್ತಿ ಎನ್ನುವುದು ಇದಕ್ಕಿಂತ ಕಷ್ಟಕರವಾದುದು.'

ಇದು ಬಹಳ ಒಳ್ಳೆಯ ಕಲ್ಪನೆ. ಇದನ್ನು ನಾವು ಎಷ್ಟು ಬೇಗ ಅರಿತರೆ ಅಷ್ಟು ಒಳ್ಳೆಯದು. ಸ್ವಾಮಿ ವಿವೇಕಾನಂದರು ತಮ್ಮ Vedanta and Its Application to Indian Life ಎಂಬ ಉಪನ್ಯಾಸದಲ್ಲಿ ಹೀಗೆ ಹೇಳುತ್ತಾರೆ (Complete Works, ಸಂ. III, ಪು. ೨೩೭) :

ಶಕ್ತಿ, ಶಕ್ತಿ ಎಂದು ಉಪನಿಷತ್ತು ಪ್ರತಿಯೊಂದು ಮಂತ್ರದಲ್ಲಿಯೂ ಸಾರುತ್ತದೆ... ಓ ಮಾನವ, ದುರ್ಬಲನಾಗಬೇಡ. ಮಾನವಸಹಜ ದೌರ್ಬಲ್ಯಗಳು ಇಲ್ಲವೆ ಎಂದು ಕೇಳುತ್ತಾನೆ ಮಾನವ. ಇವೆ ಎನ್ನುತ್ತವೆ ಉಪನಿಷತ್ತುಗಳು. ಆದರೆ ಇನ್ನೂ ಹೆಚ್ಚು ದೌರ್ಬಲ್ಯಗಳು ಅದನ್ನು ಗುಣಪಡಿಸಬಲ್ಲುವೆ? ಕೊಳೆಯಿಂದ ಕೊಳೆಯನ್ನು ತೊಳೆಯಬಲ್ಲಿರಾ? ಪಾಪವು ಪಾಪವನ್ನು ಗುಣಪಡಿಸುವುದೆ? ದೌರ್ಬಲ್ಯವು ದೌರ್ಬಲ್ಯವನ್ನು ಹೋಗಲಾಡಿಸುವುದೆ?... ವಿಶ್ವಸಾಹಿತ್ಯ ದಲ್ಲಿ ಇದೊಂದು ಸಾಹಿತ್ಯ ಮಾತ್ರ ಅಭೀಃ, ಅಭೀಃ—ಹೆದರಬೇಡ, ಹೆದರಬೇಡ—ಎಂದು ಮತ್ತೆ ಮತ್ತೆ ಸಾರುವುದು.

ಶುಚಿಯಾದ ವಸ್ತುಗಳು ಮಾತ್ರ ಮಾಲಿನ್ಯವನ್ನು ತೆಗೆಯಬಲ್ಲವು, ಶಕ್ತಿಯು ಮಾತ್ರ ದೌರ್ಬಲ್ಯ ವನ್ನು ಹೋಗಲಾಡಿಸಬಲ್ಲುದು, ಬೆಳಕು ಮಾತ್ರ ಕತ್ತಲೆಯನ್ನು ಹೋಗಲಾಡಿಸಬಲ್ಲುದು.

### ೮. ವೇದಾಂತದ ಆತ್ಮಜ್ಞಾನ : ಅದರ ವ್ಯಾಪಕ ಪ್ರಸ್ತುತತೆ

ಆದ್ದರಿಂದ, ಮಾನವನ ಆಧ್ಯಾತ್ಮಿಕ ಜೀವನದ ಮೊದಲ ಹಂತದಲ್ಲಿ ಗೀತೆಯು ನಮಗೆ ಪುರುಷಕಾರದ, ಸ್ವಾವಲಂಬನೆಯ ಸತ್ಯವನ್ನು ಬೋಧಿಸುತ್ತದೆ. ಗೀತೆಯ ತತ್ತ್ವದ ಬೆಳಕಿನಲ್ಲಿ, ಲೌಕಿಕ ಜೀವನ ಮತ್ತು ಆಧ್ಯಾತ್ಮಿಕ ಜೀವನದ ನಡುವೆ ಅಂಥ ಸ್ಪಷ್ಟವಾದ ಭೇದ ಇಲ್ಲ ಎಂಬುದನ್ನು ನೆನಪಿಡಿ. ಲೌಕಿಕ ಬದುಕು ಮಾನವನ ತರಪೇತಿಯ ಮೊದಲ ಭಾಗ, ಮಾತ್ರ ; ಮಗುವಿನ ನಾನತ್ವ ಮತ್ತು ವೈಯಕ್ತಿಕತೆಯ ಪ್ರಜ್ಞೆಯನ್ನು ಬಲಗೊಳಿಸಲು ತಾಯಿ ಅದಕ್ಕೆ ನೀಡುವ ತರಬೇತಿಯಂತೆ. ಆದ್ದರಿಂದಲೇ ವೇದಾಂತವು ಈ ತರಬೇತಿಯನ್ನೂ ಆತ್ಮಜ್ಞಾನತತ್ತ್ವದ ಒಂದು ಅಂಗವೆಂದು ಪರಿಗಣಿಸುತ್ತದೆ ; ಆರಂಭಿಕ ಹಂತದಲ್ಲಿ ಆತ್ಮದ ಜ್ಞಾನವೆಂದರೆ—ಮಗುವು ತನ್ನನ್ನು 'ನಾನು ಯಾರೋ ಒಬ್ಬ', 'ನನಗೆ ವೈಯಕ್ತಿಕ ವ್ಯಕ್ತಿತ್ವವಿದೆ', 'ನಾನು ಕೇವಲ ಜೈವಿಕ ವಸ್ತುಗಳ ಒಂದು ಮುದ್ದೆಯಲ್ಲ', 'ನಾನು ಬಾಹ್ಯಪ್ರಕೃತಿಯ ಒಂದು ವಸ್ತುವಲ್ಲ' ಎಂದು ಅರಿಯುವುದು.

ಭಾರತದಲ್ಲಿ ನಾವು ಇಲ್ಲಿಯವರೆಗೆ ನಮ್ಮ ವೇದಾಂತದ ಅಧ್ಯಾತ್ಮವಿದ್ಯೆಯ ಅಥವಾ ಆತ್ಮಜ್ಞಾನದ ಗಹನ ವಿಷಯವನ್ನು ಸಮಾಧಿ, ತುರೀಯ ಸ್ಥಿತಿ, ಮೊದಲಾದ ಅಲೌಕಿಕ ಅನುಭವಗಳಿಗೆ ಮಾತ್ರ ಸಂಬಂಧಿಸಿದ್ದು ಎಂದು ಚರ್ಚಿಸಿದ್ದೇವೆ. ಅದರಂತೆ ಇದು ನಮ್ಮ ಸಮಾಜದಲ್ಲಿನ ಅಥವಾ ಯಾವುದೇ ಸಮಾಜದಲ್ಲಿನ ಆಧ್ಯಾತ್ಮಿಕವಾಗಿ ಪ್ರಗತಿ ಸಾಧಿಸಿದ ಅತ್ಯಲ್ಪ ಸಂಖ್ಯೆಯ ಜನರಿಗೆ ಸಂಬಂಧಿಸಿದೆ. ಮಾನವ ವಿಕಾಸದ ಎಲ್ಲಾ ಹಂತಗಳಲ್ಲಿನ ಸ್ತ್ರೀಪುರುಷರಿಗೂ ಮಕ್ಕಳಿಗೂ ಪ್ರಸ್ತುತವಾದುದು ಎಂಬುದು ನಮಗೆ ಗೊತ್ತಿರಲಿಲ್ಲ. ಆಧುನಿಕ ಯುಗದಲ್ಲಿ ಸ್ವಾಮಿ ವಿವೇಕಾನಂದ ರಿಂದ ಪ್ರತಿಪಾದಿತವಾದ ವೇದಾಂತಕ್ಕೆ ಈ ದೃಷ್ಟಿಕೋನ ಲಭಿಸಿತು. ಆದರ್ಶಪ್ರಾಯವಾಗಿ ಹೊಂದಿಕೊಂಡ ಸಾಮಾನ್ಯ ಮಾನವ ಜೀವಿಯು ಸ್ವಲ್ಪಮಟ್ಟಿಗೆ ಆತ್ಮಜ್ಞಾನವನ್ನು ಪಡೆದಿರುತ್ತಾನೆ ; ಸಂಸಾರ ಅಥವಾ ಸಾಮಾಜಿಕ ಪರಿಸರಕ್ಕೆ ಸರಿಯಾಗಿ ಹೊಂದಿಕೊಳ್ಳದ ಅಪಸಾಮಾನ್ಯವಾದ ಜೀವಿಯು ಆತ್ಮಜ್ಞಾನ ಸಾಧಿಸುವಲ್ಲಿ ವಿಫಲನಾಗಿದ್ದಾನೆ.

### ೯. ಆತ್ಮಜ್ಞಾನ ಮತ್ತು ಮನೋವಿಕಾರಕ್ಕೊಳಗಾದ ಮಗು

ಮನೋವಿಕೃತವಾದ ಮಕ್ಕಳಲ್ಲಿ, ಅಸಾಮರಸ್ಯವುಂಟಾಗುವುದು ಬಹುಮಟ್ಟಿಗೆ ತಂದೆ ಅಥವಾ ತಾಯಿಯೊಡನೆ ಅಥವಾ ಇಬ್ಬರೊಡನೆ ಮಗುವಿನ ಸಂಬಂಧ ದೋಷಪೂರ್ಣವಾಗಿರುವುದರಿಂದ. ಇದರ ಪರಿಣಾಮವಾಗಿ ಮಕ್ಕಳಲ್ಲಿ ನಿರುತ್ಸಾಹ ಅಥವಾ ದ್ವೇಷ ಮತ್ತು ವೈಯಕ್ತಿಕ ಅಭದ್ರತಾ ಮನೋಭಾವಗಳು ಉಂಟಾಗುತ್ತವೆ. ಇದಕ್ಕೆ ಕಾರಣ ಆತ್ಮಜ್ಞಾನದ ಕೊರತೆ. ಆಧುನಿಕ ಮನೋರೋಗ

ಚಿಕಿತ್ಸೆಯು—ಅದರಲ್ಲೂ ಮುಖ್ಯವಾಗಿ ಅದರ ಆಟಚಿಕಿತ್ಸೆಯು—ಒಂದು ಅದ್ಭುತವಾದ ತಂತ್ರ ; ಅದು ಅಂಥ ಮಕ್ಕಳು ತಮ್ಮ ಅಂತರಾಳದ ಸಮಸ್ಯೆಗಳನ್ನು ಹೋಗಲಾಡಿಸಿ, ಅವರ ಬೆಳವಣಿಗೆಯ ಮಟ್ಟಕ್ಕೆ ಹೊಂದುವ ಆತ್ಮಜ್ಞಾನದ ಸಮನ್ವತೆಯನ್ನು ಸಾಧಿಸುತ್ತದೆ. ಆತ್ಮಜ್ಞಾನದ ಈ ಅದ್ಭುತವೂ ಅನನ್ಯವೂ ಆದ ಅಂಶವನ್ನು ಶ್ರೀಮತಿ ವರ್ಜೀನಿಯ ಎಂ. ಆಕ್ಸ್‌ಲಿನ್ ಅವರು ತಮ್ಮ Dibs : In Search of Self ಎಂಬ ಸೊಗಸಾದ ಕಿರು ಕೃತಿಯಲ್ಲಿ 'Personality Development in Play Therapy' ಎಂಬ ಉಪಶೀರ್ಷಿಕೆಯಲ್ಲಿ ಸುಂದರವಾಗಿ ವಿವರಿಸಿದ್ದಾರೆ. ಈ ಕೃತಿಯ ಕೊನೆಯಿಂದ ಎರಡನೆ ಅಧ್ಯಾಯದಲ್ಲಿ ಇದನ್ನು ವಿವರಿಸಿದ್ದಾರೆ. ಇವು ಆತ್ಮಜ್ಞಾನದ ಫಲವಾದ ಅನೇಕಾನೇಕ ವೇದಾಂತೀಯ ಲಕ್ಷಣಗಳನ್ನು ಪ್ರತಿಧ್ವನಿಸುತ್ತವೆ. ಸಹಜ ಪ್ರತಿಭಾಶಾಲಿಯಾದ, ಆದರೆ ಭಾವನಾತ್ಮಕವಾಗಿ ಮನೋವಿಕಾರಕ್ಕೆ ಬಲಿಯಾದ ಐದು ವರ್ಷದ ಡಿಬ್ಸ್ ಎಂಬ ಮಗು 'ಚೈಲ್ಡ್ ಗೈಡೆನ್ಸ್ ಸೆಂಟರ್'ನಲ್ಲಿ ನೀಡಿದ ಚಿಕಿತ್ಸಾ ಶಿಬಿರಗಳಿಂದ ತನ್ನತನವನ್ನು ಪಡೆದುಕೊಂಡಿತು ಎಂಬುದರ ವಿವರಣೆ ಇದೆ (ಅದೇ ಕೃತಿ, ಪು. ೧೭೮-೭೯, ಪೆಲಿಕನ್ ಆವೃತ್ತಿ, ೧೯೭೬) :

*ಡಿಬ್ಸ್ ತನ್ನ ಪಾಲಿಗೆ ಬಂದದ್ದನ್ನು ಒಪ್ಪಿಕೊಂಡಿದ್ದ. ತನ್ನ ಸಾಂಕೇತಿಕ ಆಟದಲ್ಲಿ, ಅವನು ತನ್ನ ಅಳಲನ್ನು, ಬೇಗುದಿಯನ್ನು ತೋಡಿಕೊಂಡಿದ್ದ ; ಅದರ ಪರಿಣಾಮವಾಗಿ ಬಲ ಮತ್ತು ಭದ್ರತೆಯ ಭಾವನೆಗಳು ಬಂದಿದ್ದವು. ಹೆಮ್ಮೆಯಿಂದ ತನ್ನದೆಂದು ಹೇಳಿಕೊಳ್ಳುವ ಆತ್ಮವೊಂದನ್ನು ಅರಸಿ ಬಂದಿದ್ದನಾತ. ಈಗ ಅವನು ತನ್ನೊಳಗಿರುವ ಶಕ್ತಿಸಾಮರ್ಥ್ಯಗಳ ಜೊತೆ ಮೇಳೈಸಿರುವ ಆತ್ಮದ ಕಲ್ಪನೆಯನ್ನು ನಿರ್ಮಿಸಹೊರಟಿದ್ದ. ಅವನು ವೈಯಕ್ತಿಕ ಸುಸಂಘಟನೆಯನ್ನು ಸಾಧಿಸುತ್ತಿದ್ದ.*

ತನ್ನ ತಂದೆ, ತಾಯಿ ಮತ್ತು ಸೋದರಿ—ಇವರ ಬಗ್ಗೆ ಅವನಿಗಿದ್ದ ದ್ವೇಷ ಮತ್ತು ಹಗೆತನಗಳು ಇನ್ನೂ ಸ್ವಲ್ಪ ಸ್ವಲ್ಪ ಹೊಗೆಯಾಡುತ್ತಿತ್ತು. ಅವನು ಪುಟ್ಟ, ಅಪಕ್ವವಾದ, ಹೆದರಿದ ಡಿಬ್ಸ್‌ಗೆ ಬದಲಾಗಿ, ಸಮರ್ಪಕತೆ, ಭದ್ರತೆ ಮತ್ತು ಧೈರ್ಯದ ಭಾವನೆಗಳಿಂದ ಬಲಗೊಂಡ ಆತ್ಮತತ್ತ್ವವನ್ನು ಪಡೆದಿದ್ದ. ಅವನು ತನ್ನ ಭಾವನೆಗಳನ್ನು ಅರಿಯಲು ಕಲಿತಿದ್ದನು. ಭಾವನೆಗಳ ಜತೆ ಹೇಗೆ ನಿಭಾಯಿಸಬೇಕು ಮತ್ತು ಅವನ್ನು ಹೇಗೆ ನಿಯಂತ್ರಿಸಬೇಕು ಎಂಬುದನ್ನು ಅವನು ಕಲಿತಿದ್ದನು. ಹಿಂದಿನಂತೆ ಡಿಬ್ಸ್ ಹೆದರಿಕೆ, ಕೋಪ, ದ್ವೇಷ ಮತ್ತು ಅಪರಾಧಿತನದ ಭಾವನೆಗಳಲ್ಲಿ ಮುಳುಗಿರಲಿಲ್ಲ. ಅವನು ತನ್ನ ಸ್ವಂತ ಹಕ್ಕಿನ ಮೇಲೆ ಒಬ್ಬ ವ್ಯಕ್ತಿಯಾಗಿದ್ದ. ಅವನಿಗೆ ಘನತೆ, ಮತ್ತು ಆತ್ಮಗೌರವಗಳ ಜ್ಞಾನ ಬಂದಿತ್ತು. ಈ ಆತ್ಮವಿಶ್ವಾಸ ಮತ್ತು ಭದ್ರತೆಗಳಿಂದಾಗಿ ಅವನು ಇತರರನ್ನು ಸ್ವೀಕರಿಸಲು ಮತ್ತು ಗೌರವಿಸಲು ಕಲಿತಿದ್ದನು. ಅವನು ತಾನೇ ತಾನಾಗಿರಲು ಹಿಂದಿನಂತೆ ಈಗ ಹೆದರುತ್ತಿರಲಿಲ್ಲ.

ಗೀತೆ ಮತ್ತು ಸ್ವಾಮಿ ವಿವೇಕಾನಂದರ ಪ್ರಕಾರ ಆತ್ಮಜ್ಞಾನಕ್ಕೆ ಸಂಬಂಧಿಸಿದ ಗಹನವಾದ ತತ್ತ್ವವನ್ನು ಕುರಿತಂತೆ ವೇದಾಂತ ಪ್ರತಿಪಾದನೆಯ ಅನಂತವ್ಯಾಪ್ತಿಯ ಸರಿಯಾದ ಅರ್ಥ ಇದು. ಅದರಂತೆ ಲೌಕಿಕ ಶಿಕ್ಷಣದ ಹಂತದಲ್ಲಿನ ವ್ಯಕ್ತಿತ್ವ ವಿಕಾಸ ಮತ್ತು ಗುಣಗಳು ಮಾನವನಲ್ಲಿ ಆಗಲೇ ಇರುವ ದಿವ್ಯ ಆತ್ಮದ ಅಭಿವ್ಯಕ್ತಿಯ ಆರಂಭದ ಹಂತ, ಅಷ್ಟೇ. ಆಮೇಲಿನ ಮತ್ತು ಉನ್ನತ ಮಟ್ಟಗಳು ಅದರ ಅನಂತರದ ಆಯಾಮಗಳು.

## ೧೦. ವಿರಕ್ತಿ : ಪುಕ್ಕಲ ಮತ್ತು ವೀರ

ಅದರಂತೆ, ಸ್ವಾಮಿ ವಿವೇಕಾನಂದರು ಹೀಗೆ ಹೇಳಿದ್ದಾರೆ : 'ನಾನು ಭಾರತದಲ್ಲಿ ಎಲ್ಲೆಲ್ಲಿ ಹೋದರೂ ಜನರು ನನ್ನ ಬಳಿ ಬಂದು ಹೇಳುತ್ತಾರೆ : "ಸ್ವಾಮಿಜಿ, ನಾನು ಎಲ್ಲವನ್ನೂ ತೊರೆದುಬಿಡುತ್ತೇನೆ, ಎಲ್ಲವನ್ನೂ ದೇವರಿಗೆ ಒಪ್ಪಿಸುತ್ತೇನೆ". ಆಗ ನಾನು ಅವರನ್ನು ಕೇಳುವುದು

ಇಷ್ಟೆ : "ನೀವು ತೊರೆಯುವುದಕ್ಕೆ ಏನಿದೆ ? ಒಪ್ಪಿಸುವುದಕ್ಕೆ ಏನಿದೆ ? ಬಲವಾದ ಶರೀರವಾಗಲಿ, ಸುಶಿಕ್ಷಿತ ಮನಸ್ಸಾಗಲಿ, ಯಾವುದೇ ಪ್ರತಿಭೆಯಾಗಲಿ, ಜೇಬಿನಲ್ಲಿ ಅಥವಾ ಬ್ಯಾಂಕಿನಲ್ಲಿ ಹಣವಾಗಲಿ, ಚೆನ್ನಾಗಿ ಬೆಳೆಸಿಕೊಂಡ ವ್ಯಕ್ತಿತ್ವವಾಗಲಿ ನಿಮಗೆ ಇಲ್ಲ. ಒಪ್ಪಿ, ಬುದ್ಧ ತ್ಯಾಗ ಮಾಡಬಹುದಾಗಿತ್ತು ; ಅವನಿಗೆ ತ್ಯಾಗ ಮಾಡಲು ರಾಜ್ಯವಿತ್ತು, ಸುಂದರವಾದ ತರುಣ ವ್ಯಕ್ತಿತ್ವವಿತ್ತು. ಅವನಿಗೆ ತ್ಯಜಿಸಿ ಸಾಧಿಸುವುದು ಬೇಕಾದಷ್ಟು ಇತ್ತು. ಆದರೆ ನಿಮಗೆ ಏನಿದೆ ?"

ಎಂಥ ಸುಂದರವಾದ ಕಲ್ಪನೆ ! ಎಷ್ಟು ಸ್ಫೂರ್ತಿದಾಯಕವಾಗಿದೆ, ಸ್ಪಷ್ಟವಾಗಿದೆ ! ಎಳೆಯ ಹುಡುಗನಾಗಿದ್ದಾಗ ನಾನು ಇದನ್ನು ಮೊದಲ ಬಾರಿಗೆ ಓದಿದಾಗ, ಆತ್ಮವಿಕಾಸವೇ ವೇದಾಂತದ ನಿಜವಾದ ಗುರಿ ಎಂಬ ಭಾವನೆ ನನಗೆ ಸ್ಫೂರ್ತಿ ನೀಡಿತು. ಜಗತ್ತಿನ ಎಲ್ಲಾ ಭಾಗಗಳ ಎಲ್ಲಾ ಜನರಿಗೆ ಇದು ಎಂಥ ವಾಸ್ತವಿಕವಾದ, ಬಲವನ್ನು ನೀಡುವ ಸಂದೇಶ ! ಅನೇಕವೇಳೆ, ಮಾನಸಿಕ ದೌರ್ಬಲ್ಯವಿರುವ ಜನರು, ಈ ಧರ್ಮದ ಆರಂಭಿಕ ಹಂತವನ್ನು ಪೂರೈಸಲು ಪ್ರಯತ್ನಿಸದೆ ಅದರ ಉನ್ನತ ಆಯಾಮವನ್ನು ಅವಲಂಬಿಸುತ್ತಾರೆ ; ಪರಿಣಾಮವಾಗಿ ಅವರು ಇಡೀ ಧರ್ಮವೇ ಬರಿಯ ಸೋಗನ್ನಾಗಿ ಮಾಡುತ್ತಾರೆ, ಮಾನವ ಜೀವನವನ್ನು ಲವಲೇಶವೂ ಪೌರುಷವಿಲ್ಲದ ಹೇಡಿತನದ ವ್ಯರ್ಥ ಜೀವನವನ್ನಾಗಿ ಮಾಡುತ್ತಾರೆ. ಅವರು ಮೊದಲು ತಾವು ಅರಗಿಸಿಕೊಳ್ಳಬಹುದಾದ, ಬಲವನ್ನು ಕೊಡುವ, ಕ್ರಮೇಣ ಧರ್ಮದ ಎತ್ತರದ ಶಿಖರವನ್ನು ಏರುವ—ಅತ್ಯುನ್ನತ ಶಿಖರವನ್ನೂ ಏರುವ—ಉಪದೇಶವನ್ನು ಅವಲಂಬಿಸಿದರೆ ಅದು ಹೀಗಾಗುವುದಿಲ್ಲ. ವಿವೇಕಾನಂದರು ಹೀಗೆ ಹೇಳಿದ್ದಾರೆ : ಧರ್ಮವು ವ್ಯಾಪ್ತಿಯಲ್ಲಿ ಅನಂತ ; ಧರ್ಮವು ಶಿಕ್ಷಣದಂತೆ ತನ್ನ ವ್ಯಾಪ್ತಿಯಲ್ಲಿ ಪ್ರತಿಯೊಬ್ಬರನ್ನೂ ಸ್ವೀಕರಿಸಿ ಮತ್ತು ಅವನು / ಅವಳು ಬೆಳೆಯುವಂತೆ ಮಾಡುತ್ತದೆ.

## ೧೧. ಪುರುಷಪ್ರಯತ್ನವು ದೈವತ್ವಕ್ಕೆ ಒಯ್ಯುತ್ತದೆಂಬ ಗೀತೆಯ ಸಂದೇಶ

ಗೀತೆಯಲ್ಲಿ ನೀವು ಈ ಪ್ರಬಲವಾದ ಸಂಗೀತದ ಲಯವನ್ನು ಉದ್ದಕ್ಕೂ ಕೇಳುತ್ತೀರಿ. ಇದು ಶಕ್ತಿಯ ಸಂಗೀತ, ಮಾನವವಿಕಾಸದ ಸಂಗೀತ, ಮಾನವ ಬೆಳವಣಿಗೆಯ ಸಂಗೀತ. ಈ ದಿವ್ಯ ಸಂಗೀತದಲ್ಲಿ (Song Celestial)—ಎಡ್ವಿನ್ ಆರ್ನಾಲ್ಡ್ ಭಗವದ್ಗೀತೆಯನ್ನು ಹೀಗೆ ಕರೆಯುತ್ತಾರೆ—ಮಾನವ ನಿರ್ಮಾಣದ ಇಡೀ ತತ್ತ್ವವನ್ನೇ ಮೊದಮೊದಲ ಅಧ್ಯಾಯಗಳಲ್ಲಿ ನಮಗೆ ನೀಡಲಾಗಿದೆ. ಅರ್ಜುನನು ನಿಜವಾಗಿ ದುರ್ಬಲನಾಗಿದ್ದಾಗ, ತಾನು ಅಸಾಧಾರಣ ಧರ್ಮಾತ್ಮನೆಂದು ಭಾವಿಸಿದ್ದ. ಅವನು ಆಸನ್ನವಾಗಿರುವ ಯುದ್ಧವನ್ನು ತೊರೆದು, ಯುದ್ಧಾನಂತರ ತನ್ನದಾಗುತ್ತದೆಂದು ಭಾವಿಸಲಾಗಿರುವ ರಾಜ್ಯವನ್ನು ತೊರೆದು ಸದ್ಧರ್ಮಶೀಲನಾದ ತಿರುಕನಾಗಬೇಕೆಂದು ಬಯಸಿದ. ಅಂಥ ಹೆಜ್ಜೆಯಿಡಲು ನಾನಾ ಬಗೆಯ ಸಮರ್ಥನೆಗಳನ್ನು ಕೊಟ್ಟು, ಅದಕ್ಕೆ ಶ್ರೀಕೃಷ್ಣನ ಅನುಮತಿ ಮತ್ತು ಆಶೀರ್ವಾದ ಬೇಡಿದ. ಅವನು ತನ್ನ ಬಿಲ್ಲುಬಾಣಗಳನ್ನು ಎಸೆದು, ಅತ್ತು, ಗೋಳಾಡಿ ರಥದಲ್ಲಿ ಕುಸಿದುಬಿದ್ದ. ಗೀತೆಯ ಮೊದಲನೆಯ ಅಧ್ಯಾಯದ—ಈ ಅಧ್ಯಾಯಕ್ಕೆ 'ಅರ್ಜುನನ ವಿಷಾದಯೋಗ' ಎಂಬ ಹೆಸರು ಅರ್ಥಪೂರ್ಣವಾಗಿದೆ—ಕೊನೆಯಲ್ಲಿ ಕೊಟ್ಟಿರುವ ಅರ್ಜುನನ ಚಿತ್ರವಿದು. ಶ್ರೀಕೃಷ್ಣನು ಅವನನ್ನು ಹುಸಿನಗೆಯಿಂದ ನೋಡಿ ತನ್ನಲ್ಲಿ ತಾನು ಹೀಗೆ ಆಲೋಚಿಸುತ್ತಾನೆ : 'ಈ ಮನುಷ್ಯನಿಗೆ ಏನಾಗಿದೆ ? ಇವನು ಅಂಥ ವೀರಾಧಿವೀರನಾಗಿದ್ದ, ಈಗ ಇವನು ದುರ್ಬಲನೂ ವಿಷಣ್ಣನೂ ಆಗಿ, ಈ ದೌರ್ಬಲ್ಯವನ್ನೂ ವಿಷಣ್ಣತೆಯನ್ನೂ ಶ್ರೇಷ್ಠಗುಣಗಳೆಂದು ಸಮರ್ಥಿಸುತ್ತಾನೆ.' ಆದಕಾರಣ, ಈಗ ಅಧೈರ್ಯಕ್ಕೆ ಬಲವರ್ಧಕ 'ಟಾನಿಕ್ಕಾ'ಗಿ, ಹಿಂದೆ ಉದ್ಧರಿಸಿದ ಎರಡನೆ ಅಧ್ಯಾಯದ ೨ ಮತ್ತು ೩ನೆ ಶ್ಲೋಕಗಳಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಛೀಮಾರಿಮಾಡಿ ಬುದ್ಧಿವಾದ ಹೇಳುತ್ತಾನೆ.

ಗೀತೆಯು ತನ್ನ ಮಾನವ ವಿಕಾಸದ ಶಕ್ತಿಶಾಲಿಯಾದ ಸಂಗೀತವನ್ನು ಈ ಗಂಡುಸಂದೇಶದಿಂದ ಆರಂಭಿಸುತ್ತದೆ. ಗೀತೆಯ ಸಂಭಾಷಣೆಯ ಸಂದರ್ಭ ಯುದ್ಧವೇ ಆಗಿದ್ದರೂ, ಅಲ್ಲಿಂದೆ ಮುಂದೆ ಪ್ರತಿಯೊಂದೂ ಮಾನವನ ಅಭಿವೃದ್ಧಿ ಮತ್ತು ಸಾರ್ಥಕ್ಯದ ತತ್ತ್ವ. ಆಧ್ಯಾತ್ಮಿಕ ಜೀವನದ ಶಿಕ್ಷಣವೆಲ್ಲ ಪೌರುಷದ ಮನೋಭಾವದಿಂದ ಆರಂಭವಾಗುತ್ತದೆ ; ಮಗುವು ಸದಾ ತನ್ನ ತಾಯಿಯ ಸೊಂಟಕ್ಕೆ ಅಂಟಿಕೊಂಡಿರುವಂತೆ ಎಲ್ಲಕ್ಕೂ ಬಾಹ್ಯ ದೇವರಿಗೆ ಅಥವಾ ದೇವರುಗಳಿಗೆ ಅಂಟಿಕೊಳ್ಳುವುದಲ್ಲ. ಅಂಥ ಮಗು ಎಂದೆಂದಿಗೂ ಮಗುವಾಗಿಯೇ ಉಳಿಯುತ್ತದೆ. ಅದು ಬೆಳೆಯುವುದೇ ಇಲ್ಲ. ಅದೇ ರೀತಿ, ಆಧ್ಯಾತ್ಮಿಕ ಶಿಶುವು ಈ ಸ್ವಾವಲಂಬನೆಯ ಆತ್ಮಶ್ರದ್ಧೆ ಮತ್ತು ಆತ್ಮನಿರ್ಭರತೆಯ—ಈ ಶ್ರೇಷ್ಠ ಸಂದೇಶವನ್ನು ಅರ್ಥಮಾಡಿಕೊಂಡಾಗ ಮಾತ್ರ ತನ್ನ ಭೌತದೇಹದ ಸ್ನಾಯುಗಳನ್ನು ಬೆಳೆಸಿಕೊಳ್ಳಬಹುದು, ಬುದ್ಧಿಶಕ್ತಿ ಮತ್ತು ಸಂಕಲ್ಪಶಕ್ತಿಗಳನ್ನು ಬೆಳೆಸಿಕೊಳ್ಳಬಲ್ಲದು, ಮತ್ತು ಭಾವನೆಯ 'ಸ್ನಾಯು'ಗಳನ್ನು ಬೆಳೆಸಿಕೊಳ್ಳಬಲ್ಲದು. ಈ ಸಂಕಲ್ಪಶಕ್ತಿಯು ತುಂಬ ಮುಖ್ಯವೆಂದು ಶ್ರೀಕೃಷ್ಣ ಮುಂದೆ ಹೇಳುತ್ತಾನೆ (II. ೪೧) :

ವ್ಯವಸಾಯಾತ್ಮಿಕಾ ಬುದ್ಧಿಃ
ಏಕೇಹ ಕುರುನಂದನ
ಬಹು ಶಾಖಾಹ್ಯನಂತಾಶ್ಚ
ಬುದ್ಧಯೋऽವ್ಯವಸಾಯಿನಾಮ್

'ಓ ಕುರುಪುತ್ರನೆ ! ಈ ಬುದ್ಧಿಯೋಗದಲ್ಲೇ ದೃಢಸಂಕಲ್ಪವೊಂದಿದೆ ; ಈ ದೃಢಸಂಕಲ್ಪವಿಲ್ಲದವರ ಬುದ್ಧಿಗಳು ಅನೇಕ ಶಾಖೆಯುಳ್ಳವು ಮತ್ತು ಅಸಂಖ್ಯವಾದವು.'

ಧಾರ್ಮಿಕ ಜೀವನ ಮತ್ತು ಲೌಕಿಕ ಜೀವನಗಳ ನಡುವೆ ಅಗಾಧ ಅಂತರವಿಲ್ಲ. ಜೀವನ ಎನ್ನುವುದು ಒಂದು ಸಂತತವಾದ ವಿಕಾಸವಾಗುವಂಥದು ; ಪ್ರತಿಯೊಬ್ಬರಲ್ಲೂ ಅಡಗಿರುವ ಅನಂತ ಶಕ್ತಿಗಳ ವಿಕಾಸವಾಗುವಂಥದು. ನಾವು ಇದು ಲೌಕಿಕ ಜೀವನ, ಅದು ಧಾರ್ಮಿಕ ಜೀವನ, ಇದು ಐಹಿಕ ಜೀವನ ಅದು ಪಾರಮಾರ್ಥಿಕ ಜೀವನ ಎಂಬ ಪರಸ್ಪರ ಸಂಬಂಧವೇ ಇಲ್ಲದ ಭೇದಗಳನ್ನು ಮಾಡುತ್ತೇವೆ. ಗೀತೆಯು ಅಂಥ ಸ್ಪಷ್ಟ ವ್ಯತ್ಯಾಸಗಳನ್ನು ಮಾಡುವುದಿಲ್ಲ. ಶ್ರೀಕೃಷ್ಣ ಹೀಗೆ ಹೇಳುತ್ತಾನೆ : ಬದುಕು ಈ ರೀತಿ ವ್ಯತ್ಯಾಸಗಳಿಲ್ಲದೆ ಒಂದೇ ಆಗಿದೆ ; ನೀವು ಅದನ್ನು ಮಾನವನಿರ್ಮಾಣ ಮತ್ತು ನೈತಿಕ ಸತ್ತ್ವ ನಿರ್ಮಾಣದಿಂದ ಆರಂಭಿಸಬೇಕು. ಇಲ್ಲಿ ಇನ್ನೂ ಹತ್ತಬೇಕಾದ ಆಧ್ಯಾತ್ಮಿಕ ಶಿಖರಗಳಿವೆ ; ನಾನು ನಿಮಗೆ ಮುಂದೆ ಅವುಗಳ ಬಗ್ಗೆ ಹೇಳುತ್ತೇನೆ.

### ೧೨. ಶರಣಾಗತಿ : ಗೀತೆಯ ಯೋಗದ ಅಂತಿಮಶ್ರುತಿ

ನಾವು ಈ ಕೆಲವು ಶ್ರೇಷ್ಠ ಗುಣಗಳನ್ನೂ ವೈಶಿಷ್ಟ್ಯಗಳನ್ನೂ ಹೊರಗೆಡಹಿದಾಗ, ಬಲ, ಸ್ವಾವಲಂಬನೆ, ನಿರ್ಭೀತಿಗಳನ್ನು ಬೆಳೆಸಿಕೊಂಡು ನಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡಾಗ, ಶ್ರೀಕೃಷ್ಣನು ತನ್ನ ಶ್ರೇಷ್ಠ ಸಂಗೀತದ ಭವ್ಯತರವೂ, ಮೋಹಕವೂ ಆದ ಸಂಗೀತವನ್ನು—ಅದು ಹಿಂದಿನ ಸಂಗೀತದ ಮುಂದುವರಿಕೆಯೇ—ಹಾಡಲು ನಮ್ಮ ಬಳಿ ಬರುತ್ತಾನೆ. ಗೀತೆಯ ಉತ್ತರಭಾಗದಲ್ಲಿ—ಖಚಿತವಾಗಿ ಹೇಳುವುದಾದರೆ ಹದಿನೆಂಟನೆ ಅಧ್ಯಾಯದಲ್ಲಿ—ದೈವಾಂಶಸಂಭೂತನಾದ, ಅವತಾರಪುರುಷನಾದ ಶ್ರೀಕೃಷ್ಣನು ಮಾನವನಿಗೆ ಹೀಗೆ ಸೌಮ್ಯವಾಗಿ ಹೇಳುತ್ತಾನೆ : ಈಗ ನೀನು ನೈತಿಕಸತ್ತ್ವ ಬೆಳೆಸಿಕೊಂಡಿರುವುದರಿಂದ, ನಿಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡಿರುವುದರಿಂದ, ನಿನ್ನ ಮಾನವೀಕೃತ ವ್ಯಕ್ತಿತ್ವದ ಆಧಾರದ ಮೇಲೆ ಮತ್ತು ಸಮಾಜದ ಹಾಗೂ ಅದರ ಕ್ರಿಯೆಗಳಿಗೆ ಸಂಬಂಧಿಸಿದಂತೆ, ನಾನು ನಿನಗೆ ಪ್ರೀತಿಯಿಂದ ಉಸುರುವೆ : 'ಬೆಳೆಸಿಕೊಂಡ ಆ ಅಹಂ ಎಲ್ಲವನ್ನೂ ತೊರೆದು

ಎಲ್ಲರಲ್ಲೂ, ಪ್ರಕೃತಿಯಲ್ಲೆಲ್ಲ ಕಡೆಯೂ ಇರುವ ದಿವ್ಯಾತ್ಮನಾದ ನನಗೆ ಶರಣಾಗು !' ಆ ತ್ಯಾಗವು ಸಾಟಿ ಆದುದು. ಆ ಶರಣಾಗತಿಯೇ ಪರಮ ವಿಜಯ. ಏಕೆಂದರೆ, ಒಪ್ಪಿಸುವುದಕ್ಕೆ ಯೋಗ್ಯವಾದುದು ಸ್ವಲ್ಪವಾದರೂ ಇದೆ ; ಮತ್ತು ಆ ಶರಣಾಗತಿ ಮಾನವನಲ್ಲಿ ಮತ್ತು ಪ್ರಕೃತಿಯಲ್ಲೇ ಅತ್ಯುನ್ನತವಾದುದಕ್ಕೆ ಮತ್ತು ಅತ್ಯುತ್ತಮವಾದುದಕ್ಕೆ ; ಮರ್ತ್ಯವೂ ಸಾಂತವೂ ಆದುದರ ಹಿಂದಿನ ಅಮರ್ತ್ಯವೂ ಅನಂತವೂ ಆದ ಸತ್ಯಕ್ಕೆ. ಇದು ಗೀತೆಯ ಆ ಮಹಾನ್ ಶ್ಲೋಕದ ಸ್ಫೂರ್ತಿದಾಯಕ ಸಂಗೀತ ; ಇದನ್ನು ನಮ್ಮ ಭಕ್ತಿಸಂಪ್ರದಾಯವು ಚರಮಶ್ಲೋಕ ಎಂದು ಕರೆಯುತ್ತದೆ (೧೮.೬೬) :

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಲ್ಲಾ ಧರ್ಮಗಳನ್ನೂ (ನಿನ್ನ 'ಅಹಂ'ನಲ್ಲಿ ಕೇಂದ್ರಿತವಾಗಿರುವ ಕರ್ತವ್ಯಗಳು ಮತ್ತು ಜವಾಬ್ದಾರಿಗಳು) ತ್ಯಜಿಸಿ ನನ್ನನ್ನು ಮಾತ್ರ ಆಶ್ರಯಿಸು ; ನಾನು ಎಲ್ಲಾ ಪಾಪಗಳನ್ನೂ ತೊಳೆಯುತ್ತೇನೆ : ದುಃಖಿಸಬೇಡ.'

ಇದಕ್ಕೆ ಮುಂಚೆ ಶ್ರೀಕೃಷ್ಣ ಹೀಗೆ ಹೇಳಿದ್ದ (೧೮.೬೪ ಮತ್ತು ೬೫) :

ಸರ್ವಗುಹ್ಯತಮಂ ಭೂಯಃ
ಶೃಣು ಮೇ ಪರಮಂ ವಚಃ ।
ಇಷ್ಟೋಽಸಿ ಮೇ ದೃಢಮಿತಿ
ತತೋ ವಕ್ಷ್ಯಾಮಿ ತೇ ಹಿತಮ್ ॥

'ಆಧ್ಯಾತ್ಮಿಕ ಜೀವನದ ಗಹನತಮವಾದ ರಹಸ್ಯವನ್ನು ಉಪದೇಶಿಸುತ್ತಿರುವಾಗ ಮತ್ತೆ ನನ್ನ ಮಾತು ಕೇಳು ; ನೀನು ನನಗೆ ಅತ್ಯಂತ ಪ್ರಿಯನಾದವನು ; ಆದ್ದರಿಂದಲೇ ನಾನು ನಿನಗೆ ಒಳಿತಾಗುವುದನ್ನು ಹೇಳುತ್ತಿದ್ದೇನೆ.'

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು
ಮಾ ಮೇವೈಷ್ಯಸಿ ಸತ್ಯಂ ತೇ
ಪ್ರತಿಜಾನೇ ಪ್ರಿಯೋಽಸಿ ಮೇ

'ನಿನ್ನ ಮನಸ್ಸು ನನ್ನಲ್ಲಿ ಮುಳುಗಿರಲಿ, ನನ್ನ ಭಕ್ತನಾಗು, ನನಗೆ ಯಜ್ಞಯಾಗಾದಿಗಳನ್ನು ಮಾಡು, ನನಗೆ ನಮಸ್ಕಾರ ಮಾಡು ; ನೀನು ಖಂಡಿತವಾಗಿ ನನ್ನನ್ನು ಸೇರುತ್ತೀಯೆ, (ಏಕೆಂದರೆ) ನೀನು ನನಗೆ ಪ್ರಿಯನಾದವನು.'

ಇನ್ನೊಬ್ಬ ಅವತಾರಪುರುಷನಾದ ಏಸುಕ್ರಿಸ್ತ ಹೇಳಿದ್ದೂ ಇದನ್ನೇ (ಮ್ಯಾಥ್ಯು ೧೧.೨೮-೩೦) :

*ದುಡಿಯುವವರು, ಭಾರಹೊರುವವರು ಎಲ್ಲರೂ ನನ್ನ ಬಳಿ ಬನ್ನಿ, ನಾನು ನಿಮಗೆ ವಿಶ್ರಾಂತಿ ಕೊಡುವೆ. ನನ್ನ ನೊಗವನ್ನು (ಹೊರೆಯನ್ನು) ನೀವು ತೆಗೆದುಕೊಳ್ಳಿ ಮತ್ತು ನನ್ನ ಬಗ್ಗೆ ತಿಳಿದುಕೊಳ್ಳಿ ; ಏಕೆಂದರೆ ನಾನು ನಮ್ರ ಹೃದಯ ಮತ್ತು ವಿನೀತ ; ನಿಮ್ಮ ಆತ್ಮಗಳಿಗೆ ಶಾಂತಿ ಉಂಟಾಗುತ್ತದೆ. ಏಕೆಂದರೆ ನನ್ನ ನೊಗ (ಹೊರೆ) ಸುಲಭವೂ, ಹಗುರುವಾಗಿಯೂ ಇದೆ.*

ಅವತಾರಪುರುಷರು ಮಾತ್ರ ಬಳಸಬಹುದಾದ ಭಾಷೆ ಇದು, ಕೇವಲ ಸಂತನ ಮಾತಲ್ಲ ; 'ಪರಿಪೂರ್ಣನಾಗು', 'ನಿನ್ನ ಪಾಪಗಳನ್ನು ಕ್ಷಮಿಸಿದ್ದೇನೆ', 'ನನ್ನಲ್ಲಿ ಶರಣಾಗು'. ಈ ಆತ್ಮಶರಣಾಗತಿ ಮತ್ತು ನಿಜವಾದ ಆತ್ಮಶೋಧನೆ ಶುದ್ಧವಾದ ಧರ್ಮದ ಶಾಶ್ವತ ಸಂದೇಶ, ಮಾನವನ ಸುದೀರ್ಘ ಶೋಧನೆಯ ಮತ್ತು ವಿಕಾಸದ ಹೋರಾಟದ ಅಂತಿಮ ಪರಾಕಾಷ್ಠೆ.

ಒಬ್ಬನು ಶರಣಾಗುತ್ತಿರುವುದು ಯಾರಿಗೆ? ತನ್ನಂಥ ಇನ್ನೊಬ್ಬ ಜೀವಿಗೆ ಅಥವಾ ಸಂಸ್ಕೃತದಲ್ಲಿ ಹೇಳುವಂತೆ ಜಂತುವಿಗೆ—ಅವನು ಅಥವಾ ಅವಳು ಸಮಾಜದಲ್ಲಿ ಎಷ್ಟೇ ದೊಡ್ಡವರಿರಲಿ, ಬಲಶಾಲಿ ಯಾಗಿರಲಿ—ಅಲ್ಲ. ಅದು ಮೂರ್ಖತನ. ಅಂಥ ಯಾವುದೇ ಜಂತುವೂ ಪೂಜಿಸಲು ಅಥವಾ ಆತ್ಮಶರಣಾಗತಿಗೆ ಅರ್ಹವಲ್ಲ ಎಂದು ಹಿಂದೂ ಭಕ್ತಿಸಂಪ್ರದಾಯವು ಹೇಳುತ್ತದೆ. ಬ್ರಹ್ಮಸೂತ್ರಗಳ ಮೇಲೆ ಬರೆದಿರುವ ತಮ್ಮ ಶ್ರೀ ಭಾಷ್ಯದಲ್ಲಿ ಶ್ರೀ ರಾಮಾನುಜಾಚಾರ್ಯರು ಪ್ರಾಚೀನ ಆಚಾರ್ಯ ರೊಬ್ಬರ ಮಾತನ್ನು ಉದ್ಧರಿಸುತ್ತಾರೆ :

ಆಬ್ರಹ್ಮಸ್ತಂಬ ಪರ್ಯಂತಾಃ
ಜಗದಂತರ್ ವ್ಯವಸ್ಥಿತಾಃ
ಪ್ರಾಣಿನಃ ಕರ್ಮಜನಿತ
ಸಂಸಾರವಶವರ್ತಿನಃ
ಯತಸ್ತತೋ ನ ತೇ ಧ್ಯಾನೇ
ಧ್ಯಾನಿನಾಂ ಉಪಕಾರಕಾಃ
ಅವಿದ್ಯಾಂತರ್ಗತಾಸ್ಸರ್ವೇ
ತೇ ಹಿ ಸಂಸಾರಗೋಚರಾಃ

'ವಿಶ್ವದ ಸೃಷ್ಟಿಕರ್ತನಾದ ಬ್ರಹ್ಮನಿಂದ ಹಿಡಿದು ಈ ಜಗತ್ತಿನೊಳಗಿನ ಹುಲ್ಲಿನ ಕಂತೆಯವರೆಗೆ, ಈ ಜಗತ್ತಿನೊಳಗಿನ ಎಲ್ಲಾ ಜೀವಿಗಳೂ ಪರಿವರ್ತನಶೀಲವಾದವು ; ಕರ್ಮದಿಂದಾಗಿ ಜನನ ಮರಣಗಳಿಗೆ ವಶವಾಗು ವಂಥವು ; ಆದ್ದರಿಂದ ಧ್ಯಾನಿಗಳಿಗೆ ಅವು ಧ್ಯಾನಕ್ಕೆ ಅರ್ಹವಾದವಲ್ಲ. ಅವೆಲ್ಲ ಅವಿದ್ಯೆಯ ಜಾಲಕ್ಕೆ ಸಿಲುಕಿವೆ ; ಮತ್ತು ಸಂಸಾರದ ಮಿತಿಗೊಳಪಟ್ಟವು.'

ಉಪಾಸನ—ಧ್ಯಾನ ಅಥವಾ ಪೂಜೆ—ಎಂಬುದನ್ನು ವ್ಯಾಖ್ಯಾನಿಸುತ್ತ ರಾಮಾನುಜರು ಹೀಗೆ ಹೇಳುತ್ತಾರೆ (ಅದೇ I, ೧.೧) :

ಉಪಾಸನಂ ನಾಮ, ಯಥಾಶಾಸ್ತ್ರಂ ಉಪಾಸ್ಯಸ್ಯ ಅರ್ಥಸ್ಯ ವಿಷಯೀಕರಣೇನ ಸಾಮೀಪ್ಯಂ ಉಪಗಮ್ಯ, ತೈಲಧಾರಾವತ್, ಸಮಾನಪ್ರತ್ಯಯಪ್ರವಾಹೇನ, ದೀರ್ಘಕಾಲಂ ಯತ್ ಆಸನಂ, ತತ್ ಉಪಾಸನಂ ಆಚಕ್ಷತೇ—

ಉಪಾಸನೆ ಎಂದರೆ ಸಮೀಪದಲ್ಲಿ ದೀರ್ಘಕಾಲ ಕುಳಿತು ಶಾಸ್ತ್ರೋಕ್ತವಾಗಿ ಉಪಾಸನಾವಿಷಯ ವನ್ನು ಸತತವಾಗಿ ಮತ್ತು ದೀರ್ಘವಾಗಿ, ಏಕಪ್ರಕಾರವಾಗಿ ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಸುರಿಯುವ ತೈಲಧಾರೆಯಂತೆ ಸ್ಮರಿಸುವುದು ;

ಉಪನಿಷತ್ತಿನ ಈ ಕೆಳಕಂಡ ಮಂತ್ರದಲ್ಲಿ ಹೇಳಿರುವಂತೆ ಉಪಸನಾಯೋಗ್ಯವಾದ ವಿಷಯವೆಂದರೆ ದೇವರೊಬ್ಬನೇ ಮತ್ತು ಅವನ ದಿವ್ಯ ಅವತಾರಗಳು (ಶ್ವೇತಾಶ್ವತರೋಪನಿಷತ್ತು ೬.೧೮) :

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ।
ತಂ ಹ ದೇವಂ ಆತ್ಮಬುದ್ಧಿಪ್ರಕಾಶಂ
ಮುಮುಕ್ಷುರ್ ವೈ ಶರಣಮಹಂ ಪ್ರಪದ್ಯೇ ॥

'ಯಾರು (ಸೃಷ್ಟಿಯ) ಆರಂಭದಲ್ಲಿ ಸೃಷ್ಟಿಕರ್ತನಾದ ಬ್ರಹ್ಮನನ್ನು ಸೃಷ್ಟಿಸಿದನೋ, ಯಾರು ಮುಮುಕ್ಷುವಾದ ಅವನಿಗೆ ವೇದಗಳನ್ನು ಉಪದೇಶಿಸಿದನೋ, (ಅನಂತ) ಆತ್ಮವನ್ನು ಅರಿಯಲು ಬೆಳಕನ್ನು ನೀಡಿದ ಆ ದೇವನಿಗೆ ಶರಣಾಗುವೆ.'

## ೧೩. ಸ್ವಾವಲಂಬನೆಯಿಂದ ಶರಣಾಗತಿಗೆ ಸಾಗುವುದು

'ಸಕಲ ಧರ್ಮಗಳನ್ನೂ ತೊರೆದು ನನ್ನಲ್ಲಿ ಶರಣಾಗು'. 'ದುಡಿಯುವವರು, ಭಾರ ಹೊರುವವರು ಎಲ್ಲರೂ ನನ್ನ ಬಳಿ ಬನ್ನಿ' ಸಕಲ ಧರ್ಮಗಳನ್ನೂ ತೊರೆಯುವುದೇ ಅಂತಿಮ ಪರಾಕಾಷ್ಠೆಯಾದರೆ, ಸಕಲ ಧರ್ಮಗಳನ್ನೂ ಪೂರೈಸುವ ಪೂರ್ವಭಾಗದ ಒಂದು ಆವಶ್ಯಕತೆಯಿದೆಯೆಂದಾಯಿತು ; ಆ ಪೂರ್ವಭಾಗದ ದುಡಿಮೆ, ಆ ಪೂರ್ವಭಾಗದ ವಿಕಾಸದ ಹೋರಾಟ. ಶರಣಾಗತಿಯೆಂಬ ಉನ್ನತವಾದ ವಿಶ್ರಾಂತಿಯ ಆನಂದವನ್ನೂ ಲಾಭವನ್ನೂ ಪಡೆಯಬೇಕಾದರೆ ಇದು ಆವಶ್ಯಕ. ಆದ್ದರಿಂದ ಕಷ್ಟಪಟ್ಟು ದುಡಿಯಿರಿ ; ಎಲ್ಲ ಕರ್ತವ್ಯಗಳನ್ನೂ ನಿರ್ವಹಿಸಿ ; ನಿಮ್ಮನ್ನು ನೀವು ಬೆಳೆಸಿಕೊಳ್ಳಿ ; ಅನಂತರ ಬಂದು ಪರಮಪುರುಷನಿಗೆ ಶರಣಾಗಿ. ಇಡೀ ದಿವಸ ಪ್ರಾಮಾಣಿಕವಾಗಿ ದುಡಿಯಿರಿ ; ಅನಂತರ ಕುಳಿತು ಧ್ಯಾನ ಮಾಡಿ ; ತದನಂತರ ದೇವರಿಗೆ ಶರಣಾಗಿ, ಒಪ್ಪಿಸಿಕೊಳ್ಳಿ. ಇಲ್ಲದಿದ್ದರೆ ಆ ಧ್ಯಾನಕ್ಕೆ ಯಾವುದೇ ಅರ್ಥವಾಗಲಿ ಬೆಲೆಯಾಗಲಿ ಇಲ್ಲ. ಆದರೆ ಅಂತಿಮವಾಗಿ ಅದಕ್ಕೆ ಒಳ್ಳೆಯ ಕೆಲಸಗಳನ್ನೂ, ಸತ್ಕಾರ್ಯಗಳನ್ನೂ ಮಾಡಿದ ನಂತರ ಅರ್ಥವಿದೆ ಮತ್ತು ಪ್ರತಿಫಲ ನೀಡುವಂಥದು. ನಾನು ಅನೇಕ ವೇಳೆ ಹೇಳುವಂತೆ, ರಜೆ ಅಥವಾ ಏಕಾಂತವಾಸವು ಇಡೀ ತಿಂಗಳು ಅಥವಾ ಇಡೀ ವರ್ಷ ಕಷ್ಟಪಟ್ಟು ಪ್ರಾಮಾಣಿಕವಾಗಿ ದುಡಿದ ಮೇಲೆ ಅರ್ಥಪೂರ್ಣವಾಗಿರುತ್ತದೆ ; ಆದರೆ ಕೆಲಸವಿಲ್ಲದವರಿಗೆ ನಿರುದ್ಯೋಗಿಗಳಿಗೆ ಇಂಥ ರಜೆಗೆ ಅಥವಾ ಏಕಾಂತವಾಸಕ್ಕೆ ಅರ್ಥವೇ ಇಲ್ಲ.

ಆದ್ದರಿಂದ ಮಾನವನ ಸೇವೆಗಾಗಿ ತಮ್ಮ ಶಕ್ತಿಸಾಮರ್ಥ್ಯಗಳನ್ನು ಬಳಸುವ ಸ್ತ್ರೀಪುರುಷರು, ಮತ್ತು ಕೋಳಿಮರಿಯಂತೆ ತಮ್ಮ ಅಂದಿನವರೆಗಿನ ವ್ಯಕ್ತಿತ್ವದ ರಕ್ಷಣಾಕವಚವು ತಮ್ಮನ್ನು ಉಸಿರುಕಟ್ಟಿಸಿ ಪೂರ್ಣವಿಕಾಸವನ್ನು ತಡೆಯುತ್ತದೆಂದು ಭಾವಿಸುವವರೋ ಅವರಿಗೆ ಪರಿಶುದ್ಧ ಧರ್ಮದ ಅಲೌಕಿಕ ಪ್ರೇರಣೆ ಮತ್ತು ದೃಷ್ಟಿ—ಅದೆಂದರೆ ಶರಣಾಗತಿಯಲ್ಲಿ ಸಂಪೂರ್ಣ ಸ್ವಾರ್ಥರಹಿತತೆ—ಬರುತ್ತದೆ ; ಮತ್ತು ಪುರುಷತ್ವವು ಸಂತತವಾಗಿ ಅರಳುತ್ತದೆ.

ಆದರೆ, 'ಅಲೌಕಿಕ'ವೆಂಬ ಭಾವನೆಗೆ ಮೂಲಧಾರವಾದುದು ಒಂದು ಇರಬೇಕೆಂಬುದನ್ನು ಸೂಚಿಸುತ್ತದೆ. ಆ ಮೂಲಾಧಾರ ಯಾವುದು ? ಅದನ್ನೇ ಶ್ರೀಕೃಷ್ಣ ಪೌರುಷ ಎಂದು ಕರೆಯುವುದು. ಇದರಲ್ಲಿ ಮಾನವನ ಎರಡು ಬೆಳವಣಿಗೆಗಳಿವೆ : ಅಲ್ಪ ಆತ್ಮ—ಎಂದರೆ ಅಹಂಕಾರಕೇಂದ್ರಿತವಾದ ಅಪಕ್ವ ವ್ಯಕ್ತಿತ್ವ ಮತ್ತು ಮಹಾ ಆತ್ಮ ಎಂದರೆ ಪಕ್ವವಾದ ಅಹಂಕಾರವುಳ್ಳ ನೈತಿಕ ಸಂಸ್ಕಾರವುಳ್ಳ ವ್ಯಕ್ತಿತ್ವ. ನಾವು ಸಂಸ್ಕೃತದಲ್ಲಿ ಅವನ್ನು ವ್ಯಕ್ತಿತ್ವ ಮತ್ತು ವಿಕಸಿತ ವ್ಯಕ್ತಿತ್ವ ಎಂದು ಹೇಳುತ್ತೇವೆ. ಮೊದಲನೆಯದರಲ್ಲಿ ವೈಯಕ್ತಿಕ ವ್ಯಕ್ತಿತ್ವ ಮತ್ತು ಸ್ವಾತಂತ್ರ್ಯವೂ, ಎರಡನೆಯದರಲ್ಲಿ ಸಾಮಾಜಿಕ ಮತ್ತು ಮಾನವ ಜವಾಬ್ದಾರಿಯ ಮಟ್ಟಕ್ಕೆ ಏಳುವ ಸ್ವಾತಂತ್ರ್ಯ ಸಾಧನೆಯೂ ಇವೆ.

ಒಬ್ಬನು ಎಲ್ಲವನ್ನೂ ಪರಮಾತ್ಮನಿಗೆ ಒಪ್ಪಿಸಿದಾಗ, ಅವನು ಸಂತನಾಗುತ್ತಾನೆ. ಯಾರ ಹೃದಯದಲ್ಲಿ ಪರಮಾತ್ಮನು ವ್ಯಕ್ತವಾಗಿ ಪರಮಾತ್ಮನೇ ತುಂಬಿರುತ್ತಾನೋ ಅವನೇ ಸಂತ ಸರಿಯಾಗಿ ಅರ್ಥಮಾಡಿಕೊಂಡರೆ, ಅದೇ ಮಾನವಜೀವನದ ಸಾರ್ಥಕ್ಯ, ಪರಾಕಾಷ್ಠೆ. ಕೆಲವು ಶ್ರೇಷ್ಠ ಸಂತರು ತಮ್ಮೆಲ್ಲವನ್ನೂ, ತಮ್ಮನ್ನೂ ಭಗವಂತನಿಗೆ ಸಮರ್ಪಿಸಿಕೊಂಡಿದ್ದಾರೆ. ಸಂತ ಪಾಲನು 'ನಾನು, ಆದರೂ ನಾನಲ್ಲ, ಕ್ರಿಸ್ತನು ನನ್ನೊಳಗೆ ಇದ್ದಾನೆ' ಎಂದು ಹೇಳಿದನು. ಅದೇ ರೀತಿ, ಭಾಗವತೋತ್ತಮರು ಭಾರತದಲ್ಲಿ ನಾರದ ಭಕ್ತಿಸೂತ್ರಗಳು ಹೇಳುವಂತೆ ಸದಾ ಈ ಅಕಿಂಚನಭಾವವನ್ನೂ, ತದೀಯತೆಯನ್ನು (ಅವನಿಗೆ ಸೇರಿದವರು) ಪ್ರಕಟಿಸಿದರು. ಅದೇ ಶರಣಾಗತಿ. ಇದೆಂಥ ಅದ್ಭುತವಾದ ಶರಣಾಗತಿ ! ಶಕ್ತಿಯ ಸಮರ್ಪಣ, ಪೂರ್ಣತೆಯ ಸಮರ್ಪಣ, ನಿಜವಾದ ವಿಜಯವನ್ನು ತೋರಿಸುವ ಸಮರ್ಪಣ ! ಆಧ್ಯಾತ್ಮಿಕ ಜೀವನದ ಸಂಗೀತ ಕಚೇರಿಯಲ್ಲಿ ಅದೇ ಶ್ರೇಷ್ಠವಾದ ಸಂಗೀತ ; ಅದು ಶಕ್ತಿಯನ್ನೂ ಚೈತನ್ಯವನ್ನೂ ಕೊಡುತ್ತದೆ, ಅದರಲ್ಲಿ ವೀರೋಚಿತ ಛಾಯೆ ಇದೆ. ಯಾವನು ಅದನ್ನು ಮಾಡುತ್ತಾನೋ ಅವನೇ—ಸಂಸ್ಕೃತದಲ್ಲಿ ಹೇಳುವಂತೆ—ಧೀರ.

ಜೀವನವನ್ನು ಸಾಗಿಸಲು ನಮಗೆ ಶಕ್ತಿ ಬೇಕಾದರೆ, ಜೀವನವನ್ನು ತ್ಯಾಗ ಮಾಡಲು ಹೆಚ್ಚಿನ ಶಕ್ತಿ ಬೇಕು. ಐಶ್ವರ್ಯ ಸಂಪಾದಿಸಲು ಶಕ್ತಿ ಬೇಕಾದರೆ ಐಶ್ವರ್ಯವನ್ನು ತ್ಯಾಗ ಮಾಡಲು ಹೆಚ್ಚಿನ ಶಕ್ತಿ ಬೇಕು. ಆದ್ದರಿಂದಲೇ ಮಾನವನಿಗೆ ನೈತಿಕ ಶಕ್ತಿ ಬಂದಾಗ ಮಾತ್ರ ದೈವಾನುಗ್ರಹ, ಶರಣಾಗತಿ, ಭಗವಂತನಿಗೆ ಎಲ್ಲವನ್ನೂ ಸಮರ್ಪಿಸುವುದು ಆಧ್ಯಾತ್ಮಿಕ ಜೀವನದಲ್ಲಿ ಬರುತ್ತವೆ. ಇದು ಬಾಹು ಬಲವಲ್ಲ, ಬುದ್ಧಿಬಲವಲ್ಲ ; ಅಥವಾ ಯಾವುದೇ ಪ್ರಾಪಂಚಿಕ ಸಂಕಲ್ಪಶಕ್ತಿಯಲ್ಲ. ಆದರೆ ಇದು ಯೋಗಬಲ—ಆಧ್ಯಾತ್ಮಿಕ ಶಕ್ತಿ—ಎಂಬ ಸೂಕ್ಷ್ಮತಮವಾದ ಶಕ್ತಿ. ಇದು ಸ್ತ್ರೀಪುರುಷರ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ—ಅವರ ಸಾಮಾಜಿಕ ಮಟ್ಟ, ಆರ್ಥಿಕಮಟ್ಟ ಯಾವುದೂ ಲೆಕ್ಕಕ್ಕೆ ಬರುವುದಿಲ್ಲ—ತಂತಾನೆ ಕಾಣಿಸಿಕೊಳ್ಳುತ್ತದೆ. ಒಬ್ಬನು ಆ ಬಲವನ್ನು ಮೈಗೂಡಿಸಿಕೊಂಡಾಗ ಮಾತ್ರ, ಅವನು ಅಥವಾ ಅವಳು ಮಗುವಿನಂತೆ ನಿಜವಾದ ಸ್ವಾತಂತ್ರ್ಯದ, ವ್ಯಕ್ತಿತ್ವ ಸ್ವಾತಂತ್ರ್ಯದ ಬೆಲೆಯನ್ನು ಆತ್ಮನನ್ನು ಖಾಲಿಮಾಡಿ ಪರಮಾತ್ಮನನ್ನು ತುಂಬುವುದರಿಂದ ಉಂಟಾಗುವ ನಿಜವಾದ ವಿಶ್ರಾಂತಿಯನ್ನು ಹೊಂದುತ್ತಾನೆ/ಳೆ.

### ೧೪. ನಿಜವಾದ ಶರಣಾಗತಿ : ಎರಡು ಮಹೋನ್ನತ ನಿದರ್ಶನಗಳು

ದುರ್ಬಲರು 'ನಾನು ದೇವರಿಗೆ ಶರಣಾಗುತ್ತೇನೆ, ನಾನೇನೂ ಅಲ್ಲ, ಅಗಣ್ಯ' ಎಂದು ಹೇಳಿದಾಗ, ಈ ಮಾತುಗಳು ನಿಜವೆನಿಸುವುದಿಲ್ಲ ; ಶಿಸ್ತಿಗೊಳಪಡಿಸದ, ಸಂಸ್ಕರಿಸದ, ಅಹಂಕಾರ ಅವರ ಮಾತುಗಳ ಮತ್ತು ವರ್ತನೆಯ ಹಿಂದೆ (ಎದ್ದು) ಕಾಣುತ್ತದೆ. ಅವರ ವಿನಯ ಒಂದು ನಟನೆ, ಸೋಗು. ಭಾರತದಲ್ಲಿ ಧಾರ್ಮಿಕತೆಯ ನೆಪದಲ್ಲಿ ಅಂಥ ಸೋಗಿನ ವಿನಯವನ್ನು ನಾವು ಬೇಕಾದಷ್ಟು ನೋಡುತ್ತೇವೆ. ಆ ಶರಣಾಗತಿಯಲ್ಲಿ ಸಾಚಾತನ ಇಲ್ಲ. ಆದರೆ ರಾಮಾಯಣದ ಹನುಮಂತನಂಥ ಭಕ್ತನು 'ನಾನು ಎಲ್ಲವನ್ನೂ ರಾಮನಿಗೆ ಒಪ್ಪಿಸಿದ್ದೇನೆ, ಅವನನ್ನು ನನ್ನ ಹೃದಯದಲ್ಲಿ ಸ್ಥಾಪಿಸಿದ್ದೇನೆ, ನಾನು ಅವನ ಬಂಟ ಅಷ್ಟೆ' ಎಂದು ಹೇಳಿದರೆ ಈ ಮಾತುಗಳು ನೈಜವಾದವು ; ಏಕೆಂದರೆ ಅವನು ಶಕ್ತಿವಂತನೂ, ನಿರ್ಭಯನೂ, ಅತಿ ಬುದ್ಧಿವಂತನೂ, ಸಮರ್ಥನೂ ಆಗಿದ್ದನು. ರಾಮನಾಮ ಮಂತ್ರಗಳಲ್ಲಿ ಅವನನ್ನು ಬುದ್ಧಿಮತಾಂ ವರಿಷ್ಠಂ—'ಬುದ್ಧಿವಂತರಲ್ಲೆಲ್ಲಾ ಅತಿ ಬುದ್ಧಿವಂತ'—ಎಂದು ಕರೆಯಲಾಗಿದೆ.

ನಮ್ಮದೇ ಕಾಲದಲ್ಲಿ ಪೂರ್ವ ಮತ್ತು ಪಶ್ಚಿಮ ದೇಶಗಳಲ್ಲಿ, ಅತ್ಯುತ್ತಮ ಸಾಧನೆಗಳನ್ನು ಮಾಡಿ, ಉಜ್ಜ್ವಲವಾದ ಜೀವನ ನಡೆಸಿದ ನಂತರ, ಹತ್ತುವರ್ಷಗಳ ಹ್ರಸ್ವವಾದ, ಆದರೆ ಪ್ರಚಂಡವಾದ ಜೀವನ ನಡೆಸಿದ ನಂತರ ಒಬ್ಬ ಸ್ವಾಮಿ ವಿವೇಕಾನಂದರು ಹೀಗೆ ಹೇಳಬಹುದು : 'ನಾನು ಎಲ್ಲವನ್ನೂ ಶ್ರೀರಾಮಕೃಷ್ಣರಿಗೆ ಒಪ್ಪಿಸುತ್ತೇನೆ'. ವಾಸ್ತವವಾಗಿ, ಅಮೆರಿಕ ಮತ್ತು ಭಾರತಗಳಲ್ಲಿ ಮಾಡಿದ ಅವರ ಉಪನ್ಯಾಸಗಳಲ್ಲಿ, ಹನುಮಂತನ ಬಗೆಯ ಶರಣಾಗತಿಯನ್ನು ವ್ಯಕ್ತಪಡಿಸುವ ಅದ್ಭುತ ಭಾಗಗಳು ಇವೆ. 'Sages of India' ಎಂಬ ಮದ್ರಾಸಿನಲ್ಲಿ ಮಾಡಿದ ಅವರ ಪ್ರಸಿದ್ಧವಾದ ಉಪನ್ಯಾಸದ ಕೊನೆಯಲ್ಲಿ, ಎಂಟನೆ ಶತಮಾನದ ಶ್ರೀಶಂಕರರ ಮತ್ತು ೧೫ನೇ ಶತಮಾನದ ಚೈತನ್ಯರ ಜೀವನಸಾಧನೆಗಳನ್ನು ಹೇಳಿದ ನಂತರ, ಅವರು ತಮ್ಮ ಸ್ವಂತ ಗುರುವಾದ ಶ್ರೀರಾಮಕೃಷ್ಣರ ಬಗೆಗೆ ಪ್ರಸ್ತಾಪಿಸಿ ಮುಗಿಸುತ್ತಾರೆ. ಇದು ಮನಸ್ಸನ್ನು ನಾಟುವಂತಿದೆ (Complete Works, ಸಂ. III. ಪು. ೨೬೭-೬೮, ೧೯೬೦ನೆ ಆವೃತ್ತಿ) :

*ಈಗ ಸಹೋದರರರೆ, ಯಾರು ಇದರಲ್ಲಿ ವಿಧಾತನ ಕೈಯನ್ನು ನೋಡಲಾರರೋ ಅವರು ಕುರುಡರು, ಹುಟ್ಟು ಕುರುಡರು. ಮುಂದೆ ಸಮಯ ದೊರೆತರೆ, ಅವಕಾಶ ದೊರೆತರೆ ಅವರ ವಿಷಯವನ್ನು ನಿಮಗೆ ವಿಸ್ತಾರವಾಗಿ ತಿಳಿಸುವೆನು. ಸದ್ಯಕ್ಕೆ ಇಷ್ಟನ್ನು ಮಾತ್ರ ಹೇಳುತ್ತೇನೆ*

ನಾನೇನಾದರೂ ಒಂದು ಸತ್ಯವಾಕ್ಯವನ್ನು ಆಡಿದ್ದರೆ ಅದೆಲ್ಲಾ ಅವರುಗಳ ವಾಕ್ಯ. ಯಾವುದು ಅಸತ್ಯವಾಗಿರುವುದೋ, ಭ್ರಮೆಯಿಂದ ಕೂಡಿರುವುದೋ ಅಥವಾ ಮಾನವಕುಲಕ್ಕೆ ಹಿತಕರವಲ್ಲವೋ ಅದೆಲ್ಲ ನನ್ನದು. ಅದರ ಜವಾಬ್ದಾರಿ ನನ್ನದು.

೧೫. ಸ್ವಾವಲಂಬನೆಯ ಶಕ್ತಿ ಮತ್ತು ಶರಣಾಗತಿಯ ಪರಮಶಕ್ತಿ

ಸ್ವಾಮಿ ವಿವೇಕಾನಂದರು ಶರಣಾಗತಿ ಮತ್ತು ಸಂತತನದ ತತ್ತ್ವವನ್ನು ಸ್ವಾವಲಂಬನೆ ಮತ್ತು ಪೌರುಷಗಳ ಪರಾಕಾಷ್ಠೆಯೆಂದು ಹೇಳಿ ಅದನ್ನು ಹಾಸ್ಯಮಯವಾಗಿ ಹೀಗೆ ಹೇಳಿದ್ದಾರೆ :

ಮುಸಲ್ಮಾನರು ಪ್ರತಿವರ್ಷ ಒಂದು ಪವಿತ್ರವಾದ ಹಬ್ಬವನ್ನು ಆಚರಿಸುತ್ತಾರೆ ; ಸಾಮಾನ್ಯವಾಗಿ ಆ ಸಂದರ್ಭದಲ್ಲಿ ಅವರು ಒಂದು ಮೇಕೆಯನ್ನು ಬಲಿಗೊಡುತ್ತಾರೆ. ಆದ್ದರಿಂದ ಮುಸಲ್ಮಾನರು ಬಲಿಗೊಡುವಾಗ ತಮಗೆ ಹೆಚ್ಚು ಮಾಂಸ ಸಿಕ್ಕಲಿ ಎಂದು ಒಂದು ತಿಂಗಳ ಮೊದಲೇ ಒಂದು ಮೇಕೆ ಕೊಂಡು ಅದಕ್ಕೆ ಚೆನ್ನಾಗಿ ತಿನ್ನಿಸಿ ಕೊಬ್ಬಿಸುತ್ತಾರೆ.

ಆಧ್ಯಾತ್ಮಿಕ ಜೀವನವಿಧಾನವೂ ಅದೇ ರೀತಿ ಎಂದು ಅವರು ಹೇಳಿದರು. ಮೊದಲು ಬಲಶಾಲಿಗಳಾಗಿ, ನಿಮ್ಮನ್ನು ನೀವು ಸಮರ್ಥಿಸಿಕೊಳ್ಳಿ, ಅನಂತರ ನಿಮ್ಮನ್ನು ನೀವು ತ್ಯಾಗ ಮಾಡಿ ; ಮಹಾಶಕ್ತಿಯಿಂದ ಸ್ವಾರ್ಥತ್ಯಾಗ ಮಾಡಿ, ದೇವರಿಗೆ ಶರಣಾಗಿ. ಅದು ಸರಿಯಾದ ಮನೋಭಾವ ಮತ್ತು ವಿಧಾನ. ಮೊದಲು ಪೌರುಷ, ಅನಂತರ ಸಂತತನ ಅಥವಾ ದೈವಭಕ್ತಿ. ನಿಮ್ಮ ಸಂತತ್ವವನ್ನು ನೀವು ಪೌರುಷತ್ವದ ಮೇಲೆ ಕಟ್ಟಿ ; ಅದು ಬಲವಾದ ಸಂತತ್ವವಾಗುತ್ತದೆ. ಆದ್ದರಿಂದ ಕಷ್ಟಪಟ್ಟು ದುಡಿಯಿರಿ ; ನಿಮ್ಮ ವೈಯಕ್ತಿಕತೆಯನ್ನು ಬೆಳೆಸಿಕೊಳ್ಳಿ ; ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಿ, ಅನಂತರ ನೀವು ಬಲಶಾಲಿಯಾಗಿ ಆಧ್ಯಾತ್ಮಿಕವಾಗಿ ಪಕ್ವ ಮಾನವರಾದಾಗ ಹೆಚ್ಚಿನ ಧೈರ್ಯ ಮತ್ತು ಹೆಚ್ಚಿನ ಶಕ್ತಿ ಬರುವುದನ್ನು ನೀವು ನೋಡುವಿರಿ. ಇದು 'ನಾನಲ್ಲ, ನೀನು ; ಎಲ್ಲಾ ನಿನ್ನದೇ' ಎಂಬ ಅನುಭವವಾಗುತ್ತದೆ.

ಗೀತೆಯ ಕೊನೆಯ, ಅಂದರೆ ಹದಿನೆಂಟನೆಯ ಅಧ್ಯಾಯದ ಶ್ರೀಕೃಷ್ಣನ ಶರಣಾಗತಿಯ ಮತ್ತು ದೈವಾನುಗ್ರಹದ ಪೂರ್ಣ ಸಂದೇಶದ ಅರ್ಥ ಇದೇ. ಇದು ಧರ್ಮದ ಅಂತಿಮ ಸಂದೇಶ, ಅವನ ಜೀವನದರ್ಶನದ ಸಂದೇಶ. ಹಿಂದೆಯಾದರೋ ಅವನು 'ಬಲವಾಗಿರು ; ನಿನ್ನಲ್ಲಿ ನಂಬಿಕೆಯಿಟ್ಟುಕೊ ; ನಿನ್ನ ಸಮಸ್ಯೆಗಳನ್ನು ಧೀರನಾಗಿ ಎದುರಿಸು.' ೧೧ನೇ ಅಧ್ಯಾಯದಲ್ಲಿ ೩೩ನೇ ಶ್ಲೋಕದಲ್ಲಿ ಅರ್ಜುನನಿಗೆ ತನ್ನ ವಿಶ್ವರೂಪದರ್ಶನ ಮಾಡಿಸಿ ಹೇಳುತ್ತಾನೆ :

ತಸ್ಮಾತ್ ತ್ವಂ ಉತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ ಭುಂಕ್ಷ್ವರಾಜ್ಯಂ ಸಮೃದ್ಧಂ

ಆದ್ದರಿಂದ ನೀನು ಎಲ್ಲಾ ಬಗೆಯ ವಿಷಣ್ಣತೆ ಮತ್ತು ದೌರ್ಬಲ್ಯಗಳನ್ನು ಬಿಟ್ಟು ಏಳು, (ಪೌರುಷದ) ಯಶಸ್ಸನ್ನು ಗಳಿಸು, ಶತ್ರುಗಳನ್ನು ಗೆದ್ದು (ಅಡೆತಡೆಗಳನ್ನು ಹೋಗಲಾಡಿಸಿ), ಸಮೃದ್ಧ ರಾಜ್ಯವನ್ನು ಅನುಭವಿಸು.'

ಅದಕ್ಕೆ ಮುಂಚೆ, ಏಳನೆ ಅಧ್ಯಾಯದ ೧೪ನೆ ಶ್ಲೋಕದಲ್ಲಿ, ಶ್ರೀಕೃಷ್ಣನು ಆಶಾಭಾವನೆ ಮತ್ತು ಭರವಸೆಗಳ ಸಂದೇಶ ಕೊಡುತ್ತಾ ದೈವಾನುಗ್ರಹದ ಮೊದಲ ಪ್ರಬಲ ಧ್ವನಿಯನ್ನು ಕೊಡುತ್ತಾನೆ. ಮಾನವನು ದೇಹಾತ್ಮವಾದದ ಭ್ರಮೆಯಲ್ಲಿ ಸಿಲುಕಿ, ಆ ಭ್ರಮೆಯಲ್ಲಿ ಸಣ್ಣತನದಲ್ಲಿ ವರ್ತಿಸಿ, ದುಃಖವನ್ನು ಅನುಭವಿಸುತ್ತಾ ಅದನ್ನೇ ಸಮಾಜದಲ್ಲಿ ಎಲ್ಲೆಡೆ ಹರಡುತ್ತಿದ್ದಾನೆ. ಇದೇ ಮಾಯೆ. ಇದು ಅವನ ನಿಜಸ್ವರೂಪವನ್ನು ಮತ್ತು ಮಾಯೆಯ ಪ್ರಭಾವವಾದ ಭಗವಂತನೊಡನೆ ಮತ್ತು ಇತರ ಜೀವಿಗಳೊಡನೆ ತನ್ನ ಆತ್ಮೀಯ ಸಂಬಂಧವನ್ನು ಮರೆಯುವಂತೆ ಮಾಡುತ್ತದೆ.

ದೈವಾನುಗ್ರಹವೇ ಈ ಮಾಯೆಯಿಂದ ಬಿಡುಗಡೆ ಮಾಡಿ ಅವನನ್ನು ಮತ್ತೆ ಭಗವಂತನೊಡನೆ ಸೇರಿಸುತ್ತದೆ (ಗೀತೆ ೭.೧೪) :

ದೈವೀ ಹ್ಯೇಷಾ ಗುಣಮಯೀ
ಮಮ ಮಾಯಾ ದುರತ್ಯಯಾ
ಮಾಮೇವ ಯೇ ಪ್ರಪದ್ಯಂತೇ
ಮಾಯಾಂ ಏತಾಂ ತರಂತಿ ತೇ

'ಸತ್ತ್ವ, ರಜಸ್, ತಮೋಗುಣಗಳೆಂಬ ತ್ರಿಗುಣಗಳಿಂದ ಆದ ಈ ದೈವೀ ಮಾಯೆಯನ್ನು ದಾಟುವುದು ಕಷ್ಟ ; ನನ್ನಲ್ಲಿ ಆಶ್ರಯ ಪಡೆಯುವವರು ಮಾಯೆಯನ್ನು ದಾಟಬಹುದು.'

ಆದರೆ ಈಗ, ಕೊನೆಯಲ್ಲಿ, ಅವನು ಬೇರೆ ರಾಗ ಹಾಡುತ್ತಿದ್ದಾನೆ ಮತ್ತು ನಾವು ನೋಡಿದಂತೆ ಮೊದಲ ರಾಗವೇ ಕೊನೆಯ ರಾಗ ಎಂದು ಹೇಳುತ್ತಿದ್ದಾನೆ : 'ನಾನು ನಿನಗೆ ಗಹನತಮವಾದ ರಹಸ್ಯವನ್ನು ಹೇಳುತ್ತೇನೆ. ಈ ಪೌರುಷವನ್ನೆಲ್ಲಾ ಸಾಧಿಸಿದ ಮೇಲೆ, ನನ್ನ ಅಹಂಕಾರವೂ ಸೇರಿದಂತೆ, ಪ್ರತಿಯೊಂದೂ ಭಗವಂತನಿಗೆ ಸೇರಿದ್ದು, ನಾನು, ನನ್ನದು ಎಂಬ ಯಾವುದೂ ಇಲ್ಲ ಎಂದು ನಿನಗೆ ನೀನೇ ಹೇಳಿಕೊ, ಮತ್ತು ಅದನ್ನು ಅನುಭವಿಸು.'

ಇದು ರಾಜೋಚಿತವಾದ ಶರಣಾಗತಿ. ಸೈನಿಕನೊಬ್ಬ ದುರ್ಬಲನೂ ಪುಕ್ಕಲನೂ ಆಗಿದ್ದರೆ, ಮೊದಲನೆ ಯುದ್ಧದಲ್ಲೇ ಅವನು ಎಲ್ಲವನ್ನೂ ಒಪ್ಪಿಸಿಬಿಡುತ್ತಾನೆ, ಮತ್ತು ಶತ್ರುಸೇನೆಗೆ ಸೆರೆಯಾಳಾಗುತ್ತಾನೆ. ಅದರಲ್ಲಿ ಯಾವ ಗುಣವೂ ಇಲ್ಲ. ಬಲವಾದ ಪ್ರತಿರೋಧ ತೋರಿಸು, ನಿನ್ನ ಬಲ ತೋರಿಸು, ಅನಂತರ ಪರಿಸ್ಥಿತಿ ಒತ್ತಾಯಿಸಿದರೆ ಶರಣಾಗು. ಆಗ ಜಗತ್ತು ನಿನ್ನನ್ನು ಗೌರವಿಸುತ್ತದೆ. ನಾವು ಗ್ರೀಕ್ ಚರಿತ್ರೆಯಲ್ಲಿ ಗ್ರೀಸ್‌ಗೂ ಪ್ರಾಚೀನ ಭಾರತಕ್ಕೂ ಇದ್ದ ಸಂಬಂಧವನ್ನು ಓದಿದಾಗ, ನಮಗೆ ಗೊತ್ತಾಗುವ ಅಂಶವಿದು : ಅಲೆಕ್ಸಾಂಡರನು ಭಾರತದ ವಾಯವ್ಯ ಭಾಗಕ್ಕೆ ದಂಡೆತ್ತಿ ಬಂದಾಗ, ಆ ಕಾಲದ ಪಂಜಾಬಿನ ರಾಜನಾದ ಪೋರಸ್ ಅಥವಾ ಪೌರವನು ಜೀಲಮ್ ಮತ್ತು ಚೆನಾಬ್ ನದಿಗಳ ನಡುವಣ ಪ್ರದೇಶವನ್ನು ಆಳುತ್ತಿದ್ದನು. ಅವನು ಸರ್ವವಿಜಯಿಯಾದ ಚಕ್ರವರ್ತಿಯ ವಿರುದ್ಧ ಧೈರ್ಯವಾಗಿ ಹೋರಾಡಿದನು. ಆದರೆ ಅವನು ಸೋತುಹೋದನು, ಏಕೆಂದರೆ ಅಲೆಕ್ಸಾಂಡರನ ತಂತ್ರಗಳು ಹೆಚ್ಚು ಪರಿಣಾಮಕಾರಿಯಾಗಿದ್ದವು. ಅವನನ್ನು ಸೆರೆಯಾಳಾಗಿ ಮಾಡಿ ಅಲೆಕ್ಸಾಂಡರನ ಮುಂದೆ ನಿಲ್ಲಿಸಿದರು. ಕೆಲವು ಮಾತುಗಳ ವಿನಿಮಯವಾದ ನಂತರ, ಅಲೆಕ್ಸಾಂಡರನು 'ಈಗ, ನಾನು ನಿನ್ನನ್ನು ಹೇಗೆ ನೋಡಿಕೊಳ್ಳಬೇಕೆಂದು ಅಪೇಕ್ಷಿಸುವೆ' ಎಂದು ಅವನನ್ನು ಕೇಳಿದಾಗ ಅವನು ಗಂಭೀರವಾಗಿ ಹೀಗೆಂದನು : 'ರಾಜ ಇನ್ನೊಬ್ಬ ರಾಜನನ್ನು ನೋಡಿಕೊಳ್ಳುವಂತೆ ನೋಡಿಕೊಳ್ಳಿ'. ಅಲೆಕ್ಸಾಂಡರನು ಈ ಮಾತಿನಿಂದ ಪ್ರಭಾವಿತನಾಗಿ ಅವನನ್ನು ತುಂಬ ಗೌರವಾದರಗಳಿಂದ ನೋಡಿಕೊಂಡನು.

ದಿನನಿತ್ಯದ ಮಾನವ ಜೀವನದಲ್ಲಿನಂತೆ, ಧಾರ್ಮಿಕ ಜೀವನದಲ್ಲೂ ಭಗವಂತನು ತನ್ನ ಶಕ್ತ್ಯನುಸಾರ ಒಂದೇ ಸಮನೆ ಕಷ್ಟಪಟ್ಟು ದುಡಿದು ಅನಂತರ ಹೆಚ್ಚಿನ ಶಕ್ತಿಯನ್ನು ಕೋರಿ ಅದೆಲ್ಲವನ್ನೂ ಆ ಪರಮಾತ್ಮನಿಗೇ ಒಪ್ಪಿಸುವ ಆತ್ಮನನ್ನು ಗೌರವಿಸುತ್ತಾನೆ. ಅಂಥ ಶರಣಾಗತಿ ಎಷ್ಟು ಪುಣ್ಯಕರ ; ಅಂಥ ಶರಣಾಗತಿ ಎಷ್ಟು ಕಠೋರವಾದದ್ದು ! ಠಾಕುರರ ಗೀತಾಂಜಲಿಯಲ್ಲಿ (ಹಾಡು ೩೬) ಒಂದು ಪ್ರಸಿದ್ಧವಾದ ಹಾಡಿದೆ :

ನನಗೆ ಶಕ್ತಿ ನೀಡಯ್ಯ
ನನ್ನ ಕೆಲಸಗಳನ್ನೂ ದುಃಖಗಳನ್ನೂ ತಡೆಯುವಂಥ ಶಕ್ತಿ ನೀಡಯ್ಯ
ನನಗೆ ಶಕ್ತಿ ನೀಡಯ್ಯ

ನನ್ನ ಪ್ರೇಮ ಫಲಪ್ರದವಾಗಿ ಮಾಡಯ್ಯ
ನನಗೆ ಶಕ್ತಿ ನೀಡಯ್ಯ, ಬಡಬಗ್ಗರನ್ನು ಕೈಬಿಡದಂಥ
ಇಲ್ಲವೆ ಸೊಕ್ಕಿನ ಶಕ್ತಿಯೆದುರು ಕಾಲಿಗೆರಗದಂತೆ ಮಾಡಯ್ಯ
ನನಗೆ ಶಕ್ತಿ ನೀಡಯ್ಯ
ದಿನಗಟ್ಟಲೆಯ ಕ್ಷುಲ್ಲಕ ವಿಷಯಗಳಿಂದ ನನ್ನ ಮನ ಮೇಲೇರುವಂತೆ ಮಾಡಯ್ಯ

ಈಗ, ಈ ಶಕ್ತಿಗಾಗಿ ಪ್ರಾರ್ಥನೆ ಸಲ್ಲಿಸಿದ ನಂತರ, ಕೊನೆಗೆ ಮಹಾನ್ ಶಕ್ತಿಯ ಆಧ್ಯಾತ್ಮಿಕತೆ ಸಂಗೀತ ಪರಾಕಾಷ್ಠೆಯ ಪ್ರಾರ್ಥನೆ ಬರುತ್ತದೆ :

ಮತ್ತು ನನಗೆ ಶಕ್ತಿ ನೀಡಯ್ಯ
ನನ್ನ ಶಕ್ತಿಯನ್ನು ಪ್ರೇಮಪೂರ್ವಕವಾಗಿ ನಿನಗೆ ಒಪ್ಪಿಸುವ ಶಕ್ತಿ ನೀಡಯ್ಯ !'

ಮಾನವನೊಳಗೆ ಕುಳಿತಿರುವ, ವೇದಾಂತದಲ್ಲಿ ವಿವರಿಸಿರುವಂತೆ ಭಯಗಳಿಗೇ ಭಯಸ್ವರೂಪಿಯಾದ ಮಹಾನಿರ್ವಾಣತಂತ್ರ (೩.೬೧) ಹೇಳುವಂತೆ ಭಯಾನಾಂ ಭಯಂ—ಮತ್ತು ಶ್ರೀಮದ್ಭಾಗವತ (II, ೧.೧೧) ಹೇಳುವಂತೆ ಯದ್ ಬಿಭೇತಿ ಸ್ವಯಂ ಭಯಂ—'ಯಾರಿಗೆ ಭಯವೇ ಭಯಪಡುವುದೋ' ಅಂಥ ಸಾಕ್ಷಾತ್ ಪರಮಾತ್ಮನಿಂದ ಬರುವುದು ಹೆಚ್ಚಿನ ಬಲ. ಶಕ್ತಿಯಿರುವ-ದೈಹಿಕಶಕ್ತಿ, ಮಾನಸಿಕ ಶಕ್ತಿ, ಇತರರಿಗಿಂತ ಹೆಚ್ಚು ಬಲ, ಪ್ರತಿಭಾಶಕ್ತಿ ಮತ್ತು ಸಾಮರ್ಥ್ಯಗಳು ಇರುವ— ಹೆಂಗಸರು ಮತ್ತು ಗಂಡಸರು ಭಗವಂತನ ಮುಂದೆ ನಿಂತು "ಓ ಭಗವಂತಾ, ಇದೆಲ್ಲಾ ನಿನ್ನದು, ಯಾವುದೂ ನನ್ನದಲ್ಲ, ನೀನೇ ಸರ್ವಸ್ವ' ಎಂದು ಹೇಳುವಂತಾದರೆ, ಆ 'ಅಂತಿಮ ತ್ಯಾಗದಲ್ಲಿ ಎಂಥ ಅಪ್ಪಟ ಹಿರಿಮೆ ಇದೆ, ವೈಭವವಿದೆ !

## ೧೬. 'ಭಕ್ತನಾಗು, ಬೋಕನಾಗಬೇಡ !'

ಶ್ರೀರಾಮಕೃಷ್ಣರು ಒಂದು ಬಂಗಾಳಿ ಪದ್ಯದ ಸಾಲೊಂದನ್ನು ಪದೇ ಪದೇ ಹಾಡುತ್ತಿದ್ದರು ; ಅದರ ಅನುವಾದ ಹೀಗಿದೆ : 'ಯಾವುದೇ ವ್ಯಕ್ತಿಗೆ ಮುಕ್ತಿ ಕೊಡಲೂ ನಾನು ವಿರೋಧಿಸುವುದಿಲ್ಲ ; ಆದರೆ ಯಾವುದೇ ವ್ಯಕ್ತಿಗೆ ಮುಕ್ತಿ ಕೊಡುವಲ್ಲಿ ನಾನು ತುಂಬ ಎಚ್ಚರವಾಗಿರುತ್ತೇನೆ !' ಇದೊಂದು ವಿಚಿತ್ರವಾದ ಹೇಳಿಕೆ ! ಮುಕ್ತಿ ಎನ್ನುವುದು, ಸಾಮಾನ್ಯವಾಗಿ ಅದಕ್ಕೆ ಪಡುವ ಪ್ರಯತ್ನ ಮತ್ತು ಹೋರಾಟಗಳನ್ನು ತೆಗೆದುಕೊಂಡರೆ, ಭಕ್ತಿಗಿಂತಲೂ ದುಬಾರಿ. ಆದರೆ ಈ ಪದ್ಯವು ಈ ವಿಚಿತ್ರ ಭಾವವನ್ನು ವ್ಯಕ್ತಪಡಿಸುತ್ತದೆ. ಅದಕ್ಕೇನು ಅರ್ಥವಿರಬಹುದು ? ಇನ್ನೊಬ್ಬ ಪೂಜ್ಯ ವ್ಯಕ್ತಿ ಕೊಟ್ಟಿರುವ ಹಾಸ್ಯಮಯವಾದ ವಿವರಣೆ ನೋಡಿ : 'ನಾನು ಮುಕ್ತಿಯನ್ನು ಯಾರೋ ಒಬ್ಬ ವ್ಯಕ್ತಿಗೆ ಕೊಟ್ಟರೆ, ಅವನು ಅಥವಾ ಅವಳು ನನಗೆ ಇದು ಕೊಡು, ಅದು ಕೊಡು ಎಂದು ನನಗೆ ತೊಂದರೆ ಕೊಡುವುದಿಲ್ಲ ; ಆದರೆ ನಾನು ಯಾರೋ ಒಬ್ಬ ವ್ಯಕ್ತಿಗೆ ಭಕ್ತಿ ಕೊಟ್ಟರೆ, ಮಾರನೆಯ ದಿನದಿಂದಲೇ ಅವನು ಅಥವಾ ಅವಳು ನನ್ನನ್ನು ಹೀಗೆ ಗೋಳುಹುಯಿದುಕೊಳ್ಳುತ್ತಾರೆ : 'ನನಗೊಂದು ಕೆಲಸ ಕೊಡಿ, ನನಗೊಬ್ಬ ಮಗನನ್ನು ಕೊಡಿ, ನನಗೆ ದುಡ್ಡು ಕೊಡಿ, ನನಗೆ ಇದು ಕೊಡಿ, ನನಗೆ ಅದು ಕೊಡಿ', ಇದೆಲ್ಲ ತನ್ನಲ್ಲಿ ತನಗೆ ನಂಬಿಕೆ ಇಲ್ಲದ್ದರಿಂದ ಬರುತ್ತದೆ ಮತ್ತು ಸ್ವಾವಲಂಬನೆಯ ಸ್ವಭಾವ ಇಲ್ಲದ್ದರಿಂದ ಬರುತ್ತದೆ. ಇದು ಭಗವಂತನನ್ನು ಸಂತತವಾಗಿ ಪೀಡಿಸುವುದು ! ಪೌರುಷ ವನ್ನು ಅವಲಂಬಿಸದ ಭಕ್ತಿಯ ಬಗೆ ಅದು. ಅಂಥ ಬಲಹೀನರಾದ ಜನ ಅಂಥ ಮನೋಭಾವ ತಾಳುವುದರಿಂದ, ಅವರ ಭಕ್ತಿ ಎಂದರೆ, ಭಕ್ತನು ದೇವರು ಅವನಿಗೆ ಅಥವಾ ಅವಳಿಗೆ ಕೊಟ್ಟ ಶಕ್ತಿಗಳನ್ನೂ ಅವಕಾಶಗಳನ್ನೂ ಸದುಪಯೋಗ ಮಾಡಿಕೊಂಡಿಲ್ಲ ಎಂದರ್ಥ, ಮತ್ತು ದೇವರ ಭಾರ ಒಂದೇ ಸಮನೆ ಹೆಚ್ಚುತ್ತಾ ಹೋಗುತ್ತದೆ. ಆದ್ದರಿಂದ ದೇವರು ಭಕ್ತಿಯನ್ನು ದಯಪಾಲಿಸಲು

ಇಷ್ಟಪಡುವುದಿಲ್ಲ ! ರಾಮಕೃಷ್ಣರು ಹೇಳಿದರು : 'ಭಕ್ತನಾಗು, ಆದರೆ ಬೋಕನಾಗಬೇಡ !' ಭಕ್ತ ಎಂದರೆ ಭಕ್ತಿ ಇರುವವ, ಬೋಕ ಎಂದರೆ ಬಂಗಾಳಿಯಲ್ಲಿ ಮೂರ್ಖ ಎಂದರ್ಥ.

ಗೀತೆಯ ಸಂಗೀತದ ಪ್ರತಿಯೊಂದು ಧಾಟಿಯೂ—ಅದು ಮಾನವನ ಲೌಕಿಕ ಜೀವನದ್ದಾಗಿರಲಿ ಆಧ್ಯಾತ್ಮಿಕ ಜೀವನದ್ದಾಗಿರಲಿ—ಈ ಬಲ ಮತ್ತು ನಿರ್ಭೀತಿಗಳ ಸಂದೇಶದಿಂದ ತುಂಬಿದೆ. ಗೀತೆ ಮತ್ತು ಇತರ ವೇದಾಂತದ ಪುಸ್ತಕಗಳು ರಾಗ, ಭಯ ಮತ್ತು ಕ್ರೋಧಗಳನ್ನು—ಅಂದರೆ ಕುರುಡಾದ ವಿಷಯಾಸಕ್ತಿ, ಹೆದರಿಕೆ ಮತ್ತು ಕೋಪಗಳನ್ನು—ನೈತಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಗಳಿಗೆ ಪ್ರತಿಬಂಧಕಗಳು ಎಂದು ಸಂಬಂಧ ಕಲ್ಪಿಸಿ, ಅವುಗಳನ್ನು ತೊರೆಯಬೇಕೆಂದು ಮಾನವನಿಗೆ ಪ್ರೇರೇಪಿಸುತ್ತವೆ. ಹೇಗಾದರೂ ವೇದಾಂತದ ಪ್ರಕಾರ, ದೌರ್ಬಲ್ಯ ಸದ್ಗುಣವಲ್ಲ, ಹೆದರಿಕೆಯೂ ಸದ್ಗುಣವಲ್ಲ. ಮೊದಲು ಬೆಳೆಸಿಕೊಳ್ಳಬೇಕಾದ ಸದ್ಗುಣವೆಂದರೆ ಅಭಯಂ—ಭಯವಿಲ್ಲದಿರುವುದು—ಎಂದು ಗೀತೆ ಹೇಳುತ್ತದೆ. ಉಪನಿಷತ್ತುಗಳು ಬ್ರಹ್ಮನನ್ನು ಅಥವಾ ದೇವರನ್ನು ಅಭಯಂ—ಭಯವಿಲ್ಲದಿರುವಿಕೆ—ಎಂದು ಹೇಳಿ, ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡವನನ್ನು ಅಭಯಂ ವೈ ಪ್ರಾಪ್ತೋಸಿ—ನೀನು ನಿರ್ಭಯದ ಸ್ಥಿತಿಯನ್ನು ತಲುಪಿದ್ದೀಯೆ—ಎಂದು ವಿವರಿಸುತ್ತವೆ.

## ೧೭. ದೈವಾನುಗ್ರಹ : ಸ್ವಾವಲಂಬನೆ ಮತ್ತು ಶರಣಾಗತಿಯ ಹಿಂದೆ ಅದರ ಅಸ್ತಿತ್ವ

ಈ ಶ್ರೇಷ್ಠ ತತ್ತ್ವದ ಬೆಳಕಿನಲ್ಲಿ, ಗೀತೆಯು ಇಡಿಯಾಗಿ ಮಾನವಜೀವನದ ಬಗ್ಗೆ ವಿಚಾರ ಮಾಡುತ್ತದೆ. ನೀವು ಬಾಹ್ಯಜಗತ್ತಿನ ಜತೆ ವ್ಯವಹರಿಸುತ್ತಾ ಹೆಂಗಸಾಗಿಯೋ ಗಂಡಸಾಗಿಯೋ ಜೀವನ ಆರಂಭಿಸುತ್ತೀರಿ ; ನೀವು ಇನ್ನೂ ದೇವರನ್ನು ಕಾಣುತ್ತಿಲ್ಲ. ಗಂಡಸರ ಮತ್ತು ಹೆಂಗಸರ ನಡುವೆ ನೀವು ಸಾಮಾಜಿಕ ಸಂದರ್ಭದಲ್ಲಿ ಪೌರುಷವನ್ನೂ ನೈತಿಕ ಬಲವನ್ನೂ ಬೆಳೆಸಿಕೊಂಡು ಗಂಡಸಾಗಿಯೋ ಹೆಂಗಸಾಗಿಯೋ ಇರುತ್ತೀರಿ. ಅನಂತರ, ನಿಧಾನವಾಗಿ ಅವರ ಜೊತೆ ವ್ಯವಹರಿಸುತ್ತಾ, ಸತ್ಯ ಮತ್ತು ಗುಣಗಳ ವಿವೇಕ ಬೆಳೆಸಿಕೊಂಡು ನೀವು ಉನ್ನತಮಟ್ಟಕ್ಕೆ ಏರುವಿರಿ. ಮನಸ್ಸು ಶುದ್ಧವಾಗಿಯೂ ಬಲವಾಗಿಯೂ ಆದಾಗ, ಅದು ಕ್ರಮೇಣ ಶುದ್ಧತರವಾದದ್ದರ ಗಹನತರವಾದದ್ದರ ಸುಳಿವು ಪಡೆದು, ಒಳಗಿನಿಂದ ದಿವ್ಯವಾದ ತುಡಿತದ ಸೂಚನೆಗಳನ್ನು ಪಡೆಯುತ್ತದೆ. ಬಲವಾದ ಮನಸ್ಸು ಮಾತ್ರ ಅದನ್ನು ಪಡೆಯಬಲ್ಲದು, ಅರಿಯಬಲ್ಲದು ಮತ್ತು ಅದಕ್ಕೆ ಪ್ರತಿಕ್ರಿಯಿಸಬಲ್ಲುದು. 'ಆನೆ ಮಾತ್ರ ಸಿಂಹದ ಬಲವನ್ನು ಅರ್ಥಮಾಡಿಕೊಳ್ಳಬಲ್ಲದು, ಸೊಳ್ಳೆಯಲ್ಲ' ಎಂದು ವಿವೇಕಾನಂದರು ಹೇಳಿದ್ದಾರೆ.

ನಮ್ಮ ಅವಯವಸೀಮಿತವಾದ ಅಹಂಕಾರವು ನಮ್ಮ ನಿಜವಾದ ಸ್ವರೂಪವಲ್ಲ. ಅಹಂಕಾರದ ಹಿಂದೆ, ಅವಯವದ ಇತಿಮಿತಿಗಳ ಆಚೆ ಅನಂತವಾದ ಆತ್ಮವಿದೆ. ಅದು ನಮ್ಮ ಆತ್ಮ, ಎಲ್ಲರಲ್ಲೂ ಇರುವ ಏಕೈಕ ಆತ್ಮ, ಅದು ಅನಂತ ಮತ್ತು ಅದ್ವೈತ. ಮಾನವನು ಸಂಪೂರ್ಣ ವಿಕಾಸವಾದಾಗ ಈ ಅಹಂಕಾರವು ಆ ಆತ್ಮಕ್ಕೆ ಸಂಪೂರ್ಣವಾಗಿ ಶರಣಾಗುತ್ತದೆ. ವಿಷ್ಣು ಷಟ್ಪದಿಯಲ್ಲಿ ಅದ್ವೈತಮತ ಸ್ಥಾಪಕ ಶಂಕರಾಚಾರ್ಯರು ಹೀಗೆ ಹಾಡುತ್ತಾರೆ :

ಸತ್ಯಪಿ ಭೇದಾಪಗಮೇ ನಾಥ ತವಾಹಂ
ನ ಮಾಮಕೀನಸ್ತ್ವಮ್
ಸಾಮುದ್ರೋ ಹಿ ತರಂಗಃ ನ ಕ್ವಚನ
ಸಮುದ್ರ ತಾರಂಗಃ

'(ನನ್ನ ಮತ್ತು ನಿನ್ನ ನಡುವೆ) ಭೇದಭಾವ ತೊಲಗಿಸಿದಾಗ (ಸಮಾಧಿಯಲ್ಲಿ), ಓ ಪ್ರಭುವೇ ನಿನ್ನಲ್ಲಿ ಒಂದಾಗುವುದು ನಾನು, ನೀನು ನನ್ನಲ್ಲಿ ಅಲ್ಲ ; ನಿಜವಾಗಿ ತರಂಗಗಳು ಸಮುದ್ರದಲ್ಲಿ ಲೀನವಾಗುತ್ತವೆಯೇ ಹೊರತು ಸಮುದ್ರ ಅಲೆಯಲ್ಲಿ ಅಲ್ಲ !'

ಎಲ್ಲರಲ್ಲೂ ಇರುವ ಆ ಅಂತರಾತ್ಮನೇ ಅವತಾರಪುರುಷನಾದ ಶ್ರೀಕೃಷ್ಣನ ಮೂಲಕ ಗೀತೆಯ ೧೮ನೇ ಅಧ್ಯಾಯದ ೬೬ನೇ ಶ್ಲೋಕದಲ್ಲಿ ಹೀಗೆ ಹೇಳುತ್ತಾನೆ : 'ಎಲ್ಲಾ ಧರ್ಮಗಳನ್ನೂ ತೊರೆದು ನನ್ನನ್ನು ಮಾತ್ರ ಆಶ್ರಯಿಸು ; ನಾನು ನಿನ್ನ ಎಲ್ಲಾ ಪಾಪಗಳನ್ನೂ ತೊಳೆಯುತ್ತೇನೆ ; ದುಃಖಿಸಬೇಡ.' ಇದಕ್ಕೆ ಮುಂಚೆ, ೬೧ನೇ ಶ್ಲೋಕದಲ್ಲಿ ಹೀಗೆ ಹೇಳುತ್ತಾನೆ :

ಈಶ್ವರಃ ಸರ್ವಭೂತಾನಾಂ
ಹೃದ್ದೇಶೇಽರ್ಜುನ ತಿಷ್ಠತಿ

'ಓ ಅರ್ಜುನ, ಪರಮಪ್ರಭುವು ಸಕಲ ಜೀವಿಗಳ ಹೃದಯದಲ್ಲಿ ಸದಾ ಕುಳಿತಿದ್ದಾನೆ.'

ಎಲ್ಲಾ ಸತ್ಯ, ಸೌಂದರ್ಯ, ಒಳ್ಳೆಯತನಗಳಿಗೆ ಮೂಲನಾದ ಭಗವಂತನು ಅರ್ಜುನನ ಮೂಲಕ ಪ್ರತಿಯೊಬ್ಬರಿಗೂ ಹೀಗೆ ಹೇಳುತ್ತಾನೆ : 'ಎಲ್ಲಾ ಜೀವಿಗಳ ಹೃದಯಗಳಲ್ಲೂ, ಅವರುಗಳ ಅಹಂಕಾರದ ಹಿಂದೆ ನಾನು ಸದಾ ಇದ್ದೇನೆ. ನಾನು ಮೊದಲು ಈ ಎಲ್ಲ ಜೀವಿಗಳ ಮಧ್ಯೆ ತಲೆ ಹಾಕಲು ಬಯಸುವುದಿಲ್ಲ ; ಏಕೆಂದರೆ, ಅವರು ಮೊದಲು ತಮ್ಮ ಅಹಂಕಾರಗಳನ್ನು ಬೆಳೆಸಿಕೊಳ್ಳಲು ಬಿಡುತ್ತೇನೆ. ಆದರೆ ನಾನು ಇದನ್ನು ಗಮನಿಸುತ್ತಾ ಹಿಂದೆ ನಿಂತಿರುತ್ತೇನೆ. ಯಾವುದಾದರೂ ಭಕ್ತನು ಅವನ ಅಥವಾ ಅವಳ ಅಹಂಕಾರವನ್ನು ಅದರ ಶಕ್ತಿಗಳನ್ನೂ ಪ್ರಯೋಗಿಸಿ ಪ್ರಬಲರಾದರೆ, ಅವನ ಅಥವಾ ಅವಳ ಆಧ್ಯಾತ್ಮಿಕ ಬೆಳವಣಿಗೆಯ ಒಂದು ನಿರ್ದಿಷ್ಟ ಹಂತದಲ್ಲಿ, ಅವನು ಅಥವಾ ಅವಳು ಖಂಡಿತವಾಗಿ ನನ್ನ ಕಡೆ ತಿರುಗಿ ನಾನೇ ಅವರಿಗೆ ಪರಮಪ್ರಭು, ಶ್ರೇಷ್ಠ ಎಂದು ತಿಳಿಯುತ್ತಾರೆ ಎಂದು ನಾನು ಬಲ್ಲೆ. ಅವರ ಮನಸ್ಸುಗಳು ರಜಸ್ತಮೋಗುಣಗಳಿಂದ ಮುಕ್ತವಾಗಿ, ಸತ್ತ್ವಗುಣ ತುಂಬಿಕೊಂಡಾಗ ಶರಣಾಗತಿಯು ತಾನೇ ತಾನಾಗಿ, ಸಹಜವಾಗಿ ಮತ್ತು ಸ್ವಪ್ರೇರಣೆಯಿಂದ ಬರುತ್ತದೆ. ಆದ್ದರಿಂದ ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನು 'ಈಶ್ವರಃ (ಈಶ್ವರನು) (ಭಗವಂತನು) ಎಲ್ಲಾ ಜೀವಿಗಳ ಹೃದಯಗಳಲ್ಲಿ ಇದ್ದಾನೆ.' ಎಲ್ಲಾ ಜೀವಿಗಳೂ ಮಾಡುತ್ತಿರುವ ಎಲ್ಲವೂ ಅವನಿಗೆ ಗೊತ್ತು. ಎಲ್ಲಾ ಜೀವಿಗಳಿಗೆ ಅವನ ಬಗೆಗಿನ ಈ ಸತ್ಯ ಗೊತ್ತಿಲ್ಲದಿರಬಹುದು ; ಆದರೆ ಆ ಭಗವಂತನಿಗೆ ಗೊತ್ತು. ಗೀತೆಯ ೫ನೆ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಶ್ರೀಕೃಷ್ಣ ಹೇಳುತ್ತಾನೆ :

ಭೋಕ್ತಾರಂ ಯಜ್ಞತಪಸಾಂ
ಸರ್ವಲೋಕಮಹೇಶ್ವರಂ
ಸುಹೃದಂ ಸರ್ವಭೂತಾನಾಂ
ಜ್ಞಾತ್ವಾ ಮಾಂ ಶಾಂತಿಂ ಋಚ್ಛತಿ

'(ಜೀವಿಗಳು ಮಾಡುವ) ಯಜ್ಞಯಾಗಾದಿಗಳ, ತಪಸ್ಸುಗಳ ಭೋಕ್ತ ನಾನು, ಎಲ್ಲಾ ಲೋಕಗಳ ಮಹೇಶ್ವರ ನಾನು, ಮತ್ತು ಎಲ್ಲಾ ಜೀವಿಗಳ ಮಿತ್ರ ಎಂದು ತಿಳಿದು, (ಮಾನವನು) ಶಾಂತಿಯನ್ನು ಹೊಂದುತ್ತಾನೆ.'

ಆದರೆ ಈ ಸತ್ಯವನ್ನರಿಯದೆ ಮಾನವನು ಅನೇಕವೇಳೆ ನಿಸ್ಸಹಾಯಕನಾಗಿ, ಶಾಂತಿಯಿಲ್ಲದೆ, ದುಃಖಿತನಾಗುತ್ತಾನೆ. ಎಲ್ಲರಲ್ಲೂ ಭಗವಂತ ಇದ್ದಾನೆ ; ಆದರೆ ಎಲ್ಲರೂ ಭಗವಂತನಲ್ಲಿ ಇಲ್ಲ ; ಆದ್ದರಿಂದಲೇ ಮಾನವ ಕಷ್ಟ ಅನುಭವಿಸುತ್ತಾನೆ' ಎನ್ನುತ್ತಾರೆ ಶ್ರೀ ರಾಮಕೃಷ್ಣರು.

ಭಗವಂತನಿಗಾಗಿ ಮಾನವನು ಮಾಡುವ ಅನ್ವೇಷಣೆ, ಮತ್ತು ಮಾನವನ ಬಗ್ಗೆ ಭಗವಂತನ ಪ್ರತಿಕ್ರಿಯೆಯ ವಿಷಯವನ್ನು ಮುಂಡಕ ಉಪನಿಷತ್ತಿನಲ್ಲಿ (೩.೧.೧-೨) ಎರಡು ಹಕ್ಕಿಗಳ ಉದಾಹರಣೆ ಕೊಟ್ಟು ಆಲಂಕಾರಿಕವಾಗಿ ಹೇಳಲಾಗಿದೆ :

ದ್ವಾ ಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ

ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ
ಅನಶ್ನನ್ನನ್ಯೋ ಅಭಿಚಾಕಶೀತಿ

'ಸದಾ ಒಟ್ಟಿಗಿರುವ, ಪರಸ್ಪರ ಸ್ನೇಹವಿರುವ, ಸುಂದರವಾದ ರೆಕ್ಕೆಯುಳ್ಳ ಎರಡು ಹಕ್ಕಿಗಳು ಒಂದೇ ಮರದ ಮೇಲಿವೆ. ಅವುಗಳಲ್ಲಿ ಒಂದು ಹಕ್ಕಿಯು ಮರದ ಸಿಹಿ (ಮತ್ತು ಕಹಿ) ಹಣ್ಣುಗಳನ್ನು ತಿನ್ನುತ್ತದೆ, ಇನ್ನೊಂದು (ಹಣ್ಣುಗಳನ್ನು) ತಿನ್ನದೆ ತನ್ನದೇ ಆದ ವೈಭವದಲ್ಲಿ ಮುಳುಗಿದೆ.'

ಸಮಾನೇ ವೃಕ್ಷೇ ಪುರುಷೋ ನಿಮಗ್ನೋ
ಅನೀಶಯಾ ಶೋಚತಿ ಮುಹ್ಯಮಾನಃ
ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ
ಅಸ್ಯ ಮಹಿಮಾನಂ ಇತಿ ವೀತಶೋಕಃ

'(ಜೀವನದ) ಒಂದೇ ವೃಕ್ಷದಲ್ಲಿ ಮಗ್ನನಾಗಿ, ಮೋಹಗೊಂಡು, ಆಮೇಲೆ ನಿಸ್ಸಹಾಯಕನಾಗಿ ಅವನು ಶೋಕಿಸುತ್ತಾನೆ ; ಆದರೆ ಅವನು ಪೂಜ್ಯನೂ ಈಶನೂ ಸ್ವತಂತ್ರನೂ ಆದವನನ್ನು ನೋಡಿದಾಗ ಆ ಈಶನ ಮಹಿಮೆಯ ಫಲವೇ ತಾನು ಎಂದು ಅರಿತು ಅವನು ಶೋಕವನ್ನು ತ್ಯಜಿಸುವನು.'

ಈ ಉಪನಿಷತ್ ಮಂತ್ರಗಳನ್ನು ಸ್ವಾಮಿ ವಿವೇಕಾನಂದರು ಈ ಮಾತುಗಳಿಂದ ಪರಿಚಯಿಸುತ್ತಾರೆ :

*ಜಗತ್ತಿನ ಇಡೀ ತತ್ತ್ವವನ್ನು ಇದಕ್ಕಿಂತ ಪರಿಪೂರ್ಣವಾಗಿ ಹೇಳಿರುವುದನ್ನು ಹಿಂದೂಗಳ ಚಿಂತನೆಯ ಸಾರಾಂಶವನ್ನು, ಮಾನವ ಮುಕ್ತಿಯ ಇಡೀ ಕನಸನ್ನು ಇದಕ್ಕಿಂತ ಅದ್ಭುತವಾಗಿ, ನಿಬ್ಬೆರಗಾಗಿಸುವಂಥ ಭಾಷೆಯಲ್ಲಿ ಹೇಳಿರುವುದನ್ನು ನೀವೆಲ್ಲಿ ಕಾಣುವಿರಿ?' ಅನಂತರ ಅವರು Vedanta and Its Application to Indian Life ಎಂಬ ವಿಷಯದ ಮೇಲೆ ಉಪನ್ಯಾಸ ಮಾಡುತ್ತಾ ಹೀಗೆ ಹೇಳುತ್ತಾರೆ (The Complete Works, ಸಂ III, ಪು. ೨೩೪-೩೬) :*

*ಇದೇ ಮಾನವಜೀವಿಯ ಚಿತ್ರ. ಮಾನವನು ಜೀವನದ ಸಿಹಿಕಹಿಗಳನ್ನು ತಿನ್ನುತ್ತಿರುವನು. ಚಿನ್ನ, ಇಂದ್ರಿಯಸುಖ, ಜೀವನದ ಪೊಳ್ಳು ಆಶೋತ್ತರಗಳನ್ನು ಅರಸುತ್ತ ಹುಚ್ಚನಂತೆ ಧಾವಿಸುತ್ತಿರುವನು. ಬೇರೆ ಕಡೆ ಉಪನಿಷತ್ತುಗಳು ಜೀವಿಯನ್ನು ಸಾರಥಿಗೂ, ಇಂದ್ರಿಯಗಳನ್ನು ನಿಗ್ರಹಿಸದ ಕುದುರೆಗಳಿಗೂ ಹೋಲಿಸಲಾಗಿದೆ.*

*ಪ್ರಪಂಚದ ಕೆಲಸಕ್ಕೆ ಬಾರದ ವಸ್ತುಗಳನ್ನು ಬೆನ್ನಟ್ಟುವವರ ಬಾಳು ಹೀಗೆ. ಮಕ್ಕಳು ಸುಂದರ ಸವಿಗನಸುಗಳನ್ನು ಕಲ್ಪಿಸಿಕೊಳ್ಳುತ್ತಿರುವರು. ಕೊನೆಗೆ ಇವೆಲ್ಲಾ ನುಚ್ಚುನೂರಾಗುವುದನ್ನು ನೋಡುವರು. ಮುದುಕರು ತಮ್ಮ ಹಿಂದಿನ ಕೃತ್ಯಗಳನ್ನು ಮೆಲುಕುಹಾಕುತ್ತಿರುವರು. ಆದರೂ ಈ ಸಂಸಾರಜಾಲದಿಂದ ಬಿಡಿಸಿಕೊಳ್ಳಲು ಅವರು ದಾರಿಕಾಣರು. ಇದೇ ಜಗತ್ತು.*

*ಆದರೂ ಪ್ರತಿಯೊಬ್ಬರ ಜೀವನದಲ್ಲಿ ಸುವರ್ಣಕ್ಷಣಗಳು ದೊರಕುವುವು. ಅತ್ಯಂತ ದಾರುಣವಾದ ದುಃಖದಲ್ಲಿರುವಾಗ ಆಗಲಿ, ಅತ್ಯಾನಂದದಲ್ಲಿ ಮುಳುಗಿರುವಾಗ ಆಗಲಿ, ಸೂರ್ಯನನ್ನು ಕಾಣದಂತೆ ಮಾಡಿದ್ದ ಮೋಡ ಕ್ಷಣಕಾಲ ಮಾಯವಾದಂತೆ ತೋರುವುದು. ನಮಗೆ ಇಚ್ಛೆ ಇಲ್ಲದೆ ಇದ್ದರೂ ಅತೀಂದ್ರಿಯ ಸತ್ಯದ ಕ್ಷಣಿಕ ದರ್ಶನ ಲಭಿಸುವುದು. ಅದು ಇಂದ್ರಿಯಸುಖವನ್ನು ಮೀರಿರುವುದು, ಪ್ರಪಂಚದ ವ್ಯರ್ಥ ಆಸೆ ಸುಖದುಃಖಗಳನ್ನು ಮೀರಿರುವುದು ; ಪ್ರಕೃತಿಯ ಆಚೆ, ನಮ್ಮ ಇಹಪರಗಳ ಕಲ್ಪನೆಯನ್ನು ಮೀರಿರುವುದು, ಧನ, ಕನಕ, ಯಶಸ್ಸು, ಸಂತಾನ, ತೃಷ್ಣೆಗಳನ್ನು ಮೀರಿರುವುದು.*

*ಮನುಷ್ಯನಿಗೆ ಕ್ಷಣಕಾಲದ ಈ ದಿವ್ಯದೃಷ್ಟಿ ಪ್ರಾಪ್ತವಾದಾಗ ಅವನು ಮರದ ಮೇಲೆ ಸುಖ ದುಃಖಗಳನ್ನು ಅನುಭವಿಸದೆ ಶಾಂತವಾಗಿ ಆತ್ಮತೃಪ್ತವಾಗಿ ತನ್ನ ಮಹಿಮೆಯಲ್ಲಿ ತಲ್ಲೀನವಾಗಿ ರುವ ಹಕ್ಕಿಯನ್ನು ನೋಡುವನು. ಭಗವದ್ಗೀತೆ ಹೇಳುವಂತೆ.*

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥

'ಯಾರೂ ಆತ್ಮನಲ್ಲೇ ರಮಿಸುವರೋ, ಆತ್ಮತೃಪ್ತರಾಗಿರುವರೋ, ಆತ್ಮಸಂತುಷ್ಟರಾಗಿರು ವರೋ ಅವರು ಮಾಡಬೇಕಾಗಿರುವ ಕರ್ತವ್ಯ ಯಾವುದಿರುವುದು ? ಅವರೇಕೆ ದುಡಿಯಬೇಕು ?'

*ಮಾನವನಿಗೆ ಅತೀಂದ್ರಿಯ ಸತ್ಯದ ಕ್ಷಣಿಕ ನೋಟ ದೊರಕುವುದು. ಮತ್ತೆ ಅವನು ಮರೆಯು ವನು; ಜೀವನ ವೃಕ್ಷದ ಸಿಹಿಕಹಿ ಹಣ್ಣುಗಳನ್ನು ತಿನ್ನುತ್ತಾ ಹೋಗುವನು. ಬಹುಶಃ ಕೆಲಕಾಲಾ ನಂತರ ಪುನಃ ಕ್ಷಣಿಕ ನೋಟವೊಂದು ದೊರಕುವುದು. ಕೆಳಗಿರುವ ಹಕ್ಕಿ ಪೆಟ್ಟು ತಿಂದಂತೆಲ್ಲಾ ಮೇಲುಮೇಲಕ್ಕೆ ಹೋಗುವುದು. ಇನ್ನೂ ಹೆಚ್ಚು ಪೆಟ್ಟು ಬೀಳುವ ಅದೃಷ್ಟವಿದ್ದರೆ, ಮೇಲಿರುವ, ತನ್ನ ಪ್ರಾಣದಂತಿರುವ ಗೆಳೆಯನ ಬಳಿ ಹೋಗುವುದು. ಅದನ್ನು ಸಮೀಪಿಸಿದಂತೆಲ್ಲ ಅದರ ಕಾಂತಿ ತನ್ನ ಮೇಲೆ ಬೀಳುತ್ತಿರುವುದು ಕಾಣುತ್ತದೆ. ಕೆಳಗಿನ ಹಕ್ಕಿ ಮೇಲಿನದನ್ನು ಸಮೀಪಿಸಿ ದಂತೆಲ್ಲ ಬದಲಾಗುತ್ತಾ ಬರುವುದು. ಅದು ಹತ್ತಿರ ಬಂದಂತೆಲ್ಲಾ ಮಾಯವಾದಂತೆ ತೋರಿ ಕೊನೆಗೆ ಒಂದೇ ಹಕ್ಕಿ ಉಳಿಯುವುದು. ಅದು ನಿಜವಾಗಿಯೂ ಇರಲಿಲ್ಲ. ಅಲ್ಲಾಡುವ ಎಲೆಗಳ ಮಧ್ಯೆ ಶಾಂತವಾಗಿ ಗಂಭೀರವಾಗಿದ್ದ ಹಕ್ಕಿಯ ಪ್ರತಿಬಿಂಬದಂತೆ ಮಾತ್ರ ಇತ್ತು ಎರಡನೇ ಹಕ್ಕಿ. ಇದೆಲ್ಲ ಮೇಲಿರುವ ಹಕ್ಕಿಯ ಮಹಿಮೆ. ಆಗ ಅದು ಆತ್ಮತೃಪ್ತವಾಗಿ ಶಾಂತವಾಗಿ ಅಂಜಿಕೆಯಿಲ್ಲದೆ ಇರುತ್ತದೆ.*

ಇವೆಲ್ಲವನ್ನೂ ಗೀತೆಯ ಕೊನೆಯಲ್ಲಿ ಎತ್ತಿ ತೋರಿಸಲಾಗಿದೆ. ಅಲ್ಲಿ ಶ್ರೀಕೃಷ್ಣನು ಹೇಳುತ್ತಾನೆ : 'ಇಲ್ಲಿಯವರೆಗೆ ನಿನಗೆ ನಾನು ಧರ್ಮಶಾಸ್ತ್ರದ ಗಹನವಾದ ಸತ್ಯಗಳನ್ನು ಅರುಹಿದೆ ; ನಾನೀಗ ನಿನಗೆ ಗಹನತಮವಾದ ಸತ್ಯವನ್ನು ಹೇಳುತ್ತೇನೆ ; ಅದೇನೆಂದರೆ : ಪೌರುಷವನ್ನು ಸಾಧಿಸಿದ ನಂತರ, ಈಗ ಅಹಂಕಾರವನ್ನು ಒಪ್ಪಿಸಿ, ಅದರ ಶಕ್ತಿಗಳು ಮತ್ತು ಪ್ರವೃತ್ತಿಗಳನ್ನೆಲ್ಲ ನಿನ್ನ ಅನಂತ ಆತ್ಮನೇ ಆಗಿರುವ ನನಗೆ ಒಪ್ಪಿಸಿ, ಅತ್ಯುಚ್ಚ ಮಟ್ಟದ ದೇವತ್ವಕ್ಕೆ, ಪೂರ್ಣ ಸಂತತ್ವಕ್ಕೆ ಏರು. ಯಾವುದನ್ನೂ ಪೂರ್ತಿಯಾಗಿ ನನ್ನದು ಎಂದುಬಿಡಬೇಡ.'

'ನಾನು' ಎಂಬುದು ಸಂಪೂರ್ಣವಾಗಿ ಹೊರಟುಹೋದರೆ, ಎಲ್ಲವೂ ದೇವರೇ ಆಗುತ್ತದೆ, ಬೇರಾವುದೂ ಉಳಿಯುವುದಿಲ್ಲ. ಅದು ಆತ್ಮಸಮರ್ಪಣ ; ದೇವರಿಗೆ ಒಪ್ಪಿಸಿಬಿಡುವುದು, ಅದೇ ದೈವಾನುಗ್ರಹ. ಈ ಅನುಗ್ರಹವು ಆ ಹಂತದಲ್ಲಿ ದಿವ್ಯಪ್ರಭುವಿನಿಂದ, ಬೇಡುವವನ ಹೃದಯಕ್ಕೆ ಬರುತ್ತದೆ. ನಾನು ಆರಂಭದಲ್ಲಿ ಹೇಳಿದಂತೆ, ಧರ್ಮದ ಕೊನೆಯ ಮಾತಿದು : ಸಂಪೂರ್ಣ ಶರಣಾಗತಿ ; ಭಕ್ತನು ದೈವಾನುಗ್ರಹದಲ್ಲಿ ಮೀಯುವುದನ್ನು ಅನುಭವಿಸಿದಾಗ, ತನ್ನ ಕಳೆದ ಜೀವನ ವನ್ನು ಹಿಂತಿರುಗಿ ನೋಡಿ, ಹಿಂದಿನ ಪುರುಷಕಾರ ಹಂತಗಳಲ್ಲೂ ಅದೇ ದೈವಾನುಗ್ರಹವು ಸದಾ ಇದ್ದೇ ಇತ್ತು ಎಂದು ಭಾವಿಸುತ್ತಾನೆ.

ದೈವಾನುಗ್ರಹವು ಮಾನವನಿಗೆ ಹೊಸ ಬಗೆಯ ಬಲವನ್ನು ನೀಡುತ್ತದೆ. ಅದೆಂದರೆ, ಎಲ್ಲಾ ಅನುಭವಗಳನ್ನೂ ಅರಗಿಸಿಕೊಳ್ಳುವಂಥ ಬಲ ಮತ್ತು ಹಾಗೆ ಅರಗಿಸಿಕೊಳ್ಳುವುದರ ಮೂಲಕ, ನೈತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಇನ್ನೂ ಹೆಚ್ಚು ಬಲಶಾಲಿಯಾಗುವುದು. ಅರಗಿಸಿಕೊಂಡ ಆಹಾರ ದೈಹಿಕ ಬಲವನ್ನು ಹೆಚ್ಚಿಸುವಂತೆ, ಅರಗಿಸಿಕೊಂಡ ಜ್ಞಾನ ಮತ್ತು ಮಾಹಿತಿಗಳು ಮಾನಸಿಕ ಹಾಗೂ

ಬೌದ್ಧಿಕ ಬಲವನ್ನು ಹೆಚ್ಚಿಸುವಂತೆ ಮತ್ತು ಅಂಥ ಅರಗಿಸಿಕೊಳ್ಳುವ ಶಕ್ತಿ ಇಲ್ಲದಿದ್ದರೆ ದೇಹಮನಸ್ಸುಗಳಲ್ಲಿ ವಿಷವಸ್ತುಗಳು ಹೆಚ್ಚಿ ದೈಹಿಕ ಮತ್ತು ಮಾನಸಿಕ ಕಾಯಿಲೆಗಳಾಗುವಂತೆ, ಅರಗಿಸಿಕೊಂಡ ಅನುಭವಗಳು—ಅಂದರೆ ಸೋಲು ಅಥವಾ ಗೆಲುವು, ಸುಖದುಃಖ, ಲಾಭನಷ್ಟಗಳು—ಸ್ತ್ರೀಪುರುಷರಲ್ಲಿ ನೈತಿಕ ಶಕ್ತಿಯನ್ನು ಹೆಚ್ಚಿಸುತ್ತವೆ : ಅಂಥ ಆಧ್ಯಾತ್ಮಿಕ ಪಚನಶಕ್ತಿ ಇಲ್ಲದಿದ್ದರೆ ಅದು ಅವನ ಅಥವಾ ಅವಳ ಶೀಲವನ್ನು ಮತ್ತು ಅಂತರ್‌ಮಾನವ ಪರಿಸ್ಥಿತಿಯನ್ನು ಹದಗೆಡಿಸುತ್ತದೆ. ಅಂಥ ಆಧ್ಯಾತ್ಮಿಕ ಪಚನಶಕ್ತಿಯು ಮಾನವನ ದೈವತ್ವದ ಸಂಪರ್ಕದ ಫಲ. ಶ್ರೀಮದ್ಭಾಗವತದ ಸುಂದರ ಶ್ಲೋಕಗಳಲ್ಲೊಂದು ದೈವಾನುಗ್ರಹದ ಸಿಹಿಯಾದ ಶೀಲಫಲದ ಬಗೆಗೆ ತಿಳಿಸುತ್ತದೆ. ವಿಷ್ಣುವಿನ ಮಾತುಗಳನ್ನು ಭಕ್ತನೊಬ್ಬನಿಗೆ ತಿಳಿಸುತ್ತಾ ಭಾಗವತ ಹೀಗೆ ಹೇಳುತ್ತದೆ (VIII, ೨೨, ೨೬):

ಜನ್ಮಕರ್ಮ ವಯೋರೂಪ
ವಿದ್ಯೈಶ್ವರ್ಯ ಧನಾದಿಭಿಃ
ಯದ್ಯಸ್ಯ ನ ಭವೇತ್ ಸ್ತಂಭಃ
ತತ್ರಾಯಂ ಮದನುಗ್ರಹಃ

'ಜನ್ಮ, ಕೆಲಸಕಾರ್ಯಗಳು, (ತರುಣ) ವಯಸ್ಸು, ಸೌಂದರ್ಯ, ಜ್ಞಾನ, ಶಕ್ತಿ ಮೊದಲಾದವು ಒಬ್ಬನಿಗೆ ಸೊಕ್ಕು ಬರಿಸದಿದ್ದರೆ, ಆಗ ನನ್ನ ಅನುಗ್ರಹವಾಗಿದೆ ಎಂದು ತಿಳಿ.'

## ೧೮. ಭಾರತೀಯ ಸಂಪ್ರದಾಯದಲ್ಲಿ ದೈವಾನುಗ್ರಹ

ಅನೇಕವೇಳೆ ಉದ್ಧರಿಸಲಾಗಿರುವ ವಿವೇಕಚೂಡಾಮಣಿಯ ಶ್ಲೋಕದಲ್ಲಿ ಶಂಕರಾಚಾರ್ಯರು ದೈವಾನುಗ್ರಹದ ಬಗ್ಗೆ ಅತ್ಯಂತ ವ್ಯಾಪಕವಾದ ಅಭಿಪ್ರಾಯವನ್ನು ಪ್ರತಿಪಾದಿಸುತ್ತಾರೆ (ಶ್ಲೋಕ ೩):

ದುರ್ಲಭಂ ತ್ರಯಮೇವೈತತ್
ದೇವಾನುಗ್ರಹಹೇತುಕಮ್ .
ಮನುಷ್ಯತ್ವಂ ಮುಮುಕ್ಷುತ್ವಂ
ಮಹಾಪುರುಷಸಂಶ್ರಯಃ

'ಮೂರು ವಸ್ತುಗಳು ಸಿಕ್ಕುವುದು ದುರ್ಲಭ ; ಮತ್ತು ಸಿಕ್ಕಿದರೂ ಅವನ್ನು ದೈವಾನುಗ್ರಹದ ಫಲವೆಂದೇ ಭಾವಿಸಬೇಕು. ಅವೆಂದರೆ: ಮನುಷ್ಯ ಜನ್ಮ, ಮೋಕ್ಷಾಕಾಂಕ್ಷೆ ಮತ್ತು ಮಹಾ ಪುರುಷನ ಮಾರ್ಗದರ್ಶನ ಮತ್ತು ಸಹಾಯ.'

ಸಹಸ್ರಾರು ಬಗೆಯ ಜೀವರಾಶಿಗಳಲ್ಲಿ ಪ್ರತಿಯೊಂದು ಬಗೆಯ ಜೀವಿಯೂ—ಉದಾಹರಣೆಗೆ ಕೀಟದ ಜಗತ್ತಿನ ಒಂದು ಜಾತಿಯಲ್ಲೇ ಲಕ್ಷಾಂತರ ಸಂಖ್ಯೆಯ ಜೀವಿಗಳಿವೆ; ಆದರೆ ಮಾನವ ಜೀವಿಗಳಲ್ಲಿ ಇರುವುದು ಒಂದೇ ಒಂದು ಬಗೆ; ಆ ಒಂದು ಜಾತಿಯಲ್ಲೂ ೩,೫೦೦ ಮಿಲಿಯನ್ ಜನರಿದ್ದಾರೆ. ಮಾನವನದೇ ಒಂದು ಅನನ್ಯವಾದ ಸಹಜಗುಣವಿದೆ ; ಅದಲ್ಲದೆ ಇನ್ನೂ ಒಂದು ಮುಖ್ಯವಾದ ಕಾರಣವೆಂದರೆ, ಪ್ರಕೃತಿಯ ಉತ್ಪನ್ನಗಳಲ್ಲಿ ಅವನಿಗೆ ಮಾತ್ರ ಪ್ರಕೃತಿಯನ್ನು ಮತ್ತು ತನ್ನನ್ನು ಅರ್ಥಮಾಡಿಕೊಳ್ಳುವ ಶಕ್ತಿಯಿದೆ. ಮತ್ತು ಪ್ರಾಣಿಸ್ವಭಾವದಿಂದ ಮುಕ್ತಿಹೊಂದುವ ಶಕ್ತಿಯಿದೆ. ವೇದಾಂತದ ಪ್ರಕಾರ ಈ ಮನುಷ್ಯತ್ವವು ದೈವಾನುಗ್ರಹದ ಮೊದಲ ಛಾಯೆ.

ಅಂಥ ಲಕ್ಷೋಪಲಕ್ಷ ಮಾನವಜೀವಿಗಳಲ್ಲಿ ಎಲ್ಲೋ ಕೆಲವರು ಮಾತ್ರ ಮೃಗಸ್ವಭಾವದಿಂದ ಮುಕ್ತಿ ಹೊಂದಲು ತಮ್ಮ ಶಕ್ತಿಯನ್ನು ಬಳಸುತ್ತಾರೆ. ಈ ಪ್ರಯತ್ನವನ್ನು ಮುಮುಕ್ಷುತ್ವವನ್ನು, ದೈವಾನುಗ್ರಹದ ಎರಡನೆ ಛಾಯೆಯೆಂದು ಭಾವಿಸಲಾಗಿದೆ.

ಅಂಥ ಬಿಡುಗಡೆಯ ಮಾರ್ಗ ಬಹುತೇಕ ಜನರಿಗೆ ತಿಳಿಯದು. ಆ ಅಜ್ಞಾತ ವಿಷಯದ ಬಗ್ಗೆ ವ್ಯರ್ಥವಾಗಿ ಪ್ರಯತ್ನಿಸುವುದನ್ನು ಸಮರ್ಥ ಮಹಾಪುರುಷನ ನೆರವು ಮತ್ತು ಮಾರ್ಗದರ್ಶನಗಳಿಂದ ತಪ್ಪಿಸಬಹುದು. ಈ ಕ್ಷೇತ್ರದಲ್ಲಿ ಸಾಮರ್ಥ್ಯ ಎಂದರೆ ವಿದ್ವತ್ತಲ್ಲ, ಆಧ್ಯಾತ್ಮಿಕ ಸಾಕ್ಷಾತ್ಕಾರ. ಮಹಾನ್ ಆಚಾರ್ಯರ ಸಕಾಲಿಕವಾದ ಮಾರ್ಗದರ್ಶನ ಮತ್ತು ನೆರವು ದೈವಾನುಗ್ರಹದ ಮೂರನೆ ವರ.

ಮಾನವನ ಲೌಕಿಕ ಜೀವನಕ್ಷೇತ್ರದಲ್ಲೂ ಸಮರ್ಥರಾದ ಮಾರ್ಗದರ್ಶಕರ ಮತ್ತು ಶಿಕ್ಷಕರ ನೆರವನ್ನು ಕೋರಲಾಗುವುದು ; ಮತ್ತು ಅದು ತುಂಬ ಸಹಾಯಕವೆಂದು ಅರಿಯಲಾಗಿದೆ. ಮಾನವನನ್ನು ಬಂಧನದಿಂದ ಮುಕ್ತಿಗೆ ಒಯ್ಯುವ, ಮಾನವನ ಇಂದ್ರಿಯಗಳ ಮಟ್ಟದಿಂದ ಮೇಲೆ ಮತ್ತು ಆಚೆ ಇರುವ ಕ್ಷೇತ್ರದಲ್ಲಿ ಅಂತಹ ಮಾರ್ಗದರ್ಶನ ಇನ್ನೆಷ್ಟು ಬೇಕಿರಬಹುದು ! ಬೋನಿನಲ್ಲಿ ಸಿಕ್ಕಿಹಾಕಿಕೊಂಡ ಇಲಿಯು ಬಿಡುಗಡೆಗಾಗಿ ಎಷ್ಟು ಒದ್ದಾಡುವುದು, ಬಿಡುಗಡೆಯ ದಾರಿ ಕಾಣದೆ ಅದು ಬೋನಿನ ಸುತ್ತ ಓಡಿ ಓಡಿ ಸುಸ್ತು ಮಾಡಿಕೊಳ್ಳುತ್ತದೆ. ಬಿಡುಗಡೆಯ ದಾರಿ ಇದೆ ; ಅದರ ಮೂಲಕವೇ ಅದು ಬೋನಿನೊಳಕ್ಕೆ ಬಂದಿದೆ. ಆದರೆ ಅದಕ್ಕೆ ಗೊತ್ತಿಲ್ಲ. ಮಾನವನ ಪರಿಸ್ಥಿತಿಯೂ ಅದೇ ತರಹ. ಬಂಧನಕ್ಕೆ ಸಿಲುಕಿದಂತೆಯೇ ಬಂಧನದಿಂದ ಬಿಡುಗಡೆಗೂ ಒಂದು ಮಾರ್ಗವಿದೆ : ಶಂಕರಾಚಾರ್ಯರು ತಮ್ಮ ವಿವೇಕಚೂಡಾಮಣಿಯಲ್ಲಿ ಸ್ಪಷ್ಟವಾಗಿ ಹೇಳುವಂತೆ ಅಸ್ತ್ಯುಪಾಯೋ ಮಹಾನ್ ಕಶ್ಚಿತ್ ಸಂಸಾರಭಾವನಾಶನಃ. ಈ ಉಪಾಯವು (ಮಾರ್ಗವು) ಸ್ವತಃ ತಾನು ಮಾರ್ಗವನ್ನು ಅನುಸರಿಸಿ ಬಿಡುಗಡೆ ಹೊಂದಿದವನಿಗೆ ಗೊತ್ತು ; ಮತ್ತು ಅವನು ಮಾತ್ರ ಇತರರಿಗೆ ಆ ಮಾರ್ಗದ ಬಗೆಗೆ ಮಾರ್ಗದರ್ಶನ ನೀಡಬಲ್ಲನು.

ವಿವೇಕಚೂಡಾಮಣಿಯ ಕೊನೆಯಲ್ಲಿ ಶಂಕರಾಚಾರ್ಯರು ಯಾವ ಗುರುವಿನ ಕೃಪೆಯಿಂದ ತಾವು ಆಧ್ಯಾತ್ಮಿಕ ಜ್ಞಾನ ಮತ್ತು ಮೋಕ್ಷಗಳನ್ನು ಸಂಪಾದಿಸಿದರೋ ಅವರ ಬಗ್ಗೆ ಶಿಷ್ಯನಿಗೆ ಇರುವ ಭಾವನೆಗಳನ್ನು ಹೇಳುತ್ತಾರೆ (ಶ್ಲೋಕ ೫೧೭) :

ಸ್ವರಾಜ್ಯಸಾಮ್ರಾಜ್ಯ ವಿಭೂತಿರೇಷಾ
ಭವತ್‌ಕೃಪಾಶ್ರೀಮಹಿಮಪ್ರಸಾದಾತ್
ಪ್ರಾಪ್ತಾ ಮಯಾ ಶ್ರೀ ಗುರವೇ ಮಹಾತ್ಮನೇ
ನಮೋ ನಮಸ್ತೇಽಸ್ತು ಪುನರ್ನಮೋಽಸ್ತು

'ನಿಮ್ಮ ಕೃಪಾಪ್ರಸಾದದಿಂದ ನಾನು ಈ (ಆಧ್ಯಾತ್ಮಿಕ) ಸಾಮ್ರಾಜ್ಯದ ವೈಭವವನ್ನು ಪಡೆದೆ. ನಿಮಗೆ ನಮಸ್ಕಾರ, ಮಹಾತ್ಮರಾದ ಗುರುವಿಗೆ ನಮಸ್ಕಾರ ; ಮತ್ತೆ ನಿಮಗೆ ನಮಸ್ಕಾರ !'

ಶಂಕರಾಚಾರ್ಯರ ಬರಹಗಳಲ್ಲಿ—ಅದರಲ್ಲೂ ಅವರ ಅನೇಕ ಭಕ್ತಿ ಶ್ಲೋಕಗಳಲ್ಲಿ ಮತ್ತು ಗೀತೆಯ ಮೇಲಿನ ಭಾಷ್ಯದಲ್ಲಿ—ದೈವಾನುಗ್ರಹದ ಸತ್ಯದ ಬಗೆಗೆ ಅನೇಕ ಸುಂದರವಾದ ಉಲ್ಲೇಖಗಳಿವೆ. ಅವರ ಪ್ರಸಿದ್ಧವಾದ ದೇವ್ಯಾಪರಾಧಕ್ಷಮಾಪಣಸ್ತೋತ್ರಂ ಎಂಬ ಕೃತಿಯು ಮನುಷ್ಯ-ದೇವರ ಸಂಬಂಧವನ್ನು ಮಗು-ತಾಯಿಯ ಸಂಬಂಧವೆಂದು ಹಾಡುತ್ತದೆ. ಅದರ ಒಂದು ಶ್ಲೋಕದಲ್ಲಿ, ಭಕ್ತನು ದೈವಾನುಗ್ರಹಕ್ಕಾಗಿ ಮೊರೆಯಿಡುವ ಪರಿಯಿದು :

ಜಗದಂಬ ವಿಚಿತ್ರಂ ಅತ್ರ ಕಿಂ
ಪರಿಪೂರ್ಣ ಕರುಣಾಸ್ತಿ ಚೇನ್ಮಯೀ
ಅಪರಾಧಪರಾಪರಾವೃತಂ
ನಹಿ ಮಾತಾ ಸಮುಪೇಕ್ಷತೇ ಸುತಮ್

'ಓ ಜಗನ್ಮಾತೆ, ನನ್ನ ಪೂರ್ಣ ಕೃಪೆ ನನ್ನ ಮೇಲೆ ಇದ್ದರೆ, ಅಪರಾಧಗಳ ಪರಂಪರೆಯಿಂದ ತುಂಬಿದವನ ಪಾಪವಿಮೋಚನೆ ಆಗುವುದರಲ್ಲಿ ವಿಚಿತ್ರವಾದುದೇನಿದೆ ? ಏಕೆಂದರೆ ತಾಯಿಯಾದವಳು ಮಗು ಎಷ್ಟು ತಪ್ಪು ಮಾಡಿದರೂ ಅದನ್ನು ಎಂದೂ ಬಿಟ್ಟುಬಿಡುವುದಿಲ್ಲ !'

ಈ ಸ್ತೋತ್ರದ ಶ್ಲೋಕಗಳೆಲ್ಲದರ ಸಾರವು ಅದರ ಬಹುತೇಕ ಶ್ಲೋಕಗಳ ಕೊನೆಯ ಸಾಲಿನಲ್ಲಿದೆ :

ಕುಪುತ್ರೋ ಜಾಯೇತ
ಕ್ವಚಿದಪಿ ಕುಮಾತಾ ನ ಭವತಿ

'ಕೆಟ್ಟಮಗ (ಅಥವಾ ಮಗಳು) ಇರಬಹುದು, ಆದರೆ ಕೆಟ್ಟ ತಾಯಿ ಎಂದೂ ಇರುವುದಿಲ್ಲ !'

ಮಹಾ ಅಜ್ಞಾತ ರಹಸ್ಯಕ್ಕೆ ಮುಂಚೆ, ಮಾನವನು—ಮಾನವ ಅತ್ಯಂತ ಪ್ರತಿಭಾಶಾಲಿಯೇ ಇರಬಹುದು, ವಿಜ್ಞಾನಿಯೇ ಆಗಿರಬಹುದು ಇಲ್ಲವೆ ಭಾಷಾಪಂಡಿತನಾಗಿರಬಹುದು—ಒಬ್ಬ ಶಿಶು. ಈ ಸತ್ಯವನ್ನು ಇಂಗ್ಲಿಷ್ ಕವಿ ಟೆನಿಸನ್ನನು ತನ್ನ In Memorium (L IV) ಎಂಬ ಕವನದಲ್ಲಿ ಸುಂದರವಾಗಿ ತಂದಿದ್ದಾನೆ :

ನೋಡಿ, ನಮಗೆ ಏನೂ ತಿಳಿಯದು
ಒಳಿತಾಗಬಹುದೆಂದು ನಾನು ನಂಬಬಹುದು
ಕೊನೆಗೆ—ಕಟ್ಟಕಡೆಗೆ, ಎಲ್ಲರಿಗೂ
ಪ್ರತಿ ಶಿಶಿರ ಋತು ಆದ ಮೇಲೆ ವಸಂತಋತು ಬರುವುದು.
ಹೀಗೆ ನಾನು ಕನಸು ಕಾಣುವೆ ;
ಆದರೆ ನಾನಾರು ?
ಇರುಳಲ್ಲಿ ರೋದಿಸುತ್ತಿರುವ ಒಂದು ಮಗು
ಬೆಳಕಿಗಾಗಿ ರೋದಿಸುತ್ತಿರುವ ಒಂದು ಮಗು ;
ರೋದನವಲ್ಲದೆ ಬೇರಾವ ಭಾಷೆಯೂ ಅರಿಯದ ಮಗು !

ಶ್ರೀ ಅರವಿಂದರ ಪ್ರಕಾರ ಮನಕ್ಕೆ ನಿಲುಕದ ಯೋಗದ ಮೊದಲ ಮತ್ತು ಕೊನೆಯ ಮಾತೆಂದರೆ ಶರಣಾಗತಿ (ಪಾಂಡಿಚೆರಿಯ ಶ್ರೀ ಅರವಿಂದ ಸಮಾಜ, 'ಆಲ್ ಇಂಡಿಯ ಮ್ಯಾಗಸಿನ್' ಸೆಪ್ಟೆಂಬರ್ ೧೯೭೭ರಲ್ಲಿ ಉದ್ಧೃತ) :

*ಮನಕ್ಕೆ ನಿಲುಕದ ಯೋಗದ ಮೊದಲ ಮಾತು ಶರಣಾಗತಿ ; ಆದರ ಕೊನೆಯ ಮಾತೂ ಶರಣಾಗತಿಯೇ. ಅನಂತ ದೈವೀಶಕ್ತಿಗೆ ತನ್ನನ್ನು ತಾನು ಒಪ್ಪಿಸಿಕೊಳ್ಳುವ, ದಿವ್ಯ ಪ್ರಜ್ಞೆಗೆ ಏರುವ, ಪರಿಪೂರ್ಣತೆ ಪಡೆಯುವ, ಪರಿವರ್ತನೆ ಹೊಂದುವ ಸಂಕಲ್ಪದಿಂದ ಈ ಯೋಗ ಆರಂಭ. ಸಮಸ್ತವನ್ನೂ ಒಪ್ಪಿಸುವುದರಿಂದ ಅದರ ಪರಿಸಮಾಪ್ತಿ. ಏಕೆಂದರೆ ಆತ್ಮಸಮರ್ಪಣೆ ಪೂರ್ತಿಯಾದ ಮೇಲೆ ಮಾತ್ರ ಯೋಗದ ಕೊನೆತಲುಪುವುದು, ಮನಕ್ಕೆ ನಿಲುಕದ ದೈವವನ್ನೂ ತಲುಪುವುದು, ಅಸ್ತಿತ್ವದ ಪರಾಕಾಷ್ಠೆಯನ್ನು, ಸ್ವಭಾವದ ಪರಿವರ್ತನೆಯನ್ನು ತಲುಪುವುದು.*

ವೇದಾಂತದಲ್ಲಿ ಶರಣಾಗತಿ ಎಂದರೆ, ತನ್ನೊಳಗೆ ಇರುವ ಅತ್ಯುನ್ನತವಾದುದಕ್ಕೆ ಶರಣಾಗುವುದು. ಇದು ನಿಜವಾಗಿ ಪ್ರಚಂಡ ವಿಜಯವೂ ಹೌದು. ಹಿಂದೂ ಸಂಪ್ರದಾಯದ ಅನೇಕ ಸುಂದರ ಶ್ಲೋಕಗಳು ಈ ಸತ್ಯವನ್ನು ಒತ್ತಿ ಹೇಳುತ್ತವೆ. ತುಂಬ ಜನಪ್ರಿಯವಾದ ಗಜೇಂದ್ರಮೋಕ್ಷದ ಕಥೆಯಲ್ಲಿ, ಮೊಸಳೆಯ ಹಿಡಿತಕ್ಕೆ ಸಿಕ್ಕಿದ ಆನೆಯು ಬಿಡಿಸಿಕೊಳ್ಳಲು ತನ್ನೆಲ್ಲ ಶಕ್ತಿ ಪ್ರಯೋಗಿಸಿ ವಿಫಲವಾದ ಮೇಲೆ ಸುಂದರವಾದ ಸ್ತೋತ್ರದ ಮೂಲಕ ತನ್ನನ್ನು ದೇವರಿಗೆ ಒಪ್ಪಿಸಿಕೊಂಡುಬಿಡುತ್ತದೆ. ಅದರಲ್ಲಿ ಎರಡು ಶ್ಲೋಕಗಳು ಹೀಗಿವೆ (ಶ್ರೀಮದ್ಭಾಗವತಂ, VIII, ೩.೩ ಮತ್ತು ೨೯) :

ಯಸ್ಮಿನ್ನಿದಂ ಯತಶ್ಚೇದಂ
ಯೇನೇದಂ ಯ ಇದಂ ಸ್ವಯಂ
ಯೋಽಸ್ಮಾತ್ ಪರಸ್ಮಾತ್ ಚ ಪರ
ತಂ ಪ್ರಪದ್ಯೇ ಸ್ವಯಂಭುವಮ್

'ಯಾರಲ್ಲಿ ಈ ಜಗತ್ತು ಇದೆಯೋ, ಯಾರಿಂದ ಈ ಜಗತ್ತು ಸೃಷ್ಟಿಯಾಗಿದೆಯೋ, ಯಾರಿಂದ ಈ ಜಗತ್ತು ನಡೆಯುವುದೋ, ಮತ್ತು ಯಾರು ಸ್ವಯಂ ಜಗತ್ತೇ ಆಗಿದ್ದಾರೋ, ಮತ್ತು ಯಾರು ಈ ಜಗತ್ತಿನ ಕಾರ್ಯಕಾರಣಗಳಿಗೆ ಅತೀತರಾಗಿದ್ದಾರೋ ಅಂಥ ಸ್ವಯಂಭುವಿನಲ್ಲಿ ಶರಣಾಗುವೆ.'

ನಾಯಂ ವೇದ ಸ್ವಮಾತ್ಮಾನಂ
ಯತ್ ಶಕ್ತ್ಯಾಹಂಧಿಯಾ ಹತಂ
ತಂ ದುರತ್ಯಯಮಾಹಾತ್ಮ್ಯಂ
ಭಗವಂತಂ ಇತೋಽಸ್ಮ್ಯಹಮ್

'ಯಾರ ಅಹಮಿಕೆಯ ಮಾಯಾಶಕ್ತಿಯ ಆಘಾತದಿಂದ ಈ ಮಾನವನ ಆತ್ಮವು ತನ್ನ ನಿಜವಾದ ಆತ್ಮವನ್ನು (ನಿಜವಾದ ಆತ್ಮವು ಯಾರೋ ಅವನನ್ನು) ಅರಿಯುವುದಿಲ್ಲವೋ, ಮಹಿಮೆಯನ್ನರಿಯಲಾಗದ ಆ ಭಗವಂತನ ಶರಣಾಗುತ್ತಾನೆ.'

ವಿವೇಕಾನಂದರು ತಮ್ಮ ಗುರುವಾದ ಶ್ರೀರಾಮಕೃಷ್ಣರ ಬಗೆಗೆ ರಚಿಸಿರುವ ಸ್ತುತಿಯಲ್ಲಿ ಎರಡು ಶ್ಲೋಕಗಳು ಹೃದಯಸ್ಪರ್ಶಿಯಾಗಿವೆ (Universal Prayers, ಪು. ೨೧೩) :

ಶಕ್ತಿಸಮುದ್ರಸಮುತ್ಥಿತರಂಗಮ್
ದರ್ಶಿತಪ್ರೇಮ ವಿಜೃಂಭಿತರಂಗಮ್ ।
ಸಂಶಯರಾಕ್ಷಸನಾಶಮಹಾಸ್ತ್ರಮ್
ಯಾಮಿ ಗುರುಂ ಶರಣಂ ಭವವೈದ್ಯಮ್ ॥

'ಶಕ್ತಿಸಮುದ್ರದಿಂದ ಏಳುವ ತರಂಗದಂತಿರುವ, ಶುದ್ಧವಾದ ಪ್ರೇಮದಿಂದ ತನ್ನ ದಿವ್ಯನಾಟಕವನ್ನಾಡುವ, ಸಂಶಯಪಿಶಾಚಿಯನ್ನು ನಾಶಗೈಯುವ ಮಹಾ ಅಸ್ತ್ರವುಳ್ಳ, ಭವರೋಗ ಚಿಕಿತ್ಸಕನಾದ ಗುರುವಿನಲ್ಲಿ ಶರಣುಹೋಗುವೆ.'

ಅದ್ವಯತತ್ತ್ವಸಮಾಹಿತ ಚಿತ್ತಂ
ಪ್ರೋಜ್ಜ್ವಲಭಕ್ತಿಪಟಾವೃತವೃತ್ತಂ
ಕರ್ಮಕಲೇವರಮದ್ಭುತಚೇಷ್ಟಂ
ಯಾಮಿ ಗುರುಂ ಶರಣಂ ಭವವೈದ್ಯಮ್

'ಅದ್ವೈತ ತತ್ತ್ವಜ್ಞಾನದಲ್ಲಿ ಸಂಸ್ಥಾಪಿತರಾದ, ಭಕ್ತಿಯೆಂಬ ಉಜ್ಜ್ವಲವಾದ ವಸ್ತ್ರದಿಂದ ಆವೃತವಾದ ಬದುಕಿನ, (ಮಾನವಕುಲಕ್ಕೆ ಒಳಿತನ್ನು ಮಾಡುವ) ಅದ್ಭುತ ಕೆಲಸಗಳಲ್ಲಿ ಸದಾ ನಿರತರಾಗಿರುವ ದೇಹವುಳ್ಳ, ಭವರೋಗಚಿಕಿತ್ಸಕನಾದ ಗುರುವಿನಲ್ಲಿ ಶರಣುಹೋಗುವೆ.'

ನಾರದ ಭಕ್ತಿಸೂತ್ರಗಳು ಶುದ್ಧ ಭಕ್ತಿಸಾಧನೆಗೆ ಅನೇಕಾನೇಕ ಮಾರ್ಗಗಳನ್ನು ಸೂಚಿಸುತ್ತವೆ ; ಕೊನೆಗೆ ದೈವಾನುಗ್ರಹವೇ ಅತ್ಯುತ್ತಮ ಮಾರ್ಗ ಎಂದು ಘೋಷಿಸುತ್ತದೆ (ಸೂತ್ರ ೩೮) :

ಮುಖ್ಯತಸ್ತು ಮಹತ್‌ಕೃಪಯೈವ
ಭಗವತ್ಕೃಪಾಲೇಶಾತ್ ವಾ

'ಮುಖ್ಯವಾಗಿ (ಶುದ್ಧವಾದ ಭಕ್ತಿಯು) ಮಹಾತ್ಮರ ಕೃಪೆಯಿಂದ ಮಾತ್ರ ಅಥವಾ ಅಣುಮಾತ್ರದ ಭಗವತ್‌ಕೃಪೆಯಿಂದ ದೊರಕುತ್ತದೆ.'

ಗೀತೆಯ ಶ್ರೇಷ್ಠ ಶ್ಲೋಕಗಳಲ್ಲಿ ಒಂದು—ನಮ್ಮ ಸಂತರಿಗೂ ಭಕ್ತರಿಗೂ ಈ ಶ್ಲೋಕ ಸ್ಫೂರ್ತಿ ನೀಡಿದೆ—ಶುದ್ಧ ಭಕ್ತಿಯ ಶರಣಾಗತಿಯಿಂದ ತಮ್ಮ ಅಹಂಕಾರವನ್ನು ಸಂಪೂರ್ಣವಾಗಿ ಅಳಿಸಿಹಾಕಿರುವವರನ್ನು ಭಗವಂತನು ಪಾಲನೆ ಮಾಡುತ್ತಾನೆ (೯.೨೨) :

ಅನನ್ಯಾಶ್ಚಿಂತಯನ್ತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್ ॥

'ಯಾರು ಅನನ್ಯವಾಗಿ ನನ್ನನ್ನು ಧ್ಯಾನಿಸುತ್ತಿರುತ್ತಾರೋ, (ಕೆಲಸ ಮಾಡುವಾಗ ಮತ್ತು ಪೂಜಿಸುವಾಗ) ಸದಾ ನನ್ನನ್ನು ಉಪಾಸನೆ ಮಾಡುತ್ತಾರೋ, ಅಂಥ ಯೋಗಸ್ಥಿತಿಯಲ್ಲಿರುವವರ ಯೋಗಕ್ಷೇಮವನ್ನು ವಹಿಸಿಕೊಳ್ಳುತ್ತೇನೆ (ಅವರಿಗೆ ಇಲ್ಲದಿರುವುದನ್ನು ಕೊಡುತ್ತೇನೆ ಈಗ ಆಗಲೇ ಇರುವುದನ್ನು ಉಳಿಸುತ್ತೇನೆ).'

ಇದೇ ಭಾವನೆಯನ್ನು ಮಹಾಭಾರತದ ಒಂದು ಶ್ಲೋಕದಲ್ಲಿ (ಶಾಂತಿಪರ್ವ, ೩೪೮. ೭೨) ಹೇಳಲಾಗಿದೆ :

ಮನೀಷಿಣೋ ಹಿ ಯೇ ಕೇಚಿತ್
ಯತಯೋ ಮೋಕ್ಷಧರ್ಮಿಣಃ
ತೇಷಾಂ ವಿಚ್ಛಿನ್ನತೃಷ್ಣಾನಾಂ
ಯೋಗಕ್ಷೇಮವಹೋ ಹರಿಃ

'ಯಾರು ವಿವೇಕಿಗಳೂ, ಮೋಕ್ಷ ಮಾರ್ಗದಲ್ಲಿರುವವರೂ, ದೈಹಿಕ ತೃಷೆಯನ್ನು ಕಡಿದುಹಾಕಿಕೊಂಡವರೂ ಆದ ಆತ್ಮಸಂಯಮಿಗಳ ಯೋಗಕ್ಷೇಮವನ್ನು (ಅವರಿಗೆ ಇಲ್ಲದ್ದನ್ನು ನೀಡಿ ಇರುವುದನ್ನು ಉಳಿಸಿ) ಹರಿಯು (ಎಲ್ಲರಲ್ಲೂ ಇರುವ ಭಗವಂತನು) ನೋಡಿಕೊಳ್ಳುತ್ತಾನೆ.'

ಭಗವಂತನು ತನ್ನ ಭಕ್ತರ ಸೇವೆ ಮಾಡಲು ಸಂತೋಷಪಡುತ್ತಾನೆಂಬುದು ಭಾರತದ ಭಕ್ತಿಸಾಹಿತ್ಯದಲ್ಲಿ ಪದೇ ಪದೇ ಬರುತ್ತದೆ. ನಮ್ಮ ಪ್ರೀತಿಪಾತ್ರರಾದ ಅನೇಕಾನೇಕ ಸಂತರ ಬದುಕಿನಲ್ಲಿ ನಾವು ಇದನ್ನು ಕಾಣುತ್ತೇವೆ. ಇತ್ತೀಚಿನ ಜ್ವಲಂತ ನಿದರ್ಶನವೊಂದನ್ನು ಸ್ವಾಮಿ ವಿವೇಕಾನಂದರ ಬದುಕಿನಲ್ಲಿ ಬರುವ ಹೃದಯಸ್ಪರ್ಶಿಯಾದ ಅನುಭವದಲ್ಲಿ ಕಾಣುತ್ತೇವೆ. ತಮ್ಮ ಗುರು ಶ್ರೀರಾಮಕೃಷ್ಣರ ಮರಣಾನಂತರ, ಮತ್ತು ಅಮೆರಿಕಕ್ಕೆ ಹೋಗುವ ಮುಂಚೆ ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತಾದ್ಯಂತ ಮಾಡಿದ ೩ ವರ್ಷಗಳ ಪರ್ಯಟನೆಯ ಕಾಲದಲ್ಲಿ ಮಾರನೆಯ ದಿನದ ಬಗ್ಗೆ ಯಾವುದೇ ಯೋಚನೆ ಮಾಡದೆ, ಹಣದ ಚೀಲವನ್ನೂ ತೆಗೆದುಕೊಳ್ಳದೆ, ಕೇವಲ ದೇವರ ಮೇಲೆ ಭಾರ ಹಾಕಿ ಸುತ್ತಾಡಿದರು. ಈ ಘಟನೆಯ ಬಗ್ಗೆ ಹೇಳುತ್ತಾ, Life of Swami Vivekananda ಎಂಬ ಕೃತಿಯಲ್ಲಿ ಅವರ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಶಿಷ್ಯರು ಹೀಗೆ ಹೇಳುತ್ತಾರೆ (ಪು. ೨೫೫-೨೬೧, ೧೯೪೯ರ ಆವೃತ್ತಿ) :

*ಸಂಯುಕ್ತ ಪ್ರಾಂತಗಳಲ್ಲಿ (ಉತ್ತರ ಪ್ರದೇಶ) ಸುಡುತ್ತಿರುವ ಬೇಸಗೆಯ ಮಧ್ಯಾಹ್ನದ ದಿನಗಳಲ್ಲಿ ಒಂದು ದಿನ ಸ್ವಾಮೀಜಿ ತಾರಿಘಾಟ್‌ನಲ್ಲಿ ರೈಲಿನಿಂದ ಇಳಿದರು. ಅವರ ಗಂಟುಮೂಟೆಗಳೆಂದರೆ ಸಂನ್ಯಾಸಿಯ ಕಾವಿಶಾಟಿ ಮತ್ತು ಯಾರೋ ಒಬ್ಬರು ಕೊಟ್ಟ ಸ್ವಲ್ಪದೂರದ ಊರಿನ ಮೂರನೆ ದರ್ಜೆಯ ಟಿಕೆಟ್ಟು. ಅವರ ಬಳಿ ಕಮಂಡಲವೂ ಇರಲಿಲ್ಲ. ರೈಲು ನಿಲ್ದಾಣದ ಷೆಡ್‌ನಲ್ಲಿ ಉಳಿಯಲೂ ಪೋರ್ಟರು ಬಿಡಲಿಲ್ಲ. ಆದ್ದರಿಂದ ಅವರು ಮೂರನೆ ದರ್ಜೆ ಪ್ರಯಾಣಕರಿಗಾಗಿ ಇರುವ ಕಾಯುವ ಷೆಡ್‌ನ ಒಂದು ಕಂಬವನ್ನೊರಗಿ ಕುಳಿತುಕೊಂಡರು.*

*ಅಲ್ಲಿ ನೆರೆದಿದ್ದ ನಾನಾ ಬಗೆಯ ಜನಸಂದಣಿಯಲ್ಲಿ ಒಬ್ಬ ಮಧ್ಯವಯಸ್ಕನ ಬಗ್ಗೆ ನಾವು ಇಲ್ಲಿ ಹೇಳಬೇಕು. ಆತ ಉತ್ತರಭಾರತದ ವೈಶ್ಯ, ಬನಿಯ. ಸ್ವಾಮಿಗೆ ಹೆಚ್ಚು ಕಡಮೆ ಎದುರುಗಡೆ*

ಷಡ್ಡಿನ ಆಸರೆಯಲ್ಲಿ ಸ್ವಲ್ಪ ದೂರದಲ್ಲಿ ದರಿ (ಹತ್ತಿರ ಚಾಪೆ)ಯ ಮೇಲೆ ಕುಳಿತಿದ್ದ. ಸ್ವಾಮೀಜಿಯ ಹೊಟ್ಟೆಗಿಲ್ಲದ ಪರಿಸ್ಥಿತಿಯನ್ನು ನೋಡಿ, ಹಿಂದಿನ ರಾತ್ರಿ ಒಂದೇ ಬೋಗಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ ಅವರನ್ನು ಅಪಹಾಸ್ಯ ಮಾಡಿದ್ದ. ಬೇರೆ ಬೇರೆ ನಿಲ್ದಾಣಗಳಲ್ಲಿ ಅವರು ನಿಂತಿದ್ದಾಗ, ಸ್ವಾಮೀಜಿ ಬಾಯಾರಿಕೆಯಿಂದ ಬಳಲಿ ಬೆಂಡಾಗಿ ದುಡ್ಡಿಲ್ಲದೆ ನೀರನ್ನು ನೀರು ಮಾರುವವರಿಂದ ಕೊಳ್ಳಲಾಗದೆ ಇದ್ದಾಗ ಆ ಬನಿಯನು (ವೈಶ್ಯನು) ತನ್ನ ಬಾಯಾರಿಕೆ ತೀರಿಸಿಕೊಳ್ಳಲು ನೀರನ್ನು ತಂದು ಕುಡಿಯುತ್ತಾ "ಇಲ್ಲಿ ನೋಡಿ ಮಹಾರಾಯರೆ, ಎಂಥ ಒಳ್ಳೆಯ ನೀರು! ಸಂನ್ಯಾಸಿಯಾದ ನೀವು ದುಡ್ಡು ಕಾಸನ್ನು ತೊರೆದು ನೀರನ್ನು ಕೊಳ್ಳಲೂ ಆಗುತ್ತಿಲ್ಲ ; ಆದ್ದರಿಂದ ಅದಿಲ್ಲದೆ ಆನಂದವಾಗಿರಿ. ನನ್ನಂತೆ ನೀವು ಏಕೆ ಹಣಸಂಪಾದನೆ ಮಾಡಿ ಮಜಾ ಮಾಡಬಾರದು ?" ಎಂದು ಹೇಳಿದ. ಅವನಿಗೆ ಸಂನ್ಯಾಸ ಹಿಡಿಸಿಲ್ಲ ; ಅಲ್ಲ, ಲೋಕವನ್ನೂ ದುಡ್ಡು ಮಾಡುವುದನ್ನೂ ತೊರೆಯುವುದರಲ್ಲಿ ಅವನಿಗೆ ನಂಬಿಕೆಯಿಲ್ಲ. ಅವನ ಅಭಿಪ್ರಾಯ ದಲ್ಲಿ, ಸಂನ್ಯಾಸಿ ಹೊಟ್ಟೆಗಿಲ್ಲದೆ ಇರಬೇಕಾದುದು ನ್ಯಾಯ. ಆದ್ದರಿಂದ ಅವರಿಬ್ಬರೂ ತಾರಿಘಾಟಿ ನಲ್ಲಿ ಇಳಿದಾಗ, ಅವನು ವಾದಗಳು, ಉದಾಹರಣೆಗಳು ಮತ್ತು ತಮಾಷೆಗಳಿಂದ ಸ್ವಾಮೀಜಿಗೆ ಸಲ್ಲಬೇಕಾದುದು ಸಂದಿದೆ ಎಂದು ಸ್ಪಷ್ಟಪಡಿಸಲು ಸಾಕಷ್ಟು ತೊಂದರೆ ತೆಗೆದುಕೊಂಡನು. ಸ್ವಾಮೀಜಿ ಉರಿಯುವ ಬಿಸಿಲಿನಲ್ಲಿದ್ದರು, ಆದರೆ ಆ ಬನಿಯ ನೆರಳಲ್ಲಿ ಕುಳಿತಿದ್ದನು. ಅವನು ಮತ್ತೆ ಕುಹಕವಾದ ನಗೆ ನಕ್ಕು, ತುಟಿಗಳನ್ನು ಕೊಂಕಿಸಿ ಮತ್ತೆ ಹೀಗೆ ಶುರುಮಾಡಿದ: "ನೋಡಿ, ನಾನೆಂಥ ಸೊಗಸಾದ ಪೂರಿಗಳನ್ನೂ ಲಡ್ಡುಗಳನ್ನೂ ತಿನ್ನುತ್ತಿದ್ದೇನೆ! ನೀವು ಹಣ ಸಂಪಾದಿಸಲು ಗಮನ ಕೊಡುವುದೇ ಇಲ್ಲ ; ಆದ್ದರಿಂದ ನೀವು ಗಂಟಲು ಒಣಗಿಸಿಕೊಂಡು, ಹೊಟ್ಟೆ ಒಣಗಿಸಿ ಕೊಂಡು, ಬರಿ ನೆಲದ ಮೇಲೆ ಕುಳಿತುಕೊಳ್ಳಬೇಕು." ಸ್ವಾಮೀಜಿ ಶಾಂತವಾಗಿ ನೋಡುತ್ತ ಇದ್ದರು, ಅವರ ಮುಖದಲ್ಲಿ ಒಂದು ಸ್ನಾಯುವೂ ಅಲುಗಾಡಲಿಲ್ಲ.

ಆಗ ಸ್ಥಳೀಕನೊಬ್ಬ, ಒಂದು ಹೊರೆ ಹೊತ್ತುಕೊಂಡು, ಬಲಗೈಯಲ್ಲಿ ಒಂದು ಲೋಟ ಹಿಡಿದು ಕೊಂಡು, ಎಡಕಂಕುಳಲ್ಲಿ ಒಂದು ದರಿ(ಚಾಪೆ) ಮತ್ತು ಎಡಗೈಯಲ್ಲಿ ಒಂದು ಮಣ್ಣಿನ ಕೊಡ ನೀರು ಹಿಡಿದುಕೊಂಡು ಪ್ರತ್ಯಕ್ಷನಾದ. ಅವನು ಸರಸರನೆ ನಿರ್ಮಲವಾದ ಸ್ಥಳದಲ್ಲಿ ತನ್ನ ಚಾಪೆ ಹಾಸಿ ತಾನು ಹೊತ್ತಿದ್ದ ವಸ್ತುಗಳನ್ನು ಅದರ ಮೇಲಿಟ್ಟು, ಸ್ವಾಮೀಜಿಯವರನ್ನು "ಬಾಬಾಜಿ ಬನ್ನಿ, ನಿಮಗೋಸ್ಕರ ನಾನು ತಂದಿರುವ ಆಹಾರವನ್ನು ಸೇವಿಸಿ!" ಎಂದು ಕೂಗಿ ಕೊಂಡ. ಸ್ವಾಮೀಜಿಯವರಿಗಾದ ಆಶ್ಚರ್ಯ ಮಾತಿಗೆ ಮೀರಿದ್ದು. ಏನಿದರ ಅರ್ಥ ? ಈ ಆಗಂತುಕ ಯಾರು ? ಗೇಲಿ ಮಾಡುತ್ತಿದ್ದ ಬನಿಯನ ನೋಟ ಬದಲಾಗಿ ಆಶ್ಚರ್ಯಚಕಿತ ವಾಯಿತು. ಆಗಂತುಕ ಒತ್ತಾಯಿಸುತ್ತಲೇ ಇದ್ದ : "ಬನ್ನಿ ಬಾಬಾಜಿ, ನೀವು ಖಂಡಿತ ಬಂದು ಆಹಾರ ಸೇವಿಸಬೇಕು!" ಸ್ವಾಮೀಜಿ ಹೇಳಿದರು : "ಮಿತ್ರ! ನೀನೇನೋ ತಪ್ಪಾಗಿ ತಿಳಿದುಕೊಂಡು ಹೀಗೆ ಮಾಡುತ್ತಿದ್ದೀಯೆಂದು ನನಗನ್ನಿಸುತ್ತಿದೆ. ಬಹುಶಃ ಬೇರೆ ಯಾರನ್ನೋ ನಾನು ಎಂದು ತಪ್ಪಾಗಿ ತಿಳಿದಿದ್ದೀಯೆ. ನನಗೆ ನಿನ್ನನ್ನು ಎಂದೂ ಭೇಟಿ ಮಾಡಿದ ನೆನಪೇ ಇಲ್ಲ."

ಆದರೆ ಆತ ಕೂಗಿಕೊಂಡ : "ಇಲ್ಲ, ಇಲ್ಲ, ನಾನು ನೋಡಿರುವ ಬಾಬಾಜಿನೇ ನೀವು!" "ಹಾಗೆಂದರೇನು ಅರ್ಥ" ಎಂದು ಸ್ವಾಮೀಜಿ ಹೇಳಿದಾಗ, ಅವನ ಕುತೂಹಲ ಕೆರಳಿತು. ಅವನ ಕುಚೇಷ್ಟೆಯ ಮಿತ್ರ ಈ ದೃಶ್ಯವನ್ನು ಪಿಳಿಪಿಳಿ ನೋಡುತ್ತಾ ಇದ್ದ. "ನನ್ನನ್ನು ಎಲ್ಲಿ ನೋಡಿದ್ದೀಯೆ ?" ಆ ಮನುಷ್ಯ ಉತ್ತರಿಸಿದ : "ಏಕೆ, ನಾನು ಮಿಠಾಯಿ ಮಾರುವವ ; ಮಧ್ಯಾಹ್ನದ ಊಟವಾದ ಮೇಲೆ ನಾನು ಮಾಮೂಲಿನಂತೆ ಒಂದು ಸಣ್ಣ ನಿದ್ದೆ ಹೊಡೆಯುತ್ತಿದ್ದೆ.

ಆಗ ಕನಸಿನಲ್ಲಿ ಶ್ರೀರಾಮ್‌ಜಿ ನಿಮ್ಮನ್ನು ನನಗೆ ತೋರಿಸುತ್ತಾ, ನಿಮಗೆ ಹಿಂದಿನ ದಿನದಿಂದ ಅನ್ನಾಹಾರವಿಲ್ಲದಿರುವುದು ಶ್ರೀರಾಮನಿಗೆ ಖೇದವಾಗಿದೆಯೆಂದೂ, ನಾನು ಆ ಕೂಡಲೇ ಎದ್ದು ಕೆಲವು ಪೂರಿಗಳನ್ನೂ, ಪಲ್ಯವನ್ನೂ, ಸ್ವಲ್ಪ ಸಿಹಿತಿಂಡಿಗಳನ್ನೂ, ತಣ್ಣೀರನ್ನೂ, ಕುಳಿತುಕೊಳ್ಳಲು ದರಿ(ಚಾಪೆ)ಯನ್ನೂ ತೆಗೆದುಕೊಂಡು ಬಂದು ರೈಲುನಿಲ್ದಾಣದಲ್ಲಿ ತಮಗೆ ಕೊಡಬೇಕೆಂದೂ ಹೇಳಿದನು. ನಾನು ಎದ್ದೆ ; ಅದು ಬರಿಯ ಕನಸು ಎಂದು ಭಾವಿಸಿ, ಮತ್ತೆ ಇನ್ನೊಂದು ಕಡೆ ತಿರುಗಿ ಮಲಗಿದೆ. ಆದರೆ ಶ್ರೀರಾಮನು ಮತ್ತು ಕೃಪೆ ತೋರಿ ನನ್ನ ಬಳಿ ಬಂದು ನನ್ನನ್ನು ತಳ್ಳಿ ಎಬ್ಬಿಸಿ ತಾನು ಹೇಳಿದಂತೆ ಮಾಡಬೇಕೆಂದು ಹೇಳಿದನು. ನಾನು ಬೇಗಬೇಗನೆ ಕೆಲವು ಪೂರಿಗಳನ್ನೂ ಪಲ್ಯವನ್ನೂ ತಯಾರಿಸಿ, ಬೆಳಗ್ಗೆ ನಾನು ತಯಾರಿಸಿದ್ದ ಸ್ವಲ್ಪ ಮಿಠಾಯಿಯನ್ನೂ, ತಣ್ಣೀರನ್ನೂ ನನ್ನ ಅಂಗಡಿಯಿಂದ ದರಿಯನ್ನೂ ತೆಗೆದು ಕೊಂಡು, ನೆಟ್ಟಗೆ ಇಲ್ಲಿಗೆ ಬಂದು ದೂರದಿಂದ ಒಮ್ಮೆಲೇ ನಿಮ್ಮನ್ನು ಗುರುತಿಸಿದೆ. ಈಗ ಬಂದು ಬಿಸಿಬಿಸಿಯಾಗಿ ತಿನ್ನಿ. ನಿಮಗೆ ತುಂಬ ಹಸಿವಾಗಿರಬೇಕು." ಆ ಸಮಯದಲ್ಲಿ ಸ್ವಾಮೀಜಿಗೆ ಆದ ಅನುಭವಗಳನ್ನು ಊಹಿಸಿ ಕೊಳ್ಳಬಹುದು. ಹೃತ್ಪೂರ್ವಕವಾಗಿ ಸ್ವಾಮೀಜಿ ತನ್ನ ಆತಿಥೇಯನಿಗೆ ವಂದನೆ ತಿಳಿಸಿದರು. ಆಗ ಪ್ರೇಮಾಶ್ರುಗಳು ಅವರ ಕಣ್ಣುಗಳಿಂದ ಉರುಳಿದವು. ಆದರೆ ಆ ದಯಾಳುವು "ಇಲ್ಲ ಬಾಬಾಜಿ, ಇಲ್ಲ! ನನಗೆ ವಂದನೆ ಹೇಳಬೇಡಿ ! ಅದೆಲ್ಲ ಶ್ರೀರಾಮನ ಚಿತ್ತ !" ಎಂದು ಪ್ರತಿಭಟಿಸಿದ. ಗೇಲಿ ಮಾಡುತ್ತಿದ್ದ ಬನಿಯನು ಈ ಘಟನೆಯಿಂದ ನಿಬ್ಬೆರಗಾಗಿ, ತಾನು ಬಳಸಿದ ಕೆಟ್ಟಮಾತುಗಳಿಗಾಗಿ ಸ್ವಾಮೀಜಿಯ ಕ್ಷಮೆಬೇಡಿ, ಕಾಲುಕೊಡವಿಕೊಂಡು ಹೊರಟುಹೋದ.'

ಗೀತೆಯ ಯೋಗಕ್ಷೇಮಂ ವಹಾಮ್ಯಹಂ ಎಂಬ ಭರವಸೆಯಂತೆ ಸ್ವಾಮಿ ವಿವೇಕಾನಂದರೇ ಸ್ವತಃ ತಮ್ಮ ಜೀವನದಲ್ಲಿ ದೈವಾನುಗ್ರಹದ ಅನುಭವಗಳನ್ನು ತಮ್ಮ Conversations and Dialogues ಕೃತಿಯಲ್ಲಿ ಉಲ್ಲೇಖಿಸಿದ್ದಾರೆ (The Complete Works, ಸಂ. VI, ಪು. ೪೭೮-೮೨) :

'ಈ ಜೀವನದಲ್ಲಿ ನಾನು ಈ ಭಗವತ್ಕೃಪೆಯನ್ನು ಮತ್ತೆ ಮತ್ತೆ ಪಡೆದಿರುತ್ತೇನೆ. ಆತನು ಹಿಂದೆ ನಿಂತುಕೊಂಡೇ ಈ ಕೆಲಸವನ್ನೆಲ್ಲ ಮಾಡಿಸುತ್ತಾನೆ. ಮರದ ಕೆಳಗೆ ಹಸಿವಿನಿಂದ ಬಳಲಿ ಬೇಸತ್ತು ಬಿದ್ದಿದ್ದಾಗಲೂ, ಕೌಪೀನ ಹಾಕಿಕೊಳ್ಳುವುದಕ್ಕೂ ಒಂದು ಚೂರು ಬಟ್ಟೆಯಿಲ್ಲ ದಿದ್ದಾಗಲೂ, ಒಂದು ಕಿಲುಬುಕಾಸೂ ಇಲ್ಲದೆ ವಿಶ್ವಪರ್ಯಟನೆ ಮಾಡಬೇಕೆಂದು ನಿಶ್ಚಯಿಸಿ ದಾಗಲೂ ಆಗಲೂ ಶ್ರೀರಾಮಕೃಷ್ಣರ ಕೃಪೆಯಿಂದ ಎಲ್ಲಾ ಬಗೆಯ ದಯೆಯನ್ನು ಪಡೆದಿದ್ದೇನೆ. ಯಾವಾಗ ಇದೇ ವಿವೇಕಾನಂದರ ದರ್ಶನ ಮಾಡಬೇಕೆಂದು ಚಿಕಾಗೋವಿನ ರಸ್ತೆಯಲ್ಲಿ ಹೊಡೆದಾಟ ಬಡಿದಾಟಗಳಾಗುತ್ತಿದ್ದವೋ, ಯಾವ ಆ ಸನ್ಮಾನದ ನೂರರಲ್ಲಿ ಒಂದು ಭಾಗವನ್ನು ಪಡೆದರೂ ಸಾಧಾರಣ ಮನುಷ್ಯರು ಹುಚ್ಚರಾಗಿಬಿಡುತ್ತಿದ್ದರೋ ಅಂಥ ಸನ್ಮಾನವನ್ನೂ ಪರಮಹಂಸರ ದಯದಿಂದ ಸುಲಭವಾಗಿ ಅರಗಿಸಿಕೊಂಡಿದ್ದೇನೆ.

ಕೃಷ್ಣನ ಪರಿವರ್ತನೆಯನ್ನು, ವಿಶ್ವರೂಪವನ್ನು ದುರ್ಯೋಧನ, ಕೃಷ್ಣ ಇಬ್ಬರೂ ನೋಡಿದರು. ಅರ್ಜುನ ನಂಬಿದನು, ದುರ್ಯೋಧನನು ಅದನ್ನು ಇಂದ್ರಜಾಲವೆಂದು ಭಾವಿಸಿದನು. ದೇವರೇ ತಿಳಿಸಿಕೊಡದಿದ್ದರೆ ಏನನ್ನು ಹೇಳುವುದೂ ಸಾಧ್ಯವಿಲ್ಲ. ನೋಡದೇ ಕೇಳದೆಯೇ ಕೆಲವರಿಗೆ ಪೂರ್ಣ ನಂಬಿಕೆಯುಂಟಾಗುತ್ತದೆ. ತಮ್ಮ ಸ್ವಂತ ಕಣ್ಣುಗಳಿಂದ ಹನ್ನೆರಡು ವರ್ಷಗಳ ಕಾಲ ಎದುರಿಗಿದ್ದು ನಾನಾ ದಿವ್ಯವಿಭೂತಿಗಳನ್ನು ನೋಡಿಯೂ ಸಂದೇಹದಲ್ಲಿ ಮುಳುಗಿರುತ್ತಾರೆ. ಇದೆಲ್ಲದರ ರಹಸ್ಯವೆಂದರೆ ಆ ಭಗವತ್ಕೃಪೆ! ಆದರೆ ಅದನ್ನು ಬಿಡದೆ ಹಿಡಿದುಕೊಂಡಿರಬೇಕು ; ಆಗ ಅವನ ಕೃಪೆಯಾಗುತ್ತದೆ.

ಶಿಷ್ಯ : ಸ್ವಾಮಿ, ಕೃಪೆಗೆ ಏನಾದರೂ ನಿಯಮವಿದೆಯೆ ?

ಸ್ವಾಮೀಜಿ : ಹೌದು ಮತ್ತು ಇಲ್ಲ.

ಶಿಷ್ಯ : ಅದು ಹೇಗೆ ?

ಸ್ವಾಮೀಜಿ : ಯಾರು ಮನೋವಾಕ್ಕಾಯಗಳಲ್ಲಿ ಸದಾ ಪವಿತ್ರರಾಗಿರುತ್ತಾರೋ, ಯಾರ ಭಕ್ತಿ ಪ್ರಬಲವಾಗಿರುತ್ತದೋ, ಯಾರು ಸದಸದ್ವಿವೇಕಿಗಳೋ, ಮತ್ತು ಧ್ಯಾನಧಾರಣಗಳಲ್ಲಿ ಆಸಕ್ತರೋ ಅವರ ಮೇಲೆ ಭಗವತ್ಕೃಪೆಯುಂಟಾಗುತ್ತದೆ. ಆದರೆ ಭಗವಂತನು ಪ್ರಕೃತಿ ನಿಯಮಗಳಿಗೆ ಬಾಹಿರನು. ಎಲ್ಲ ನೀತಿನಿಯಮಗಳಿಗೆ ಕಟ್ಟುಪಾಡುಗಳಿಗೆ ಅತೀತನು. ಪರಮಹಂಸರು 'ಅವನ ಸ್ವಭಾವವು ಮಗುವಿನ ಸ್ವಭಾವದಂತೆ' ಎಂದು ಹೇಳುತ್ತಿದ್ದರು. ಅದಕ್ಕೋಸ್ಕರವೇ ಕೆಲವರು ಕೋಟಿ ಜನ್ಮಗಳನ್ನು ಎತ್ತಿದರೂ ಅವನ ಸುಳಿವೇ ಗೊತ್ತಾಗದಿರುವುದು ಕಂಡುಬರುತ್ತದೆ; ಮತ್ತು ಯಾರನ್ನು ನಾವು ಪಾಪಿ, ನಾಸ್ತಿಕ ಎನ್ನುತ್ತೇವೆಯೋ ಅವರಲ್ಲಿ ಬೇಗನೆ ಜ್ಞಾನೋದಯವಾಗಿಬಿಡುತ್ತದೆ. ಅವರಿಗೆ ಭಗವಂತನು ಅಯಾಚಿತವಾಗಿ ಕೃಪೆ ತೋರುತ್ತಾನೆ. ಅವರಿಗೆ ಪೂರ್ವಜನ್ಮದ ಪುಣ್ಯವಿತ್ತು ಎಂದು ನೀವು ಭಾವಿಸಬಹುದು; ಆದರೆ ಆ ರಹಸ್ಯವನ್ನು ತಿಳಿಯುವುದು ಕಷ್ಟ. ಪರಮಹಂಸರು ಕೆಲವುವೇಳೆ 'ಭಗವಂತನ ಮೇಲೆ ಭಾರಹಾಕಿ ತೆಪ್ಪಗಿದ್ದುಬಿಡು, ಬಿರುಗಾಳಿಗೆ ಹಾರಾಡುವ ತರಗೆಲೆಯಾಗಿಬಿಡು ಎಂದೂ, ಕೆಲವು ವೇಳೆ 'ಅವನ ಕೃಪೆಯೆಂಬ ಗಾಳಿಯು ಬೀಸುತ್ತಲೇ ಇರುತ್ತದೆ, ನೀನು ನಿನ್ನ ದೋಣಿಯ ಹಾಯಿಪಟವನ್ನು ಬಿಚ್ಚಬೇಕು, ಅಷ್ಟೆ' ಎಂದು ಹೇಳುತ್ತಿದ್ದರು.

ಶಿಷ್ಯ : ಆದರೆ ಸ್ವಾಮೀಜಿ, ಇದಂತೂ ಅದ್ಭುತವಾದ ವಿಷಯ. ಯಾವ ತರ್ಕವೂ ಇದರ ಮುಂದೆ ನಿಲ್ಲುವುದಿಲ್ಲ.

ಸ್ವಾಮೀಜಿ : ತರ್ಕಯುಕ್ತಿಗಳ ಎಲ್ಲೆಯು ಮಾಯೆಯ ಸಾಮ್ರಾಜ್ಯದಲ್ಲಿ, ದೇಶಕಾಲ ನಿಮಿತ್ತಗಳ ಗಡಿಯಲ್ಲಿ ಇರುವಂಥವು. ಆದರೆ ಆ ಭಗವಂತನು ಇವೆಲ್ಲವನ್ನೂ ಮೀರಿದವನು... ಅವನು ಯಾರ ಮೇಲೆ ಕೃಪೆದೋರುವನೋ ಅವನು ಕ್ಷಣಾರ್ಧದಲ್ಲಿ ಈ ನಿಯಮಗಳನ್ನು ಮೀರುತ್ತಾನೆ. ಈ ಕಾರಣದಿಂದಲೇ ದೈವಕೃಪೆಗೆ ಯಾವ ಷರತ್ತೂ ಇಲ್ಲ...

ಶಿಷ್ಯ : ನನಗೆ ಇದು ಅರ್ಥವಾಗುವುದಿಲ್ಲ.

ಸ್ವಾಮೀಜಿ: ನೀನು ಅರ್ಥಮಾಡಿಕೊಳ್ಳಬೇಕಾಗಿಲ್ಲ. ಎಷ್ಟು ಸಾಧ್ಯವೋ ಅಷ್ಟನ್ನು ಭದ್ರವಾಗಿ ಅವನನ್ನು ಹಿಡಿದುಕೊ. ಆಗ ಮಾತ್ರ ಈ ಜಗತ್ತಿನ ಮಾಯಾಜಾಲ ತಂತಾನೆ ಹರಿಯವುದು. ಆದರೆ ನೀನು ಶ್ರಮಪಡಬೇಕು... ಹೀಗೆ ಪಟ್ಟುಹಿಡಿದು ಮಾಡುವುದನ್ನು ಪುರುಷಕಾರ (ಪುರುಷಪ್ರಯತ್ನ) ಎಂದು ಕರೆಯುತ್ತಾರೆ. ಅಂಥ ಪುರುಷಪ್ರಯತ್ನದಿಂದ ಆ ಭಗವಂತನ ಅವಲಂಬನೆ ಬರುತ್ತದೆ. ಇದೇ ಜೀವನದ ಪರಮಪುರುಷಾರ್ಥ.'

ಮಾನವನ ಅಹಂಕಾರ ಸುಲಭವಾಗಿ ಅಳಿಯದು. ಆದ್ದರಿಂದಲೇ ಮಾನವನು ಅದನ್ನು ಪಾಪ ಮಾಡುವುದರಲ್ಲಿ ತೊಡಗದೆ ಪರಿವರ್ತಿಸಬೇಕು ; ಅದನ್ನು ಸೇವೆ ಮತ್ತು ಅರ್ಪಣೆಗಳ ಕಾರ್ಯಗಳು ಮತ್ತು ಭಾವಗಳಿಂದ ಕಾಚಾ, ಅಂದರೆ ಅಪಕ್ವ ಸ್ಥಿತಿಯಿಂದ ಪಾಕಾ-ಪಕ್ವ-ಸ್ಥಿತಿಗೆ ತರಬೇಕು ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಈ ಪಕ್ವ ಅಹಂಕಾರ ಮಾತ್ರ ಶರಣಾಗತಿಯ ಯೋಗ್ಯತೆಯನ್ನು ಮೆಚ್ಚಿ, ದೈವಾನುಗ್ರಹಕ್ಕೆ ಸ್ಪಂದಿಸುತ್ತಾನೆ. ಆಧ್ಯಾತ್ಮಿಕ ಸಂವಾದವೊಂದರಲ್ಲಿ, ಶ್ರೀರಾಮಕೃಷ್ಣರ ಖ್ಯಾತ ಶಿಷ್ಯರಾದ ಶ್ರೀ ಸ್ವಾಮಿ ತುರಿಯಾನಂದರು ಇದರ ಮಹತ್ತ್ವವನ್ನು ಒಂದು ಕಥೆಯ ಮೂಲಕ ತಂದಿದ್ದಾರೆ (Spiritual Talks, ೫ನೆ ಆವೃತ್ತಿ, ಪುಟ ೩೩೯-೪೦) :

ಶಿವಪಾರ್ವತಿಯರ ಬಗ್ಗೆ ಒಂದು ಕಥೆಯಿದೆ. ಒಂದು ದಿನ ಕೈಲಾಸ ಪರ್ವತದಲ್ಲಿ ಅವರು ಪಗಡೆಯಾಡುತ್ತಿದ್ದರು. ಆಗ ಶಿವನು ಆಟದ ಮಧ್ಯದಲ್ಲಿ ಎದ್ದು ಹೋದನು; ಆಮೇಲೆ ಕೂಡಲೇ ಹಿಂದಿರುಗಿ ಬಂದನು. ಆಗ ಪಾರ್ವತಿಯು ಹೀಗೆ ಇದ್ದಕ್ಕಿದ್ದಂತೆ ಎದ್ದು ಹೋಗಿ ಬಂದುದು ಏತಕ್ಕೆ ಎಂದು ಕೇಳಿದಳು. ಶಿವ ಉತ್ತರಿಸಿದನು : "ನನ್ನ ಒಬ್ಬ ಭಕ್ತ ದರೋಡೆಕೋರರ ಕೈಗೆ ಸಿಕ್ಕಿಬಿದ್ದು ಮೊದಲಿಗೆ ನನ್ನ ಮೊರೆಹೋದ. ನಾನು ಆ ಸ್ಥಳವನ್ನು ತಲುಪುವುದಕ್ಕೆ ಮುಂಚೆಯೇ ಅವನೇ ಒಂದು ಕಲ್ಲು ತೆಗೆದುಕಂಡು ದರೋಡೆಕೋರರತ್ತ ಎಸೆಯಲು ಶುರುಮಾಡಿದ್ದ. ಅದನ್ನು ನೋಡಿ ನಾನು ಬಂದುಬಿಟ್ಟೆ."

ಒಬ್ಬನು ದೇವರಿಗೆ ಸಂಪೂರ್ಣವಾಗಿ ಶರಣಾಗದಿದ್ದರೆ ಭಗವದನುಗ್ರಹವು ಪ್ರಕಟವಾಗುವುದಿಲ್ಲ. ತನ್ನನ್ನು ಭಗವಂತನಿಗೆ ಒಪ್ಪಿಸಿಕೊಳ್ಳುವುದು, ಅದರಲ್ಲೂ ಮನಃಪೂರ್ವಕವಾಗಿ ಒಪ್ಪಿಸಿಕೊಳ್ಳುವುದು ಸುಲಭದ ಕೆಲಸವಲ್ಲ. ಭಕ್ತನು ಯಾವಾಗಲೂ ದೇವರನ್ನು ನೋಡುತ್ತಿರುತ್ತಾನೆ. ಅದು ಸತ್ಯಸ್ಯ ಸತ್ಯ. ಬೈಬಲ್‌ನಲ್ಲಿ ಹೀಗೆ ಹೇಳಿದೆ : "ಇರುವವನಿಗೆ ಕೊಡಲಾಗುವುದು, ಅವನಿಗೆ ಮತ್ತಷ್ಟು ಸಮೃದ್ಧಿಯಾಗುತ್ತದೆ; ಇಲ್ಲದವನಿಗೆ, ಅವನಿಂದಲೇ ಇರುವುದನ್ನು ಕಸಿದುಕೊಳ್ಳಲಾಗುವುದು". ಇದೆಲ್ಲ ತುಂಬ ಸತ್ಯ. ಈ ಪ್ರಶ್ನೆಯನ್ನು ವಿಸ್ತಾರವಾಗಿ ಸ್ವಲ್ಪ ನೋಡಿ. ಉದಾಹರಣೆಗೆ ನಮ್ಮ ದೇಹಾರೋಗ್ಯವನ್ನೇ ತೆಗೆದುಕೊಳ್ಳಿ. ಒಳ್ಳೆಯ ಆರೋಗ್ಯವಿರುವವನು ಇನ್ನೂ ಹೆಚ್ಚು ಹೆಚ್ಚು ಆರೋಗ್ಯ ವಂತನಾಗುತ್ತಾ ಹೋಗುತ್ತಾನೆ; ಮತ್ತು ಸ್ವಲ್ಪ ಹೆಚ್ಚುಕಡಿಮೆ ಆದರೂ ಅದರಿಂದ ಅವನಿಗೇನೂ ಆಗದು. ಆದರೆ ಅನಾರೋಗ್ಯದವನು ಎಷ್ಟು ಮುನ್ನೆಚ್ಚರಿಕೆ ವಹಿಸಿದರೂ, ತನ್ನ ಅನಾರೋಗ್ಯ ಮತ್ತಷ್ಟು ಹದಗೆಡದಂತೆ ಇಟ್ಟುಕೊಳ್ಳಲಾಗುವುದಿಲ್ಲ. ಸ್ವಲ್ಪ ಹೆಚ್ಚುಕಡಿಮೆ ಆದರೂ ಅವನ ಆರೋಗ್ಯ ಕೆಡುತ್ತದೆ. ಎಲ್ಲಾ ಕಡೆಯೂ ಹೀಗೆಯೇ. ಅದು ಪ್ರಕೃತಿ ನಿಯಮ.

ಆದರೆ ಈ ಪ್ರಶ್ನೆಯ ಇನ್ನೊಂದು ಮುಖವಿದೆ. ಭಗವಂತನು ದೀನದಲಿತರ ರಕ್ಷಕ, ಅವರ ಮಿತ್ರ ಮತ್ತು ಸಹಾಯಕ. ಆದರೆ, ವಿನಮ್ರವಾಗಿರುವುದು ತುಂಬ ಕಷ್ಟ. 'ನಾನು' 'ನನ್ನದು' ಎಂಬುದು ಸ್ವಲ್ಪ ಇದ್ದರೂ ವಿನಮ್ರತೆ ಬರಲು ಸಾಧ್ಯವಿಲ್ಲ... ಲೌಕಿಕ ಪರಿಸ್ಥಿತಿಗಳಿಂದಾಗಿ ಕೆಳಮಟ್ಟದಲ್ಲಿರುವುದಕ್ಕೂ ಭಕ್ತನ ವಿನಮ್ರತೆಗೂ—ತಾನು ಹುಲ್ಲುಕಡ್ಡಿಗಿಂತಲೂ ಕೀಳು ಎಂದು ಭಾವಿಸುವ ನಮ್ರತೆ—ಸಾಗರದಷ್ಟು ವ್ಯತ್ಯಾಸವಿದೆ. "ಓ ಭಗವಂತನೇ ನೀನೇ ನನ್ನ ಕೈಹಿಡಿದು ನಡೆಸುತ್ತಿದ್ದೀಯೆ!"—ಈ ಮಾತು ಕೇವಲ ಕಾವ್ಯವಲ್ಲ.

ದೈವಾನುಗ್ರಹ ಹಾಗೂ ವೈಯಕ್ತಿಕ ಪ್ರಯತ್ನದ ವಿಷಯ ಆಧ್ಯಾತ್ಮಿಕ ಚಿಂತನೆಯ ವಿಷಯವಾಗಿದೆ. ಅದು ಅಂಥ ಇತರ ಸಮಸ್ಯೆಗಳಂತೆ ತಾರ್ಕಿಕ ಹಾಗೂ ಬೌದ್ಧಿಕ ಪ್ರತಿಪಾದನೆಯ ಮೂಲಕ ಪರಿಹರಿಸಲಾಗದ ಸಮಸ್ಯೆಯಾಗಿದೆ. ಆದರೆ ಅದನ್ನು ಬದುಕಿನ ಆಧ್ಯಾತ್ಮಿಕ ಜೀವನ ಮತ್ತು ಅನುಭವಗಳ ಕಲೆಯಿಂದ ಪರಿಹರಿಸಲಾಗಿದೆ. ತಾರ್ಕಿಕ ಪ್ರತಿಪಾದನೆಗಳಿಂದ ಪರಿಹರಿಸಲಾಗದ ವಿರೋಧೋಕ್ತಿ, ಊಹಾತ್ಮಕ ತತ್ತ್ವಶಾಸ್ತ್ರದ ನಿಘಂಟಿನಲ್ಲಿರುವ ಇತರ ಕೆಲವು ವಿರೋಧೋಕ್ತಿಗಳಂತೆ. ಆದರೆ ಜೀವನವಿವೇಕವು ಅಪರಿಹಾರ್ಯವಾದ ಕೆಲವು ತಾರ್ಕಿಕ ವಿರೋಧಗಳನ್ನು ಪರಿಹರಿಸುತ್ತದೆ. ಅದೇ ರೀತಿ ಆಧ್ಯಾತ್ಮಿಕ ಜೀವನ ಸಾಗಿಸಿದ ವಿವೇಕವು, ಭಗವತ್ಕೃಪೆ ಮತ್ತು ವೈಯಕ್ತಿಕ ಪ್ರಯತ್ನಗಳ ನಡುವೆ ಮೇಲ್ನೋಟಕ್ಕೆ ಕಾಣುವ ವಿರೋಧಕ್ಕೆ ಪರಿಹಾರ ಒದಗಿಸುತ್ತದೆ. ಈ ವಿವೇಕವು ಶ್ರೀ ರಾಮಕೃಷ್ಣರ ಕೆಲವು ಬೆಳಕು ಚೆಲ್ಲುವ ಹೇಳಿಕೆಗಳಲ್ಲಿ ಕಂಡುಬರುತ್ತದೆ (Sayings of Sri Ramakrishna, ಪು. ೨೦೮) :

ಭಗವತ್ಕೃಪೆಯ ಗಾಳಿ ಸಂತತವಾಗಿ ಬೀಸುತ್ತಿದೆ. ಸಂಸಾರ ಸಾಗರದಲ್ಲಿ ಪಯಣಿಸುತ್ತಿರುವ ಸೋಮಾರಿ ನಾವಿಕರು ಅದರ ಲಾಭ ಪಡೆಯುತ್ತಿಲ್ಲ. ಆದರೆ, ಕ್ರಿಯಾಶೀಲರೂ ಬಲಶಾಲಿಗಳೂ ಆದವರು ಅನುಕೂಲಕರವಾದ ಗಾಳಿಗೆ ತಮ್ಮ ಮನಗಳೆಂಬ ಹಾಯಿಪಟಗಳನ್ನು ಬಿಚ್ಚಿ, ಅತಿ ಶೀಘ್ರವಾಗಿ ತಮ್ಮ ಗಂತವ್ಯವನ್ನು ಸೇರಲು ಸಿದ್ಧರಾಗಿರುತ್ತಾರೆ.

'ನೀವು ಸಾವಿರಾರು ಸಲ ಪ್ರಯತ್ನಿಸಬಹುದು, ಆದರೆ ಭಗವತ್ಕೃಪೆ ಇಲ್ಲದೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ದೈವಾನುಗ್ರಹವನ್ನು ಪಡೆಯುವುದು ಸುಲಭಸಾಧ್ಯವೆ ? ಒಬ್ಬನು ಅಹಂಕಾರವನ್ನು ಶುದ್ಧಾಂಗವಾಗಿ ತೊರೆಯಬೇಕು. ಎಲ್ಲಿಯವರೆಗೆ ಒಬ್ಬನು 'ನಾನೇ ಕರ್ತ' ಎಂದು ಭಾವಿಸುವವರೆಗೆ ದೇವರನ್ನು ನೋಡಲಾರ. ಒಂದು ಕುಟುಂಬದಲ್ಲಿ ಒಬ್ಬರು ಉಗ್ರಾಣದ ಜವಾಬ್ದಾರಿ ವಹಿಸಿಕೊಂಡರು ಎನ್ನಿ ; ಆಗ ಯಾರೋ ಒಬ್ಬರು ಮನೆಯ ಯಜಮಾನನನ್ನು "ಸ್ವಾಮಿ, ಉಗ್ರಾಣದಿಂದ ಯಾವುದೋ ಒಂದು ವಸ್ತುವನ್ನು ನೀವೇ ದಯವಿಟ್ಟು, ಕೊಡುತ್ತೀರಾ ?" ಎಂದು ಕೇಳಿದರೆ, ಯಜಮಾನನು ಅವನಿಗೆ "ಈಗಾಗಲೇ ಉಗ್ರಾಣ ನೋಡಿಕೊಳ್ಳುವವರು ಒಬ್ಬರಿದ್ದಾರೆ ? ನಾನು ಏನು ಮಾಡಲಿ ?" ಎಂದು ಹೇಳುತ್ತಾನೆ.

ತನಗೆ ತಾನೇ ಒಡೆಯನೆಂದು ಭಾವಿಸುವವನ ಹೃದಯದಲ್ಲಿ ದೇವರು ನಿಜವಾಗಿ ಕಾಣಿಸಿ ಕೊಳ್ಳುವುದಿಲ್ಲ. ಆದರೆ ಭಗವತ್ಕೃಪಾ ಪ್ರಸಾದ ಆದೊಡನೆ ಅವನನ್ನು ನೋಡಬಹುದು. ಅವನು ಜ್ಞಾನಸೂರ್ಯ. ಅವನ ಒಂದೇ ಒಂದು ಕಿರಣವು ಜ್ಞಾನಪ್ರಕಾಶದಿಂದ ಇಡೀ ಜಗತ್ತನ್ನು ಬೆಳಗಿದೆ. ನಾವು ಪರಸ್ಪರ ನೋಡುವಂತಾಗಿ, ನಾನಾ ಬಗೆಯ ಜ್ಞಾನ ಸಂಪಾದಿಸಿರುವುದು ಹೀಗೆ. ಭಗವಂತನು ತನ್ನ ಬೆಳಕನ್ನು ತನ್ನ ಮುಖಕ್ಕೆ ತಿರುಗಿಸಿದಾಗ ಮಾತ್ರ ಒಬ್ಬನು ದೇವರನ್ನು ನೋಡಬಲ್ಲನು.

ಪೊಲೀಸನು ಕಗ್ಗಾರುಗತ್ತಲ ರಾತ್ರಿಯಲ್ಲಿ ಕೈಯಲ್ಲಿ ಲಾಟೀನು ಹಿಡಿದು ಗಸ್ತು ತಿರುಗುತ್ತಾನೆ. ಯಾರೂ ಅವನ ಮುಖ ನೋಡರು ; ಲಾಟೀನಿನ ಬೆಳಕಿನಿಂದ ಪೊಲೀಸಿನವನು ಪ್ರತಿಯೊಬ್ಬರ ಮುಖವನ್ನೂ ನೋಡುತ್ತಾನೆ ; ಮತ್ತು ಇತರರೂ ಪರಸ್ಪರ ನೋಡಬಹುದು. ನೀವು ಆ ಪೊಲೀಸಿನವರ ಮುಖ ನೋಡಬೇಕಾದರೆ ನೀವು ಅವನನ್ನು 'ಸ್ವಾಮಿ, ದಯವಿಟ್ಟು, ಬೆಳಕನ್ನು ನಿಮ್ಮ ಮುಖದ ಮೇಲೇ ತಿರುಗಿಸಿ, ನಿಮ್ಮ ಮುಖ ತೋರಿಸಿ' ಎಂದು ಬೇಡಿಕೊಳ್ಳಬೇಕು. ಅದೇ ರೀತಿಯಲ್ಲಿ, ಒಬ್ಬನು ದೇವರಲ್ಲಿ ಹೀಗೆ ಪ್ರಾರ್ಥಿಸಬೇಕು: "ಓ ಭಗವಂತಾ, ಜ್ಞಾನಪ್ರಕಾಶ ವನ್ನು ನಿನ್ನ ಮೇಲೆ ತಿರುಗಿಸಿ, ನಾನು ನಿನ್ನ ಮುಖ ನೋಡುವಂತೆ ಮಾಡು".

ಶ್ರೀರಾಮಕೃಷ್ಣರ ಈ ಸುಂದರ ಹೇಳಿಕೆಗಳು ಈ ದೈವಾನುಗ್ರಹ ವಿಷಯದ ಮೇಲೆ ಬೆಳಕು ಚೆಲ್ಲುತ್ತವೆ. ಈ ಅನುಗ್ರಹ ಹೇಗೆ ಕೆಲಸ ಮಾಡುತ್ತಿದೆ ಎಂಬುದನ್ನು ಅವರು ವಿವರಿಸುತ್ತಾರೆ. ಅದು ಸದಾ ಬೀಸುವ ತಂಗಾಳಿಯಂತೆ. ಕಲ್ಕತ್ತೆಯ ಗಂಗಾನದಿಯಲ್ಲಿ ಸರಕನ್ನು ಒಯ್ಯುವ ನಾವಿಕ ರಿದ್ದಾರೆ. ಕಡಲವಿಳಿತ ಇದ್ದಾಗ, ನಾವೆಗೆ ಸರಕುತುಂಬಿ ಸಿದ್ಧಮಾಡಿಕೊಂಡು ಸುಮ್ಮನೆ ಕಾಯು ತ್ತಿರುತ್ತಾರೆ. ಬೇಗನೆ ಪೂರ್ಣ ಉಬ್ಬರ ಬಂದಾಗ, ಲಂಗರು ಎತ್ತಿ, ಹಾಯಿಪಟಗಳನ್ನು ಬಿಚ್ಚುತ್ತಾರೆ ; ಆಗ ಗಾಳಿ ಉಬ್ಬರಗಳು ನಾವೆಗಳನ್ನು ಮುಂದೆ ಮುಂದೆ ಸಾಗಿಸುತ್ತವೆ. ಆದರೆ ಅವರು ಉಬ್ಬರ ಯಾವಾಗ ಬರುತ್ತದೆ ಎಂಬುದನ್ನು ನೋಡುತ್ತಾ ಕಾಯುತ್ತಿರಬೇಕು ; ಮತ್ತು ಹಾಯಿಪಟಗಳನ್ನು ಬಿಚ್ಚಲು ಎಚ್ಚರದಿಂದಲೂ ಇರಬೇಕು. ಅವರು ತೂಕಡಿಸುತ್ತಾ ಎಚ್ಚರದಿಂದಿಲ್ಲದಿದ್ದರೆ, ಇನ್ನೊಂದು ಏರುಬ್ಬರ ಬರುವವರೆಗೆ ೧೨ ಗಂಟೆಗಳ ಕಾಲ ಕಾಯುತ್ತಾ ಇರಬೇಕಾಗುತ್ತದೆ. ಆಗ ಏರುಬ್ಬರ ಮತ್ತೆ ಬರುತ್ತದೆ. ಆದ್ದರಿಂದ ಎಚ್ಚರವಾಗಿರಿ ; ಉಬ್ಬರವಿರುವಾಗ ಅದರ ಪ್ರಯೋಜನ ಪಡೆಯಿರಿ. ಶ್ರೀ ರಾಮಕೃಷ್ಣರು ಹೀಗೆ ಈ ವಿಷಯದ ಬಗ್ಗೆ ಮತ್ತಷ್ಟು ವಿವರಣೆ ನೀಡುತ್ತಾರೆ : ಗಾಳಿ ಸದಾಕಾಲ

ಬೀಸುತ್ತಿರುತ್ತದೆ, ನಿಮ್ಮ ನಾವೆ ಮಾತ್ರ ಮುಂದೆ ಚಲಿಸುತ್ತಿಲ್ಲ ? ಇನ್ನೊಂದು ನಾವೆ ಏಕಪ್ರಕಾರವಾಗಿ ಮುಂದೆ ಸಾಗುತ್ತಿರುವಾಗ ನಿಮ್ಮ ನಾವೆಗೆ ಏನಾಗಿದೆ ? ದೋಷ ಇರುವುದು ಗಾಳಿಯಲ್ಲಲ್ಲ, ನಿಮ್ಮಲ್ಲಿ ; ನಿಮಗೆ ಎಚ್ಚರವಿಲ್ಲದಿರುವುದರಲ್ಲಿ, ನೀವು ನಿಮ್ಮ ಹಾಯಿಪಟಗಳನ್ನು ಬಿಚ್ಚದೆ ಇರುವುದರಲ್ಲಿ ! ನಿಮ್ಮ ಹಾಯಿಪಟಗಳನ್ನು ಬಿಚ್ಚಿ ಗಾಳಿಯನ್ನು ಬಳಸಿಕೊಳ್ಳಿ. ನಿಮ್ಮ ನಿಮ್ಮ ಹಾಯಿಪಟಗಳನ್ನು ಬಿಚ್ಚಿಕೊಳ್ಳುವ ಪ್ರಯತ್ನ ನಿಮ್ಮದು, ಆದರೆ ಕೃಪೆಯ ಗಾಳಿ ಸದಾ ಬೀಸುತ್ತಲೇ ಇದೆ.

ಒಂದು ಸೊಗಸಾದ ನೀತಿಕಥೆಯ ಮೂಲಕ ರಾಮಕೃಷ್ಣರು ಸರ್ವಸ್ವವನ್ನೂ ದೇವರಿಗೆ ಒಪ್ಪಿಸಿರುವ ಒಬ್ಬನು ಸುಖದುಃಖಗಳಿಗೆ, ಮತ್ತಿತರ ಜೀವನದ ದ್ವಂದ್ವಗಳ ಬಗ್ಗೆ ಯಾವ ಧೋರಣೆ ತಾಳುತ್ತಾನೆಂಬುದನ್ನು ಹೇಳುತ್ತಾರೆ (Gospel of Sri Ramakrishna, ಪು. ೬೫೮, ಅಮೆರಿಕನ್ ಆವೃತ್ತಿ, ೧೯೪೨) :

*ಸುಖದುಃಖಗಳು ದೇಹಕ್ಕೆ ಅನಿವಾರ್ಯ. ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡವನು ತನ್ನ ಮನಸ್ಸು ಮತ್ತು ಜೀವನವನ್ನು, ತನ್ನ ದೇಹ ಮತ್ತು ಆತ್ಮಗಳನ್ನು ದೇವರಿಗೆ ಸಮರ್ಪಿಸಿದ್ದಾನೆ. ರಾಮಲಕ್ಷ್ಮಣರು ಪಂಪಾ ಸರೋವರದಲ್ಲಿ ಮೀಯಲು ಹೋದಾಗ, ತಮ್ಮ ಬಿಲ್ಲುಗಳನ್ನು ನೆಲದಲ್ಲಿ ಹೂತರು. ಸ್ನಾನಮಾಡಿ ನೀರಿನಿಂದ ಹೊರಬಂದ ನಂತರ, ಲಕ್ಷ್ಮಣನು ಹೂತಿಟ್ಟ ತನ್ನ ಬಾಣವನ್ನು ತೆಗೆದಾಗ ಅದರ ತುದಿ ರಕ್ತಸಿಕ್ತವಾದುದನ್ನು ನೋಡಿದನು. ಆಗ ರಾಮನು ಹೇಳಿದನು : "ತಮ್ಮಾ ! ನೋಡು, ನಾವು ಯಾವುದೋ ಪ್ರಾಣಿಗೆ ಘಾಸಿಯುಂಟು ಮಾಡಿರಬೇಕು." ಆಗ ಲಕ್ಷ್ಮಣನು ನೆಲವನ್ನು ಅಗೆದು ನೋಡಿದಾಗ ಅಲ್ಲಿ ದೊಡ್ಡದೊಂದು ಗೂಳಿಕಪ್ಪೆಯನ್ನು ನೋಡಿದನು. ಅದು ಸಾಯುತ್ತಿತ್ತು. ರಾಮನು ದುಃಖದ ದನಿಯಲ್ಲಿ "ನೀನೇಕೆ ವಟಗುಟ್ಟಲಿಲ್ಲ ? ವಟಗುಟ್ಟಿದ್ದಿದ್ದರೆ ನಾವು ನಿನ್ನನ್ನು ಉಳಿಸಲು ಪ್ರಯತ್ನಿಸುತ್ತಿದ್ದೆವು. ನೀನು ಹಾವಿನ ದವಡೆಗಳಲ್ಲಿ ಸಿಲುಕಿದಾಗ ವಟವಟಗುಟ್ಟುತ್ತೀಯೆ". ಆಗ ಆ ಕಪ್ಪೆ ಹೇಳಿತು : "ಅಯ್ಯೋ ದೇವರೆ, ಸಾವು ನನ್ನ ಮೇಲೆರಗಿದಾಗ ನಾನು "ಓ ರಾಮಾ, ನನ್ನನ್ನು ಕಾಪಾಡು! ಓ ರಾಮಾ, ನನ್ನನ್ನು ಕಾಪಾಡು ಎಂದು ವಟಗುಟ್ಟುವೆ ! ಈ ಸಲ ರಾಮನೇ ನನ್ನನ್ನು ಕೊಲ್ಲುತ್ತಿದ್ದಾನೆಂದು ತಿಳಿಯಿತು, ಆದ್ದರಿಂದಲೇ ಸುಮ್ಮನಿದ್ದೆ."*

ಮತ್ತೆ (ಅದೇ ಪು. ೧೧೬) :

*ಮನಸ್ಸಿನ ಸಂಶಯಗಳು ಭಗವತ್ಕೃಪೆಯಿಲ್ಲದೆ ಮಾಯವಾಗುವುದಿಲ್ಲ. ಆತ್ಮಸಾಕ್ಷಾತ್ಕಾರವಾಗದೆ ಸಂಶಯಗಳು ಮಾಯವಾಗವು.*

*ಆದರೆ ಒಬ್ಬನಿಗೆ ದೈವಾನುಗ್ರಹ ದೊರಕಿದ್ದರೆ, ಅವನು ಯಾವುದಕ್ಕೂ ಹೆದರಬೇಕಾಗಿಲ್ಲ. ಒಂದು ಮಗು ತಂದೆಯ ಕೈ ಹಿಡಿದುಕೊಂಡಿದ್ದರೆ ಅದು ಸುಲಭವಾಗಿ ಎಡವಿಬೀಳಬಹುದು: ಆದರೆ ತಂದೆಯು ಮಗುವಿನ ಕೈ ಹಿಡಿದಿದ್ದರೆ ಅಂಥ ಭಯವಿಲ್ಲ. ಭಗವಂತನು ತನ್ನ ಕೃಪೆಯಿಂದ ಒಬ್ಬನ ಸಂಶಯಗಳನ್ನು ತೊಲಗಿಸಿ, ಅವನಿಗೆ ತನ್ನ ದರ್ಶನ ಮಾಡಿಸಿದರೆ, ಆಗ ಅವನು ಮುಂದೆ ಕಷ್ಟಪಡಬೇಕಾಗಿಲ್ಲ. ಆದರೆ ಈ ಅನುಗ್ರಹ ಅವನಿಗೆ ಬರುವುದು ಅವನು ತೀವ್ರವಾದ ಹಂಬಲದಿಂದ ಭಗವಂತನನ್ನು ಉಪಾಸನೆ ಮಾಡಿ ಆಧ್ಯಾತ್ಮಿಕ ಶಿಸ್ತಿನಿಂದ ಮಾತ್ರ. ಏದುಸಿರು ಬಿಡುತ್ತಾ ಓಡುತ್ತಿರುವ ತನ್ನ ಮಗುವನ್ನು ನೋಡಿದಾಗ ತಾಯಿಗೆ ಅದರ ಬಗ್ಗೆ ಅನುಕಂಪ ಉಂಟಾಗುತ್ತದೆ. ಅಲ್ಲಿಯವರೆಗೆ ಮರೆಯಲ್ಲಿದ್ದ ಅವಳು ಮಗುವಿನ ಮುಂದೆ ಕಾಣಿಸಿಕೊಳ್ಳುತ್ತಾಳೆ.*

*"ಆದರೆ ದೇವರು ಯಾಕೆ ನಮ್ಮನ್ನು ಓಡಿಸಬೇಕು ?" ಎಂದು ಕೇಳಿದರು ಮಾಸ್ಟರ್ ಮಹಾಶಯರು.*

*ಕೂಡಲೇ ಶ್ರೀ ರಾಮಕೃಷ್ಣರು ಹೇಳಿದರು : "ನಾವು ಸ್ವಲ್ಪ ಓಡಬೇಕೆನ್ನುವುದು ಅವನ ಚಿತ್ತ. ಆಮೇಲೆ ಅವನಿಗೆ ಅದು ವಿನೋದ. ಭಗವಂತನು ಈ ಜಗತ್ತನ್ನು ಲೀಲೆಯಿಂದಲೋ ಎಂಬಂತೆ ಸೃಷ್ಟಿಸಿದ. ಇದನ್ನು ಮಹಾಮಾಯೆ ಎಂದು ಕರೆಯುತ್ತಾರೆ. ಆದ್ದರಿಂದ ಒಬ್ಬನು ಸಾಕ್ಷಾತ್ ವಿಶ್ವಶಕ್ತಿಯಾದ ಪೂಜ್ಯ ಮಾತೆಯಲ್ಲಿ ಶರಣಾಗಬೇಕು. ಆಕೆಯೇ ನಮ್ಮನ್ನು ಮಾಯೆಯ ಬೇಡಿಗಳಿಂದ ಬಂಧಿಸಿರುವವಳು. ಈ ಸಂಕೋಲೆಗಳನ್ನು ಬಿಡಿಸಿದಾಗ ಮಾತ್ರವೇ ಭಗವಂತನ ಸಾಕ್ಷಾತ್ಕಾರ ಸಾಧ್ಯ.'*

ಗೃಹಸ್ಥರು ವೀರೋಚಿತ ಜೀವನ ನಡೆಸಬೇಕೆಂದು ಪ್ರೇರೇಪಿಸುತ್ತಾ, ಶ್ರೀ ರಾಮಕೃಷ್ಣರು ಹೀಗೆ ಹೇಳುತ್ತಾರೆ (ಅದೇ, ಪು. ೧೦೧೪) :

*ಮಾಸ್ಟರ್ (ಕೇಶವ ಮತ್ತಿತರ ಭಕ್ತರಿಗೆ) : "ತಮ್ಮ ಲೌಕಿಕ ಕಾರ್ಯಚಟುವಟಿಕೆಗಳ ನಡುವೆ ದೇವರನ್ನು ಪೂಜಿಸುವವರು ನಿಜವಾಗಿಯೂ ವೀರರು. ಅವರು ತಮ್ಮ ತಲೆಗಳ ಮೇಲೆ ಹಣಭಾರದ ಹೇರುಗಳನ್ನು ಹೊತ್ತುಕೊಂಡೇ, ಭಗವಂತನ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸುತ್ತಿರುವರು. ಅಂಥ ಮನುಷ್ಯರು ನಿಜವಾದ ಶೂರರು. ಇದು ತುಂಬ ಕಷ್ಟವೆಂದು ನೀವು ಹೇಳಬಹುದು. ಆದರೆ ಭಗವತ್ ಕೃಪೆಯಿಂದ ಸಾಧಿಸಲಾಗದ್ದು ಯಾವುದಾದರೂ ಕಷ್ಟದ ಕೆಲಸ ಇದೆಯೆ ? ಅವನ ಕೃಪೆ ಅಸಾಧ್ಯವಾದುದನ್ನೂ ಸಾಧ್ಯವಾಗಿಸುತ್ತದೆ. ಒಂದು ಸಾವಿರ ವರ್ಷಗಳ ಕಾಲ ಕತ್ತಲಾಗಿರುವ ಕೋಣೆಯೊಳಕ್ಕೆ ದೀಪವೊಂದನ್ನು ತಂದರೆ, ಅದು ಕೋಣೆಯನ್ನು ಸ್ವಲ್ಪಸ್ವಲ್ಪವಾಗಿ ಬೆಳಗುವುದೆ ? ಕೋಣೆ ಒಮ್ಮೆಲೇ ಬೆಳಗಲ್ಪಡುವುದು.*

*ಈ ಸಂದೇಹ ನಿವಾರಣೆಯ ಮಾತುಗಳು ಕೇಶವ ಮತ್ತಿತರ ಗೃಹಸ್ಥ ಭಕ್ತರ ಮನಗಳಿಗೆ ಸಂತಸವುಂಟುಮಾಡಿದವು.*

ಶ್ರೀರಾಮಕೃಷ್ಣರ ಶಿಷ್ಯರಲ್ಲಿ ಬಂಗಾಳಿ ನಾಟಕಕಾರನೂ ಬುದ್ಧಿಜೀವಿಯೂ ಆದ ಗಿರೀಶ್‌ಚಂದ್ರ ಘೋಷರ ಜೀವನ ಕಥೆಯು ದೈವಾನುಗ್ರಹದ ವಿಚಿತ್ರ ಕಾರ್ಯಾಚರಣೆಗೆ ನಿದರ್ಶನವಾಗಿದೆ. ಸಾಹಿತ್ಯ ಹಾಗೂ ನಾಟಕ ರಚನಾ ಪ್ರತಿಭೆಯ ಜೊತೆಗೆ ಲೌಕಿಕ ವ್ಯಕ್ತಿಯಾಗಿ ಗಿರೀಶರಿಗೆ ಮದ್ಯ ಮತ್ತು ಸ್ತ್ರೀಯರ ಚಟವೂ ಇತ್ತು. ಅವರಿಗೆ ಧರ್ಮದ ಬಗ್ಗೆಯಾಗಲಿ ಸಂತರ ಬಗ್ಗೆಯಾಗಲಿ ಗೌರವವಿರಲಿಲ್ಲ ಮತ್ತು ಅವರು ನಿರೀಶ್ವರವಾದಿಯಾಗಿದ್ದರು. ಆದರೆ ಅವರು ತಮ್ಮ ನಾಟಕಗಳಲ್ಲಿ ಸಂತರ ಪಾತ್ರವನ್ನು ಸಮರ್ಥವಾಗಿ ನಟಿಸಬಲ್ಲವರಾಗಿದ್ದರು.

ಗಿರೀಶರು ನಿರ್ವಹಿಸಿದ ಅನೇಕಾನೇಕ ನಾಟಕಗಳಿಗೆ ಕಲ್ಕತ್ತ ಸ್ಟಾರ್ ಥಿಯೇಟರ್‌ನಲ್ಲಿ ಶ್ರೀರಾಮಕೃಷ್ಣರು, ತಮ್ಮ ಒಬ್ಬರು ಅಥವಾ ಅನೇಕ ಶಿಷ್ಯರೊಂದಿಗೆ ಹೋಗಿದ್ದರು. ಆ ಶಿಷ್ಯರಲ್ಲಿ ಕೆಲವರನ್ನು ಗಿರೀಶ್‌ರೂ ತಿಳಿದಿದ್ದರು. ಶ್ರೀ ರಾಮಕೃಷ್ಣರು ಈ ನಾಟಕಗಳಿಂದ ಆಕರ್ಷಿತರಾದರು. ಅನೇಕವೇಳೆ ಅವರು ಆನಂದಪರವಶರಾಗುತ್ತಿದ್ದರು. ಬೇಗನೆ ಅವರು ಗಿರೀಶರ ಬಾಹ್ಯಲೌಕಿಕತನದ ಹಿಂದೆ ಕೆಲವು ವಿಶಿಷ್ಟವಾದ ಆಧ್ಯಾತ್ಮಿಕ ಗುಣಗಳಿದ್ದುದನ್ನು ಪತ್ತೆ ಮಾಡಿದರು. ಮೊದಮೊದಲು ಗಿರೀಶರು ಆಧ್ಯಾತ್ಮಿಕವಾಗಿ ಶ್ರೀ ರಾಮಕೃಷ್ಣರತ್ತ ಆಕರ್ಷಿತರಾಗಲಿಲ್ಲ. ಆದರೆ ಔಪಚಾರಿಕವಾಗಿ ಅವರನ್ನು ಬರಮಾಡಿಕೊಂಡು ತಮ್ಮ ಥಿಯೇಟರಿನಲ್ಲಿ ವಿಶೇಷ ಅತಿಥಿಯಾಗಿ ಪರಿಗಣಿಸುತ್ತಿದ್ದರು. ಆದರೆ, ಕ್ರಮೇಣ ಶ್ರೀ ರಾಮಕೃಷ್ಣರ ಮಾನವೀಯ ಹಾಗೂ ಒಲಿಸುವ ವಿಧಾನಗಳು ಗಿರೀಶರನ್ನು ಹತ್ತಿರ ಹತ್ತಿರಕ್ಕೆ ತರಲಾರಂಭಿಸಿದವು. ಒಂದು ಸಲ, ಶ್ರೀ ರಾಮಕೃಷ್ಣರು ಗಿರೀಶರಿಗೆ ಇನ್ನೇನು

ಉಪದೇಶ ಕೊಡಬೇಕು ಎನ್ನುವಷ್ಟರಲ್ಲಿ, ಗಿರೀಶರು ಹೇಳಿದರು : ನನಗೆ ನಿಮ್ಮ ಉಪದೇಶ ಬೇಕಿಲ್ಲ. ನಾನೇ ಸ್ವತಃ ಅನೇಕ ಉಪದೇಶಗಳನ್ನು ಬರೆದಿದ್ದೇನೆ. ಅವುಗಳಿಂದ ನನಗೇನೂ ಪ್ರಯೋಜನವಿಲ್ಲ. ನಿಮ್ಮ ಕೈಯಲ್ಲಾದರೆ ನನ್ನ ಹಿಡಿತಕ್ಕೆ ಸಿಕ್ಕುವ ಯಾವುದರಲ್ಲಾದರೂ ಸಹಾಯ ಮಾಡಿ. ಈ ಮಾತಿನಿಂದ ಶ್ರೀ ರಾಮಕೃಷ್ಣರು ಸಂತುಷ್ಟರಾಗಿ, ಗಿರೀಶರಿಗೆ ನಂಬಿಕೆ ಬೆಳೆಸಿಕೊಳ್ಳಬೇಕೆಂದು ಹೇಳಿದರು.

ಕಾಲ ಕಳೆದಂತೆ, ಶ್ರೀರಾಮಕೃಷ್ಣರ ಬಗೆಗೆ ಗಿರೀಶರ ಭಕ್ತಿ ಆಳವಾಗುತ್ತ ಹೋಯಿತು. ತನ್ನ ಜೀವನವನ್ನು ಸಪ್ಪುಲ್ಲದೆ ರೂಪಿಸುವ ಒಬ್ಬ ಗುರು ಬೇಕೆಂದು ಗಿರೀಶರಿಗೆ ಅನ್ನಿಸಿತು. ತನ್ನ ಸ್ವೇಚ್ಛಾಚಾರದ ಸ್ವಭಾವದಿಂದ ಗಿರೀಶರು ಈ ಪೂಜ್ಯಭಾವನೆಯನ್ನು ತನ್ನ ಹಿಂದಿನ ಅಗೌರವ ಭಾವನೆಯನ್ನೂ ಬೆರೆಸಿದರು. ಅವರು ಶ್ರೀರಾಮಕೃಷ್ಣರಿಗೆ ಅವಮಾನ ಮಾಡಿದ್ದೂ ಉಂಟು, ಅವರ ಎದುರಿಗೆ ಮದ್ಯಪಾನ ಮಾಡಿದ್ದೂ ಉಂಟು ಮತ್ತು ಮನಬಂದಂತೆ ವರ್ತಿಸಿದ್ದೂ ಉಂಟು. ಇದನ್ನು ನೋಡಿ ಶ್ರೀರಾಮಕೃಷ್ಣರ ಇತರ ಭಕ್ತರು ಆಶ್ಚರ್ಯಚಕಿತರಾದರು. ಆದರೆ ಅಂಥ ಒರಟು ನಡತೆಯ ಹಿಂದೆ, ಗಿರೀಶ್ ವೀರನಂಥ ಪ್ರಾಮಾಣಿಕ ಮತ್ತು ಶ್ರದ್ಧಾವಂತ ಜಿಜ್ಞಾಸುವೆಂದು ಶ್ರೀ ರಾಮಕೃಷ್ಣರು ಅರಿತಿದ್ದರು. ಆದ್ದರಿಂದ ಅವರು ಗಿರೀಶರಿಗೆ ಕುಡಿತದ ಬಗೆಗಿನ ಎಚ್ಚರಿಕೆಯೂ ಸೇರಿದಂತೆ, ವಿಧಿ ನಿಷೇಧಗಳ ಪಟ್ಟಿಯೊಂದನ್ನು ಕೊಡಲಿಲ್ಲ. ಆದರೆ ಅವರು ಗಿರೀಶರಿಗೆ ತಮ್ಮ ಶುದ್ಧವಾದ ಪ್ರೇಮವನ್ನು ಕೊಟ್ಟರು ; ಮತ್ತು ಅವರ ಗುಣಗಳು ಮತ್ತು ಪ್ರತಿಭೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು ಮತ್ತು ಅವರು ತಮ್ಮ ಸಾಹಿತ್ಯದ ಮತ್ತು ನಾಟಕದ ಪ್ರತಿಭೆಗಳ ಮೂಲಕ ಮಾನವಕುಲದ ಸೇವೆ ಮಾಡಬೇಕೆಂದು ಪ್ರೋತ್ಸಾಹಿಸಿದರು. ಶ್ರೀ ರಾಮಕೃಷ್ಣರು ನಾಟಕ ಪ್ರದರ್ಶನ ಮುಗಿದನಂತರ ಗಿರೀಶರ ನಟನಟಿಯರ ಕಲಾಪ್ರತಿಭೆಯ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿ ಅವರುಗಳನ್ನು ಹರಸುತ್ತಿದ್ದರು. ಇದರ ಮೂಲಕ ಅವರು ಗಿರೀಶರ ಜೀವನವನ್ನು ಮಾತ್ರವಲ್ಲದೆ ಇತರರ ಬದುಕನ್ನೂ ಪರಿವರ್ತಿಸಿದರು.

ಒಂದು ಸಂದರ್ಭದಲ್ಲಿ, ಗಿರೀಶ್ ತನ್ನ ಆಧ್ಯಾತ್ಮಿಕ ದಿನಚರಿಯನ್ನು ಪಾಲಿಸಲಾಗಲಿಲ್ಲವೆಂದು ಖಿನ್ನರಾಗಿದ್ದರು. ಶ್ರೀ ರಾಮಕೃಷ್ಣರು ಉದ್ದಕ್ಕೂ ಗಿರೀಶರಿಗೆ ಪರಿಪೂರ್ಣ ಸ್ವಾತಂತ್ರ್ಯ ಮತ್ತು ಸ್ವಯಂಪ್ರೇರಿತತೆಗಳ ಬಗ್ಗೆ ತರಬೇತಿ ನೀಡುತ್ತಿದ್ದರು. ತಮ್ಮ ನಾಟಕ ರಚನೆ, ಥಿಯೇಟರ್ ನಿರ್ವಹಣೆಯ ಜೀವನದ ಅನಿಶ್ಚಿತ ವೇಳಾಪಟ್ಟಿಯಿಂದಾಗಿ ತಾವು ಯಾವುದೇ ಆಧ್ಯಾತ್ಮಿಕ ಶಿಸ್ತಿನ ನಿಯತಕ್ರಮವನ್ನು ಪಾಲಿಸಲಾಗುತ್ತಿಲ್ಲವೆಂಬ ದೂರನ್ನು ಕೇಳಿ, ಶ್ರೀ ರಾಮಕೃಷ್ಣರು ಆನಂದದ ಲಹರಿಯಲ್ಲಿ ಹೀಗೆ ಹೇಳಿದರು : 'ಸರಿ, ನೀವು ನಿಮ್ಮ ವಕಾಲತ್‌ನಾಮೆಯನ್ನು ಕೊಡಿ ; ಇನ್ನು ಮುಂದೆ ನಾನು ನಿಮ್ಮ ಆಧ್ಯಾತ್ಮಿಕ ಜೀವನದ ಜವಾಬ್ದಾರಿ ಹೊತ್ತುಕೊಳ್ಳುತ್ತೇನೆ. ನೀವು ಯಾವುದೇ ದಿನನಿತ್ಯದ ಆಧ್ಯಾತ್ಮಿಕ ಅನುಷ್ಠಾನ ಮಾಡಬೇಕಾಗಿಲ್ಲ.' ಈ ಮಾತನ್ನು ಕೇಳಿ ಗಿರೀಶ್ ನೆಮ್ಮದಿಯ ನಿಟ್ಟುಸಿರುಬಿಟ್ಟರು ; ಗುರುವಾದ ಶ್ರೀ ರಾಮಕೃಷ್ಣರು ತನ್ನ ಆಧ್ಯಾತ್ಮಿಕ ಪ್ರಗತಿಯ ಪೂರ್ತಿ ಹೊಣೆ ಹೊತ್ತಿದ್ದಾರೆಂದು ತಿಳಿದು ಸಂತೋಷಪಟ್ಟರು. ದಿನಗಳು ಕಳೆದಂತೆ, ಗಿರೀಶರಿಗೆ ಇದರಿಂದ, ತಾನು ತನ್ನ ಕುತ್ತಿಗೆಯ ಸುತ್ತ ದಿನನಿತ್ಯದ ಆಧ್ಯಾತ್ಮಿಕ ಅನುಷ್ಠಾನಗಳೆಂಬ ಬಂಧನಕ್ಕಿಂತಲೂ ನೂರು ಪಟ್ಟು ಬಲವಾದ ಪ್ರೇಮದ ಉರುಲನ್ನು ಹಾಕಿಕೊಂಡಿದ್ದೇನೆಂಬ ಅರಿವು ಬಂದಿತು ; ಮತ್ತು ತಾನು ಸದಾ ಶ್ರೀ ರಾಮಕೃಷ್ಣರು ಹಾಗೂ ಅವರ ಕೃಪಾಪ್ರಸಾದದ ಚಿಂತನೆಯಲ್ಲೇ ಮುಳುಗಿ, ತಾನು ಈ ಪ್ರಕ್ರಿಯೆಯಲ್ಲಿ ಏನೂ ಅಲ್ಲ ಎಂಬ ಭಾವನೆ ಮೂಡತೊಡಗಿತು. ಪರಿಣಾಮವಾಗಿ ಅವರ ಜೀವನ ಶ್ರೀ ರಾಮಕೃಷ್ಣರ ಚಿಂತನೆಯಲ್ಲೇ ಕಳೆಯಿತು. ಇದು ಮೆಲ್ಲನೆ, ಅವರಿಗೇ ತಿಳಿಯದಂತೆ, ಕುಡಿತವೂ ಸೇರಿದಂತೆ ಎಲ್ಲಾ ಕಳಂಕಗಳನ್ನೂ ಎಲ್ಲಾ ದುಷ್ಟ ಪದ್ಧತಿಗಳನ್ನೂ ಚಟಗಳನ್ನೂ ತೊಡೆದುಹಾಕಿತು. ಶ್ರೀ ರಾಮಕೃಷ್ಣರು ಒಂದು ಸಲವೂ ಬೈದು ಬುದ್ಧಿವಾದ ಹೇಳದೆಯೇ ಹೀಗೆ ಆಯಿತು. ಅನಂತರ ಶ್ರೀರಾಮಕೃಷ್ಣರು ತಮ್ಮ ಇತರ ಗೃಹಸ್ಥಶಿಷ್ಯರಂತೆ ಗೃಹಸ್ಥರಾಗಿದ್ದರೂ ಗಿರೀಶರನ್ನು ಮಠದ ಶಿಷ್ಯರಂತೆ

ಕಂಡರು. ಶ್ರೀ ರಾಮಕೃಷ್ಣರು ತೀರಿಕೊಂಡ ನಂತರ, ಗಿರೀಶ್ ತಮ್ಮನ್ನು ಶ್ರೀ ರಾಮಕೃಷ್ಣರ ಅನುಗ್ರಹದ ಪವಾಡ ಎಂದು ಕರೆದುಕೊಂಡರು.

'ಶುದ್ಧಭಕ್ತಿಯನ್ನು ಮಹಾನ್ ಸಂತನ ಕೃಪೆಯಿಂದ ಅಥವಾ ಪೂಜ್ಯ ಭಗವಂತನ ಪರಮಾಣುವಿನಷ್ಟು ಅನುಗ್ರಹದಿಂದ ಪಡೆಯಬಹುದು' ಎಂಬ ಹಿಂದೆ ಉದ್ಧರಿಸಿದ ನಾರದ ಭಕ್ತಿಸೂತ್ರಗಳ ಮಾತಿನ ಸತ್ಯತೆಗೆ ಈ ಆಧುನಿಕ ಯುಗದ ಶ್ರೀರಾಮಕೃಷ್ಣರೇ ಜೀವಂತ ಸಾಕ್ಷಿ. ೧೮೯೬ರಲ್ಲಿ ನ್ಯೂಯಾರ್ಕಿನಲ್ಲಿ 'My Master' ಎಂಬ ವಿಷಯದ ಬಗೆಗೆ ಮಾತನಾಡುತ್ತಾ, ಸ್ವಾಮಿ ವಿವೇಕಾನಂದರು ಆಧ್ಯಾತ್ಮಿಕ ಕೊಡುಕೊಳೆಯ ಸಾಧ್ಯತೆಯ ಬಗೆಗೆ ಒತ್ತಿ ಹೇಳಿದರು (The Complete Works, ಸಂ. IV, ಪು. ೧೭೭-೭೮) :

*ಯಾರಿಗೆ ಕೊಡುವುದಕ್ಕೆ ಏನಾದರೂ ಇದೆಯೋ ಅವನೇ ಬೋಧಿಸಬಲ್ಲ. ಬೋಧನೆ ಎಂದರೆ ಬರಿಯ ಮಾತಲ್ಲ, ಸಿದ್ಧಾಂತವನ್ನು ಸಾರುವುದಲ್ಲ. ಅದೊಂದು ಸಂವಹನ. ನಾನು ನಿಮಗೆ ಒಂದು ಹೂವನ್ನು ಕೊಡುವಂತೆ ಆಧ್ಯಾತ್ಮಿಕತೆಯನ್ನು ಕೊಡಬಹುದು. ಇದು ಅಕ್ಷರಶಃ ಸತ್ಯ... ಒಂದು ಸ್ಪರ್ಶ, ಒಂದು ಕುಡಿನೋಟ, ಇಡೀ ಜೀವನವನ್ನೇ ಬದಲಾಯಿಸಬಲ್ಲುದು. ಹಿಂದಿನ ಕಾಲದ ಮಹಾನುಭಾವರಾದ ಕ್ರಿಸ್ತ, ಬುದ್ಧ, ಮಹಮ್ಮದರು ಮಾನವನಿಗೆ 'ನೀನು ಪೂರ್ಣನಾಗು' ಎಂದು ಹೇಳಿದೊಡನೆ ಮನುಷ್ಯನು ಪೂರ್ಣನಾಗುವನು ಎಂಬುದನ್ನು ಕೇಳಿದ್ದೆ. ಅದನ್ನು ಈಗ ಸತ್ಯವೆಂದು ತಿಳಿದೆ. ನಾನೇ ಈ ಮನುಷ್ಯನನ್ನು ನೋಡಿದ ಮೇಲೆ ಅನುಮಾನವೆಲ್ಲ ಪರಿಹಾರವಾಯಿತು. ಇದನ್ನು ಮಾಡಬಹುದು ಎಂದು ಅರಿತೆ. ನನ್ನ ಗುರುದೇವ ಬೇರೆಲ್ಲಾ ವಸ್ತುಗಳಿಗಿಂತ ಹೆಚ್ಚಾಗಿ ಧರ್ಮವನ್ನು ಕೊಡಬಹುದು, ಸ್ವೀಕರಿಸಬಹುದು ಎಂದು ಹೇಳುತ್ತಿದ್ದರು.*

ಶ್ರೀ ರಾಮಕೃಷ್ಣರ ಜೀವನದ ಒಂದು ಮಹತ್ತ್ವದ ಘಟನೆಯು ಸ್ವಾಮಿ ವಿವೇಕಾನಂದರ ಮೇಲಿನ ಮಾತುಗಳ ಸತ್ಯತೆಯನ್ನು ತೋರಿಸಿಕೊಡುತ್ತದೆ. ಸ್ವಾಮಿ ಶಾರದಾನಂದರು ಶ್ರೀ ರಾಮಕೃಷ್ಣರ ಮೇಲಿನ ತಮ್ಮ 'Sri Ramakrishna the Great Master' ಎಂಬ ಜೀವನಚರಿತ್ರೆಯಲ್ಲಿ, ಈ ಘಟನೆಯನ್ನು ವಿವರಿಸುವ ಅಧ್ಯಾಯಕ್ಕೆ 'The Master's Self-revelation and the Bestowal of Freedom from Fear' ಎಂಬ ಶೀರ್ಷಿಕೆ ನೀಡಿದ್ದಾರೆ.

೧೮೮೬ರ ಜನವರಿ ೧, ಅಂದರೆ ಶ್ರೀ ರಾಮಕೃಷ್ಣರು ತೀರಿಕೊಳ್ಳುವುದಕ್ಕೆ ಎಂಟೂವರೆ ತಿಂಗಳ ಮುಂಚೆ, ಶ್ರೀ ರಾಮಕೃಷ್ಣರು, ಉತ್ತರ ಕಲ್ಕತ್ತೆಯ ಕಾಶಿಪುರದಲ್ಲಿ ಒಂದು ಬಾಡಿಗೆ ಮನೆಯಲ್ಲಿ ಗಂಟಲು ಕ್ಯಾನ್ಸರ್‌ನಿಂದ ನರಳುತ್ತ ಮಲಗಿದ್ದರು. ರಜಾ ದಿನವಾದ್ದರಿಂದ, ಅನೇಕ ಗೃಹಸ್ಥಭಕ್ತರು ಮಧ್ಯಾಹ್ನ ಆ ಮನೆಯಲ್ಲಿ ನೆರೆದಿದ್ದರು. ಹವೆ ಹಿತವಾಗಿದ್ದು ಮಾಸ್ಟರರ ಆರೋಗ್ಯ ತುಸು ಉತ್ತಮಗೊಂಡದ್ದರಿಂದ, ಅವರು ತಮ್ಮ ಕೊಠಡಿಯಿಂದ ಆಚೆ ಬಂದು ತೋಟದಲ್ಲಿ ನಡೆದಾಡಬೇಕೆಂಬ ಆಸೆ ವ್ಯಕ್ತಪಡಿಸಿದರು. ಅವರು ನಡೆದಾಡುತ್ತಿದ್ದಾಗ, ಭಕ್ತರು ಬಂದು ಪೂಜ್ಯಭಾವದಿಂದ ಅವರ ಕಾಲಿಗೆರಗುತ್ತಿದ್ದರು. ಗಿರೀಶ್‌ಚಂದ್ರ ಘೋಷರು ನಮಸ್ಕರಿಸಲು ಬಂದಾಗ, ಶ್ರೀ ರಾಮಕೃಷ್ಣರು ಹೀಗೆ ಹೇಳಿದರು : 'ಗಿರೀಶ, ನಾನು ದೇವರ ಅವತಾರ ಎಂಬಿವೇ ಮೊದಲಾದ ಅನೇಕ ವಿಷಯಗಳನ್ನು ಹೇಳಿಕೊಂಡು ನೀವು ತಿರುಗುತ್ತಿರುವುದು ನನ್ನ ಗಮನಕ್ಕೆ ಬಂದಿದೆ ; ನನ್ನ ಬಗ್ಗೆ ಅಂಥ ಮಾತುಗಳನ್ನು ಆಡಲು ನನ್ನಲ್ಲಿ ಏನನ್ನು ಕಂಡಿರಿ, ಮತ್ತು ಏನನ್ನು ತಿಳಿದಿದ್ದೀರಿ ?' ಇದ್ದಕ್ಕಿದ್ದಂತೆ ಅಂಥ ವಿಚಿತ್ರವಾದ ಪ್ರಶ್ನೆಯನ್ನು ಕೇಳಿ ಸ್ವಲ್ಪವೂ ವಿಚಲಿತರಾಗದೆ, ಗಿರೀಶ್ ಭಾವುಕತೆಯಿಂದ ಗದ್ಗದ ದನಿಯಲ್ಲಿ ಉತ್ತರಿಸಿದರು : 'ಯಾರ ಮಹಿಮೆಯನ್ನು ವ್ಯಾಸ ವಾಲ್ಮೀಕಿಗಳಂಥ ಮಹರ್ಷಿಗಳೇ ಮಾತುಗಳಲ್ಲಿ ಬಣ್ಣಿಸಲಾಗಲಿಲ್ಲವೋ ಅಂಥವರ ಬಗ್ಗೆ ನನ್ನಂಥವನು ಇನ್ನೇನು ತಾನೆ ಹೇಳಬಲ್ಲ ?' ಶ್ರೀ

ರಾಮಕೃಷ್ಣರು ನಿಷ್ಠಾವಂತ ಗಿರೀಶರ ಆವೇಶಪೂರ್ಣ ಮಾತುಗಳಿಂದ ಆಕರ್ಷಿತರಾಗಿ, ತೋಮಾರ್ ಚೈತನ್ಯ ಹಾಕ್—ನಿನ್ನ ಆಧ್ಯಾತ್ಮಿಕ ಪ್ರಜ್ಞೆ ಜಾಗ್ರತವಾಗಲಿ !—ಎಂದು ಹರಸಿದರು. ಈ ಮಾತುಗಳನ್ನು ಹೇಳಿ ಮುಗಿಸುವಷ್ಟರಲ್ಲಿ ಸಮಾಧಿಸ್ಥರಾಗಿ ತಮ್ಮನ್ನು ನಮಸ್ಕರಿಸಲು ಬಂದವರಿಗೆಲ್ಲ ಆಶೀರ್ವಾದ ಮಾಡಿದರು. Sri Ramakrishna the Great Master ಕೃತಿಯಲ್ಲಿ (೮೯೦-೯೧) ಹೀಗೆ ಹೇಳಿದೆ :

*ಅವರುಗಳು ಶಿರಬಾಗಿ ನಮಸ್ಕರಿಸುತ್ತಿದ್ದಾಗ ಮಾಸ್ಟರರ ದಯೆಯುಕ್ಕಿ ಹರಿದು ಅದ್ಭುತವಾದ ಘಟನೆ ನಡೆಯಿತು. ನಾವು ಹೆಚ್ಚು ಕಡಮೆ ಪ್ರತಿನಿತ್ಯವೂ ದಕ್ಷಿಣೇಶ್ವರದಲ್ಲಿ ಮಾಸ್ತರರು ಕೆಲವು ಭಕ್ತರ ಬಗ್ಗೆ ದಯೆ ಮತ್ತು ಅನುಕಂಪೆಗಳಿಗೆ ಪರವಶರಾಗಿ ತಮ್ಮ ದಿವ್ಯವಾದ ಅರೆಪ್ರಜ್ಞಾವಸ್ಥೆಯಲ್ಲಿ ಅಸಾಧಾರಣವಾದ ಸ್ಪರ್ಶಶಕ್ತಿಯಿಂದ ಅವರನ್ನು ಆಶೀರ್ವದಿಸುತ್ತಿದ್ದರು—ಆ ದಿವ್ಯಭಾವದಲ್ಲಿ ಅಲ್ಲಿ ನೆರೆದಿದ್ದ ಪ್ರತಿಯೊಬ್ಬ ಭಕ್ತರನ್ನೂ ಸ್ಪರ್ಶಿಸಲಾರಂಭಿಸಿದರು. ಮಾಸ್ತರರ ಈ ವರ್ತನೆಯಿಂದ ಭಕ್ತರ ಸಂತೋಷಕ್ಕೆ ಎಲ್ಲೆಯೇ ಇರಲಿಲ್ಲ ಎಂದು ಹೇಳುವುದು ಅನಾವಶ್ಯಕ... ಆ ಅದ್ಭುತ ಘಟನೆಯಿಂದ ಒಂದು ಮಾತೂ ಹೊರಡದೆ ಕೆಲವರು ಮಂತ್ರದ ಮೋಡಿಗೆ ಒಳಗಾಗಿರುವಂತೆ ತದೇಕಚಿತ್ತದಿಂದ ಅವರನ್ನೇ ನೋಡುತ್ತಿದ್ದರು; ಇನ್ನು ಕೆಲವರು ಮನೆಯವರೆಲ್ಲರೂ ಬಂದು ಮಾಸ್ತರರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಜೋರಾಗಿ ಕೂಗಿಕೊಂಡರು; ಮತ್ತೆ ಕೆಲವರು ಹೂವುಗಳನ್ನು ಸಂಗ್ರಹಿಸಿ ಅವುಗಳಿಂದ ಅವರನ್ನು ಮಂತ್ರೋಚ್ಚಾರಣೆ ಮಾಡುತ್ತಾ ಪೂಜಿಸಿದರು. ಬೇಗನೆ ಮಾಸ್ತರರ ಭಾವಾವೇಗದ ಸಮಾಧಿಸ್ಥಿತಿ ಕೊನೆಗೊಂಡಾಗ ಭಕ್ತರೂ ತಮ್ಮ ಎಂದಿನ ಪ್ರಜ್ಞಾಸ್ಥಿತಿಗೆ ಬಂದರು.*

ಆಮೇಲೆ ಪ್ರಶ್ನಿಸಿದಾಗ, ಪ್ರತಿಯೊಬ್ಬ ಭಕ್ತನೂ ತಾನು ಬಯಸಿದ ಆಧ್ಯಾತ್ಮಿಕ ಮಾರ್ಗಕ್ಕನುಸಾರವಾಗಿ ದಿವ್ಯ ಅನುಭವ ಪ್ರಾಪ್ತಿಯಾಯಿತೆಂದು ಹೇಳಿದರು.

ಭಗವಂತನ ಪ್ರಕಟಣೆ ಅಥವಾ ದೈವಾನುಗ್ರಹವು ನಾವು ಎರಡು ಅಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡರೆ ಸ್ಪಷ್ಟವಾಗುತ್ತದೆ. ಅವೆಂದರೆ, ಭಗವತ್‌ಸ್ವರೂಪವು ಶುದ್ಧ ಚಿತ್ ಅಥವಾ ಚೈತನ್ಯವೂ, ಅನಂತವೂ, ಅದ್ವೈತವೂ ಆದುದು, ಮತ್ತು ಅದು ನಮ್ಮ ಆತ್ಮದ ಆತ್ಮವೇ. ಅದು ಹೊರಗಿನ ವಸ್ತುವಲ್ಲ ಅಥವಾ ವಿಶ್ವಾತೀತವಾದ ದೇವರಲ್ಲ. ದೇವರು ಶ್ರೀಮದ್ಭಾಗವತದಲ್ಲಿ, ಅದೇ ಗಜೇಂದ್ರ ಮೋಕ್ಷ ಸ್ತೋತ್ರದಲ್ಲಿ ಹೇಳಿರುವಂತೆ, ಆತ್ಮಪ್ರದೀಪ, ಅಂದರೆ ಆತ್ಮದ ಬೆಳಕು (VIII. ೩.೧೦)

ನಮ ಆತ್ಮಪ್ರದೀಪಾಯ
ಸಾಕ್ಷಿಣೇ ಪರಮಾತ್ಮನೇ
ನಮೋ ಗಿರಾಂ ವಿದೂರಾಯ
ಮನಸಶ್ಚೇತಸಾಂ ಅಪಿ

'ಆತ್ಮದ ಬೆಳಕಾದ, (ಪ್ರಪಂಚದ ಪ್ರತಿಯೊಂದು ಘಟನೆಗೂ) ಸಾಕ್ಷಿಯಾದ, (ಎಲ್ಲರ) ಪರಮಾತ್ಮನಾದ ಅವನಿಗೆ ನಮಸ್ಕಾರ. ಮಾತಿಗೆ ಮೀರಿದವನಾದ, (ಎಲ್ಲ) ಮನಸ್ಸು ಮತ್ತು ಚಿಂತನೆಗೂ ಮೀರಿದವನಾದ ಅವನಿಗೆ ನಮಸ್ಕಾರ.'

ಮುಕ್ತಿಯು ಪರಲೋಕದ ಮೋಕ್ಷವಲ್ಲ ; ಆದರೆ ಇಲ್ಲೇ, ಈಗಲೇ ಸಾಧಿಸಬೇಕಾದುದು. ಇಹೈವ (ಇಲ್ಲೇ) ಎಂದು ಉಪನಿಷತ್ತುಗಳು, ಗೀತೆ ಮತ್ತು ಶ್ರೀಮದ್ಭಾಗವತಗಳು ಮತ್ತಿತರ ಧರ್ಮ ಗ್ರಂಥಗಳು ಮತ್ತೆ ಮತ್ತೆ ಒತ್ತಿ ಹೇಳುತ್ತವೆ; ಏಕೆಂದರೆ, ಭಗವಂತನ ಸಾಮ್ರಾಜ್ಯ ಮಾನವನೊಳಗೇ ಇದೆ. ಶಿವಗೀತೆಯ ಮಾತುಗಳಲ್ಲಿ ಹೇಳುವುದಾದರೆ (ಪದ್ಮಪುರಾಣ, ೧೩, ೩೨) :

ಮೋಕ್ಷಸ್ಯ ನ ಹಿ ವಾಸೋಸ್ತಿ
ನ ಗ್ರಾಮಾಂತರಂ ಏವ ವಾ

ಅಜ್ಞಾನ ಹೃದಯಗ್ರಂಥೇರ್ನಾಶೋ
ಮೋಕ್ಷ ಇತಿ ಸ್ಮೃತಃ

'ಮೋಕ್ಷಕ್ಕೆ ಒಂದು ನಿರ್ದಿಷ್ಟವಾದ ನಿವಾಸವಿಲ್ಲ, ಅದು ಇನ್ನೊಂದು ಹಳ್ಳಿಗೆ ಹೋದಂತೆ ಅಲ್ಲ ; ಮೋಕ್ಷವೆಂದರೆ ಜ್ಞಾನವೆಂಬ ಹೃದಯಗ್ರಂಥಿ(ಗಂಟು)ಗಳನ್ನು ನಾಶಪಡಿಸುವುದು, ಅಷ್ಟೆ.

## ೧೯. ಪ್ರಪಂಚದ ಕೆಲವು ಯೋಗಿಗಳ ದೃಷ್ಟಿಯಲ್ಲಿ ದೈವಾನುಗ್ರಹ

ಪೂರ್ವ ಮತ್ತು ಪಶ್ಚಿಮ ದೇಶಗಳ ಅನೇಕ ಯೋಗಿಗಳ ಬರೆಹಗಳಲ್ಲಿ ಭಗವಂತನ ಆತ್ಮ ಪ್ರಕಟಣೆಯ ವಿಷಯ ಪದೇಪದೇ ಬರುತ್ತದೆ. ಜಾನ್ ರೈಸ್‌ಬ್ರೋಕ್ ಹೀಗೆ ಹೇಳುತ್ತಾನೆ (Selected Works of Jan Van Ruysbroeck, ಜಾನ್ ವ್ಯಾಟ್‌ಕಿನ್ಸ್ ಆವೃತ್ತಿ, ೧೯೧೨, ಪು. ೪೮) :

*ನಮ್ಮ ಹೃದಯಾಂತರಾಳದಲ್ಲಿರುವ ದೇವರು ನಮ್ಮಲ್ಲಿ ಬರುವ ದೇವರನ್ನು ಸ್ವಾಗತಿಸುತ್ತಾನೆ; ಅದು ಭಗವಂತ ಭಗವಂತನನ್ನು ಧ್ಯಾನಿಸುವುದು.*

ಭಕ್ತನೊಬ್ಬನು ತನ್ನ ಮೊರೆಗೆ ಭಗವಂತನಿಂದ ಸ್ಪಷ್ಟವಾದ ಉತ್ತರ ದೊರಕದಿದ್ದುದರಿಂದ ಅವನು ಭಗವಂತನ ಅಸ್ತಿತ್ವವನ್ನೇ ಶಂಕಿಸಿದಾಗ ದೇವರು ಅವನಿಗೆ ಕಳಿಸಿದ ಸಂದೇಶವನ್ನು ಒಂದು ಹಾಡಿನಲ್ಲಿ ಜಲಾಲುದ್ದೀನ್ ರೂಮಿಯು ಹೇಳಿದ್ದಾನೆ :

*ನಿನ್ನ ಮೊರೆ 'ಓ ದೇವರೆ', ನನ್ನ ಉತ್ತರ 'ನಾನಿಲ್ಲಿರುವೆ'.*

*ನಿನ್ನ ನೋವು ಮತ್ತು ಪ್ರಾರ್ಥನೆಗೆ ನನ್ನ ಸಂದೇಶ ತುಂಬ ಸ್ಪಷ್ಟ ;*
*ನನ್ನ ಕಿವಿಗೆ ತಲುಪಿಸುವ ನಿನ್ನ ಪ್ರಯತ್ನಗಳೆಲ್ಲ*
*ನನ್ನನ್ನು ನಿನ್ನತ್ತ ಆಕರ್ಷಿಸುತ್ತಿವೆ, ಅದು ಕುರುಹು.*
*ನಿನ್ನ ಪ್ರೇಮ-ಅಳಲು ನನ್ನ ಕೃಪೆ. ನೀನೇಕೆ ಅಳುವೆ ?*
*ನಿನ್ನ ಒಂದು 'ಓ ದೇವರೆ'ಗೆ 'ಇಲ್ಲಿ ನಾನಿರುವೆ' ಎಂಬ ನೂರು ಉತ್ತರ.*

ಮೇಸ್ಟರ್ ಎಕ್‌ಹಾರ್ಟ್ ಹೀಗೆ ಹೇಳುತ್ತಾನೆ :

*ಒಬ್ಬ ಮನುಷ್ಯ ಅವಿತುಕೊಂಡು ಅನಂತರ ಅಲ್ಲಿಂದ ಜಾಗ ಖಾಲಿ ಮಾಡುತ್ತಾನೆ ಎಂದಿಟ್ಟುಕೊಳ್ಳಿ. ಅದರ ಮೂಲಕ ಅವನು ತನ್ನ ಇರುವಿಕೆಯನ್ನು ತೋರಿಸಿಕೊಡುತ್ತಾನೆ ; ದೇವರೂ ಅದನ್ನೇ ಮಾಡುತ್ತಾನೆ. ಯಾರೂ ಎಂದೂ ದೇವರನ್ನು ಪತ್ತೆ ಮಾಡಲು ಆಗುತ್ತಿರಲಿಲ್ಲ ; ಅವನು ತಾನೇ ಪತ್ತೆಯಾಗುವಂತೆ ಮಾಡುತ್ತಾನೆ.*

ಸೂಫಿ ಸಂತನೊಬ್ಬ ಹೀಗೆ ಹಾಡುತ್ತಾನೆ (ಮಂತಿಕುಕ್-ತೈರ್, ಅನು. ಫಿಟ್ಸ್ ಜರಲ್ಡ್)

ಎಲ್ಲವೂ ನೀನೇ, ನೀನು ನೋಡಿದ್ದೇ, ಮಾಡಿದ್ದೇ, ಚಿಂತಿಸಿದ್ದೇ,
ನೀನು ಅಲ್ಲ, ನಾನು ನೋಡಿದ್ದು, ಇದ್ದದ್ದು ಮತ್ತು ದುಡಿದದ್ದು...
ಯಾತ್ರಿಕ, ತೀರ್ಥಯಾತ್ರೆ, ಮತ್ತು ಪಥ,
ನಾನು ನನ್ನತ್ತ
ಮತ್ತು ನಿನ್ನ ಆಗಮನ ನಾನು ನನ್ನ ಬಾಗಿಲಿಗೇ ಬಂದದ್ದು...
ಬನ್ನಿ, ಕಳೆದುಹೋದ ಅಣುಗಳೇ, ನಿಮ್ಮ ಕೇಂದ್ರಕ್ಕೆ ಬನ್ನಿ...
ಕಗ್ಗತ್ತಲಿಗೆ ದೂರ ಹೋದ ಕಿರಣಗಳೇ
ಮರಳಿ, ನಿಮ್ಮ ಸೂರ್ಯನತ್ತ ಮತ್ತೆ ಬನ್ನಿ.

ಆಧ್ಯಾತ್ಮಿಕ ಜೀವನದಲ್ಲಿ ಈಶ್ವರಕೃಪೆಯ ಜೊತೆಗೆ ಪುರುಷಕಾರವನ್ನು ಬೆರೆಸಬೇಕೆಂಬುದನ್ನು

ಒತ್ತಿಹೇಳುತ್ತಾ ಇರಾನಿನ ಸೂಫಿ ಷೇಖ್ ಸ'ದಿ ಹೀಗೆ ಹಾಡಿದ್ದಾನೆ (Sufis, Mystics, and Yogis of India, ಲೇ. ಬಂಕಿ ಬೆಹಾರಿ, ಭವನ್, ೧೯೭೧, ಪು. ೩೮-೯) :

ದೈವಾನುಗ್ರಹದಲ್ಲಿ ನಂಬಿಕೆ ಮತ್ತು ಹಮ್ಮು ಇರುವುದು ಸರಿ,
ಆ ಕೃಪೆ ಕೆಲಸ ಮಾಡುವುದು ಎನ್ನುವುದೂ ಸರಿ
ಉತ್ತ ನೆಲದಲ್ಲಿ ಮಳೆ ನೀರು ಮಾಡಿದಂತೆ.
ಆದರೆ ಆ ಮಳೆನೀರಿನಿಂದ ಏನು ಪ್ರಯೋಜನ,
ನೀನು ನೆಲದಲ್ಲಿ ಬೀಜ ಬಿತ್ತನೆ ಮಾಡದಿದ್ದರೆ !'

ಬಾಬ ಫರಿದನು ಹೀಗೆ ಹಾಡುತ್ತಾನೆ ; ಅವುಗಳಲ್ಲಿ ಅನೇಕ ಹಾಡುಗಳನ್ನು ಸಿಖ್ಖರ ಶ್ರೀ ಗುರು ಗ್ರಂಥ ಸಾಹಿಬ್‌ನಲ್ಲಿ ಸೇರಿಸಲಾಗಿದೆ (ಅದೇ, ಪು. ೧೦೫) :

*ಭಗವತ್ಕೃಪೆ ನಮ್ಮ ಮೇಲೆ ಯಾವಾಗ ಬೇಕಾದರೂ ಬೀಳಬಹುದು. ಅದಕ್ಕೆ ಯಾವ ನಿರ್ದಿಷ್ಟ ನಿಯಮವೂ ಇಲ್ಲ. ಕೆಲವರಿಗೆ ಅದು ಮಹಾತಪಸ್ಸುಗಳನ್ನು ಮಾಡಿದರೂ, ರಾತ್ರಿ ಇಡೀ ಜಾಗರಣೆ ಮಾಡಿದರೂ ದೊರಕದು ; ಆದರೆ ಅದು ನಿದ್ರಿಸುತ್ತಿರುವವರ ಮೇಲೆ ಬಲಾತ್ಕಾರವಾಗಿ ಬರಬಹುದು.*

ಭಾರತದ ಸೂಫಿ ಕವಿ-ಸಂತನಾದ ಸರ್ಮದ್‌ನು ದಾರಾ ಷಿಕೋಹನ ಮಿತ್ರ. ಸರ್ಮದನನ್ನು ದಾರಾನ ಸೋದರನಾದ ಚಕ್ರವರ್ತಿ ಔರಂಗಜೇಬನು ಗಲ್ಲಿಗೇರಿಸಿದನು ; ಅತಿ ಕಠಿನವಾದ ಜಾತಿ ಆಧಾರದ ಷಾರಿಯಾದ ಬದಲು ಮತತತ್ತ್ವಾಧಾರಿತ ಇಸ್ಲಾಮಿನ ವಿಧಿನಿಷೇಧಗಳ ಬದಲು ತರೀಕ ಸಾರ್ವತ್ರಿಕ ದೃಷ್ಟಿಯನ್ನು ಅನುಸರಿಸಬೇಕೆಂದು ಒತ್ತಿಹೇಳಿದ್ದರಿಂದ ಅವನನ್ನು ಗಲ್ಲಿಗೇರಿಸಲಾಯಿತು. ಸರ್ಮದ್ ದೇವರು ತಾನೇ ಮಾನವನಿಗೆ ಒಲಿಯುವುದನ್ನು ಹೀಗೆ ಹಾಡಿದ್ದಾನೆ (ಅದೇ ಪು. ೧೦೫-೧೦೬) :

ನಾನು ಪರಿಶುದ್ಧವಾಗಿದ್ದಿದ್ದರೆ, ನಾನೆಂದೂ ಪಾಪಗಳ
ಕ್ಷಮೆಯ ಸಿಹಿಯನ್ನು ಅನುಭವಿಸಲು ಆಗುತ್ತಿರಲಿಲ್ಲ
ನಾನು ಪವಿತ್ರನಾಗಿದ್ದಿದ್ದರೆ, ನಾನೆಂದೂ ಕಣ್ಣೀರನ್ನು ನೋಡಲಾಗುತ್ತಿರಲಿಲ್ಲ,
ಓ ! ಪ್ರೇಮವೆ ! ಓ ! ದಯವೆ ! ಓ ! ದಿವ್ಯ ವಿನಯವೆ !
ಓ ! ಕ್ಷಮೆಯ ! ಓ ! ಕರುಣೆಯ ಅನುಕಂಪವೆ !
ನಾನು ಪರಿಶುದ್ಧನಾಗಿದ್ದಿದ್ದರೆ ನಾನೆಂದೂ ನಿನ್ನನ್ನು ಅರಿಯಲು ಆಗುತ್ತಿರಲಿಲ್ಲ...
ನೀನು ನಿನಗಾಗಿ ಎಂದೂ ಮಡಿಯದವನನ್ನು ಪ್ರೀತಿಸುವೆಯಾ ?
ಅಥವಾ ನಿನಗಾಗಿ ಮಡಿಯದವನಿಗಾಗಿ ಮಡಿಯುವೆಯಾ ?
ದೇವರು ಮಾನವನಿಗಾಗಿ ಮಡಿಯದಿದ್ದರೆ
ತಾನೇ ಸ್ವತಃ ಶಾಶ್ವತವಾಗಿ ನೀಡದಿದ್ದರೆ
ಮಾನವ ಬದುಕುತ್ತಲೇ ಇರಲಿಲ್ಲ.
ಏಕೆಂದರೆ ಮಾನವನೇ ಪ್ರೇಮ, ದೇವರೇ ಪ್ರೇಮ,
ಇನ್ನೊಬ್ಬರಿಗೆ ತೋರುವ ಪ್ರತಿಯೊಂದು ದಯೆಯೂ ಕಿರುಮರಣ.
ದೇವರ ಕಲ್ಪನೆಯಲ್ಲಿ
ಯಾರೂ ಭ್ರಾತೃತ್ವವಲ್ಲದೆ ಬೇರಾವುದರಿಂದಲೂ ಬದುಕಲಾರರು.

ಸರ್ಮದನೂ ಕೂಡ ಹಿಂದಿನ ಶತಮಾನಗಳ ಸೂಫಿ ಮನ್ಸೂರನಂತೆ ಗಲ್ಲಿಗೇರಿಸಲ್ಪಟ್ಟನು. ಆಗ ದೈವಾನುಗ್ರಹ ಮತ್ತು ಪ್ರೇಮಗಳ ಬಲವನ್ನು ಈ ಹಾಡಿನಲ್ಲಿ ಕೊಂಡಾಡಿದನು (ಅದೇ,

ಪು. ೧೯-೨೦) :

ಆಹಾ ! ಆ ದೇವರೆಷ್ಟು ಕರುಣಾಳು, ಅವನು
ನನ್ನ ತಲೆಯನ್ನು ನನ್ನ ದೇಹದಿಂದ ಬೇರ್ಪಡಿಸಿದನು !
ನಾನು ತೀವ್ರವಾದ ತಲೆನೋವಿನಿಂದ ನರಳುತ್ತಿದ್ದೆ,
ಅವನು ಅದನ್ನು ಅಲ್ಲೇ ಮುಗಿಸಿದ !
ಮನ್ಸೂರನ ಘಟನೆ ಕಾಲಕಳೆದಂತೆ ಮರೆತುಹೋಗಿತ್ತು
ನನ್ನ ಮರಣದಂಡನೆಯ ಆದೇಶದಿಂದ
ಮತ್ತೊಮ್ಮೆ ಆ ದೇವ ಮಹಾಪ್ರೇಮದ ಕಥೆಯನ್ನು ಮತ್ತೆ ಹೇಳಿದಂತಾಯಿತು !

ದೈವಾನುಗ್ರಹದ ಸ್ಪರ್ಶವು, ಮಾನವ ಮತ್ತು ದೇವರ ನಡುವಣ ನಿಕಟ ಸಂಬಂಧಗಳು ಬ್ರದರ್ ಲಾರೆನ್ಸ್‌ನ ಬದುಕಿನಲ್ಲಿ ಜಾಜ್ವಲ್ಯಮಾನವಾಗಿ ಬೆಳಗುತ್ತದೆ. ಫ್ರಾನ್ಸ್‌ನ ೧೭ನೆ ಶತಮಾನದಲ್ಲಿ ವಿನಮ್ರ ಕ್ರೈಸ್ತ ಭಕ್ತನಾಗಿದ್ದ ಲಾರೆನ್ಸ್‌ನ ಸಂಭಾಷಣೆಗಳು ಮತ್ತು ಪತ್ರಗಳಲ್ಲಿ ಇವು ಕಂಡುಬರುತ್ತವೆ (Practice of the Presence of God, ಪು. ೧೬-೩೧, ರೆವೆಲ್ ಆವೃತ್ತಿ) :

*ನಾನು ಭಗವಂತನ ಮೇಲಣ ಪ್ರೇಮದಿಂದ ಮಾತ್ರ ಧಾರ್ಮಿಕ ಜೀವನ ನಡೆಸುತ್ತಿದ್ದೆ. ಕೇವಲ ಅವನಿಗೋಸ್ಕರ ನಾನು ಕೆಲಸ ಕಾರ್ಯಗಳನ್ನು ಮಾಡುತ್ತೇನೆ. ನನಗೆ ಏನೇ ಆಗಲಿ—ನಾನು ಸಾಯಲಿ, ಬದುಕಲಿ—ನಾನು ಯಾವಾಗಲೂ ಭಗವಂತನ ಪ್ರೇಮಕ್ಕಾಗಿ ಕೆಲಸ ಮಾಡುತ್ತಾ ಹೋಗುತ್ತೇನೆ...*

*ಯಾವುದಾದರೊಂದು ಒಳ್ಳೆಯ ಕೆಲಸ ಮಾಡುವ ಸಂದರ್ಭ ಒದಗಿದಾಗ ಅವನು ದೇವರನ್ನು ಸಂಬೋಧಿಸಿ, ಭಗವಂತ ನೀನು ನೆರವು ನೀಡದಿದ್ದರೆ ನಾನು ಇದನ್ನು ಮಾಡಲಾರೆ ಎಂದು ಹೇಳುತ್ತಿದ್ದ ; ಅನಂತರ ಅವನ ಆವಶ್ಯಕತೆಗಿಂತ ಹೆಚ್ಚು ಶಕ್ತಿ ಬರುತ್ತಿತ್ತು.*

*ಅವನು ತನ್ನ ಕರ್ತವ್ಯ ಮಾಡದಿದ್ದಾಗ, ದೇವರಿಗೆ ಹೀಗೆ ಹೇಳಿ ತಪ್ಪೊಪ್ಪಿಕೊಳ್ಳುತ್ತಿದ್ದ, ಅಪ್ಪ : ನೀನು ನನ್ನಷ್ಟಕ್ಕೆ ನನ್ನನ್ನು ಬಿಟ್ಟರೆ ನಾನು ಬೇರೆ ರೀತಿ ಮಾಡುವುದೇ ಇಲ್ಲ ; ನೀನೇ ನಾನು ಬೀಳುವುದನ್ನು ತಪ್ಪಿಸಬೇಕು, ನನ್ನ ತಪ್ಪನ್ನು ತಿದ್ದಬೇಕು. ಇದಾದ ನಂತರ, ಅದರ ಬಗ್ಗೆ ಏನೂ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ...*

*ನಮ್ಮ ಪಾವಿತ್ರ್ಯ ನಮ್ಮ ಕೆಲಸಗಳನ್ನು ಬದಲಿಸುವುದರಲ್ಲಿಲ್ಲ ; ಆದರೆ ನಾವು ಸಾಮಾನ್ಯವಾಗಿ ನಮಗೋಸ್ಕರ ಮಾಡುವ ಕೆಲಸವನ್ನು ದೇವರಿಗೋಸ್ಕರ ಮಾಡುವುದರಲ್ಲಿದೆ... ಪ್ರಾರ್ಥನಾ ಸಮಯ ಇತರ ಸಮಯಗಳಿಗಿಂತ ಬೇರೆಯಾಗಿರಬೇಕು ಎಂಬುದು ದೊಡ್ಡ ಭ್ರಮೆ ; ಪೂಜೆ ಮಾಡುವ ಸಮಯದಲ್ಲಿ ಪೂಜಿಸುವಂತೆ, ಕೆಲಸ ಮಾಡುವಾಗ ದೇವರೊಪ್ಪುವಂತೆ ಕೆಲಸ ಮಾಡಬೇಕು.*

*ಅವನ ಪ್ರಾರ್ಥನೆ ಭಗವಂತನ ಇರುವಿಕೆಯ ಬೋಧೆಯಲ್ಲದೆ ಬೇರೆ ಅಲ್ಲ ; ಅವನ ಆತ್ಮವು ದಿವ್ಯ ಪ್ರೇಮವೊಂದನ್ನು ಬಿಟ್ಟು, ಬೇರೆಲ್ಲಕ್ಕೂ ಸಂವೇದನಾಶೂನ್ಯವಾಗಿದೆ ; ಮತ್ತು ನಿಗದಿತ ಪೂಜಾಸಮಯ ಮುಗಿದ ನಂತರ, ಅವನಿಗೆ ಯಾವ ವ್ಯತ್ಯಾಸವೂ ಕಾಣಲಿಲ್ಲ, ಏಕೆಂದರೆ ತನ್ನ ಶಕ್ತ್ಯಾನುಸಾರ ಭಗವಂತನನ್ನು ಸ್ತುತಿಸುತ್ತಾ ಭಜಿಸುತ್ತಾ ಭಗವಂತನ ಜೊತೆಯೇ ಮುಂದುವರಿಯುತ್ತಿದ್ದ ; ಮತ್ತು ಪರಿಣಾಮವಾಗಿ ತನ್ನ ಜೀವನವನ್ನು ಸಂತತವಾದ ಆನಂದದಲ್ಲಿ ಕಳೆಯುತ್ತಿದ್ದನು.*

*ಅವರ ಮುಖಮುದ್ರೆಯೇ ಚೇತೋಹಾರಿಯಾಗಿತ್ತು, ಅಂಥ ಮಧುರವಾದ ಶಾಂತ ಭಕ್ತಿಭಾವ ನೋಟದ ಮೇಲೆ ಪ್ರಭಾವ ಬೀರದಿರಲಿಲ್ಲ. ಅಡುಗೆಯ ಕೆಲಸಕಾರ್ಯಗಳ ಗಡಿಬಿಡಿಯಲ್ಲೂ ಅವನು ಭಗವತ್‌ಸ್ಮರಣೆ ಮತ್ತು ಭಗವದ್ಭಕ್ತಿಯನ್ನು ಉಳಿಸಿಕೊಂಡಿದ್ದನು... "ನನಗೆ ಕೆಲಸದ ವೇಳೆ ಬೇರೆಯಲ್ಲ, ಪ್ರಾರ್ಥನಾ ವೇಳೆ ಬೇರೆಯಲ್ಲ ; ಅಡುಗೆಮನೆಯ ಗಲಾಟೆ, ಅವಾಂತರಗಳಲ್ಲೂ, ಅನೇಕ ಜನ ನಾನಾ ವಸ್ತುಗಳು ಬೇಕೆಂದು ಕೂಗಿಕೊಳ್ಳುತ್ತಿರುವಾಗಲೂ, ಮಂಡಿಯೂರಿ ಭಗವಂತನಿಗೆ ನಮಸ್ಕರಿಸುವಾಗ ಇದ್ದಷ್ಟೇ ಶಾಂತತೆ ನನಗೆ ಇರುತ್ತದೆ.*

ಸಂತರ ಅಂಥ ಅನುಭವಗಳಲ್ಲೆಲ್ಲಾ—ಅವು ಬ್ರದರ್ ಲಾರೆನ್ಸ್‌ನಂಥ ಸಂನ್ಯಾಸಿಮಠದ ಸಾಮಾನ್ಯ ಅಡುಗೆಭಟ್ಟರಾಗಬಹುದು, ಮೀರಾಬಾಯಿಯಂಥ ರಾಜಕುಮಾರಿಯರಾಗಿರಬಹುದು—ನಾವು ದೈವಾನುಗ್ರಹದ ಸತ್ಯವನ್ನು ಮತ್ತು ಅದು ಮಾನವಜೀವನದಲ್ಲಿ ತುಂಬಿರುವುದನ್ನು ನೋಡಬಹುದು. ಮಾನವಜೀವನದ ಮೇಲೆ ದೈವಾನುಗ್ರಹದ ಪ್ರಭಾವವನ್ನು ಕುರಿತ ಶ್ಲೋಕಗಳಲ್ಲಿ ಬಹಳವಾಗಿ ಉದ್ಧರಿಸುವ ಶ್ಲೋಕವೆಂದರೆ, 'ಗೀತಾಧ್ಯಾನಶ್ಲೋಕ'ಗಳೆಂದು ಕರೆಯುವ ಒಂಬತ್ತು ಶ್ಲೋಕಗಳಲ್ಲಿ ೮ನೆ ಶ್ಲೋಕ :

ಮೂಕಂ ಕರೋತಿ ವಾಚಾಲಂ
ಪಂಗುಂ ಲಂಘಯತೇ ಗಿರಿಂ
ಯತ್ ಕೃಪಾ ತಮಹಂ ವಂದೇ
ಪರಮಾನಂದ ಮಾಧವಂ

"ಯಾರ ಕೃಪೆಯಿಂದ ಮೂಗನು ವಾಚಾಳಿಯಾಗುತ್ತಾನೋ, ಕುಂಟನು ಬೆಟ್ಟವನ್ನು ಹತ್ತುವಂತಾಗುತ್ತದೋ ಅಂಥ ಪರಮಾನಂದದ ಸಾಕಾರಮೂರ್ತಿಯಾದ ಮಾಧವನನ್ನು (ಶ್ರೀಕೃಷ್ಣನನ್ನು) ನಮಸ್ಕರಿಸುವೆ."

ಪುರುಷಕಾರ ಅಂದರೆ ಸ್ವಪ್ರಯತ್ನ ಮತ್ತು ಭಗವತ್ಕೃಪೆಗಳ ಸ್ವರೂಪ ಹಾಗೂ ಮಾನವನ ಆಧ್ಯಾತ್ಮಿಕ ಜೀವನದಲ್ಲಿ ಅವುಗಳ ಸ್ಥಾನವನ್ನು ತೋಟಗಾರಿಕೆಯ ನಿದರ್ಶನದಿಂದ ಸಂತ ತೆರೆಸಾ ತಮ್ಮ ಆತ್ಮಕಥೆಯಲ್ಲಿ ಸುಂದರವಾಗಿ ವಿವರಿಸಿದ್ದಾರೆ (The Complete Works of Saint Teresa of Jesus, ಅನು. ಅಲಿಸನ್ ಪಿಯರ್ಸ್, ೧೯೫೦, ಸಂ. I, ಪು. ೬೫) :

*ಆರಂಭಿಗನು ತಾನು ದೇವರಿಗೆ ಆನಂದದಿಂದಿರಲು ಒಂದು ತೋಟವನ್ನು ಮಾಡುತ್ತಿರುವುದಾಗಿ ತಿಳಿಯಬೇಕು. ಆದರೆ ನೆಲ ಫಲವತ್ತಾಗಿಲ್ಲ, ಮತ್ತು ಕಳೆಗಳಿಂದ ತುಂಬಿದೆ. ಮಹಾಪ್ರಭುವು ಕಳೆಗಳನ್ನೆಲ್ಲ ಬುಡಸಹಿತ ಕಿತ್ತುಹಾಕಿ ಅವುಗಳ ಜಾಗದಲ್ಲಿ ಒಳ್ಳೆಯ ಸಸ್ಯಗಳನ್ನು ನೆಡುತ್ತಾನೆ. ಇದು ಈಗಾಗಲೇ ಆಗಿದೆ ಎಂದು ಇಟ್ಟುಕೊಳ್ಳೋಣ—ಅಂದರೆ ಆತ್ಮವೊಂದು ಪ್ರಾರ್ಥನೆ ಮಾಡಬೇಕೆಂದು ಸಂಕಲ್ಪಮಾಡಿ, ಮತ್ತು ಹಾಗೆ ಮಾಡಲು ಶುರು ಮಾಡಿದ್ದಾನೆ. ದೇವರ ನೆರವಿನಿಂದ, ಒಳ್ಳೆಯ ಮಾಲಿಗಳಂತೆ, ನಾವು ಅವಕ್ಕೆ ಹುಷಾರಾಗಿ ನೀರು ಹಾಕಿ, ಅವು ಹಾಳಾಗದ ಒಳ್ಳೆಯ ಪರಿಮಳ ಬೀರುವ ಹೂವುಗಳನ್ನು ಬಿಡುವಂತೆ ಮತ್ತು ನಮ್ಮ ದೇವರಿಗೆ ಉಲ್ಲಾಸ ನೀಡಿ,ಅವನು ಮತ್ತೆ ಮತ್ತೆ ಉದ್ಯಾನವನಕ್ಕೆ ಬಂದು ಆನಂದಿಸುವಂತೆ ಮಾಡಬೇಕು.*

*ಈ ತೋಟಕ್ಕೆ ನೀರು ಹೇಗೆ ಹಾಕುವುದು ಎಂಬುದನ್ನು ಪರಿಶೀಲಿಸೋಣ ; ಆಗ ನಾವು ಏನು ಮಾಡಬೇಕು, ನಮಗೆ ಎಷ್ಟು ದುಡಿಮೆ ಆಗುತ್ತದೆ, ದುಡಿಮೆಗಿಂತಲೂ ಹೆಚ್ಚು ಲಾಭವಾದರೆ, ಆಗ ಎಷ್ಟುಕಾಲ ಈ ದುಡಿಮೆ ಮಾಡಬೇಕು ಎಂಬುದು ತಿಳಿಯುತ್ತದೆ. ತೋಟಕ್ಕೆ ನಾಲ್ಕು ರೀತಿಗಳಲ್ಲಿ ನೀರು ಹಾಕಬಹುದು ಎಂದು ನನಗೆ ಅನ್ನಿಸುತ್ತದೆ : (ಒಂದು) ಬಾವಿ*

ಯಿಂದ ನೀರು ಸೇದುವುದರಿಂದ—ಇದಕ್ಕೆ ತುಂಬ ದುಡಿಮೆ ಆಗತ್ಯ : (ಎರಡು) ಜಲಚಕ್ರ ಮತ್ತು ಬಕೆಟ್ಟುಗಳಿಂದ ; ಆಗ ನೀರನ್ನು ಆಚ್ಚುರಾಟಣ (ಒಂದು ಬಗೆಯ ಏತ) ವ್ಯವಸ್ಥೆಯಿಂದ ಎತ್ತಲಾಗುವುದು ; (ಮೂರು) ಸಣ್ಣ ಹೊಳೆ ಯಾ ತೊರೆಯಿಂದ ; ಇದು ಭೂಮಿಗೆ ಚೆನ್ನಾಗಿ ನೀರನ್ನು ಹಾಯಿಸುತ್ತದೆ, ಏಕೆಂದರೆ ಆಗ ನೀರು ಚೆನ್ನಾಗಿ ಭೂಮಿಗೆ ಇಳಿದು ಪದೇ ಪದೇ ನೀರು ಹಾಕುವ ಆವಶ್ಯಕತೆ ಇಲ್ಲದಿರುವುದರಿಂದ ತೋಟಗಾರನ ದುಡಿಮೆ ಕಡಮೆ ; (ನಾಲ್ಕು) ಭಾರಿ ಮಳೆಯಿಂದ ; ಆಗ ಭಗವಂತನು ತೋಟಕ್ಕೆ ನಮ್ಮ ದುಡಿಮೆಯೇ ಇಲ್ಲದೆ ನೀರು ಹಾಕುತ್ತಾನೆ ; ಮೇಲೆ ಹೇಳಿದ ಎಲ್ಲಾ ವಿಧಾನಗಳಿಗಿಂತಲೂ ಇದು ಉತ್ತಮ.

The Confessions of St. Augustine ಎಂಬ ತಮ್ಮ ಶ್ರೇಷ್ಠ ಕೃತಿಯಲ್ಲಿ ಕ್ರಿ. ಶ. ೪-ಣನೆ ಶತಮಾನದಲ್ಲಿದ್ದ ಈ ಅಸಾಧಾರಣ ಕ್ರೈಸ್ತ ಯೋಗಿಯು ನಾಸ್ತಿಕವಾದದ ಮತ್ತು ವಿಷಯಲಂಪಟ ತನದ ಜೀವನದಿಂದ ಭಗವತ್ ಕೇಂದ್ರಿತವಾದ ಜೀವನಕ್ಕೆ ಪರಿವರ್ತನೆಯಾದುದು, ಆ ಆಧ್ಯಾತ್ಮಿಕ ಪರಿವರ್ತನೆಗೆ ತನ್ನ ಸ್ವಂತ ಬೌದ್ಧಿಕ ಮತ್ತು ಆಧ್ಯಾತ್ಮಿಕ ಪ್ರಯತ್ನಗಳು ಮತ್ತು ಹೋರಾಟಗಳು, ಪ್ರತಿಭಾಶಾಲಿಯೂ ಲೌಕಿಕಪ್ರವೃತ್ತಿಯುಳ್ಳವನೂ ಆದ ತನ್ನ ಮಗನ ಪರವಾಗಿ ಪ್ರೀತಿಪಾತ್ರ ತಾಯಿ ಮೋನಿಕಾಳು ಮಾಡಿದ ಪ್ರಾರ್ಥನೆಗಳು, ಭಗವತ್ಕೃಪೆ ಮಳೆಗರದದ್ದು ಎಲ್ಲವನ್ನು ಸ್ಪಷ್ಟವಾಗಿ, ಆಕರ್ಷಕ ವಾಗಿ ವಿವರಿಸಿದ್ದಾನೆ. ದೈವಾನುಗ್ರಹದ ತನ್ನ ಅನುಭವದಲ್ಲಿ, ನಾವು ಸ್ವಾವಲಂಬನೆಯ ಅನಿವಾರ್ಯತೆ ಯನ್ನು ಮತ್ತೆ ಕೃಪಾಯೋಗ್ಯವಾಗಲು ಮಾಡಬೇಕಾದ ತೀವ್ರಹೋರಾಟವನ್ನು—ಇದನ್ನು ಶ್ರೀ ರಾಮಕೃಷ್ಣರು ವ್ಯಾಕುಲತೆ ಎಂದು ಕರೆಯುತ್ತಾರೆ—; ತಮ್ಮದೇ ಕ್ರೈಸ್ತಮತದಲ್ಲಿ ಮತ್ತಿತರ ಕ್ರೈಸ್ತ ಪಂಗಡಗಳಲ್ಲಿ, ಅದು ರಾಜಕೀಯ ಬೇಟೆ ಮತ್ತು ತಲೆಯೆಣಿಕೆಗಳಲ್ಲಿ ಭ್ರಷ್ಟವಾಗಿರುವಂತೆ ಅಲ್ಲದೆ ಧರ್ಮಶಾಸ್ತ್ರದಲ್ಲಿ ಅರ್ಥಮಾಡಿಕೊಂಡಿರುವಂತೆ ಪರಿವರ್ತನೆಯ ಸುಂದರ ಅನುಭವದ ನಿಜಸ್ವರೂಪ ವನ್ನು ಕಾಣುತ್ತೇವೆ. ಆ ಕೃತಿಯಲ್ಲಿ ದೇವರಲ್ಲಿ ಪಾಪನಿವೇದನೆ ಮಾಡಿಕೊಂಡು, ಅಗಸ್ಟಿನ್ ಹೃದಯಸ್ಪರ್ಶಿಯಾದ ಕಾವ್ಯಮಯವಾದ ಗದ್ಯದಲ್ಲಿ ಹೀಗೆ ಹೇಳುತ್ತಾನೆ (ಪು. ೧೮೧-೮೩) :

*ಈಗ, ನನ್ನ ಅಂತರಾಳದಿಂದ ನನ್ನ ಅನ್ವೇಷಣೆಯ ಆಲೋಚನೆ ಎದ್ದಿತ್ತು, ಮತ್ತು ನನ್ನ ಹೃದಯದ ಕಣ್ಣೆದುರು ನನ್ನ ಇಡೀ ಕ್ಲೇಶ ಪರಂಪರೆಯನ್ನು ತೆರೆದಿಟ್ಟಿತು. ಅನಂತರ ಒಂದು ಭಾರಿ ಬಿರುಗಾಳಿ ನನ್ನೊಳಗೆ ಎದ್ದು, ಅದರೊಂದಿಗೆ ಕಣ್ಣೀರಿನ ಕೋಡಿ ಹರಿಯಿತು. ನಾನು ಆಲಿಪಿಯಸ್‌ನಿಂದ ಎದ್ದು (ಅಳುವುದಕ್ಕೆ ಏಕಾಂತ ಸ್ಥಳವೇ ಒಳ್ಳೆಯದು ಎಂದು ಭಾವಿಸಿ) ಅವನ ಸಮ್ಮುಖದಿಂದ ನನಗೆ ಇರಿಸುಮುರಿಸಾಗದಿರಲಿ ಎಂದು ಇನ್ನಷ್ಟು ದೂರ ಹೋದೆ. ನನಗೆ ಅನಿಸಿದ್ದು ಹಾಗೆ ; ಅವನು ಅದನ್ನು ಅರಿತ. ನಾನು ಏನೋ ಒಂದು ಹೇಳಿದ್ದೆ, ನಿಜ ; ನನ್ನ ದನಿಯಿಂದ ಅವನು ನನ್ನ ಕಣ್ಣೀರ ಹನಿಗಳ ಭಾರವನ್ನು ಅರಿಯಬಲ್ಲವನಾಗಿದ್ದ. ಆದ್ದರಿಂದ ನಾನು ಎದ್ದುನಿಂತೆ, ಮತ್ತು ಅವನು ನಿಬ್ಬೆರಗಾಗಿ, ತಾನು ಕುಳಿತಿದ್ದ ಜಾಗದಲ್ಲೇ ಇದ್ದ. ನಾನು ಹೇಗೋ ಅಂಜೂರದ ಮರವೊಂದರ ತಳಕ್ಕೆ ಹೋಗಿ ಬಿದ್ದುಕೊಂಡು ನನ್ನ ಕಣ್ಣೀರು ಸ್ವಚ್ಛಂದ ವಾಗಿ ಹರಿಯಲು ಬಿಟ್ಟೆ ; ಅದು ಕಣ್ಣಿನಿಂದ ಹೊಳೆಯಾಗಿ, ಧಾರಾಕಾರವಾಗಿ ಹರಿಯಿತು, ಇದು ನಿನಗೆ (ದೇವರಿಗೆ) ಸ್ವೀಕಾರಾರ್ಹವಾದ ಯಜ್ಞ. ನಾನು ನಿನಗೆ (ಭಗವಂತನಿಗೆ) ಈ ಅರ್ಥದ ಮಾತುಗಳನ್ನು—ಬಹುಶಃ ಇದೇ ಪದಗಳನ್ನಲ್ಲ—ಹೇಳುತ್ತಲೇ ಇದ್ದೆ : "ನೀನು, ಓ ಪ್ರಭು, ಇನ್ನೆಷ್ಟು ಕಾಲ, ಪ್ರಭುವೆ ; ನೀನು ಎಂದೆಂದಿಗೂ ಕೋಪದಿಂದಲೇ ಇರುವೆಯಾ ? ನಮ್ಮ ಹಳೆಯ ದುಷ್ಕೃತ್ಯಗಳನ್ನು ನೆನೆಯಬೇಡ." ಏಕೆಂದರೆ ಇವೇ ನನ್ನನ್ನು ಭದ್ರವಾಗಿ ಹಿಡಿದಿರುವುದು. ನನ್ನ ಕ್ಲೇಶದಲ್ಲಿ ನಾನು "ಈ 'ನಾಳೆ ನಾಳೆ' ಎನ್ನುವುದು ಇನ್ನೆಷ್ಟು ಕಾಲ,*

ಇನ್ನೆಷ್ಟು ಕಾಲ ? ಈಗಲೇ ಏಕಾಗಬಾರದು ? ಈ ಹೊತ್ತೇ ನನ್ನ ಕೊಳಕುತನದಿಂದ ಇದನ್ನು ಮುಗಿಸಬಾರದು ?"

ಆದ್ದರಿಂದ, ನನ್ನ ಪಾಪಕೃತ್ಯದ ಪರಿತಾಪದಲ್ಲಿ ಅಳುತ್ತಾ ಮಾತನಾಡಿದೆ. ಇದ್ದಕ್ಕಿದ್ದಂತೆ, ಸಮೀಪದ ಮನೆಯೊಂದರಿಂದ ಒಂದು ದನಿ ನನ್ನ ಕಿವಿಗೆ ಬಿದ್ದಿತು. ಅದು ಒಬ್ಬ ಹುಡುಗನ ಅಥವಾ ಹುಡುಗಿಯ ಧ್ವನಿ (ಯಾವುದು ಎಂಬುದು ನನಗೆ ಗೊತ್ತಿಲ್ಲ). ಅದೊಂದು ಬಗೆಯ ಏಕತಾನದ ದನಿ, ಮಾತುಗಳು ಒಂದೇ ಸಮನಾಗಿ ಪುನರಾವರ್ತಿತವಾಗುತ್ತಿದ್ದವು : "ಅದನ್ನು ತೆಗೆದುಕೊಂಡು ಓದು, ಅದನ್ನು ತೆಗೆದುಕೊಂಡು ಓದು." ಒಮ್ಮೆಲೇ ನನ್ನ ಮುಖ ಬದಲಾಯಿತು, ಇಂಥ ಹಾಡಿನ ಮಾತುಗಳು ಮಕ್ಕಳು ಆಡುವ ಆಟದ್ದಿರಬಹುದೇ ಎಂದು ಆಲೋಚಿಸಿದೆ ; ಇಂಥದ್ದನ್ನು ನಾನು ಹಿಂದೆಂದೂ ಕೇಳಿದ ನೆನಪಿರಲಿಲ್ಲ. ನನ್ನ ಕಣ್ಣೀರಿನ ಧಾರೆಯನ್ನು ತಡೆದು, ಎದ್ದುನಿಂತು, ನಾನು ಪುಸ್ತಕವನ್ನು ಬಿಚ್ಚಿ ಮೊದಲ ಭಾಗವನ್ನು ಗ್ರಹಿಸಬೇಕೆಂಬ ದೈವೀ ಆಜ್ಞೆಯೇ ಇದು ಎಂದು ಅರ್ಥೈಸಿದೆ. ಏಕೆಂದರೆ ಇದನ್ನು ಆ್ಯಂಟನಿಯ ಬಗ್ಗೆಯೂ ಕೇಳಿದ್ದೆ. ಸುವಾರ್ತೆಯನ್ನು ಓದುತ್ತಿದ್ದಾಗ ಅವನು ಅಕಸ್ಮಾತ್ ಬಂದಾಗ, ಆ ಮಾತನ್ನು ನೇರವಾಗಿ ತನಗೇ ಉದ್ದೇಶಿಸಿ ಓದಲಾಗಿದೆಯೆಂದು ಭಾವಿಸಿದನು. ಆ ಬುದ್ಧಿವಾದದ ಮಾತುಗಳು : ಹೋಗು, ನಿನ್ನ ಬಳಿ ಇರುವುದೆಲ್ಲವನ್ನೂ ಮಾರಿ ಬಡಬಗ್ಗರಿಗೆ ಕೊಡು ; ನಿನಗೆ ಸ್ವರ್ಗದಲ್ಲಿ ನಿಧಿಯಿದೆ ; ನನ್ನನ್ನು ಹಿಂಬಾಲಿಸು. ಅಂಥ ದಿವ್ಯವಾಣಿಯಿಂದ ಅವನು ಕೂಡಲೇ ನೀನಾಗಿ (ಭಗವಂತನಾಗಿ) ಪರಿವರ್ತಿತನಾದ.

ಆದಕಾರಣ ನಾನು ತವಕದಿಂದ ಅಲಿಪಿಯಸ್ ಕುಳಿತಿದ್ದ ಕಡೆ ಮತ್ತೆ ಹೋದೆ; ಏಕೆಂದರೆ ನಾನು ಎದ್ದಾಗ ಅಪಾಸಲನ ಪುಸ್ತಕವನ್ನು ಬಿಟ್ಟದ್ದು ಅಲ್ಲೇ. ಆ ಪುಸ್ತಕವನ್ನು ಎತ್ತಿಕೊಂಡು ಮೊದಲು ನನ್ನ ಕಣ್ಣಿಗೆ ಬಿದ್ದ ಭಾಗವನ್ನು ಮೌನವಾಗಿ ಓದಿದೆ : "ಸ್ವೇಚ್ಛಾಜೀವನ ಮತ್ತು ಕುಡಿತದಲ್ಲಾಗಲಿ ಇಲ್ಲ, ವಿಷಯಲಂಪಟತೆ ಮತ್ತು ಸ್ವೇಚ್ಛಾಚಾರದಲ್ಲಾಗಲಿ ಇಲ್ಲ, ಕಲಹ ಮತ್ತು ಹೊಟ್ಟೆಕಿಚ್ಚಿನಲ್ಲಾಗಲಿ ಇಲ್ಲ. ಆದರೆ ಏಸುಕ್ರಿಸ್ತನ ಮೇಲೆ ಮನಸ್ಸಿಡು, ಮನುಷ್ಯ ಸಹಜವಾದ ಐಹಿಕ ಭೋಗಾಸಕ್ತಿಯಲ್ಲಿ ಮನಸ್ಸಿಡಬೇಡ. ಅಲ್ಲಿಂದ ಮುಂದೆ ಓದಲು ನನಗೆ ಮನಸ್ಸಿರಲಿಲ್ಲ ; ಓದುವ ಆವಶ್ಯಕತೆಯೂ ಇರಲಿಲ್ಲ. ಏಕೆಂದರೆ, ನಾನು ಆ ವಾಕ್ಯದ ಕೊನೆಮುಟ್ಟಿದ್ದೆ ; ಮತ್ತು ನನ್ನ ಹೃದಯದಲ್ಲಿ ಆತ್ಮವಿಶ್ವಾಸದ ಬೆಳಕು ತುಂಬಿ, ನನ್ನ ಸಂಶಯದ ಛಾಯೆಗಳೆಲ್ಲ ಮಾಯವಾಗಿದ್ದವು.

ಆ ಪುಸ್ತಕವನ್ನು ಮುಚ್ಚುವುದಕ್ಕೆ ಮುಂಚೆ, ನಾನು ನನ್ನ ಬೆರಳನ್ನು ಅಥವಾ ಗುರುತನ್ನು ಇಟ್ಟು, ಆದುದನ್ನೆಲ್ಲ ಅಲಿಪಿಯಸ್‌ಗೆ ಹೇಳಿದೆ. ಅಷ್ಟು ಹೊತ್ತಿಗೆ ನನ್ನ ಮುಖ ಪರಮ ಶಾಂತವಾಗಿತ್ತು. ಅಲಿಪಿಯಸ್‌ನಾದರೋ ತನ್ನೊಳಗೆ ಆಗುತ್ತಿರುವುದನ್ನು—ಅದರ ಬಗೆಗೆ ನನಗೆ ಅಲ್ಲಿಯವರೆಗೆ ಗೊತ್ತಿರಲಿಲ್ಲ—ನನಗೆ ಹೇಳಿದ. ನಾನು ಓದಿದ ಭಾಗವನ್ನು ತೋರಿಸಬೇಕೆಂದು ಅವನು ಹೇಳಿದ. ನಾನು ಆ ಭಾಗವನ್ನು ತೋರಿಸಿದೆ ; ಅವನು ನಾನು ಓದಿದ್ದನ್ನೂ ನಾನು ಓದದ ಅದರ ಮುಂದಿನ ಭಾಗವನ್ನೂ ಓದಿದ. ಮುಂದಿನ ಮಾತುಗಳು ಹೀಗಿದ್ದವು : ಮತಶ್ರದ್ಧೆ, ಭಕ್ತಿ ಇಲ್ಲದವನನ್ನು ಸ್ವಾಗತಿಸು. ಅವನು ಇದನ್ನು ತನಗೇ ಅನ್ವಯಿಸಿ ಹೇಳಿದ. ಆ ಬುದ್ಧಿವಾದದಿಂದ ಅವನು ಬಲಗೊಂಡನು. ಶಾಂತವಾಗಿ ಮತ್ತು ಹಿಂದುಮುಂದೆ ನೋಡದೆ, ಅವನು ಬಂದು ತನ್ನ ಸ್ವಭಾವಕ್ಕೆ ಮತ್ತು ಯಾವಾಗಲೂ ನನ್ನದಕ್ಕಿಂತ ಉತ್ತಮವಾದ ಗುಣಸಾಧನೆಗಾಗಿ ಮತ್ತು ದೃಢಸಂಕಲ್ಪಕ್ಕಾಗಿ ನನ್ನೊಡನೆ ಸೇರಿದ.

ನಾನು ಮಾಡುವ ಮುಂದಿನ ಕೆಲಸ ಒಳಕ್ಕೆ ಹೋಗಿ ನನ್ನ ತಾಯಿಗೆ ಹೇಳುವುದು. ಅವಳಿಗೆಷ್ಟು ಆನಂದ! ಅದೆಲ್ಲ ಹೇಗಾಯಿತು ಎಂದು ನಾವು ಅವಳಿಗೆ ಹೇಳುತ್ತೇವೆ; ಅವಳ ಸಂತೋಷಕ್ಕೆ ಹರ್ಷೋತ್ಕರ್ಷಕ್ಕೆ ಪಾರವೇ ಇಲ್ಲ. ಈಗ ಅವಳು ನಾವು ಕೇಳುವುದಕ್ಕಿಂತ ಅಥವಾ ಆಲೋಚಿಸುವುದಕ್ಕಿಂತ ಹೆಚ್ಚಿನದನ್ನು ಮಾಡುವ ಶಕ್ತಿಯುಳ್ಳ ನಿನ್ನನ್ನು (ಭಗವಂತನನ್ನು) ಸ್ತುತಿಸುತ್ತಿದ್ದಳು, ಏಕೆಂದರೆ ನನ್ನ ಬಗ್ಗೆ ಹೇಳುವುದಾದರೆ, ಅವಳು ನಿನ್ನ ಮುಂದೆ ಅಂಗಲಾಚಿ ಅತ್ತು ಕೇಳುತ್ತಿದ್ದುದಕ್ಕಿಂತಲೂ ಹೆಚ್ಚಾಗಿ ನೀನು ಅವಳಿಗೆ ಕೊಟ್ಟಿದ್ದೀಯೆ. ಏಕೆಂದರೆ ಹೆಂಡತಿಯನ್ನಾಗಲಿ ಬೇರಾವುದೇ ಲೌಕಿಕ ವಸ್ತುವನ್ನಾಗಲಿ ಕೇಳದಂತೆ ನೀನು ನನ್ನನ್ನು ಪರಿವರ್ತಿಸಿದೆ. ಈಗ ನೀನು ನನಗೆ ಅವಳಿಗೆ ಅನೇಕ ವರ್ಷಗಳ ಹಿಂದೆ ಸ್ವಪ್ನದಲ್ಲಿ ತೋರಿಸಿದಂತೆ, ನಾನು ಆ ನಂಬಿಕೆಯ ಮೇಲೆ ನಿಂತಿದ್ದೇನೆ. ನೀನು ಅವಳ ಶೋಕವನ್ನು ಸತೋಷವನ್ನಾಗಿಸಿದ್ದೀಯೆ; ಆ ಸಂತೋಷವು ಅವಳು ಬಯಸಿದ್ದಕ್ಕಿಂತ ಹೆಚ್ಚು ಶ್ರೀಮಂತ ವಾದುದು, ನನ್ನಿಂದ ದೊರಕುವ ಮೊಮ್ಮಕ್ಕಳನ್ನು ಪಡೆದಾಗ ಬರುವ ಸಂತೋಷಕ್ಕಿಂತ ಪ್ರಿಯವೂ ಶುದ್ಧವೂ ಆದುದು.

ಅನಂತರ, ಆಧ್ಯಾತ್ಮಿಕವಾಗಿ ಮಹತ್ತ್ವಪೂರ್ಣವಾದ ಅವನ ಭಗವಂತನ ಸಾಕ್ಷಾತ್ಕಾರದ ವಿವರಣೆ ಬರುತ್ತದೆ ; ಅದು ಅತಿ ದೂರದ, ವಿಶ್ವಾತೀತವಾದ, ಅನುಭವಿಸಲಾಗದ ಏಕದೇವವಾದದ ದೇವರಲ್ಲ ; ಆದರೆ ಅವನ ಆತ್ಮದ ಆತ್ಮ ಎಂದು ನಂಬಬಹುದು, ಜೀವದ ಜೀವ (ಅದೇ, ೨೧೫-೧೬) :

ಈ ದೇವರು ಎಂದರೇನು ? ನಾನು ಭೂಮಿಯನ್ನು ಕೇಳಿದೆ ; ಅದು ಉತ್ತರಿಸಿತು : 'ನಾನು ಆ ದೇವರಲ್ಲ' ಮತ್ತು ಈ ಭೂಮಿಯ ಮೇಲಣ ಸಕಲ ವಸ್ತುಗಳೂ ಅದೇ ರೀತಿ (ತಾವು ದೇವರಲ್ಲವೆಂದು) ಒಪ್ಪಿಕೊಂಡವು. ನಾನು ಸಮುದ್ರವನ್ನು ಅದರ ಆಳವಾದ ಭಾಗಗಳನ್ನೂ, ಜೀವವಿರುವ ಹರಿದಾಡುವ ವಸ್ತುಗಳನ್ನೆಲ್ಲಾ ಕೇಳಿದೆ. ಅವು ಉತ್ತರಿಸಿದವು : ನಾವು ನಿನ್ನ ದೇವರಲ್ಲ. ನಮಗಿಂತ ಮೇಲಿನ ವಸ್ತುಗಳನ್ನು ನೋಡು." ನಾನು ಬೀಸುವ ಗಾಳಿಯನ್ನು ಕೇಳಿದೆ ; ವಿಶ್ವವ್ಯಾಪಿ ವಾಯುವು ತನ್ನ ಸಕಲ ನಿವಾಸಿಗಳೊಡನೆ ಉತ್ತರಿಸಿತು : "(ಗ್ರೀಕ್ ತತ್ತ್ವಶಾಸ್ತ್ರಜ್ಞ) ಅನ್ಯಾಕ್ಸಮೆನೀಸ್‌ನು ಹೇಳಿದ್ದು ತಪ್ಪು. ನಾನು ದೇವರಲ್ಲ". ನಾನು ಆಕಾಶವನ್ನೂ, ಸೂರ್ಯಚಂದ್ರರನ್ನೂ ತಾರೆಯರನ್ನೂ ಕೇಳಿದೆ. ಅವೆಲ್ಲ "ಇಲ್ಲ, ನೀನು ನೋಡುತ್ತಿರುವ ದೇವರು ನಾವಲ್ಲ" ಎಂದು ಹೇಳಿದವು. ನನ್ನ ಇಂದ್ರಿಯಗಳ ದ್ವಾರಗಳ ಬಳಿ ನಿಲ್ಲುವ ವಸ್ತುಗಳನ್ನೆಲ್ಲ ಕೇಳಿದೆ: "ನನ್ನ ದೇವರ ಬಗ್ಗೆ ತಿಳಿಸಿಕೊಡಿ, ಅವನಲ್ಲದ (ಭಗವಂತ ನಲ್ಲದ) ನೀವು ಅವನ ಬಗ್ಗೆ ಸ್ವಲ್ಪ ತಿಳಿಸಿಕೊಡಿ. ಅವೆಲ್ಲ ಗಟ್ಟಿಯಾದ ದನಿಯಲ್ಲಿ ಕೂಗಿ ಕೊಂಡವು : "ಅವನು ನಮ್ಮನ್ನು ಸೃಷ್ಟಿಸಿದನು."

...ಸತ್ಯ ನನಗೆ ಹೇಳುತ್ತದೆ : "ನಿನ್ನ ದೇವರು ಆಕಾಶವಲ್ಲ, ಭೂಮಿಯಲ್ಲ, ಅಥವಾ ಬೇರಾವ ವ್ಯಕ್ತಿಯೂ ಅಲ್ಲ"... ಈಗ ನನ್ನ ಆತ್ಮವೇ, ನಾನು ನಿನಗೆ ಹೇಳುತ್ತಿದ್ದೇನೆ, ನೀನೇ ನನ್ನ ಹೆಚ್ಚುಭಾಗ. ನೀನೇ ನನ್ನ ಇಡೀ ದೇಹಕ್ಕೆ ಉಸಿರೆರೆಯುತ್ತೀಯೆ, ಅದಕ್ಕೆ ಜೀವ ಕೊಡುತ್ತೀಯೆ. ಇದನ್ನು ಬೇರೆ ಯಾರೂ ಇನ್ನೊಂದು ದೇಹಕ್ಕೆ ಜೀವಕೊಡಲಾರರು. ಆದರೆ ನಿನ್ನ ದೇವರು ನಿನ್ನ ಜೀವನದ ಉಸಿರು.

### ೨೦. ಶ್ರೀರಾಮಕೃಷ್ಣರು ಮತ್ತು ಸಾಕಾರ, ನಿರಾಕಾರ ದೇವರ ಏಕತೆ

ಭಕ್ತಿಯನ್ನು ಪ್ರತಿಪಾದಿಸುವ ಧರ್ಮಗಳು ಶರಣಾಗತಿ ಮತ್ತು ದೈವಾನುಗ್ರಹಗಳನ್ನು ಹೇಳುತ್ತವೆ. ಇವುಗಳ ಅತ್ಯಂತ ಮುಖ್ಯವಾದ ಉಲ್ಲೇಖ ಉಪನಿಷತ್ತುಗಳಲ್ಲಿ, ಕಠೋಪನಿಷತ್ತಿನಲ್ಲಿ ಆತ್ಮ

ಸಾಕ್ಷಾತ್ಕಾರದ ಬಗ್ಗೆ ಯಮನು ನಚಿಕೇತನಿಗೆ ಕೊಡುವ ಉಪದೇಶದಲ್ಲಿ ಬರುತ್ತದೆ (೨.೨೩):

ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಮ್

'ಈ ಆತ್ಮವನ್ನು ಧರ್ಮಗ್ರಂಥಗಳ ಅಧ್ಯಯನದಿಂದ ಪಡೆಯಲಾಗುವುದಿಲ್ಲ, ತೀಕ್ಷ್ಣಬುದ್ಧಿಯಿಂದಾಗಲಿ, ಹೆಚ್ಚಿನ ಶ್ರವಣದಿಂದಾಗಲಿ ಪಡೆಯಲಾಗುವುದಿಲ್ಲ. ತಾನು ಯಾರನ್ನು ಅದು ಆರಿಸಿಕೊಳ್ಳುವುದೋ ಅಂಥವನಿಗೆ ಈ ಆತ್ಮವು ತನ್ನ (ನಿಜ) ಸ್ವರೂಪವನ್ನು ತಿಳಿಸಿಕೊಡುತ್ತದೆ.'

ಈ ಮಂತ್ರದಲ್ಲಿ ಹೇಳಿದ ಧರ್ಮಗ್ರಂಥಗಳ ಅಧ್ಯಯನ, ದೇವತಾಶಾಸ್ತ್ರಗಳ ಅಧ್ಯಯನ, ಭಕ್ತಿಗೀತೆಗಳ ಮತ್ತು ಪ್ರವಚನಗಳ ಶ್ರವಣ, ಮತ್ತಿತರ ಧಾರ್ಮಿಕ ಅನುಷ್ಠಾನಗಳು ಆತ್ಮಸಾಕ್ಷಾತ್ಕಾರ ಮಾರ್ಗಗಳೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಆದರೆ, ಇದು ಪೂರ್ಣವಾಗಿ ಸತ್ಯವಲ್ಲವೆಂದು ಮೇಲಿನ ಉಪನಿಷತ್ತು ಹೇಳುತ್ತದೆ. ಇವು ಕಾರ್ಯಕಾರಣ ಸಂಬಂಧ ತತ್ತ್ವಕ್ಕೆ ಒಳಪಟ್ಟಿದೆ. ಇವು ಕಾರ್ಯಕಾರಣ ಸಂಬಂಧದ ಜಾಲಕ್ಕೆ—ದ್ವೈತತೆ ಮತ್ತು ಸಾಪೇಕ್ಷತೆಗಳ ತತ್ತ್ವ—ಒಳಪಡುತ್ತವೆ. ಆದರೆ ಆತ್ಮವು ಕಾರ್ಯಕಾರಣ ಸಂಬಂಧಕ್ಕೆ ಮೀರಿದ್ದು. ಅದು ಎಚ್ಚರಿಕೆಯ ವಿಧಾನಗಳಿಂದ ಪತ್ತೆ ಹಚ್ಚಬಹುದಾದ ವಸ್ತುಗಳ ನಡುವಣ ವಸ್ತುವಲ್ಲ ; ಪ್ರಪಂಚದ ಆತ್ಮವಲ್ಲದ ವಿಷಯಗಳಲ್ಲಿ ಒಂದು ವಸ್ತುವಲ್ಲ ; ಪ್ರಪಂಚದ ಇಂದ್ರಿಯಗೋಚರ ವಿಷಯಗಳಲ್ಲಿ ಒಂದು ಇಂದ್ರಿಯ ಗೋಚರ ವಿಷಯವಲ್ಲ. ಬದಲಿಗೆ, ಅದು ವೀಕ್ಷಕನ, ಸಾಧಕನ ಆತ್ಮವೇ ಆಗಿದೆ. ಅನಂತವೂ, ಅದ್ವೈತವೂ, ಶುದ್ಧ ಚೈತನ್ಯವೂ ಆದ್ದರಿಂದ ಅದು ಕಾರ್ಯಕಾರಣಗಳ ಉತ್ಪನ್ನವಲ್ಲ ; ನಾಸ್ತಿ ಅಕೃತಃ ಕೃತೇನ—'ನಿರುಪಾಧಿಕವಾದುದನ್ನು ಸೋಪಾಧಿಕವಾದುದರಿಂದ ಪಡೆಯಲಾಗುವುದಿಲ್ಲ'ವೆಂದು ಮುಂಡಕ ಉಪನಿಷತ್ತು (೧.೨.೧೨) ಸ್ಪಷ್ಟವಾಗಿ ಹೇಳುತ್ತದೆ. ಇದರ ಮೇಲೆ ವ್ಯಾಖ್ಯಾನಿಸುತ್ತಾ ಶಂಕರಾಚಾರ್ಯರು ಹೀಗೆ ಹೇಳುತ್ತಾರೆ :

ಇಹ ಸಂಸಾರೇ, ನಾಸ್ತಿ ಕಶ್ಚಿದಪಿ ಅಕೃತಃ ಪದಾರ್ಥಃ ; ಸರ್ವಾ ಏವ ಹಿ ಲೋಕಾಃ ಕರ್ಮಚಿತಾಃ ; ಕರ್ಮಚಿತತ್ವಾತ್ ಚ ಅನಿತ್ಯಾಃ... ಅಹಂ ಚ ನಿತ್ಯೇನ, ಅಮೃತೇನ, ಅಭಯೇನ, ಕುಟಸ್ಥೇನ, ಅಚಲೇನ, ಧ್ರುವೇಣ ಅರ್ಥೇನ ಅರ್ಥೀ ನ, ತತ್ ವಿಪರೀತೇನ—

*ಈ ಜಗತ್ತಿನಲ್ಲಿ ಯಾವುದೂ ಕಾರಣವಿಲ್ಲದೆ ಇಲ್ಲ ; ಎಲ್ಲಾ ಲೋಕಗಳೂ (ಭೂಲೋಕ ಮತ್ತು ಸ್ವರ್ಗಲೋಕಗಳು) ಕರ್ಮಫಲಗಳು ; ಅವು ಕರ್ಮಫಲಗಳಾದ್ದರಿಂದ ಅವು ಅನಿತ್ಯವಾದವು... ಆದರೆ ಆಧ್ಯಾತ್ಮಿಕ ಸಾಧಕನಾಗಿ ನಾನು ಕೇಳುವುದು ನಿತ್ಯವೂ, ಅಮರ್ತ್ಯವೂ, ನಿರ್ಭಯವೂ, ಅಪರಿವರ್ತನಶೀಲವೂ, ಅಚಲವೂ, ಸ್ಥಿರವೂ ಆದುದೇ ಹೊರತು ಇವಕ್ಕೆ ವಿರುದ್ಧವಾದುದಲ್ಲ.*

ಕಠೋಪನಿಷತ್ತಿನ ಮೇಲಿನ ಶ್ಲೋಕಕ್ಕೆ (೨.೨೩) ಶಂಕರಾಚಾರ್ಯರ ವ್ಯಾಖ್ಯಾನವು ಸ್ವಲ್ಪ ಭಿನ್ನವಾಗಿದ್ದರೂ, ಅವರು ಆತ್ಮದರ್ಶನಕ್ಕೆ ದೈವಾನುಗ್ರಹವೇ ಮುಖ್ಯವೆಂದು ಒತ್ತಿ ಹೇಳುತ್ತಾರೆ :

ಯಂ ಏವ, ಸ್ವಾತ್ಮಾನಂ, ಏಷ ಸಾಧಕೋ ವೃಣುತೇ, ಪ್ರಾರ್ಥಯತೇ ತೇನೈವ ಆತ್ಮನಾ, ವರಿತ್ರಾ, ಸ್ವಯಮಾತ್ಮಾ ಲಭ್ಯೋ ಜ್ಞಾಯತೇ—

*ಯಾರನ್ನು ಮಾತ್ರ—ಅಂದರೆ ತನ್ನ ಆತ್ಮವನ್ನು—ಈ ಸಾಧಕನು ಬಯಸುತ್ತಾನೋ, ಹಾತೊರೆಯುತ್ತಾನೋ, ಆ ಆತ್ಮದಿಂದಲೇ—ಅಂದರೆ ಸಾಧಕನ ಆತ್ಮದಿಂದಲೇ—ಅದನ್ನು ಪಡೆಯುತ್ತಾನೆ, ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ.*

ಇಲ್ಲಿ ಆಯ್ಕೆಯನ್ನು ಸಾಧಕನು ಶ್ರದ್ಧಾಪೂರ್ವಕ ಹಂಬಲದಿಂದ ಮತ್ತು ತೀವ್ರ ಪ್ರಯತ್ನದಿಂದ ಮಾಡುತ್ತಾನೆ. ಪ್ರತಿಯೊಂದು ಆಧ್ಯಾತ್ಮಿಕ ಉಪದೇಶದ ಪ್ರಕಾರವೂ ಈ ತೀವ್ರ ಪ್ರಯತ್ನ ಅತ್ಯಾವಶ್ಯಕ. ಆದರೆ ಅದು, ನಾವು ಹಿಂದೆ ನೋಡಿದಂತೆ, ಅಂತರ್ಜ್ಞಾನದಿಂದ ಆತ್ಮನ ಅನುಗ್ರಹವನ್ನು ಪಡೆಯುವುದು. ಶಂಕರಾಚಾರ್ಯರು, ಈ ಮಂತ್ರದ ಮೊದಲ ಭಾಗದ ಮೇಲೆ ವ್ಯಾಖ್ಯಾನಿಸುತ್ತಾ ದೈವಾನುಗ್ರಹದ ಆವಶ್ಯಕತೆಯನ್ನು ಒತ್ತಿ ಹೇಳುತ್ತಾರೆ :

ಕಥಂ ಲಭ್ಯತೇ, ಇತ್ಯುಚ್ಯತೇ ; ತಸ್ಯ ಆತ್ಮಕಾಮಸ್ಯ, ಆತ್ಮಾ ವಿವೃಣುತೇ, ಪ್ರಕಾಶಯತಿ ; ಪಾರಮಾರ್ಥಿಕೀಂ ತನು ಸ್ವಾಂ, ಸ್ವಕೀಯಾಂ ಸ್ವಯಾಥಾತ್ಮ್ಯಂ, ಇತ್ಯರ್ಥಃ—

'(ಆತ್ಮನ್) ಹೇಗೆ ಸಿಕ್ಕುತ್ತದೆ ? ಇದಕ್ಕೆ ಉತ್ತರ ; ಆ ಆತ್ಮವನ್ನು ಪ್ರೀತಿಸುವವನಿಗೆ, ಆತ್ಮವು ತಿಳಿಸುತ್ತದೆ, ಪ್ರಕಟಿಸುತ್ತದೆ ; ತನ್ನ ಪಾರಮಾರ್ಥಿಕ ನಿಜಸ್ವರೂಪವನ್ನು, ತನ್ನದೇ ಆದ ನಿಜ ರೂಪವನ್ನು ತಿಳಿಸುತ್ತದೆ. ಇದು ಅರ್ಥ.'

ಅಷ್ಟೊಂದು ಧ್ಯಾನ, ಅಷ್ಟೊಂದು ಇತರ ಧಾರ್ಮಿಕ ಅನುಷ್ಠಾನಗಳು ಆತ್ಮಸಾಕ್ಷಾತ್ಕಾರದ ಸಾಧನಗಳಾದರೆ, ಆಗ ಆತ್ಮನ್ ಒಂದು ಪರಿಣಾಮವಾಗುತ್ತದೆ—ಸಾಪೇಕ್ಷ ಮತ್ತು ಸಾಂತವಾದುದು—; ಆದಕಾರಣ ಅನಿತ್ಯವಾಗುತ್ತದೆ. ಸಾಂತವಾದ ಜ್ಞಾನವು ಅಥವಾ ಅರಿವು, ಅಥವಾ ಪ್ರಜ್ಞೆಯೂ ಶುದ್ಧಚೈತನ್ಯದ ಅನಂತ ದೀಪವನ್ನು ಬೆಳಗಬಲ್ಲದೆ ? ಒಂದು ಟಾರ್ಚು, ಅದು ಎಷ್ಟೇ ದೊಡ್ಡದಿರಲಿ, ಎಷ್ಟೇ ಶಕ್ತಿಶಾಲಿಯಾಗಿರಲಿ, ಸೂರ್ಯನನ್ನು ಬೆಳಗಬಲ್ಲದೆ ? ಅದರ ಬದಲು, ಸೂರ್ಯನೇ ಆ ಟಾರ್ಚನ್ನು ಮತ್ತು ಸೌರವ್ಯೂಹದ ಇತರ ಎಲ್ಲಾ ದೊಡ್ಡ ಮತ್ತು ಸಣ್ಣ-ಬೆಳಕಿನ ಆಕರಗಳನ್ನೂ ಬೆಳಗಿಸುತ್ತಾನೆ. ಅದೇ ರೀತಿ, ಮನಸ್ಸಿನ ಮೂಲಕ ಅಲ್ಲದೆ, ಧ್ಯಾನ ಮತ್ತು ಇತರ ಧಾರ್ಮಿಕ ಅನುಷ್ಠಾನಗಳ ಮೂಲಕ—ಅವು ಎಷ್ಟೇ ಆಳವೂ ಗಹನವೂ ಆಗಿದ್ದರೂ—ಆತ್ಮನನ್ನು ಪ್ರಕಾಶಿಸುವುದು ಅಥವಾ ಪ್ರಕಟಿಸುವುದು ಆತ್ಮವೇ ಮನಸ್ಸಿನ ಸಣ್ಣಬೆಳಕನ್ನು ಮೀರಿಸಿ ಅದನ್ನು ಸಂಪೂರ್ಣವಾಗಿ ಬೆಳಗುತ್ತದೆ. ಉಪನಿಷತ್ತುಗಳ ಪ್ರಕಾರ ಆತ್ಮವು ಶುದ್ಧ ಚೈತನ್ಯ ಸ್ವರೂಪದ್ದು, ಅನಂತ, ಅದ್ವೈತ ಮತ್ತು ಅವಿನಾಶಿ. ಎಲ್ಲಾ ಉಪನಿಷತ್ತುಗಳೂ ಆತ್ಮನ ಈ ಸ್ವರೂಪವನ್ನು ಏಕಕಂಠದಿಂದ ಹಾಡುತ್ತವೆ ; ಮತ್ತು ಅದೇ ಮಾನವನ ಮತ್ತು ಜಗತ್ತಿನ ಪರಮಸತ್ಯವೆಂದು ಹೇಳುತ್ತವೆ. ಆದ್ದರಿಂದಲೇ ಕಠೋಪನಿಷತ್ತು ಆತ್ಮವನ್ನು ಭವ್ಯವಾದ ಸಂಗೀತದಲ್ಲಿ 'ಸಕಲ ದೀಪಗಳ ದೀಪಗಳು' ಎಂದು ಹಾಡುತ್ತದೆ (V.೧೫) :

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ
ತಮೇವ ಭಾಂತಂ ಅನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ

'ಅಲ್ಲಿ (ಆತ್ಮನಲ್ಲಿ) ಸೂರ್ಯನು ಬೆಳಗುವುದಿಲ್ಲ, ಚಂದ್ರನಾಗಲಿ, ತಾರೆಗಳಾಗಲಿ, ಮಿಂಚುಗಳಾಗಲಿ ಬೆಳಗುವುದಿಲ್ಲ ; ಈ (ಭೂಮಿಯ) ಅಗ್ನಿಯಂತೂ ಇಲ್ಲವೇ ಇಲ್ಲ ; ಅದು (ಆತ್ಮನ್) ಬೆಳಗಿದರೆ, ಬೇರೆಲ್ಲವೂ ಅದರಿಂದ ಬೆಳಗುತ್ತವೆ; ಅದರ ಬೆಳಕಿನಿಂದ ಈ (ಸೃಷ್ಟಿಯಾದ ವಿಶ್ವವೆಲ್ಲ) ಬೆಳಗುತ್ತದೆ.'

ಆತ್ಮನ ಸ್ವರೂಪ ಆದಾದರೆ, ಆತ್ಮಸಾಕ್ಷಾತ್ಕಾರವು ಧಾರ್ಮಿಕ ಅನುಷ್ಠಾನಗಳ ಪರಂಪರೆಯಿಂದ ಸಾಧ್ಯವೆಂದು ಭಾವಿಸುವುದು ಅಸಂಬದ್ಧ. ಆದ್ದರಿಂದ ಯಮನು-ಗುರುವು-ಆ ಕಠೋಪನಿಷತ್ತಿನ ಮಂತ್ರದಲ್ಲಿ ಹೇಳುತ್ತಾನೆ : ಯಂ ಏವ ಏಷ ವೃಣುತೇ, ತೇನ ಲಭ್ಯಃ; ತಸ್ಯ ಏಷ ಆತ್ಮಾ ವಿವೃಣುತೇ ತನು ಸ್ವಾಂ—'ಯಾರನ್ನು ಮಾತ್ರ ಅದು ವರಿಸುತ್ತದೋ, ಅವನಿಗೆ ಮಾತ್ರ ಅದು ಲಭಿಸುತ್ತದೆ,

ಅವನಿಗೆ ಈ ಆತ್ಮನು ತನ್ನ (ನಿಜ) ಸ್ವರೂಪವನ್ನು ತಿಳಿಸುತ್ತದೆ.' ಮೊದಮೊದಲು ಸಾಧಕನು ಆತ್ಮವನ್ನು ಅರಸುತ್ತಾನೆ ಎಂಬುದು ನಿಜ ; ಆದರೆ ಅಂತಿಮವಾಗಿ, ಸಾಧಕನನ್ನು ಅರಸುವುದು ಆತ್ಮವೇ, ಆತ್ಮ ಪ್ರಕಟಣೆಯಿಂದ ಸಾಧಕನಿಗೆ ತನ್ನನ್ನು ಪ್ರಕಟಿಸಲು ಆರಿಸಿಕೊಳ್ಳುತ್ತದೆ.

ಆತ್ಮದ ಸ್ವತಃ ಪ್ರಕಟನದ ಈ ಉಪನಿಷದ್ವಾಕ್ಯವೂ ಸಾಕಾರ ದೇವರನ್ನು ಕೇಂದ್ರವಾಗಿಟ್ಟುಕೊಂಡ ಧರ್ಮಗಳ ದೈವಾನುಗ್ರಹ ಭಾವನೆಯೂ ಆಧ್ಯಾತ್ಮಿಕವಾಗಿ ಒಂದೇ. ವೇದಾಂತವು, ನಮ್ಮ ಕಾಲದ ಶ್ರೀರಾಮಕೃಷ್ಣರು ಖಚಿತಪಡಿಸಿದಂತೆ, ಭಕ್ತನ ದೇವರು, ಜ್ಞಾನಿಯ ದೇವರು, ಸಾಕಾರ ದೇವರು ಮತ್ತು ನಿರಾಕಾರದೇವರು ಎಲ್ಲಾ ಒಂದೇ ಎಂದು ಹೇಳುತ್ತದೆ. ಶ್ರೀರಾಮಕೃಷ್ಣರು ಹೀಗೆ ಹೇಳುತ್ತಾರೆ (The Gospel of Sri Ramakrishna, ಪು. ೮೦೨, ಅಮೆರಿಕನ್ ಆವೃತ್ತಿ) :

*ಭಕ್ತರು—ಅಂದರೆ (ಜ್ಞಾನ ಮತ್ತು ಭಕ್ತಿಗಳನ್ನು ಒಪ್ಪಿಕೊಳ್ಳುವ) ವಿಜ್ಞಾನಿಗಳು ಸಾಕಾರ ದೇವರನ್ನೂ ನಿರಾಕಾರ ದೇವರನ್ನೂ ಒಪ್ಪುತ್ತಾರೆ. ದಡವಿಲ್ಲದ ಕಡಲಲ್ಲಿ—ಅನಂತ ವಿಸ್ತಾರವುಳ್ಳ ನೀರು—ತೀವ್ರವಾದ ಚಳಿಯಿಂದ ಅಲ್ಲಲ್ಲಿ ಹಿಮಗಡ್ಡೆಗಳು ರೂಪುಗೊಳ್ಳುತ್ತವೆ. ಅದೇ ರೀತಿ, ತನ್ನ ಪೂಜಕನ ಗಾಢವಾದ ಪ್ರೇಮವೆಂಬ ತಣ್ಣನೆಯ ಪ್ರಭಾವದಿಂದ—ಹಾಗೆ ಹೇಳುವುದಾದರೆ—ಅನಂತವು ತನ್ನ ಸಾಂತತೆಗೆ ಇಳಿಸಿಕೊಂಡು, ಪೂಜಕನ ಎದುರಿಗೆ ದೇವರ ಸಾಕಾರ ರೂಪ ತಳೆಯುತ್ತದೆ. ಮತ್ತೆ, ಸೂರ್ಯ ಹುಟ್ಟಿದ ಮೇಲೆ ಹಿಮಗಡ್ಡೆ ಕರಗುವಂತೆ, ಜ್ಞಾನೋದಯವಾದ ನಂತರ, ಸಾಕಾರ ದೇವರು ಅದೇ ಅನಂತ, ನಿರಾಕಾರ ರೂಪವಾಗಿ ಕರಗಿಹೋಗುತ್ತದೆ.*

ಒಬ್ಬನು ಮನಸ್ಸಿನಿಂದ ವಿಶ್ಲೇಷಣೆ ಮಾಡುತ್ತಿರುವವರೆಗೆ ಅವನು ಪರಮ ಪುರುಷನನ್ನು ತಲುಪಲಾರ. ನೀವು ನಿಮ್ಮ ಮನಸ್ಸಿನಿಂದ ತರ್ಕಿಸುತ್ತಿರುವವರೆಗೆ, ಈ ಜಗತ್ತನ್ನೂ ಇಂದ್ರಿಯ ವಿಷಯಗಳಾದ ರೂಪರಸಗಂಧ ಸ್ಪರ್ಶ ಧ್ವನಿಗಳನ್ನೂ ತೊರೆಯಲು ಸಾಧ್ಯವಿಲ್ಲ. ತರ್ಕ ನಿಂತಮೇಲೆ ನೀವು ಬ್ರಹ್ಮಜ್ಞಾನ ಪಡೆಯುತ್ತೀರಿ. ಆತ್ಮವನ್ನು ಈ ಮನಸ್ಸಿನಿಂದ ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಿಲ್ಲ. ಆತ್ಮವನ್ನು ಆತ್ಮದಿಂದ ಮಾತ್ರ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯ. ಶುದ್ಧ ಮನಸ್ಸು, ಶುದ್ಧ ಬುದ್ಧಿ, ಶುದ್ಧ ಆತ್ಮ-ಇವೆಲ್ಲವೂ ಒಂದೇ.

ತಮ್ಮ Life of Ramakrishna ಎಂಬ ಕೃತಿಯಲ್ಲಿ ರೋಮೇರೋಲಾ ಅವರು To My Eastern Readers ಎಂಬ ಮುನ್ನುಡಿಯನ್ನು ಶ್ರೀರಾಮಕೃಷ್ಣರ ಮಾತುಗಳಿಂದ ಆರಂಭಿಸಿದ್ದಾರೆ :

*ಜ್ಞಾನಿಯ ಪಾದಗಳಿಗೆ ನಮಸ್ಕಾರ ! ಭಕ್ತನ ಕಾಲುಗಳಿಗೆ ನಮಸ್ಕಾರ ! ನಿರಾಕಾರ ಭಗವಂತನಲ್ಲಿ ನಂಬಿಕೆಯಿರುವವರಿಗೆ ನಮಸ್ಕಾರ! ಸಾಕಾರ ದೇವರಲ್ಲಿ ನಂಬಿಕೆಯಿರುವವರಿಗೆ ನಮಸ್ಕಾರ ! ಬ್ರಹ್ಮನನ್ನು ತಿಳಿದ ಪ್ರಾಚೀನರಿಗೆ ನಮಸ್ಕಾರ! ಆಧುನಿಕ ಸತ್ಯಜ್ಞಾನಿಗಳಿಗೆ ನಮಸ್ಕಾರ...*

## ೨೧. ದೈವಾನುಗ್ರಹ ಮತ್ತು ಅಪ್ರಯತ್ನ ತತ್ತ್ವ

ದೈವಾನುಗ್ರಹವು ವಿಶೇಷವಾಗಿ ಪರಮಪ್ರೇಮದ ಸಾಕಾರ ದೇವರಲ್ಲಿ ಕೇಂದ್ರಿತವಾದ ಭಕ್ತಿಪಂಥದ ಧರ್ಮಗಳಿಗೆ—ಸೂಫಿ ಧರ್ಮವೂ ಸೇರಿದಂತೆ—ಸಂಬಂಧಪಟ್ಟಿದ್ದರೂ ಅದಕ್ಕೆ ನಿರಾಕಾರ ತತ್ತ್ವಗಳ ಮತ್ತು ಧರ್ಮಗಳ ಅದ್ವೈತವೇದಾಂತ, ಜೆನ್ ಮತ್ತು ತಾವೋ ಮತಗಳಲ್ಲೂ ಅತ್ಯುಚ್ಚ ಸ್ಥಾನವಿದೆ. ಈ ಧರ್ಮಗಳಲ್ಲಿ ಭಕ್ತನು ದೈವಾನುಗ್ರಹವನ್ನು ಪಡೆಯುತ್ತಾನೆ. ಅನೇಕವೇಳೆ, ಹಿಂದೆ ಉದ್ಧರಿಸಿದ ವಿವೇಕಚೂಡಾಮಣಿಯ ಶ್ಲೋಕದಂತೆ, ಗುರುವಿನ ಮೂಲಕ ಪಡೆಯುತ್ತಾನೆ. ಅದ್ವೈತ ವೇದಾಂತದ ಅತ್ಯಂತ ಜನಪ್ರಿಯ ಶ್ಲೋಕ ಹೀಗಿದೆ. (ಋಷಿ ದತ್ತಾತ್ರೇಯರ ಅವಧೂತ ಗೀತೆಯ ಆರಂಭ ಶ್ಲೋಕ):

ಈಶ್ವರಾನುಗ್ರಹಾದೇವ
ಪುಂಸಾಂ ಅದ್ವೈತವಾಸನಾ
ಮಹತ್ ಭಯಪರಿತ್ರಾಣಾತ್
ವಿಪ್ರಾನಾಂ ಉಪಜಾಯತೇ

'ಭಗತ್ಕೃಪೆಯೊಂದರಿಂದಲೇ, ಅದ್ವೈತ ಪ್ರೇಮವುಳ್ಳವರಿಗೂ ಮಹಾಭಯ ತಪ್ಪುತ್ತದೆ.'

ತಾವೋ ಮತ್ತು ಜೆನ್ ಮತಗಳು ಎಲ್ಲಾ ಪ್ರಯತ್ನ ಹಾಗೂ ಹೋರಾಟಗಳ ಆಚೆ, ಎಲ್ಲಾ ಬೌದ್ಧಿಕತೆಯ ಆಚೆ ಸ್ವಯಂಪ್ರೇರಿತತೆ ಮತ್ತು ಸಹಜತೆ (spontaneity and naturalness)ಗಳ ಜೀವನದ ಪರಿಪೂರ್ಣತೆಯ ಬಗ್ಗೆ ಹೇಳುತ್ತವೆ ; ವೇದಾಂತದ ದೈವಾನುಗ್ರಹದಿಂದ ಹಾಯಾಗಿರುವ ಮನುಷ್ಯನ ಸ್ಥಿತಿಯೂ ಇದೇ ; ದೈವವು ಮಾನವನ ಆತ್ಮವೇ, ಎಲ್ಲಾ ಸೃಷ್ಟಿಯೂ ಸ್ವಯಂ ಪ್ರೇರಿತತೆಯೂ ಆ ಆಯಾಮದ, ವಿಕಾಸದ ಫಲವೆಂದು ವೇದಾಂತ ಹೇಳುತ್ತದೆ. ಇವೆರಡರಿಂದ ಪ್ರಯತ್ನವಿಲ್ಲದೆಯೇ ಉನ್ನತವಾದ ನೈತಿಕ ಮತ್ತು ಆಧ್ಯಾತ್ಮಿಕ ಜೀವನಸಾಧನೆಯಾಗುತ್ತದೆ.

ತಾವೋಮತವು ವಿಚಾರವಾದದ ಜ್ಞಾನ ಮತ್ತು ಅಂತರ್ಬೋಧೆಯ ಜ್ಞಾನಗಳ ನಡುವೆ, ಅಜ್ಞಾನ ಮತ್ತು ಋಷಿಗಳ ಜ್ಞಾನಕ್ಕೂ (Sage knowledge) ವ್ಯತ್ಯಾಸ ಕಲ್ಪಿಸುತ್ತದೆ. ಚೀನೀ ವಿಜ್ಞಾನಿ (ಅಮೆರಿಕದ ಎಂ.ಐ.ಟಿ.ಯಲ್ಲಿ ಆರ್.ಜೆ.ಎಚ್.ಸಿ.ಯೂ ತಮ್ಮ Tao of Science ಕೃತಿಯಲ್ಲಿ (ಪು. ೭೪-೭೬) ಹೀಗೆ ಹೇಳುತ್ತಾರೆ :

*ವಿಚಾರವಾದದ ಜ್ಞಾನವು ತರ್ಕ ಸಮ್ಮತವಾದುದರಿಂದ ಮಾತ್ರ ತಾರ್ಕಿಕವಾದುದು. ವಿಚಾರವಾದದಿಂದ ಅಲ್ಲದೆ ಬೇರೆ ವಿಧಾನದಿಂದ ಪಡೆಯಬಹುದಾದ ಇತರವು ಅತಾರ್ಕಿಕವಲ್ಲ ; ಅವು ಬಾಹ್ಯ ತಾರ್ಕಿಕ (extra-rational)ವಾದವು...*

*ಸ್ಥೂಲವಾಗಿ ಹೇಳುವುದಾದರೆ, ಬೌದ್ಧಿಕ ಪ್ರಗತಿಯೆಂದರೆ ಮಾನವನು ಸೂತ್ರೀಕರಿಸಿದ ಮತ್ತು ವರ್ಗಾಯಿಸುತ್ತ ಬಂದಿರುವ ಚಿಂತನೆಗಳ ಮುನ್ನಡೆ. ಆದರೆ ಈ ಹೇಳಿಕೆಯನ್ನು ಮತ್ತಷ್ಟು ಪರೀಕ್ಷಿಸಿ ನೋಡೋಣ. ನಾವು ತಾರ್ಕಿಕ ಜ್ಞಾನ ಮತ್ತು ಅಂತರ್ಬೋಧೆಯ ಜ್ಞಾನಗಳ ವ್ಯತ್ಯಾಸ ತೋರಿಸಬೇಕು. ಈ ಎರಡು ಜ್ಞಾನರೂಪಗಳಲ್ಲಿ ಅನ್ವೇಷಣೆಯ ಪಾತ್ರ ತೀರ ಬೇರೆ ಬೇರೆ. ತಾರ್ಕಿಕ ಜ್ಞಾನದಲ್ಲಿ ಅದು ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ವಿಜ್ಞಾನದ ಕೊಡುಗೆ ಇಲ್ಲಿ ತುಂಬ ಹೆಚ್ಚು, ಅಂತರ್ಬೋಧೆಯ ಜ್ಞಾನದಲ್ಲಿ ಅನ್ವೇಷಣೆಯು—ಸ್ವಾಮ್ಯದ ಸನ್ನದು ಕೊಡುವ ಕಚೇರಿ ರೂಪದ್ದು (patent-office variety)—ಗೌಣ ಪಾತ್ರವನ್ನು ವಹಿಸುತ್ತದೆ. ಈ ಕ್ಷೇತ್ರದಲ್ಲಿ ಮಾನವಾಭಿವೃದ್ಧಿಯನ್ನು ತ್ವರಿತಗೊಳಿಸಿಲ್ಲ. ಅದು ಏನಾದರೂ ಮಾಡಿದ್ದರೆ, ತನ್ನ ನಿಷ್ಕ್ರಿಯವಾದ, ಮತ್ತು ಕೆಲವು ಕಡೆಗಳಲ್ಲಿ ವಿರೋಧಿ ಧೋರಣೆಗಳಿಂದ, ಅದು ಮಾನವನ ಅಂತರ್ಬೋಧೆಯ ಶ್ರೀಮಂತಿಕೆಗಳ ಸಂವೇದನಶಕ್ತಿಗಳನ್ನು ಮಂದಗೊಳಿಸಿರಬಹುದು. ಅಂತರ್ಬೋಧೆಯಿಂದ ತಿಳಿದದ್ದನ್ನೆಲ್ಲ ಹಿಂದೆ ಬದುಕಿದ್ದ ವ್ಯಕ್ತಿಗಳು ಅಂಗೀಕರಿಸಿದ್ದಾರೆ, ಮತ್ತು ಬಹುಶಃ ಬೇರೆ ಪರಿಸ್ಥಿತಿಗಳಲ್ಲಿ, ಅಷ್ಟೇ ಪರಿಪೂರ್ಣವಾಗಿ ಆಚರಿಸುತ್ತಿದ್ದರು... ಜೀವನದ ಮೌನವೂ ಅಮೂರ್ತ ಗಹನತೆಯೂ ಮಾನವನ ಮನಸ್ಸಿನ ಮುಂದೆ ಪೂರ್ಣಹರವಿನಲ್ಲಿ ಬಂದಿದೆ. ಇಂಥ ಬಗೆಯ ಜ್ಞಾನವು ಗಣಿತೀಯ ಸೂತ್ರಗಳಿಂದ ಮತ್ತು ವೈಜ್ಞಾನಿಕ ಗ್ರಂಥಗಳಿಂದ ಉದ್ದೀಪ್ತವಾಗಿಲ್ಲ...*

*ತಾರ್ಕಿಕರು ಅಂತರ್ಬೋಧೆಯ ಜಾಳುತನವನ್ನು, ಅಸ್ಪಷ್ಟತೆಯನ್ನು ಒಪ್ಪುವುದಿಲ್ಲ ; ಅಂತರ್ಬೋಧೆಯ ಪ್ರತಿಪಾದಕರು ತರ್ಕದ ಬಂಧನಗಳನ್ನು ಜರಿಯುತ್ತಾರೆ. ನಿಜವಾಗಿ*

ನೋಡಿದರೆ, ಒಂದಕ್ಕಿಂತ ಒಂದು ಹೆಚ್ಚೇನೂ ಅಲ್ಲ. ಅಂತರ್ಬೋಧೆಯಿಲ್ಲದೆ ವಿಚಾರಪೂರಿತ ತರ್ಕ ಸಾಧ್ಯವಿಲ್ಲ...

ಆದರೂ ಅಂತರ್ಬೋಧೆಯ ಜ್ಞಾನವೂ ಸಹ ಅಂತಿಮ ಶೋಧನೆಯಲ್ಲ. ಇಂದೋ ಮುಂದೋ ತಾರ್ಕಿಕ ಮತ್ತು ಅಂತರ್ಬೋಧ ಜ್ಞಾನದ ಎಲ್ಲೆಗಳಲ್ಲಿ ನಾವು ಹಿಂದು ಮುಂದು ನೋಡುತ್ತೇವೆ. ನಮ್ಮ ಎಡವುವ ಮನಸ್ಸು ಆಗ ತಾನು ತಿಳಿದುಕೊಳ್ಳಲಾಗದ್ದರಲ್ಲಿ ಆಶ್ರಯ ಪಡೆದು ಪರಿಹಾರ ಕಾಣಬೇಕಾಗುತ್ತದೆ. ಈ ಹಂತದಲ್ಲಿ ತಾವೋವಾದಿಗಳು (Taoist) ಋಷಿ ಜ್ಞಾನ(Sage Knowledge) ಅಥವಾ ಅಜ್ಞಾನ(No-knowledge)ದ ಕಲ್ಪನೆಯನ್ನು ತಂದರು. ಇದು ಸಾಮಾನ್ಯ ಅರ್ಥದಲ್ಲಿ ನಿಜವಾಗಿ ಜ್ಞಾನವಲ್ಲ. ಜ್ಞಾನದಲ್ಲಿ, ಪಾಶ್ಚಾತ್ಯ ದೇಶಗಳಲ್ಲಿ ಅರ್ಥಮಾಡಿಕೊಂಡಿರುವಂತೆ, ಒಂದು ಘಟನೆಯನ್ನು ಅಥವಾ ಗುಣವನ್ನು ಜ್ಞಾನದ ವಸ್ತುವನ್ನಾಗಿ ಆರಿಸಿಕೊಳ್ಳಬೇಕು. ಋಷಿಜ್ಞಾನ ಹಾಗೆ ಮಾಡುವುದಿಲ್ಲ. ಪೌರ್ವಾತ್ಯ ದೇಶಗಳು Wu ಅಥವಾ ಅಸ್ತಿತ್ವರಹಿತತೆ ಎಂದು ಕರೆಯುವುದರ ಅರಿವಿಗೆ ಸಂಬಂಧಿಸಿದುದು ಅದು. 'Wu' ಎಂಬುದು ಘಟನೆಗಳನ್ನೂ ಗುಣಗಳನ್ನೂ ಮೀರಿದ್ದು ; ಅದಕ್ಕೆ ಆಕಾರವಿಲ್ಲ, ಕಾಲವಿಲ್ಲ. ಪರಿಣಾಮವಾಗಿ, ಅದು ಸಾಮಾನ್ಯಜ್ಞಾನದ ವಸ್ತುವಾಗಲು ಸಾಧ್ಯವಿಲ್ಲ. ಅತ್ಯುತ್ತಮ ಮಟ್ಟದ ದೃಷ್ಟಿಯಲ್ಲಿ, ಋಷಿಯು ಎರಡು ವಸ್ತುಗಳ ನಡುವಣ ಭೇದವನ್ನು ಮರೆಯುತ್ತಾನೆ. ಅವನು ಭೇದ ಮಾಡಲಾಗದ ಪೂರ್ಣತೆಯ ಶಾಂತಿಯಲ್ಲಿ ಬದುಕುತ್ತಾನೆ.

ಜ್ಞಾನವನ್ನು "ಹೊಂದಿರದ"ಕ್ಕೂ 'ಅಜ್ಞಾನ'ವಿರುವುದಕ್ಕೂ ಮುಖ್ಯವಾದ ಒಂದು ವ್ಯತ್ಯಾಸವಿದೆ. ಮೊದಲನೆಯದು ಕೇವಲ ಅರಿವಿಲ್ಲದಿರುವುದು ; ಎರಡನೆಯದು ಅಂತಿಮ ಜ್ಞಾನೋದಯ ಮತ್ತು ಸಾರ್ವತ್ರಿಕ ಸಂವೇದನಶೀಲತೆ. ಎಂದಿಗೂ ಬದಲಾಗದ ವಿಚಾರವಾದಿಗೆ, ಅಜ್ಞಾನ(no-knowledge)ವು ರಹಸ್ಯತತ್ತ್ವಬೋಧಕನ ರಹಸ್ಯವಾಗಿ ಕಾಣಬಹುದು. ಆದರೂ, ಅದರ ಅನಿರ್ವಚನೀಯತೆಯು ಅದರ ಸತ್ಯತೆಗೆ ಬಲ ತರುತ್ತದೆ. ಪ್ರಕೃತಿಯ ರಹಸ್ಯಗಳು ಅದರಲ್ಲಿ ಭಾಗವಹಿಸಲು ನಿರಾಕರಿಸುವವರಿಗೆ ಮಾತ್ರ ರಹಸ್ಯಗಳಾಗಿ ಕಾಣುತ್ತವೆ....

ವಿಚಾರಶಕ್ತಿಯುಳ್ಳ ವಿಜ್ಞಾನಿಯು ಪ್ರಕೃತಿಯ ವೀಕ್ಷಕ. ಅಜ್ಞಾನದಿಂದ ಅವನು ಪ್ರಕೃತಿಯಲ್ಲಿ ಒಬ್ಬ ಭಾಗಿಯಾಗುತ್ತಾನೆ.

ಅಜ್ಞಾನದ ಆಳ ಕಂಡುಹಿಡಿಯಬೇಕಾದರೆ, ಅನಿರ್ವಚನೀಯವಾದುದರ ತನ್ನ ಅನಿರ್ವಚನೀಯ ತಿಳಿವಳಿಕೆಯನ್ನು ಅವಲಂಬಿಸಬೇಕು....

ಈ ಅಜ್ಞಾನ (no-knowledge) ಕಲ್ಪನೆಯ ಬಗ್ಗೆ ಪಾಶ್ಚಾತ್ಯರಲ್ಲಿ ಸಾಕಷ್ಟು ತಡಕಾಟ ನಡೆದಿದೆ. ದುರದೃಷ್ಟದ ಸಂಗತಿಯೆಂದರೆ ಅಜ್ಞಾನವನ್ನು ತರ್ಕಬದ್ಧವಾಗಿಸಲು ಅಥವಾ ತರ್ಕಜ್ಞಾನದಿಂದ ಅದನ್ನು ಸ್ಪರ್ಧೆಯಿಂದ ವಿರೋಧಿಸಲು ಸಾಕಷ್ಟು ಶ್ರಮವನ್ನು ವ್ಯರ್ಥಮಾಡಲಾಗಿದೆ.

ವಿಚಾರವಾದದಿಂದ, ಒಬ್ಬನು ವೈಜ್ಞಾನಿಕ ಮಾನವನಿಗೆ ಹೊಂದಿಕೊಳ್ಳುತ್ತಾನೆ. ಇದಕ್ಕೆ ಅಂತರ್ಬೋಧೆ ಸೇರಿದರೆ ಅವನು ಪೂರ್ಣಮಾನವನಾಗುತ್ತಾನೆ ; ಅದಕ್ಕೆ ಅಜ್ಞಾನ ಸೇರಿದರೆ, ಅವನು ಪ್ರಕೃತಿಗೆ ಹೊಂದಿಕೊಳ್ಳುತ್ತಾನೆ.

ಆ ಸಂದರ್ಭದಲ್ಲಿ ಪ್ರಕೃತಿ ಎಂದರೆ ಭಾರತೀಯ ಮತ್ತು ಚೀನೀ ಚಿಂತನೆಗಳ ಅಸ್ತಿತ್ವದ ಪೂರ್ಣತೆ. ನಿಷ್ಕ್ರಿಯತೆ ಅಥವಾ ಪ್ರಜ್ಞಾಪಾಂಡಿತ್ಯದ ಗಹನವಾದ ತಾವೋ ಕಲ್ಪನೆಯನ್ನು ಚರ್ಚಿಸುತ್ತಾ—ಇದನ್ನು

ಗೀತೆಯು ಅಕರ್ಮ ಎಂದು ಕರೆಯುತ್ತದೆ—ಮತ್ತು ಅದರ ಮಹತ್ತ್ವವನ್ನು ಆಡಳಿತ ವಿಕೇಂದ್ರೀಕರಣಕ್ಕೆ ಸಂಬಂಧ ಕಲ್ಪಿಸಿ, ಸಿವೂ (Siu) ಹೀಗೆ ಹೇಳುತ್ತಾನೆ (ಅದೇ, ಪು.೧೨೪) :

'ವಿಕೇಂದ್ರೀಕರಣ ತಂತ್ರವನ್ನು ನಿಕಟವಾಗಿ ತಿಳಿದುಕೊಳ್ಳಬೇಕಾದರೆ, ಕಾರ್ಯಾಂಗಕ್ಕೆ ತಾವೋವಿನ ನಿಷ್ಕ್ರಿಯತೆಯ ತತ್ತ್ವದ ತಿಳಿವಳಿಕೆ ಬೇಕು. ಕಾರ್ಯಸಾಧನೆ ಏನೂ ಮಾಡದೆ ಇರುವ ಕಲೆಯಲ್ಲಿದೆ. ಈ ಕಲ್ಪನೆಯನ್ನು ಅರ್ಥಮಾಡಿಸುವುದು ಕಷ್ಟ ; ಏಕೆಂದರೆ, ಬಹಳಷ್ಟು ಜನ ಇದನ್ನು ಸುಮ್ಮನೆ ಸೋಮಾರಿಯಾಗಿ ಕಾಲಕಳೆಯುವುದೆಂದು ತಪ್ಪಾಗಿ ತಿಳಿಯುತ್ತಾರೆ. ಆದರೆ ನಾವು ಈ ಕಲ್ಪನೆಯ ನಸುನೋಟವನ್ನು ಜ್ವಾಂಗ್‌ಟ್ಸು (Chuang tzu)ವಿನಿಂದ ಪಡೆಯಬಹುದು :

*ಜ್ಞಾನಾಭ್ಯಾಸಿಯು ದಿನೇ ದಿನೇ ಕಲಿಯಲುದ್ದೇಶಿಸುತ್ತಾನೆ ;*
*ತಾವೋವಿನ ಅಭ್ಯಾಸಿಯು ದಿನೇ ದಿನೇ ಕಳೆದುಕೊಳ್ಳಬಯಸುತ್ತಾನೆ.*
*ಒಂದೇ ಸಮನಾಗಿ ಕಳೆದುಕೊಳ್ಳುವುದರಿಂದ*
*ಏನೂ ಮಾಡದಿರುವ ಹಂತ ತಲುಪುತ್ತಾನೆ ;*
*ಏನೂ ಮಾಡದಿರುವುದರಿಂದ, ಎಲ್ಲವೂ ಆದಂತೆ,*
*ಜಗತ್ತನ್ನು ಗೆಲ್ಲುವವನು ಅನೇಕವೇಳೆ ಏನೂ ಮಾಡದೆ*
*ಅವನು ಏನನ್ನಾದರೂ ಮಾಡಲೇಬೇಕಾಗಿ ಬಂದಾಗ,*
*ಜಗತ್ತು ಅವನ ಗೆಲವಿಗೆ ಮೀರಿರುತ್ತದೆ.*

ಈ ಪೌರ್ವಾತ್ಯ ಜ್ಞಾನದೊಂದಿಗೆ ಗೀತೆಯಲ್ಲಿನ ಗಹನವಾದ ಇನ್ನೊಂದು ಪೌರ್ವಾತ್ಯ ಜ್ಞಾನವನ್ನು ಹೋಲಿಸೋಣ (IV. ೧೮) :

ಕರ್ಮಣ್ಯಕರ್ಮ ಯಃ ಪಶ್ಯೇತ್
ಅಕರ್ಮಣಿ ಚ ಕರ್ಮ ಯಃ
ಸ ಬುದ್ಧಿಮಾನ್ ಮನುಷ್ಯೇಷು
ಸ ಯುಕ್ತಃ ಕೃತ್ಸ್ನಕರ್ಮಕೃತ್

'ಯಾರು ಕರ್ಮ(ಕೆಲಸ)ದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ನೋಡುವರೋ ಅವನೇ ಮನುಷ್ಯರಲ್ಲೆಲ್ಲ ಅತಿ ಬುದ್ಧಿವಂತ ; ಅವನೇ ಪರಿಪೂರ್ಣಯೋಗಿ ಮತ್ತು ಸಕಲಕರ್ಮಗಳ ಕರ್ತ ?'

ಕಾರ್ಯಾಂಗದ ನಾಯಕನಿಗೆ ಸಂಬಂಧಿಸಿದಂತೆ, ಮಾನವಾಡಳಿತದ ಕ್ಷೇತ್ರದಲ್ಲಿ ಅಕರ್ಮ ಮತ್ತು ಅಜ್ಞಾನ (no-knowledge)ಗಳ ತತ್ತ್ವವನ್ನು ಚರ್ಚಿಸುತ್ತಾ, ಗೀತೆಯ ನಾಲ್ಕನೆ ಅಧ್ಯಾಯದ ರಾಜರ್ಷಿ ಕಲ್ಪನೆಯನ್ನು ಪುನರುಚ್ಚರಿಸುತ್ತಾ ಸಿವೂ ಹೀಗೆ ಹೇಳುತ್ತಾನೆ (ಅದೇ ಪು. ೧೩೭-೩೮) :

*ಮೂಲಭೂತವಾಗಿ, ದಾರ್ಶನಿಕ-ಕಾರ್ಯನಿರ್ವಾಹಕನ ಕರ್ಮ(ಕೆಲಸ)ವು ಜ್ಞಾನಗತಿಯ ಸರಿಯಾದ ಮಾರ್ಗವನ್ನವಲಂಬಿಸಿದೆ. ಆಂತರಿಕವಾಗಿ, ಅವನು ಆಧ್ಯಾತ್ಮಿಕ ಸಹಿಷ್ಣುತೆಯನ್ನು ಬೆಳೆಸಿಕೊಳ್ಳುತ್ತಾನೆ ; ಬಾಹ್ಯವಾಗಿ, ಅವನು ಸಾಮಾಜಿಕ ಉಪಕಾರಮಾಡುವವನು. ಅವನು, ಪ್ರಾಚೀನ ಚೀನೀ ಮಾತಿನಲ್ಲಿ ಹೇಳುವುದಾದರೆ, "ಒಳಗಡೆ ಋಷಿತ್ವವನ್ನೂ ಹೊರಗಡೆ ರಾಜೋಚಿತ ಗುಣವನ್ನೂ ಬೆಳೆಸಿಕೊಳ್ಳುತ್ತಾನೆ."*

ಈ ಪ್ರಯತ್ನರಾಹಿತ್ಯ ಮತ್ತು ಅಜ್ಞಾನ (no-knowledge)ಗಳ ಈ ತತ್ತ್ವದ ಪಡಿರೂಪವನ್ನು ಭಾರತದ ಮಹಾನ್ ಅದ್ವೈತ ವೇದಾಂತ ಕೃತಿಯಾದ ಅಷ್ಟಾವಕ್ರ ಸಂಹಿತೆಯಲ್ಲಿ ಕಾಣಬಹುದಾಗಿದೆ.

ತನ್ನ ನೈಜ ಸ್ವರೂಪವು ಅನಂತ ಮತ್ತು ಅದ್ವೈತ ಶುದ್ಧಚೈತನ್ಯ ಎಂಬ ಜ್ಞಾನದಿಂದ ಬರುವ ಸ್ವಯಂಪ್ರೇರಿತತೆ ಮತ್ತು ಸಹಜತೆಗಳ ಸ್ವಾತಂತ್ರ್ಯವನ್ನು ವಿವರಿಸುವ ಕೆಲವು ಶ್ಲೋಕಗಳು ಇಲ್ಲಿವೆ (ಅದ್ವೈತ ಆಶ್ರಮ ಆವೃತ್ತಿ, ೧೯೭೫, ಶ್ಲೋಕಗಳು ೧.೮ ; ೪.೪ ; ೧೮.೨೦ ; ೧೮.೩೯ ; ೧೮.೬೦ ; ೧೮.೬೧ ; ೧೮.೯೫ ; ಮತ್ತು ೧೮.೯೮ ):

ಅಹಂ ಕರ್ತೇತ್ಯಹಮ್ಮಾನ ಮಹಾಕೃಷ್ಣಾಹಿದಂಶಿತಃ
ನಾಹಂ ಕರ್ತೇತಿ ವಿಶ್ವಾಸಾಮೃತಂ ಪೀತ್ವಾ ಸುಖೀ ಭವ

' "ನಾನೇ ಕರ್ತ"ನೆಂಬ ಅಹಂಕಾರದ ಮಹಾಕೃಷ್ಣಸರ್ಪದಿಂದ ಕಚ್ಚಲ್ಪಟ್ಟ ನೀನು, "ನಾನು ಕರ್ತನಲ್ಲ" ಎಂಬ ನಂಬಿಕೆಯ ಅಮೃತವನ್ನು ಕುಡಿದು ಸುಖವಾಗಿರು.'

ಆತ್ಮೈವೇದಂ ಜಗತ್ ಸರ್ವಂ
ಜ್ಞಾತಂ ಯೇನ ಮಹಾತ್ಮನಾ
ಯದೃಚ್ಛಯಾ ವರ್ತಮಾನಂ
ತಂ ನಿಷೇದ್ಧುಂ ಕ್ಷಮೇತ ಕಃ

'ಈ ಜಗತ್ತೆಲ್ಲವೂ ಆತ್ಮವೆಂದು ತಿಳಿದಿರುವ ಆ ಮಹಾತ್ಮನು ಸ್ವಪ್ರೇರಿತನಾಗಿ ನಡೆಯುವುದನ್ನು ಯಾರು ತಾನೆ ತಪ್ಪಿಸಬಲ್ಲರು ?'

ಪ್ರವೃತ್ತೌ ವಾ ನಿವೃತ್ತೌ ವಾ ನೈವ ಧೀರಸ್ಯ ದುರ್ಗ್ರಹಃ
ಯದಾ ಯತ್ ಕರ್ತುಂ ಆಯಾತಿ ತತ್ ಕೃತ್ವಾ ತಿಷ್ಠತಃ ಸುಖಮ್

'ತನ್ನ ಪಾಲಿಗೆ ಬಂದದ್ದನ್ನು ಮಾಡುತ್ತಾ, ಕ್ರಿಯೆಯಲ್ಲಾಗಲಿ ನಿಷ್ಕ್ರಿಯೆಯಲ್ಲಾಗಲಿ ಕಳವಳ ಗೊಳ್ಳದೆ ವಿವೇಕಿಯು ಸಂತೋಷದಿಂದ ಬದುಕುವನು.'

ನ ಶಾಂತಿಂ ಲಭತೇ ಮೂಢೋ ಯತಃ ಶಮಿತುಮ್ ಇಚ್ಛತಿ
ಧೀರಃ ತತ್ತ್ವಂ ವಿನಿಶ್ಚಿತ್ಯ ಸರ್ವದಾ ಶಾಂತಮಾನಸಃ

'ಮೂರ್ಖನು ಮನೋನಿಗ್ರಹದ ಮೂಲಕ ಶಾಂತಿಯನ್ನು ಬಯಸುತ್ತಾನೆ, ಮತ್ತು ಅವನಿಗೆ ಅದು ಸಿಕ್ಕುವುದಿಲ್ಲ. ವಿವೇಕಿಯು ಸತ್ಯವನ್ನು ತಿಳಿದು, ಸದಾ ಶಾಂತಮನಸ್ಕನಾಗಿರುತ್ತಾನೆ.'

ಸ್ವಭಾವಾತ್ ಯಸ್ಯ ನೈವಾರ್ತಿಃ ಲೋಕವತ್ ವ್ಯವಹಾರಿಣಃ
ಮಹಾಹ್ರದ ಇವಾಕ್ಷೋಭ್ಯೋ ಗತಕ್ಲೇಶಃ ಸುಶೋಭತೇ

'ಯಾವನು ತನ್ನ ನಿಜಸ್ವರೂಪದ ಸಾಕ್ಷಾತ್ಕಾರದಿಂದ, ಲೋಕಕ್ಕೆ ಅಂಟಿಕೊಂಡ ಜನರಂತೆ, ನಿಜಜೀವನದಲ್ಲಿ ದುಃಖಿತನಾಗುವುದಿಲ್ಲವೋ, ಮತ್ತು ದೊಡ್ಡ ಸರೋವರದಂತೆ ಕ್ಷೋಭೆಗೊಳಗಾಗದೆ ಇರುತ್ತಾನೋ ಅವನು ಕ್ಲೇಶಗಳಿಲ್ಲದೆ ಶೋಭಿಸುತ್ತಾನೆ.'

ನಿವೃತ್ತಿರಪಿ ಮೂಢಸ್ಯ ಪ್ರವೃತ್ತಿರುಪಜಾಯತೇ
ಪ್ರವೃತ್ತಿರಪಿ ಧೀರಸ್ಯ ನಿವೃತ್ತಿಫಲಭಾಗಿನೀ

'ಮೂಢನ ನಿವೃತ್ತಿಯೂ ಪ್ರವೃತ್ತಿಯಾಗುತ್ತದೆ ; ವಿವೇಕಿಯ ಪ್ರವೃತ್ತಿಯೂ (ಕ್ರಿಯೆಯೂ) ನಿವೃತ್ತಿಫಲ ನೀಡುತ್ತದೆ.'

ಜ್ಞಃ ಸಜಾತೋಽಪಿ ನಿಶ್ಚಿಂತಃ ಸೇಂದ್ರಿಯೋಽಪಿ ನಿರಿಂದ್ರಿಯಃ
ಸುಬುದ್ಧಿರಪಿ ನಿರ್ಬುದ್ಧಿಃ ಸಾಹಂಕಾರೋ ನಿರಹಂಕೃತಿಃ

'ಬುದ್ಧಿವಂತನು ಚಿಂತಿಸುತ್ತಿದ್ದರೂ ನಿಶ್ಚಿಂತನು, ಇಂದ್ರಿಯಗಳಿದ್ದರೂ ಅವನು ನಿರಿಂದ್ರಿಯನು ; ಬುದ್ಧಿಯಿದ್ದರೂ ಅವನು ಬುದ್ಧಿಶೂನ್ಯನು ; ಅಹಂಕಾರವಿದ್ದರೂ ಅವನು ನಿರಹಂಕಾರಿ.'

ಮುಕ್ತೋ ಯಥಾಸ್ಥಿತಿಃ ಸ್ವಸ್ಥಃ ಕೃತಕರ್ತವ್ಯನಿರ್ವೃತಃ
. ಸಮಃ ಸರ್ವತ್ರ ವೈತೃಷ್ಣ್ಯಾತ್ ನ ಸ್ಮರತ್ಯಕೃತಂ ಕೃತಮ್

'ಮುಕ್ತಿ ಪಡೆದವನು, ಎಲ್ಲಾ ಸ್ಥಿತಿಗಳಲ್ಲೂ ಆತ್ಮನಲ್ಲಿ ನೆಲಸಿರುವವನು, ಕರ್ತವ್ಯಭಾವನೆಯಿಂದ ಮುಕ್ತನಾದವನು, ಎಲ್ಲಾ ಕಡೆಯಲ್ಲಿಯೂ ಸಮಚಿತ್ತನಾದವನು, ಆಶಾರಹಿತನಾದ್ದರಿಂದ ತಾನು ಮಾಡಿದ್ದು ಮಾಡದಿರುವುದರ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ.'

ಶಿಷ್ಯನೊಬ್ಬ ಶ್ರೀ ರಾಮಕೃಷ್ಣರನ್ನು "ನಾನು ಯಾವಾಗ ಮುಕ್ತನಾಗುತ್ತೇನೆ ಎಂದು ಕೇಳಿದಾಗ ಅವರು ನೇರವಾಗಿ ಉತ್ತರಿಸಿದರು : "ಯಾವಾಗ 'ನಾನು' ಎನ್ನುವುದು ಹೋಗುತ್ತದೋ ಆಗ !"

ಮಹಾನ್ ಅಜ್ಞೇಯತಾವಾದಿಯೂ ಮಾನವತಾವಾದಿ ಚಿಂತಕನೂ ಆದ ದಿವಂಗತ ಬರ್ಟ್ರಂಡ್ ರಸಲ್ ಅವರು, ಆಧುನಿಕ ಮಾನವನು ತನ್ನ ಆಡಂಬರದ ಅಹಂಕಾರವನ್ನು ಒಪ್ಪಿಸಿಬಿಡಬೇಕು ಎಂದು ಸೂಚಿಸುತ್ತಾರೆ (The Scientific Outlook, ಪು. ೨೭೮-೭೯) :

*ಮಾನವನು ಪ್ರಕೃತಿಗೆ ಅಧೀನನಾಗುವುದರ ಮೂಲಕ ಶಿಸ್ತಿಗೊಳಪಟ್ಟಿದ್ದಾನೆ. ಅಧೀನತೆಯಿಂದ ಬಿಡುಗಡೆಹೊಂದಿ ಗುಲಾಮನು ಒಡೆಯನಾದಾಗ ಆಗುವ ದೋಷಗಳನ್ನು ಅವನು ತೋರುತ್ತಿದ್ದಾನೆ. ಹೊಸಬಗೆಯ ನೈತಿಕ ದೃಷ್ಟಿಯ ಆವಶ್ಯಕತೆ ಒದಗಿದೆ; ಅದರಲ್ಲಿ ಪ್ರಕೃತಿಯ ಶಕ್ತಿಗಳಿಗೆ ಅಧೀನನಾಗುವುದರ ಬದಲು ಮಾನವನಲ್ಲಿರುವ ಶ್ರೇಷ್ಠತೆಗೆ ಗೌರವ ತೋರಿಸಬೇಕು. ಆ ವೈಜ್ಞಾನಿಕ ತಂತ್ರದ ಅಭಾವವಿರುವುದು ಅಪಾಯಕಾರಿ. ಅದು ಇರುವವರೆಗೆ, ಪ್ರಕೃತಿಯ ಬಂಧನದಿಂದ ಬಿಡಿಸಿದ ವಿಜ್ಞಾನವು ತನ್ನ ಗುಲಾಮಗಿರಿಯ ಬಂಧನದಿಂದ ಬಿಡಿಸಲು ಹೋಗಬಹುದು.*

ಅಂಥ ವಿಜ್ಞಾನವನ್ನು—ದಿವಂಗತ ಸರ್ ಜೂಲಿಯನ್ ಹಕ್ಸ್‌ಲಿಯವರ ಮಾತಿನಲ್ಲಿ ಹೇಳುವುದಾದರೆ ಮಾನವ ಶಕ್ತಿಯ ವಿಜ್ಞಾನ—ಭಾರತವು ತನ್ನ ವೇದಾಂತ ಮತ್ತು ಯೋಗದಲ್ಲಿ ಪ್ರಕಾಶಪಡಿಸಿದೆ.

ಈಗಿನ ಭೌತ ವಿಜ್ಞಾನ ಮತ್ತು ತಂತ್ರಜ್ಞಾನವು ಮಾನವನನ್ನು '(ಬಾಹ್ಯ) ಪ್ರಕೃತಿಯ ಬಂಧನದಿಂದ ಬಿಡುಗಡೆ ಮಾಡಬಲ್ಲುದು ಮತ್ತು ಮಾಡಿದೆ. ಆದರೂ ಮಾನವನನ್ನು ತನ್ನ ಗುಲಾಮಗಿರಿಯ ಬಂಧನದಿಂದ ಬಿಡುಗಡೆ ಮಾಡುವ' ವಿಜ್ಞಾನವಲ್ಲವೆಂಬುದು ಕಂಡಂತೆಯೇ ಇದೆ. ಭೌತವಿಜ್ಞಾನವು ಪ್ಲುಟೋನಿಯಮ್ಮಿನ ವಿದಳಿನ ಪದಾರ್ಥ ತೆಗೆದು ನಿಷ್ಪ್ರಯೋಜಕಗೊಳಿಸ ಬಲ್ಲುದಾದರೂ, ಅದು ಮನುಷ್ಯನ ಹೃದಯದಲ್ಲಿರುವ ಕೆಡುಕನ್ನು ನಿಷ್ಪ್ರಯೋಜಕಗೊಳಿಸಲಾರದೆಂದು ಐನ್‌ಸ್ಟೈನ್ ಘೋಷಿಸಿದ್ದಾರೆ.

ಆತ್ಮವು ತನಗಿಂತ ಉನ್ನತವಾದುದಕ್ಕೆ ಶರಣಾದಾಗ, ತನ್ನ ಸಂವೇದನ ಪಾಶದಿಂದ ಮುಕ್ತವಾದಾಗ ಮಾತ್ರ ಪ್ರಯತ್ನರಾಹಿತ್ಯದಿಂದ ಸ್ವಯಂಪ್ರೇರಿತತೆಯು ಕಾಣಿಸಿಕೊಳ್ಳುತ್ತದೆ. ಅದರಿಂದ ಪುಣ್ಯಜೀವನ, ಸಂತತ್ವ ಪ್ರಾಪ್ತವಾಗುವುದು. ಮಾತ್ರವಲ್ಲದೆ, ಕೆಲವು ಸುಸಂಸ್ಕೃತ ಸಾಧನೆಗಳೂ ಭೌತವಿಜ್ಞಾನಗಳಲ್ಲಿ ಕೆಲವು ವೈಜ್ಞಾನಿಕ ಸತ್ಯಗಳ ಅನ್ವೇಷಣೆಗಳೂ, ಎಲ್ಲಾ ಬೌದ್ಧಿಕ ಮತ್ತು ತಾರ್ಕಿಕ ಜ್ಞಾನಗಳಿಗೆ ಮೀರಿದ ಸೃಷ್ಟಿಶೀಲ ಒಳನೋಟಗಳೂ ಪ್ರಾಪ್ತವಾಗುತ್ತವೆ.

ಅಂಥ ಸಿದ್ಧಿಸಾಧನೆಗಳಲ್ಲೂ ಅನುಭವಗಳಲ್ಲೂ ಬೌದ್ಧಿಕ ಪ್ರಯತ್ನ ಮತ್ತು ಹೆಣಗಾಟಗಳು—ಒಳನೋಟಕ್ಕೆ ಅವು ಅನಿವಾರ್ಯವಾದರೂ—ಮುಂದಿರುವ ಸಮಸ್ಯೆಯಿಂದ ಸಾರ್ಥಕ್ಯವಿಲ್ಲದೆ ಒದ್ದಾಡಿ, ಆ ರಂಗದಿಂದ ಹಿಂದಕ್ಕೆ ಸರಿದಾಗ, ಸತ್ಯವು ಚೈತನ್ಯದ ಅಂತರಾಳದಿಂದ ಜಾಗೃತ ಮನಸ್ಸಿಗೆ ನಡೆಯುತ್ತಿದೆಯೋ ಏನೋ ಎನಿಸುತ್ತದೆ. ಹೀಗಾಗಿ ದೈವಾನುಗ್ರಹದ ಬಗೆಗಿನ ವೇದಾಂತದ

ಉಪದೇಶಗಳಿಗೂ ಸೃಷ್ಟಿಶೀಲತೆ ಹಾಗೂ ಪ್ರಯತ್ನರಾಹಿತ್ಯಗಳ ಎಲ್ಲಾ ತತ್ತ್ವಗಳಿಗೂ ಆಧ್ಯಾತ್ಮಿಕ ಸಂಬಂಧವಿದೆ. Tao of Physics ಕೃತಿಯಲ್ಲಿ ಪ್ರೊ. ಫ್ರಿಟ್‌ಜಾಫ್ ಕಪ್ರ ಅವರ ಮಾತಿನಲ್ಲಿ ಹೇಳುವುದಾದರೆ (ಪು. ೩೧) :

*ವಿಚಾರವಾದದ ಜ್ಞಾನ ಮತ್ತು ವಿಚಾರವಾದದ ಕಾರ್ಯಚಟುವಟಿಕೆಗಳು ಖಂಡಿತವಾಗಿ ವೈಜ್ಞಾನಿಕ ಸಂಶೋಧನೆಯ ಬಹುಭಾಗದಲ್ಲಿವೆ. ಆದರೆ ಅವೆಲ್ಲಕ್ಕೂ ಅಷ್ಟು ಮಾತ್ರ ಸಾಲದು. ವಾಸ್ತವವಾಗಿ ಸಂಶೋಧನೆಯ ವೈಚಾರಿಕ ಭಾಗಕ್ಕೆ ವಿಜ್ಞಾನಿಗಳಿಗೆ ಹೊಸ ಹೊಸ ಒಳನೋಟಗಳನ್ನು ಕೊಟ್ಟು, ಅವರನ್ನು ಸೃಷ್ಟಿಶೀಲರನ್ನಾಗಿ ಮಾಡುವ ಅಂತರ್ಬೋಧೆ ಪೂರಕವಾಗಿ ಸೇರದಿದ್ದರೆ ಅದು ನಿಷ್ಪ್ರಯೋಜಕವಾಗುತ್ತದೆ. ಈ ಒಳನೋಟಗಳು ಇದ್ದಕ್ಕಿದ್ದಂತೆ ಮತ್ತು ವಿಚಿತ್ರವಾಗಿ ಬರುತ್ತವೆ; ಅವು ಮೇಜಿನ ಬಳಿ ಕುಳಿತು ಸಮೀಕರಣಗಳನ್ನು ಮಾಡುತ್ತಿರುವಾಗ ಬರುವುದಿಲ್ಲ, ಬದಲಿಗೆ ಆರಾಮವಾಗಿ ಸ್ನಾನಮಾಡುತ್ತಿರುವಾಗಲೋ, ಅಡವಿಯಲ್ಲೋ, ಸಮುದ್ರತೀರದಲ್ಲೋ, ನಡೆದಾಡುತ್ತಿರುವಾಗಲೋ ಬರುತ್ತವೆ. ಚಿತ್ತೈಕಾಗ್ರತೆಯಿಂದ ಮಾಡುವ ಬೌದ್ಧಿಕ ಚಟುವಟಿಕೆಯ ನಂತರದ ಈ ವಿಶ್ರಾಂತಿಯ ಸಮಯಗಳಲ್ಲಿ ಅಂತರ್ಬೋಧೆಯುಳ್ಳ ಮನಸ್ಸು, ವೈಜ್ಞಾನಿಕ ಸಂಶೋಧನೆಗೆ ಅಪಾರ ಸಂತೋಷ, ಆನಂದಗಳನ್ನು ನೀಡುವ ಸ್ಪಷ್ಟ ಒಳನೋಟಗಳನ್ನು ಉತ್ಪತ್ತಿಮಾಡುತ್ತದೆ.*

ಎಲ್ಲಾ ಅಂತರ್ಬೋಧನೆಯಲ್ಲೂ ಸಚೇತನ ಆತ್ಮವೂ ವಿಚಾರಪ್ರಜ್ಞೆಯೂ ತಮಗಿಂತ ಗಹನವಾದುದಕ್ಕೆ ಶರಣಾಗುತ್ತವೆ. ಆಗ ಮಾತ್ರ ಸ್ವಯಂಪ್ರೇರಣೆ ತಂತಾನೆ ಪ್ರಕಟವಾಗುವುದು ; ಅದು ಸೃಷ್ಟಿಶೀಲತೆಯ ಅಮೂಲ್ಯವಾದ ಸಾಧನವನ್ನು—ಹೊಸ ಹೊಸ ವೈಜ್ಞಾನಿಕ ಸತ್ಯಗಳ ಅನ್ವೇಷಣೆಗೆ ಮಾತ್ರವಲ್ಲದೆ, ಸಂತೋಷಕರವಾದ ಮತ್ತು ಶ್ರೀಮಂತವಾದ ಅಂತರ-ಮಾನವೀಯ ಸಂಬಂಧಗಳನ್ನು—ತನ್ನೊಡನೆ ತರುತ್ತದೆ. ಲಂಡನ್ನಿನ ರಾಯಲ್ ಸೊಸೈಟಿಯಲ್ಲಿ ೧೯೬೬ ರ ಮೇ ೧೭ ರಂದು ಮಾಡಿದ Recollections of Lord Rutherford ಎಂಬ ತಮ್ಮ ಭಾಷಣದಲ್ಲಿ ಭೌತಶಾಸ್ತ್ರಜ್ಞರಾದ ಪಿ. ಎಲ್. ಕಪಿಟ್ಸ ಅವರು, ಆ ಶ್ರೇಷ್ಠ ಭೌತವಿಜ್ಞಾನಿಯನ್ನು ಶ್ರೀಮಂತಗೊಳಿಸಿದ ಅಂತರ್ಬೋಧೆ ಮತ್ತು ಪ್ರತಿಭೆಗಳನ್ನು ಸ್ತುತಿಸುತ್ತಾ ಹೀಗೆ ಹೇಳಿದರು (ಜಗದೀಶ್ ಮೆಹ್ರ ಸಂಪಾದಿಸಿದ The Physicist's Conception of Nature ಎಂಬ ಕೃತಿಯಲ್ಲಿ ಇದನ್ನು ಪೂರ್ತಿಯಾಗಿ ಮುದ್ರಿಸಲಾಗಿದೆ ; ಪು ೭೫೩) :

*ಭೌತವಿಜ್ಞಾನದ ಚರಿತ್ರೆಯ ಬೆಳವಣಿಗೆಯಲ್ಲಿ, ಬೇರೆ ಯಾವುದೇ ಪ್ರಯೋಗಾತ್ಮಕ ವಿಜ್ಞಾನದಲ್ಲಿರುವಂತೆ, ಅತ್ಯಂತ ಸ್ವಾರಸ್ಯಕರ ಅವಧಿಗಳೆಂದರೆ ನಾವು ನಮ್ಮ ಮೂಲಭೂತವಾದ ಕಲ್ಪನೆಗಳನ್ನು ಪರಿಷ್ಕರಿಸಬೇಕಾಗಿ ಬರುವಂಥವು. ಅನಂತರ, ಆಳವಾದ ಚಿಂತನೆ ಮತ್ತು ಅಂತರ್ಬೋಧೆಗಳು ಮಾತ್ರವಲ್ಲದೆ, ಸಾಹಸದ ಕಲ್ಪನಾಶಕ್ತಿಯೂ ಬೇಕು.*

ಬೆಂಜಮಿನ್ ಫ್ರ್ಯಾಂಕ್ಲಿನ್ ಮತ್ತು ಮೈಕೆಲ್ ಫ್ಯಾರಡೇ ಅವರು ಈ ವರ್ಗಕ್ಕೆ ಸೇರಿದವರೆಂದು ಹೇಳಿದ ನಂತರ ಕಪಿಟ್ಸ ಮುಂದುವರಿದು ಹೀಗೆ ಹೇಳುತ್ತಾರೆ ( ಪು. ೭೫೩-೫೪) :

*ನಾನು ಇವೆರಡು ಪ್ರಖ್ಯಾತ ಉದಾಹರಣೆಗಳನ್ನು ಹೇಳುತ್ತಿರುವುದು ಏಕೆಂದರೆ, ವಿಜ್ಞಾನದ ಬೆಳವಣಿಗೆಯ ಒಂದು ಹಂತದಲ್ಲಿ, ಹೊಸ ಹೊಸ ತತ್ತ್ವಗಳನ್ನು ಕಂಡುಹಿಡಿಯುವಾಗ, ಈ ಬಗೆಯ ಸಮಸ್ಯೆಯನ್ನು ಪರಿಹರಿಸಲು ವ್ಯಾಪಕವಾದ ವಿದ್ವತ್ತು ಮತ್ತು ಸಾಂಪ್ರದಾಯಿಕ ಶಿಕ್ಷಣಗಳು ವಿಜ್ಞಾನಿಯ ಅತ್ಯಂತ ಮುಖ್ಯವಾದ ಲಕ್ಷಣಗಳಲ್ಲ ಎಂದು ತೋರಿಸಲು. ಈ ಸಂದರ್ಭದಲ್ಲಿ, ಕಲ್ಪನಾಶಕ್ತಿ, ಅತ್ಯಂತ ವಾಸ್ತವಿಕವಾದ ಚಿಂತನೆ, ಮತ್ತು ಎಲ್ಲಕ್ಕಿಂತ ಹೆಚ್ಚಾಗಿ, ಸಾಹಸ*

ಆವಶ್ಯಕ. ಗಣಿತದಲ್ಲಿ ಅತ್ಯಾವಶ್ಯಕವಾದ ತಾರ್ಕಿಕ ಚಿಂತನೆಯು ಹೊಸ ಹೊಸ ಮೂಲಭೂತವಾದ ಕಲ್ಪನೆಗಳನ್ನು ಕಂಡುಹಿಡಿಯುವಾಗ ವಿಜ್ಞಾನಿಯ ಕಲ್ಪನಾಶಕ್ತಿಗೆ ಅಡ್ಡ ಬರುತ್ತದೆ. ತಾರ್ಕಿಕ ಚಿಂತನೆಯನ್ನು ತೋರದೆ ಅಂಥ ವೈಜ್ಞಾನಿಕ ಸಮಸ್ಯೆಗಳನ್ನು ಪರಿಹರಿಸಲು ವಿಜ್ಞಾನಿಗೆ ಇರುವ ಸಾಮರ್ಥ್ಯವನ್ನು 'ಅಂತರ್ಬೋಧೆ' ಎಂದು ಕರೆಯುತ್ತಾರೆ. ಬಹುಶಃ ನಮ್ಮ ಉಪಪ್ರಜ್ಞೆಯ ಮಟ್ಟದಲ್ಲಿ ನಡೆಯುವ ಚಿಂತನವಿಧಾನವೊಂದಿದೆ ; ಅದು ಯಾವ ನಿಯಮಗಳ ಪ್ರಕಾರ ನಡೆಯುತ್ತದೆಂಬುದು ಈಗ ತಿಳಿಯದು.

## ೨೨. ಪ್ರಯತ್ನರಾಹಿತ್ಯ ತತ್ತ್ವ ಮತ್ತು ಸೃಜನಶೀಲತೆ

ವೇದಾಂತವು ಒಂದು ಕಡೆ ಪ್ರಯತ್ನರಾಹಿತ್ಯ ಹಾಗೂ ಮಾನವ ಸೃಜನಶೀಲತೆಯ ತತ್ತ್ವಗಳಿಗೂ, ಇನ್ನೊಂದು ಕಡೆ ದೈವಾನುಗ್ರಹಕ್ಕೂ ನಡುವೆ ನಿಕಟವಾದ ಸಂಬಂಧವನ್ನು ಗುರುತಿಸುತ್ತದೆ. ಅವೆಲ್ಲ ಕಟ್ಟುನಿಟ್ಟಿನ ಕಾರ್ಯಕಾರಣ ಸಂಯೋಜನೆಯ ಆಚೆ ಇರುವ ಮಾನವನೊಳಗಣ ಯಾವುದೋ ಒಂದು ಗಹನವಾದ ಆಯಾಮವನ್ನು ಸೂಚಿಸುತ್ತವೆ, ಮತ್ತು ಯಾವುದೇ ಅವೈಜ್ಞಾನಿಕವಾದ, ವಿಶ್ವಾತೀತವಾದ, ಪ್ರಕೃತ್ಯತೀತವಾದ ಮೂಲವನ್ನು ಬೇಡುವ ಆವಶ್ಯಕತೆಯಿಲ್ಲವೆಂದು ವೇದಾಂತ ಹೇಳುತ್ತದೆ. ವೈಜ್ಞಾನಿಕ ಅಂತರ್ಬೋಧೆಯನ್ನುಂಟುಮಾಡುವ ಚಿಂತನವಿಧಾನ ಮತ್ತು ಸೃಷ್ಟಿಶೀಲತೆಯ ಫಲಗಳು ಮೇಲೆ ಉದ್ಧರಿಸಿದ ಭಾಗದಲ್ಲಿ ಹೇಳಿರುವಂತೆ ಆಧುನಿಕ ಮನೋವಿಜ್ಞಾನದ ಉಪಪ್ರಜ್ಞೆಯಲ್ಲಿರಬೇಕಾಗಿಲ್ಲ, ಮಾನವನ ಮನಸ್ಸಿನ ಪ್ರಜ್ಞಾತೀತವಾದ ಆಯಾಮದಲ್ಲಿರಬೇಕೆಂದು ವೇದಾಂತ ಹೇಳುತ್ತದೆ. ವೇದಾಂತವು ಪ್ರಜ್ಞೆ, ಪೂರ್ವಪ್ರಜ್ಞೆ, ಉಪಪ್ರಜ್ಞೆ ಮತ್ತು ಅಪ್ರಜ್ಞೆಗಳಲ್ಲದೆ ಪ್ರಜ್ಞಾತೀತ ಮಟ್ಟವೊಂದು ಇರುವುದನ್ನು ಗುರುತಿಸುತ್ತದೆ. ಇದನ್ನು ಹಲವಾರು ಪಾಶ್ಚಾತ್ಯ ಮನೋವಿಜ್ಞಾನಿಗಳು ಮಾನವನ ಸೃಷ್ಟಿಶೀಲತೆಗೆ ಸಂಬಂಧಿಸಿದಂತೆ ಗ್ರಹಣಶಕ್ತಿ ಅಧ್ಯಯನ ಮಾಡುವಾಗಲೂ ಇದನ್ನೇ ಸೂಚಿಸಲಾಗಿದೆ. ಸಿಲ್ವಾನೋ ಅರಿಏಟಿ ಅವರು ತಮ್ಮ Creativity and Its Cultivation ಸಂಪುಟ ಮೂರು, ಅಧ್ಯಾಯ ೪೪, ಪು. ೭೨೩-೩೭ರಲ್ಲಿ ಹೀಗೆ ಹೇಳುತ್ತಾರೆ :

*'ಸೃಷ್ಟಿಪ್ರಕ್ರಿಯೆ' ಎಂಬ ಪದಕ್ಕೆ ಸದರಿ ಲೇಖಕನಿಗೆ ಉದ್ದೀಪನ ಪ್ರತಿಕ್ರಿಯೆ ಎಂಬ ಮಾಮೂಲಿ ಮನೋವೈಜ್ಞಾನಿಕ ಸೂತ್ರವನ್ನು ಅಪೇಕ್ಷಣೀಯವಾದ ರೀತಿಯಲ್ಲಿ ಮಾನವನು ಮೀರಲು ಪ್ರಯತ್ನ ಮಾಡುವ ವಿಶೇಷ ಪ್ರಕ್ರಿಯೆ ಎಂದರ್ಥ.*

*'ಮಾನವನ ಕೆಳಗಿನ, ಸೀಮಿತ ಪ್ರತಿಕ್ರಿಯೆಗಳುಳ್ಳ ಪ್ರಾಣಿಗೂ ಸಂಜ್ಞೆ ಮಾಡುವ ಮಾನವ ಜೀವಿಗೂ ಮೂಲಭೂತವಾದ ವ್ಯತ್ಯಾಸವಿದ್ದರೂ, ಮಾನವನು ನಿಶ್ಚಿತ ವಿಧಾನಗಳಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುವ ಪ್ರವೃತ್ತಿ ತೋರಿಸುತ್ತಾನೆ. ಅವನ ಪ್ರತಿಕ್ರಿಯೆಯು ಉದ್ದೀಪನೆಯಾದ ಕೂಡಲೇ ಆದರೂ, ಅಥವಾ ಸಂಕೇತಗಳು ಮತ್ತು ಆಯ್ಕೆಗಳ ಸಂಕೀರ್ಣತಂಡವಾಗಿ ಬಂದರೂ, ಅವನ ಮಾಮೂಲಿ ಮನೋವೈಜ್ಞಾನಿಕ ಸಹಜ ಶಕ್ತಿಗಳಿಂದ ಉಂಟಾದ ಪ್ರತಿಕ್ರಿಯೆಗಳ ಭಂಡಾರದ ಪ್ರಕಾರವೇ ಪ್ರತಿಕ್ರಿಯಿಸಲು ಪ್ರಯತ್ನಿಸುತ್ತಾನೆ; ಅಥವಾ ಅವನ ಸಂಸ್ಕೃತಿಯ ಸಾಮಾನ್ಯ ಶೈಲಿಯಂತೆ ಪ್ರತಿಕ್ರಿಯಿಸುತ್ತಾನೆ. ಅವನ ಪ್ರತಿಕ್ರಿಯೆಗಳು ಅರಿವಿನ ಪ್ರಕ್ರಿಯೆಗಳಿಗೆ ಸಾಧನವಾಗಿದ್ದರೆ, ಅವು ಸಾಮಾನ್ಯವಾಗಿ, ಫ್ರಾಯ್ಡಿಯನ್ ಮನೋವಿಶ್ಲೇಷಣೆಯ ಪರಿಭಾಷೆಯಲ್ಲಿ ಕರೆಯುವಂತೆ, ದ್ವಿತೀಯಕ ಪ್ರಕ್ರಿಯೆಯನ್ನು, ಸಾಮಾನ್ಯ ಪರಿಭಾಷೆಯಲ್ಲಿ ಅರಿಸ್ಟಾಟಲಿಯನ್ ಅಥವಾ ಸಾಮಾನ್ಯ ತಾರ್ಕಿಕ ಚಿಂತನೆಯನ್ನು ಅನುಸರಿಸುತ್ತವೆ.*

*ಸೃಷ್ಟಿಪ್ರಕ್ರಿಯೆಯು ಈ ದ್ವಿತೀಯಕ ಪ್ರಕ್ರಿಯೆಯ ಪ್ರತಿಕ್ರಿಯೆಗಳ ಬಂಧನದಿಂದ ಬಿಡುಗಡೆ*

ಹೊಂದಲು ಮಾನವನಿಗೆ ಅವಕಾಶ ಮಾಡಿಕೊಡುತ್ತದೆ. ಆದರೆ ಸೃಷ್ಟಿಶೀಲತೆ ಕೇವಲ ಸ್ವಂತಿಕೆ ಮತ್ತು ಸ್ವಾತಂತ್ರ್ಯ ಅಲ್ಲ. ಅದಕ್ಕಿಂತ ತುಂಬ ಹೆಚ್ಚಿನದು. ಅದು ಪರಿಮಿತಿಗಳನ್ನು ಒಡ್ಡುತ್ತದೆ. ಮೊದಲನೆಯದಾಗಿ, ದ್ವಿತೀಯಕ ಪ್ರಕ್ರಿಯೆಗಿಂತ ಭಿನ್ನವಾದ ವಿಧಾನಗಳನ್ನು ಅದು ಬಳಸಿದರೂ, ಅದು ದ್ವಿತೀಯಕ ಪ್ರಕ್ರಿಯೆಯನ್ನು ವಿರೋಧಿಸಬೇಕಾಗಿಲ್ಲ. ಹಾಗೆ ಮಾಡಿದರೆ ಫಲಿತಾಂಶ ವಿಕಾರವಾಗಿರುತ್ತದೆ, ಸೃಷ್ಟಿಶೀಲವಾಗಿರುವುದಿಲ್ಲ. ಎರಡನೆಯದಾಗಿ, ಅದು ಹೆಚ್ಚಿನ ಮತ್ತು ಅಪೇಕ್ಷಣೀಯವಾದ ಮಾನವ ಅನುಭವವನ್ನು ಕಲೆಯಲ್ಲಿನಂತೆ ರಸಾಭಿಜ್ಞತೆಯ ಸುಖ, ಅಥವಾ ವಿಜ್ಞಾನದಲ್ಲಿನಂತೆ ಉಪಯುಕ್ತತೆ, ತಿಳಿವಳಿಕೆ, ಮತ್ತು ಭವಿಷ್ಯ ಕಥನ ಸಾಧ್ಯತೆಗಳನ್ನು ಪಡೆಯಬೇಕು.

ಮೂರನೆಯದಾಗಿ, ಸೃಷ್ಟಿಶೀಲ ಪ್ರಕ್ರಿಯೆಯು ಸುಲಭವಾಗಿ ಕಾಣಸಿಗದ ಅಥವಾ ಸುಲಭವಾಗಿ ಪಡೆಯಲಾಗದ ಹೊಸ ವಸ್ತು ಅಥವಾ ಅನುಭವವನ್ನು ಪಡೆಯಬೇಕೆಂಬ ಹಂಬಲವನ್ನು ಅಥವಾ ಶೋಧನೆಯನ್ನು ಪೂರೈಸಲು ಅನುವಾಗುತ್ತದೆ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ಮನೋವಿಜ್ಞಾನದ ಹೇಳಿಕೆಯ ಜೊತೆಜೊತೆಗೇ ಮಾನವ ಪ್ರಜ್ಞೆಯ ನಾನಾ ಮಟ್ಟಗಳ ಬಗ್ಗೆ. ವೇದಾಂತದ ಅಭಿಪ್ರಾಯವನ್ನು ಪ್ರತಿಪಾದಿಸುತ್ತಾ ವಿವೇಕಾನಂದರು ಏನು ಹೇಳಿದರು ಎಂಬುದನ್ನು ಕೇಳೋಣ (The Complete Works of Swami Vivekananda, ಸಂ. I ಪು. ೧೭೯-೮೫) :

ಯುಕ್ತಿಪೂರಿತವಾದುದೆಂದು ಕರೆಯಲ್ಪಡುವ ನಮ್ಮ ಜ್ಞಾನವೆಲ್ಲವೂ ಪ್ರಜ್ಞೆಗೆ ಅನ್ವಯಿಸುವುದೆಂದು ಮಾನವರಾದ ನಮಗೆ ತೋರುವುದು... ಅದೇ ಸಮಯದಲ್ಲಿ ನನ್ನ ಪ್ರಜ್ಞೆಗೆ ಬರದ ನನ್ನ ಅಸ್ತಿತ್ವದ ಎಷ್ಟೋ ಅಂಶಗಳಿವೆ... ಆಹಾರದಿಂದ ರಕ್ತ ತಯಾರಾಗುವುದು ನನ್ನ ಅರಿವಿಲ್ಲದೆ. ರಕ್ತದಿಂದ ನನ್ನ ಅಂಗಾಂಗಗಳೆಲ್ಲ ಗಟ್ಟಿಯಾಗುವುದೂ ನನಗರಿವಿಲ್ಲದೆ. ಆದರೂ ಕೂಡ ಇದನ್ನು ಮಾಡುತ್ತಿರುವವನು ನಾನು... ಇದನ್ನೆಲ್ಲ ಮಾಡುವವನು ನಾನೆ, ಬೇರೆಯವರಲ್ಲ ಎಂಬುದು ಹೇಗೆ ಗೊತ್ತು ?... ಈಗ ನಮ್ಮ ಅರಿವಿಲ್ಲದೆ ಆಗುತ್ತಿರುವ ಬಹುಪಾಲು ಕ್ರಿಯೆಯನ್ನು ನಮ್ಮ ಅರಿವಿನ ಬೆಳಕಿಗೆ ತರಬಹುದೆಂಬುದನ್ನು ಪ್ರದರ್ಶಿಸಬಹುದು... ಇದು ಏನನ್ನು ತೋರಿಸು ತ್ತದೆ ? ನಮ್ಮ ಅರಿವಿನ ಕೆಳಗಿರುವ ಈ ಕ್ರಿಯೆ ಕೂಡ ನಡೆಯುತ್ತಿರುವುದು ನಮ್ಮಿಂದಲೇ. ಆದರೆ ಅದು ನಮ್ಮ ಅರಿವಿಲ್ಲದೆ ಆಗುತ್ತಿರುವುದು.

ಆದ ಕಾರಣ ಮಾನವನ ಮನಸ್ಸು ಕೆಲಸ ಮಾಡುವ ಎರಡು ಸ್ತರಗಳಿವೆ ಎಂದ ಹಾಗಾಯಿತು. ಮೊದಲನೆಯದು ಅರಿವಿನಿಂದ ಮಾಡುವ ಸ್ತರ. ಅಲ್ಲಿ ಮಾಡುವ ಎಲ್ಲಾ ಕೆಲಸಗಳೂ ಅಹಂಕಾರದಿಂದ ಕೂಡಿವೆ. ಎರಡನೆಯದು ನಮ್ಮ ಅರಿವಿಲ್ಲದೆ ನಡೆಯುವ ಸ್ತರ. ಅಲ್ಲಿ ಯಾವ ಕೆಲಸದಲ್ಲಿಯೂ ನಾನು ಎಂಬ ಅಹಂಕಾರ ಇರುವುದಿಲ್ಲ.

ಮನಸ್ಸು ಕೆಲಸ ಮಾಡುವ ಇನ್ನೂ ಉತ್ತಮ ಸ್ತರವೂ ಇದೆ. ಅದು ಅರಿವಿನಾಚೆಯೂ ಹೋಗಬಲ್ಲದು. ಹೇಗೆ ನಮ್ಮ ಅರಿವಿಲ್ಲದ ಕೆಲಸ ನಮ್ಮ ಪ್ರಜ್ಞೆಯ ಕೆಳಗಿದೆಯೋ ಅಂತೆಯೇ ನಮ್ಮ ಪ್ರಜ್ಞೆಯ ಮೇಲೆ ಇರುವ ಕೆಲಸವೂ ಇದೆ. ಇಲ್ಲಿಯೂ ಕೂಡ ನಾನು ಎಂಬ ಅಹಂಕಾರ ಭಾವ ಇರುವುದಿಲ್ಲ...

ಯುಕ್ತಿ ಅಥವಾ ಜಾಗೃತ ಅವಸ್ಥೆಯಲ್ಲಿ ಕೆಲಸ ಮಾಡುವ ಮನಸ್ಸಿನ ಪರಿಧಿಯು ಬಹಳ ಕಿರಿದು. ಒಂದು ಸಣ್ಣ ವೃತ್ತದೊಳಗೆ ಮಾತ್ರ ಮನುಷ್ಯನ ಯುಕ್ತಿ ಸಂಚಾರ ಮಾಡಬಲ್ಲದು,

ಅದನ್ನು ಮೀರಿ ಅದು ಹೋಗಲಾಗದು. ಅದನ್ನು ಮೀರಿ ಹೋಗುವ ನಮ್ಮ ಪ್ರಯತ್ನವೆಲ್ಲವೂ ವ್ಯರ್ಥ. ಆದರೂ ಮಾನವಕೋಟಿಯು ಅತ್ಯಂತ ಪ್ರಿಯವೆಂದು ಭಾವಿಸುವ ವಿಷಯವೆಲ್ಲವೂ ಯುಕ್ತಿ ಎಂಬ ಬೇಲಿಯಾಚೆ ಇರುವುದು. ಜನನ ಮರಣಾತೀತ ಆತ್ಮವಿರುವನೆ ? ದೇವ ನಿರುವನೆ ? ಪ್ರಪಂಚವನ್ನಾಳುವ ಯಾವುದಾದರೊಂದು ಪರಮಶಕ್ತಿ ಇದೆಯೆ, ಇಲ್ಲವೆ ಎಂಬ ಪ್ರಶ್ನೆಗಳೆಲ್ಲಾ ಯುಕ್ತಿಯ ಮೇರೆಯನ್ನು ಮೀರಿ ಇರುವಂತಹವು. ಈ ಪ್ರಶ್ನೆಗೆ ಯುಕ್ತಿಯು ಎಂದಿಗೂ ಉತ್ತರವನ್ನು ಕೊಡಲಾರದು. ಯುಕ್ತಿಯು ಹೇಳುವುದೇನು ? "ನಾನು ಅಜ್ಞೇಯತಾ ವಾದಿ, ಈಶ್ವರನು ಇರುವನೋ ಇಲ್ಲವೋ ಗೊತ್ತಿಲ್ಲ" ಎಂದು ಅದು ಹೇಳುವುದು. ಆದರೂ ಈ ಪ್ರಶ್ನೆಗಳು ನಮಗೆ ಅತಿ ಮುಖ್ಯವಾದವು. ಅವುಗಳಿಗೆ ಸರಿಯಾದ ಉತ್ತರ ದೊರಕದೇ ಇದ್ದರೆ ಜೀವನ ಉದ್ದೇಶಹೀನವಾಗುವುದು. ನಮ್ಮ ಧಾರ್ಮಿಕ ಸಿದ್ಧಾಂತಗಳೆಲ್ಲಾ ನಮ್ಮ ನೈತಿಕ ಧೋರಣೆಗಳೆಲ್ಲಾ ಮಾನವ ಸ್ವಭಾವದಲ್ಲಿ ಒಳ್ಳೆಯದು ಮತ್ತು ಶ್ರೇಷ್ಠವಾದವುಗಳೆಲ್ಲ, ಯುಕ್ತಿ ಎಂಬ ಕ್ಷೇತ್ರದ ಆಚೆಯಿಂದ ಬಂದ ಉತ್ತರಗಳ ತಳಹದಿಯ ಮೇಲೆ ನಿಂತಿವೆ. ಆದ ಕಾರಣ ಈ ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆಯುವುದು ಬಹಳ ಮುಖ್ಯ. ಜೀವನ ಒಂದು ಕ್ಷಣಿಕ ಆಟವಾದರೆ, ಪ್ರಪಂಚ ಎಂಬುದು "ಪರಮಾಣುಗಳ ಆಕಸ್ಮಿಕ ಸಂಯೋಗದಿಂದ" ಉಂಟಾಗಿದ್ದರೆ ನಾನು ಮತ್ತೊಬ್ಬರಿಗೆ ಒಳ್ಳೆಯದನ್ನು ಏಕೆ ಮಾಡಬೇಕು ? ದಯೆ, ನ್ಯಾಯ, ಸೋದರ ಭಾವನೆಗಳೆಲ್ಲ ಏಕಿರಬೇಕು ? ಪ್ರತಿಯೊಬ್ಬನಿಗೂ ಎಷ್ಟು ಸಾಧ್ಯವೋ ಅಷ್ಟು ಸುಖವನ್ನು ಹೀರುವುದೇ ಪ್ರಪಂಚದಲ್ಲಿ ಅತ್ಯುತ್ತಮವಾದ ಆದರ್ಶವಾಗುವುದು.

'ಮಾನವ ಜೀವನ ಎಂಬ ಅಸಂಬದ್ಧತೆಯ ರಾಶಿಯಿಂದ ಏನಾದರೂ ಸ್ವಲ್ಪ ಯುಕ್ತಿಯನ್ನು ಹೊಂದಬೇಕಾದರೆ ನಾವು ಯುಕ್ತಿಯನ್ನು ಮೀರಬೇಕು ; ಆದರೆ ಅದನ್ನು ವೈಜ್ಞಾನಿಕವಾಗಿ ನಿಯಮಿತ ಅಭ್ಯಾಸದ ಮೂಲಕ ನಿಧಾನವಾಗಿ ಮಾಡಬೇಕು. ಎಲ್ಲಾ ಮೂಢನಂಬಿಕೆಗಳನ್ನೂ ಕಿತ್ತೊಗೆಯಬೇಕು. ಅತೀಂದ್ರಿಯಾವಸ್ಥೆಯ ಅಧ್ಯಯನವನ್ನು ಬೇರೆ ಯಾವುದಾದರೊಂದು ವಿಜ್ಞಾನವನ್ನು ಅಭ್ಯಾಸ ಮಾಡುವಂತೆ ಮಾಡಬೇಕು. ಯುಕ್ತಿಯ ಮೇಲೆ ನಮ್ಮ ತಳಹದಿಯನ್ನು ಕಟ್ಟಬೇಕು. ಎಲ್ಲಿಯವರೆಗೆ ಅದು ನಮಗೆ ದಾರಿಯನ್ನು ತೋರಬಲ್ಲದೋ ಅಲ್ಲಿಯವರೆಗೂ ಅದನ್ನು ನಾವು ಅನುಸರಿಸಬೇಕು. ಎಂದು ಯುಕ್ತಿಯು ಸೋಲುವುದೋ ಆಗ ಅದೇ ನಮಗೆ ಉನ್ನತ ಸ್ಥಿತಿಗೆ ದಾರಿಯನ್ನು ತೋರಿಸುವುದು. ಯಾರಾದರೂ ಒಬ್ಬರು "ನನಗೆ ಸ್ಫೂರ್ತಿ ಬಂದಿದೆ" ಎಂದು ಹೇಳಿ ಅವಿಚಾರಶೀಲವಾಗಿ ಮಾತನಾಡಿದರೆ ಅದನ್ನು ತಿರಸ್ಕರಿಸಿ. ಅದೇತಕ್ಕೆ ? ಏಕೆಂದರೆ ಸಹಜ ಪ್ರವೃತ್ತಿ, ಯುಕ್ತಿ ಮತ್ತು ಪ್ರಜ್ಞಾತೀತ ಸ್ಥಿತಿ ಅಥವಾ ಅಪ್ರಜ್ಞೆ, ಪ್ರಜ್ಞೆ ಮತ್ತು ಪ್ರಜ್ಞಾತೀತ ಸ್ಥಿತಿಗಳು ಒಂದೇ ಮನಸ್ಸಿಗೆ ಸೇರಿದವು. ಒಬ್ಬ ಮನುಷ್ಯನಲ್ಲಿ ಮೂರು ಮನಸ್ಸು ಗಳಿಲ್ಲ. ಆದರೆ ಅದರ ಒಂದು ಸ್ಥಿತಿಯೇ ಮತ್ತೊಂದಾಗಿ ಬದಲಾಗುವುದು. ಸಹಜ ಸ್ವಭಾವವೇ ಯುಕ್ತಿಯ ರೂಪವನ್ನು ತಾಳುವುದು, ಯುಕ್ತಿಯೇ ಪ್ರಜ್ಞಾತೀತ ಅವಸ್ಥೆಯಾಗುವುದು. ಆದ್ದರಿಂದ ಯಾವ ಒಂದು ಅವಸ್ಥೆಯೂ ಕೂಡ ಮತ್ತೊಂದನ್ನು ವಿರೋಧಿಸುವುದಿಲ್ಲ. ನಿಜವಾದ ಅತೀಂದ್ರಿಯ ಜ್ಞಾನ ಎಂದಿಗೂ ಯುಕ್ತಿಯನ್ನು ವಿರೋಧಿಸುವುದಿಲ್ಲ. ಆದರೆ ಅದನ್ನು ಪೂರ್ತಿಗೊಳಿಸುವುದು.

ಆಧುನಿಕ ಮನೋವಿಜ್ಞಾನವು ಪ್ರಜ್ಞಾಪೂರ್ವ ಸ್ಥಿತಿಗಳಿಂದ ಪಡೆದ ಜ್ಞಾನ, ಅಥವಾ ತಾರ್ಕಿಕವಲ್ಲದ ಬಗೆಯ ಜ್ಞಾನವನ್ನು ಪ್ರಧಾನ ಸಂವೇದನೆಯೆಂದೂ ಮತ್ತು ಪ್ರಜ್ಞಾಸ್ಥಿತಿಯಿಂದ ಪಡೆದ ಅಥವಾ ತಾರ್ಕಿಕ ರೀತಿಯ ಜ್ಞಾನವನ್ನು ದ್ವಿತೀಯಕ ಸಂವೇದನೆಯೆಂದೂ ಹೇಳುತ್ತದೆ. ಮತ್ತೆ ಸಿಲ್ವಾನೋ ಅರಿಏಟಿಯನ್ನು ಉದ್ಧರಿಸುವುದಾದರೆ (ಅದೇ, ಪು. ೭೨೬) :

*ಸದರಿ ಲೇಖಕನ ಪ್ರಕಾರ, ದ್ವಿತೀಯಕ ಪ್ರಕ್ರಿಯಾತಂತ್ರಗಳನ್ನು ಪ್ರಧಾನ ಪ್ರಕ್ರಿಯಾತಂತ್ರಗಳೊಂದಿಗೆ ಸರಿಯಾದ ರೀತಿಯಲ್ಲಿ ಹೊಂದಿಸಿದರೆ ಸೃಷ್ಟಿಪ್ರಕ್ರಿಯೆ ಹೊರಹೊಮ್ಮುತ್ತದೆ. ಈ ವಿಶೇಷ ಸಂಯೋಜನೆಗೆ ಈ ಲೇಖಕನು ತೃತೀಯ ಪ್ರಕ್ರಿಯೆ (tertiary process) ಎಂದು ಕರೆಯಬಯಸುತ್ತಾನೆ.*

ಸೃಷ್ಟಿಪ್ರಕ್ರಿಯೆಯನ್ನೂ ಮತ್ತು ಚತುರೋಕ್ತಿ, ಹಾಸ್ಯ, ಶ್ಲೇಷೆ, ನಾಣ್ಣುಡಿಗಳು, ಮತ್ತು ಕವಿತೆಗಳಲ್ಲಿ ಅದರ ಅಭಿವ್ಯಕ್ತಿಗಳನ್ನೂ ಉಂಟುಮಾಡಲು ಪ್ರಧಾನ ಪ್ರಕ್ರಿಯೆ ಮತ್ತು ದ್ವಿತೀಯಕ ಪ್ರಕ್ರಿಯೆಗಳನ್ನು ನಾನಾ ಬಗೆಯಲ್ಲಿ ಹೊಂದಿಸಿ ನೋಡಿದ ನಂತರ, ಲೇಖಕನು ವಿಜ್ಞಾನದಲ್ಲಿ ಅದರ ಅಭಿವ್ಯಕ್ತಿಯನ್ನು ನೋಡಲು ಹೋಗುತ್ತಾನೆ (ಅದೇ ಪು. ೭೩೫-೩೬) :

*ಈಗ ಸೃಷ್ಟಿಶೀಲತೆಯಲ್ಲಿ ಹೆಸರಾಗಿರುವ ಶ್ರೇಷ್ಠ ಫ್ರೆಂಚ್ ಗಣಿತಜ್ಞ ಪ್ವಾನ್‌ಕರೆ(Poincare) ಎಂಬಾತನು ತಾನು ಅನುಭವಿಸಿದ ಸೃಷ್ಟ್ಯಾತ್ಮಕ ಜ್ಞಾನೋದಯದ ಕ್ಷಣಗಳನ್ನು ನಿಖರವಾಗಿ ವಿವರಿಸಿದ್ದಾನೆ. ರಾತ್ರಿಯೆಲ್ಲ ನಿದ್ದೆಗೆಟ್ಟು ಗಣಿತ ಸಮಸ್ಯೆಯೊಂದನ್ನು ಬಿಡಿಸಲು ಪ್ರಯತ್ನಿಸುತ್ತಾ ಕಳೆದ ಮೇಲೆ ಬೆಳಗ್ಗೆ ಬಸ್ಸೊಂದನ್ನು ಪ್ರವೇಶಿಸಿದನು. ಕಾಲನ್ನು ಬಸ್ಸಿನ ಮೆಟ್ಟಿಲಿನ ಮೇಲೆ ಇಟ್ಟಾಗ, ಒಂದು ಭಾವನೆ ಪ್ರಯತ್ನವಿಲ್ಲದೆಯೇ ಹೊಳೆಯಿತು. ಫ್ಯೂಷನ್ ಫಲನಗಳಿಗೆ (Fuchsian functions) ತಾನು ಬಳಸಿದ ಪರಿವರ್ತನೆಗಳೂ, ಯೂಕ್ಲಿಡಿಯನ್ನೇತರ ಜ್ಯಾಮಿತಿಯ ಪರಿವರ್ತನೆಗಳೂ ಒಂದೇ ಎಂದು ಅವನಿಗೆ ಹೊಳೆಯಿತು. ಈ ದಿಢೀರ್ ಜ್ಞಾನೋದಯವು ಗಣಿತ ಕ್ಷೇತ್ರದಲ್ಲಿ ಭಾರೀ ಪ್ರಗತಿಗೆ ಕಾರಣವಾಯಿತು.*

*ಪ್ವಾನ್‌ಕರೇ ತನ್ನ ಅನುಭವಗಳನ್ನು ಚೆನ್ನಾಗಿ ವರ್ಣಿಸಿದ್ದಾನೆ. ಆದರೆ ಅವನು ತನ್ನ ಸೃಷ್ಟ್ಯಾತ್ಮಕ ಒಳನೋಟದಲ್ಲಿ, ಹಿಂದೆ ಎರಡು ಶ್ರೇಷ್ಠ ಅಸಮಾನವಾದ ಪರಿವರ್ತನೆಗಳೆಂದು —ಅವೆಂದರೆ ಫ್ಯೂಷನ್ ಮತ್ತು ಯೂಕ್ಲಿಡಿಯನೇತರ—ಭಾವಿಸಿದ್ದದ್ದು ಒಂದೇ ಎಂಬುದನ್ನು ನೋಡಿದ್ದು ಹೇಗೆ ಎನ್ನುವುದನ್ನು ಒತ್ತಿ ಹೇಳಿಲ್ಲ. ಹಿಂದಿನ ರಾತ್ರಿ ಮತ್ತು ಆ ರಾತ್ರಿಗೆ ಹಿಂದಿನ ಹದಿನಾಲ್ಕು ದಿನಗಳ ಕಾಲ ಪ್ವಾನ್‌ಕರೇ ಆಧಾರಾಂಶಗಳನ್ನು ಸಂಗ್ರಹಿಸಿದ್ದ. ಆದರೆ ದತ್ತಾಂಶಗಳ ಸಂಗ್ರಹ ಸೃಷ್ಟಿಶೀಲತೆಯಲ್ಲ. ಅನೇಕ ಜನ ಆಧಾರಾಂಶಗಳನ್ನು ಸಂಗ್ರಹಿಸಬಲ್ಲರು. ವೀಕ್ಷಿಸಿದ ಆಧಾರಾಂಶಗಳನ್ನೆಲ್ಲ ಪರಸ್ಪರ ಸಂಬಂಧ ಕಲ್ಪಿಸಿದಾಗ ಸೃಷ್ಟ್ಯಾತ್ಮಕ ಜಿಗಿತ ಉಂಟಾಗುತ್ತದೆ. ಅಂದರೆ, ಇಲ್ಲಿಯವರೆಗೆ ಶಂಕಿಸಿದ ತಾದಾತ್ಮ್ಯವನ್ನು ಅರಿತಾಗ ಸಂಯೋಜಕ ಮಾರ್ಗ ಅಥವಾ ಹೊಸ ಕ್ರಮ ಅನ್ವೇಷಣೆಯಾಗುತ್ತದೆ.*

ಅನಂತರ, ಸಿಲ್ವಾನೋ ಅರಿಏಟಿ ಸೃಷ್ಟಿಶೀಲತೆಯನ್ನು ಬೆಳೆಸಿಕೊಳ್ಳಲು ಕೆಲವು ಸಲಹೆಗಳನ್ನು ಕೊಡುತ್ತಾನೆ (ಅದೇ ಪು. ೭೩೬-೪೦) :

*ಸೃಷ್ಟಿಶೀಲ ವ್ಯಕ್ತಿಗಳು ವಿಶೇಷವಾಗಿ ಭಾರಿ ಸಂಖ್ಯೆಯಲ್ಲಿ ಇತಿಹಾಸದ ಕೆಲವು ಅವಧಿಗಳಲ್ಲಿ, ನಿರ್ದಿಷ್ಟ ಜಾಗತಿಕ ಪ್ರದೇಶಗಳಲ್ಲಿ ಕಾಣಿಸಿಕೊಳ್ಳುವುದು ಎಲ್ಲರಿಗೂ ತಿಳಿದ ವಿಷಯ. ಸೃಷ್ಟಿಶೀಲತೆಯನ್ನು ನಿರ್ಧರಿಸುವುದು ವಿಶೇಷವಾದ ಪರಿಸರೀಯ ಸಂದರ್ಭಗಳೇ ಹೊರತು, ಕೇವಲ ಜೀವಶಾಸ್ತ್ರೀಯ ಅಂಶಗಳಲ್ಲವೆಂದು ಈ ಅಸಮ ಹರಡಿಕೆ ಸೂಚಿಸುತ್ತದೆಂದು ತೋರುತ್ತದೆ.*

*ಬೇರೆ ಬೇರೆ ಲೇಖಕರು ಸ್ವತಂತ್ರವಾಗಿ ಮಾಡಿರುವ ಅಧ್ಯಯನಗಳಿಂದ ತಿಳಿದುಬರುವ ಅಂಶವೆಂದರೆ, ತುಂಬ ಬುದ್ಧಿವಂತರಾದ ವ್ಯಕ್ತಿಗಳು ತುಂಬ ಸೃಷ್ಟಿಶೀಲರಾಗಿರಬೇಕಾಗಿಲ್ಲ*

ಎಂಬುದು... ಸೃಷ್ಟಿಶೀಲ ವ್ಯಕ್ತಿಗಳು ಬುದ್ಧಿವಂತರಾದರೂ, ಸೃಷ್ಟಿಶೀಲತೆಗೆ ತೀರ ಹೆಚ್ಚು IQ (ಬುದ್ಧಿ ಪ್ರಮಾಣ) ಪೂರ್ವಭಾವಿಯಾಗಿ ಇರಬೇಕಾಗಿಲ್ಲ. ಬದಲಿಗೆ, ಅತಿಯಾದ ಸ್ವವಿಮರ್ಶೆ ಅಥವಾ ಸಾಂಸ್ಕೃತಿಕ ಪರಿಸರ ವಿಷಯವನ್ನು ಶೀಘ್ರವಾಗಿ ಕಲಿಯುವುದರಿಂದಾಗಿ ಆ ವ್ಯಕ್ತಿಯ ಆಂತರಿಕ ಸಂಪನ್ಮೂಲಗಳಿಗೆ ಪ್ರತಿಬಂಧಕವಾಗಬಹುದು ; ತರ್ಕ ಮತ್ತು ಗಣಿತ ಸೂತ್ರಗಳ ಪ್ರಕಾರ ಅನುಮಾನಿಸುವ ಶಕ್ತಿ ಶಿಸ್ತಿನ ಚಿಂತಕರಿಗೆ ಸರಿಯೇ ಹೊರತು ಸೃಷ್ಟಿಶೀಲ ವ್ಯಕ್ತಿಗಳಿಗಲ್ಲ.

ಸೃಷ್ಟಿಶೀಲತೆಗೆ ಉತ್ತೇಜನ ನೀಡುವ ವಿಜ್ಞಾನ ತನ್ನ ಆರಂಭದ ಹಂತದಲ್ಲಿದೆ. ಲೇಖಕನು ಕೇವಲ ಆರಂಭಿಕವಾದ ಮತ್ತು ಪರೀಕ್ಷಾರ್ಥವಾದ ಅಭಿಪ್ರಾಯಗಳನ್ನು ಸೂಚಿಸಬಹುದು. ಸಾಕಷ್ಟು ಭಾರಿ ಸಂಖ್ಯೆಯ ಸೃಷ್ಟಿಶೀಲ ವ್ಯಕ್ತಿಗಳ ಮನೋವಿಶ್ಲೇಷಣಾತ್ಮಕ-ಮನಶ್ಶಾಸ್ತ್ರಕ ಚಿಕಿತ್ಸೆಯಿಂದ ಅನುಮಾನಿಸಿದ ಅವನ ಅಭಿಪ್ರಾಯಗಳು ಅವು...

ಈ ಅಧ್ಯಾಯದಲ್ಲಿ ಓಬೀರಾಯನ ಕಾಲದ ಗ್ರಹಿಕೆಯ ರೂಪಗಳ ಬಳಕೆಯು ಅನೇಕ ರೀತಿಯ ಸೃಷ್ಟಿಶೀಲತೆಗೆ ಪೂರ್ವಭಾವಿಯಾಗಿ ಇರಬೇಕೆಂಬುದನ್ನು ನಾವು ನೋಡಿದ್ದೇವೆ. ನಾವು ಸೃಷ್ಟಿಶೀಲತೆಯನ್ನು ಹೆಚ್ಚಿಸಲು ಮನೋರೋಗವಿಜ್ಞಾನವನ್ನು ಬೆಳೆಸಬೇಕೆಂದು ಖಂಡಿತ ವಾದಿಸುತ್ತಿಲ್ಲ. ಕೆಲವು ಜನ ಔಷಧವಿಜ್ಞಾನರೀತ್ಯಾ—ಮದ್ಯ, ಅಫೀಮಿನ ಉತ್ಪನ್ನಗಳು, ಮತ್ತು ಇತ್ತೀಚೆಗೆ ಲಿಸರ್ಜಿಕ್ ಆಮ್ಲ ಡೈ ಇಥೈಲಮೈಡ್‌ಗಳಿಂದ—ಹೀಗೆ ಮಾಡಲು ಪ್ರಯತ್ನಿಸಿದ್ದಾರೆ. ಈ ವಿಧಾನಗಳನ್ನು ಮನೋವೈದ್ಯ ಶಿಫಾರಸು ಮಾಡಲಾರ. ಚಟ ಮಾಡಿಕೊಳ್ಳುವ ಅಪಾಯದ ಜೊತೆಗೆ, ಸೃಷ್ಟಿಶೀಲತೆಯನ್ನು ಅವು ಹೆಚ್ಚಿಸುತ್ತವೆಂಬುದೂ ಸಂಶಯಾಸ್ಪದ. ಅವು ಪ್ರಥಮ ಪ್ರಕ್ರಿಯೆಯ ಗೋಚರಿಸುವಿಕೆಗೆ ಸಹಾಯ ಮಾಡಿದರೆ, ಅವು ದ್ವಿತೀಯಕ ಪ್ರಕ್ರಿಯೆಯ ಬಳಕೆಗೆ ಧಕ್ಕೆ ತರುತ್ತವೆ ; ಮತ್ತು ಸೃಷ್ಟಿಶೀಲತೆಯು (ಅಥವಾ ತೃತೀಯ ಪ್ರಕ್ರಿಯೆಯು) ಇವೆರಡು ಪ್ರಕ್ರಿಯೆಗಳ ಹದವಾದ ಹೊಂದಿಕೆಯಿಂದ ಮಾತ್ರ ಹೊರಹೊಮ್ಮುತ್ತದೆ.

ನಂಜಿನ ವಿಧಾನಗಳನ್ನು ಅನುಸರಿಸುವುದರ ಬದಲು, ನಾವು ವಿಶೇಷವಾದ ಧೋರಣೆಗಳು, ಅಭ್ಯಾಸಗಳು ಮತ್ತು ಪರಿಸರದ ಸ್ಥಿತಿಗಳನ್ನು ಪರಿಶೀಲಿಸಬೇಕು, ಮತ್ತು ಸಾಧ್ಯವಾದರೆ ಶಿಫಾರಸು ಮಾಡಬೇಕು. ಪರಿಗಣಿಸಬೇಕಾದ ಮೊದಲನೆ ಷರತ್ತೆಂದರೆ ಏಕಾಂಗಿತನ. ಏಕಾಂಗಿತನವನ್ನು ಆಂಶಿಕ ಸಂವೇದನೆಯ ಅಪಹರಣ ಎಂದು ಭಾವಿಸಬಹುದು... ಅವನಿಗೆ ತನ್ನ ಅಂತರಾತ್ಮದ ದನಿಯನ್ನು ಕೇಳುವ, ಅವನ ಆಂತರಿಕ ಸಂಪನ್ಮೂಲಗಳ ಮತ್ತು ಮೂಲ ಪ್ರಕ್ರಿಯೆಯ ಕೆಲವು ಅಭಿವ್ಯಕ್ತಿಗಳ ಜೊತೆ ಸಂಪರ್ಕಿಸಲು ಹೆಚ್ಚು ಅವಕಾಶವಿದೆ. ದುರದೃಷ್ಟವಶಾತ್, ಹರೆಯದವರಿಗೆ ಶಿಕ್ಷಣ ನೀಡಲು ಏಕಾಂಗಿತನವನ್ನು ಶಿಫಾರಸು ಮಾಡುತ್ತಿಲ್ಲ. ಬದಲಿಗೆ, ಗುಂಪುಗೂಡಿಸಿ ಓದುವುದು ಮತ್ತು ಜನಾನುರಾಗಗಳಿಗೆ ಹೆಚ್ಚು ಮನ್ನಣೆ ಕೊಡುತ್ತಾರೆ...

ಒಂಟಿತನವನ್ನು ಯಾತನೆಯ ಒಂಟಿತನವೆಂದಾಗಲಿ, ಬಿಟ್ಟುಹೋಗುವುದು ಎಂದಾಗಲಿ, ಸಂತತವಾದ ಏಕಾಂತವಾಸವೆಂದಾಗಲಿ ತಪ್ಪು ತಿಳಿದುಕೊಳ್ಳಬಾರದು...

ಸೃಷ್ಟಿಶೀಲತೆಯನ್ನು ಉತ್ತೇಜಿಸುವಂತೆ ಕಾಣುವ ಎರಡನೆ ಲಕ್ಷಣವೆಂದರೆ ಈಗಿನ ಅಮೆರಿಕನ್ ಸಂಸ್ಕೃತಿಗೆ ವಿರುದ್ಧವಾದ ಮನೋಭಾವ : ನಿಷ್ಕ್ರಿಯತೆ.

ನಿಷ್ಕ್ರಿಯತೆ ಎಂದರೆ, ಸ್ಕಿಟ್ಸೊಫ್ರೆನಿಕ್ (schizophrenic) ಗ್ಲಾನಿಯಾಗಲಿ, ಕ್ಯಾಟಟೋನಿಯ (Catatonia) ರೋಗದ ನಿಶ್ಚಲತೆಯಾಗಲಿ, ಸೋಮಾರಿಯಾಗಿ ಕಾಲಹರಣ ಮಾಡುವುದಾಗಲಿ ಅಲ್ಲ. ಆದರೆ, ಮಧ್ಯೆ ಮಧ್ಯೆ, ಮುಚ್ಚುಮರೆಯಿಲ್ಲದ ವರ್ತನೆಯ ಮಟ್ಟದಲ್ಲಿ ವ್ಯಕ್ತಿಯು ಏನನ್ನೂ ಮಾಡದಿರಲು ಬಿಡುವುದು. ಒಬ್ಬ ವ್ಯಕ್ತಿಯು ಸದಾ ಬಾಹ್ಯ ಕೆಲಸದ ಮೇಲೆಯೇ

ಗಮನ ಕೊಡಬೇಕಾದಾಗ, ಅವನು ತನ್ನ ಆಂತರಿಕ ಶಕ್ತಿಸಾಮರ್ಥ್ಯಗಳನ್ನು ವಿಸ್ತರಿಸಿಕೊಳ್ಳುವ ಸಾಧ್ಯತೆಯನ್ನು ಕಡಮೆಮಾಡಿಕೊಳ್ಳುತ್ತಾನೆ. ಮತ್ತೆ ಇಲ್ಲಿ, ಅಮೆರಿಕನ್ ಶಿಕ್ಷಣ ತದ್ವಿರುದ್ಧವಾದ ಮನೋಭಾವವನ್ನು ಉತ್ತೇಜಿಸುತ್ತದೆ... ಅತಿಯಾದ ನಿತ್ಯಗಟ್ಟಳೆ ಕಾರ್ಯಚಟುವಟಿಕೆಗಳು ಮಾನಸಿಕ ಚಟುವಟಿಕೆಯನ್ನೂ ಸೃಷ್ಟಿಶೀಲತೆಯನ್ನೂ ಕುಂಠಿತಗೊಳಿಸುತ್ತವೆ.

ಮೂರನೆ ಲಕ್ಷಣವೆಂದರೆ ಹಗಲುಗನಸು ಕಾಣುವುದು... ಹಗಲುಗನಸಿನ ಜೀವನದಲ್ಲಿ ವ್ಯಕ್ತಿಯು ಮಾಮೂಲಿ ಕ್ರಮಗಳಿಂದ ದೂರ ಹೋಗಲು ಮತ್ತು ಅಸಂಬದ್ಧ ಲೋಕಗಳಿಗೆ ಸಣ್ಣ ಪುಟ್ಟ ಪ್ರವಾಸ ಕೈಗೊಳ್ಳಲು ತನಗೆ ತಾನು ಅವಕಾಶ ಮಾಡಿಕೊಡುತ್ತಾನೆ...

ಸೃಷ್ಟಿಶೀಲ ವ್ಯಕ್ತಿಗೆ ಆವಶ್ಯಕವಾದ ಇನ್ನೊಂದು ವಿಷಯವನ್ನು ಒಪ್ಪಿಕೊಳ್ಳುವುದು ಇನ್ನೂ ಕಷ್ಟ. ಅದೆಂದರೆ ಸುಲಭವಂಚನೀಯತೆ. ಕನಿಷ್ಠ ಪಕ್ಷ ತಾತ್ಕಾಲಿಕವಾಗಿಯಾದರೂ ಅಥವಾ ತಪ್ಪು ಎಂದು ಸಾಬೀತಾಗುವವರೆಗೆ ನಮ್ಮ ಹೊರಗಿನ ಮತ್ತು ಒಳಗಿನ ಪ್ರತಿಯೊಂದರಲ್ಲೂ ಕೆಲವು ಮೂಲಭೂತವಾದ ಕ್ರಮಬದ್ಧವಾದ ವ್ಯವಸ್ಥೆಗಳಿವೆ ಎಂದು ಒಪ್ಪಿಕೊಳ್ಳಲು ಇಷ್ಟವಿರುವಿಕೆ ಎಂಬ ಅರ್ಥದಲ್ಲಿ ಈ ಪದವನ್ನು (Gullibility) ಇಲ್ಲಿ ಬಳಸಲಾಗಿದೆ. ಅನೇಕ ವೇಳೆ ಸೃಷ್ಟಿಶೀಲತೆಯೆಂದರೆ ಹೊಸ ಹೊಸ ವಸ್ತುಗಳ ಆವಿಷ್ಕಾರಕ್ಕಿಂತ ಈ ಮೂಲಭೂತವಾದ, ಕ್ರಮಬದ್ಧವಾದ ವ್ಯವಸ್ಥೆಗಳನ್ನು ಕಂಡುಹಿಡಿಯುವುದು ಎಂದರ್ಥ...

ಜಾಗರೂಕತೆ ಮತ್ತು ಶಿಸ್ತು ಇತರ ಆವಶ್ಯಕತೆಗಳು. ಅವು ಒಟ್ಟಿನಲ್ಲಿ ಉತ್ಪಾದಕತೆಗೆ ಪೂರ್ವಭಾವಿಯಾಗಿ ಇರಬೇಕಾದವಾದರೂ, ಸೃಷ್ಟಿಶೀಲತೆಯಲ್ಲಿ ಅವಕ್ಕೆ ಒಂದು ನಿರ್ದಿಷ್ಟವಾದ ಸ್ಥಾನವಿದೆ. ಅನೇಕ ಭಾವೀ ಸೃಷ್ಟಿಶೀಲ ವ್ಯಕ್ತಿಗಳು, ಮುಖ್ಯವಾಗಿ ಕಲಾಕ್ಷೇತ್ರದಲ್ಲಿ, ಕಲ್ಪನಾಶಕ್ತಿ, ಸ್ಫೂರ್ತಿ, ಅಂತರ್ಬೋಧೆ ಮತ್ತು ಪ್ರತಿಭೆಗಳಂಥ ಗುಣಗಳು ಮುಖ್ಯ ಎಂದು ನಂಬುತ್ತಾರೆ. ಅವರು ತಂತ್ರಗಳು, ಶಿಸ್ತು, ಅಥವಾ ತಾರ್ಕಿಕ ಚಿಂತನೆಗಳ ಕಲಿಕೆಯ ನೇಮನಿಷ್ಠೆಗಳಿಗೆ ಮಣಿಯಲು ಹಿಂದೇಟು ಹಾಕುತ್ತಾರೆ. ಇವೆಲ್ಲ ತಮ್ಮ ಸೃಷ್ಟಿಶೀಲತೆಯನ್ನು ನಿರರ್ಥಕಗೊಳಿಸುತ್ತವೆ ಎಂಬ ನೆಪವನ್ನು ಅವರು ಒಡ್ಡುತ್ತಾರೆ... ಈಗ ಚರ್ವಿತಚರ್ವಣವಾಗಿರುವ, ಆದರೆ ಅದರಲ್ಲಿ ತುಂಬ ಸತ್ಯಾಂಶವಿರುವ, ಹಾಸ್ಯಭರಿತವಾದ ಮಾತು ಇದು: ಸೃಷ್ಟಿಶೀಲತೆ ಎಂದರೆ ಶೇಕಡ ಹತ್ತರಷ್ಟು ಸ್ಫೂರ್ತಿ, ಶೇಕಡ ತೊಂಬತ್ತರಷ್ಟು ಬೆವರುವುದು.

## ೨೩. ದೈವಾನುಗ್ರಹಕ್ಕೆ ಯೋಗ್ಯವಾಗಲು ಹೋರಾಟ

ಸೃಷ್ಟಿಶೀಲತೆಯನ್ನು ಪೋಷಿಸುವ ಸಿಲ್ವಾನೋ ಅರಿಪಿಟಿ ವಿವರಿಸಿರುವ, ಈ ಹಂತಗಳೆಲ್ಲವೂ ಧರ್ಮಶಾಸ್ತ್ರದಲ್ಲಿ, ಅಂದರೆ ಮಾನವನ ಆಧ್ಯಾತ್ಮಿಕ ಬೆಳವಣಿಗೆಯ ಶಾಸ್ತ್ರದಲ್ಲಿ, ಬರುವ ಧ್ಯಾನ ಮತ್ತು ಇತರ ಸಾಧನಗಳ ಅವಿಭಾಜ್ಯ ಅಂಗಗಳು. ಇವು ಎಲ್ಲಾ ಜನಾಂಗೀಯ ಧರ್ಮಗಳ ಜಡವಾದ ಔಪಚಾರಿಕ ಧರ್ಮಶ್ರದ್ಧೆಗೆ ವಿರುದ್ಧವಾದುದು.

ಸಾಮಾನ್ಯವಾಗಿ ಬದುಕಿನಲ್ಲಿ, ವಿಶೇಷವಾಗಿ ಆಧ್ಯಾತ್ಮಿಕ ಬದುಕಿನಲ್ಲಿ, ಸಾಧಕನು ದೇವರ ಅನುಗ್ರಹವನ್ನು ಮಾತ್ರವಲ್ಲದೆ ತನ್ನ ಮನಸ್ಸಿನ ಅನುಗ್ರಹವನ್ನೂ ಪಡೆಯುವ ಆವಶ್ಯಕತೆಯಿದೆ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಇದನ್ನು ಒತ್ತಿಹೇಳಲು—ಇದಕ್ಕೆ ತುಂಬ ಒತ್ತುಕೊಡಬೇಕಾದುದು ನಿಜ—ಅವರು ಬಂಗಾಳದ ವೈಷ್ಣವ ಸಂಪ್ರದಾಯದ ಮಾತನ್ನು ಹಾಡುತ್ತಿದ್ದರು:

ಗುರುಕೃಷ್ಣ ವೈಷ್ಣವ್
ತಿನೇರ್ ದಯಾ ಹೋಲೋ

ಏಕೇರ್ ದಯಾ ವಿನೇ
ಜೀವ್ ಛಾರೇಖಾರೇ ಗೇಲೋ

'ಗುರು, ಕೃಷ್ಣ (ದೇವರು) ಮತ್ತು ವೈಷ್ಣವರು—ಈ ಮೂವರ ಕೃಪೆ ನನ್ನ ಮೇಲೆ (ಅಪಾರವಾಗಿ) ಇದೆ. ಆದರೆ ಒಂದರ ಕೃಪೆಯಿಲ್ಲದಿರುವುದರಿಂದ (ಅದೆಂದರೆ ನನ್ನ ಸ್ವಂತ ಮನಸ್ಸು), (ನನ್ನ) ಜೀವನ ನಾಯಿಪಾಲಾಗಿದೆ !

ಆದ್ದರಿಂದ ನೀವು ಚಿಕ್ಕಂದಿನಿಂದಲೂ ವ್ಯಕ್ತಿತ್ವಬಲವನ್ನೂ ಸ್ವಾವಲಂಬನೆಯನ್ನೂ ಶೀಲಬಲ ವನ್ನೂ ಬೆಳೆಸಿಕೊಂಡಾಗ, ನಿಮ್ಮ ಮೇಲೆ ದೈವಾನುಗ್ರಹದ ಗಾಳಿ ಬೀಸುತ್ತದೆ ; ನಿಮ್ಮ ಮನಸ್ಸಿನ ಕೃಪೆಯನ್ನೂ ಪಡೆದು ನೀವು ಹೆಚ್ಚು ಬಲಶೀಲರೂ ಶುದ್ಧರೂ ಆಗುವಿರಿ.

ನೀವು ನಿಮ್ಮ ಶಕ್ತಿಯೆಲ್ಲವನ್ನೂ ಸದಾಕಾಲವೂ ಬೀಸುತ್ತಿರುವ ದೈವಾನುಗ್ರಹವೆಂಬ ಮಂದ ಮಾರುತಕ್ಕೆ ಶರಣಾದಾಗ ಅತ್ಯಂತ ಬಲಿಷ್ಠರಾಗುವಿರಿ. ನಾವು ಆ ದಿವ್ಯ ಅಗ್ನಿಯ ಒಂದು ಕಿಡಿ, ಅಷ್ಟೆ. ನಾವು ದೈವಾನುಗ್ರಹದ ಹಿಂದೆ ಓಡಬೇಕಾಗಿಲ್ಲ, ಅದಕ್ಕಾಗಿ ಹಂಬಲಿಸಬೇಕಾಗಿಲ್ಲ ; ನಾವು ದೈವಾನುಗ್ರಹಕ್ಕೆ ಯೋಗ್ಯವಾಗಿರಬೇಕು, ಅಷ್ಟೆ. ಈ ದೈವಾನುಗ್ರಹಯೋಗ್ಯತೆಯು ಸ್ವಾವಲಂಬನೆ, ಕಷ್ಟಪಟ್ಟು ದುಡಿಯುವುದು, ನೈತಿಕ ಶಕ್ತಿಗಳ ಮೂಲಕ ಪೌರುಷವನ್ನು ಸಂಪಾದಿಸುವುದರಿಂದ ಬರುತ್ತದೆ. ಇದು ನಮ್ಮನ್ನು ಸಂಪೂರ್ಣ ಶರಣಾಗತಿ ಅಥವಾ ಪ್ರಪತ್ತಿ ಎಂಬ ಅಂತಿಮ ಆಧ್ಯಾತ್ಮಿಕ ಕ್ರಾಂತಿಗೆ ಹತ್ತಿರ ಹತ್ತಿರ ಕೊಂಡೊಯ್ಯುತ್ತದೆ.

ಮನಸ್ಸು ತಮೋಗುಣ ಮತ್ತು ರಜೋಗುಣಗಳಿಂದ ಆವರಿಸಿದ್ದರೆ, ಆಗ ಮಾಡುವ ಶರಣಾಗತಿಯು ಅಪ್ಪಟವಾದುದಲ್ಲ. ಆಗ ದೇವರಿಗೆ ಶ್ರದ್ಧಾಭಕ್ತಿಗಳಿಂದ ಪುರುಷಕಾರ ಅಥವಾ ಸ್ವಾವಲಂಬನೆಯನ್ನು ಅನುಸರಿಸುವುದು ಅತ್ಯುತ್ತಮ. ಆದರೆ, ಮನಸ್ಸು ಸತ್ತ್ವಗುಣದ ಮಟ್ಟಕ್ಕೆ ಏರಿದಾಗ, ಅಥವಾ ಸತ್ತ್ವಪ್ರಧಾನವಾದ ರಜೋಗುಣದ ಮಟ್ಟಕ್ಕೆ ಏರಿದರೂ, ಅದಕ್ಕೆ ಶರಣಾಗತಿಯ ಶಕ್ತಿ, ದೈವಾನುಗ್ರಹವನ್ನು ಆಸ್ವಾದಿಸುವ ಶಕ್ತಿ ಬರುತ್ತದೆ. ಈ ಹಂತದಲ್ಲೇ ಭಕ್ತಿಯು ಅತ್ಯಂತ ಶುದ್ಧ ವಾಗಿ ಉತ್ತಮವಾಗಿ ಶೋಭಿಸುತ್ತದೆ ; ಮತ್ತು ಮಾನವಜೀವನವು ಸಹಜತೆಯ ಅನಾಯಾಸತೆಯ ಮಟ್ಟವನ್ನು ತಲುಪುತ್ತದೆ. ನವಯೋಗೀಂದ್ರರು ಭಾಗವತೋತ್ತಮರ—ಅಂದರೆ ಭಕ್ತರಲ್ಲೆಲ್ಲ ಶ್ರೇಷ್ಠ ರಾದವರ—ಸ್ವರೂಪವನ್ನು ವರ್ಣಿಸುವಾಗ ಅಂಥ ಜೀವನದ ಸುಂದರ ಚಿತ್ರಣವನ್ನು ಶ್ರೀಮದ್ಭಾಗವತವು ಕೊಡುತ್ತದೆ (XI. ೨.೪೫-೫೨) :

ಸರ್ವಭೂತೇಷು ಯಃ ಪಶ್ಯೇತ್
ಭಗವದ್ಭಾವಂ ಆತ್ಮನಃ
ಭೂತಾನಿ ಭಗವತ್ಯಾತ್ಮನಿ
ಏಷ ಭಾಗವತೋತ್ತಮಃ

'ಯಾರು ಎಲ್ಲಾ ಜೀವಿಗಳಲ್ಲೂ ಇರುವ ಆತ್ಮನೇ ಭಗವಂತನೆಂದೂ, ಜೀವಿಗಳೆಲ್ಲ ಭಗವಂತನ ಆತ್ಮವೆಂದೂ ಭಾವಿಸುವರೋ ಅವರೇ ಭಗವಂತನ ಶ್ರೇಷ್ಠ ಭಕ್ತರು (ಭಾಗವತೋತ್ತಮರು).'

ಈಶ್ವರೇ ತದಧೀನೇಷು
ಬಾಲಿಶೇಷು ದ್ವಿಷತ್ಸು ಚ
ಪ್ರೇಮ ಮೈತ್ರಿ ಕೃಪೋಪೇಕ್ಷಾ
ಯಃ ಕರೋತಿ ಸ ಮಧ್ಯಮಃ

'ಯಾರು ಭಗವಂತನ ಬಗ್ಗೆ ಪ್ರೇಮವನ್ನೂ, ಭಗವದ್ಭಕ್ತರ ಬಗ್ಗೆ ಸ್ನೇಹವನ್ನೂ, ಬಾಲಿಶರಾದವರ ಬಗ್ಗೆ—ಅಂದರೆ ಅಜ್ಞರ ಬಗ್ಗೆ—ಅನುಕಂಪವನ್ನೂ, ಶತ್ರುಗಳ ಬಗ್ಗೆ ಔದಾಸೀನ್ಯವನ್ನೂ ತೋರುವರೋ

ಅವರು ಮಧ್ಯಮ ದರ್ಜೆಯ ಭಕ್ತರು.'

ಅರ್ಚಾಯಾಂ ಏವ ಹರಯೇ
ಪೂಜಾಂ ಯಃ ಶ್ರದ್ಧಯೇಹತೇ
ನ ತದ್ ಭಕ್ತೇಷು ಚಾನ್ಯೇಷು
ಸ ಭಕ್ತಃ ಪ್ರಾಕೃತಃ ಸ್ಮೃತಃ

'ಯಾರು ಶ್ರದ್ಧೆಯಿಂದ ವಿಗ್ರಹ ಅಥವಾ ಪ್ರತಿಮೆ ಇಟ್ಟುಕೊಂಡು ಹರಿಯನ್ನು (ಒಳಗಿರುವ ದೇವರು) ಪೂಜಿಸುವರೋ, ಮತ್ತು ಹರಿಭಕ್ತರನ್ನಾಗಲಿ ಇತರರನ್ನಾಗಲಿ ಪೂಜಿಸುವುದಿಲ್ಲವೋ ಅವರು ಸಾಧಾರಣ ಭಕ್ತರು.'

ಗೃಹೀತ್ವಾಪೀಂದ್ರಿಯೈರರ್ಥಾನ್
ಯೋ ನ ದ್ವೇಷ್ಟಿ ನ ಹೃಷ್ಯತಿ
ವಿಷ್ಣೋರ್ಮಾಯಾಂ ಇದಂ ಪಶ್ಯನ್
ಸ ವೈ ಭಾಗವತೋತ್ತಮಃ

'ಯಾರು ತನ್ನ ಇಂದ್ರಿಯಗಳಿಂದ ಈ ಜಗತ್ತಿನ ವಸ್ತುಗಳನ್ನು ಅನುಭವಿಸುತ್ತಾ, ದ್ವೇಷಿಸದೆ ಹರ್ಷಿಸದೆ, ಈ ಜಗತ್ತು ವಿಷ್ಣುವಿನ ಮಾಯೆಯೆಂದು ಬಗೆಯುತ್ತಾರೋ ಅವರೇ ಭಾಗವತೋತ್ತಮರು.'

ದೇಹೇಂದ್ರಿಯ ಪ್ರಾಣ ಮನೋಧಿಯಾಂ ಯೋ
ಜನ್ಮಾಪ್ಯಯ ಕ್ಷುದ್ಭಯತರ್ಷಕೃಚ್ಛ್ರೈಃ
ಸಂಸಾರಧರ್ಮೈಃ ಅವಿಮುಹ್ಯಮಾನಃ
ಸ್ಮೃತ್ಯಾ ಹರೇಃ ಭಾಗವತಪ್ರಧಾನಃ

'ಜನನ, ಮರಣ, ಹಸಿವು, ಬಾಯಾರಿಕೆ, ಭಯ, ತೃಷ್ಣೆ, ಮತ್ತು ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು ಮತ್ತು ಬುದ್ಧಿಗಳಿಗೆ ತಗಲುವ ಕಷ್ಟಗಳ ಬಗ್ಗೆ ಮೋಹಕ್ಕೊಳಗಾಗದೆ ಸಂತತವಾಗಿ ಹರಿಯನ್ನು ನೆನೆಯುವವನೇ ಪ್ರಧಾನ ಭಕ್ತ.'

ನ ಕಾಮಕರ್ಮಬೀಜಾನಾಂ
ಯಸ್ಯ ಚೇತಸಿ ಸಂಭವಃ
ವಾಸುದೈವೈಕನಿಲಯಃ
ಸ ವೈ ಭಾಗವತೋತ್ತಮಃ

'ಯಾರು ವಾಸುದೇವ (ಹರಿ)ನೊಬ್ಬನಲ್ಲೇ ನೆಲೆಯಾಗಿರುವನೋ, ಯಾರ ಮನಸ್ಸಿನಲ್ಲಿ ಕಾಮ ಕರ್ಮಬೀಜಗಳು ಹುಟ್ಟುವುದಿಲ್ಲವೋ ಅವನೇ ಭಾಗವತೋತ್ತಮನು.'

ನ ಯಸ್ಯ ಜನ್ಮಕರ್ಮಾಭ್ಯಾಂ
ನ ವರ್ಣಾಶ್ರಮಜಾತಿಭಿಃ
ಸಜ್ಜತೇಽಸ್ಮಿನ್ ಅಹಂಭಾವೋ
ದೇಹೇ ವೈ ಸ ಹರೇಃ ಪ್ರಿಯಃ

'ಯಾವನಿಗೆ ಈ ದೇಹಸಂಬಂಧವಾದ ಹುಟ್ಟು, ಕರ್ಮಗಳು, ವರ್ಣಾಶ್ರಮಜಾತಿಗಳಿಂದ ಅಹಂಭಾವ ಬರುವುದಿಲ್ಲವೋ ಅವನೇ ನಿಜವಾಗಿ ಹರಿಗೆ ಪ್ರಿಯನಾದವನು.'

ನ ಯಸ್ಯ ಸ್ವಃ ಪರ ಇತಿ
ಚಿತ್ತೇ ಸ್ವಾತ್ಮನಿ ವಾ ಭಿದಾ

ಸರ್ವಭೂತಸಮಃ ಶಾಂತಃ
ಸ ವೈ ಭಾಗವತೋತ್ತಮಃ

'"ಇವನು ತನ್ನವನು, ಇವನು ಹೊರಗಿನವನು" ಎಂಬ ಭೇದವನ್ನು ಯಾವನು ಮಾಡುವುದಿಲ್ಲವೋ, ಮತ್ತು ಎಲ್ಲಾ ಜೀವಿಗಳನ್ನೂ ಸಮಾನ ಮನಸ್ಸಿನಿಂದ ನೋಡಿ ಶಾಂತವಾಗಿರುವನೋ ಅವನೇ ಭಾಗವತೋತ್ತಮನು.'

ಪ್ರತಿಯೊಬ್ಬ ಭಕ್ತನೂ ಭಕ್ತೆಯೂ ತನಗೆ ದೈವಾನುಗ್ರಹ ಲಭಿಸುತ್ತದೆಂಬ ಸತ್ಯವನ್ನು ಸರಿಯಾಗಿ ಅರಿತಾಗ ಅವನಲ್ಲಿ ಅಥವಾ ಅವಳಲ್ಲಿ ಸ್ಫೂರ್ತಿ ತುಂಬುತ್ತದೆ. ದೈವಾನುಗ್ರಹದ ಪ್ರವಾಹವು ಭಕ್ತನನ್ನು ಆವರಿಸುವವರೆಗೆ ಸ್ವಪ್ರಯತ್ನ ಮತ್ತು ಭಗವದನುಗ್ರಹಗಳು ಸುಂದರವೂ ಸಹಜವೂ ಫಲಪ್ರದವೂ ಆದ ಹದದಲ್ಲಿ ಬೆರೆತು, ಅಲ್ಲಿಂದ ಮುಂದೆ ಜೀವನದಲ್ಲಿ ಅವನನ್ನು ಅಥವಾ ಅವಳನ್ನು ಕೊಂಡೊಯ್ಯುತ್ತದೆ.

ಧರ್ಮವು ಸಂಪೂರ್ಣ ಮಾನವವಿಕಾಸದ ವಿಜ್ಞಾನವೆಂದು ಜನರು ಸರಿಯಾಗಿ ಅರ್ಥಮಾಡಿಕೊಂಡಾಗ, ಮಾನವನ ಬಾಹ್ಯ ಜೀವನ ಮತ್ತು ಮಾನವನ ಆಂತರಿಕ ಜೀವನಗಳ ನಡುವೆ ಅಗಾಧ ಅಂತರವಿಲ್ಲ. ಮಾನವನ ಲೌಕಿಕ ಜೀವನ ಮತ್ತು ಆಧ್ಯಾತ್ಮಿಕ ಜೀವನಗಳ ನಡುವೆ ಅಂತರವಿಲ್ಲ ಎಂದು ಅವರು ಅರಿತುಕೊಳ್ಳುತ್ತಾರೆ. ಬಾಹ್ಯ ಮತ್ತು ಆಂತರಿಕ ಎಂಬವು ಕೇವಲ ಔಪಚಾರಿಕ ಪದಗಳು. ಬದುಕಿಗೆ ಅಥವಾ ಸತ್ಯಕ್ಕೆ ಇಂಥ ಭೇದ ಇಲ್ಲ. ಬಾಹ್ಯವಾದದ್ದು ಆಂತರಿಕವೂ ಹೌದು. 'ನಾರಾಯಣ, (ಒಳಗೆ ವಾಸಿಸುವ ದೇವರು)' ಮಾನವನ ಮತ್ತು ವಿಶ್ವದ ಒಳಗೂ ಹೊರಗೂ ತುಂಬಿಕೊಂಡು ಇದ್ದಾನೆ ಎಂದು ನಾರಾಯಣೋಪನಿಷತ್ತು ಹೇಳುತ್ತದೆ:

ಅಂತಃ ಬಹಿಶ್ಚ ತತ್ ಸರ್ವಂ
ವ್ಯಾಪ್ಯ ನಾರಾಯಣಃ ಸ್ಥಿತಃ

ಆದ್ದರಿಂದ ನೀವು ಜಗತ್ತಿನಲ್ಲಿ ಕೆಲಸಮಾಡುತ್ತಿರುವಾಗ ನಾರಾಯಣನ ಒಳಗೆ ಮತ್ತು ಮೂಲಕವೇ ಕೆಲಸಮಾಡುತ್ತಿರುತ್ತೀರಿ. ನೀವು ನಿಜವಾಗಿ ಅವನಿಂದ ಹೊರಗೆ ಇಲ್ಲ. ಭಗವಂತನು ವಿಶ್ವಾತೀತ ಮತ್ತು ವಿಶ್ವವ್ಯಾಪಿ (ಸರ್ವಾಂತರ್ಯಾಮಿ)ಎರಡೂ ಆಗಿದ್ದಾನೆ. ಅವನು ಒಳಗೂ ಹೊರಗೂ ಇದ್ದಾನೆ. ಶ್ರೀ ರಾಮಕೃಷ್ಣರು ವಿವೇಕಾನಂದರಿಗೆ ಹೀಗೆ ಹೇಳಿದರು : 'ದೇವರನ್ನು ಕಣ್ಣು ಮುಚ್ಚಿಕೊಂಡು ಮತ್ತು ಕಣ್ಣುತೆರೆದು ನೋಡುವುದನ್ನು ಕಲಿ. ಕಣ್ಣು ಮುಚ್ಚಿಕೊಂಡು ಧ್ಯಾನದಲ್ಲೂ, ಕಣ್ಣು ಬಿಟ್ಟುಕೊಂಡು ಕೆಲಸಮಾಡುವಾಗ ಮತ್ತು ಅಂತರ-ಮಾನವ ಸಂಬಂಧಗಳಲ್ಲೂ ಭಗವಂತನನ್ನು ಕಾಣು.'

## ೨೪. ಉಪಸಂಹಾರ

ಆದ್ದರಿಂದ, ಒಬ್ಬನ ಜೀವನದ ಆರಂಭದ ಹಂತಗಳಲ್ಲಿ, ಲೋಕದಲ್ಲಿ ವ್ಯವಹರಿಸುತ್ತಿರುವಾಗಲೇ ವಾಸ್ತವವಾಗಿ ಅವನು ಭಗವಂತನ ಸಂಪರ್ಕ ಹೊಂದಿರುತ್ತಾನೆ. ಅವಳಿಗೆ ಅಥವಾ ಅವನಿಗೆ ಅದು ಗೊತ್ತಿರುವುದಿಲ್ಲ. ಆದರೆ ಆ ಜಾಗೃತಿಯು ಅವನು ಅಥವಾ ಅವಳು ಜೀವನದಲ್ಲಿ ಹೇಗೆ ವ್ಯವಹರಿಸುತ್ತಾರೆ ಎಂಬುದನ್ನು ಅವಲಂಬಿಸಿ ಅದು ಗೋಚರವಾಗುತ್ತದೆ. ಒಬ್ಬನು ಸ್ವಾವಲಂಬನೆ ಮತ್ತು ಸ್ವಪ್ರಯತ್ನಗಳಿಂದ ಪಡೆದ ಮಹಾಬಲವು ಇನ್ನೂ ಹೆಚ್ಚಿನ ಮಹಾಬಲವನ್ನು—ಆ ಹೆಚ್ಚಿನ ಮಹಾಬಲವೆಂದರೆ ಭಗವಂತನಿಗೆ ಶರಣಾಗುವುದು—ಪಡೆದಾಗ ಈ ಸತ್ಯ ಪೂರ್ತಿಯಾಗಿ ಗೋಚರವಾಗುವುದು. ಶರಣಾಗತಿಯು ಪರಮ ವಿಜಯವಾಗುವುದು ಇದೊಂದೇ ಸಂದರ್ಭದಲ್ಲಿ. ದೈವಾನುಗ್ರಹವೆಂಬ ಮಂದಮಾರುತವು ಜೀವನದ ಜಲರಾಶಿಯ ಮೇಲೆ ಅವನ ಅಥವಾ ಅವಳ ವ್ಯಕ್ತಿತ್ವದ

ನಾವೆಯನ್ನು ನಿಧಾನವಾಗಿ ಹೊತ್ತು ಪೂರ್ಣ ಸಾರ್ಥಕತೆಯತ್ತ ಸಾಗಿಸುತ್ತಿದೆಯೆಂಬ ಜ್ಞಾನ ಪ್ರಾಪ್ತವಾಗುತ್ತದೆ. ಸ್ವಶರಣಾಗತಿಯಾದ ಮೇಲೂ ಬದುಕು ಮತ್ತು ಕ್ರಿಯೆ ಮುಂದುವರಿಯುತ್ತವೆ ಎಂದು ಅರ್ಥ. ಆದರೆ ಈಗ, ಸಹಜವಾಗಿ, ಸ್ವಾಭಾವಿಕವಾಗಿ ಮತ್ತು ಅನಾಯಾಸವಾಗಿ ಮತ್ತು ಭಗವಂತನ ಸಾಧನವಾಗಿ ಮತ್ತು ಲೋಕಕಲ್ಯಾಣಕ್ಕಾಗಿ ಮುಂದುವರಿಯುತ್ತವೆ.

ಆದ್ದರಿಂದ, ವೇದಾಂತದಲ್ಲಿ ಹೀಗೆ ಹೇಳಿದೆ : ಭಗವಂತನತ್ತ ತಿರುಗಬೇಕಾದರೆ ಅಥವಾ ಮೋಕ್ಷಾಕಾಂಕ್ಷಿಯಾಗಬೇಕಾದರೆ ಮಾನವನಿಗೆ ಭಗವತ್‌ಕೃಪೆ ಆವಶ್ಯಕ. ದೈವಾನುಗ್ರಹದಿಂದ ಮಾತ್ರ ನಿಮಗೆ ಆಧ್ಯಾತ್ಮಿಕತೆಯ ಪ್ರವೃತ್ತಿ ಈ ಉಂಟಾಗುತ್ತದೆ. ಫ್ರಾನ್ಸ್‌ನ ೧೭ ನೆ ಶತಮಾನದ ಗಣಿತಜ್ಞನೂ ಅನುಭಾವಿಯೂ ಆದ ಬ್ಲೈಸ್ ಪಾಸ್ಕಲನು, ಏಸುವು ತನಗೆ ಹೀಗೆ ಹೇಳಿದಂತೆ ಭಾವಿಸಿದರು (ಪೆನ್ಸೀಸ್, ಡಟನ್ ಪೇಪರ್ ಬ್ಯಾಕ್ ಆವೃತ್ತಿ , ಪು. ೧೫೦—೫೭)

*ನೀನು ನಿನ್ನ ಹೇಸಿಗೆ(ಪಾಪ)ಗಳನ್ನು ಪ್ರೀತಿಸುವುದಕ್ಕಿಂತ ನಾನು ನಿನ್ನನ್ನು ಹೆಚ್ಚು ಗಾಢವಾಗಿ ಪ್ರೀತಿಸುತ್ತೇನೆ....*

*ನೀನು ನನ್ನನ್ನು ಹೊಂದಿಲ್ಲದಿದ್ದರೆ, ನೀನು ನನ್ನನ್ನು ಅರಸುತ್ತಿರಲಿಲ್ಲ. ಆದ್ದರಿಂದ ಕ್ಲೇಶ ಪಡಬೇಡ.*

ಅರಸುವುದೂ ಕಾಣುವುದೇ. ಏಕೆಂದರೆ, ಯಾವುದನ್ನು ಅರಸುತ್ತೇವೋ ಅದು ನಮ್ಮೊಳಗಿರುವ ಪರಮ ಸತ್ಯ. ಮಾನವಜೀವನದಲ್ಲಿ ಭಗವತ್ಕೃಪೆ ಕೆಲಸಮಾಡುವುದು ಹೇಗೆ. ಪೂರ್ಣ ಶರಣಾಗತಿಯಿಂದ ದೈವತ್ವದ ಬಲಕ್ಕೆ ಅಥವಾ ಸಂತತ್ವದ ಬಲಕ್ಕೆ ಒಯ್ಯುವ ಪುರುಷಕಾರ (ಪುರುಷಪ್ರಯತ್ನ)ದ ಬಲದಿಂದ ನಾವು ಆಧ್ಯಾತ್ಮಿಕವಾಗಿ ಪಕ್ವವಾದಾಗ ಮಾತ್ರ ಅದನ್ನು ಪೂರ್ತಿಯಾಗಿ ಅರಿಯುತ್ತೇವೆ. ಆಮೇಲೆ, ಆ ಎತ್ತರದಿಂದ ಅವನು ಹೇಳಬಹುದು : "ನನ್ನ ಕಾರ್ಯ ಮುಗಿಯಿತು. ನನಗೀಗ ಸತ್ಯಾಂಶವೇನೆಂಬುದು ಗೊತ್ತಾಗಿದೆ : ಪ್ರತಿಯೊಂದೂ ಭಗವತ್ಕೃಪೆಯೇ ಆಗಿತ್ತು ಮತ್ತು ಆಗಿದೆ" ದೈವಾನುಗ್ರಹಪೂರಿತ ಮಾನವನ ಆಧ್ಯಾತ್ಮಿಕ ಜೀವನದಲ್ಲಿ ವೈಯಕ್ತಿಕ ಪ್ರಯತ್ನ ಮತ್ತು ದೈವಕ್ಕೆ ಶರಣಾಗತಿಗಳು ಮೊದಲನೆ ಮತ್ತು ಅನಂತರದ ಹಂತಗಳು.

ನಾನು ನಿಮಗೆಲ್ಲ ನಿಮ್ಮ ಆಧ್ಯಾತ್ಮಿಕ ಶಿಕ್ಷಣ, ಬೆಳವಣಿಗೆ ಮತ್ತು ವಿಕಾಸಗಳಲ್ಲಿ—ಪುರುಷಕಾರದಿಂದ ದೈವತ್ವಕ್ಕೆ, ಪುರುಷಕಾರದಿಂದ ಸಂತತ್ವಕ್ಕೆ ವಿಕಾಸಗೊಳ್ಳುವಲ್ಲಿ—ಸಂಪೂರ್ಣ ಯಶಸ್ಸನ್ನು ಕೋರುತ್ತೇನೆ. ಅದು ಜೀವನದ ಪೂರ್ಣ ತತ್ತ್ವ ; ಅದೇ ಗೀತೆಯ ಯೋಗ.

ಅನು : ಬಾ. ವೇ. ಶ್ರೀಧರ

೨೧

# ವೇದಾಂತ ಮತ್ತು ಯೋಗದ ಬೆಳಕಿನಲ್ಲಿ ಪ್ರಜ್ಞಾವಿಜ್ಞಾನ*

## ೧. ಪೀಠಿಕೆ

ನಾಲ್ಕು ಸಾವಿರ ವರ್ಷಗಳಷ್ಟು ಹಿಂದೆಯೇ ಪ್ರಜ್ಞೆಯನ್ನು ಕುರಿತ ಅಧ್ಯಯನವು ಭಾರತದ ಋಷಿಗಳ ಗಮನವನ್ನು ಸೆಳೆದಿತ್ತು. ಮನುಷ್ಯ ಮತ್ತು ಪ್ರಕೃತಿಗಳ ವಿಷಯವಾಗಿ ಸತ್ಯಾಂಶವನ್ನು ತಿಳಿಯಲು ಅವರು ಈ ಅಧ್ಯಯನವನ್ನು ವೈಜ್ಞಾನಿಕವಾಗಿ ಶೋಧಿಸುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರು.

## ೨. ಸತ್ಯಾನ್ವೇಷಣೆ ಮತ್ತು ಸರಳೀಕರಣ ಪದ್ಧತಿ : ಇವುಗಳ ವೈರುಧ್ಯ

ಇಂದಿನ ವೈಜ್ಞಾನಿಕ ಯುಗದಲ್ಲಿ ಪ್ರಜ್ಞೆಯನ್ನು ಕುರಿತ ಅಧ್ಯಯನ ಪಾಶ್ಚಾತ್ಯ ತತ್ತ್ವಜ್ಞಾನಿಗಳ ಹಾಗೂ ಪಾಶ್ಚಾತ್ಯ ಭೌತಶಾಸ್ತ್ರಜ್ಞ ಮತ್ತು ಪ್ರಾಣಿಶಾಸ್ತ್ರಜ್ಞರ ಗಮನವನ್ನು ಆಳವಾಗಿ ಸೆಳೆದಿರುವುದು ಮಹತ್ತ್ವದ ಸಂಗತಿಯಾಗಿದೆ. ಇಪ್ಪತ್ತನೆಯ ಶತಮಾನದ ತನಕ ಪ್ರಜ್ಞೆಯು ವೈಜ್ಞಾನಿಕ ಅಧ್ಯಯನಕ್ಕೆ ಅರ್ಹವಾದದ್ದು ಎಂಬ ಅಂಶವನ್ನು ಆಧುನಿಕ ವಿಜ್ಞಾನಿಗಳು ಅವಗಣಿಸಿದ್ದರು. ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳಲ್ಲಿ ಬಾಹ್ಯಭೌತಿಕ ಪ್ರಕೃತಿಯ ಶೋಧನೆಯಿಂದ ಕಂಡು ಬಂದ ಅವ್ಯಾಹತ ಯಶಸ್ಸು ಅನೇಕ ವಿಜ್ಞಾನಿಗಳ ಮೇಲೆ ಪ್ರಭಾವಬೀರಿ ವಸ್ತುನಿಷ್ಠ ಲೋಕದ್ರವ್ಯ ಮತ್ತು ಭೌತಿಕ ಘಟಕಗಳೇ ಸತ್ಯವೆಂದು ಪರಿಗಣಿಸುವಂತೆ ಮಾಡಿದುವು, ಹಾಗೂ ಮನಸ್ಸು ಮತ್ತು ಪ್ರಜ್ಞೆಗಳು ಕೂಡ ಇವುಗಳಿಂದಲೇ ಉಂಟಾಗುತ್ತವೆ ಮತ್ತು ಇವುಗಳ ರೂಪಗಳೇ ಎಂದು ಪರಿಗಣಿಸಲಾಗುತ್ತಿತ್ತು. ಕೆಲವರು ಮನಸ್ಸನ್ನು ಸಂಪೂರ್ಣ ತಿರಸ್ಕರಿಸಿ ಮಿದುಳಿನ ಬಗೆಗೆ ಮಾತ್ರ ಚಿಂತಿಸುತ್ತಿದ್ದರು. ಕ್ವಾಂಟಮ್ ಭೌತಶಾಸ್ತ್ರ, ಮತ್ತು ಜೀವಶಾಸ್ತ್ರಗಳಲ್ಲಿ ಇಂದು ಕ್ರಾಂತಿಕಾರಕ ಬದಲಾವಣೆಗಳಾಗಿವೆ ಮತ್ತು ಅಭಿಜಾತ ವಿಜ್ಞಾನಿಗಳು ತಿಳಿದಿದ್ದಂತೆ, ವಸ್ತುನಿಷ್ಠ ಜಗತ್ತು ವಸ್ತುನಿಷ್ಠವಾಗಿ ಪರಿಗಣಿತವಾಗುತ್ತಿಲ್ಲ ನಿಜ. ಆದರೂ ಪ್ರಜ್ಞೆಯ ಬಗೆಗಿನ ಹಿಂದಿನ ಭಾವನೆಗಳು ಇಂದಿಗೂ ಅನೇಕ ವಿಜ್ಞಾನಿಗಳ ಮೇಲೆ ಪ್ರಭಾವ ಬೀರುತ್ತಿದೆ. ಇಂದಿನ ಅನೇಕ ವಿಜ್ಞಾನಿಗಳು ಅತಿಸರಳೀಕೃತ (ರಿಡಕ್ಷನಿಸ್ಟ್) ಪದ್ಧತಿಯನ್ನು ಅವೈಜ್ಞಾನಿಕ ಎಂದು ಟೀಕಿಸಲು, ತಿರಸ್ಕರಿಸಲು ಆರಂಭಿಸಿದ್ದಾರೆ. ಬರ್ನಾರ್ಡ್ ಡಿ 'ಎಸ್ಪನಾಟ್' ಎಂಬ ಭೌತಶಾಸ್ತ್ರಜ್ಞನು ಈ ರಿಡಕ್ಷನಿಸ್ಟ್ ಪದ್ಧತಿಯನ್ನು ಮಲ್ಟಿಟ್ಯೂಡಿನಿಸ್ಟ್ ಪದ್ಧತಿ, ಅಂದರೆ ಬಹು ಘಟಕ ವಾದಿಯ ವಿಧಾನ ಎಂದು ಕರೆದಿದ್ದಾನೆ ಇದರಿಂದ ಜನತೆಗೆ ವಿಜ್ಞಾನದ ಬಗೆಗೇ ಅವಗಣನೆಯ ಭಾವ ಬಂದೀತು ಎಂದು ಎಚ್ಚರಿಸಿದ್ದಾನೆ. ಹಾಗಾದಲ್ಲಿ, ಶುದ್ಧ ವಿಜ್ಞಾನಕ್ಕೆ ಒಂದು

*೧೯೮೭ ಜನವರಿ ಒಂದರಂದು ಬೆಂಗಳೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಅಂಡ್ ನ್ಯೂರೋಸೈನ್ಸಸ್‌ನಲ್ಲಿ ಏರ್ಪಡಿಸಿದ್ದ 'ಯೋಗ, ಮಿದುಳು ಮತ್ತು ಪ್ರಜ್ಞೆ' ಎಂಬ ವಿಚಾರ ಸಂಕಿರಣದಲ್ಲಿ ನೀಡಿದ ಉಪನ್ಯಾಸ.

ದುರಂತ ಎಂದು ಹೇಳಬೇಕಾಗುತ್ತದೆ. ಭಾರತದ ಪ್ರಾಚೀನ ಪ್ರಜ್ಞಾಶಾಸ್ತ್ರವು ಮಾನವತೆಯ ಶ್ರೇಷ್ಠ ಶೋಧನೆಗಳಲ್ಲಿ ಒಂದಾಗಿದೆ. ಬರ್ನಾರ್ಡನು ತನ್ನ Quantum Logic and Non-separability ಎಂಬ ಲೇಖನದಲ್ಲಿ ಈ ವಿಷಯವಾಗಿ ಹೇಳಿರುವ ಸಂಗತಿಗಳು ಇಲ್ಲಿ ಸಾಂದರ್ಭಿಕವಾಗಿವೆ (The Physicist's Conception of Nature : ಸಂಪಾದಕರು : ಜಗದೀಶ್ ಮೆಹರಾ ಪು. ೭೩೦) :

ಈ ಭಾವನೆಯ ಪ್ರಕಾರ ಆತ್ಯಂತಿಕ ಸತ್ಯವು ಅಸಂಖ್ಯ ಪ್ರಾಥಮಿಕ ಘಟನೆಗಳಿಂದ ಮತ್ತು / ಅಥವಾ ಸೂಕ್ಷ್ಮಾಣು ವಸ್ತುಗಳಿಂದ ಘಟಿತವಾಗಿರುತ್ತದೆ. ಇವುಗಳಲ್ಲಿ ಪ್ರತಿಯೊಂದೂ ಸರಳ ಲಕ್ಷಣಗಳಿಂದ ಕೂಡಿರುತ್ತದೆ. ಹೀಗಿರುವುದರಿಂದ ಅವೆಲ್ಲವುಗಳ ಮುಖಾಮುಖಿ— ಇವುಗಳನ್ನು ಸ್ಥಾನಿಕ ಮತ್ತು ಕಾರಣಾರ್ಥಕಗಳೆಂದು ಪರಿಗಣಿಸಬಹುದು-ಯೊಂದಿಗೆ ಅದೃಷ್ಟವನ್ನು ಸೇರಿಸಿದಾಗ ಬಾಹ್ಯ ತೋರಿಕೆಯ ಸಂಕೀರ್ಣತೆಯ ಜಗತ್ತು ಉಂಟಾಗುತ್ತದೆ. ವೈಜ್ಞಾನಿಕ ಚಿಂತನೆಗೆ ಇದೊಂದು ಉಪಕರಣ ಎಂದು ಭಾವಿಸಿದರೆ ಈ ಭಾವನೆಯು ಅನುಕೂಲಕರವಾಗುತ್ತದೆ. ಈ ಕಾರಣ ದಿಂದಲೇ ಸಾಮಾನ್ಯವಾಗಿ ಇದರ ಜಾಡನ್ನು ಹಿಡಿದೇ ವಿವರಗಳನ್ನು ನೀಡಲಾಗುತ್ತದೆ. ಆದರೆ ಇದನ್ನು ಒಂದು ಪ್ರಯೋಜನಕಾರಿ 'ಮಾದರಿ' ಯನ್ನಾಗಿ ಮಾತ್ರ ಇರಿಸಿಕೊಳ್ಳದೆ ಪರಿವರ್ತಿಸುವ ಪ್ರವೃತ್ತಿಯುಂಟಾಗುತ್ತದೆ. ಅಂದರೆ ಇದರಿಂದ ಬಹು ಘಟಕಗಳ ಮೂಲತತ್ತ್ವವಾದಕ್ಕೆ ಅಂಟಿಕೊಳ್ಳುವ ಮನಸ್ಸಾಗುತ್ತದೆ. ಅಂದರೆ ನಮ್ಮ ಒಳಗಿನ ಮತ್ತು ಹೊರಗಿನ ಸತ್ಯವನ್ನು ಪ್ರಾಥಮಿಕ ದ್ರವ್ಯಕಣಗಳ ಯಾಂತ್ರಿಕ ಕ್ರಿಯೆಗೆ ಇಳಿಸಿದಂತಾಗುತ್ತದೆ. ನಿಜ ಹೇಳಬೇಕೆಂದರೆ ಅನೇಕ ವಿಜ್ಞಾನಿಗಳು, (ಅದರಲ್ಲೂ ಮೀಮಾಂಸಕರಲ್ಲದವರು!) ಕೆಲವು ಸಣ್ಣಪುಟ್ಟ ವಿನಾಯಿತಿ ಗಳೊಂದಿಗೆ, ಈ ಜಾಡು ಹಿಡಿದಿರುವಂತೆ ಕಾಣುತ್ತದೆ. ಅವರಲ್ಲನೇಕರಿಗೆ ಇದು ಅನುಷ್ಠಾನಕ್ಕೆ ಪ್ರಯೋಜನಕಾರಿಯಯಾದುದು ಎಂಬ ವಾದವು ನಿಸ್ಸಂಶಯವಾಗಿ ಮಹತ್ತ್ವದ್ದು. ಇನ್ನೊಂದು ಕಡೆ ಕ್ವಾಂಟಮ್ ಮೆಕಾನಿಕ್ಸ್ ಬಂದನಂತರ ಈ ಬಗೆಯ ಅವಿಮರ್ಶಿತ ವಾಸ್ತವತೆಯು ತುಂಬ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತದೆಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ.

ಈ ಬಹುಘಟಕವಾದ ಅಥವಾ ಅತಿಸರಳೀಕರಣ ಮಾರ್ಗದಿಂದ ವಿಜ್ಞಾನಕ್ಕೆ ಆಗುತ್ತಿರುವ ಹಾನಿಯ ಬಗೆಗೆ ಹೇಳುತ್ತ ಬರ್ನಾರ್ಡ್ ಡಿ' ಎಸ್ಪನಾಟ್ ಹೀಗೆ ಮುಂದುವರಿಸುತ್ತಾರೆ (ಪು. ೭೩೨) :

ವೈನರ್ ಹೇಳುವಂತೆ (ಸೂತ್ರ ಪ್ರತಿಪಾದಕರನ್ನು ಬಿಟ್ಟು !) ಉಳಿದ ಆಧುನಿಕ ವಿಜ್ಞಾನಿ ಗಳಲ್ಲನೇಕರ ಬಾಲಿಶವಾದ ವಾಸ್ತವತಾ ಕಲ್ಪನೆಯು ಪುಣ್ಯವಶಾತ್ ಈ ವರ್ಗಕ್ಕೆ ಸೇರುತ್ತದೆ. ಈ ಸ್ಥಿತಿ ಕೊನೆಯ ಪಕ್ಷ ಒಂದು ತಲೆಮಾರಿನ ತನಕ ಇರುತ್ತದೆ ಅಥವಾ ಇನ್ನು ಸ್ವಲ್ಪ ಹೆಚ್ಚು ಕಾಲ ಇದ್ದೀತು. ಸಾಂಸ್ಕೃತಿಕ ದೃಷ್ಟಿಕೋನದಿಂದ ನೋಡುವುದಾದರೆ, ಉದ್ದೇಶಪೂರ್ವಕವಾದ ಈ ಅತಿಸರಳೀಕರಣ ಭಾವನೆಯು ತುಂಬ ಅಪಾಯಕಾರಿಯಾಗಿರುವಂತೆ ಕಾಣುತ್ತದೆ. ಇಂದು ಸ್ವಲ್ಪ ಮಟ್ಟಿಗೆ ಸಫಲವೂ ಆಗಿರುವ ಮಹತ್ ಪ್ರಯತ್ನಗಳು ನಡೆದಿವೆ. ವಿಶ್ವದ ಅಸಂಖ್ಯಾತ ಜನವೃಂದವು ತನ್ನ ಅನೇಕ ಸಮಸ್ಯೆಗಳನ್ನು ಹೇಗೆ ವೈಜ್ಞಾನಿಕವಾಗಿ ಎದುರಿಸಬೇಕು ಎಂಬ ಬಗೆಗೆ ವೈಜ್ಞಾನಿಕ ತಿಳಿವಳಿಕೆ ನೀಡುವ ಪ್ರಯತ್ನ ನಡೆದಿದೆ. ಇದರ ಉದ್ದೇಶ ಪ್ರಥಮತಃ ತಾಂತ್ರಿಕ ಸ್ವರೂಪದ್ದು. ಆದರೆ ನಿಮಿತ್ತತೆ ಮತ್ತು ಸತ್ಯತೆಗಳ ನಡುವೆ ಇರುವ ವ್ಯತ್ಯಾಸವನ್ನು ಮತ್ತು 'ಸತ್ಯ'ದಲ್ಲಿ ಅವುಗಳ ಮಾದರಿಗಳಿಗೂ ನೈಜ ವಸ್ತುಗಳಿಗೂ ಇರುವ ವ್ಯತ್ಯಾಸವನ್ನು ಸಹಜ ವಾಗಿಯೇ ವಿದ್ಯಾರ್ಥಿಗಳು ಕಂಡುಹಿಡಿಯಬಲ್ಲರೆಂದು ನಿರೀಕ್ಷಿಸುವುದಾದರೂ ಹೇಗೆ ? ಅಲ್ಲದೆ ಈ ಹಿಂದೆ ಎಂದೂ ಶಿಕ್ಷಕರಿಂದ ಈ ಅಂಶದ ಕಡೆ ಗಮನ ಸೆಳೆಯಲ್ಪಡದಿರುವ ವಿದ್ಯಾರ್ಥಿಗಳ ವಿಷಯದಲ್ಲಿ ಈ ನಿರೀಕ್ಷೆ ಸರಿಯಲ್ಲ. ಈ ಕಾರಣದಿಂದ ವಾಸ್ತವ ವಿಜ್ಞಾನಗಳ ಆಧುನಿಕ

ಸಮೂಹ ಶಿಕ್ಷಣವು ಖಂಡಿತವಾಗಿ ಬಹುಘಟಕವಾದದ ಜೊತೆಯಲ್ಲಿ ತಪ್ಪುತಪ್ಪಾಗಿ ಹೊಂದಾಣಿಕೆ ಮಾಡಿಕೊಳ್ಳುತ್ತದೆ ಎಂದು ಹೆದರಬೇಕಾಗಿದೆ.

## ೩. ಮನಸ್ಸು ಮತ್ತು ಮಿದುಳು

ಮನಸ್ಸು ಮತ್ತು ಮನಸ್ಸಿನ ಭೌತ ನೆಲೆಗಟ್ಟುಗಳ ವ್ಯತ್ಯಾಸವನ್ನು ಗುರುತಿಸುತ್ತ ನರಶಾಸ್ತ್ರ ವಿಜ್ಞಾನಿ ಸರ್ ಚಾರ್ಲ್ಸ್ ಷೆರಿಂಗ್‌ಟನ್ ಹೇಳುತ್ತಾರೆ (The Physical Basis of Mind-ಸಂಪಾದಕರು : ಪೀಟರ್ ಲಾಸ್ಲೆಟ್, ಪು. ೧) :

*ಮನಸ್ಸಿನ ಭೌತಿಕ ನೆಲೆಗಟ್ಟಿನ ಜ್ಞಾನವು ಈಗಿನ ದಿನಗಳಲ್ಲಿ ತುಂಬ ಯಶಸ್ವಿ ಹೆಜ್ಜೆಗಳನ್ನು ಹಾಕಿದೆ. ಮಿದುಳಿನ ಬಗೆಗೆ ತಿಳಿವಳಿಕೆ ಬೆಳೆಯುತ್ತದೆ. ನಮ್ಮ ಅಧ್ಯಯನ ವಿಷಯವು ಮಿದುಳಿನ ಅಂಗವಿನ್ಯಾಸಕ್ಕೆ ಬಹುಮಟ್ಟಿಗೆ ಸರಿಸಮವಾಗಿದೆ. ಚಿಂತನೆಗಳು, ನೆನಪುಗಳು, ಸಂವೇದನೆಗಳು, ವಿಚಾರಪರತೆ ಮೊದಲಾದುವುಗಳಿಗೆ ಸಂಬಂಧಿಸಿದ ಮನಸ್ಸನ್ನು ಭೌತವಸ್ತುಗಳ ವರ್ಗದಲ್ಲಿ ತಂದು ವಿವರಿಸುವುದು ಕಷ್ಟ. ಶರೀರ ರಚನೆಯ ಶಾಸ್ತ್ರವು ಒಂದು ಪ್ರಕೃತಿ ವಿಜ್ಞಾನವಾಗಿದ್ದು ಭೌತಲೋಕದಿಂದ ಆಚೆ ಇರುವುದೆಲ್ಲರ ವಿಷಯಗಳಲ್ಲಿ ಮೌನವಾಗಿ ಉಳಿದು ಬಿಡುತ್ತದೆ. ಆದುದರಿಂದ ಮನಸ್ಸಿನ ಭೌತಿಕ ನೆಲೆಗಟ್ಟಿನ ಅಧ್ಯಯನವು ಎರಡು ನೆಲೆಗಳ ನಡುವೆ ನಲುಗುತ್ತದೆ.*

ನರಶಾಸ್ತ್ರಜ್ಞ ವಿಲ್‌ಡರ್ ಪೆನ್‌ಫೀಲ್ಡ್ (The Cerebral Cortex and the Mind of Man, ಪು. ೬೩-೬೪) ಹೇಳುತ್ತಾನೆ :

*ಆದುದರಿಂದ ಒಂದರ್ಥದಲ್ಲಿ ಉನ್ನತ ಮಿದುಳಿನ ಕಾಂಡವು, ಅದರೊಂದಿಗಿರುವ ಕಾರ್ಟೆಕ್ಸ್‌ನ ಭಾಗದೊಂದಿಗೆ, ಪ್ರಜ್ಞೆಯ ಪೀಠವೆನಿಸಿಕೊಳ್ಳುತ್ತದೆ. ಈ ನರಕೋಶ ಸಂಬಂಧದ ಕಲ್ಪಿತ ತಂತ್ರವಿಧಾನವೇ ಮನಸ್ಸಿನ ಭೌತಿಕ ನೆಲೆಗಟ್ಟು. ಒಬ್ಬನು ಪ್ರಜ್ಞಾವಂತನಾಗಿದ್ದಾಗ ಆತನ ಮಿದುಳಿನಲ್ಲಿ ಕೋಟ್ಯಂತರ ನರಮಂಡಲಗಳ ಮೂಲಕ ಸಂವೇದನೆಗಳು ಪ್ರವಹಿಸುತ್ತಿರುತ್ತವೆ ಎಂದು ನಾವು ಕಲ್ಪಿಸಿಕೊಳ್ಳಬಹುದು. ಉದ್ದೇಶಪೂರ್ವಕ ಆಲೋಚನೆಗಳ ಮೂಲಕ ಈ ಸಂವೇದನೆಗಳಲ್ಲಿ ಹೇಗೋ ಒಂದು ಕ್ರಮಬದ್ಧ ವ್ಯವಸ್ಥೆಯುಂಟಾಗುತ್ತದೆ.*

*ಮನಸ್ಸಿಗೂ ಈ ತಂತ್ರವ್ಯವಸ್ಥೆಗೂ ಇರುವ ಸಂಬಂಧವೇನು ? ಈ ತಂತ್ರ ವ್ಯವಸ್ಥೆಯನ್ನು ನಿಯಂತ್ರಿಸುವ ಬೇರೊಂದು ಧಾತುವಿನ ದಿವ್ಯ ಎಳೆಯೊಂದನ್ನು ನಾವು ಕಾಣಲು ಸಾಧ್ಯವೆ ? ಬಾಹ್ಯ ಪ್ರಚೋದನೆಯಿಂದ ಒಬ್ಬ ರೋಗಿಯಲ್ಲಾಗುವ ಚಲನೆಯನ್ನು ಕುರಿತು ಕೇಳಿದರೆ ಆ ರೋಗಿ ಅನುಮಾನವೇ ಇಲ್ಲದೆ ಹೌದು ಎನ್ನುತ್ತಾನೆ. ಅದು ತನ್ನ ಸಂಕಲ್ಪದಿಂದ ಬಂದದ್ದಲ್ಲ ಎಂಬುದು ಅವನಿಗೆ ಗೊತ್ತಿರುತ್ತದೆ. ಸ್ವಯಂ ಕ್ರಿಯೆಗೂ ಯಾಂತ್ರಿಕ ಕ್ರಿಯೆಗೂ ಇರುವ ವ್ಯತ್ಯಾಸ ಅವನಿಗೆ ತಿಳಿದಿರುತ್ತದೆ. ಇಂದ್ರಿಯ ವ್ಯವಸ್ಥೆ ಮತ್ತು ಯಾಂತ್ರಿಕ ವ್ಯವಸ್ಥೆಗಳ ನಡುವೆ ಬೇರೊಂದು ಧಾತು ನೆಲಸಿದೆಯೆಂದು ಆತ ಬಲ್ಲ, ಅಂದರೆ ಸ್ವಿಚ್ ಬೋರ್ಡು ಮತ್ತು ಸ್ವಿಚ್ ಬೋರ್ಡ್‌ನ ಆಪರೇಟರ್ ಇಬ್ಬರೂ ಇರುವುದನ್ನು ಆತ ಬಲ್ಲ.*

## ೪. ಪಶ್ಚಿಮದ ಚಿಂತನೆಯ ಮೇಲೆ ವೇದಾಂತ, ಯೋಗಗಳ ಪ್ರಭಾವ

ಈ ಕೆಲವು ಸೂಚನೆ ಸಲಹೆಗಳು ಆಧುನಿಕ ಭೌತ ವಿಜ್ಞಾನಗಳು ಭಾರತದಲ್ಲಿ ವೇದಾಂತ, ಯೋಗಗಳಲ್ಲಿ ನಡೆದಿರುವ ಮನಸ್ಸು ಮತ್ತು ಪ್ರಜ್ಞೆಗಳ ಬಗೆಗಿನ ಆಳವಾದ ಅಧ್ಯಯನವನ್ನು

ಮೆಚ್ಚಲು ಸಹಾಯಮಾಡುತ್ತವೆ. ವೇದಾಂತ ಮತ್ತು ಯೋಗಗಳು ಇಂದು ಪಶ್ಚಿಮದಲ್ಲಿ ಮನೋವಿಜ್ಞಾನದ ಎಲ್ಲ ಶಾಖೆಗಳ ಮೇಲೂ ಊರ್ಜಿತ ಪರಿಣಾಮ ಬೀರುತ್ತಿವೆ. "Meeting of the West : Exploration in East-West Psychology" ಎಂಬ ಗಂಥವನ್ನು ಸಂಪಾದಿಸಿರುವ ಜಾನ್ ವೆಲ್‌ವುಡ್ ಮುನ್ನುಡಿಯಲ್ಲಿ ತನ್ನ ಗ್ರಂಥರ ಮುಖ್ಯ ಆಶಯವನ್ನು ವಿವರಿಸುತ್ತ ಹೀಗೆ ಹೇಳುತ್ತಾನೆ :

*ಪ್ರಜ್ಞೆಯ ಸ್ವರೂಪ, ಆತ್ಮಾಭಿಜ್ಞಾನ, ಮಾನಸಿಕ ಆರೋಗ್ಯ ಮತ್ತು ಮಾನಸಿಕ ಚಿಕಿತ್ಸೆ ಮೊದಲಾದವುಗಳ ಸ್ವರೂಪ ನಿರ್ಣಯಕ್ಕೆ ಸಂಬಂಧಿಸಿದ ಅನೇಕ ನಿರಂತರ ಪ್ರಶ್ನೆಗಳಿಗೆ ಹೊಸಹೊಸ ದಿಗ್ದರ್ಶನ ನೀಡುವುದೇ ಈ ಗ್ರಂಥದ ಆಶಯವಾಗಿದೆ. ಮೊದಲ ವಿಭಾಗವು ಮಾನವನ ಮನಸ್ಸಿನ ಸ್ವರೂಪದ ಬಗೆಗೆ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. ಪ್ರಜ್ಞೆಯ ವಿವಿಧ ಸ್ತರಗಳನ್ನು ಶೋಧಿಸುವುದರ ಮೂಲಕ ಒಬ್ಬನ ಅಹಂ ಅಥವಾ ಆತ್ಮಾಭಿಜ್ಞಾನಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಎತ್ತುವುದು ಎರಡನೆಯ ಅಧ್ಯಾಯದ ಆಶಯ. ಬರಿಯ ಊಹಾತ್ಮಕ ತತ್ವಗಳನ್ನು ತಪ್ಪಿಸಬೇಕಾದರೆ ಹೀಗೆ ಮನಸ್ಸು ಮತ್ತು ಆತ್ಮಗಳ ಶೋಧನೆಯ ಹಾದಿಯಲ್ಲಿ ಏಳುವ ಪ್ರಶ್ನೆಗಳನ್ನು ಅನುಭವ ಮತ್ತು ಶಿಸ್ತಿನ ವಿಧಾನಕ್ಕೆ ಇಳಿಸುವುದು ಅಗತ್ಯ. ಹೀಗಾಗಿ ಮೂರನೆಯ ಅಧ್ಯಾಯವು ಧ್ಯಾನದ ವಿಷಯವಾಗಿ ಚರ್ಚಿಸುತ್ತದೆ, ಅಂದರೆ ಈ ಜೀವನ ಪ್ರಶ್ನೆಗಳಿಗೆ ನೇರವಾದ ವೈಯಕ್ತಿಕ ಸಂಬಂಧವನ್ನು ಕಲ್ಪಿಸುವ ಸಂವಾದದಲ್ಲಿ ಭಾಗಿಯಾಗುತ್ತದೆ. ಕೊನೆಯದಾಗಿ ನಾಲ್ಕನೆಯ ಅಧ್ಯಾಯವು ಮೊದಲ ಮೂರು ಅಧ್ಯಾಯಗಳ ಒಳನೋಟಗಳನ್ನು ಮಾನಸಿಕ ಚಿಕಿತ್ಸೆಗೆ ಅನ್ವಯಿಸುವ ಪ್ರಯತ್ನ ಮಾಡುತ್ತದೆ. ಹಾಗೆ ಮಾಡಿ ಜನರು ಇನ್ನು ಹೆಚ್ಚಿನ ಎಚ್ಚರದ ಪಥದಲ್ಲಿ ಬದುಕುವುದಕ್ಕೆ ಸಹಾಯಕವಾಗಿ ನವೀನ ದಿಗ್ದರ್ಶನವನ್ನು ಸೂಚಿಸುತ್ತದೆ.*

ಮುಂದೆ, ತನ್ನ ಪೀಠಿಕೆಯನ್ನು ಮುಕ್ತಾಯಗೊಳಿಸುತ್ತ ಜಾನ್ ವೆಲ್‌ವುಡ್ ಹೇಳಿತ್ತಾನೆ. (ಅದೇ, ಪುಟಗಳು XV-XVI) :

*ಅನುಭವಜನ್ಯವಾದ, ಸಮಗ್ರವಾದ ಮತ್ತು ಜ್ಞಾನೋದಯಕಾರಿಯಾದ ಪೂರ್ವದೇಶದ ಪದ್ಧತಿಯನ್ನು ಕರಾರುವಕ್ಕಾದ, ನಿಚ್ಚಳವಾದ, ಸಂದೇಹಗಳನ್ನೆತ್ತುವ ಪಶ್ಚಿಮದ ಸ್ವತಂತ್ರವಾದ ಪಶ್ಚಿಮದ ಪದ್ಧತಿಯೊಂದಿಗೆ ಮುಖಾಮುಖಿಯಾಗಿಸಿ ನೋಡುವ ಇಂದಿನ ಪ್ರಯತ್ನವು ಸಾಂಸ್ಕೃತಿಕ ಮಿತಿಗಳನ್ನು ದಾಟಬಲ್ಲ ಮತ್ತು ಅಬ್ರಹಾಂ ಮಾಸ್ಲೊ ಎಂಬಾತನು ಯಾವುದನ್ನು "ಮಾನವ ಸ್ವರೂಪದ ಸುದೂರದ ವ್ಯಾಪ್ತಿಗಳು" ಎಂದು ಕರೆದಿದ್ದಾನೋ ಅದನ್ನು ಪ್ರಸ್ತಾವಿಸ ಬಲ್ಲ ಒಂದು ಹೊಸ ಮನೋವಿಜ್ಞಾನ ರೂಪುಗೊಳ್ಳಲು ಸಹಾಯಕವಾಗಿದೆ. ಈ ಹೊಸ ಬಗೆಯ ಪೂರ್ವ-ಪಶ್ಚಿಮ ಮನೋವಿಜ್ಞಾನವು ಕೇವಲ ಭ್ರೂಣರೂಪದಲ್ಲಿರುವ ಇಲ್ಲಿನ ಲೇಖನಗಳಿಂದ, ಇನ್ನೂ ಶೈಶವಾವಸ್ಥೆಯಲ್ಲಿದೆ. ಆದರೆ ಇದು ಬರಿಯ ತಾತ್ಕಾಲಿಕ ಸಾಂಸ್ಕೃತಿಕ ಮೋಜು ಎಂದು ತಿಳಿಯಬಾರದು. ಈ ಗ್ರಂಥವು ಮುಂದಿನ ಬೆಳವಣಿಗೆಗೆ ತನ್ನ ಕಾಣಿಕೆ ಸಲ್ಲಿಸಲಿ.*

ಮುಕ್ತಾಯದ ಅಧ್ಯಾಯದಲ್ಲಿ ಜಾನ್ ವೆಲ್‌ವುಡ್ ಮೆಡಾರ್ಡ್ ಬಾಸ್‌ನ ಅಭಿಪ್ರಾಯವನ್ನು (ಪು ೨೨೩) ಉದ್ಧರಿಸುತ್ತ ಹೇಳುತ್ತಾನೆ (ಪುಟಗಳು ೨೨೪-೨೨೫) :

*ನಮ್ಮ ಮಾನಸಿಕ ಶರೀರ ವಿಜ್ಞಾನವು ಹೆಚ್ಚು ಪ್ರಭಾವಶಾಲಿಯಾಗಬೇಕಾದರೆ ಮನೋವೈದ್ಯರು ತಮ್ಮ ಮನೋವೈಜ್ಞಾನಿಕ ಭಾವನೆಗಳನ್ನು ಧ್ಯಾನ ಪ್ರಜ್ಞೆಯೊಂದಿಗೆ ಸರಿದೂಗಿಸಿಕೊಳ್ಳುವ ಅಗತ್ಯವಿದೆ.*

*ಮಾನವ ಪ್ರಜ್ಞೆಯ ವಿಸ್ತೃತ ಆಯಾಮಗಳಲ್ಲಿ ಆಸಕ್ತಿಯನ್ನು ಪ್ರಕಟಿಸುವುದೇ ಇಂದಿನ ಮನೋವಿಜ್ಞಾನದ ನವಕ್ಷಿತಿಜಗಳಲ್ಲಿ ಒಂದಾಗಿದೆ. ಆಧುನಿಕ ಜ್ಞಾನದ "ಪತ್ತರಿಮೊನೆಯಾಗಿ*

ವ್ಯಕ್ತ್ಯತೀತ ಕಾಳಜಿಗಳು ಮುಂದಿರುವುದರಿಂದ ಅವುಗಳ ಗುರಿ ಹಾಗೂ ವಿಧಾನಗಳು ಸ್ಪಷ್ಟೀಕರಣಗೊಂಡಿಲ್ಲ.

ಹೊಸ ಮನೋವಿಜ್ಞಾನವು ಸ್ವೀಕರಿಸಬಹುದಾದ ನಾಲ್ಕು ಪ್ರಮುಖ ಲಕ್ಷಣಗಳನ್ನು ಅಥವಾ ದಿಕ್ಕುಗಳನ್ನು ಸೂಚಿಸಿ ವಿರಮಿಸಬಯಸುತ್ತೇನೆ...

೧. ಈ ನವ ವಿಧಾನವು ಆಂತರಿಕ ಅನುಭವಜನ್ಯ ಸಿದ್ಧಾಂತದ ಮತ್ತು ಅನುಭವದ ಗಹನ ಸ್ವರೂಪವನ್ನು ಆಧರಿಸಿದ ಒಂದು ಆತ್ಮ ಜ್ಞಾನ ಮನೋವಿಜ್ಞಾನ ವಿಧಾನವಾಗಬೇಕು. ಇಂಥ ವಿಧಾನದ ಅನುಸರಣೆಯು ಪ್ರಕೃತಿ ವಿಜ್ಞಾನವಾಗುವುದಕ್ಕೆ ಬದಲಾಗಿ ತನ್ನದೇ ಸೂಚನೆ ಮತ್ತು ಶೋಧನ ಪದ್ಧತಿಯುಳ್ಳ 'ಮಾನವ ವಿಜ್ಞಾನ'ವಾಗಿ ರೂಪುಗೊಳ್ಳುತ್ತದೆ. ಯಾವುದೇ ವ್ಯಕ್ತಿ ತುಂಬ ಎಚ್ಚರದಿಂದ ಸವಿವರವಾಗಿ, ಶಿಸ್ತುಬದ್ಧವಾಗಿ ಸ್ವ-ಅನುಭವವನ್ನು ಪರೀಕ್ಷೆ ಮಾಡಿಕೊಳ್ಳಲು, ಮಾನವ ವಿಜ್ಞಾನದ ವಿಚಾರಗಳ ಹಿನ್ನೆಲೆಯಲ್ಲಿ ತೂಗಿನೋಡಲು ಸಾಧ್ಯವಾಗಬೇಕು.

೨. ಆಗ ಇದು ಬಿಡಿಬಿಡಿ ವ್ಯಕ್ತಿಗಳ ಮನೋವಿಜ್ಞಾನವಾಗುವುದಕ್ಕೆ ಬದಲಾಗಿ ಸಂಬಂಧಿತ ಮನೋವಿಜ್ಞಾನವಾದೀತು. ಹೀಗಾಗುವುದರಿಂದ ಮನಸ್ಸಿನ ಪರಿಸರ ವೃತ್ತಾಂತಕ್ಕೆ ಒಂದು ಬುನಾದಿ ಹಾಕಿದಂತಾಗುತ್ತದೆ. ಮನಸ್ಸಿನ ಪರಿಸರ ವೃತ್ತಾಂತವು ಮನಸ್ಸು ಎಂದರೆ ವ್ಯಕ್ತಿಯ ತಲೆಯೊಳಗಿರುವ ಒಂದು ವಸ್ತು ಎಂಬುವುದಕ್ಕೆ ಬದಲಾಗಿ ವ್ಯಕ್ತಿ ಮತ್ತು ಪರಿಸರ ಎಂಬ ಸಮಗ್ರ ವ್ಯವಸ್ಥೆ ಎಂಬರ್ಥವನ್ನು ತರುತ್ತದೆ.

೩. ಮಾನವನ ಇರುವಿಕೆಯ ಮೂಲ ಸ್ವರೂಪದ ಕಾಳಜಿಯು ಮನುಷ್ಯನ ಅನುಭವದ ಸಮಗ್ರ ಶ್ರೇಣಿಯನ್ನು ಒಳಗೊಳ್ಳುವ ಒಂದು ನೆಲೆಯನ್ನು ಒದಗಿಸಬೇಕು.

೪. ಆತ್ಮ ಜ್ಞಾನದ ಶಿಸ್ತನ್ನು ಅದು ಒಳಗೊಳ್ಳಬೇಕು (ಅಂದರೆ ಧ್ಯಾನಾಭ್ಯಾಸ ಇತ್ಯಾದಿ....) ...ಅಂಥ ಶಿಸ್ತು ಒಂದು ಅನುಭವ ಜನ್ಯ ನೆಲೆಗಟ್ಟನ್ನು ಒದಗಿಸುತ್ತದೆ. ಇದು ಈ ವಿಧಾನವನ್ನು ಹಿಂದಿನ ಆತ್ಮ ಶೋಧನ ಸಿದ್ಧಾಂತದಿಂದ ಪ್ರತ್ಯೇಕಿಸುತ್ತದೆ. ಹಿಂದಿನ ಸಿದ್ಧಾಂತವು ತುಂಬ ತಟಸ್ಥವಾದ ಪ್ರಜ್ಞಾಪ್ರವಾಹ ಸಿದ್ಧಾಂತಕ್ಕೆ ಅಂಟಿಕೊಂಡು 'ಸಾಕ್ಷಿ'ಯ ಅಥವಾ ಅನುಭವ ಪಡೆಯುವವನ ವಿಚಾರವನ್ನೇ ಸಂವಾದಕ್ಕೆ ಎತ್ತಿಕೊಳ್ಳುತ್ತಿರಲಿಲ್ಲ.

ಸಂಕ್ಷಿಪ್ತವಾಗಿ ಹೇಳುವುದಾದರೆ ಆತ್ಮ ಜ್ಞಾನದ ಶಿಸ್ತುಗಳ ನೆಲಗಟ್ಟಿನ ಮೇಲೆ ನಿಂತ ಅಂಥ ಹೊಸ ವಿಧಾನವು ಮಾನವನ ವರ್ತನೆಯ ಅಧ್ಯಯನಕ್ಕೆ ಸಮಸ್ತ ಮಾನವ ಪ್ರಜ್ಞೆಯನ್ನು ಒಳಗೊಳ್ಳುವಂಥದಾಗಿದೆ. ವರ್ತನಮನೋವಿಜ್ಞಾನವು ಪರಿಶೀಲಿಸಿರುವ ಯಾಂತ್ರಿಕ ಪ್ರತಿಕ್ರಿಯೆಗಳಿಂದ ಹಿಡಿದು ಮನೋವಿಶ್ಲೇಷಣೆಯು ಬೆಳಕಿಗೆ ತಂದಿರುವ ಸುಪ್ತಪ್ರಜ್ಞೆಯವರೆಗೆ, ಮಾಸ್ಲೊ ಎಂಬುವನು ಆತ್ಮ ಅತೀತತೆ ಎಂದು ಯಾವುದನ್ನು ಕರೆಯುತ್ತಾನೋ ಅದು ತಿಳಿಸುವ ಮಾನವ ಸಾಧ್ಯತೆಗಳ ವಿಸ್ತೃತ ವಲಯಗಳವರೆಗೆ ಈ ನವವಿಧಾನವು ಹರಡಿಕೊಂಡಿದೆ.

...ಈ ವಿಧಾನವು ಸಾಂಪ್ರದಾಯಿಕ ಆಧ್ಯಾತ್ಮಿಕ ಮಾರ್ಗಗಳಿಗೆ ಬದಲಿ ವ್ಯವಸ್ಥೆಯಲ್ಲ. ಆದರೆ ಅವುಗಳ ನಡುವೆ ಸೇತುವೆಯಾಗಬಹುದು, ಅಲ್ಲದೆ ಅವುಗಳ ತಟಸ್ಥ ಸಂಗಮ ಕೇಂದ್ರವೂ ಆಗಬಹುದು. ಇಲ್ಲಿ ಬೇರೆ ಬೇರೆ ಆಧ್ಯಾತ್ಮಿಕ ಸಾಧಕರು ಸಂಧಿಸಿ ಮಾನವ ಬೆಳವಣಿಗೆಗೆ ಸಂಬಂಧಿಸಿದಂತೆ ಸರ್ವಸಮ್ಮತವಾಗುತ ಅಂಶಗಳನ್ನು ರೂಪಿಸಬಹುದು.

## ೫. ಪ್ರಜ್ಞೆಯ ಅಧ್ಯಯನದಲ್ಲಿ ಯುದ್ಧೋತ್ತರ ಪಶ್ಚಿಮದೇಶಗಳ ಆಸಕ್ತಿ

ಇಂದಿನ ವಿಶ್ವದ ಗಂಭೀರ ದುರಂತವನ್ನು ಪ್ರಜ್ಞೆಯನ್ನು ಬದಲಾಯಿಸುವುದರ ಮೂಲಕ ತಪ್ಪಿಸಬಹುದೇ ಹೊರತು ಭೌತಜಗತ್ತಿನಲ್ಲಿ ಹೆಚ್ಚಿನ ತಾಂತ್ರಿಕ ಬದಲಾವಣೆಗಳಿಂದಲ್ಲ ಎಂಬಂಶವನ್ನು

ದೃಢೀಕರಿಸಿಕೊಂಡಿರುವ ಕಾರಣದಿಂದಾಗಿ ಪ್ರಜ್ಞಾ ಅಧ್ಯಯನವನ್ನು ಆಧುನಿಕ ಜಗತ್ತಿನ ಮೇಲೆ ಹೇರಿರುವುದು ಮಹತ್ತ್ವದ ವಿಷಯವಾಗಿದೆ. ಜಾನ್ ವೈಟ್ ಎಂಬಾತ ಬಲವಾಗಿ ಪ್ರತಿಪಾದಿಸಿರುವ ಹಾಗೆ "Introduction to the Highest State of Consciousness", ಸಂಪಾದಕ : ಜಾನ್ ವೈಟ್ ಪು. IX) :

*ಒಂದು ಹೊಚ್ಚಹೊಸ ಪ್ರಜ್ಞಾವಿಧಾನದಿಂದ ಪುಷ್ಟಿಗೊಂಡಿರದ ಕ್ರಿಯೆ, ಸಮಾಜಕಾರ್ಯ, ಈ ತತ್ತ್ವ, ಆ ಶಾಸ್ತ್ರಗಳೆಲ್ಲವೂ ಅಪೂರ್ಣ, ವಿಫಲ ಕ್ರಿಯೆಗಳೆನ್ನಬೇಕಾಗುತ್ತದೆ. ಅಂತಿಮ ಕಾರ್ಯ ಎಂದರೆ ಪ್ರಜ್ಞೆಯನ್ನು ಪರಿವರ್ತಿಸುವ ಕಾರ್ಯವೇ ಹೊರತು ಬೇರೆಯಲ್ಲ. ಅಂದರೆ, ಅಂತರ್ಬೋಧೆಯೇ ನಿಜವಾದ ಕ್ರಾಂತಿ.*

ಮನಸ್ಸು ಪ್ರಜ್ಞೆಗಳ ಅಧ್ಯಯನವು ಭೌತ ವಿಜ್ಞಾನದಿಂದ ಮನ್ನಣೆ ಪಡೆದದ್ದು ತೀರ ಈಚೆಗೆ. ವಿಜ್ಞಾನ ಪ್ರಗತಿಗೆ ಮೀಸಲಾದ ಅಮೆರಿಕನ್ ಅಸೋಸಿಯೇಷನ್ ಎಂಬ ಸಂಸ್ಥೆಯು ೧೯೬೯ ನೇ ಡಿಸೆಂಬರ್ ೩೦ ರಂದು ಮನೋವಿಜ್ಞಾನದ ಸಂಶೋಧಕ ವೃತ್ತಿಸಂಸ್ಥೆಯಾದ ಪ್ಯಾರಾಸೈಕಲಾಜಿಕಲ್ ಅಸೋಸಿಯೇಷನ್ ಅನ್ನು ತನ್ನ ಅಂಗಸಂಸ್ಥೆಯನ್ನಾಗಿ ಸ್ವೀಕರಿಸಿದ ಮೇಲೆ. ಜಾನ್ ವೈಟ್ ಈ ಕ್ಷೇತ್ರದಲ್ಲಿ ಮುಂದಿನ ವರ್ಷಗಳಲ್ಲಿ ಉಜ್ವಲ ಭವಿಷ್ಯವನ್ನು ಗುರುತಿಸಿದ್ದಾನೆ. ಇದು ಬೆಂಗಳೂರಿನ ಸೆಮಿನಾರಿನಲ್ಲಿಯೇ ಸ್ವೀಕೃತವಾಗಿದೆ (ಅದೇ, ಮುಕ್ತಾಯ : ಪು ೪೭೧) :

*ಮುಂದಿನ ವರ್ಷಗಳಲ್ಲಿ ಆತ್ಮ ಶೋಧನೆಯ ವಿಧಾನವು ಸುವ್ಯವಸ್ಥಿತವಾಗುವುದು, ಆದುದರಿಂದ ಇದು ಅಂತರ-ಶಿಸ್ತೀಯವಾಗುತ್ತದೆ. ಇದರಿಂದಾಗಿ ವೈದ್ಯರು, ಮನೋವಿಜ್ಞಾನದ ಸಂಶೋಧಕರು, ಸೈಕೋಫಿಸಿಯಾಲಜಿಸ್ಟರು( ಮನೋಶರೀರ ತಜ್ಞರು), ಧಾರ್ಮಿಕ ನೇತಾರರು, ಮತ್ತು ಬೇರೆ ಬೇರೆ ವೃತ್ತಿಗಳ ಜನರು ಎಲ್ಲರನ್ನೂ ಇದು ಒಟ್ಟುಸೇರಿಸುತ್ತದೆ...*

ಆತ್ಮ ಮತ್ತು ಪರಿಸರಗಳ ನಡುವಿನ ಸೀಮಾರೇಖೆಯನ್ನು ಅಳಿಸಿ ಹಾಕುವುದು ಸಾಧ್ಯವಾದರೆ ಮಾನವನ ಸಾಮಾಜಿಕ ಮತ್ತು ಶಾರೀರಿಕ ಎರಡೂ ಸೇರಿದಂತೆ ಮನುಷ್ಯನ ಪರಿಸರದ ಧೋರಣೆಯ ಮೇಲೆ ತುಂಬ ಪ್ರಭಾವ ಬೀರುವುದು ಸಾಧ್ಯ. ಆತ್ಮಾನುಭವವು ಇತರ ಜನಗಳನ್ನು ಅಪ್ಪಿಕೊಳ್ಳುವಂತಾದರೆ ಆಗ ಆತ್ಮಪ್ರಜ್ಞೆಯು ಸಮಾಜಪ್ರಜ್ಞೆಯೂ ಆಗುತ್ತದೆ.

## ೬. ಫ್ರಾಯ್ಡನ ವಿಕೃತ ಭಾವನೆಗಳಿಂದ ಮನೋವಿಜ್ಞಾನವನ್ನು ಪಾರುಮಾಡುವಿಕೆ

ಕೆಲವರು ಫ್ರಾಯ್ಡ್ ಅಂಧಾನುಯಾಯಿಗಳು, ವಿಶ್ವದಲ್ಲಿ ಆಧ್ಯಾತ್ಮಿಕ ಮೂಲಭೂತ ಏಕತೆಯನ್ನು ಕಾಣಬಯಸುವ ಅನುಭಾವೀ ವಿಚಾರಗಳನ್ನೆಲ್ಲ ಹಿಂದಿನ ಗೊಡ್ಡು ಸ್ಥಿತಿಗೆ, ಶೈಶವಾಸ್ಥೆಗೆ ಮರಳುವ ಪ್ರಯತ್ನಗಳು ಎಂದು ವ್ಯಾಖ್ಯಾನಿಸುತ್ತಾರೆ. ಇಂಥ ಕೆಲವು ಮನೋವಿಜ್ಞಾನಿಗಳ ಕರ್ಮಠ ಪ್ರವೃತ್ತಿಯ ವಿರುದ್ಧ ಎಚ್ಚರಿಕೆ ಕೊಡುತ್ತ ಆರ್ಥರ್ ಜೆ. ಡೈಕ್‌ಮನ್, "What Mysticism is ?" ಎಂಬ ಜಿ.ಎ.ಪಿ. ವರದಿಯ ಬಗೆಗೆ ಮಾತನಾಡುವ ಸಂದರ್ಭದಲ್ಲಿ (Consciousness, The Brain, States of Awareness and Alternative Realities, ಸಂ. ಡೇನಿಯಲ್ ಗೋಲ್‌ಮನ್ ಅಂಡ್ ರಿಚರ್ಡ್ ಜೆ. ಡೇವಿಡ್ಸನ್, ಪುಟಗಳು ೧೯೨-೯೪) ಹೀಗೆ ಹೇಳುತ್ತಾನೆ :

*ಈ ಜಗತ್ತು ಬಲುಮಟ್ಟಿಗೆ ಮನೋವಿಜ್ಞಾನ ಮತ್ತು ಮನೋವಿಶ್ಲೇಷಣ ವಿಜ್ಞಾನಗಳು ವಿವರಿಸುವುದಕ್ಕಿಂತ ಹೆಚ್ಚಾಗಿ ಅಧಿಭೌತವಾದಿಗಳು ವಿವರಿಸುವಂತೆ ರೂಪಿತವಾಗಿದೆ. ಹಿನ್ನಲೆಯಲ್ಲಿ ಬಾಲಿಶವಾದ ಸರಳೀಕರಣ ಸಿದ್ಧಾಂತವು ಹೆಚ್ಚು ಅಪ್ರಸ್ತುತವಾಗಿ ಕಾಣುತ್ತದೆ. ಭಿನ್ನವಸ್ತುಗಳ ಜಗತ್ತು ಎಂಬುದು ಒಂದು ಭ್ರಮೆ. ಅದು ನಮ್ಮ ಸೀಮಿತ ಗ್ರಹಣಶಕ್ತಿಗೆ, ಕಾಲಮಿತಿಯಲ್ಲಿ ಕಾಣುವಂತಹುದು ಅದೇ, ಸಮಕಾಲೀನ ವಿಜ್ಞಾನಿಗಳಿಗೆ ಅಷ್ಟು ಆಧಾರಗಳನ್ನು*

ಒದಗಿಸಿವೆ. ಜೀವಶಾಸ್ತ್ರ ಮತ್ತು ಭೌತಶಾಸ್ತ್ರ ದೃಷ್ಟಿಯಿಂದ ಜಗತ್ತು ಬರಿಯ ವಸ್ತುಗಳ ಸಂಕಲನವಾಗಿರದೆ, ಇದು ಅಖಂಡ ವಿಶ್ವ ಎಂದು ಹೇಳುವುದು ಸರ್ವೇಸಾಮಾನ್ಯವಾಗಿದೆ...

ಪ್ರಗತಿ ಹೊಂದುವ ದೃಷ್ಟಿ ನಮ್ಮದಾಗಿದ್ದರೆ ನಮ್ಮ ಭಾವನೆಗಳನ್ನು ಬದಲಾಯಿಸುವ ವಿಚಾರಗಳ ವಿರುದ್ಧ ನಾವು ಹೋರಾಡಬೇಕು. ಸರಿಯಾಗಿ ಅಧ್ಯಯನ ಮಾಡಿದರೆ ಅನುಭಾವವು ಪಶ್ಚಿಮ ಸಂಸ್ಕೃತಿಗಳ ಕೆಳಗಿನ ಮೂಲ ಸೂತ್ರಗಳು ಅಲ್ಲಾಡಿ ಹೋಗುವಂತೆ ಮಾಡುತ್ತದೆ : (ಅ) ವಿಚಾರ ಮತ್ತು ಬುದ್ಧಿಯೇ ಪರಮ ; (ಆ) ಮನುಷ್ಯನ ವಿವಿಕ್ತ ವೈಯಕ್ತಿಕ ಸ್ವಭಾವ ; (ಇ) ಕಾಲದ ಒಂದು ರೇಖೀಯ ವ್ಯವಸ್ಥೆ. ಮಹಾ ಅನುಭಾವಿಗಳು(ಮಹಾವಿಜ್ಞಾನಿಗಳಂತೆಯೇ) ಜಗತ್ತು ಎಲ್ಲ ಸೂತ್ರಗಳಿಗಿಂತ ದೊಡ್ಡದಾದದ್ದು ಮತ್ತು ನಮ್ಮ ಪರಂಪರೆಯ ದೃಷ್ಟಿಕೋನಗಳಿಗೆ ಮೀರಿದ್ದು ಎಂದು ಭಾವಿಸುತ್ತಾರೆ. ನಾವೇ ಧಾಳಿಗೆ ಒಳಪಟ್ಟಿದ್ದೇವೆ ಎನ್ನುವುದನ್ನು ಗುರುತಿಸಿಕೊಳ್ಳದೆ, ನಮಗೆ ಅಪರಿಚಿತವಾದುದನ್ನು ದೂರವಿಡುವಷ್ಟು ನಮ್ಮ ದೃಷ್ಟಿಕೋನವನ್ನು ಸಂಕುಚಿತಗೊಳಿಸಿಕೊಂಡು, ಮನೋಚಿಕಿತ್ಸಕರಾದ ನಾವು ನಮ್ಮನ್ನೇ ವಂಚಿಸಿಕೊಳ್ಳುತ್ತಿದ್ದೇವೆ ; ಮನಶಾಸ್ತ್ರವನ್ನು ಅರಿಯದವರಂತೆ ಪೂರ್ವಗ್ರಹಪೀಡಿತರಾಗಿದ್ದೇವೆ. ವಿನಯವಂತಿಕೆಯ ಅಗತ್ಯಕ್ಕಿಂತ ಹೆಚ್ಚಿನದೇನನ್ನೂ ಅನುಭಾವಿಗಳಿಂದ ಕಲಿಯದಿದ್ದರೂ ಸಾಕು, ಅಂಥವರು ಪಶ್ಚಿಮದ ಸಂಸ್ಕೃತಿಗೆ ಮತ್ತು ಮುಖ್ಯವಾಗಿ ಮನೋವಿಜ್ಞಾನದ ವೃತ್ತಿಗೆ ತುಂಬ ಸೇವೆ ಸಲ್ಲಿಸಿದ್ದಾರೆಂದು ತಿಳಿಯಬಹುದು.

## ೭. ಭೌತ ವಿಜ್ಞಾನದ ಮಿತಿಗಳು

ರಾಬರ್ಟ್ ಇ ಆರ್ನ್‌ಸ್ಟೀನ್ 'The Nataure of Human Consciousness' ಎಂಬ ಸ್ವಸಂಪಾದಿತ ಕೃತಿಯ ಮುನ್ನುಡಿಯಲ್ಲಿ ಭೌತ ವಿಜ್ಞಾನಿ ಓಪನ್‌ಹೀಮರ್ ವೈಜ್ಞಾನಿಕ ಮಾರ್ಗ ಮತ್ತು ಅನುಭಾವೀ ಮಾರ್ಗಗಳ ಈ ದ್ವಂದ್ವದ ಬಗೆಗೆ ಹೇಳಿರುವುದನ್ನು ಉದ್ಧರಿಸುತ್ತಾನೆ (ಪುಟ ೫) :

ಕಾಲ ಇತಿಹಾಸಗಳ ದಾರಿ ಮತ್ತು ಅನಂತತೆ ಮತ್ತು ಕಾಲಾತೀತತೆಗಳ ದಾರಿ ಇವೆರಡೂ ತಾನು ವಾಸಿಸುವ ಜಗತ್ತನ್ನು ಅರ್ಥಮಾಡಿಕೊಳ್ಳುವ ಮಾನವ ಪ್ರಯತ್ನದ ಭಾಗವಾಗಿದೆ. ಒಂದು ಇನ್ನೊಂದರಿಂದ ಅರ್ಥವಾಗುವಂಥದಲ ಅಥವಾ ಎರಡನ್ನೂ ಒಂದಕ್ಕೆ ಸರಳೀಕರಿಸುವುದೂ ಸಾಧ್ಯವಿಲ್ಲ... ಒಂದು ಇನ್ನೊಂದಕ್ಕೆ ಪೂರಕ. ಯಾವುದೊಂದೂ ಪೂರ್ಣ ಕಥೆಯನ್ನು ಹೇಳುವುದಿಲ್ಲ...

ಜ್ಞಾನದ ಸ್ವರೂಪವನ್ನು ಚರ್ಚಿಸುತ್ತ, ಭೌತ ವಿಜ್ಞಾನದಿಂದ ಬರುವ ಜ್ಞಾನದ ಮಿತಿಯನ್ನು ತೋರಿಸುತ್ತ "States of Consciousness and State-Specific Sciences" ಎಂಬ ಲೇಖನದಲ್ಲಿ ಚಾರ್ಲ್ಸ್ ಟಿ. ಟಾರ್ಟ್ (ಅದೇ ಪುಟಗಳು ೪೧, ೪೫, ೫೯, ೬೦) ಹೇಳುತ್ತಾನೆ :

ಬ್ಲಾಕ್ ಬರ್ನ್ ಅವರು ನಮ್ಮ ಅನೇಕ ಮಹಾಪ್ರತಿಭಾವಂತ ತರುಣರು ವಿಜ್ಞಾನಕ್ಕೆ ಬೆನ್ನುತಿರುಗಿಸಿದ್ದಾರೆಂದು ಹೇಳಿದರು...

ನಾನು ಹೀಗೆ ಅನೇಕ ಚುರುಕಾದ ಹುಡುಗರು ವಿಜ್ಞಾನವನ್ನು ತಿರಸ್ಕರಿಸಿರುವುದನ್ನು ಕ್ಯಾಲಿಫೋರ್ನಿಯದಲ್ಲಿ ಕಂಡಿದ್ದೇನೆ. ಈ ಸಮಸ್ಯೆ ನಿಜವಾಗಿ ಬಹಳ ಗಂಭೀರವಾದದ್ದು....

ಜ್ಞಾನ ಎಂದರೆ ಎರಡು ವಿಭಿನ್ನ ಅನುಭವಗಳ ಒಂದುಗೂಡುವಿಕೆ ಮತ್ತು ಹೊಂದಿಕೊಳ್ಳುವಿಕೆ ಎಂಬ ಪ್ರಾಯೋಗಿಕ ಭಾವ ಎಂದು ಲಕ್ಷಣೀಸಬಹುದು. ಇವುಗಳಲ್ಲಿ ಒಂದು,

ಹೊರ ಜಗತ್ತನ್ನೂ ಇತರರನ್ನೂ ನಮ್ಮನ್ನೂ ನಾವು ನೋಡುವ ಕ್ರಿಯೆ; ಇನ್ನೊಂದು, ತಿಳಿವಳಿಕೆಯ ಕ್ರಮ, ಯೋಜನೆ ಅಥವಾ ಸಿದ್ಧಾಂತ.

ವಿಚಾರ ಎಂಬುದು ಒಂದು ಸಾಧನ. ಊಹೆಗಳಿಗೆ, ನಂಬಿಕೆಗಳಿಗೆ, ಆವಶ್ಯಕತೆಗಳಿಗೆ ಬಳಸಿಕೊಳ್ಳಬಹುದಾದ ಒಂದು ಸಾಧನ. ಇವುಗಳೆಲ್ಲ ತಾವಾಗಿ ವಿಚಾರಕ್ಕೆ ಒಳಪಡತಕ್ಕುವಲ್ಲ. ಅ-ವಿಚಾರವಾದದ್ದು ಮಾನವ ಸಂದರ್ಭದಿಂದ ಮಾಯವೇನೂ ಆಗುವುದಿಲ್ಲ. ನಾವು ಭೌತವಿಜ್ಞಾನಗಳ ಅಭಿವೃದ್ಧಿಯಲ್ಲಿ ಅಪಾರ ಯಶಸ್ಸು ಪಡೆದಿದ್ದೇವೆ ನಿಜ. ಆದರೆ ಅವುಗಳಿಂದ ಜೀವನದ ಉತ್ತಮ ತತ್ತ್ವಸಿದ್ಧಾಂತಗಳನ್ನು ರೂಪಿಸಿಕೊಳ್ಳುವುದಾಗಲಿ ಅಥವಾ ನಮ್ಮ ಆತ್ಮಜ್ಞಾನವನ್ನು ಬೆಳೆಸಿಕೊಳ್ಳುವುದಾಗಲಿ ಸಾಧ್ಯವಾಗಲಿಲ್ಲ. ನಾವು ಇಂದು ಬೆಳೆಸಿರುವ ವಿಜ್ಞಾನಗಳು ನಿಜವಾಗಿ ಮಾನವ ವಿಜ್ಞಾನಗಳಲ್ಲ. ಹೇಗೆ ಮಾಡಬೇಕು ಎಂಬುದನ್ನಷ್ಟೆ ಅವು ತಿಳಿಸುತ್ತವೆ. ಆದರೆ ಏನು ಮಾಡಬೇಕು, ಏನು ಮಾಡಬಾರದು, ಅಥವಾ ಏಕೆ ಮಾಡಬೇಕು ಎಂಬ ಪ್ರಶ್ನೆಗಳಿಗೆ ವೈಜ್ಞಾನಿಕ ಒಳನೋಟಗಳನ್ನು ಅವು ಕೊಡುವುದಿಲ್ಲ.

## ೮. ವೇದಾಂತ ಮತ್ತು ಆಧುನಿಕ ವಿಜ್ಞಾನಗಳಲ್ಲಿ ಕ್ಷೇತ್ರ ಕಲ್ಪನೆ

ಪ್ರಜ್ಞೆಯ ವಿಷಯಕ್ಕೆ ಸಂಬಂಧಿಸಿದಂತೆ ವ್ಯವಹರಿಸುವಾಗ ನಾವು ಅನುಭವದ ವಿಷಯಕ್ಕೆ ಬರುತ್ತೇವೆ. ಜೀವಕಾರವು ಕಾಣಿಸಿಕೊಂಡಾಗ ವಿಕಾಸವು ಪ್ರಕಟಿಸುವ ಹೊಸ ದತ್ತಾಂಶ ಯಾವುದೆಂದರೆ 'ಅನುಭವ'. ಇದು ವಿಕಾಸವನ್ನು ಬ್ರಹ್ಮಾಂಡದ ಹಂತದಿಂದ ಜೈವಿಕ ಹಂತಕ್ಕೆ ಪರಿವರ್ತಿಸುತ್ತದೆ. ಆಕಾಶ, ಕಾಲ, ನೀಹಾರಿಕೆ ಅಥವಾ ನಕ್ಷತ್ರಗಳಿಗೆ 'ಅನುಭವ' ಇಲ್ಲ. ಅವಕ್ಕೆ ಅಸ್ತಿತ್ವವಿದೆ, ಇರುವಿಕೆ ಇದೆ ಆದರೆ ಅವು ಅನುಭವಿಸುವುದಿಲ್ಲ. ವೇದಾಂತದ ಪರಿಭಾಷೆಯಲ್ಲಿ ಹೇಳುವುದಾದರೆ ಅವಕ್ಕೆ ಸತ್ (ಇರುವಿಕೆ) ಉಂಟು, ಚಿತ್ (ಪ್ರಜ್ಞೆ) ಇಲ್ಲ. ಆದರೆ ಜೀವಕಣಗಳಲ್ಲಿ ಸತ್‌ಚಿತ್ ಎರಡೂ ಉಂಟು. ಪ್ರಜ್ಞೆಯು ತನ್ನ ಪರಿಸರದ ಪ್ರಾಥಮಿಕ ಅನುಭವದಲ್ಲಿ ಅಥವಾ ಎಚ್ಚರದಲ್ಲಿ ಇರುವುದನ್ನು ಜೀವಕಣವು ತೋರಿಸಿಕೊಡುತ್ತದೆ. ಅಲ್ಲಿಂದ ಮುಂದೆ ಜೀವಿಯ ಬೆಳವಣಿಗೆಯ ಪ್ರತಿ ಘಟ್ಟದಲ್ಲೂ ಪ್ರಜ್ಞೆಯು ಕ್ರಮವಾಗಿ ಅರಳಿಕೊಳ್ಳುತ್ತ ಹೋಗುವುದನ್ನು ನೋಡುತ್ತೇವೆ. ಈ ಬೆಳವಣಿಗೆಯ ಘಟ್ಟಗಳು ಒಂದು ದೊಡ್ಡ ತಿರುವು ಪಡೆಯುವುದು ವಿಕಾಸದ ದೃಶ್ಯದಲ್ಲಿ ಮಾನವ ಕಾಣಿಸಿಕೊಂಡಾಗ. ಈ ಹಂತದಲ್ಲಿ ವಸ್ತು ಪ್ರಜ್ಞೆಯ ಜೊತೆಗೆ ಆತ್ಮ-ಪ್ರಜ್ಞೆಯೂ ಸೇರಿಕೊಳ್ಳುತ್ತದೆ ; ವಿಷಯ ಪ್ರಜ್ಞೆಯ ಜೊತೆಗೆ ವಿಷಯಿ ಪ್ರಜ್ಞೆಯೂ ಸೇರಿಕೊಳ್ಳುತ್ತದೆ.

ಈ ಘಟ್ಟದಲ್ಲಿ ಪ್ರಜ್ಞೆಯು ತನ್ನ ಎಲ್ಲೆಗಳನ್ನು ವಿಸ್ತರಿಸಿಕೊಳ್ಳುತ್ತದೆ. ಇದರ ಪರಿಣಾಮವಾಗಿ ಬಾಹ್ಯ ಪರಿಸರದ ಬಲುಮಟ್ಟಿನ ಅರಿವು ಮತ್ತು ಆಧಿಪತ್ಯ ಮನುಷ್ಯನಿಗೆ ಬರುತ್ತದೆ ಮತ್ತು ಸ್ವಲ್ಪ ಮಟ್ಟಿಗೆ ತನ್ನ ವಿಷಯದ ಬಗೆಗೆ, ಆತ್ಮದ ವಿಷಯದ ಬಗೆಗೆ ಸ್ಥೂಲ ಜ್ಞಾನವೂ ಉಂಟಾಗುತ್ತದೆ. ಆಗ ಪ್ರಾಥಮಿಕ ಮಟ್ಟದಿಂದ ಎರಡನೆಯ ತಾರ್ಕಿಕ ಅಥವಾ ಬೌದ್ಧಿಕ ಮಟ್ಟಕ್ಕೆ ಜ್ಞಾನವು ಏರುತ್ತದೆ.

ಎಲ್ಲ ಜ್ಞಾನವೂ ವಿಷಯಿಯು ವಿಷಯವನ್ನು ಅರಿಯುವುದರಿಂದ ಆರಂಭ. ಈ ವಿಧಾನದ ತುತ್ತತುದಿಯಲ್ಲಿ ಅಂದರೆ ಪ್ರತ್ಯಕ್ಷಜ್ಞಾನದವರೆಗಿನ ವಿಸ್ತೃತ ವಲಯದಲ್ಲಿ ಮನುಷ್ಯನ ಮತ್ತು ಪ್ರಕೃತಿಯ ನಿಗೂಢವನ್ನು ಪತ್ತೆಹಚ್ಚಬಹುದೆಂದು ವೇದಾಂತವು ಕಂಡುಕೊಂಡಿತು. ಇದು ಸಾಧ್ಯವಾಗುವುದು, ಮೊದಲು ಆರಂಭಿಕವಾಗಿ ಆಂತರಿಕವಾಗಿ ಒಳಹೊಕ್ಕು ವ್ಯಕ್ತಿಯ ಸ್ವರೂಪವನ್ನು ಅಂದರೆ ಆತ್ಮವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿ, ಮುಂದೆ ವಸ್ತುಜಗತ್ತಿನ ಸ್ವರೂಪವನ್ನು ಶೋಧಿಸಿ, ಅನಂತರ ಜ್ಞಾನದ ಸ್ವರೂಪವನ್ನು ಅರಿಯುವ ಸಾಹಸಶೀಲ ಶೋಧನೆಯನ್ನು ಕೈಗೊಂಡಾಗ ಅನುಭವಿತ, ಅನುಭವಿಕ ಮತ್ತು ಅನುಭವ ಇವುಗಳ ನಡುವೆ ವೇದಾಂತವು 'ಅನುಭವ'ದ

ಸ್ವರೂಪವನ್ನು ಶೋಧಿಸಲು ಮೊದಲಿಟ್ಟಿತು. ಸಂಸ್ಕೃತದಲ್ಲಿ ಅನುಭವ, ಜ್ಞಾನ ಎಂಬ ಶಬ್ದಗಳಿರುವಂತೆಯೇ ಜ್ಞಾತ (ತಿಳಿಯುವವನು) ಜ್ಞೇಯ (ತಿಳಿಯಬೇಕಾದ ವಸ್ತು) ಶಬ್ದಗಳಿವೆ. ಈ ಜ್ಞಾನ, ಜ್ಞಾತ, ಜ್ಞೇಯಗಳನ್ನು ವೇದಾಂತದ ಪರಿಭಾಷೆಯಲ್ಲಿ 'ತ್ರಿಪುಟಿ' (ಮೂರರ ಗುಂಪು) ಎನ್ನುತ್ತಾರೆ. ಅನುಭವ ಅಥವಾ ಜ್ಞಾನವು ಪ್ರಜ್ಞೆಯ ಕ್ಷೇತ್ರವೆಂದೂ ಉಳಿದ ಜ್ಞೇಯ ವಸ್ತುಗಳೆಲ್ಲವೂ ಹಾಗೂ ತಿಳಿಯುವವರಾದ ಜ್ಞಾತೃಗಳೆಲ್ಲರೂ ಚಲನಾತ್ಮಕ ವಿನ್ಯಾಸಗಳೆಂದೂ ವೇದಾಂತವು ಕಂಡು ಕೊಂಡಿತು. ಅದು ಆತ್ಮನ ಅಂತಿಮ ಸತ್ಯವನ್ನು ಬ್ರಹ್ಮ ಅಥವಾ ಆತ್ಮಸ್ವರೂಪ ಅಥವಾ ಅನುಭವ ಸ್ವರೂಪ ಅಥವಾ ಚಿತ್ ಸ್ವರೂಪ ಎಂದು ನಿರ್ದೇಶಿಸಿತು.

ಕೆಲವು ಉಪನಿಷತ್ತುಗಳು ಇದನ್ನು 'ಸತ್ಯಸ್ಯ ಸತ್ಯಂ' (ಬೃಹದಾರಣ್ಯಕ ಉಪನಿಷತ್ ೨.೧.೨೦); ಪ್ರಜ್ಞಾನಂ ಬ್ರಹ್ಮ (ಐತರೇಯ ಉಪನಿಷತ್ ೫.೩) ಸತ್ಯಂ ಜ್ಞಾನಂ ಅನಂತಂ ಬ್ರಹ್ಮ (ತೈತ್ತಿರೀಯ ಉಪನಿಷತ್ ೨.೧) ; ಸರ್ವಂ ಹ್ಯೇತತ್ ಬ್ರಹ್ಮ, ಅಯಂ ಆತ್ಮಾಬ್ರಹ್ಮ, ಸೋಽಯಂ ಆತ್ಮಾ ಚತುಷ್ಪಾತ್—ಈ ವ್ಯಕ್ತ ವಿಶ್ವವೆಲ್ಲ ಬ್ರಹ್ಮ, ಈ ಆತ್ಮವು ಬ್ರಹ್ಮ, ಈ ಆತ್ಮವು ಜಾಗರ ಸ್ವಪ್ನ ಸುಷುಪ್ತಿ ಮತ್ತು ತುರೀಯ ಎಂಬ ನಾಲ್ಕು ಅವಸ್ಥೆಗಳಲ್ಲಿ ಅಭಿವ್ಯಕ್ತವಾಗಿದೆ (ಮಾಂಡಕ್ಯ ಉಪನಿಷತ್ ೨) ಎಂದು ಸಾರುತ್ತದೆ.

ಪ್ರಾಚೀನ ವೇದಾಂತದ ಈ ಬೆಳವಣಿಗೆಗೆ ಸಂವಾದಿಯಾದದ್ದು ಆಧುನಿಕ ಭೌತಶಾಸ್ತ್ರದ 'ಎಲೆಕ್ಟ್ರೋ ಮ್ಯಾಗ್ನಟಿಕ್ ಫೀಲ್ಡ್' ಎಂಬ ಭಾವ. ಹಿಂದೆ ಫ್ಯಾರಡೆ ಮತ್ತು ಮ್ಯಾಕ್ಸ್‌ವೆಲ್ ಇದನ್ನು ಪರಿಚಯಿಸಿದರು. ಅವರು ಪ್ರಚಲಿತವಿದ್ದ ಯಾಂತ್ರಿಕ ಕಲ್ಪನೆಯನ್ನು 'ಶಕ್ತಿಕ್ಷೇತ್ರ' ಎಂಬ ಇನ್ನೂ ಸೂಕ್ಷ್ಮ ಕಲ್ಪನೆಯಾಗಿ ಬದಲಾಯಿಸಿದರು. ಈ ಶಕ್ತಿಕ್ಷೇತ್ರಕ್ಕೆ ತನ್ನದೇ ಆದ ಸತ್ಯವಿದೆ, ಯಾವುದೇ ವಸ್ತು ಘಟಕಗಳನ್ನು ಉಲ್ಲೇಖಿಸದೆ ಇದನ್ನು ಶೋಧಿಸಬಹುದು ಎಂದು ತೋರಿಸಿಕೊಟ್ಟರು. ಈ ಕ್ರಾಂತಿಯನ್ನು ಈ ಶತಮಾನದಲ್ಲಿ ಕ್ವಾಂಟಮ್ ಕ್ಷೇತ್ರ, ಗುರುತ್ವಾಕರ್ಷಣ ಕ್ಷೇತ್ರಗಳನ್ನು ಪರಮಾಣು ವಿಜ್ಞಾನ ಹಾಗೂ ಸಾಪೇಕ್ಷ ಸಿದ್ಧಾಂತಗಳ ಸಹಾಯದಿಂದ ಕಂಡು ಹಿಡಿಯುವುದರ ಮೂಲಕ ಮತ್ತಷ್ಟು ಮುಂದೊಯ್ಯಲಾಯಿತು. ಈ ಕ್ರಾಂತಿಕಾರಕ ಕ್ಷೇತ್ರ ಕಲ್ಪನೆಯು ಈಗ ಜೀವಶಾಸ್ತ್ರದ ಭ್ರೂಣ ವಿಜ್ಞಾನ ಕ್ಷೇತ್ರಕ್ಕೆ ಕಾಲಿಟ್ಟಿದೆ. ಜೀವಶಾಸ್ತ್ರಜ್ಞನಾದ ರಿಚರ್ಡ್ ಡವೆನ್‌ಪೋರ್ಟ್ ("An Outline of Animal Development" ಪುಟಗಳು ೨೪೨, ೨೪೫-೨೫೦) ಹೇಳುವಂತೆ :

*ವ್ಯಕ್ತೀಕರಣ ಪದ್ಧತಿಗಳಲ್ಲಿ ಸ್ಥಾನಿಕ ಮಾಹಿತಿಗಳನ್ನು ಹೇಳುವ ವ್ಯವಸ್ಥಾ ಘಟಕವೇ 'ಭ್ರೂಣಕ್ಷೇತ್ರ' ಎನ್ನಬಹುದು. ಭ್ರೂಣಕ್ಷೇತ್ರದ ಲಕ್ಷಣವನ್ನು ಹೇಳುವಾಗ ಸ್ಥಾನಸ್ಥ ಮಾಹಿತಿಯನ್ನು ತಿಳಿಸುವ, ಸಾಮಾನ್ಯ ಮೂಲಕ್ಕೆ ಸೇರುವ ಒಂದು ಪಾರ್ಶ್ವ ವ್ಯವಸ್ಥೆ ಎಂದು ಹೇಳುತ್ತೇವೆ. ಅಷ್ಟೇ ಅಲ್ಲದೆ ಇದು ಮಾಹಿತಿ ವ್ಯವಸ್ಥೆಯನ್ನು, ಅದರ ಅಂಗಾಂಶಗಳನ್ನು ಮತ್ತು ಅವುಗಳ ಪ್ರತಿಸ್ಪಂದನಗಳನ್ನು ಪುನರ್ ವ್ಯವಸ್ಥೆಗೊಳಿಸಬಲ್ಲುದು. ಈ ವ್ಯವಸ್ಥೆಯೊಳಗೇ ಆಗುವ ಸ್ಥಾನ ಸಂಬಂಧದ ಗೊಂದಲವನ್ನು ಪುನರ್ ವ್ಯವಸ್ಥೆಗೊಳಿಸಬಲ್ಲುದು.*

*ಕ್ಷೇತ್ರಗಳ ಹಿಂದಿನ ಗುಣಗಳ ಪರಿಶೀಲನೆಯಿಂದ ಅವು ಭಿನ್ನೀಕರಣ ಹಾಗೂ ವ್ಯಕ್ತೀಕರಣಗಳ ನಿರ್ಣಯಕ್ಕೆ ಸಹಾಯಕವಾದ ಜೀವಕಣಗಳ ಇತಿಮಿತಿಗಳನ್ನು ಸೂಚಿಸುತ್ತದೆ. ಜನನ-ವಿಕಾಸಗಳ ರಹಸ್ಯವನ್ನು ಬಿಡಿಸುವ ಒಂದೇ ಕೀಲಿಕೈ ಎಂದರೆ ಭ್ರೂಣಕ್ಷೇತ್ರ. ಭ್ರೂಣ ವ್ಯವಸ್ಥೆಗಳನ್ನು ಅದರ ಅತ್ಯಗತ್ಯ ಘಟಕ ಮತ್ತು ಗುಣಗಳಿಗೆ ಇಳಿಸಿದಾಗ ಇವು ಕ್ಷೇತ್ರಗಳ ಗುಣಗಳೊಂದಿಗೆ ಸಮ್ಮಿಳಿತವಾಗುತ್ತವೆ. ಜನನ-ವಿಕಾಸಗಳನ್ನು ರೂಪಿಸುವ ಗುಣಘಟಕಗಳನ್ನು ಹಾಳುಮಾಡದೆ ಭ್ರೂಣ ಪದ್ಧತಿಗಳನ್ನು ಅದರ ಅಂಗಾಂಶಗಳಿಂದಾಚೆಗೆ ಸಂಕುಚಿತಗೊಳಿಸಲಾಗುವುದಿಲ್ಲ. ಮೊಟ್ಟೆ ಅಂಥ ಒಂದು ಕ್ಷೇತ್ರ. ಅದರ ಕ್ಷೇತ್ರಗುಣಗಳನ್ನು ಉಳಿಸುವಷ್ಟರ ಮಟ್ಟಿಗೆ ಮಾತ್ರ ಅದನ್ನು*

ಉಪವಿಭಾಗಿಸಬಹುದು ಅಷ್ಟೆ. ಮುಂದಿನ ಬೆಳವಣಿಗೆಯ ಹಂತದಲ್ಲಿ ಮೊಟ್ಟೆಯ ಮೂಲ ಏಕೈಕ ಕ್ಷೇತ್ರವು ಸಣ್ಣ ಸಣ್ಣ ಮತ್ತು ಹೆಚ್ಚು ನಿರ್ಬಂಧಿಸಿದ ಕ್ಷೇತ್ರವಾಗಿ ಒಡೆದುಕೊಳ್ಳುತ್ತದೆ. ಅವೆಲ್ಲ ಒಂದು ಸಣ್ಣ ಪ್ರಮಾಣದಲ್ಲಿ ವ್ಯವಹರಿಸುತ್ತ ವಸ್ತುತಃ ಅವೇ ಮೂಲಭೂತಗುಣಗಳನ್ನು ಹೊಂದಿರುತ್ತವೆ.

ಮತ್ತೆ, ನ್ಯೂಕ್ಲಿಯರ್ ಭೌತಶಾಸ್ತ್ರದ ಕ್ರಾಂತಿಕಾರಕ ಬದಲಾವಣೆಗಳೊಂದಿಗೆ ಜೀವಶಾಸ್ತ್ರವನ್ನು ಅನುಬಂಧಿಸಿ ಡವೆನ್ ಪೋರ್ಟ್ ಹೇಳುತ್ತಾನೆ (ಅದೇ ಪು. ೩೯೦) :

ಜೀವಶಾಸ್ತ್ರವು ಭೌತಶಾಸ್ತ್ರದ ಅನುಭವದಿಂದ ಪ್ರಯೋಜನ ಪಡೆಯಬೇಕು. ಆಗ ಅದಕ್ಕೆ ವಿಶ್ಲೇಷಣೆಯ ಸಂದರ್ಭದಲ್ಲಿ ಏನಾಗುತ್ತದೆಂಬುದು ತಿಳಿದುಬರುತ್ತದೆ ಮತ್ತು ವ್ಯವಸ್ಥೆಯ ಪ್ರತಿ ಘಟ್ಟವೂ, ಅದರಲ್ಲಿ ವಿಶಿಷ್ಟ ಅಂತಸ್ಸಂಪರ್ಕ ಇರುವುದರಿಂದ, ವಿಶಿಷ್ಟಶಕ್ತಿಗಳಿಂದ ಅಭಿವ್ಯಕ್ತವಾಗುತ್ತದೆ, ಎಂಬ ಅಂಶವನ್ನು ಒಪ್ಪಿಕೊಳ್ಳುತ್ತದೆ. ಜೀವ ಅಜೀವಕ್ಕಿಂತ ವಿಶಿಷ್ಟವಾದುದು. ನಿರವಯವ ವ್ಯವಸ್ಥೆಗಳಿಗೆ ಮಾರಕವಾಗದ ಶಕ್ತಿಗಳ ವ್ಯವಸ್ಥೆಯಿಂದ ಅದು ಕೂಡಿದೆ ಹಾಗೂ ಅದರ ಕೆಳಗಿನ ರಚನಾ ಸ್ತರಗಳಲ್ಲಿ ಉನ್ನತ ಸ್ತರದ ರಚನೆಗಳ ಅಂತಸ್ಸಂಪರ್ಕವಿರುತ್ತದೆ. ಅಂಥ ಒಂದು ವಿಶಿಷ್ಟ ಪ್ರತಿಬಂಧದ ಮೂಲಕ ವಿಕಾಸವು ಸಾವಯವ ಜಗತ್ತನ್ನು ಸೃಷ್ಟಿಸಿದೆ ಮತ್ತು ಈ ಸಾವಯವ ಜಗತ್ತಿನಿಂದ ನಮ್ಮ ಭೌತಿಕ ಸತ್ಯದ ವಿವರಣೆ ಸಾಧ್ಯವಾಗಿದೆ. ಪ್ರಜ್ಞೆಯ ಶಕ್ತಿಗಳ ನಿರ್ಬಂಧಕ್ಕೆ ಒಳಗಾಗಿ ವೀಕ್ಷಕ (ಸಾಕ್ಷಿ) ಮತ್ತು ವೀಕ್ಷಿತ ವಸ್ತುಗಳ ನಡುವೆ ಅಂತಃಸ್ಪಂದನದಿಂದ ಈ ಕ್ರಿಯೆ ನಡೆಯುತ್ತದೆ. ಆದುದರಿಂದ ವಿಶ್ವಶಕ್ತಿಗಳ ವ್ಯವಸ್ಥೆಯ ಸ್ಥಳೀಯ ಅನುಭವಗಳ ಸೂಕ್ತ ವಿವರಣೆಗಳೆಂದು ಪ್ರತಿಸ್ತರವನ್ನು ಸಮಾನವಾಗಿ ಸ್ವೀಕರಿಸಬೇಕು. ಈ ಶಕ್ತಿವ್ಯವಸ್ಥೆಯು ಜಗತ್ತಿನ ಆಯುಸ್ಸನ್ನು ನಿರ್ಧರಿಸುತ್ತದೆ.

ಕೊನೆಗೆ ಯಾಂತ್ರಿಕ ಪರಿಭಾಷೆಯಲ್ಲಿ ಮತ್ತು ಭಾವನೆಯಲ್ಲಿ ವಿಜ್ಞಾನವನ್ನು ಕೇವಲ ಒಂದು ಶಾಸ್ತ್ರ, ವಿಭಾಗ ಎಂದು ಪರಿಗಣಿಸುವ ಸಂಪ್ರದಾಯದಿಂದ ಮುಕ್ತಗೊಳಿಸಬೇಕು ಎಂದು ಪ್ರಾರ್ಥಿಸುತ್ತ ರಿಚರ್ಡ್ ಡವೆನ್‌ಪೋರ್ಟ್ ತನ್ನ ಗ್ರಂಥವನ್ನು ಮುಕ್ತಾಯ ಮಾಡುತ್ತಾನೆ (ಅದೇ ಪುಟಗಳು ೪೦೨-೩) :

. ಜೀವ ವಿಜ್ಞಾನವು ಮುಂದಿನ ಮಹಾನ್ ವಿಜ್ಞಾನ ಕ್ರಾಂತಿಯನ್ನು ಉತ್ಪಾದಿಸಬಹುದು. ಆದರೆ ಅದು ಯಾಂತ್ರಿಕವಾದ ಭೌತಶಾಸ್ತ್ರದ ಯಾವುದೇ ಬಗೆಯ ಅನುಕರಣದಿಂದಲ್ಲ. ಅದು ತನ್ನ ಸ್ವಂತದ ರಚನಾ ಸಾಮ್ರಾಜ್ಯದ ವಾರಸುತನವನ್ನು ಗುರುತಿಸಿಕೊಳ್ಳುವುದರ ಮೂಲಕ ಮತ್ತು ಈ ಸಾಮ್ರಾಜ್ಯವು ನಮ್ಮ ಜ್ಞಾನದ ಸ್ವರೂಪದ ಮೇಲೆ ತರುವ ನಿರ್ಬಂಧದ ಮೂಲಕ ಹೊಸ ಕ್ರಾಂತಿಯನ್ನು ಉತ್ಪಾದಿಸುತ್ತದೆ. ಇದೇ ಸಂದರ್ಭದಲ್ಲಿ ರಾಚನಿಕ ವಿವರಣೆಗಳ ಎಲ್ಲ ಸ್ತರಗಳೂ ಸಮಾನವಾಗಿ ಅಸಮರ್ಪಕ ಎಂಬುದನ್ನು ಅದು ಒಪ್ಪಿಕೊಳ್ಳಬೇಕು. ಅಂಥ ಅರಿವನ್ನು ಪಡೆಯುವುದರಲ್ಲಿಯೇ ನಮ್ಮ ವಿಶ್ಲೇಷಣ ಚಟುವಟಿಕೆಗಳ ಮಹಾನ್ ಶಕ್ತಿ ಅಡಗಿದೆ. ಆ ಶಕ್ತಿ ನಮ್ಮ ಸ್ವರೂಪವನ್ನು ಒಳಹೊಕ್ಕು ನೋಡಲು ಸಹಾಯ ಮಾಡುತ್ತದೆ. ಅನುಭವವು ನಮ್ಮ ಅಹಂಕಾರಯುಕ್ತ ನಿರೀಕ್ಷೆಗಳೊಂದಿಗೆ ಹೊಂದಿಕೊಳ್ಳುವಂತೆ ಒತ್ತಡ ತರುವುದರಲ್ಲಿ ವಿಫಲವಾದಾಗ ಈ ಒಳನೋಟವು ರೂಪುಗೊಳ್ಳುತ್ತದೆ ; ಅಲ್ಲದೆ ಎಲ್ಲವೂ ಸಂಗಮಿಸುವ ನೈಜಕೇಂದ್ರವನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತದೆ. ಈ ಕೇಂದ್ರವು ಎಲ್ಲ ರಚನೆಗಳನ್ನೂ ಸಿದ್ಧಾಂತಗಳನ್ನೂ ಬೆಂಬಲಿಸುತ್ತದೆ. ಕೆಲವರು ಭಾವಿಸುವಂತೆ, ಈ ಒಳನೋಟವು ವಿಜ್ಞಾನದ ಮುಕ್ತಾಯಕ್ಕೆ ಕಾರಣವಾಗುವುದಿಲ್ಲ. ಬದಲಾಗಿ ವಿಜ್ಞಾನ ಎಂಬದ ಶಬ್ದದ

*('ತಿಳಿಯುವಿಕೆ'ಯ) ಎಲ್ಲ ಅರ್ಥಗಳಲ್ಲಿ ನಾವು ಬದುಕುವಂತೆ ಮಾಡುತ್ತದೆ. ನಮ್ಮ ಪಕ್ಷಪಾತ ದೃಷ್ಟಿಯನ್ನು ಬದಿಗಿಟ್ಟು, ನಾವು ಒಂದು ಅಲಿಪ್ತ ಜಾಗವನ್ನು ಸೃಷ್ಟಿಸಬಹುದು. ಅಲ್ಲಿ ನಮ್ಮ ಪ್ರಜ್ಞೆಯು ರೂಪುಗೊಳಿಸಿರುವ ಸತ್ಯವು ಆಳವಾದ ಅರ್ಥದಲ್ಲಿ ಸಾಂಕೇತಿಕವಾಗಿದ್ದು ಇದು ಎಲ್ಲ ಅನುಭವಗಳೂ ಯಾವುದರಿಂದ ಹರಿದುಬರುತ್ತದೊ ಆ ಅವರ್ಣನೀಯವಾದ 'ಪ್ರಕೃತಿ'ಯ ಕಡೆಗೆ ನಿರಂತರವಾಗಿ ಬೊಟ್ಟು ಮಾಡುತ್ತದೆ ಎಂಬುದನ್ನು ನಾವು ಸ್ವಲ್ಪ ಸ್ವಲ್ಪವಾಗಿ ಅರಿಯುತ್ತೇವೆ.*

## ೯. ಪ್ರಜ್ಞಾಕ್ಷೇತ್ರವಾಗಿ ಆತ್ಮಬ್ರಹ್ಮಗಳ ಸಮಗ್ರ ಸ್ವರೂಪ

ಈ ಸಂದರ್ಭದಲ್ಲಿ ವೇದಾಂತವು ಸಮಗ್ರವಾಗಿ ಗ್ರಹಿಸಿರುವ ಪ್ರಕೃತಿಸ್ವರೂಪವನ್ನು ಕುರಿತು ಹೇಳಬಹುದು. ಅದು ಭೌತಿಕ, ಜೀವ ವೈಜ್ಞಾನಿಕ ಮತ್ತು ಆತ್ಮಿಕ ಅಂಶಗಳನ್ನು ಶುದ್ಧ ಪ್ರಜ್ಞೆಯೊಂದಿಗೆ ಮಿಳಿತಗೊಳಿಸಿದೆ. ವೇದಾಂತದಲ್ಲಿ ದೇವರು ಎಂಬುದಕ್ಕೆ ಇದೇ ಅರ್ಥ. ತಾನೇ ಎಲ್ಲರ ಅನಂತ ಆತ್ಮ ಎಂದು ಗುರುತಿಸಿಕೊಂಡು ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳುತ್ತಾನೆ. (೭.೪-೬) :

ಭೂಮಿರಾಪೋಽನಲೋವಾಯುಃ
ಖಂ ಮನೋ ಬುದ್ಧಿರೇವಚ ;
ಅಹಂಕಾರ ಇತೀಯಂ ಮೇ
ಭಿನ್ನಾ ಪ್ರಕೃತಿರಷ್ಟಧಾ—

*ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು ಬುದ್ಧಿ ಅಹಂಕಾರ ಎಂದು ಈ ನನ್ನ ಪ್ರಕೃತಿಯು ಭಿನ್ನವಾದ ಅಷ್ಟರೂಪಗಳಲ್ಲಿರುತ್ತದೆ.*

ಅಪರೇಯಮಿತಸ್ತ್ವನ್ಯಾಂ
ಪ್ರಕೃತಿಂ ವಿದ್ಧಿ ಮೇ ಪರಾಮ್ ;
ಜೀವಭೂತಾಂ ಮಹಾಬಾಹೋ
ಯಯೇದಂ ಧಾರ್ಯತೇ ಜಗತ್—

*ಇದು ನನ್ನ ಅಪರಾ ಪ್ರಕೃತಿ, ಇದಕ್ಕಿಂತ ಭಿನ್ನವಾದ ಜೀವರೂಪವಾದ ನನ್ನ ಪರಾಪ್ರಕೃತಿಯನ್ನು ತಿಳಿದುಕೋ. ಅದರಿಂದಲೇ ಈ ಜಗತ್ತು ಧರಿಸಲ್ಪಟ್ಟಿದೆ.*

ಏತತ್ ಯೋನೀನಿ ಭೂತಾನಿ
ಸರ್ವಾಣೀತ್ಯುಪಧಾರಯ ;
ಅಹಂ ಕೃತ್ಸ್ನಸ್ಯ ಜಗತಃ
ಪ್ರಭವಃ ಪ್ರಲಯಸ್ತಥಾ—

*ಸರ್ವಭೂತಗಳೂ ನನ್ನ ಈ ಎರಡು ಪ್ರಕೃತಿಗಳಿಂದ ಉಂಟಾಗಿವೆಯೆಂದು ತಿಳಿ. ನಾನು ಸಮಸ್ತ ಜಗತ್ತಿನ ಸೃಷ್ಟಿಲಯಗಳಿಗೆ ಕಾರಣನಾಗಿದ್ದೇನೆ.*

ಕೊನೆಯ ಶ್ಲೋಕದ ಮೇಲೆ ವ್ಯಾಖ್ಯಾನ ಮಾಡುತ್ತ ಆಚಾರ್ಯ ಶಂಕರರು ಹೇಳುತ್ತಾರೆ :

ಪ್ರಕೃತಿ-ದ್ವಯ-ದ್ವಾರೇಣ ಅಹಂ
ಸರ್ವಜ್ಞಾ ಈಶ್ವರೋ ಜಗತಃ ಕಾರಣಂ—

*ಈ 'ಅಪರಾ' ಮತ್ತು 'ಪರಾ' ಪ್ರಕೃತಿಗಳ ಮೂಲಕ ನಾನು ಸರ್ವಜ್ಞ ಈಶ್ವರ ಆಗಿದ್ದೇನೆ, ಈ ಜಗತ್ತಿಗೆ ಕಾರಣನಾಗಿದ್ದೇನೆ.*

ಸಂಸ್ಕೃತದಲ್ಲಿ ಇಂಗ್ಲಿಷಿನ 'ಕಾನ್‌ಷಸ್‌ನೆಸ್' ಶಬ್ದಕ್ಕೆ ಚಿತ್, ಪ್ರಜ್ಞಾ, ಜ್ಞಾಪ್ತಿ, ಜ್ಞಾನ, ಬೋಧ, ಸಂವಿತ್ ಮೊದಲಾದ ಸಂವಾದೀ ಪದಗಳಿವೆ. ಸಂದರ್ಭಾನುಸಾರವಾಗಿ ಅವು ಅನಂತ, ಶುದ್ಧ ಪ್ರಜ್ಞೆ, ಜ್ಞಾನ, ವಿವೇಕ ಎಂದಾಗುತ್ತವೆ.

ಪಂಚದಶೀಯಲ್ಲಿ ಸಂವಿತ್ ಶಬ್ದಕ್ಕೆ ಶಾಶ್ವತ ಮತ್ತು ಅದ್ವೈತ ಶುದ್ಧ ಪ್ರಜ್ಞೆ, ಆತ್ಮನ್-ಬ್ರಹ್ಮನ್ ಎಂಬ ಸುಂದರ ವಿವರಣೆಗಳಿವೆ.

ಮಾಸಾಬ್ದ ಯುಗ ಕಲ್ಪೇಷು
ಗತಾಗಮ್ಯೇಷ್ವನೇಕಧಾ;
ನೋದೇತಿ ನಾಸ್ತಮೇತ್ಯೇಕಾ
ಸಂವಿತ್ ಏಷಾ ಸ್ವಯಂ ಪ್ರಭಾ—

*ಆಗಿ ಹೋದ ಮತ್ತು ಇನ್ನೂ ಮುಂದೆ ಬರಲಿರುವ ಅಗಣಿತ ಮಾಸ ವರ್ಷ ಯುಗ ಕಲ್ಪಗಳಲ್ಲಿ ಸ್ವಯಂಪ್ರಭವೂ ಏಕೈಕವೂ ಆದ ಸಂವಿತ್ ಮೂಡುವುದೂ ಇಲ್ಲ ಅಸ್ತಂಗತವಾಗುವುದೂ ಇಲ್ಲ.*

ಶ್ರೀಮದ್ ಭಾಗವತವು ಗಂಭೀರ ಘೋಷದಿಂದ ಸಮಗ್ರದರ್ಶನವನ್ನು ಸೂಚಿಸಿ ಪರಮಸತ್ಯವನ್ನು ಅದ್ವಯಂ ಜ್ಞಾನಂ ಎಂದು ವರ್ಣಿಸುತ್ತದೆ. (೧. ೨. ೧೧) :

ವದಂತಿ ತತ್ ತತ್ತ್ವವಿದಃ
ತತ್ತ್ವಂ ಯತ್ ಜ್ಞಾನಮದ್ವಯಂ ;
ಬ್ರಹ್ಮೇತಿ ಪರಮಾತ್ಮೇತಿ
ಭಗವಾನ್ ಇತಿ ಶಬ್ದ್ಯತೇ—

*ತತ್ತ್ವವಿದರು ಘೋಷಿಸುತ್ತಾರೆ: ಅದ್ವಯವಾದ ಜ್ಞಾನವನ್ನೇ ಬ್ರಹ್ಮ ಎನ್ನುತ್ತಾರೆ, ಪರಮಾತ್ಮ ಎನ್ನುತ್ತಾರೆ. ಭಗವಾನ್ ಎನ್ನುತ್ತಾರೆ. (ಜ್ಞಾನಿಗಳು ತತ್ತ್ವಜ್ಞಾನಿಗಳು ಬ್ರಹ್ಮ ಎಂದೂ ಯೋಗಿಗಳು ಅನುಭಾವಿಗಳು ಪರಮಾತ್ಮ ಎಂದೂ ಭಕ್ತರು ಭಗವಾನ್ ಎಂದೂ ಹೇಳುತ್ತಾರೆ).*

ಶುದ್ಧ ಪ್ರಜ್ಞೆಯನ್ನು ಅದರ ನಿಷ್ಪ್ರಪಂಚ ನಿಷ್ಕ್ರಿಯ ಸ್ಥಿತಿಯಲ್ಲಿ ಬ್ರಹ್ಮನ್ ಅಥವಾ ಶಿವ ಎಂದು ಕರೆಯುತ್ತಾರೆ. ಅದರ ಸಪ್ರಪಂಚ ಚಲನಶೀಲ ಸ್ಥಿತಿಯಲ್ಲಿ ಮಾಯಾ ಅಥವಾ ಶಕ್ತಿ ಎನ್ನುತ್ತಾರೆ. ಭೌತ ಶಕ್ತಿಯು ಬಂಧಿತ ಹಾಗೂ ಮುಕ್ತ ಸ್ಥಿತಿಗಳಲ್ಲಿ ಹೇಗೆ ಒಂದೇ ಆಗಿರುತ್ತದೋ ಹಾಗೆ ಇವೆರಡೂ ಒಂದೇ.

ಶಂಕರಾಚಾರ್ಯರು 'ಆತ್ಮೈಕತ್ವ ವಿದ್ಯಾ ಪ್ರತಿಪತ್ತಯೇ ಸರ್ವೇ ವೇದಾಂತಾಃ ಆರಭ್ಯಂತೇ' (ಬ್ರಹ್ಮಸೂತ್ರ ವ್ಯಾಖ್ಯಾನ ಸೂತ್ರ ೪)—ಆತ್ಮನ ಏಕತೆ ಮತ್ತು ಅನಂತತೆಗಳ ಸಾಕ್ಷಾತ್ಕಾರವೇ ಎಲ್ಲ ವೇದಾಂತದ ಗುರಿ ಎಂದು ಹೇಳಿದ್ದಾರೆ. ನ್ಯೂಕ್ಲಿಯರ್ ಭೌತವಿಜ್ಞಾನಿ ಎರ್‌ವಿನ್ ಷ್ರೋಡಿಂಜರ್ ಈ ವೇದಾಂತ ಸತ್ಯವನ್ನು "What is Life ? ಎಂಬ ಗ್ರಂಥದಲ್ಲಿ ಅನುರಣಿಸಿದ್ದಾನೆ (ಪು ೯೦-೯೧) :

*ಪ್ರಜ್ಞೆಯನ್ನು ಎಂದಿಗೂ ಬಹುರೂಪದಲ್ಲಿ ಅನುಭವಿಸಲಾಗುವುದಿಲ್ಲ. ಅದು ಏಕರೂಪಿ... ಪ್ರಜ್ಞೆ ಏಕರೂಪಿ, ಆದರ ಬಹುರೂಪ ಅಜ್ಞಾನವಾಗಿದೆ. ಇರುವುದು ಒಂದೇ. ಬಹುವಾಗಿ ನಮಗೆ ಕಾಣಿಸುವುದೆಲ್ಲ ಈ ಒಂದೇ ವಸ್ತುವಿನ ವಿಭಿನ್ನ ಅಂಶಮಾಲೆಗಳು, ಭ್ರಮಾ ಜನಿತವಾದವುಗಳು (ಭಾರತೀಯರ ಮಾಯಾ).*

ಕ್ವಾಂಟಮ್ ಶಕ್ತಿಯ ವಲಯ ಅಥವಾ ಚತುರ್-ಆಯಾಮದ ಕಾಲ-ದೇಶ ಇವನ್ನು ಇಪ್ಪತ್ತನೆಯ ಶತಮಾನದ ಭೌತಶಾಸ್ತ್ರವು ಇಂದ್ರಿಯ ಪ್ರಮಾಣಗಳಿಂದ ತಾಳೆ ನೋಡುವಂಥದ್ದಲ್ಲ ಎನ್ನುತ್ತದೆ.

ಅದು ವೇದಾಂತದ ಚಿತ್ತಾಕಾಶಕ್ಕೆ ಅಂದರೆ ದೇಶ-ಕಾಲಯುಕ್ತ ಮನಸ್ಸಿಗೆ ಸಂವಾದಿಯಾದುದು. ಮನಸ್ಸಿಗೆ ಸ್ವಪ್ನ ಸ್ಥಿತಿಯಲ್ಲಿ ಗೋಚರವಾಗುವ ಸತ್ಯ ಇದೇ. ಇದು ಜ್ಞಾನದ ಅಥವಾ ಪ್ರಜ್ಞೆಯ ಕ್ಷೇತ್ರ. ಇದರಲ್ಲಿ ದೃಕ್ ಮತ್ತು ದೃಶ್ಯ ಅಥವಾ ವೀಕ್ಷಕ ಮತ್ತು ವೀಕ್ಷಿತ ಇವೆರಡು ಧ್ರುವಗಳು. ಆಧುನಿಕ ಉಪ ಅಣುಭೌತಶಾಸ್ತ್ರವು ವೀಕ್ಷಿತವನ್ನು ಕ್ವಾಂಟಮ್ ಶಕ್ತಿಯ ಕ್ಷೇತ್ರದಲ್ಲಿ ಲೀನಗೊಳಿಸುವು ದರ ಮೂಲಕ ಪ್ರಾಚೀನ ಸಾಂಖ್ಯ ತತ್ತ್ವಜ್ಞಾನಿಗಳ ಸ್ಥಾನಕ್ಕೆ ಸೇರುತ್ತದೆ, ಜತೆಗೆ ವೀಕ್ಷಿತನ ಆಯಾಮ ದಲ್ಲಿ ಬಹುರೂಪತೆಯನ್ನು ಉಳಿಸಿಕೊಂಡೇ ಇದೆ. ಸಾಂಖ್ಯರು ಎಲ್ಲ ಅನಾತ್ಮಗಳನ್ನು ತನ್ನ ಪ್ರಧಾನ ಅಥವಾ ಪ್ರಕೃತಿಯಲ್ಲಿ ಸೇರಿಸಿಕೊಂಡು ಏಕತೆಯನ್ನು ಸಾಧಿಸಿತು. ಜತೆಗೆ 'ಪುರುಷ' ಕ್ಷೇತ್ರದಲ್ಲಿ ಅಂದರೆ ವೀಕ್ಷಕ, ಆತ್ಮ ಅಥವಾ ವ್ಯಕ್ತಿ ಕ್ಷೇತ್ರದಲ್ಲಿ ಬರುರೂಪತೆಯನ್ನು ಉಳಿಸಿಕೊಂಡಿತು.

ಪ್ರಜ್ಞಾಕ್ಷೇತ್ರದ ಏಕತೆ ಎಂಬ ವೇದಾಂತ ಸತ್ಯವು ಉಪಅಣುಭೌತಶಾಸ್ತ್ರಕ್ಕೆ ಗೋಚರವಾಗುವುದು ಆ ಶಾಸ್ತ್ರವು ತನ್ನ ಸದ್ಯದ 'ವೀಕ್ಷಕ'ನನ್ನು ಅಭಿಜಾತ ಭೌತಶಾಸ್ತ್ರದ ಪ್ರಕಾರ ನೋಡುತ್ತ, 'ವೀಕ್ಷಿತ'ನನ್ನು ಕ್ವಾಂಟಮ್ ಕ್ಷೇತ್ರದ ಸಂಭವನೀಯತೆಗಳ ಹಿನ್ನೆಲೆಯಲ್ಲಿ ನೋಡುವ ದ್ವಂದ್ವವನ್ನು ನಿವಾರಿಸಿಕೊಂಡಾಗ.

ಎಲೆಕ್ಟ್ರೋ ಮ್ಯಾಗ್ನೆಟಿಕ್, ನ್ಯೂಕ್ಲಿಯರ್ ಮತ್ತು ಗುರುತ್ವಾಕರ್ಷಣ ಅಂಶಗಳನ್ನು ಅರ್ಥಮಾಡಿ ಕೊಂಡು ಭೌತಿಕ ಪ್ರಕೃತಿಯಲ್ಲಿ ತೃಪ್ತಿಕರವಾದ, ಸಮಗ್ರವಾದ, ಒಂದು ಸಂಯುಕ್ತ ಕ್ಷೇತ್ರ ಸಿದ್ಧಾಂತ ವನ್ನು ಸಾಧಿಸಿಕೊಳ್ಳುವುದು ಆಧುನಿಕ ಭೌತಶಾಸ್ತ್ರಕ್ಕೆ ಇನ್ನೂ ಸಾಧ್ಯವಾಗಿಲ್ಲ. ಒಂದು ವೇಳೆ ಈ ಸಂಯುಕ್ತ ಕ್ಷೇತ್ರ ಸಿದ್ಧಾಂತವನ್ನು ಕಂಡುಹಿಡಿದು ಮುಂದೆ ಪ್ರಸ್ತಾಪಿಸಿದರೂ ಸಹ, ಪ್ರಕೃತಿ-ಪುರುಷರ ಸಂಯೋಗದ ಪ್ರಶ್ನೆಯು 'ಅಂತಿಮ ಸತ್ಯಶೋಧ'ದ ಸಮಸ್ಯೆಯಾಗಿ ವಿಜ್ಞಾನವನ್ನು ಕಾಡುತ್ತದೆ. ಫ್ರಿಟ್‌ಜಾಫ್ ಕಪ್ರ ಮೊದಲಾದ ಭೌತವಿಜ್ಞಾನಿಗಳು ಆಧುನಿಕ ಭೌತವಾದಿಗಳ 'ಪ್ರಕೃತಿ'ಗಿಂತ ವೇದಾಂತದ ಬ್ರಹ್ಮ ಹೆಚ್ಚು ಸಮಗ್ರವಾದ ವಿಶ್ವಸತ್ಯದ ಹಿನ್ನೆಲೆಯನ್ನು ಒದಗಿಸುತ್ತದೆ. ಎಂದು ಹೇಳಿದ್ದಾರೆ. (The Tao of Physics ಪು.೨೧೧) :

*ಭೌತಿಕ ವಸ್ತುಗಳು ಮತ್ತು ಅದರ ಅಂಶಗಳು ಒದು ಮೂಲಭೂತ ಏಕತೆಯ ತಾತ್ಕಾಲಿಕ ಅಭಿವ್ಯಕ್ತಿಗಳು ಎಂಬ ಕಲ್ಪನೆ ಕ್ವಾಂಟಮ್ ಕ್ಷೇತ್ರ ಸಿದ್ಧಾಂತದ ನೆಲಗಟ್ಟಿನ ವಿಚಾರವಾಗಿದ್ದು ಪೌರ್ವಾತ್ಯರ ವಿಶ್ವದ ದೃಷ್ಟಿಯಲ್ಲಿ ಪ್ರಧಾನವಾಗಿದೆ. ಐನ್‌ಸ್ಟೀನನಂತೆ ಪೂರ್ವ ದೇಶದ ಅನುಭಾವಿಗಳು ಈ ಏಕತೆಯನ್ನು ಏಕಮೇವ 'ಪರಮಸತ್ಯ' ಎಂದು ಪರಿಗಣಿಸಿದ್ದಾರೆ. ಅದರ ಎಲ್ಲ ವಾಸ್ತವಿಕ ಅಭಿವ್ಯಕ್ತಿ ಅನಿತ್ಯ, ಭ್ರಮಾತ್ಮಕ ಎಂದು ಭಾವಿಸುತ್ತಾರೆ. ಈ ಪೂರ್ವದ ಅನುಭಾವಿಗಳು ಕಂಡ ಸತ್ಯವನ್ನು ಭೌತಶಾಸ್ತ್ರಜ್ಞನ ಕ್ವಾಂಟಮ್ ಕ್ಷೇತ್ರದೊಂದಿಗೆ ಅನ್ವಯಿಸಲು ಸಾಧ್ಯವಿಲ್ಲ. ಏಕೆಂದರೆ ಇದು ಈ ಜಗತ್ತಿನಲ್ಲಿ ಎಲ್ಲದರ ಸಾರ ಎಂದು ಕಾಣಲಾಗಿದೆ. ಆದುದರಿಂದ ಅದು ಎಲ್ಲ ಭಾವ ಮತ್ತು ಕಲ್ಪನೆಗಳಿಗೆ ಅತೀತವಾಗಿದೆ.*

*ಈ ಕಡೆ, ಕ್ವಾಂಟಮ್ ಕ್ಷೇತ್ರವು ಚೆನ್ನಾಗಿ ವಿವರಿಸಬಲ್ಲ ಒಂದು ಭಾವನೆಯಾಗಿದ್ದು ಕೆಲವು ಭೌತಿಕ ವಿಷಯವನ್ನು ಮಾತ್ರ ವಿಶ್ಲೇಷಿಸುತ್ತದೆ. ಹೀಗಿದ್ದರೂ ಕ್ವಾಂಟಮ್ ಕ್ಷೇತ್ರದ ನೆಲೆಯಲ್ಲಿ ಉಪ ಅಣುಜಗತ್ತನ್ನು ವ್ಯಾಖ್ಯಾನಿಸಿರುವ ಭೌತ ಶಾಸ್ತ್ರಜ್ಞನ ಪ್ರತಿಭಾ ಒಳನೋಟವನ್ನು ಒಂದು ಅಂತಿಮ ಪರಮಸತ್ಯದ ಒಳನೆಲೆಯಲ್ಲಿ ತನ್ನ ಅನುಭವವನ್ನು ವಿವರಿಸುವ ಪೂರ್ವದ ಅನುಭಾವಿಯ ನೋಟದೊಂದಿಗೆ ತೂಗಿ ನೋಡಬಹುದಾಗಿದೆ. ಕ್ಷೇತ್ರ ಕಲ್ಪನೆ ಬಂದ ನಂತರ ಭೌತವಿಜ್ಞಾನಿಗಳು ಎಲ್ಲ ಭೌತಿಕ ವಸ್ತುಗಳನ್ನು ಒಳಗೊಳ್ಳುವ ರೀತಿಯಲ್ಲಿ ಭಿನ್ನ ಕ್ಷೇತ್ರಗಳನ್ನು ಒಂದು ಏಕೈಕ ಮೂಲಭೂತ ಕ್ಷೇತ್ರವಾಗಿ ಒಗ್ಗೂಡಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. ಮುಖ್ಯವಾಗಿ ಐನ್‌ಸ್ಟೀನ್ ಅಂಥ ಒಂದು ಒಕ್ಕೂಟದ ಕ್ಷೇತ್ರದ ಶೋಧನೆಯಲ್ಲಿಯೇ ತನ್ನ*

*ಬದುಕಿನ ಕೊನೆಯ ಘಟ್ಟಗಳನ್ನು. ಕಳೆದ. ಹಿಂದೂಗಳ ಬ್ರಹ್ಮನ್ ಅನ್ನು ಬೌದ್ಧರ 'ಧರ್ಮಕಾಯ'ನಂತೆ, ಟಾವೋ ಸಿದ್ಧಾಂತದ ಟಾವೋನಂತೆ ಬಹುಶಃ ಅಂತಿಮ ಒಕ್ಕೂಟ ಕ್ಷೇತ್ರವಾಗಿ ಕಾಣಬಹುದಾಗಿದೆ. ಇದರ ಮೂಲಕವೇ ಭೌತಶಾಸ್ತ್ರದಲ್ಲಿ ಅಧ್ಯಯನ ಮಾಡುವ ಘಟನೆಗಳಿಂದ ಮೊದಲುಗೊಂಡು ಇತರ ಎಲ್ಲ ಘಟನೆಗೂ ಮೂಡಿಬಂದಿದೆ.*

ಈ ಹಿಂದೆ ಕಾಲದೇಶ ನಿರಂತರಕ್ಕೆ ಸಂವಾದಿಯಾದ ವೇದಾಂತ ಪರಿಭಾಷೆಯಲ್ಲಿ ಚಿತ್ತಾಕಾಶವೆಂದು ಯಾವುದನ್ನು ಕರೆದಿದ್ದವೋ ಅದು ವಿಷಯ ಮತ್ತು ವಿಷಯಿಗಳ ದ್ವಿರೂಪವನ್ನು ಒಳಗೊಂಡಿದೆ. ಆದ್ದರಿಂದ ಅದು ಆಳವಾದ ಪರೀಕ್ಷೆಗೆ ಒಳಗಾಗಬೇಕಾಗಿದೆ. ಈ ಮಿತಿಯನ್ನು ವೇದಾಂತದ ಭಾವನೆಯಾದ, ಅನಂತ ಅದ್ವಯ ಪ್ರಜ್ಞೆ, ಚಿದಾಕಾಶ ಅಥವಾ ಶುದ್ಧ ಪ್ರಜ್ಞೆ ಎಂಬುದು ನಿವಾರಿಸುತ್ತದೆ. ಚಿತ್ತಾಕಾಶವನ್ನು ಕಾರ್ಯ-ಕಾರಣ ಸಂಬಂಧರಹಿತವಾಗಿ ನೋಡಿದಾಗ ಅದೇ ಚಿದಾಕಾಶವಾಗಿ ಕಾಣುತ್ತದೆ.

ವಿಶ್ವವು ಮೂಲಭೂತವಾಗಿ ಶುದ್ಧ ಪ್ರಜ್ಞೆಯೇ ಎಂದು ವೇದಾಂತವು ಹೇಳುವಾಗ ವಿಶ್ವವನ್ನಾಗಲಿ ಅದರ ವಸ್ತುವನ್ನಾಗಲಿ ವಿಶಿಷ್ಟ ಬುದ್ಧಿ ಜೀವಿಗಳನ್ನಾಗಲಿ ನಾಶಪಡಿಸುವುದಿಲ್ಲ. ಅವುಗಳೆಲ್ಲದರ ನೈಜಸ್ವರೂಪ ಬಯಲಿಗೆ ತರುತ್ತದೆ ಅಷ್ಟೆ. ಆಧುನಿಕ ಕ್ವಾಂಟಮ್ ಮತ್ತು ಸಾಪೇಕ್ಷ ಭೌತಶಾಸ್ತ್ರವು, ವಿಶ್ವವು ಒಂದು ಶಕ್ತಿಸಾಗರ ಎಂದು ಹೇಳುವಾಗ, ಅಭಿಜಾತ ಭೌತಶಾಸ್ತ್ರವು ಪ್ರತಿಪಾದಿಸುವ ಭೌತ ವಿಶ್ವದ ಮಾಲಿಕ್ಯುಲರ್ ರಚನೆಯನ್ನು ನಾಶಪಡಿಸಿಲ್ಲ. ಅಭಿಜಾತ ಭೌತಶಾಸ್ತ್ರಜ್ಞರ ಪರಿಚಿತ ವಿಶ್ವವು ಕ್ವಾಂಟಮ್ ಮತ್ತು ಸಾಪೇಕ್ಷ ವಿಜ್ಞಾನವು ಸಾದರ ಪಡಿಸಿರುವ ನೈಜ ವಿಶ್ವವನ್ನು ಬರಿಯ ಇಂದ್ರಿಯಗಳ ಮೂಲಕ ನೋಡಿರುವ ಒಂದು ಸಂಕುಚಿತ ವಿಶ್ವ ಎನ್ನಬಹುದು. ವಿಜ್ಞಾನವು ಏನನ್ನೂ ಸೃಷ್ಟಿಸುವುದಿಲ್ಲ ಅಥವಾ ನಾಶಪಡಿಸುವುದೂ ಇಲ್ಲ ಅದನ್ನು ಬೆಳಗಿಸುತ್ತದೆ ಅಷ್ಟೆ ಎಂದು ಆಚಾರ್ಯ ಶಂಕರರು ಹೇಳಿದ್ದಾರೆ. "ಶಾಸ್ತ್ರಂ ಜ್ಞಾಪಕಂ ನ ತು ಕಾರಕಂ" ಭೌತ ವಿಜ್ಞಾನವು ಶೋಧಿಸಲು ಹೊರಟ ನಿತ್ಯಾನುಭವದ ಭೌತವಿಶ್ವವು ನಿಜವಾದ ತನ್ನ ಶುದ್ಧ ಪ್ರಜ್ಞೆಯ ರೂಪವನ್ನು ತೋರಿಸುತ್ತದೆ ; ಈಶೋಪನಿಷತ್ತು 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್' ಎಂದು ತನ್ನ ಮೊದಲನೆಯ ಶ್ಲೋಕದಲ್ಲಿಯೇ ಸ್ಪಷ್ಟಪಡಿಸಿ ಸತ್ಯವನ್ನು ಹೊರಪಡಿಸುತ್ತದೆ. ಹಾಗಾಗಬೇಕಾದರೆ ಭೌತವಿಜ್ಞಾನವು ತಾನು ಅಧ್ಯಯನ ಮಾಡುವ ಭೌತದ್ರವ್ಯವನ್ನು ದ್ರವ್ಯಸತ್ತಾವಾದದ ಮತಭ್ರಾಂತಿಯಿಂದ ಪ್ರತ್ಯೇಕಿಸಬೇಕು. ಈ ದ್ರವ್ಯಸತ್ತಾವಾದವು ವಿಜ್ಞಾನದಲ್ಲಿ ಅತಿಕ್ರಮಣ ಮಾಡಿದೆ ಎಂದು ಹೇಳುವ ಥಾಮಸ್ ಹಕ್ಸ್‌ಲಿ ಈ 'ದ್ರವ್ಯ'ವನ್ನು ಒಂದು ಪ್ರಯೋಜನಕಾರಿಯಾದ ಕಾರ್ಯನಿರತ ಭಾವವಾಗಿ ಸ್ವೀಕರಿಸಬೇಕೆಂದು ಶಿಫಾರಸು ಮಾಡಿದ್ದಾನೆ. (Methods and Results ಪುಟಗಳು ೧೬೪-೬೫).

## ೧೦. ಗೌಡಪಾದ : ಶುದ್ಧ ಪ್ರಜ್ಞೆಯು ಅದ್ವೈತವಾದುದು

ಅಕಾರಣವಾದ ಶುದ್ಧ ಪ್ರಜ್ಞೆಯನ್ನು ಅಕಾರಣವಾದ ಶುದ್ಧಜ್ಞಾನದಿಂದ ಗ್ರಹಿಸಬಹುದೆಂದು ಗೌಡಪಾದರು ತಮ್ಮ ಮಾಂಡೂಕ್ಯ ಕಾರಿಕೆಯಲ್ಲಿ ಹೇಳುತ್ತಾರೆ. ಅಲ್ಲದೆ ಈ ಅದ್ವೈತದ ತಾತ್ವಿಕ, ಆತ್ಮಿಕ ದರ್ಶನವನ್ನು ಕಂಡುಕೊಂಡು ತಮಗೆ ಬೋಧಿಸಿದ ಗುರುವಿಗೆ ಎರಡು ಪ್ರಸಿದ್ಧ ಶ್ಲೋಕಗಳಲ್ಲಿ ವಂದನೆಗಳನ್ನು ಅರ್ಪಿಸಿದ್ದಾರೆ (೩.೩೩ ಮತ್ತು ೪.೧) :

ಅಕಲ್ಪಕಮಜಂ ಜ್ಞಾನಂ
ಜ್ಞೇಯಾಭಿನ್ನಂ ಪ್ರಚಕ್ಷತೇ ;
ಬ್ರಹ್ಮ ಜ್ಞೇಯಂ ಅಜಂ ನಿತ್ಯಂ
ಅಜೇನಾಜಂ ವಿಬುಧ್ಯತೇ—

*ಅಕಲ್ಪಕವೂ ಅಜವೂ (ಕಾರಣರಹಿತ ಅಥವಾ ಅಕಾರಣ) ಆದ ಜ್ಞಾನವು ಜ್ಞಾನವಸ್ತು ಅಥವಾ ಪ್ರಜ್ಞೆಗಿಂತ ಎಂದಿಗೂ ಭಿನ್ನವಾದುದಲ್ಲ. ಜ್ಞೇಯವಾದ ಬ್ರಹ್ಮವು ಅಜವೂ ನಿತ್ಯವೂ ಅನಂತವೂ ಆಗಿದೆ. ಅಕಾರಣವು ಅಕಾರಣವನ್ನು ಸಾಕ್ಷಾತ್ಕರಿಸಿಕೊಳ್ಳುತ್ತದೆ.*

ಜ್ಞಾನೇನಾಕಾಶಕಲ್ಪೇನ
ಧರ್ಮಾನ್ ಯೋ ಗಗನೋಪಮಾನ್ :
ಜ್ಞೇಯಾಭಿನ್ನೇನ ಸಂಬುದ್ಧಃ
ತಂ ವಂದೇ ದ್ವಿಪದಾಂ ವರಂ—

*ಮಾನವರಲ್ಲೇ ಅತಿ ಶ್ರೇಷ್ಠರಾದ ಗುರುಗಳಿಗೆ ನನ್ನ ವಂದನೆಗಳು. ಗಗನೋಪಮವಾದ ಜ್ಞಾನದಿಂದ ಅವರು ಎಲ್ಲ ವಸ್ತುಗಳೂ ಜ್ಞೇಯ ಅಭಿನ್ನಗಳೆಂದು ಕಂಡುಕೊಂಡರು.*

ಹಿಂದೆ ಹೇಳಿದ ಜಾನ್ ವೆಲ್‌ವುಡ್, ಜಾನ್ ವೈಟ್, ರಾಬರ್ಟ್ ಇ. ಆರ್ನ್‌ಸ್ಟೀನ್ ಮತ್ತು ಇತರರ ಅಭಿಪ್ರಾಯಗಳನ್ನು ಮುನ್ಸೂಚಿಸುತ್ತ ಪ್ರಾಚೀನ ಧರ್ಮಶಾಸ್ತ್ರಕಾರನಾದ ಮನುವು ಎಲ್ಲ ಉನ್ನತ ಆಧ್ಯಾತ್ಮಿಕ ಸತ್ಯಗಳೂ ಅಂತಃಪ್ರವೇಶದ ಮೂಲಕ ಮತ್ತು ಪ್ರಜ್ಞೆಯನ್ನು ಉನ್ನತೋನ್ನತ ಸ್ತರಕ್ಕೆ ಏರಿಸುವುದರ ಮೂಲಕ ಪ್ರಕಾಶಕ್ಕೆ ಬರುತ್ತವೆ ಎಂದು ಹೇಳುತ್ತಾನೆ (೬.೮೨) :

ಧ್ಯಾನಿಕಂ ಸರ್ವಮೇವೈತತ್
ಯದೇತದಭಿಶಬ್ದಿತಂ ;
ನಹ್ಯನಧ್ಯಾತ್ಮವಿತ್ ಕಶ್ಚಿತ್
ಕ್ರಿಯಾಫಲಮುಪಾಶ್ನುತೇ—

*ಈ ಜಗತ್ತಿನಲ್ಲಿರುವ ಸರ್ವಜ್ಞಾನವೂ ಪರಬ್ರಹ್ಮದ ಧ್ಯಾನವನ್ನೇ ಕುರಿತು ಆದೇಶಿಸುತ್ತದೆ. ಧ್ಯಾನವಿಲ್ಲದ ಅಜ್ಞಾನಿಗೆ ಧ್ಯಾನಕ್ರಿಯೆಯ ಫಲವಾದ ಬ್ರಹ್ಮಸಾಕ್ಷಾತ್ಕಾರ ಲಭ್ಯವಾಗುವುದಿಲ್ಲ.*

ಉನ್ನತ ಧಾರ್ಮಿಕ ಮೌಲ್ಯಗಳನ್ನು ದೂರವಿರಿಸಿ ಅತ್ಯುತ್ತಮ ತಾಂತ್ರಿಕ ಮಾಧ್ಯಮದ ಮೂಲಕ ಆಧುನಿಕ ಉನ್ನತ ಪ್ರಾಪಂಚಿಕ ಪ್ರಗತಿಯು ಇಂದು ಹೆಚ್ಚುತ್ತಿರುವ ಮಾನಸಿಕ ಮತ್ತು ಸಾಮಾಜಿಕ ವಿಕೃತಿಗೆ ಕಾರಣವಾಗಿದೆ ಮತ್ತು ಬದುಕನ್ನು ಶಾಂತಿ ಸಂತಸಗಳಿಂದ ಕಳೆಯಲು ಅಸಾಧ್ಯವಾದ ವಾತಾವರಣವನ್ನು ನಿರ್ಮಿಸಿದೆ ಎಂಬ ಸತ್ಯವನ್ನು ಈಗ ಮನಗಾಣುತ್ತಿದ್ದೇವೆ.

## ೧೧. ರಥದ ಪ್ರತಿಮೆ ಮತ್ತು ಮಾನವನ ಆಧ್ಯಾತ್ಮಿಕ ಪ್ರಯಾಣ

ಉನ್ನತ ಜೀವನಕ್ಕಾಗಿ ಮಾಡಬೇಕಾದ ಸಾಧನೆಗಳ ಬಗೆಗೆ ಮಾತನಾಡುತ್ತ ಸ್ವಾಮಿ ವಿವೇಕಾನಂದರು ಹೀಗೆ ಹೇಳಿದ್ದಾರೆ (ಕೃತಿಶ್ರೇಣಿ, ಸಂಪುಟ VII ಪುಟ ೨೭೩) :

*ಧ್ಯಾನ ಅತ್ಯಾವಶ್ಯಕ. ಧ್ಯಾನ ಮಾಡಿ! ಧ್ಯಾನವೇ ಅತಿ ಶ್ರೇಷ್ಠವಾದ ಸಾಧನೆ. ಧ್ಯಾನಾವಸ್ಥೆ ಆಧ್ಯಾತ್ಮಿಕ ಜೀವನಕ್ಕೆ ಅತಿ ಸಮೀಪದ ಮಾರ್ಗ. ಈ ಧ್ಯಾನದ ಕಾಲದಲ್ಲಿ ಮಾತ್ರವೇ ನಮ್ಮ ಮನಸ್ಸು ಪ್ರಾಪಂಚಿಕವಾಗಿರುವುದಿಲ್ಲ. ಆಗ ಆತ್ಮವು ಪ್ರಪಂಚದಿಂದ ಪಾರಾಗಿ ತನ್ನ ನೈಜ ಸ್ಥಿತಿಯನ್ನು ಕುರಿತು ಯೋಚಿಸುತ್ತಿರುತ್ತದೆ. ಧ್ಯಾನಾವಸ್ಥೆಯಲ್ಲಿ ಆತ್ಮನ ಒಂದು ಅಪೂರ್ವ ಸ್ಪರ್ಶವಾಗುತ್ತದೆ.*

ಉಪನಿಷತ್ತುಗಳು ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಆತ್ಮಗಳಿಂದ ಕೂಡಿದ ಮಾನವ ವ್ಯಕ್ತಿತ್ವವನ್ನು ಪ್ರಕೃತಿಯ ಬೃಹತ್ ವಿಕಾಸ ಚಲನೆಗಳ ಹಿನ್ನೆಲೆಯಲ್ಲಿ ಪರಿಶೀಲಿಸಿವೆ. ಕಠೋಪನಿಷತ್ತು ಒಂದು ಸುಂದರ ಪ್ರತಿಮೆಯನ್ನು ಬಳಸಿದೆ. ಅದು ರಥದ ಪ್ರತಿಮೆ. ಮಾನವ ಮಟ್ಟದಲ್ಲಿ ಆದ ವಿಕಾಸದ ಮುನ್ನಡೆಯನ್ನು ಅದು ಚಿತ್ರಿಸುತ್ತದೆ (೩.೩-೯) :

*ಆತ್ಮವು ರಥದ ಒಳಗಿರುವ ಒಡೆಯ ಎಂದು ತಿಳಿ. ಈ ದೇಹವೇ ರಥ ; ಬುದ್ಧಿಯೇ ಸಾರಥಿ ಎಂದು ತಿಳಿ, ಮನಸ್ಸೇ ಕಡಿವಾಣ ಎಂದು ತಿಳಿ.*

*ಇಂದ್ರಿಯಗಳೇ ಕುದುರೆಗಳು ಎಂದು ಹೇಳುತ್ತಾರೆ. ಅವು ಪ್ರಯಾಣಿಸಬೇಕಾದ ರಸ್ತೆಗಳು ಇಂದ್ರಿಯ ವಿಷಯಗಳು. (ಜ್ಞಾನಿಗಳು ಅವನು ದೇಹೇಂದ್ರಿಯ ಮನಸ್ಸುಗಳೊಂದಿಗೆ ಒಂದಾಗಿದ್ದಾಗ ಅನುಭವಿಸುವಾತ ಎಂದು ಹೇಳಿದ್ದಾರೆ) ;*

*ಅವನು ಸರಿಯಾದ ಬುದ್ಧಿ ಇಲ್ಲದವನೂ ಮತ್ತು ಅಶಿಸ್ತಿನ ಮನಸ್ಸುಳ್ಳವನೂ ಆದರ ಇಂದ್ರಿಯಗಳು, ರಥಿಕನ ಹತೋಟಿ ತಪ್ಪಿದ ಕುದುರೆಗಳಂತೆ, ಹತೋಟಿ ತಪ್ಪುತ್ತವೆ.*

*ಅವನು, ಸರಿಯಾದ ಬುದ್ಧಿ ಇಲ್ಲದೆ, ಮನಸ್ಸು ಶಿಸ್ತಿಗೆ ಬದ್ಧವಾಗದೆ, ಸದಾ ಅಶುದ್ಧ ವಾಗಿದ್ದರೆ, ಎಂದಿಗೂ ತನ್ನ ಗುರಿಯನ್ನು ಮುಟ್ಟಲಾರ. ಅಂಥವನು ಪ್ರಾಪಂಚಿಕ ಸುಖದ ಆವರ್ತದಲ್ಲಿ ಸಿಕ್ಕಿ ಬೀಳುತ್ತಾನೆ.*

*ಆದರೆ ಸರಿಯಾದ ಬುದ್ಧಿ ಉಳ್ಳವನು ಶಿಸ್ತುಬದ್ಧವಾದ ಶುದ್ಧ ಮನಸ್ಸಿನಿಂದ ತನ್ನ ಗುರಿಯನ್ನು ಮುಟ್ಟುತ್ತಾನೆ. ಮತ್ತೆ ಪ್ರಾಪಂಚಿಕತೆಗೆ ಹಿಂದಿರುಗುವುದಿಲ್ಲ.*

*ವಿಜ್ಞಾನವನ್ನು ರಥಿಕನನ್ನಾಗಿ ಮಾಡಿಕೊಂಡವನು(ಳು) ಶಿಸ್ತುಬದ್ಧ ಮನಸ್ಸನ್ನು ಕಡಿವಾಣವಾಗಿ ಮಾಡಿಕೊಂಡವನು(ಳು) ಪ್ರಯಾಣದ ಅಂತಿಮ ಘಟ್ಟವನ್ನು ತಲುಪಿ ವಿಷ್ಣು ಲೋಕ ಸೇರುತ್ತಾನೆ.*

ಈ ರೂಪಕವು ಮನುಷ್ಯ ಕಾಲ, ದೇಶಗಳಲ್ಲಿ ತನ್ನ ಹೊರ ಪ್ರಯಾಣವನ್ನು ಕೈಕೊಳ್ಳುವಂತೆ ಅವನಿಗೆ ಒಂದು ಅಂತರ್ಯಾನವೂ ಇದೆ ಎಂದು ಹೇಳುತ್ತದೆ. ದೃಶ್ಯಜಗತ್ತು, ಸ್ಪರ್ಶ ರುಚಿ ಗಂಧಗಳ ಜಗತ್ತು ಈ ಎರಡುಬಗೆಯ ಪ್ರಯಾಣಗಳಿಗೆ ಆವರಣವಾಗಿದೆ. ಒಳಪ್ರಯಾಣವು ಒಂದು ಆಧ್ಯಾತ್ಮಿಕ ಪ್ರಯಾಣವಾಗಿದ್ದು ಅದು ಮಾನಸಿಕ ಶಕ್ತಿಗಳನ್ನು ಹದಗೊಳಿಸಿ ತರಬೇತಿಕೊಟ್ಟು ಮನಸ್ಸನ್ನು ಮತ್ತು ಪ್ರಜ್ಞೆಯನ್ನು ಎತ್ತರೆತ್ತರದ ನೆಲೆಗಳಿಗೆ ಒಯ್ಯುತ್ತದೆ. ರಥಕ್ಕೆ ಕುದುರೆಗಳಿಂದ ಚಲನಶಕ್ತಿ ಒದಗುವಂತೆ ದೇಹಕ್ಕೆ ಇಂದ್ರಿಯಗಳಿಂದ ಚಲನಶಕ್ತಿ ಒದಗುತ್ತದೆ. ಈ ಇಂದ್ರಿಯಾಂಗದಲ್ಲಿ ನರಮಂಡಲ ವ್ಯವಸ್ಥೆ ಹಾಗೂ ಮಿದುಳು ಸೇರಿವೆ. ಜ್ಞಾನೇಂದ್ರಿಯ ಹಾಗೂ ಕರ್ಮೇಂದ್ರಿಯಗಳು ಪ್ರಾಣಿದೇಹವನ್ನು ಪ್ರಕೃತಿ ಯಲ್ಲಿ ಅತ್ಯಂತ ಪ್ರಬಲ ಕ್ರಿಯಾಕೇಂದ್ರವನ್ನಾಗಿ ಮಾಡುತ್ತವೆ, ಆದರೆ ಇಂದ್ರಿಯಗಳ ಮಟ್ಟದಲ್ಲಿಯೇ ಈ ಚಟುವಟಿಕೆಯು ಬಲುಮಟ್ಟಿಗೆ ಅವ್ಯವಸ್ಥಿತವಾಗಿರುತ್ತದೆ. ತತ್‌ಪರಿಣಾಮವಾಗಿ ಬರಿಯ ಇಂದ್ರಿಯ ತೃಪ್ತಿ ಹಾಗೂ ಬದುಕುವ ಗುರಿಗಳ ಆಚೆಗೆ ಬೆಳೆಸುವ ಯೋಗ್ಯತೆ ಅವಕ್ಕಿಲ್ಲ. ಈ ಬಗೆಯ ಸಮನ್ವಯ ಮಾಡುವ ಮನಸ್ಸನ್ನು ಅಥವಾ ಆರಂಭಿಕ ಮನೋ ಧರ್ಮವನ್ನು ಸ್ವಾಮಿ ವಿವೇಕಾನಂದರು 'ಅನಿಶ್ಚಿತ ಮನಸ್ಸು' ಎಂದು ಕರೆಯುತ್ತಾರೆ. ಈ ಮನಸ್ಸು ಕೇವಲ ಆರನೆಯ ದೊಂದು ಇಂದ್ರಿಯ ಎಂಬಂತೆ ಹೇಳಲಾಗಿದೆ. ಕುದುರೆಗಳ ವಿಷಯದಲ್ಲಿ ಹೇಳಿದ ಹಾಗೆ ಅವುಗಳನ್ನು ಹತೋಟಿಗೆ ತರುವ ಕಡಿವಾಣಗಳು ಎಂದ ಕೂಡಲೇ ಒಬ್ಬ ಸಾರಥಿ ಹಾಗೂ ಕಡಿವಾಣ ನೆನಪಾಗುತ್ತವೆ. ಮಾನವ ವ್ಯವಸ್ಥೆಯಲ್ಲಿ ಬುದ್ಧಿ ಮಾಡಬೇಕಾದದ್ದು ಈ ಸಾರಥಿಯ ಕೆಲಸ. ಬುದ್ಧಿಯ ಹಿಂದೆ ರಥದ ಒಡೆಯನಿದ್ದಾನೆ. ಪ್ರಯಾಣ ಅವನದೇ. ಉಳಿದುವೆಲ್ಲ ಆತನ ಪ್ರಯಾಣದ ಸಾಧನಗಳು.

ದೇಶ-ಕಾಲಗಳ ಬಾಹ್ಯ ಪ್ರಯಾಣವನ್ನು ಸಂಸಾರ ಎನ್ನುತ್ತಾರೆ. ಅಂದರೆ ಅದು ಜೈವಿಕ ಮಟ್ಟ ದಲ್ಲೇ ಸ್ಥಗಿತಗೊಳ್ಳುವಿಕೆ. ವಿಕಾಸ ಪಥದಲ್ಲಿ ತುಂಬ ಉನ್ನತ ನೆಲೆಗೆ ಬಂದಿರುವ ಈ ಮಾನವ ಜಾತಿಯಲ್ಲಿ ಇಂಥ ಸ್ಥಗಿತತೆಯನ್ನು ಉಪನಿಷತ್ತು ದೈಹಿಕ ಸಾವಿಗಿಂತ ಹೆಚ್ಚು ಭಯಾನಕವಾದ ಆಧ್ಯಾತ್ಮಿಕ ಸಾವು ಎಂದು ಪರಿಗಣಿಸುತ್ತದೆ. ಜೀವನದ ಆಂತರಿಕ ಅಥವಾ ಬಾಹ್ಯ ಪ್ರಯಾಣಗಳೆರಡ

ರಲ್ಲೂ ಅವುಗಳ ಯಶಸ್ಸಿಗೆ ಮಾನವ ವ್ಯಕ್ತಿತ್ವದ ಎಲ್ಲ ಅಂಗಗಳ ಸಹಕಾರ ಬೇಕಾಗುತ್ತದೆ. ದೇಹ, ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ—ಪ್ರಯಾಣದಲ್ಲಿ ಇವು ಒಂದೊಂದೂ ಮಹತ್ತ್ವದ ಪಾತ್ರವನ್ನು ವಹಿಸುತ್ತವೆ. ಆದರೆ ಚೋದನೆ ಮತ್ತು ಹತೋಟಿಗಳು, ಇಂದ್ರಿಯಗಳು ಮನಸ್ಸುಗಳಿಂದ ಬುದ್ಧಿಗೆ ಹರಿಯುತ್ತಿದೆ ಎಂದು ಖಾತರಿ ಮಾಡಿಕೊಳ್ಳಬೇಕಾದದ್ದು ಮುಖ್ಯ. ಬುದ್ಧಿ ಮತ್ತು ಮನಸ್ಸುಗಳಿಗೆ ತರಬೇತಿಕೊಟ್ಟು ಶಿಸ್ತಿಗೊಳಪಡಿಸಿ ತಮ್ಮ ತಮ್ಮ ನೈಜ ರೂಪಗಳನ್ನು ತಳೆಯುವಂತೆ ಹಸನುಗೊಳಿಸದಿದ್ದರೆ ಇದು ಸಾಧ್ಯವಾಗುವುದೇ ಇಲ್ಲ. ಕಡಿವಾಣಗಳು ಕುದುರೆಗಳ ಬರಿಯ ಬಾಲಂಗೋಚಿ ಯಾದಂತೆ ಆಗದೆ ಮನಸ್ಸು ಮೇಲಿನ ಬುದ್ಧಿಯೊಂದಿಗೆ ಹೊಂದಿಕೊಂಡು ಬರಿಯ ಇಂದ್ರಿಯಗಳ ಬಾಲಂಗೋಚಿಯಾಗದೆ ತನ್ನ ನೈಜಸ್ಥಿತಿಯಲ್ಲಿ ಮೆರೆಯುವುದೇ ಮನಸ್ಸಿನ ಕೆಲಸವಾಗಬೇಕು. ಆಗ ಮಾತ್ರ ಅದು ತನ್ನ ವಿಶಿಷ್ಟಸ್ಥಿತಿಯಲ್ಲಿ ಒದಗಿ ಬರುವ ಆಘಾತಗಳನ್ನು ತಡೆದುಕೊಳ್ಳುವ ಶಕ್ತಿಯನ್ನು ಸಂಪಾದಿಸುತ್ತದೆ. ಅಂದರೆ ಎರಡು ಪ್ರಬಲಶಕ್ತಿಗಳಾದ ಇಂದ್ರಿಯ ಮತ್ತು ಬುದ್ಧಿಗಳೆಂಬ, ಆರಂಭದ ವಿರುದ್ಧ ಶಕ್ತಿಗಳ ಮಧ್ಯೆ ತಡೆದುನಿಲ್ಲುತ್ತದೆ. ಮಾನಸಿಕ ಆಘಾತಗಳು ಮನಸ್ಸು ಕುಸಿಯುವಂತೆ ಮಾಡುತ್ತವೆ. ಬುದ್ಧಿಯ ನೈಜ ರೂಪ ಎಂದರೆ ಅದರ ಪ್ರಜ್ವಲ ವಿವೇಕ. ವಿವೇಕವು ಮನಸ್ಸಿನಿಂದ ಮತ್ತು ಇಂದ್ರಿಯ ವರ್ಗದಿಂದ ಮುಕ್ತವಾದಾಗ ಅವುಗಳ ಯಜಮಾನನಂತೆ, ಮಾರ್ಗದರ್ಶಿಯಂತೆ ಕೆಲಸ ಮಾಡುತ್ತದೆ. ಮುಂದೃಷ್ಟಿ, ದೂರದೃಷ್ಟಿಗಳ ಮೂಲ ಇದೇ. ಅದು ಮುಂದೆ ಆತ್ಮನ ಪ್ರಜ್ಞೆಯ ಶುದ್ಧ ಬೆಳಕನ್ನು ಹೊರಚೆಲ್ಲುತ್ತದೆ. ಸಂಪತ್ತಿನ ಅರ್ಜನೆ, ಅಧಿಕಾರ, ಜ್ಞಾನ, ವಂಶ, ಇಂದ್ರಿಯಗಳ ದಾಳಿ, ಮಾದಕ ದ್ರವ್ಯಗಳು, ಔಷಧಗಳು, ಮದ್ಯ ಮೊದಲಾದುವುಗಳ ಮತ್ತಿನಿಂದ ಪಾರಾದ ಬುದ್ಧಿಯು ಶುದ್ಧವೂ ಪ್ರಬಲವೂ ಕಾಂತಿಯುಕ್ತವೂ ಶಾಂತವೂ, ಚುರುಕೂ ಮತ್ತು ಖಚಿತವೂ ಆಗುತ್ತದೆ. ಬದುಕಿನ ಪ್ರಯಾಣದಲ್ಲಿ ಅಂತಹ ಬುದ್ಧಿಯು ಅತ್ಯುತ್ತಮ ಮಾರ್ಗದರ್ಶಿ. ಅದು ಬುದ್ಧಿವಂತಿಕೆ, ಕಲ್ಪನೆ ಮತ್ತು ಮನಸ್ಸುಗಳು ಬೆಸೆದಿರುವುದನ್ನು ಸೂಚಿಸುತ್ತದೆ. ಬದುಕಿನ ಮೇಲೆ ಅದರ ಪ್ರಭಾವ ಅಪ್ರತಿಹತವಾದದ್ದು ಮತ್ತು ಸಮಗ್ರವಾದದ್ದು. ಆದುದರಿಂದ ಗೀತೆಯು ಬುದ್ಧಿಗ್ರಾಹ್ಯಮ್ ಅತೀಂದ್ರಿಯಂ (VI.೨೧). ಆತ್ಮವು ಬುದ್ಧಿಗ್ರಾಹ್ಯವಾದುದು ಆದರೂ ಅದು ಇಂದ್ರಿಯಗಳಿಂದಾಗಲಿ ಇಂದ್ರಿಯಬದ್ಧ ಮನಸ್ಸಿನಿಂದಾಗಲಿ ಪಡೆಯಲು ಸಾಧ್ಯವಿಲ್ಲದಮ ಎಂದು ಹೇಳುತ್ತದೆ.

ಮಾನವನ ಮನೋಭೌತ ಶಕ್ತಿಗಳನ್ನು ನಿರ್ಮಲ ಬುದ್ಧಿ ಅಥವಾ ನಿರ್ಮಲ ವಿವೇಕವು ನಿರ್ದೇಶಿಸಿದಾಗ ತುಂಬ ವಿಚಿತ್ರವಾದದ್ದು ಜರುಗುತ್ತದೆ. ವ್ಯಕ್ತಿಯ ಜೀವನ ಪ್ರಯಾಣದ ಪ್ರತಿಯೊಂದು ಹೆಜ್ಜೆಯಲ್ಲಿಯೂ ಆತನ ಜೀವಶಕ್ತಿಯ ಪ್ರಮಾಣ ಮತ್ತು ಗುಣಮಟ್ಟ ಅಧಿಕವಾಗುತ್ತಾ ಹೋಗುತ್ತದೆ. ಬುದ್ಧಿಯು ಇಂದ್ರಿಯಗಳ ದಾಸ್ಯದಿಂದ ಮತ್ತು ಬರಿಯ ಶಾರೀರಿಕ ಬದುಕಿನ ಸೇವೆಯಿಂದ ಮುಕ್ತವಾಗುತ್ತದೆ. ಭೌತಸಾಧನವಾದ ಮಿದುಳಿನ ಸ್ವಾತಂತ್ರ್ಯದ ಮೂಲಕ ಬುದ್ಧಿಯನ್ನು ಸ್ವತಂತ್ರಗೊಳಿಸುವ ಕಾರ್ಯವನ್ನು ಪ್ರಕೃತಿಯು ಸಣ್ಣಪ್ರಮಾಣದಲ್ಲಾದರೂ ಮಾನವ ಪೂರ್ವಹಂತದಲ್ಲಿಯೇ ಸಾಧಿಸಿತ್ತು. ನರಶಾಸ್ತ್ರಜ್ಞ ಗ್ರೇ ವಾಲ್ಟರ್‌ನ ಮಾತುಗಳಲ್ಲಿ ಹೇಳುವುದಾದರೆ (The Living Brain ಪು. ೧೬) :

> *ಪ್ರಕೃತಿಯ ಇತಿಹಾಸದಲ್ಲಿ ಹಾಗೂ ನರ ವಿಜ್ಞಾನದ ಇತಿಹಾಸದಲ್ಲಿ ಆಂತರಿಕ ಶರೀರ ತಾಪಮಾನವನ್ನು ನಿಯಂತ್ರಿಸುವ(ಥರ್ಮೋಸ್ಟ್ಯಾಸಿಸ್) ಶಕ್ತಿಯನ್ನು ಪಡೆದದ್ದು ಒಂದು ವಿಶಿಷ್ಟ ಘಟನೆಯಾಗಿದೆ. ಅದರಿಂದ ಸಸ್ತನಿ ತಂಪುಜಗತ್ತಿನಲ್ಲಿ ಉಳಿದುಕೊಳ್ಳಲು ಸಹಾಯವಾಯಿತು. ವಿಕಾಸದಲ್ಲಿ ಅದರ ಮಹತ್ವ ಇರುವುದು ಇಲ್ಲಿ. ಅದರ ವಿಶಿಷ್ಟ ಮಹತ್ವವೊಂದಿಗೆ. ಏನೆಂದರೆ ಅದು ಮಿದುಳಿನ ಒಂದು ಭಾಗದಲ್ಲಿ ದೇಹದ ಮುಖ್ಯಕ್ರಿಯೆಗಳಿಗೆ ಅಗತ್ಯವಾದ 'ಹೋಮಿ*

*ಲಿಸ್ಟ್ಯಾಸಿಸ್ (ಸಂತುಲನ) ಎಂಬ ಸ್ವಯಂಚಾಲಿತ ವ್ಯವಸ್ಥೆಯನ್ನು ಪೂರ್ಣಗೊಳಿಸಿತು. ಈ ಏರ್ಪಾಡಿನಿಂದಾಗಿ ಸಂತುಲನ ಪ್ರಕ್ರಿಯೆಯ ವಿಷ್ಮಯಗಳನ್ನು ಮೀರಿಸುವಂತೆ ಮಿದುಳಿನ ಉಳಿದ ಮುಕ್ತಭಾಗಗಳು ಬೇರೆಬೇರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಅವಕಾಶ ಪಡೆದುವು.*

ಈ ವಿಷಯವಾಗಿ ಫ್ರೆಂಚ್ ಮನೋವಿಜ್ಞಾನಿ ಕ್ಲಾಡ್ ಬರ್ನಾಡ್ ಎಂಬಾತ 'ಒಂದು ಸ್ಥಿರ ಆಂತರಿಕ ಪರಿಸರವು ಮುಕ್ತ ಜೀವನಕ್ಕೆ ಅತ್ಯಗತ್ಯ' ಎಂಬ ತನ್ನ ಪ್ರಸಿದ್ಧ ಹೇಳಿಕೆಯಲ್ಲಿ ಸೂಚಿಸಿದ್ದಾನೆ.

ಆಧ್ಯಾತ್ಮಿಕ ಪ್ರಯಾಣ ಎಂಬುದು ನಾನು ಹಿಂದೆ ಹೇಳಿದಂತೆ ಮುಖ್ಯವಾಗಿ ಒಂದು ಆಂತರಿಕ ಪ್ರಯಾಣವೇ ಹೊರತು ಕಾಲ ದೇಶಗಳಲ್ಲಿ ಕೈಗೊಳ್ಳುವ ಬಾಹ್ಯ ಪ್ರಯಾಣವಲ್ಲ. ಪ್ರಕೃತಿಯ ವಿಕಾಸದ ಒಂದು ಹುಟ್ಟುವಳಿಯಾದ ಮಾನವನು ಆ ವಿಕಾಸದ ಒಂದು ವಿಶಿಷ್ಟ ನಮೂನೆಯಾಗಿದ್ದು ಪ್ರಕೃತಿಯ ನಿಗೂಢತೆಗೆ, ವಿಕಾಸದ ಉದ್ದೇಶಕ್ಕೆ ಮತ್ತು ಎಲ್ಲ ಬದುಕಿನ ಅರ್ಥವಂತಿಕೆಗೆ ಒಂದು ಕೀಲಿಕೈಯಾಗಿದ್ದಾನೆ. ಅವನ ಮನೋಭೌತಿಕ ವ್ಯವಸ್ಥೆಯು ಒಂದು ಕಿರುವಿಶ್ವವಾಗಿದೆ. ವೇದಾಂತವು ಹೇಳುವಂತೆ ಅದರ ಬಾಹ್ಯಕೋಶದ ಸ್ಥೂಲ ರೂಪದಿಂದಾಗಿ ಅದರ ಒಳಗಿನ ಆಯಾಮದ ವಿಪುಲತೆಯು ಅಜ್ಞಾತವಾಗಿದೆ. ದೇಹ ಮತ್ತು ಸುತ್ತಣ ಜಗತ್ತುಗಳು ಸತ್ಯದ ಹೊರರೇಖೆಗಳು ಮಾತ್ರ. ನಾವು ಒಳಗೆ ನುಗ್ಗಿದರೆ ಆಗ ಸೂಕ್ಷ್ಮಾತಿ ಸೂಕ್ಷ್ಮತೆಯನ್ನು ಕಾಣುತ್ತೇವೆ. ತನ್ಮೂಲಕ ಸತ್ಯದ ಇನ್ನೂ ವಿಪುಲ ಸಂಗತಿಗಳು ನಮ್ಮ ಮುಂದೆ ಹಾಯುತ್ತವೆ. ಇವೆಲ್ಲ ಗೊತ್ತಾಗುವುದು ಮನಸ್ಸಿಗೆ ಮಾತ್ರ. ಜ್ಞಾನ ವೃದ್ಧಿಯಾದಂತೆ ನಿಜವಾಗಿಯೂ ಸತ್ಯಕ್ಕೆ ಒಂದು ಶಾಶ್ವತವಾದ, ಬದಲಾಗದ, ಮತ್ತು ಅನಂತವಾದ ಆಯಾಮವು ಇದ್ದ ಪಕ್ಷದಲ್ಲಿ ಅದು ಪ್ರಜ್ಞೆಯ ಕೇಂದ್ರ ಇರಬೇಕು ಎಂಬ ನಂಬಿಕೆ ಮನುಷ್ಯನಲ್ಲಿ ಉಂಟಾಗುತ್ತದೆ. ಅಂಥದೊಂದು ಕೇಂದ್ರವನ್ನು ಕಂಡು ಹಿಡಿಯಲು ತುಂಬ ಆಳವಾದ ಪ್ರವೇಶ ಅಗತ್ಯ. ಅದರಿಂದ ಸತ್ಯದ ಮುಖವನ್ನು ಕವಿದಿರುವ ಅನೇಕಾನೇಕ ಎಳೆಗಳು, ಕೋಶಗಳು ನಮ್ಮ ಗಮನಕ್ಕೆ ಬರುತ್ತವೆ. ಬುದ್ಧನೂ ಸೇರಿದಂತೆ ಭಾರತದ ಎಲ್ಲ ಋಷಿಗಳೂ ಹೇಳಿರುವುದೂ ಇದನ್ನೇ. ಅಧಿಕೃತ ಅನುಭವದ ಮುದ್ರೆ ಹೊತ್ತಿರುವ ಶಬ್ದಗಳಲ್ಲಿ ಉಪನಿಷತ್ತುಗಳು ಹೇಳುವುದೂ ಇದನ್ನೇ.

### ೧೨. ಅಂತರ್ಪ್ರವೇಶದ ಪ್ರಕ್ರಿಯೆಯಾಗಿ ಆಧ್ಯಾತ್ಮಿಕ ಪ್ರಯಾಣ

ಆತ್ಮನ ಒಳಪ್ರಯಾಣದ ಸಂದರ್ಭದಲ್ಲಿ ಸತ್ಯದ ಸೂಕ್ಷ್ಮಾತಿಸೂಕ್ಷ್ಮ ಆಯಾಮಗಳು ಮಾನವನಿಗೆ ಎದುರಾಗುತ್ತವೆಂದೂ ಅಷ್ಟೇ ಅಲ್ಲದೆ ಅತ್ಯಂತ ಹೆಚ್ಚಿನ ಶಕ್ತಿ ಮೂಲಗಳೂ ಎದುರಾಗುತ್ತವೆಂದೂ ವೇದಾಂತ ಹೇಳುತ್ತದೆ. ಮನುಷ್ಯನಲ್ಲಿ ಪ್ರಕಟವಾಗುವ ಪ್ರಾಥಮಿಕ ಶಕ್ತಿರೂಪವು ಅವನ ಅಥವಾ ಅವಳ ಸ್ನಾಯು ಶಕ್ತಿ. ಇದನ್ನು ಗುಣಿಸಿದರೆ ಅದು ಗೂಳಿ ಶಕ್ತಿ ಅಥವಾ ಅಶ್ವಶಕ್ತಿಯಾಗುತ್ತದೆ. ಸ್ನಾಯುಶಕ್ತಿಯು ಮಾನವಶಕ್ತಿಯ ಬಾಹ್ಯತಮ ಸ್ಥೂಲಶಕ್ತಿ ಯಾಗಿದೆ. ಕುದುರೆ ಅಥವಾ ಮನುಷ್ಯನ ಈ ಸ್ನಾಯುಶಕ್ತಿಯು ಆಧುನಿಕ ಬಾಹ್ಯಾಕಾಶ ತಂತ್ರವು ರೂಪಿಸಿರುವ ಕೋಟಿಕೋಟಿ ಅಶ್ವಶಕ್ತಿಯ ರಾಕೆಟ್‌ಗಳಿಗೆ ಹೋಲಿಸಿದರೆ ತುಂಬ ಗೌಣ ಎನ್ನಿಸುತ್ತದೆ.

ಸ್ನಾಯುವಿನ ಹಿಂದೆ ಸೂಕ್ಷ್ಮವಾದ ನರತಂತುಗಳಿವೆ. ಸ್ನಾಯುವಿನೊಂದಿಗೆ ಹೋಲಿಸಿದರೆ ಅದು ತುಂಬ ತೆಳು. ಆದರೆ ಆ ನರತಂತುವನ್ನು ಕತ್ತರಿಸಿ. ಆಗ ಸ್ನಾಯು ಸಾಯುತ್ತದೆ. ಹೀಗೆ ನಮ್ಮ ಶೋಧನೆಯ ಆರಂಭದಲ್ಲಿಯೇ, ಈ ಸ್ಥೂಲ ಸ್ನಾಯುಶಕ್ತಿಯ ಹಿಂದೆ ಒಂದು ಸಣ್ಣ, ಆದರೆ ಹೆಚ್ಚು ಸೂಕ್ಷ್ಮವಾದ, ವಿಪುಲವಾದ ನರವ್ಯವಸ್ಥೆ ನಮ್ಮ ನಾಡಿಗಳಲ್ಲಿದೆ ಎಂಬುದು ತಿಳಿದು ಬರುತ್ತದೆ. ಶೋಧನೆಯನ್ನು ಇನ್ನೂ ಮುಂದುವರಿಸಿದರೆ, ಈ ನರವ್ಯವಸ್ಥೆಯ ಹಿಂದೆ ಅದಕ್ಕಿಂತಲೂ ಸೂಕ್ಷ್ಮವಾದ ಮಾನಸಿಕ ಶಕ್ತಿವ್ಯವಸ್ಥೆ ಇದೆ ಎಂಬುದು ಕಂಡುಬರುತ್ತದೆ. ಇದು ನರಶಕ್ತಿಯನ್ನು ಪೋಷಿಸಿ ನಿಗ್ರಹಿಸುತ್ತದೆ. ಈ ಅಭೌತಶಕ್ತಿ ವ್ಯವಸ್ಥೆ ಕುಂಟಿತದರೆ ನರ ಮತ್ತು ಸ್ನಾಯುಗಳೆರಡೂ ಕ್ರಿಯೆಯಲ್ಲಿ

ತೊಡಗದೆ ಶಕ್ತಿಹೀನವಾಗುತ್ತದೆ. ಹೀಗೆ ನಾವು ಮಾನವನ ಬಗ್ಗೆ ಆಳವಾಗಿ ಒಳಹೊಕ್ಕು ನೋಡ ತೊಡಗಿದಂತೆ ಮಾನವನಲ್ಲಿ ಸೂಕ್ಷ್ಮಶಕ್ತಿಗಳು ಇವೆಯೆಂಬುದನ್ನು ಗಮನಿಸುತ್ತೇವೆ. ಹಾಗೆಯೇ ನಾವು ಸ್ಥೂಲದಿಂದ ಸೂಕ್ಷ್ಮಕ್ಕೆ ಹೋದಂತೆ ಮಾನವ ಶಕ್ತಿಮೂಲಗಳು ಪ್ರಮಾಣ, ಗುಣ ಮತ್ತು ವ್ಯಾಪ್ತಿಯಲ್ಲಿ ಹೆಚ್ಚು ಹೆಚ್ಚಿನದಾಗುತ್ತ ಹೋಗುತ್ತವೆಂಬುದನ್ನು ಗಮನಿಸುತ್ತೇವೆ. ಹಿಂದಿನ ಋಷಿಗಳು ತಮ್ಮ ತೀವ್ರ ತರಬೇತಿ ಹೊಂದಿದ ಮತ್ತು ಪರಿಶುದ್ಧವಾದ ಮನಸ್ಸಿನಿಂದ ಮನುಷ್ಯನೊಳಗೆ ಆಳ ಆಳವಾಗಿ ನುಗ್ಗಲು ಪ್ರಯತ್ನಿಸಿ ಯಶಸ್ಸು ಸಾಧಿಸಿದ್ದಾರೆ.

ಮಾನಸಿಕ ವ್ಯವಸ್ಥೆಯ ಹಿಂದೆ ನುಗ್ಗಿದ ಅವರು ಆತ್ಮದಲ್ಲಿ, ಮನುಷ್ಯನ ನೈಜ ಆತ್ಮದಲ್ಲಿ ಅನಂತವಾದ ಸೂಕ್ಷ್ಮಾತಿಸೂಕ್ಷ್ಮವಾದ ಮತ್ತು ತುಂಬ ವಿಪುಲವಾದ ಆಧ್ಯಾತ್ಮಿಕ ಶಕ್ತಿ ಮೂಲಗಳಿವೆ ಎಂದು ಪತ್ತೆ ಹಚ್ಚಿದರು. 'ತತ್ ತ್ವಂ ಅಸಿ' ('ನೀನು ಅದೇ ಆಗಿದ್ದೀಯೆ') ಎಂಬ ಒಂದು ಕಿರುಮಂತ್ರದಲ್ಲಿ ಈ ಶೋಧವನ್ನು ಪ್ರಕಟಪಡಿಸಲಾಗಿದೆ.

ಒಂದು ಜಡವಸ್ತುವಿನ ನ್ಯೂಕ್ಲಿಯರ್ ಗರ್ಭದಲ್ಲಿ ಅಪಾರ ಶಕ್ತಿ ಹುದುಗಿದೆ ಎಂಬ ಸತ್ಯಸಂಗತಿಯನ್ನು ಆಧುನಿಕ ಭೌತವಿಜ್ಞಾನಿಗಳು ಹೇಗೆ ಕಂಡುಹಿಡಿದರೋ ಹಾಗೆ ತನ್ನ ಆಂತರಿಕ ಶೋಧನೆಯಿಂದ ವೇದಾಂತವು ಮಾನವನ ಬಗೆಗೆ ಆಳವಾದ ಸತ್ಯವನ್ನು ಕಂಡುಕೊಂಡಿತು. ಏನೆಂದರೆ ಮಾನವ ಶಕ್ತಿಮೂಲಗಳು ಏರುಕ್ರಮದ ಸೂಕ್ಷ್ಮತೆ, ಅಗಾಧತೆ ಮತ್ತು ಆಂತರಂಗಿಕತೆಗಳಲ್ಲಿ ವ್ಯವಸ್ಥೆಗೊಂಡಿವೆ. ಸೂಕ್ಷ್ಮ, ಮಹಾಂತಶ್ಚ, ಪ್ರತ್ಯಗಾತ್ಮ-ಭೂತಾಶ್ಚ ಎಂದು ಶಂಕರಾಚಾರ್ಯರ ಭಾಷೆಯಲ್ಲಿ ಹೇಳಬಹುದು. ಎಲ್ಲ ಸೂಕ್ಷ್ಮತೆ ಅಗಾಧತೆ ಆಂತರಂಗಿಕತೆಗಳು ಆತ್ಮನಲ್ಲಿ ಅಂದರೆ ಶುದ್ಧ ಅದ್ವೈತ ಪ್ರಜ್ಞೆಯಲ್ಲಿ ಲೀನವಾಗುತ್ತವೆ. 'ವೇದಾಂತದ ವಿವಿಧ ಘಟ್ಟಗಳು' ಎಂಬ ವಿಷಯವಾಗಿ ೧೮೯೭ರಲ್ಲಿ ಕಲ್ಕತ್ತೆಯಲ್ಲಿ ಮಾತನಾಡುತ್ತ ಸ್ವಾಮಿ ವಿವೇಕಾನಂದರು ಭಾರತದ ಸತ್ಯಾನ್ವೇಷಣೆಯು ಹೇಗೆ ಬಾಹ್ಯ ಭೌತಪ್ರಪಂಚ ವಲಯದಿಂದ ಮೇಲೇರಿ ಮಾನವನ ಅಂತಃಸ್ವರೂಪದ ವಿಶಿಷ್ಟ ನವ ವಲಯಕ್ಕೆ, ಅಂದರೆ ಪ್ರಕೃತಿಯ ಅಂತರಂಗ ಘಟಕಕ್ಕೆ ಪದಾರ್ಪಣ ಮಾಡಿತೆಂಬುದನ್ನು ವಿವರಿಸಿದ್ದಾರೆ. (ಕೃತಿಶ್ರೇಣಿ : ಸಂಪುಟ III ಪುಟ ೧೮೯) :

*ಪ್ರಾಚೀನ ಗ್ರೀಕರು ಮತ್ತು ಆಧುನಿಕ ಯೂರೋಪಿಯನರು ಜೀವನಕ್ಕೆ ಮತ್ತು ಜಗತ್ತಿಗೆ ಕಾರಣವಾದ ಪರಮಾತ್ಮ ತತ್ವಕ್ಕೆ ಸಂಬಂಧಿಸಿದ ಸಮಸ್ಯೆಗಳ ಪರಿಹಾರವನ್ನು ಬಾಹ್ಯ ಪ್ರಕೃತಿಯಲ್ಲಿ ಹುಡುಕುವರು. ಅದರಂತೆಯೇ ನಮ್ಮ ಪೂರ್ವಿಕರೂ ಪ್ರಯತ್ನಪಟ್ಟರು. ಯೂರೋಪಿಯನರು ಈ ಪ್ರಯತ್ನದಲ್ಲಿ ಸೋತಂತೆ ನಮ್ಮವರೂ ಸೋತರು. ಪಾಶ್ಚಾತ್ಯರು ಅಲ್ಲಿಂದ ಮುಂದೆ ಹೋಗಲಿಲ್ಲ. ಬಾಹ್ಯ ಪ್ರಕೃತಿಯಲ್ಲಿ ಜೀವನ ಮರಣ ರಹಸ್ಯ ಅವರಿಗೆ ಗೊತ್ತಾಗಲಿಲ್ಲ. ಅವರು ಅಲ್ಲೇ ದಾರಿ ತಪ್ಪಿ ನಿಂತರು. ನಮ್ಮ ಪೂರ್ವಿಕರಿಗೂ ಇದು ಅಸಾಧ್ಯವೆಂದು ಗೊತ್ತಾಯಿತು. ಇಂದ್ರಿಯಗಳಿಗೆ ಈ ವಿಷಯವನ್ನು ತಿಳಿದುಕೊಳ್ಳುವುದು ಅಸಾಧ್ಯವೆಂದು ಧೈರ್ಯವಾಗಿ ಅವರು ಒಪ್ಪಿಕೊಂಡರು. ಉಪನಿಷತ್ತುಗಳು ನೀಡುವ ವಿವರಣೆಗಿಂತ ಉತ್ತಮವಾದುದು ಬೇರೆಲ್ಲಿಯೂ ದೊರಕುವುದಿಲ್ಲ : "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ"-ಎಲ್ಲಿಂದ ಮಾತು ಮನಸ್ಸಿನೊಂದಿಗೆ ಹಿಂತಿರುಗುವುದೊ, "ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ"-ಅಲ್ಲಿಗೆ ಕಣ್ಣೂ ಹೋಗಲಾರದು, ಮಾತೂ ಹೋಗಲಾರದು. ಇಂದ್ರಿಯಗಳಿಗೆ ಅದನ್ನೂ ಗ್ರಹಿಸುವುದು ಅಸಾಧ್ಯ ಎಂದು ವಿವರಿಸುವ ಹಲವು ವಾಕ್ಯಗಳಿವೆ. ಆದರೆ ಅವರು ಅಲ್ಲೇ ನಿಲ್ಲಲಿಲ್ಲ. ಮನುಷ್ಯನ ಅಂತರರಂಗದ ಕಡೆ ತಿರುಗಿದರು. ತಮ್ಮ ಅಂತರಾಳದಿಂದ ಅದಕ್ಕೆ ಉತ್ತರವನ್ನು ಕಂಡು ಹಿಡಿಯಲು ಯತ್ನಿಸಿದರು. ಅವರು ಅಂತರ್ಮುಖಿಗಳಾದರು. ಬಾಹ್ಯ ಪ್ರಕೃತಿಯಲ್ಲಿ ಅವರಿಗೆ ಏನೂ ದೊರಕಲಿಲ್ಲ. ದೊರಕುವ ಸಂಭವವೂ ಇಲ್ಲ. ಅಲ್ಲಿ ಯಾವ ಉತ್ತರವೂ ದೊರಕದು.*

ಅದನ್ನು ತ್ಯಜಿಸಿದರು. ಜಡ ಅಚೇತನ ಪ್ರಕೃತಿ ನಮಗೆ ಸತ್ಯವನ್ನು ಕೊಡಲಾರದು ಎಂದು ಅದನ್ನು ತ್ಯಜಿಸಿದರು. ಜ್ಯೋತಿರ್ಮಯ ಜೀವಾತ್ಮನ ಕಡೆ ತಿರುಗಿದರು. ಅಲ್ಲಿ ಉತ್ತರ ಸಿಕ್ಕಿತು.

ಪ್ರಾಚೀನ ಭಾರತವು ಸಾಧಿಸಿದ ಪ್ರಗತಿಯನ್ನು ಉಲ್ಲೇಖಿಸುತ್ತ ಮ್ಯಾಕ್ಸ್‌ಮುಲ್ಲರ್ ಅವರು (Three Lectures on the Vedanta Philosopy , ಲಂಡನ್ ೧೮೯೪, ಪು ೭) :

*ಪ್ರಾಚೀನ ಭಾರತದ ತತ್ತ್ವಜ್ಞಾನಿಗಳು ಆತ್ಮದ ವಿಷಯದಲ್ಲಿ ಗ್ರೀಕರಿಗಿಂತ, ಮಧ್ಯಕಾಲೀನ ಅಥವಾ ಆಧುನಿಕ ತತ್ತ್ವಜ್ಞಾನಿಗಳಿಗಿಂತ ಹೆಚ್ಚಿನದನ್ನು ತಿಳಿದಿದ್ದರೆಂಬ ಸಂಗತಿ ನಿಮಗೆ ತುಂಬ ಆಶ್ಚರ್ಯದ ಸಂಗತಿ ಎನಿಸಿದರೆ ಇಷ್ಟು ನೆನಪಿರಲಿ ; ಇಂದು ನಕ್ಷತ್ರಗಳನ್ನು ನೋಡಲು ದೂರದರ್ಶನ ಯಂತ್ರಗಳು ತುಂಬ ಸುಧಾರಿಸಿದ್ದರೂ ಆತ್ಮದ ಪ್ರಯೋಗಾಲಯಗಳು ಮಾತ್ರ ಎಂದಿನಂತೆಯೇ ಇವೆ.*

ಹಿಂದೆ ಹೇಳಿದ ಕಠೋಪನಿಷತ್ತು ೩ನೇ ಅಧ್ಯಾಯದ ೧೦, ೧೧ನೆಯ ಶ್ಲೋಕಗಳಲ್ಲಿ ಈ ಒಳ ಪ್ರವೇಶದ ಇಣಕುನೋಟವನ್ನು ಕೊಡುತ್ತಾರೆ. ಈ ಪದ್ಯಗಳನ್ನು ಉದ್ಧರಿಸಿ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಹೀಗೆ ಹೇಳುತ್ತಾರೆ :

ಅಧುನಾ ಯತ್ ಪದಂ ಗಂತವ್ಯಂ, ತಸ್ಯ ಇಂದ್ರಿಯಾಣಿ ಸ್ಥೂಲಾನಿ ಆರಭ್ಯ, ಸೂಕ್ಷ್ಮತಾರತಮ್ಯ ಕ್ರಮೇಣ, ಪ್ರತ್ಯಗಾತ್ಮತಯಾ ಅಧಿಗಮಃ ಕರ್ತವ್ಯಃ ಇತ್ಯೇವಂ ಅರ್ಥಂ ಇದಂ ಆರಭ್ಯತೇ-

*ಆತ್ಮನ ಪ್ರಯಾಣದ ಮೂಲಕ ಗುರಿಯನ್ನು ಮುಟ್ಟಿ ಆ ಸ್ಥಿತಿಯನ್ನು ತಲುಪಬೇಕಾದ ಪ್ರಯಾಣವು ಸ್ಥೂಲ ಇಂದ್ರಿಯಗಳಿಂದ ಆರಂಭವಾಗಿ ತುಂಬ ಸೂಕ್ಷ್ಮಾತಿಸೂಕ್ಷ್ಮ ಅಂಶಗಳ ಮೂಲಕ ಹಾದು ಪ್ರತ್ಯಗಾತ್ಮ (ಒಳಗಿನ ಆತ್ಮ) ಎಂಬ ಸ್ಥಿತಿಯನ್ನು ತಲುಪುತ್ತದೆ.*

ಈ ಸತ್ಯವನ್ನು ನಿವೇದಿಸಲು ಉಪನಿಷತ್ತು ಹೀಗೆ ಹೇಳುತ್ತದೆ :

ಇಂದ್ರಿಯೇಭ್ಯಃ ಪರಾಹ್ಯರ್ಥಾ
ಅರ್ಥೇಭ್ಯಶ್ಚ ಪರಂ ಮನಃ ;
ಮನಸಸ್ತು ಪರಾ ಬುದ್ಧಿಃ
ಬುದ್ಧೇರಾತ್ಮಾ ಮಹಾನ್ ಪರಃ—

*ಇಂದ್ರಿಯ ವಸ್ತುಗಳು (ಅವುಗಳ ತನ್ಮಾತ್ರರೂಪದಲ್ಲಿ) ಇಂದ್ರಿಯಾಂಗಗಳಿಗಿಂತ ಮೇಲ್ಮಟ್ಟದವು. ಈ ಇಂದ್ರಿಯ ವಸ್ತುಗಳಿಗಿಂತ ಮನಸ್ಸು ಮೇಲ್ಮಟ್ಟದ್ದು. ಬುದ್ಧಿಯು ಮನಸ್ಸಿಗಿಂತ ಮೇಲ್ಮಟ್ಟದ್ದು. ಮಹಾನ್ ಆತ್ಮವು ಬುದ್ಧಿಗಿಂತ ಮೇಲ್ಮಟ್ಟದ್ದು.*

ಮಹತಃ ಪರಮವ್ಯಕ್ತಂ
ಅವ್ಯಕ್ತಾತ್ ಪುರುಷಃ ಪರಃ ;
ಪುರುಷಾತ್ ನ ಪರಂ ಕಿಂಚಿತ್
ಸಾ ಕಾಷ್ಠಾ ಸಾ ಪರಾಗತಿಃ—

*ಅವ್ಯಕ್ತವು ಮಹತ್‌ಗಿಂತ ದೊಡ್ಡದು. ಪುರುಷ (ಅನಂತವಾದ ಆತ್ಮ)ನು ಅವ್ಯಕ್ತನಿಗಿಂತ ದೊಡ್ಡವನು. ಪುರುಷನಿಗಿಂತ ದೊಡ್ಡವರು ಯಾರೂ ಇಲ್ಲ, ಅದೇ ಅಂತಿಮ, ಅದೇ ಪರಮಗುರಿ.*

ಈ ಶ್ಲೋಕಗಳಲ್ಲಿ ಹೇಳಿರುವ ಸತ್ಯವನ್ನು ಕವಿದಿರುವ ಪದರಗಳನ್ನು ತೈತ್ತಿರೀಯ ಉಪನಿಷತ್ತಿನ ಎರಡನೆಯ ಮತ್ತು ಮೂರನೆಯ ಗ್ರಂಥಗಳು 'ಕೋಶ'ಗಳು ಎಂದು ವಿವರಿಸುತ್ತವೆ. ಅವುಗಳ ಸಂಖ್ಯೆ ಐದು. ಅನ್ನಮಯ ಕೋಶ, (ಇಂದ್ರಿಯಗಳಿಗೆ ಗೋಚರವಾಗುವ ದೇಹ ಮತ್ತು ಭೌತ ಜಗತ್ತು) ಪ್ರಾಣಮಯ ಕೋಶ, ಮನೋಮಯ ಕೋಶ ಮತ್ತು ವಿಜ್ಞಾನಮಯ ಕೋಶಗಳು

ಇಂದ್ರಿಯ, ಮನಸ್ಸು, ಬುದ್ಧಿಗಳಿಗೆ ಸಂವಾದಿಯಾಗಿವೆ ಮತ್ತು ಆನಂದಮಯ ಕೋಶವು 'ಅವ್ಯಕ್ತ' ಪ್ರಕೃತಿಗೆ ಸಂಬಂಧಿಸಿದ್ದು. ಇಂದ್ರಿಯಗಳು, ಮನಸ್ಸು, ಬುದ್ಧಿ ಕೋಶಗಳು ಇಂದಿನವರು ಹೇಳುವ (biosperical psychical ಮತ್ತು noospherical—ಇವುಗಳಿಗೆ) ಸಂವಾದಿಯಾಗಬಹುದು.

ಮಾನವ ವಿಷಯವನ್ನು ಅಧ್ಯಯನ ಮಾಡಿ ತನ್ನ ವ್ಯಕ್ತಿತ್ವದ ಗರ್ಭದಲ್ಲಿ ಆತನ ಆತ್ಮಾನುಭವದ ನೈಜಕೇಂದ್ರವನ್ನು ಹುಡುಕುತ್ತ ವೇದಾಂತವು ಮೇಲೆ ಹೇಳಿದ ಪಂಚಕೋಶಗಳನ್ನು ಕಂಡುಹಿಡಿಯಿತು. ಇವುಗಳನ್ನು ಸ್ಥೂಲ ಶರೀರ, ಸೂಕ್ಷ್ಮ ಶರೀರ ಮತ್ತು ಕಾರಣ ಶರೀರ ಎಂದೂ ಹೇಳುತ್ತಾರೆ. ಗೀತೆಯ ಅನುವಾದದಲ್ಲಿ ಡಾ॥ ರಾಧಾಕೃಷ್ಣನ್ ಅವರು ಹೇಳಿರುವಂತೆ (ಭಗವತ್‌ಗೀತೆ ಪು.೧೭೭-)

*ಆತ್ಮ ದಂತೆ ತೋರಿಕೊಳ್ಳುವ ಇವುಗಳಲ್ಲಿ ಒಂದು ಬದಲಾಗದ ಕೇಂದ್ರವೂ ಇಲ್ಲ ಅಥವಾ ಅಮರವಾದ ಮೂಲದ್ರವ್ಯ... ಯಾವುದೂ ಇಲ್ಲ*

ದೇಹ ಇಂದ್ರಿಯಗಳು ಮನಸ್ಸು ಅಹಂ ಇವೆಲ್ಲ ತಾವೇ ಮನುಷ್ಯನ ಆತ್ಮ ಎಂದು ಹೇಳಿಕೊಳ್ಳುತ್ತವೆ. ಪರಿಶೀಲನೆ ನಡೆಸುವ ಮೊದಲಿಗೆ ಮಾನವನು ಅವುಗಳಲ್ಲಿ ಒಂದಲ್ಲ ಒಂದನ್ನು ತನ್ನ ಆತ್ಮ ಎಂದು ಸ್ವೀಕರಿಸುತ್ತಾನೆ. ಆದರೆ ತಾತ್ವಿಕವಾಗಿ ಚಿಂತನೆ ಮಾಡಿದರೆ ಅವುಗಳ ಅನಾತ್ಮ ಸ್ವಭಾವವು ತಿಳಿದು ಬರುತ್ತದೆ. ಅವುಗಳಲ್ಲಿ ಒಂದೊಂದೂ ಒಂದು ವಿಷಯವಾಗಿದೆ, ಅದರಲ್ಲಿ ಪ್ರಜ್ಞೆಯ ಬೆಳಕಿನ ಪ್ರತಿಫಲನ ಇರುತ್ತದೆ ಅಷ್ಟೆ. ಅದು ಸ್ವಪ್ರಕಾಶವುಳ್ಳ ವಿಷಯಿ ಅಲ್ಲ. ಪ್ರತಿಯೊಂದೂ ಒಂದು ಸಂಘಾತ ಎಂದು ವೇದಾಂತ ಮತ್ತು ಬುದ್ಧನ ಪರಿಭಾಷೆಯಲ್ಲಿ ಹೇಳಲಾಗಿದೆ. ಅಂದರೆ ಅದು ಬದಲಾವಣೆ ಮತ್ತು ಸಾವಿಗೆ ಒಳಗಾಗಬಹುದಾಗಿದೆ.

ಆತ್ಮ ಶೋಧವು ಅವುಗಳನ್ನು ಬಿಟ್ಟು ಮುಂದೆ ಒಳನುಗ್ಗಬೇಕು. ಈ ಬದಲಾಗುವ ಅನಾತ್ಮಗಳಾಚೆಗೆ ಬೇರೇನೂ ಕಂಡುಹಿಡಿಯಲಾಗದಿದ್ದರೆ ಮನುಷ್ಯನು ತಾತ್ವಿಕವಾಗಿ ಶೂನ್ಯವಾದವನ್ನೂ ವ್ಯಾವಹಾರಿಕವಾಗಿ ಪ್ರಯೋಜನವಾದವನ್ನೂ ಒಪ್ಪಿಕೊಳ್ಳಬಹುದು. ಆದರೆ ವೇದಾಂತವು ಅನುಭವ ಸತ್ಯಗಳಲ್ಲಿ ಒಂದು ಬದಲಾಗದ ಸತ್ಯದ ಸಾಕಷ್ಟು ಸೂಚನೆಗಳನ್ನು ಕಾಣುತ್ತದೆ. ಇದು ವೈಚಾರಿಕವಾಗಿ ಸತ್ಯಶೋಧನೆಯನ್ನು ಇನ್ನೂ ಮುಂದುವರಿಸಲು ಸಮರ್ಥನೆಯಾಗಿದೆ. ಆಗ ವಿಚಾರಕ್ಕೆ ಮನುಷ್ಯನ ಭಿನ್ನಭಿನ್ನ ಅನುಭವಗಳಲ್ಲಿ ಒಂದು ಏಕತೆಯಿದೆ ಹಾಗೂ ನೆನಪು ಎಂಬ ಅಂಶವಿದೆ ಎಂಬ ಸತ್ಯವು ಎದುರಾಗುತ್ತದೆ. ಇವೆಲ್ಲವೂ ಮನುಷ್ಯನಲ್ಲಿ ಒಂದು ಬದಲಾಗದ ಕೇಂದ್ರವಿದೆ ಎಂಬುದನ್ನು ಸೂಚಿಸುತ್ತದೆ. ಅಂಥ ಬದಲಾಗದ ಕೇಂದ್ರವೊಂದು ಇಲ್ಲದಿದ್ದರೆ ಬದಲಾವಣೆಗಳ ಗ್ರಹಿಕೆ, ನೆನಪಿನ ಅನುಭವ ಮತ್ತು ಅವೆಲ್ಲವನ್ನು ಒಬ್ಬನೇ ತಿಳಿಯುವ ಜ್ಞಾತೃವಿಗೆ ಅನ್ವಯಿಸುವಿಕೆ—ಇವುಗಳನ್ನು ವಿವರಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಅಂಥ ಅನುಭವದ ಶೋಧನೆಯಿಂದಾಗಿ ವೇದಾಂತಕ್ಕೆ ಬದಲಾಗದ ವಿಷಯಿ ಅಥವಾ ಜ್ಞಾತೃವು, ಮಾನವ ವ್ಯಕ್ತಿತ್ವದ ಗರ್ಭದಲ್ಲಿ ಜ್ಞಾನ ಪ್ರಕ್ರಿಯೆಯ ಕೇಂದ್ರಸ್ಥಳದಲ್ಲಿದ್ದಾನೆಂಬ ಬೋಧೆಯಾಯಿತು. ಶಂಕರಾಚಾರ್ಯರು *ವಿವೇಕ ಚೂಡಾಮಣಿ*ಯಲ್ಲಿ ದೃಢೀಕರಿಸಿರುವಂತೆ :

ಅಸ್ತಿ ಕಶ್ಚಿತ್ ಸ್ವಯಂ ನಿತ್ಯಂ
ಅಹಂ ಪ್ರತ್ಯಯಲಂಬನಃ ;
ಅವಸ್ಥಾತ್ರಯಸಾಕ್ಷೀ ಸನ್
ಪಾಂಚಕೋಶ ವಿಲಕ್ಷಣಃ—

*ನಿತ್ಯವಾದದ್ದು, ಅಹಂ ಅನುಭವದ ಮೂಲವಾದದ್ದು ಜಾಗ್ರತ ಸ್ವಪ್ನ ಸುಷುಪ್ತಿ ಈ ಮೂರು ಅವಸ್ಥೆಗಳಲ್ಲೂ ಸಾಕ್ಷಿಯಾಗಿರುವಂಥದು ಮತ್ತು ಪಂಚಕೋಶಗಳಿಂದ ವಿಲಕ್ಷಣವಾದದ್ದು ಏನೋ ಒಂದು ಇದ್ದೇ ಇದೆ.*

ಯೋ ವಿಜಾನಾತಿ ಸಕಲಂ
ಜಾಗ್ರತ್‌ಸ್ವಪ್ನಸುಷುಪ್ತಿಷು
ಬುದ್ಧಿತದ್ವೃತ್ತಿ ಸದ್ಭಾವಂ
ಅಭಾವಂ ಅಹಂ ಇತ್ಯಯಂ

*ಯಾವಾತ ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ನಡೆಯುವ ಎಲ್ಲವನ್ನೂ ತಿಳಿಯಬಲ್ಲನೋ, ಮನಸ್ಸು ಮತ್ತು ಅದರ ಕಾರ್ಯಗಳ ಹಾಜರಿ ಅಥವಾ ಗೈರುಹಾಜರಿಯನ್ನು ಅರಿಯಬಲ್ಲನೋ ಯಾವಾತ 'ಅಹಂ' ಭಾವದ ಮೂಲನೋ...*

ಮರ್ತ್ಯ ಶರೀರ-ಮನಸ್ಸುಗಳ ಸಂಕೀರ್ಣದ ಹಿಂದೆ ಇರುವ ಅಮರ ಸತ್ಯವಾದ ಆತ್ಮವಿದೆ ಎಂಬ ಈ ಸುವಾರ್ತೆಯು ಸಕಲ ಮಾನವ ಸಮಾಜಕ್ಕೆ ಉಪನಿಷತ್ತುಗಳು ಬಿಟ್ಟುಹೋಗಿರುವ ಅಳಿಯದ ಆಸ್ತಿಯಾಗಿದೆ. ಅದು ಕೇವಲ ಊಹಾತ್ಮಕ ಬುದ್ಧಿಯಿಂದ ಮಾಡಿದ ಬೌದ್ಧಿಕ ಸಂಶೋಧನೆಯಲ್ಲ. ಅದೊಂದು ಆಧ್ಯಾತ್ಮಿಕ ಬೋಧೆಯಾಗಿದ್ದು ಮಾನವನ ಬೌದ್ಧಿಕ ಮತ್ತು ನೈತಿಕ ಬದುಕಿಗೆ ಅಗಾಧ ಸಾಧ್ಯತೆಗಳನ್ನು ಒದಗಿಸಿಕೊಡಬಲ್ಲುದೂ ಆಗಿದೆ. ಮಾನವನ ಆತ್ಮದ ಬೆಲೆಬಾಳುವ ಸ್ವಾತಂತ್ರ್ಯ ಎಂಬ ಮೌಲ್ಯವನ್ನು ಅದು ಖಾತ್ರಿ ಮಾಡಿಕೊಡುತ್ತದೆ. ಅದೊಂದು ಆಧ್ಯಾತ್ಮಿಕ ಶೋಧವಾಗಿರುವುದರಿಂದ ಪ್ರತಿಯೊಬ್ಬ ಮಾನವ ಜೀವಿಯೂ ಸಾಕ್ಷಾತ್ಕರಿಸಿಕೊಳ್ಳಬೇಕಾದ ಆಧ್ಯಾತ್ಮಿಕ ಸತ್ಯ ಎಂಬುದನ್ನೂ ಬರಿಯ ನಂಬಬಹುದಾದ ಬೌದ್ಧಿಕ ಸೂತ್ರವಲ್ಲ ಎಂಬುದನ್ನೂ ಇಡೀ ಜಗತ್ತಿಗೆ ಸಾರಿಕೊಂಡು ಬಂದಿದೆ. ಕೆಲವರು ಕಂಡುಹಿಡಿದುದನ್ನು ಅನೇಕರು ಪುನಶ್ಶೋಧನೆಯಾಗಿ ಪರಿವರ್ತಿಸಿಕೊಡಬೇಕು. ಏಕೆಂದರೆ ಅದು ಪ್ರತಿಯೊಬ್ಬನ ಆಜನ್ಮಸಿದ್ಧ ಹಕ್ಕು. ಇದು ಎಲ್ಲ ಸ್ತ್ರೀಪುರುಷರಿಗೂ ಒಂದು ಕಡ್ಡಾಯದ ಸಂದೇಶ.

ಕಠೋಪನಿಷತ್ತು ಈ ಸಂದೇಶದ ವಿಶ್ವವ್ಯಾಪೀ ಗುಣವನ್ನು ಅರಿತಿದೆ. ಅದರ ೩ನೇ ಅಧ್ಯಾಯದ ಹನ್ನೆರಡನೆಯ ಪದ್ಯದಲ್ಲಿ ಈ ಉಪನಿಷತ್ತು ಆತ್ಮನ ವಿಶ್ವವ್ಯಾಪಕತೆಯನ್ನು ಮತ್ತು ಅದನ್ನು ಬದುಕಿನಲ್ಲಿ ತಾಳೆ ನೋಡಬಹುದಾದ ಅಂಶವನ್ನು ಹೇಳುತ್ತದೆ (೩:೧೨) :

ಏಷ ಸರ್ವೇಷು ಭೂತೇಷು
ಗೂಢೋ ಆತ್ಮಾ ನ ಪ್ರಕಾಶತೇ
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ
ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ

*ಈ ಆತ್ಮನು ಸರ್ವಭೂತಗಳಲ್ಲೂ ಗೂಢನಾಗಿ ಸೇರಿಕೊಂಡಿರುವುದರಿಂದ ಎಲ್ಲರಿಗೂ ಪ್ರಕಾಶಿಸುವುದಿಲ್ಲ. ಆದರೆ ಆದನ್ನು ತುಂಬ ಹರಿತವಾದ ಬುದ್ಧಿಯಿಂದ ಸೂಕ್ಷ್ಮದರ್ಶಿಗಳಾದವರು ಒಳಹೊಕ್ಕು ನೋಡಲು ಸಮರ್ಥರಾಗಿರುತ್ತಾರೆ.*

ಸರ್ವದಾ ತಿಳಿಯುವ ಆತ್ಮನಾಗಿರುವುದರಿಂದ ಅದೊಂದು ಸರ್ವಕಾಲೀನ ಅನುಭವದ ದತ್ತಾಂಶವೇ ಹೊರತು ಬರೀಯ ತಾರ್ಕಿಕ ರಚನೆಯಲ್ಲ. ಆದರೆ ಅದು ಎಲ್ಲರಿಗೂ ಸುಲಭವಾಗಿ ಬೋಧೆಯಾಗುವುದಿಲ್ಲ. ಸಾಮಾನ್ಯರ ವಿಚಾರಬೇಡ, ಬಹಳ ದೊಡ್ಡ ವಿದ್ವಾಂಸರು ಕೂಡ ಆತ್ಮನನ್ನು ಅರಿಯುವುದರಲ್ಲಿ ವಿಫಲರಾಗಿದ್ದಾರೆ. ಮೇಲಿನ ಶ್ಲೋಕವು ಅದಕ್ಕೆ ಸರಿಯಾದ ಕಾರಣವನ್ನು ಕೊಟ್ಟಿದೆ—ಗೂಢಃ ಅದೊಂದು ನಿಗೂಢ ಇರುವಿಕೆ. ರಾಬರ್ಟ್‌ಬ್ರೌನಿಂಗ್‌ನ 'ಪರಸೆಲ್ಸಸ್' ಕವಿತೆಯಲ್ಲಿ, ಅವನ ಭಾಷೆಯಲ್ಲೇ ಹೇಳುವುದಾದರೆ ಅದೊಂದು ವೈಭವ ಆದರೆ ಸೆರೆಯಲ್ಲಿರಿಸಿದ ವೈಭವ ! ಆದುದರಿಂದ ಅದು 'ನ ಪ್ರಕಾಶತೇ', ಅಂದರೆ ಅದು ಕಣ್ಣಿಗೆ ಬೀಳುವುದಿಲ್ಲ.

ಅಸಂಸ್ಕೃತ ಬುದ್ಧೇಃ ಅವಿಜ್ಞೇಯತ್ವಾತ್—ಅಂದರೆ ಯಾರ ಬುದ್ಧಿ ಅಥವಾ ವಿವೇಕ ಹದ ಗೊಂಡಿರುವುದಿಲ್ಲವೋ ಶುದ್ಧೀಕರಣ ಹೊಂದಿರುವುದಿಲ್ಲವೋ ಅವನಿಗೆ ಅದು ಗೊತ್ತಿಲ್ಲ ಎಂದು ಶಂಕರಾಚಾರ್ಯರು ಹೇಳುತ್ತಾರೆ. ಅದು ಅನುಭವದ ಮೇಲ್ಪದರದಲ್ಲಿ ಕಾಣುವಂಥದಲ್ಲ, ಅದು ಆಳದಲ್ಲಿ ಅಡಗಿರುತ್ತದೆ.

ಇದು ವಿಚಿತ್ರ ಎನ್ನಿಸಬಹುದಾದರೂ ಆತ್ಮನು ಸದಾ ಹಾಗಿರುವುದಿಲ್ಲ. 'ದೃಶ್ಯತೇ' ಅದನ್ನು ನಾವು ನೋಡಬಹುದು. ಅದು ಗೂಢವಾದರೂ ವೇದಾಂತವು ಅದನ್ನು ತಿಳಿಯಲಾಗದೆಂದೇನೂ ಹೇಳುವುದಿಲ್ಲ. ಈ ಅರಿವನ್ನು ಪಡೆಯುವ ಆ ಬುದ್ಧಿ ಯಾವುದು ?' ಅಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ 'ತುಂಬ ಹರಿತವೂ ಸೂಕ್ಷ್ಮವೂ ಆದ ಬುದ್ಧಿಯ ಸಹಾಯದಿಂದ ಒಳನೋಟವುಳ್ಳ ಮತ್ತು ತರಬೇತಿ ಪಡೆದ ಎಲ್ಲರೂ ಆ ಸೂಕ್ಷ್ಮಸತ್ಯವನ್ನು ಅನುಭವಕ್ಕೆ ತಂದುಕೊಳ್ಳಬಹುದು.' ಇದರ ಅರ್ಥ ಹೇಳುತ್ತ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ :

ಇಂದ್ರಿಯೇಭ್ಯಃ ಪರಾಹ್ಯರ್ಥಾ ಇತ್ಯಾದಿ ಪ್ರಕಾರೇಣ, ಸೂಕ್ಷ್ಮತಾ ಪಾರಂಪರ್ಯ-ದರ್ಶನೇನ, ಪರಂ ಸೂಕ್ಷ್ಮಂ ದ್ರಷ್ಟುಂ ಶೀಲಂ ಏಷಾಂ, ತೇ ಸೂಕ್ಷ್ಮದರ್ಶಿನಃ—

*ಅವರು ಸೂಕ್ಷ್ಮದರ್ಶಿಗಳು ಸೂಕ್ಷ್ಮಾತ್‌ಸೂಕ್ಷ್ಮತರವಾದುವುಗಳನ್ನು ಕಾಣಲು ತರಬೇತಿ ಪಡೆದವರು. 'ಇಂದ್ರಿಯ ವಿಷಯಗಳು ಇಂದ್ರಿಯಗಳಿಗಿಂತ ಉನ್ನತವಾದುವು ಇತ್ಯಾದಿ (ಶ್ಲೋಕ ೧೦-೧೧) ಮಂತ್ರದಲ್ಲಿ ಹೇಳಿದ ಸೂಕ್ಷ್ಮತಮವಾದ ಸತ್ಯವನ್ನು ಕಾಣಬಲ್ಲವರು.*

ಕಠೋಪನಿಷತ್ತು ಮುಂದೆ ೧೩ನೆಯ ಮತ್ತು ೧೪ನೆಯ ಶ್ಲೋಕಗಳಲ್ಲಿ ಆತ್ಮನನ್ನು ಅರಿಯಲು ಒಳಹೊಕ್ಕ ನೋಡುವುದನ್ನು ಆ ಒಳನೋಟದಿಂದ ಬರುವ ಫಲವನ್ನು ತಿಳಿಸುತ್ತಾ ಈ ಅದ್ಭುತ ವೇದಾಂತ ಶಿಸ್ತನ್ನು ವಿವರಿಸುತ್ತದೆ.

ಯಚ್ಛೇತ್ ವಾಕ್ ಮನಸೀ ಪ್ರಾಜ್ಞಃ
ತತ್ ಯಚ್ಛೇತ್ ಜ್ಞಾನ ಆತ್ಮನಿ ;
ಜ್ಞಾನ ಮಾತ್ಮಾನಿ ಮಹತೀ ನಿಯಚ್ಛೇತ್
ತತ್ ಯಚ್ಛೇತ್ ಶಾಂತ ಆತ್ಮನಿ—

*ಪ್ರಜ್ಞಾವಂತರು ಮಾತನ್ನು ಮನಸ್ಸಿನಲ್ಲಿ ಲೀನಗೊಳಿಸಲಿ, ಮನಸ್ಸನ್ನು ಬುದ್ಧಿಯಲ್ಲಿ ಲೀನಗೊಳಿಸಲಿ. ಬುದ್ಧಿಯನ್ನು ವಿಶ್ವ ಮನಸ್ಸಿನಲ್ಲಿ ಲೀನಗೊಳಿಸಲಿ, ಮತ್ತೆ ಆ ವಿಶ್ವಮನಸ್ಸನ್ನು ಶಾಂತಾತ್ಮದಲ್ಲಿ ನೆಲೆಗೊಳಿಸಲಿ.*

ಆತ್ಮನನ್ನು ಶಾಂತಾತ್ಮ ಎಂದು ಕರೆದಿರುವುದು ಮಹತ್ತ್ವದ ಅಂಶವಾಗಿದೆ. ಇದರ ಬಗೆಗೆ ಶಂಕರಾಚಾರ್ಯರು ಹೀಗೆ ಹೇಳಿದ್ದಾರೆ.

ಶಾಂತೇ, ಸರ್ವ-ವಿಶೇಷ-ಪ್ರತ್ಯಸ್ತಮಿತರೂಪೇ, ಅವಿಕ್ರಿಯೇ ಸರ್ವಾಂತರೇ, ಸರ್ವಬುದ್ಧಿ-ಪ್ರತ್ಯಯ-ಸಾಕ್ಷಿಣಿ ಮುಖ್ಯ-ಆತ್ಮನಿ—

*ಆತ್ಮನ ಶಾಂತ ಸ್ಥಿತಿಯಲ್ಲಿ ಸರ್ವವಿಶೇಷಗಳೂ ಅಸ್ತಮಾನಗೊಂಡಿರುವ ರೂಪದಲ್ಲಿ, ಬದಲಾಗದ ಸರ್ವಾಂತರಿಯಾದ ಸರ್ವಬುದ್ಧಿಯ ಮಿಡಿತಕ್ಕೆ ಸಾಕ್ಷಿಯಾದ ಮುಖ್ಯ ಆತ್ಮನಲ್ಲಿ.*

ಅಶಬ್ದಂ ಅಸ್ಪರ್ಶಂ ಅರೂಪಂ ಅವ್ಯಯಂ
ತಥಾರಸಂ ನಿತ್ಯಂ ಅಗಂಧವಚ್ಚ ಯತ್ ;
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ—

*ಶಬ್ದ ರುಚಿ ಗಂಧ ಮತ್ತು ಮಹತ್(ವಿಶ್ವಮನಸ್ಸು)ಗಳಿಂದಾಚೆ ಅರೂಪನೂ ಅವಿನಾಶಿಯೂ ಶಾಶ್ವತನೂ ಆದಿರಹಿತನೂ ಅಂತ್ಯರಹಿತನೂ ನಿರ್ವಿಕಲ್ಪನೂ ಆದ ಆತ್ಮ ನನ್ನು ಅರಿತುಕೊಂಡು ಮೃತ್ಯುಮುಖದಿಂದ ಮುಕ್ತನಾಗುತ್ತಾನೆ.*

## ೧೫. ವೇದಾಂತ ಡಿಂಡಿಮ : ಏಳಿ, ಎಚ್ಚರಗೊಳ್ಳಿ

ಮಾನವನು ಇಂದ್ರಿಯ ಮನಸ್ಸುಗಳನ್ನು ಸ್ಥಗಿತಗೊಳಿಸುವಲ್ಲಿ ಯಶಸ್ಸು ಪಡೆದಾಗ ವಿಚಿತ್ರವಾದದ್ದು ಸಂಭವಿಸುತ್ತದೆ. ಅದು ತನ್ನ ನೈಜ ಆತ್ಮದೊಂದಿಗೆ ಮುಖಾಮುಖಿಯಾಗುವಂತೆ ಮಾಡುತ್ತದೆ. ಭೌತಶಾಸ್ತ್ರಗಳಲ್ಲಿ ಮಾಡುವಂತೆಯೇ ನಾವು ವಸ್ತುಗಳ ಸ್ವಭಾವವನ್ನು ಬೇರೆ ಬೇರೆ ಸ್ಥಿತಿಗಳಲ್ಲಿ ಪರೀಕ್ಷೆ ಮಾಡುತ್ತೇವೆ. ಉದಾಹರಣೆಗೆ ಕನಿಷ್ಠತಮ ಉಷ್ಣತೆಗಳಲ್ಲಿ ಮತ್ತು ಒತ್ತಡಗಳಲ್ಲಿ ಪರೀಕ್ಷಿಸುತ್ತೇವೆ. ಫಲಿತಾಂಶದ ಸಂಗತಿಗಳು ಅದ್ಭುತವಾಗಿರುತ್ತವೆ. ಅದೇ ರೀತಿ ಯಾವುದನ್ನು ದಿವಂಗತ ಸರ್ ಜೂಲಿಯನ್ ಹಕ್ಸ್‌ಲಿ ಆಧುನಿಕ ಭೌತವಿಜ್ಞಾನವು 'ಮಾನವ ಸಾಧ್ಯತೆಗಳ ವಿಜ್ಞಾನ'ವಾಗಿ ಬೆಳೆಸಬೇಕೆಂದು ಹೇಳಿದನೋ ಅದನ್ನು ವೇದಾಂತವು ಮಾನವನ 'ಆಂತರಿಕ ಜೀವನ'ವಾಗಿ ಬೆಳೆಸಿದೆ. ನಮ್ಮಲ್ಲಿ ಮಾನವನನ್ನು ಒಳಶಿಸ್ತಿನ ವಿವಿಧ ಸ್ಥಿತಿಗಳಲ್ಲಿ ನೋಡಿದ್ದೇವೆ. ಇದರಿಂದ ಭೌತವಿಜ್ಞಾನಗಳಲ್ಲಿ ಬಂದಿರುವುದಕ್ಕಿಂತ ಹೆಚ್ಚಿನ ಮತ್ತು ಮಹತ್ವದ ವಿಸ್ಮಯಕಾರಿಯಾದ ಫಲಗಳು ಬಂದಿವೆ. ಅಂತರಂಗದ ಬದುಕಿನ ಅಂಥ ಶಿಸ್ತು ಮತ್ತು ಸಂಸ್ಕಾರಗಳ ಅತ್ಯುತ್ತಮ ಫಲ ಎಂದರೆ ಪೂರ್ಣ ಆತ್ಮಪ್ರಕಾಶ—ಜ್ಞಾನ ಅಥವಾ ಬೋಧಿ ; ಆತ್ಮದೀಪ್ತಿಯ ಮತ್ತು ಕ್ರಿಯಾಶೀಲ ನೆಮ್ಮದಿಯ ಸ್ಥಿತಿ.

ವಿಕಾಸದ ಮಜಲಿನಲ್ಲಿ ಜೀವಕಣಗಳು ಕಾಣಿಸಿಕೊಂಡಾಗ ಪರಿಸರದ ಮಂದ ಎಚ್ಚರದ ರೂಪದಲ್ಲಿ ಪ್ರಜ್ಞೆಯು ಅನುಭವದ ಒಂದು ಸೂಕ್ಷ್ಮ ದತ್ತಾಂಶವಾಗುತ್ತದೆ. ಈ ಹಂತದಿಂದ ಮನುಷ್ಯನ ಹಂತದವರೆಗೆ ಪ್ರಜ್ಞೆಯು ಕ್ರಮೇಣ ಆಳ ಮತ್ತು ವ್ಯಾಪ್ತಿಯಲ್ಲಿ ವಿಕಾಸಹೊಂದುವುದನ್ನೂ ಅದಕ್ಕನುಗುಣವಾಗಿ ಜೀವಿಯು ಪರಿಸರದ ಮೇಲೆ ಹತೋಟಿಯನ್ನು ಸಾಧಿಸುವುದನ್ನೂ ನಾವು ಕಾಣುತ್ತೇವೆ. ವೇದಾಂತವು ಇದನ್ನು ಭೌತಿಕ ಶರೀರ ವ್ಯವಸ್ಥೆಯ ವಿಕಾಸವೆಂದೂ ತತ್ಫಲವಾದ ಪ್ರಜ್ಞೆಯ ಅಭಿವ್ಯಕ್ತಿಯೆಂದೂ ಕರೆಯುತ್ತದೆ. ಈ ಪ್ರಜ್ಞೆಯನ್ನು ಲಕ್ಷಣೆಸುವ ಮತ್ತು ಸಮನ್ವಯಿಸುವಲ್ಲಿನ ಪ್ರಗತಿಯನ್ನು ಜ್ಞಾನದ ಪ್ರಗತಿ ಎಂದು ನಮೂದಿಸಲಾಗಿದೆ ದೇವೀ ಮಾಹಾತ್ಮ್ಯದಲ್ಲಿ ಇದನ್ನು ಜ್ಞಾನಮಸ್ತಿ ಸಮಸ್ತಸ್ಯ ಜಂತೋರ್ವಿಷಯ ಗೋಚರೇ—"ಎಲ್ಲ ಜೀವಜಂತುಗಳೂ ತಮ್ಮ ಜ್ಞಾನವನ್ನು ಇಂದ್ರಿಯ ವಸ್ತುಗಳ ಜಗತ್ತಿಗೆ ಸೀಮಿತಗೊಳಿಸಿಕೊಂಡಿವೆ"—ಎಂದು ಹೇಳಲಾಗಿದೆ.

ಈ ಹಂತದ ಪ್ರಜ್ಞೆಯು ಶರೀರ ವ್ಯವಸ್ಥೆಯೊಂದಿಗೆ ಬಂಧಿತವಾಗಿದೆ ಇವುಗಳ ಮೂಲ ಕಳಕಳಿ ದೈಹಿಕ ಸಂತೃಪ್ತಿ ಮತ್ತು ಶರೀರ ಪೋಷಣೆ. ಈ ಪ್ರಜ್ಞೆ ಮತ್ತು ಈ ಜ್ಞಾನವು, ಮಾನವ ಮಟ್ಟದಲ್ಲಿ, ತನ್ನ ಬಾಹ್ಯ ಹಾಗೂ ಅಭ್ಯಂತರ ಆಯಾಮಗಳಲ್ಲಿ ಸತ್ಯದ ಕೇಂದ್ರಕ್ಕೆ ನುಗ್ಗಲು ಸಮರ್ಥವಾಗುತ್ತದೆ.

ಅಂತರಾತ್ಮವು ಪ್ರಶಾಂತವಾಗಿದೆ, ಆದರೆ ಅನ್ನಮಯ ಕೋಶ ಅಥವಾ ಭೌತಿಕ ಜೀವವು ಬರೇ ಸದ್ದುಗದ್ದಲದಿಂದ ಕೂಡಿ ಗೊಂದಲಮಯವಾಗಿದೆ. ನಾವು ಆತ್ಮ ಎಂಬ ಕೇಂದ್ರದಿಂದ ಎಷ್ಟೆಷ್ಟು ದೂರ ಇರುತ್ತೇವೋ ನಮ್ಮ ಬದುಕಿನಲ್ಲಿ ಅಷ್ಟಷ್ಟು ಗದ್ದಲ ಗೊಂದಲಗಳಿರುತ್ತವೆ. ಶಾಂತಿ ಎಂಬುದು ಹೊರಗಿನ ವಸ್ತುಗಳಲ್ಲಿಲ್ಲ, ಮನುಷ್ಯನ ಒಳಗೇ ಇದೆ ಎಂದು ವೇದಾಂತವು ಹೇಳುತ್ತದೆ. ಒಳಶಿಸ್ತಿನ ಮೂಲಕ ಒಳನುಗ್ಗುವ ಶಕ್ತಿಯನ್ನು ಬೆಳೆಸಿಕೊಂಡು ಈ ಶಾಂತಿಯನ್ನು ಕಂಡುಕೊಳ್ಳಬೇಕು. ಪ್ರತಿಯೊಬ್ಬ ಜೀವಿಯಲ್ಲೂ ಅಂತರ್ಯಾಮಿ ದೇವನಿದ್ದಾನೆ. ಜೀವನವು ಒಳಗಿರುವ ನಿತ್ಯಾತ್ಮನೆಂಬ ಬಂಡೆಯ ಮೇಲೆ ನಿಂತಿದೆ ಎಂದಾಗ ಮಾನವ ಜೀವನದ ರಚನೆಯ ಪ್ರಗತಿಪರವಾಗುತ್ತದೆ.

ಪ್ರಜ್ಞೆಯನ್ನು ಕೆಳಸ್ತರದಿಂದ ಮೇಲಿನ ಸ್ತರಕ್ಕೆ ಏರಿಸುವುದು ಮತ್ತು ಅದನ್ನು ಸಾಪೇಕ್ಷತೆಯ

ಅಂತರ್ಜಾಲದಿಂದ ಅಂತಿಮವಾಗಿ ತೆಗೆದುಹಾಕುವುದು ಇವೆರಡೂ ಮನುಷ್ಯ ತನಗೆ ವಿಧಿಸಿಕೊಳ್ಳಬಹುದಾದ ಕಠಿಣ ಕಾರ್ಯಗಳು. ಸಂಸ್ಕಾರ ಅಥವಾ ವಾಸನೆಗಳಿಂದ ಕೂಡಿದ ವ್ಯಕ್ತಿಯ ಆತ್ಮೇತರ ಭಾಗಗಳ ಗುರುತ್ವಾಕರ್ಷಣ ಮತ್ತು ಎಳೆತಗಳು, ಉಪನಿಷತ್ತುಗಳು 'ಧೀರ' ಎಂದು ವರ್ಣಿಸುವ ವ್ಯಕ್ತಿಗಳನ್ನು ಬಿಟ್ಟರೆ ಉಳಿದವರಿಗೆ ಈ ದಾರಿಯನ್ನು ದುರ್ಗಮವನ್ನಾಗಿ ಮಾಡುತ್ತವೆ. ಈ ಪಥದಲ್ಲಿ ಹೆಚ್ಚಿನ ಜನಕ್ಕೆ ಬೇಕಾದದ್ದು ನಿಜವಾದ ಸಹಾಯ ಮತ್ತು ಮಾರ್ಗದರ್ಶನ ಹಾಗೂ ಕೆಲವು ಸರಳ ಮೆಟ್ಟಿಲುಗಳು. ತನ್ನ ಭಕ್ತಿ ಪಥದಿಂದ ಹಾಗೂ ಅನುಷ್ಠಾನ ಪರವಾದ ಆತ್ಮವಿಜ್ಞಾನದಿಂದ ವೇದಾಂತವು ಇವುಗಳನ್ನು ಒದಗಿಸುತ್ತದೆ. ಆತ್ಮಪ್ರಗತಿಯನ್ನು ಸರ್ವಕಾಲೀನ ಗುರಿಯಾಗಿ ಇಟ್ಟುಕೊಂಡರೆ ವ್ರತಗಳಿಗೆ ಹಾಗೂ ಇತರ ಧಾರ್ಮಿಕ ಆಚರಣೆಗಳಿಗೆ ನ್ಯಾಯಬದ್ಧವಾದ ಅವಕಾಶವಿದೆ. ಪ್ರಜ್ಞೆಯನ್ನು ಅತ್ಯುನ್ನತ ನೆಲೆಯ ಶುದ್ಧತೆಗೆ, ದೀಪ್ತಿಗೆ ಮತ್ತು ಸಾರ್ವತ್ರಿಕತೆಗೆ ಏರಿಸಿ ಹದಗೊಳಿಸುವ ಈ ಮಹಾಸಾಹಸವನ್ನು ಆರಂಭಿಸುವಂತೆ ಕಠೋಪನಿಷತ್ತು ಸಮಸ್ತ ಮನುಕುಲಕ್ಕೆ ಕರೆ ನೀಡಿದೆ. (೧೧೧,೧೪)

ಉತ್ತಿಷ್ಠತ ಜಾಗ್ರತ, ಪ್ರಾಪ್ಯ ವರಾನ್ನಿಬೋಧತ
ಕ್ಷುರಸ್ಯಧಾರಾ ನಿಶಿತಾ ದುರತ್ಯಯಾ
ದುರ್ಗಂ ಪಥಸ್ತತ್ಕವಯೋ ವದಂತಿ—

*ಏಳಿ ! ಎಚ್ಚರಗೊಳ್ಳಿ ! ಮಹಾಗುರುಗಳನ್ನಾಶ್ರಯಿಸಿ ಬೋಧೆ ಪಡೆಯಿರಿ. ಆ ಪಥವು ಕತ್ತಿಯ ಅಲಗಿನ ಧಾರೆಯಂತೆ ನಡೆಯಲು ದುರ್ಗಮವಾದದ್ದು ಹಾಗೂ ದಾಟಲು ಕಠಿಣವಾದದ್ದು ಎಂದು ಯೋಗಿಗಳು ಹೇಳುತ್ತಾರೆ.*

ಈ ವೇದಾಂತ ತತ್ತ್ವದಲ್ಲಿ ಅಡಗಿರುವ ವಿಚಾರವೆಂದರೆ ಶೃಂಗವನ್ನು ತಲುಪಲು ಇಷ್ಟಪಡುವವರೆಲ್ಲರ ಆಸೆಯನ್ನು ಸಫಲಗೊಳಿಸುವುದು. ಆ ಸಫಲತೆ ವ್ಯಕ್ತಿಯ ಅಂತರಂಗದಲ್ಲೇ ಇದ್ದು ಪ್ರತಿ ಜೀವಿಯ ಒಳಗೇ ರೂಪುಗೊಂಡಿರುತ್ತದೆ. ಈ ಅಂತರ್ಜಾತ ದಿವ್ಯತೆ ಎಂಬ, ಪರಭಾರೆ ಮಾಡಲಾಗದ, ತನ್ನ ಪರಂಪರೆಯ ಅರಿವನ್ನು ಉಳಿಸಿಕೊಳ್ಳುವುದು ಅಗತ್ಯವಾಗಿದೆ. ಹೀಗೆ ಎಚ್ಚೆತ್ತುಕೊಂಡಾಗ ಪ್ರತಿಯೊಬ್ಬರೂ ತಮಗೆ ಚೆನ್ನಾಗಿ ಸರಿಹೊಂದುವ ದಾರಿಯನ್ನು ಅನುಸರಿಸಬಹುದು. ಭಿನ್ನ ಮನಸ್ಸು ಲಹರಿಗಳ, ಭಿನ್ನ ಗುಣಸಾಮರ್ಥ್ಯಗಳ ಜನರಿಗೆ ಹೊಂದುವಂಥ ದಾರಿಯನ್ನು ವೇದಾಂತವು ತೋರಿಸಿಕೊಡುತ್ತದೆ.

## ೧೪. ಪ್ರಾಣಿ ಸ್ಥಿತಿಯಿಂದ ಸ್ವಾತಂತ್ರ್ಯದೆಡೆಗೆ

ಎಲ್ಲ ಜೀವಗಳಲ್ಲಿ ಮನುಷ್ಯನಿಗೆ ಮಾತ್ರ ತನ್ನ ಉದಿತೋದಿತ ಮಿದುಳಿನ ವ್ಯವಸ್ಥೆಯ ಮೂಲಕ ಪ್ರಜ್ಞೆಯನ್ನು ಶಾರೀರಿಕ ವ್ಯವಸ್ಥೆಯಿಂದ ಬೇರ್ಪಡಿಸುವ, ಮತ್ತು ಹಸನುಗೊಳಿಸಿ ಊರ್ಧ್ವೋರ್ಧ್ವ ನೆಲೆಗಳಿಗೆ ಏರಿಸುವ ಸ್ವಾತಂತ್ರ್ಯವನ್ನು ಪ್ರಕೃತಿಯು ದಯಪಾಲಿಸಿದೆ. ಮಾನವನ ಹಂತದಲ್ಲಿ ವಿಕಾಸವು ವಹಿಸಿರುವ ಪಾತ್ರ ಇದು. ವಿಶ್ವದ ಒಂದು ಬಾಹ್ಯ ತಾತ್ಕಾಲಿಕ ವ್ಯವಸ್ಥೆಗೆ ದೈಹಿಕವಾಗಿ ಸೇರಿದ್ದೇನೆಂಬ ಭಾವವನ್ನು ಮನುಷ್ಯನು ಉದ್ದಕ್ಕೂ ಹೇಗೆ ಅನುಭವಿಸಿಕೊಂಡು ಬಂದಿದ್ದಾನೆಯೋ ಹಾಗೆಯೇ ವಿಶ್ವದ ಅಂತರಂಗದ ಒಂದು ಶಾಶ್ವತ ವ್ಯವಸ್ಥೆಯ ಕಕ್ಷೆಯಲ್ಲಿ ಸೇರಿಕೊಂಡಿದ್ದೇನೆಂಬ ಭಾವದ ಅನುಭವ ಮನುಷ್ಯನಿಗಾಗುತ್ತದೆ. ತನ್ನ ಶಾರೀರಿಕ ವ್ಯವಸ್ಥೆಯ ಕೆಳಗಿನ ಸ್ಥಿತಿಯಿಂದ ಮೇಲೇರಿ ಅದರ ಮಾರ್ಗದರ್ಶಿ ಹಾಗೂ ಒಡೆಯನಾಗುವ ಮತ್ತು ಶೀಲಶುದ್ಧಿಯನ್ನು ಉಪಾಂಗವಾಗಿ ಇಟ್ಟುಕೊಂಡು ವಿಶ್ವಾತ್ಮಕತೆ ಮತ್ತು ಅಧ್ಯಾತ್ಮಿಕ ಪಕ್ವತೆಗಳ ವಿಷಯದಲ್ಲಿ ಬದುಕಿನ ಮುಕ್ತ ಪ್ರತಿನಿಧಿಯಾಗುವ ಅವನ ಜ್ಞಾನ ಮತ್ತು ವಿವೇಕಗಳ ಪ್ರಗತಿಯನ್ನು ಇದು ಸೂಚಿಸುತ್ತದೆ.

ಜೈವಿಕ ಪ್ರವೃತ್ತಿಗಳ ತೃಪ್ತಿ ಮತ್ತು ಜೈವಿಕ ಉಳಿಕೆಗಳ ಶೋಧನೆಯಲ್ಲಿ ಸಹಜ ಮನುಷ್ಯನ ಪ್ರಜ್ಞೆ ಹೊರಮುಖೀ ವಿನ್ಯಾಸದಲ್ಲಿರುತ್ತದೆ. ನಿಸರ್ಗದತ್ತವಾದ ತನ್ನ ಶಕ್ತಿಗಳನ್ನು ಬಳಸಿಕೊಂಡು ಮನುಷ್ಯನು ಆ ಸಹಜ ಮಾನವ ಪ್ರವೃತ್ತಿ ಹಾಗೂ ಜಂತುತನದಿಂದ ಪಾರಾಗಬಹುದು. ಹಾಗೆ ಪಾರಾಗಿ, ಗೀತೆಯ ಶ್ಲೋಕಗಳಲ್ಲಿ ಹಿಂದೆಯೇ ಹೇಳಿರುವ 'ಪರಾ ಪ್ರಕೃತಿ' ಅಂದರೆ ತನ್ನದೇ ಆದ ಉನ್ನತ ನೆಲೆಯನ್ನು ಅರಳಿಸಿಕೊಂಡು ಮುಕ್ತಿ, ತೃಪ್ತಿ ಮತ್ತು ಶಾಂತಿಗಳನ್ನು ಪಡೆದುಕೊಳ್ಳಬಹುದು. ಅವನವನ ನಂಬಿಕೆ ಶಕ್ತಿಗಳಿಗೆ ಅನುಗುಣವಾಗಿ ವ್ಯಕ್ತಿಯು ನೇರವಾಗಿಯೊ ಎಡವುತ್ತಲೊ ವಿಕಾಸದ ಪಥದಲ್ಲಿ ಮುಂದುವರಿಯುತ್ತ, ಜಂತು ಸ್ಥಿತಿಯಿಂದ ಮುಕ್ತಿಯ ಕಡೆ ಸಾಗುತ್ತಾನೆ ಮತ್ತು ಕೀಳುತನದಿಂದ ಪೂರ್ಣತೆಯ ಕಡೆಸಾಗುತ್ತಾನೆ.

ಹಿಂದೆ ಉಲ್ಲೇಖಿಸಿದ ಗ್ರೇ ವಾಲ್ಟರ್ ತನ್ನ ಗ್ರಂಥದಲ್ಲಿ ಹೇಳುತ್ತಾನೆ (ಅದೇ ಪುಟಗಳು ೧೮-೧೯) :

*ಸಸ್ತನಿ ಜೀವಿಗಳಿಗೆಲ್ಲ ಸಂತುಲನವೇ ಉಳಿಯುವಿಕೆಯಾಗಿತ್ತು. ಮನುಷ್ಯನಿಗೆ ಮಾತ್ರ ಮುಕ್ತಿ.*

*ಸಂತುಲನದ ಅನುಭವ, ಅದು ಮಿದುಳಿಗೆ ತರುವ ಪರಿಶುದ್ಧ ಯಾಂತ್ರಿಕ ಶಾಂತಿ ಇವು, ಮೂರು ಸಾವಿರ ವರ್ಷಗಳಿಂದ ಬೇರೆ ಬೇರೆ ಹೆಸರುಗಳಲ್ಲಿ ಪ್ರಸ್ತಾವಿತವಾಗಿವೆ. ಎಲ್ಲ ಪರಿಷ್ಕಾರಪ್ರಿಯ ಧರ್ಮಗಳ ಶಾರೀರಿಕ ಅಂಶ ಇದೇ ಆಗಿದೆ — ನಿರ್ವಾಣ ಇದು ಯೋಗಿಯ ಗೀಳು, ಅರಿವನ್ನು ಮೀರಿದ ಶಾಂತಿ, ಜನ ಲೇವಡಿ ಮಾಡುವ 'ಅಂತರಂಗದಲ್ಲಿ ಸುಪ್ತವಾಗಿರುವ ತೃಪ್ತಿ. ಇಲ್ಲಿ ಅವ್ಯವಸ್ಥೆ ಮತ್ತು ರೋಗಗಳು ಯಾಂತ್ರಿಕ ದೋಷಗಳು.*

ಆತ್ಮದ ಶುದ್ಧ ಮತ್ತು ಅದ್ವೈತ ಪ್ರಜ್ಞೆಯನ್ನು ಬೃಹದಾರಣ್ಯಕ ಉಪನಿಷತ್ತು ಹೀಗೆ ವಿವರಿಸುತ್ತದೆ (III. ೭.೨೩)

ಅದೃಷ್ಟೋ ದ್ರಷ್ಟಾ ಅಶ್ರುತೋ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ ; ನಾನ್ಯೋ ಅತೋಽಸ್ತಿ ದ್ರಷ್ಟಾ, ನಾನ್ಯೋ ಅತೋಽಸ್ತಿ ಶ್ರೋತಾ, ನಾನ್ಯೋ ಅತೋಽಸ್ತಿ ಮಂತಾ, ನಾನ್ಯೋ ಅತೋಽಸ್ತಿ ವಿಜ್ಞಾತಾ ; ಏಷ ತೇ ಆತ್ಮಾ ಅಂತರ್ಯಾಮಿ ಅಮೃತಃ ಅತೋ ಅನ್ಯದಾರ್ತಂ—

*ಅವನು (ಆತ್ಮನು) ಎಂದಿಗೂ ಕಾಣುವುದಿಲ್ಲ ಆದರೆ ಅವನೇ 'ಶ್ರೋತಾ', ಅವನು 'ಅಮತ' ಆದರೆ 'ಮಂತಾ' (ಚಿಂತಿಸುವವನು) ; ಅವನು ಅವಿಜ್ಞಾತ ಆದರೆ ವಿಜ್ಞಾತಾ (ತಿಳಿಯುವವನು) ; ಅವನನ್ನು ಬಿಟ್ಟು ಬೇರೆ ಯಾರೂ ದ್ರಷ್ಟರಿಲ್ಲ, ಅವನನ್ನು ಬಿಟ್ಟು ಬೇರೆ ಯಾರೂ ಶ್ರೋತರಿಲ್ಲ, ಅವನನ್ನು ಬಿಟ್ಟು ಬೇರೆ ಯಾರೂ 'ಮಂತ 'ರಿಲ್ಲ, ಅವನನ್ನು ಬಿಟ್ಟು ಬೇರೆ ಯಾರೂ ತಿಳಿಯುವವರಿಲ್ಲ ಅವನು ಅಂತರ್ಯಾಮಿ ನಿಮ್ಮ ಅಮೃತಾತ್ಮ, ಅವನನ್ನು ಬಿಟ್ಟು ಬೇರೆಲ್ಲ ಮರ್ತ್ಯರೇ.*

ನಿರ್ವಿಕಲ್ಪ, ನಿತ್ಯ ಪ್ರಜ್ಞೆಯಾಗಿರುವ ಆತ್ಮನನ್ನು ಉಪನಿಷತ್ತುಗಳು 'ಸಾಕ್ಷಿ' ಎಂದು—ಅಂದರೆ ಪರಿವರ್ತನ ಶೀಲ ವ್ಯಕ್ತಿ ವಸ್ತುಗಳ, ಜಾಗರ, ಸ್ವಪ್ನ, ಸುಷುಪ್ತಿ ಸ್ಥಿತಿಗಳ ಸಾಕ್ಷಿ ಎಂದು—ವರ್ಣಿಸುತ್ತವೆ. ಉಪನಿಷತ್ತುಗಳು ಆತ್ಮನ ಪರಿಶುದ್ಧತೆ, ನಿರ್ವಿಕಲ್ಪತೆ ಮತ್ತು ಅದ್ವಯತ್ವಗಳನ್ನು ಸಾಧಿಸುತ್ತವೆ. ಜಾಗರ ಸ್ವಪ್ನ ಸುಷುಪ್ತಿಗಳ ಕೂಲಂಕಶ ಶೋಧನೆ ಮಾಡಿ ಆತ್ಮನ ಸ್ವರೂಪವನ್ನು 'ಜ್ಯೋತಿಷಾಂ ಜ್ಯೋತಿಃ' ಎಂದು ಸಾಧಿಸುತ್ತವೆ. ಬೃಹದಾರಣ್ಯಕ ಮತ್ತು ಛಾಂದೋಗ್ಯ ಉಪನಿಷತ್ತುಗಳಲ್ಲಿ ಈ ಆತ್ಮನ ವಿಷಯವು ಮಹತ್ತ್ವದ ಪರಿಶೀಲನೆಗೆ ಒಳಗಾಗಿದೆ. ಇದನ್ನೇ ಪ್ರಧಾನ ವಿಷಯವಾಗಿ ಇಟ್ಟುಕೊಂಡಿರುವ ಉಪನಿಷತ್ತೊಂದಿದೆ. ಅದೇ ಕೇವಲ ೧೨ ಪದ್ಯಗಳುಳ್ಳ ಚಿಕ್ಕದಾದ ಮಾಂಡೂಕ್ಯ ಉಪನಿಷತ್. ಇದರ ಚಿಕ್ಕದಾದ ಆದರೆ ಅರ್ಥಗರ್ಭಿತವಾದ ಹೇಳಿಕೆಗಳನ್ನು ಕ್ರಿ.ಶ. ಏಳನೆಯ

ಶತಮಾನದ ತತ್ತ್ವಜ್ಞಾನಿ ಗೌಡಪಾದರು ತಮ್ಮ 'ಮಾಂಡೂಕ್ಯಕಾರಿಕಾ'ಎಂಬ ಗ್ರಂಥದಲ್ಲಿಯೂ ಕ್ರಿ.ಶ. ಎಂಟನೆಯ ಶತಮಾನದಲ್ಲಿ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿಯೂ, ಚೆನ್ನಾಗಿ ವಿಶದ ಪಡಿಸಿ ವಿಸ್ತರಿಸಿದ್ದಾರೆ. ಈ ಶೋಧನೆಯಿಂದ ವ್ಯಕ್ತವಾಗಿರುವ, ಶುದ್ಧ, ಅದ್ವೈತ ಪ್ರಜ್ಞೆಯಾದ ಆತ್ಮನ ಸ್ವರೂಪವನ್ನು ಮಾಂಡೂಕ್ಯ ಉಪನಿಷತ್ತಿನ, ಬೆಳಕು ಸೂಸುವ ಏಳನೆಯ ಪದ್ಯದಲ್ಲಿ ವಿವರಿಸಲಾಗಿದೆ.

ನಾಂತಃ ಪ್ರಜ್ಞಾ, ನ ಬಹಿಃ ಪ್ರಜ್ಞಾಂ, ನೋಭಯತಃ ಪ್ರಜ್ಞಾಂ, ನ ಪ್ರಜ್ಞಾನ ಘನಂ, ನ ಪ್ರಜ್ಞಾಂ, ನಾ ಪ್ರಜ್ಞಾಂ, ಅದೃಶ್ಯಂ,ಅವ್ಯವಹಾರ್ಯಂ, ಅಗ್ರಾಹ್ಯಂ. ಅಲಕ್ಷಣಂ, ಅಚಿಂತ್ಯಂ,ಅವ್ಯಪದೇಶ್ಯಂ, ಏಕಾತ್ಮಪ್ರತ್ಯಯ ಸಾರಂ, ಪ್ರಪಂಚೋಪಶಮಂ, ಶಾಂತಂ, ಶಿವಂ, ಅದ್ವೈತಂ, ಚತುರ್ಥಂ, ಮನ್ಯಂತೇ, ಸಾ ಆತ್ಮಾ, ಸ ವಿಜ್ಞೇಯ—

*(ಆತ್ಮನು)ಅಂತಃ ಪ್ರಜ್ಞನಲ್ಲ, (ಅವನು ಸ್ವಪ್ನಸ್ಥಿತಿಯ ವಿಶಿಷ್ಟಾತ್ಮನಲ್ಲ) ; ಬಹಿಃ ಪ್ರಜ್ಞನಲ್ಲ (ಆತ್ಮನು ಜಾಗರಸ್ಥಿತಿಯಲ್ಲಿ ವಿಶಿಷ್ಟವಾಗಿ ಪ್ರಜ್ಞಾವಂತನಾಗಿರುವುದಿಲ್ಲ) : ಅಥವಾ ಎರಡೂ ಸ್ಥಿತಿಗಳ ಪ್ರಜ್ಞೆ ಆತ್ಮನಿಗಿರುವುದಿಲ್ಲ. ಆವನು ಪ್ರಜ್ಞಾನ ಘನನಲ್ಲ (ಪ್ರಜ್ಞೆಯ ಮುದ್ದೆಯಲ್ಲ) ಆತ್ಮನು ಪ್ರಜ್ಞೆಯೂ ಅಲ್ಲ ಅಪ್ರಜ್ಞೆಯೂ ಅಲ್ಲ, ಆತ್ಮನು ಮರ್ತ್ಯಚಕ್ಷುಗಳಿಗೆ ಕಾಣುವವನಲ್ಲ, ಎಲ್ಲ ವ್ಯವಹಾರದ ನೆಲೆಗಳಿಂದ ದೂರವಿದ್ದಾನೆ, ಇಂದ್ರಿಯಬದ್ಧ ಮನಸ್ಸಿಗೆ ಆತ್ಮನು ಅಗ್ರಾಹ್ಯ. ಅವನಲ್ಲಿ ವಿಶಿಷ್ಟವೆಂದು ಗುರುತಿಸಬಹುದಾದ ಯಾವ ಚಹರೆಗಳೂ ಇಲ್ಲ. ಆತ ಅಚಿಂತ್ಯ, ಅವ್ಯಪದೇಶ್ಯ (ಅವರ್ಣನೀಯ)ಆತನು ಏಕಾತ್ಮ ಪ್ರತ್ಯಯಸಾರ(ಆತ್ಮನು ಏಕತೆಯ ಪ್ರಜ್ಞೆಯ ಸಾರವಾಗಿದ್ದಾನೆ), ಆತನು ಪ್ರಪಂಚೋಪಶಮ (ಬದಲಾಗುವ ವಿಶ್ವದ ನಿಲುಗಡೆ) ; ಶಾಂತ, ಮಂಗಳಕರ, ಅದ್ವೈತ, ಜಾಗರ, ಸ್ವಪ್ನ ಸುಷುಪ್ತಿ ಸ್ಥಿತಿಗಳಾದ ಮೇಲೆ ಬರುವ) ತುರೀಯ (=ನಾಲ್ಕನೆಯ). ಇದು ಆತ್ಮ. ಇದೇ ತಿಳಿದುಕೊಳ್ಳಬೇಕಾದದ್ದು.*

ಈ ಶ್ಲೋಕವನ್ನು ಉದ್ಧರಿಸಿ ಶಂಕರಾಚಾರ್ಯರು ವ್ಯಾಖ್ಯಾನ ಮಾಡುತ್ತಾರೆ :

ಸರ್ವಶಬ್ದ-ಪ್ರವೃತ್ತಿ-ನಿಮಿತ್ತ-ಶೂನ್ಯತ್ವಾತ್ ತಸ್ಯ ಶಬ್ದಾನಭಿಧೇಯತ್ವಂ ಇತಿ, ವಿಶೇಷ ಪ್ರತಿಷೇಧೇನೈವ ತುರೀಯಂ ನಿರ್ದಿದಿಕ್ಷತಿ

*ತುರೀಯ ಅಥವಾ ಆತ್ಮವು ಮಾತಿನ ಎಲ್ಲ ಪ್ರವೃತ್ತಿಗಳಿಂದ ಆಚೆ ಇರುವುದರಿಂದ ಅದನ್ನು ಯಾವುದೇ ಶಬ್ದದ ವ್ಯಾಪ್ತಿಗೆ ತರಲಾಗುವುದಿಲ್ಲ. ಉಪನಿಷತ್ತು ಅದು ಎಲ್ಲ ಉಪಾಧಿಗಳನ್ನು ನಿಷೇಧಿಸಿ ವಿವರಿಸುವ ಆಶಯವನ್ನು ಹೊಂದಿದೆ.*

## ೧೫. ಆತ್ಮ–ಬ್ರಹ್ಮ : ಎರಡೂ ಸಂಯುಕ್ತಾನುಭವದ ಕ್ಷೇತ್ರವಾಗಿ

ವಿವೇಚನಾ ಪೂರ್ಣವಾದ ಬುದ್ಧಿಗೆ ತನ್ನನ್ನು ತೋರಿಕೊಳ್ಳುವ ಸತ್ಯವೇ ಇದು —ಬದಲಾಗುವ ಎಲ್ಲ ವಿಷಯ ವಿಷಯಿಗಳ ನಡುವೆ ಬದಲಾಗದೆ ಉಳಿಯುವ ಸಾಕ್ಷಿ. 'ಅಹಂ'ನಂತೆ ಅದು ಯಾವುದೇ ಒಂದು ವಿಶಿಷ್ಟ ಸ್ಥಿತಿಗೆ ಮಿತಿಗೊಂಡಿಲ್ಲವಾದುದರಿಂದ ಅದು ಅನಂತ. ಈ ಸತ್ಯ ತಿಳಿದಮೇಲೆ ಒಬ್ಬನು ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಲಿ ಸಮರ್ಥಿಸಿಕೊಳ್ಳುವುದಕ್ಕಾಗಲಿ ಬಯಸುವುದಿಲ್ಲ. ಏಕೆಂದರೆ ನಿರ್ಭಯತ್ವದ ಸ್ಥಿತಿ ಅದ್ವೈತದ ಸ್ಥಿತಿಗಳನ್ನು ಅವನು ಸಾಧಿಸಿರುತ್ತಾನೆ. ದ್ವೇಷ, ಆಕ್ರಮಣ, ಆತ್ಮರಕ್ಷಣೆ, ಆತ್ಮ ಸಮರ್ಥನೆ ಮತ್ತು ಗೋಪ್ಯಪ್ರವೃತ್ತಿಗಳೆಲ್ಲ ನಿಜವಾಗಿ ಭಯದಿಂದ, ಪರಿಸರಕ್ಕೆ ಸಂಬಂಧಿಸಿದಂತೆ ಕೊರತೆಗಳ ಭಾವದಿಂದ ಹುಟ್ಟುತ್ತವೆ. ಆತ್ಮಸಾಕ್ಷಾತ್ಕಾರ ಎಂದರೆ ತನ್ನ ಅನಂತ ಆಯಾಮಗಳನ್ನರಿತುಕೊಳ್ಳುವಿಕೆ ಮತ್ತು ಎಲ್ಲರೊಂದಿಗೆ ಏಕಾತ್ಮತೆಯನ್ನು ಸೂಚಿಸುವಿಕೆ. ಅದರ ಫಲ ಅನಂತ ಪ್ರೇಮ ಮತ್ತು ಅನಂತ ಶಕ್ತಿ. ವೇದಾಂತವು ಆತ್ಮ-ಬ್ರಹ್ಮಗಳನ್ನು ಸಂಯುಕ್ತಾನುಭವದ ಕ್ಷೇತ್ರವಾಗಿ ಮುಂದಿಡುತ್ತದೆ. ಹಾಗಾಗಿ ಎಲ್ಲ ಜೀವಿಗಳ ಒಳಗೆ ಮತ್ತು ಎಲ್ಲ ಜೀವಿಗಳ ಹೊರಗೆ ಎಂದು ವರ್ಣಿಸುತ್ತದೆ. ಆದ್ದರಿಂದ ಆತನೇ ಎಲ್ಲ. ಶ್ರೀಮದ್ ಭಾಗವತವು ಒಂದು

ಪ್ರಸಿದ್ಧ ಶ್ಲೋಕದಲ್ಲಿ ಹೇಳುವಂತೆ (VIII, ೩, ೩) :

ಯಸ್ಮಿನ್ನಿದಂ ಯತಶ್ಚೇದಂ
ಯೇನೇದಂ ಯ ಇದಂ ಸ್ವಯಂ ;
ಯೋಽಸ್ಮಾತ್ ಪರಸ್ಮಾತ್ ಚ ಪರಃ
ತಂ ಪ್ರಪದ್ಯೇ ಸ್ವಯಂಭುವಂ.

*ಯಾವನಲ್ಲಿ ಪ್ರಪಂಚವೇ ಇದೆಯೋ, ಯಾರಿಗಾಗಿ ಇದೆಯೋ, ಯಾರಿಂದ ಇದೆಯೋ, ಯಾವನು ತಾನೇ ಈ ಜಗತ್ತು ಆಗಿದ್ದಾನೆಯೋ ಯಾವನು ಈ ಪ್ರಪಂಚಕ್ಕೆ ಅತೀತನಾಗಿ ಇದ್ದಾನೋ ಇದಕ್ಕೂ ಅದಕ್ಕೂ ಆಚೆ ಇದ್ದಾನೋ ಆ ಸ್ವಂಯಭೂವಿನ ಮೊರೆ ಹೊಗುತ್ತೇನೆ.*

ವೇದಾಂತ ಮತ್ತು ಆಧುನಿಕ ಭೌತವಿಜ್ಞಾನವು ಎತ್ತಿಹಿಡಿಯುವಂತೆ ಇಡೀ ವಿಶ್ವವು ಒಂದು ಸ್ವಯಂಭುತನದ ಫಲ ಎನ್ನುವುದಾದರೆ ಆ 'ಕಾರಣ'ವು ತನ್ನ ಎಲ್ಲ ವಿಕಾಸದ ಉತ್ಪಾದನೆಗಳಲ್ಲೂ ಇರಬೇಕು. ಏಕೆಂದರೆ ಅದನ್ನುಳಿದು ಅವುಗಳಿಗೆ ಬೇರೆ 'ಸತ್ಯ' ಇಲ್ಲ. ಆ 'ಕಾರಣ'ವನ್ನು ವೇದಾಂತ ದಲ್ಲಿರುವಂತೆ ಬ್ರಹ್ಮನ್—ಆತ್ಮನ್ ಎಂಬ ಚೇತನ ತತ್ತ್ವವೆಂದಾದರೂ ಹೇಳಬಹುದು ಅಥವಾ ಆಧುನಿಕ ವಿಜ್ಞಾನದಲ್ಲಿ ಇರುವಂತೆ ಅಚೇತನ ದ್ರವ್ಯವೆಂದಾದರೂ ಕರೆಯಬಹುದು . ಆ ಒಂದು ಕಾರಣವು ಅನುಭವದ ಎಲ್ಲ ವಿಷಯಗಳನ್ನು ಮಾತ್ರವಲ್ಲದೆ ಅನುಭವದ ವಿಷಯಿಗಳನ್ನೂ ಮತ್ತು ಬರೇ ಅನುಭವಗಳನ್ನೂ ವಿವರಿಸಬೇಕು. ಸೌರವ್ಯೂಹ ಎಂಬುದು ಸೂರ್ಯನ ಉತ್ಪನ್ನವಾದುದ ರಿಂದ ನಾವು ತಿನ್ನುವ ಆಹಾರ, ಅದನ್ನು ಅರಗಿಸುವ ಜೀವದ್ರವ್ಯ ನಾವು ಉರಿಸುವ ಇದ್ದಿಲು ಮತ್ತು ನಾವು ಧರಿಸುವ ವಸ್ತ್ರಗಳು—ಇವೆಲ್ಲ ವಿವಿಧ ರೂಪಗಳಲ್ಲಿ ಅಭಿವ್ಯಕ್ತಗೊಳ್ಳುವ ಸೌರ ಶಕ್ತಿಯೇ ಆಗಿವೆ.

ಐನ್‌ಸ್ಟೈನ್ ಹೇಳುವಂತೆ (ಎಂ. ಕೇಪೆಕ್ The Philosophical Impact of Contemporary Physics, ಪು. ೩೧೯—ಈ ಗ್ರಂಥದಲ್ಲಿ ಉದ್ಧೃತ) :

*ಈ ಹೊಸ ಬಗೆಯ ಭೌತಶಾಸ್ತ್ರದಲ್ಲಿ ಕ್ಷೇತ್ರ ಮತ್ತು ಜಡವಸ್ತುಗಳೆರಡಕ್ಕೂ ಜಾಗವಿಲ್ಲ— ಏಕೆಂದರೆ ಕ್ಷೇತ್ರವೊಂದೇ ಸತ್ಯ.*

ಎಲ್ಲ 'ವಿಕಾಸ'ಗಳ ಪೂರ್ವ ನಿರ್ಣಯವನ್ನು ವೇದಾಂತವು ಎತ್ತಿ ಹಿಡಿಯುತ್ತದೆ. ಜಿವಕೋಶಸ್ಥಿತಿ ಯಿಂದ ವಿಕಾಸವು ಮುಂದುವರಿದು ಮುಂದೆ ಪ್ರಜ್ಞೆಯು ಅಭಿವ್ಯಕ್ತವಾಗುವುದಾದರೆ ಅದು ವಿಶ್ವದ ಮೂಲಭೂತ ದ್ರವ್ಯದಲ್ಲಿಯೂ ಇದ್ದಿರಲೇಬೇಕು ಅಲ್ಲವೆ ? "ಮನುಷ್ಯನು ಈ ವಿಶ್ವದ ಬಗೆಗೆ ತಳೆದಿರುವ ಅತ್ಯಂತ ವಿಕಸಿತವಾದ ತಿಳಿವಳಿಕೆ ಯಾವುದು ?" ಎಂದು ಪ್ರಶ್ನಿಸುವ ಸ್ವಾಮಿ ವಿವೇಕಾನಂದರು ಅದಕ್ಕೆ ಉತ್ತರವನ್ನು ಹೇಳಲು ಉಪಕ್ರಮಿಸುತ್ತಾರೆ (ವಿವೇಕಾನಂದರ ಕೃತಿಶ್ರೇಣಿ ಸಂ. II, ಪು. ೧೩೮)

*ಅದೇ ಚಿತ್ತು. ಒಂದು ಭಾಗವು ಮತ್ತೊಂದಕ್ಕೆ ಹೊಂದಿಕೊಂಡು ಹೋಗುವಂತೆ ಮಾಡುವುದೇ ಚಿತ್ತಿನ ಕ್ರಿಯೆ. ಪುರಾತನ ಸೃಷ್ಟಿರಚನಾ ಸಿದ್ಧಾಂತವು ಇದನ್ನು ವ್ಯಕ್ತಗೊಳಿಸಲು ಮಾಡಿದ ಒಂದು ಪ್ರಯತ್ನವಾಗಿತ್ತು. ಆದಕಾರಣ ಚಿತ್ತೇ ಮೂಲ. ಆದಿಯಲ್ಲಿ ಅದು ಅವಿಕಸಿತವಾಗಿತ್ತು, ಕೊನೆಗೆ ಅದು ವಿಕಾಸವಾಯಿತು. ವಿಶ್ವದಲ್ಲಿ ವ್ಯಕ್ತವಾಗಿರುವ ಚಿತ್ತಿನ ಮೊತ್ತ ಈಗ ವಿಕಾಸವಾಗುತ್ತಿರುವ ಅವಿಕಸಿತವಾಗಿದ್ದ ವಿಶ್ವಚಿತ್ ಆಗಿರಬೇಕು. ಈ ವಿಶ್ವಚಿತ್ತನ್ನೇ ನಾವು ದೇವರೆಂದು ಕರೆಯುವುದು. ನೀವು ಅದನ್ನು ಯಾವ ಹೆಸರಿನಿಂದ ಕರೆದರೂ ಆದಿಯಲ್ಲಿ ಆ ಅನಂತ ವಿಶ್ವ ಚೈತನ್ಯವಿತ್ತು ಎಂಬುದು ನಿರ್ವಿವಾದವಾದುದು. ಆ ವಿಶ್ವಚಿತ್ ವ್ಯಕ್ತವಾಗಿ ಕ್ರಿಸ್ತನಂತೆ, ಬುದ್ಧನಂತೆ ಆಗುವ*

ವರೆಗೂ ವಿಕಾಸವಾಗುತ್ತಿರುವುದು. ಅನಂತರ ಅದು ತನ್ನ ಮೂಲಕ್ಕೆ ತೆರಳುವುದು. ಆದ ಕಾರಣವೇ ಎಲ್ಲ ಶಾಸ್ತ್ರಗಳೂ "ನಾವು ಅವನಲ್ಲಿ ಬಾಳಿ ಬದುಕುತ್ತೇವೆ "ಎನ್ನುವುವು. ಎಲ್ಲ ಧರ್ಮ ಗ್ರಂಥಗಳೂ "ನಾವು ದೇವರಿಂದ ಬಂದೆವು, ದೇವರಡೆಗೆ ಹೋಗುವೆವು" ಎನ್ನುವುವು. ಇಂತಹ ದೇವತಾಶಾಸ್ತ್ರದ ಪದಗಳಿಗೆ ನೀವು ಅಂಜಬೇಕಾಗಿಲ್ಲ. ಪದಗಳು ನಿಮ್ಮನ್ನು ಅಂಜಿಸಿದರೆ ನೀವು ತತ್ತ್ವಜ್ಞರಾಗಲು ಯೋಗ್ಯರಲ್ಲ. ಈ ವಿಶ್ವಚಿತ್ತನ್ನೆ ಧರ್ಮಾನುಯಾಯಿಗಳು 'ದೇವರು' ಎನ್ನುವರು.

ದೇವರು ಎಂಬ ತಮ್ಮ ಶಬ್ದದ ಬಳಕೆಯನ್ನು ಸ್ಪಷ್ಟಪಡಿಸುತ್ತ ಅವರು ಮುಂದುವರಿಯುತ್ತಾರೆ (ಅದೇ ಪುಟ ೧೩೮—೩೯) :

*ದೇವರು ಎಂಬ ಹಳೆಯ ಪದವನ್ನೇಕೆ ಉಪಯೋಗಿಸುತ್ತೀರಿ ?' ಎಂದು ಅನೇಕ ವೇಳೆ ನನ್ನನ್ನು ಕೇಳಿರುವರು. ಏಕೆಂದರೆ ಇದು ನಮ್ಮ ಕೆಲಸಕ್ಕೆ ಒದಗುವ ಅತಿ ಶ್ರೇಷ್ಠ ಪದ. ಇದಕ್ಕಿಂತ ಉತ್ತಮ ಪದ ನಿಮಗೆ ದೊರಕಲಾರದು. ಮಾನವ ಕೋಟಿಯ ಆಕಾಂಕ್ಷೆ, ಭರವಸೆ, ಸಂತೋಷ —ಇವುಗಳೆಲ್ಲ ಆ ಒಂದು ಪದದಲ್ಲಿ ನೆಲಸಿವೆ. ಈಗ ಬದಲಾಯಿಸುವುದಕ್ಕೆ ಸಾಧ್ಯವೇ ಇಲ್ಲ. ಇಂತಹ ಪದಗಳ ಅರ್ಥ ತಿಳಿದುಕೊಂಡು ಸಾಕ್ಷಾತ್ಕಾರ ಮಾಡಿಕೊಂಡವರು ಈ ಪದಗಳನ್ನು ಮೊದಲು ಸೃಷ್ಟಿಸಿದರು. ಆದರೆ ಈ ಪದಗಳು ಸಮಾಜದಲ್ಲಿ ಪ್ರಚಾರವಾದಮೇಲೆ, ಅಜ್ಞಾನಿಗಳು ಈ ಪದಗಳನ್ನು ಬಳಸಿದರು. ಇದರ ಪರಿಣಾಮವಾಗಿಯೇ ಇವುಗಳ ಅಂತರಾರ್ಥ ಮತ್ತು ಮಹಿಮೆ ನಷ್ಟವಾದುವು. ಅನಾದಿಕಾಲದಿಂದಲೂ 'ದೇವರು' ಎಂಬ ಪದವನ್ನು ಬಳಸುತ್ತಿರುವರು... ಹಳೆಯ ಪದವನ್ನೇ ಬಳಸಿ, ಆದರೆ ಅದನ್ನು ಸರಿಯಾದ ಅರ್ಥದಲ್ಲಿ ಬಳಸಿ-ಅದನ್ನು ಆವರಿಸಿರುವ ಮೂಢನಂಬಿಕೆಯನ್ನು ತೊರೆಯಿರಿ. ಈ ಪುರಾತನ ಪವಿತ್ರ ಪದದ ಅರ್ಥವನ್ನು ಪೂರ್ಣವಾಗಿ ತಿಳಿಯಿರಿ. ಸಾಹಚರ್ಯನಿಯಮಶಕ್ತಿ ನಿಮಗೆ ಅರಿವಾದರೆ ಈ ಪದಗಳು ಅನಂತವೂ ಭವ್ಯವೂ ಆದ ಸಮರ್ಥ ಭಾವಗಳೊಂದಿಗೆ ಮಾನಸಿಕ ಸಂಬಂಧವನ್ನು ಪಡೆದಿರುವುದು ಗೊತ್ತಾಗುವುದು. ಕೋಟ್ಯಂತರ ಜೀವಿಗಳು ಇದನ್ನು ಉಪಯೋಗಿಸುವರು, ಆರಾಧಿಸುವರು. ಅತಿಶ್ರೇಷ್ಠವಾದುದೆಲ್ಲ, ಭವ್ಯವಾದುದೆಲ್ಲ, ನ್ಯಾಯಸಮ್ಮತವಾದುದೆಲ್ಲ, ಮಾನವರಲ್ಲಿ ಪ್ರೀತಿಗೆ ಯೋಗ್ಯವಾದುದೆಲ್ಲ, ಮಹತ್ವಪೂರ್ಣವಾದುದೆಲ್ಲ, ವೈಭವಯುಕ್ತವಾದುದೆಲ್ಲ, 'ದೇವರು' ಎಂಬ ಪದದೊಂದಿಗೆ ಮಾನಸಿಕ ಸಂಬಂಧವನ್ನು ಹೊಂದಿದೆ. ಆ ಸಂಬಂಧದಿಂದ ಇಂತಹ ಭವ್ಯಭಾವನೆಗಳು ಉದಯಿಸುತ್ತವೆ. ಅದನ್ನು ನಾವು ತ್ಯಜಿಸಲಾರೆವು. ದೇವರು ಈ ವಿಶ್ವವನ್ನು ಸೃಷ್ಟಿಸಿದನು ಎಂದಷ್ಟೇ ಹೇಳುವುದರ ಮೂಲಕ ಇವುಗಳನ್ನು ವಿವರಿಸಲು ನಾನು ಯತ್ನಿಸಿದ್ದರೆ ನಿಮಗೆ ಏನೂ ಅರ್ಥವಾಗುತ್ತಿರಲಿಲ್ಲ, ಆದರೆ ನಮ್ಮ ಹೋರಾಟವೆಲ್ಲ ಕೊನೆಗೊಂಡ ಮೇಲೆ ಆ ಸನಾತನ ಈಶ್ವರನೆಡೆಗೆ ಬರಲೇ ಬೇಕು.*

ಎಲ್ಲ ಅನುಭವಗಳ ಸಂಗಮಕ್ಷೇತ್ರ ಬ್ರಹ್ಮ—ಆತ್ಮ. ಅದು ಒಂದು ಸಂಯುಕ್ತ ಅನುಭವ ಕ್ಷೇತ್ರ. ವಸ್ತುಗಳ ನಡುವಣ ಭೇದ, ವಿಷಯ-ವಿಷಯಿಗಳ ನಡುವಣ ಭೇದ ನಮ್ಮ ಸಾಮಾನ್ಯ ತಿಳಿವಳಿಕೆಗೇ ಬರುವ ವ್ಯಕ್ತಿ-ವ್ಯಕ್ತಿಗಳ ನಡುವಣ ಭೇದ (ಇದು ಚರ್ಚೆಯ ಆರಂಭವನ್ನು ಒದಗಿಸುತ್ತದೆ ಮತ್ತು ಸವಾಲಾಗಿ ಕಾರ್ಯ ನಿರ್ವಹಿಸುತ್ತದೆ). ಇವೆಲ್ಲವೂ ಆತ್ಮನ್-ಬ್ರಹ್ಮನ್ ಒಕ್ಕೂಟದಲ್ಲಿ ಅದ್ವೈತದ ಶುದ್ಧಪ್ರಜ್ಞೆಯಲ್ಲಿ ಪರಿಹಾರ ಕಾಣುತ್ತವೆ ಎಂದು ಉಪನಿಷತ್ತುಗಳು ಹೇಳುತ್ತವೆ.

'ಜ್ಞಾನವು ಏಕತೆಗೂ ಅಜ್ಞಾನವೂ ವಿವಿಧತೆಗೂ ದಾರಿ ಮಾಡಿಕೊಡುತ್ತದೆ' ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ವಿಜ್ಞಾನ ಮತ್ತು ಧರ್ಮಗಳ ಕ್ಷೇತ್ರಗಳಲ್ಲಿ ನಡೆದಿರುವ ಎಲ್ಲ ಪ್ರಗತಿಯ

ವೈವಿಧ್ಯತೆಯು ಮೇಲ್ಪದರದಲ್ಲಿದೆ, ಆದರೆ ಆಳದಲ್ಲಿ ಏಕತೆಯಿದೆ ಎಂದು ದೃಢೀಕರಿಸುತ್ತದೆ. ಏಕತೆ ಎಂಬುದು ಏಕರೂಪತೆಯಂತಲ್ಲ, ಅದು ವೈವಿಧ್ಯವನ್ನು ನಾಶಪಡಿಸುವುದಿಲ್ಲ. ಜ್ಞಾನವು ಸತ್ಯವನ್ನು ಪ್ರಕಾಶಗೊಳಿಸುತ್ತದೆಯೇ ಹೊರತು ಅದಕ್ಕೆ ಏನನ್ನೂ ಸೇರಿಸುವುದಿಲ್ಲ, ಆದರೆ ಅದರಿಂದ ಏನನ್ನೂ ತೆಗೆದುಕೊಳ್ಳುವುದಿಲ್ಲ. ಆದುದರಿಂದ ವೇದಾಂತವು ವೈವಿಧ್ಯದಲ್ಲಿ ಏಕತೆ ಎಂಬ ಸಂದೇಶವನ್ನು ಸಾರುತ್ತದೆ.

ವಾಸ್ತವಿಕ ವಿಜ್ಞಾನಗಳಿಂದ ನಾವು ಬಾಹ್ಯ ಪ್ರಕೃತಿಯ ಜಗತ್ತಿನಲ್ಲಿ, ಅನಾತ್ಮದ ಜಗತ್ತಿನಲ್ಲಿ, ವೈವಿಧ್ಯದಲ್ಲಿ ಏಕತೆಯನ್ನು ಬಯಸುತ್ತೇವೆ ಈ ಶೋಧವನ್ನು ಬರಿಯ ಬೌದ್ಧಿಕ ಮಟ್ಟದಲ್ಲೇ ಮಾಡಬಹುದು. ಆದರೆ ಒಳ ಪ್ರಕೃತಿಯ ಜಗತ್ತಿಗೆ, ಆತ್ಮದ ಜಗತ್ತಿಗೆ, ಪ್ರಜ್ಞೆಯ ಜಗತ್ತಿಗೆ ಆ ಶೋಧವನ್ನು ಒಯ್ದಾಗ ಅಂಥ ಒಂದು ಬೌದ್ಧಿಕ ಮಾರ್ಗವು ಅಸಮರ್ಪಕವಾಗುತ್ತದೆ, ಗೊಂದಲವನ್ನು ತರುತ್ತದೆ. ಏಕೆಂದರೆ ನಾವು ಇಲ್ಲಿ ಅತ್ಯಂತ ಆಪ್ತವಾದ ಅನುಭವ ಕ್ಷೇತ್ರದಲ್ಲಿ ಇದ್ದೇವೆ. ಇಲ್ಲಿ ಎಲ್ಲ ನೈಜ ಜ್ಞಾನವೂ ಆತ್ಮನಲ್ಲಿ ತನ್ನ ಸಂಪೂರ್ಣತೆಯನ್ನು ಕಂಡುಕೊಳ್ಳಬಯಸುತ್ತದೆ, ಅಲ್ಲದೆ ಇಲ್ಲಿ ಬರಿಯ ಭೌದ್ಧಿಕ ಜ್ಞಾನವು ನಮ್ಮನ್ನು ನಮ್ಮ ನೈಜ ಆತ್ಮಕ್ಕಿಂತ ತುಂಬ ತುಂಬ ದೂರದಲ್ಲಿ ಇರಿಸುತ್ತದೆ. ಅಂಥ ಆತ್ಮಜ್ಞಾನವು ಅಧ್ಯಾತ್ಮಿಕವಾಗಿ ತುಂಬ ಒಳಕ್ಕೆ ಇಳಿಯುತ್ತ ಹೋಗುವುದರ ಮೂಲಕ ಕ್ರಮಕ್ರಮವಾಗಿ ಮಾನವ-ಪ್ರಕೃತಿ, ಮಾನವ-ಮಾನವ ಇವರಿಬ್ಬರ ನಡುವಣ ಕಂದಕವನ್ನು ಮುಚ್ಚಿಹಾಕುತ್ತದೆ.

**೧೬. ಶುದ್ಧ ಪ್ರಜ್ಞೆ : ಬೆಳಕಿನ ಬೆಳಕು**

ಕಠೋಪನಿಷತ್ತು ಪರಮ ಸತ್ಯವಾದ ಆತ್ಮನನ್ನು ಆಪ್ತಸತ್ಯ ಎಂದೂ ಕರೆದು ಈ ಸತ್ಯದಲ್ಲಿ ಶಾಂತಿ ಕಂಡುಕೊಳ್ಳಬೇಕೆಂದು ಪ್ರಬೋಧಿಸುತ್ತದೆ (೫. ೧೨-೧೩)

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂ ರೂಪಂ ಬಹುಧಾ ಯಃ ಕರೋತಿ ;
ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಃ
ತೇಷಾಂ ಸುಖಂ ಶಾಶ್ವತಂ ನೇತರೇಶಂ—

*ಎಲ್ಲರನ್ನೂ ವಶಕ್ಕೆ ತಂದುಕೊಳ್ಳಬಲ್ಲ, ಎಲ್ಲರ ಅಂತರಾತ್ಮನಾದ, ಒಂದು ರೂಪವನ್ನು ಅನೇಕವಾಗಿ ಮಾಡಬಲ್ಲವನನ್ನು ಯಾವ ಧೀರರು ತಮ್ಮ ಅಂತರಂಗದಲ್ಲಿರುವನೆಂದು ಭಾವಿಸುವರೋ ಅಂಥವರಿಗೆ ಮಾತ್ರ ಶಾಶ್ವತ ಸುಖ, ಇತರರಿಗಲ್ಲ.*

ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಂ
ಏಕೋ ಬಹೂನಾಂ ವಿದಧಾತಿ ಕಾಮಾನ್ ;
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಶಾಂತಿಃ ಶಾಶ್ವತೀ ನೇತರೇಶಂ—

*ಅನಿತ್ಯರಲ್ಲಿ ನಿತ್ಯನೂ ಚೇತನಯುಕ್ತರಲ್ಲಿ ಚೇತನನೂ ಒಂದೇ ಆದರೂ ಹಲವರ ಬಯಕೆಗಳನ್ನು ಪೂರೈಸಬಲ್ಲನೋ ಅಂಥವನು ತಮ್ಮ ಆತ್ಮದಲ್ಲಿಯೇ ನೆಲಸಿರುವಾತನೆಂದು ಯಾರು ತಿಳಿಯುವರೋ ಅಂಥ ಧೀರರಿಗೆ ನಿತ್ಯಸುಖ ಶಾಂತಿ ದೊರೆಯುತ್ತದೆ— ಇತರರಿಗಲ್ಲ.*

ಅಮೆರಿಕಾದಲ್ಲಿ ಆತ್ಮನ ಬಗೆಗೆ ಮಾತನಾಡುತ್ತ ಸ್ವಾಮಿ ವಿವೇಕಾನಂದರು ಹೇಳಿದರು (ಕೃತಿ ಶ್ರೇಣಿ ಸಂ. II, ಪು.೧೭೨)

*ಮನುಷ್ಯರೂಪದಲ್ಲಿ ಅಭಿವ್ಯಕ್ತವಾಗುವ, ಆತ್ಮವನ್ನು ಯಾವಾಗಲೂ ಇದ್ದ, ಇರುವ, ಮುಂದೆಯೂ ಯಾವಾಗಲೂ ಇರುವ ಆ ಮಹಾನ್ ದೇವರನ್ನು ಯಾವ ಗ್ರಂಥವಾಗಲಿ ಧರ್ಮಗ್ರಂಥಗಳಾಗಲಿ ವಿಜ್ಞಾನವಾಗಲಿ ಎಂದಿಗೂ ಊಹಿಸಿಕೊಳ್ಳಲಾರದು.*

ಮತ್ತೆ 'ವಾಸ್ತವ ಮತ್ತು ತೋರಿಕೆಯ ಮನುಷ್ಯ' ಎಂಬ ಬಗೆಗೆ ಮಾತನಾಡುತ್ತ ಸ್ವಾಮೀಜಿ ಹೇಳಿದರು (ಅದೇ ಪು.೨೮೫):

*ದೇವರನ್ನು ಪೂಜಿಸುವಾಗ ನಾವು ಯಾವಾಗಲೂ ನಮ್ಮಲ್ಲಿರುವ ಗೂಢಾತ್ಮನನ್ನೇ ಪೂಜಿಸುತ್ತಿರುತ್ತೇವೆ.*

ಆತ್ಮವನ್ನು ಎಲ್ಲ ದೀಪಗಳ ದೀಪ, ಶುದ್ಧ ಪ್ರಜ್ಞೆಯ ದೀಪ ಎಂದು ವಿವರಿಸುತ್ತ ಕಠೋಪನಿಷತ್ತು (೫.೧೫) ಹೀಗೆ ಹೇಳುತ್ತದೆ :

ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ;
ತಮೇವ ಭಾಂತಂ ಅನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ—

*ಅಲ್ಲಿ (ಆ ಅನಂತ ಅದ್ವೈತ ಶುದ್ಧ ಪ್ರಜ್ಞೆಯಲ್ಲಿ) ಸೂರ್ಯ ಪ್ರಕಾಶಿಸುವುದಿಲ್ಲ, ಚಂದ್ರನಾಗಲಿ ನಕ್ಷತ್ರಗಳಾಗಲಿ ಹೊಳೆಯುವುದಿಲ್ಲ, ಮಿಂಚುಗಳು ಮಿಂಚವುದಿಲ್ಲ. ಇನ್ನು ಅಗ್ನಿಯಲ್ಲಿ ಉರಿದೀತು? (ಗೃಹಾಗ್ನಿ) 'ಅದು' ಹೊಳೆದಾಗ ಪ್ರತಿಯೊಂದೂ ಹೊಳೆಯುತ್ತವೆ —'ಅದರ' ಬೆಳಕಿನಿಂದ ಈ ವ್ಯಕ್ತ ಜಗತ್ತಿನ ಎಲ್ಲವೂ ಬೆಳಗುತ್ತವೆ.*

## ೧೭. ವೇದಾಂತವು ಹೇಳುವ ಆತ್ಮ–ಬ್ರಹ್ಮ ಅದರ ಪ್ರಚಂಡ 'ಬೀಸು'

ಬ್ರಹ್ಮದ ಅಥವಾ ದೇವರ ಅಥವಾ ಶುದ್ಧ ಪ್ರಜ್ಞೆಯ ಸಮಗ್ರ ಸ್ವರೂಪವನ್ನು ವೈಜ್ಞಾನಿಕವಾಗಿ ಲಕ್ಷಣಿಸುತ್ತ ಶಂಕರಾಚಾರ್ಯರು ತೈತ್ತಿರೀಯ ಉಪನಿಷತ್ತಿನ ಭಾಷ್ಯದಲ್ಲಿ ಹೀಗೆ ಹೇಳುತ್ತಾರೆ (೩.೧):

ಉತ್ಪತ್ತಿ ಸ್ಥಿತಿ ಲಯ ಕಾಲೇಷು ಯದಾತ್ಮತಾಂ ನ ಜಹಾತಿ ಭೂತಾನಿ, ತತ್ ಏತತ್ ಬ್ರಹ್ಮಣೋ ಲಕ್ಷಣಂ—

*ಯಾವ ಸತ್ಯದಿಂದ ತಮ್ಮ ಸೃಷ್ಟಿ ಸ್ಥಿತಿ ಲಯಕಾಲಗಳಲ್ಲಿ ಜೀವಿಗಳು ಬೇರ್ಪಡುವುದಿಲ್ಲವೋ ಆ ಪರಮ ಸತ್ಯವೇ ಬ್ರಹ್ಮ ಎಂದು ಲಕ್ಷಣಿಸಬಹುದು.*

ಉಪನಿಷತ್ತುಗಳು ಸಾದರಪಡಿಸುವ ಆತ್ಮನ್-ಬ್ರಹ್ಮನ್ ಎಂಬ ಪರಮಸತ್ಯದ ಅದ್ಭುತವಾದ ಬೀಸನ್ನು (ಪ್ರಭಾವವನ್ನು) ಅರ್ಥಮಾಡಿಕೊಳ್ಳಬೇಕಾದುದು ಅಗತ್ಯ. ಎಲ್ಲ ಏಕದೈವ ಪ್ರತಿಪಾದಕ ಧರ್ಮಗಳು ಹೇಳುವ 'ವಿಶ್ವಾತೀತ ದೈವ'ಕ್ಕಿಂತ ಇದು ತುಂಬ ಭಿನ್ನವಾದದ್ದು. ಲಂಡನ್‌ನಲ್ಲಿ ೧೮೯೬ರಲ್ಲಿ ಕಠೋಪನಿಷತ್ತಿನ ಬಗೆಗೆ ಮಾಡಿದ ಎರಡು ಉಪನ್ಯಾಸಗಳ ಪೈಕಿ 'ಸಾಕ್ಷಾತ್ಕಾರ' ಎಂಬ ಉಪನ್ಯಾಸದಲ್ಲಿ ಆ ಬ್ರಹ್ಮದ ಬೀಸು (ಪ್ರಭಾವ)ಮತ್ತು ವ್ಯಾಪ್ತಿಯ ಇಣುಕು ನೋಟವು ನಮಗೆ ಲಭ್ಯವಾಗುತ್ತದೆ ಅದು ಸ್ವಲ್ಪ ಉದ್ದವಾದರೂ ಈ ಸಂದರ್ಭದಲ್ಲಿ ಉಲ್ಲೇಖಯೋಗ್ಯವಾಗಿದೆ ಕೃತಿಶ್ರೇಣಿ ಸಂ. II, ಪು. ):

*ಬಾಹ್ಯಪರೀಕ್ಷೆಯಿಂದ ಹೊರಡುವ ವಿಶ್ವಸಮಸ್ಯೆಯ ಪರಿಹಾರೋಪಾಯದಲ್ಲಿ ಈ ಕುಂದು ಇದೆ. ನಾವು ನೋಡುವ ಪ್ರಪಂಚ, ಕೇವಲ ನಮ್ಮ ದೃಷ್ಟಿಗೆ ಮಾತ್ರ ಅನ್ವಯಿಸುವ ಪ್ರಪಂಚ. ಇದು ಸತ್ಯವನ್ನು ನಾವು ನೋಡುವ ರೀತಿ. ನಾವು ಆ ಸತ್ಯವನ್ನು ಇಂದ್ರಿಯಗಳ ಮೂಲಕ ನೋಡಲಾರೆವು, ಗ್ರಹಿಸಲಾರೆವು. ಪಂಚೇಂದ್ರಿಯಗಳನ್ನು ಪಡೆದ ಮನುಷ್ಯರ ದೃಷ್ಟಿಗೆ ಕಾಣುವ*

ಪ್ರಪಂಚದಂತೆ ಮಾತ್ರ ನಾವು ಅದನ್ನು ನೋಡುತ್ತೇವೆ. ನಮಗೆ ಮತ್ತೊಂದು ಇಂದ್ರಿಯ ದೊರೆತರೆ ಪ್ರಪಂಚ ನಮಗೆ ಬೇರೆಯಾಗಿ ಕಾಣುವುದು. ಕಾಂತತೆಯ ಇಂದ್ರಿಯ ಒಂದು ನಮಗೆ ಇದ್ದರೆ, ಆಗ ನಮಗೆ ಈಗ ಅರಿವಾಗದಿರುವ (ಅದನ್ನು ಅರಿಯುವುದಕ್ಕೆ ತಕ್ಕ ಸಾಧನ ನಮ್ಮಲ್ಲಿ ಈಗ ಇಲ್ಲ) ಕೋಟ್ಯಂತರ ಶಕ್ತಿಗಳು ಗೋಚರಿಸಬಹುದು. ನಮ್ಮ ಇಂದ್ರಿಯಗಳಿಗೊಂದು ಪರಿಮಿತಿ ಇದೆ. ನಿಜವಾಗಿ ಅವು ಕೆಲಸ ಮಾಡುವ ಎಲ್ಲೆ ಅತಿ ಕಿರಿದು. ನಾವು ಯಾವುದನ್ನು ವಿಶ್ವವೆನ್ನುವೆವೊ ಅದು ಈ ಪರಿಮಿತಿಯ ಎಲ್ಲೆಯೊಳಗಿದೆ. ನಮ್ಮ ದೇವರ ಕಲ್ಪನೆ ಆ ವಿಶ್ವದ ಪರಿಹಾರ. ಆದರ ಇದೇ ಒಟ್ಟು ಸಮಸ್ಯೆಗೆ ಪರಿಹಾರವಾಗಲಾರದು. ಮನುಷ್ಯ ಇಲ್ಲೆ ನಿಲ್ಲಲಾರ. ಅವನು ಆಲೋಚನಾಜೀವಿ. ವಿಶ್ವವನ್ನೆಲ್ಲಾ ಆಮೂಲಾಗ್ರವಾಗಿ ವಿವರಿಸಬಲ್ಲ ಒಂದು ಉತ್ತರ ಅವನಿಗೆ ಬೇಕಾಗಿದೆ. ಮನುಷ್ಯ, ದೇವತೆ ಮತ್ತು ಸಾಧ್ಯವಾದ ಎಲ್ಲಾ ಜೀವಿಗಳೂ ಇರಬಲ್ಲ ವಿಶ್ವವನ್ನು ಮಾನವ ನೋಡಬಯಸುವನು. ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಬಲ್ಲ ಒಂದು ಪರಿಹಾರೋಪಾಯ ಅವನಿಗೆ ಬೇಕಾಗಿದೆ.

ಎಲ್ಲ ವಿಶ್ವಗಳನ್ನು ಒಳಗೊಂಡ ವಿಶ್ವವನ್ನು ನಾವು ಮೊದಲು ಕಂಡುಹಿಡಿಯಬೇಕಾಗಿದೆ. ಈ ಎಲ್ಲ ಅಸ್ತಿತ್ವದ ಸ್ತರಗಳನ್ನೂ ಒಂದೇ ಸಮನಾಗಿ ವ್ಯಾಪಿಸಿರುವ ಒಂದು ವಸ್ತುವನ್ನು ಕಂಡು ಹಿಡಿಯಬೇಕು. ಇಂದ್ರಿಯಗಳ ನೆರವಿನಿಂದ ಅದನ್ನು ಅರಿಯುತ್ತೇವೆಯೋ ಇಲ್ಲವೋ ಎಂಬುದು ಮುಖ್ಯವಲ್ಲ. ಉಚ್ಚ ಮತ್ತು ನೀಚ ಪ್ರಪಂಚದಲ್ಲಿ ಸಾಮಾನ್ಯವಾಗಿರುವ ಯಾವುದಾದರೊಂದು ವಸ್ತುವನ್ನು ನಮಗೆ ಕಂಡುಹಿಡಿಯಲು ಸಾಧ್ಯವಾದರೆ ಆಗ ನಮ್ಮ ಸಮಸ್ಯೆ ಬಗೆಹರಿಯುವುದು. ಕೇವಲ ತರ್ಕ ಸಿದ್ಧಾಂತದಿಂದ ಎಲ್ಲ ಅಸ್ತಿತ್ವಕ್ಕೂ ಒಂದು ಮೂಲವಸ್ತುವಿರಬೇಕೆಂಬ ಒಂದು ನಿರ್ಣಯಕ್ಕೆ ಬಂದರೂ ನಮ್ಮ ಸಮಸ್ಯೆ ಸ್ವಲ್ಪ ಬಗೆಹರಿದಂತೆಯೆ. ಆದರೆ ನಾವು ಈಗ ನೋಡುವ ಮತ್ತು ತಿಳಿದುಕೊಂಡಿರುವ ಪ್ರಪಂಚದಿಂದ ಮಾತ್ರವೆ ಇದಕ್ಕೆ ಪರಿಹಾರ ದೊರಕಲಾರದು. ಏಕೆಂದರೆ ಇದು ಸಮಷ್ಟಿಯ ಒಂದು ಅಂಶಿಕದೃಷ್ಟಿ ಮಾತ್ರ.

ಇನ್ನೂ ಆಳಕ್ಕೆ ಹೋದರೆ ಮಾತ್ರ ಇದು ಸಾಧ್ಯವೆಂದು ತೋರುತ್ತದೆ. ಮೊದಲಿನ ದಾರ್ಶನಿಕರು ಕೇಂದ್ರದಿಂದ ದೂರವಿದ್ದಷ್ಟೂ ವೈವಿಧ್ಯ ಹೆಚ್ಚು ಕಾಣುತ್ತಿದ್ದು ಕೇಂದ್ರಕ್ಕೆ ಸಮೀಪಿಸಿದಷ್ಟೂ ತಾವು ಏಕತೆಗೆ ಹತ್ತಿರ ಬರುವುದನ್ನು ಕಂಡುಹಿಡಿದರು. ಒಂದು ವೃತ್ತದ ಕೇಂದ್ರದ ಹತ್ತಿರ ಹೋದಷ್ಟೂ ವ್ಯಾಸಾರ್ಧರೇಖೆಗಳು ಸಂಧಿಸುವ ಸ್ಥಳದ ಸಮೀಪಕ್ಕೆ ಹೋಗುವೆವು. ದೂರ ಹೋದಷ್ಟೂ ಅಂತಹ ಸಂಧಿಸ್ಥಳದಿಂದ ದೂರ ಹೋಗುವೆವು. ಬಾಹ್ಯ ಜಗತ್ತು ಕೇಂದ್ರದಿಂದ ಬಹಳ ದೂರದಲ್ಲಿದೆ. ಆದಕರಾಣ ಅಸ್ತಿತ್ವವೆಲ್ಲ ಸಂಧಿಸುವ ಒಂದು ಸಾಮಾನ್ಯವಾದ ಹಿನ್ನೆಲೆ ಅದರಲ್ಲಿಲ್ಲ. ಹೆಚ್ಚು ಎಂದರೆ ಬಾಹ್ಯಜಗತ್ತು ಇಡೀ ಬ್ರಹ್ಮಾಂಡದ ಒಂದು ಅಂಶ. ಮಾನಸಿಕ, ನೈತಿಕ, ಬೌದ್ಧಿಕ ಮೊದಲಾದ ವಿವಿಧ ಕ್ಷೇತ್ರಗಳ ಅಸ್ತಿತ್ವವೆಲ್ಲಾ ಅದರ ಇತರ ಅಂಶಗಳು. ಅದರಲ್ಲಿ ಯಾವುದೋ ಒಂದು ಅಂಶವನ್ನು ತೆಗೆದುಕೊಂಡು ಅದರ ಆಧಾರದ ಮೇಲೆ ಇಡೀ ವಿಶ್ವಸಮಸ್ಯೆಯನ್ನು ಬಗೆಹರಿಸುವುದು ಅಸಾಧ್ಯ. ಆದಕಾರಣ ಯಾವ ಒಂದು ಕೇಂದ್ರದಿಂದ ಎಲ್ಲಾ ಅಸ್ತಿತ್ವ ಪ್ರಾರಂಭವಾಗುವುದೊ ಅದರ ಆಧಾರದ ಮೇಲೆ ನಿಂತು ಅದರ ಮೂಲಕ ಸಮಸ್ಯಾಪರಿಹಾರಕ್ಕೆ ಯತ್ನಿಸಬೇಕು. ಅದೇ ಪ್ರಮೇಯ. ಕೇಂದ್ರ ಎಲ್ಲಿರುವುದು ? ಅದು ನಮ್ಮಲ್ಲಿರುವುದು. ಹಿಂದಿನ ಋಷಿಗಳು ಆಳದಿಂದ ಆಳಕ್ಕೆ ಹೋಗಿ ಮನುಷ್ಯನ ಹೃದಯಾಂತರಾಳದಲ್ಲಿ ಇಡೀ ವಿಶ್ವದ ಕೇಂದ್ರವನ್ನು ಕಂಡುಹಿಡಿದರು. ಎಲ್ಲಾ ವಿಭಿನ್ನ ಅಸ್ತಿತ್ವವೂ ಅಲ್ಲಿ ಸಂಧಿಸುವುದು. ಇದೇ ಸಾಮಾನ್ಯ ಸ್ಥಳ. ಇದರ ಆಧಾರದ ಮೇಲೆ ಮಾತ್ರ ಎಲ್ಲದಕ್ಕೂ ಅನ್ವಯಿಸುವ ಪರಿಹಾರ ಸಾಧ್ಯ.

## ೧೮. ಧರ್ಮ ಮತ್ತು ಅಮೃತ : ಆಧ್ಯಾತ್ಮಿಕ ಎಚ್ಚರದ ಎರಡು ನೆಲೆಗಳು

ಮಾನವನ ನೆಲೆಯಲ್ಲಿನ ವಿಕಾಸವನ್ನು ವರ್ಣಿಸುತ್ತ, ಸಾಂತದ ಹಿಂದಿರುವ ಅನಂತವನ್ನು ಮರ್ತ್ಯದ ಹಿಂದಿರುವ ಅಮರ್ತ್ಯವನ್ನು ಒಳಹೊಕ್ಕು ತಿಳಿಯಬಲ್ಲ 'ಅಂತರ್ಪ್ರವೇಶ' ಎಂದು ವೇದಾಂತ ಮತ್ತು ಯೋಗಗಳು ವಿವರಿಸುತ್ತವೆ. ಈ ಅಂತರ್ಪ್ರವೇಶದ ಮುಖ್ಯ ತಂತ್ರ ಎಂದರೆ ಧ್ಯಾನ. ಇದಕ್ಕೆ ಒಂದು ನೈತಿಕವಾದ ಸುಭದ್ರ ಬುನಾದಿ ಅಗತ್ಯ. ಮನುಷ್ಯನು ಕಾಲ ದೇಶಗಳಲ್ಲಿ ಸಮಾಜ ದೊಂದಿಗೆ ಮುಖಾಮುಖಿಯಾಗಿ ಕೈಗೊಳ್ಳುವ ಹೊರ ಪ್ರಯಾಣದಿಂದಾಗಿ ಈ ನೈತಿಕ ಬುನಾದಿ ಲಭ್ಯವಾಗುತ್ತದೆ. ಈ ಕೊನೆಯದನ್ನು ಒಳಬದುಕಿಗೆ ಶಿಸ್ತಿನ ಮಟ್ಟವನ್ನು ಕೊಡುವ ಸಾಮಾಜಿಕ ನೀತಿ, ಧರ್ಮ ಎಂದು ಭಾರತವು ಕರೆಯುತ್ತದೆ. ಮೊದಲನೆಯದು ಭಾರತವು ಹೇಳುವ ಅಮೃತ ; ಸಮಾಜಾತೀತ ಮಟ್ಟದ ಆಧ್ಯಾತ್ಮಿಕ ಎಚ್ಚರ ಮತ್ತು ಸಾಕ್ಷಾತ್ಕಾರ. ಹೀಗೆ ಮಾನವ ಅಂತಸ್ಸಂಪರ್ಕದ ಸಂದರ್ಭದಲ್ಲಿ ಮನುಷ್ಯನು ತನ್ನ ಶರೀರ ತೃಪ್ತಿಯ ಶೋಧನೆಯಲ್ಲಿದ್ದಾಗ ಕೂಡ, ಪ್ರಜ್ಞೆಯನ್ನು ಉನ್ನತ ಅಧ್ಯಾತ್ಮಿಕ ನೆಲೆಗಳಿಗೆ ಎತ್ತರಿಸುವ ಕ್ರಮವು ಆರಂಭವಾಗುತ್ತದೆ. ಕಠೋಪನಿಷತ್ತಿನ ಎರಡನೆಯ ಅಧ್ಯಾಯದ ಪ್ರಾರಂಭದ ಮಂತ್ರಗಳಲ್ಲಿ ಪ್ರೇಯಸ್ಸಿನಿಂದ ಶ್ರೇಯಸ್ಸಿಗೆ ಏರುವ ಸ್ಥಿತಿಯನ್ನು ವರ್ಣಿಸಿದೆಯಷ್ಟೆ. ಆ ಸ್ಥಿತಿಯು ಸ್ವ-ಆಸಕ್ತಿಯ ಸಾಮಾಜಿಕ ಇಚ್ಛೆ ಎಂಬ ಬೆಳಕಿನಿಂದ ಬೆಳಗಲ್ಪಡುವುದನ್ನು ಸೂಚಿಸುತ್ತದೆ. ಮನುಷ್ಯನಿಗೆ ತನ್ನ ಪ್ರಜ್ಞೆಯನ್ನು ಇನ್ನೂ ಎತ್ತರದ ನೆಲೆಗಳಿಗೊಯ್ಯಲು ಸಹಾಯಮಾಡುವುದು, ಧರ್ಮದ ನೆಲೆಯಲ್ಲಿ ಸಾಧಿಸಿಕೊಂಡ ಈ ನೈತಿಕ ಶಕ್ತಿಯೇ ಒಳ ಶಿಸ್ತುಗಳಿಂದ ಕೂಡಿದ ಧ್ಯಾನವು—ಅಂದರೆ ಅಮೃತ ಎಂದು ಸಾಮೂಹಿಕವಾಗಿ ವರ್ಗೀಕರಿಸಿರುವ ನೆಲೆ ಮನುಷ್ಯನನ್ನು ತನ್ನ ಅಮರ್ತ್ಯ ಆಯಾಮದ ಅನುಭವದತ್ತ ಕೊಂಡೊಯ್ಯುತ್ತದೆ. ಕುಂಡಲಿನಿಯನ್ನು ಎಚ್ಚರಿಸುವ ಯೋಗದ ತಂತ್ರಗಳು ಕೂಡ ಪ್ರಜ್ಞೆಯನ್ನು ಉನ್ನತ ಸ್ತರಗಳಿಗೆ ಒಯ್ಯುವ ಸಾಧನವಾಗಿದೆ. ಶ್ರೀ ರಾಮಕೃಷ್ಣರು ಹೇಳುತ್ತಾರೆ. ಕುಂಡಲಿನೀ ಶಕ್ತಿಯು ಕೆಳಗಿನ ಮೂರು ಕೇಂದ್ರಗಳಾದ ಮೂಲಾಧಾರ, ಸ್ವಾಧಿಷ್ಠಾನ ಮತ್ತು ಮಣಿಪುರಗಳಲ್ಲಿ ಎಂದರೆ ಲಿಂಗ, ಗುಹ್ಯ ಮತ್ತು ನಾಭಿ ಕೇಂದ್ರಗಳಲ್ಲಿ ಹರಿದಾಗ, ಮನುಷ್ಯನ ಪ್ರಜ್ಞೆಯು ಇಂದ್ರಿಯ ತೃಪ್ತಿಗಳ ಮಟ್ಟದಲ್ಲಿ ಉಳಿದುಬಿಡುತ್ತದೆ. ಕುಂಡಲಿನಿಯು ನಾಲ್ಕನೇ ಕೇಂದ್ರವಾದ ಅನಾಹತಕ್ಕೆ ಪ್ರವೇಶಿಸಿದಾಗ ಮಾತ್ರ ಅಧ್ಯಾತ್ಮಿಕ ಎಚ್ಚರ ಆರಂಭವಾಗುತ್ತದೆ ಮತ್ತು ಪ್ರಜ್ಞೆಯು ನಡವಳಿಕೆಯ, ನೈತಿಕ ಮತ್ತು ಅಧ್ಯಾತ್ಮಿಕ ನೆಲೆಗಳಿಗೆ ಏರುತ್ತದೆ. ಈ ಮೊದಲ ಅಧ್ಯಾತ್ಮಿಕ ಎಚ್ಚರವು ಮುಂದೆ ಐದು ಮತ್ತು ಆರನೆಯ ವಿಶುದ್ಧ ಮತ್ತು ಆಜ್ಞಾಕೇಂದ್ರಗಳಿಗೆ, -ಅನಂತರ ಏಳನೆಯದಾದ ಸಹಸ್ರಾರ ಕೇಂದ್ರಗಳಿಗೆ ಏರುತ್ತದೆ. ತನ್ನ ಆರನೆಯ ಅಧ್ಯಾಯದ ಒಂಬತ್ತರಿಂದ ಹನ್ನೊಂದನೆಯ ಶ್ಲೋಕಗಳಲ್ಲಿ ಕಠೋಪನಿಷತ್ತು ಈ ಪ್ರಜ್ಞಾ ಕೇಂದ್ರವು 'ಅಮೃತ'ದ ಮಟ್ಟಕ್ಕೆ ಏರುವುದನ್ನು ಪರಿಚಯಿಸುತ್ತದೆ

ನ ಸಂದೃಶೇ ತಿಷ್ಠತಿ ರೂಪಮಸ್ಯ
ನ ಚಕ್ಷುಷಾ ಪಶ್ಯತಿ ಕಶ್ಚನೈನಂ ;
ಹೃದಾ ಮನೀಷಾ ಮನಸಾಭಿ ಕ್ಲ್‌ಪ್ತೋ
ಯ ಏತತ್ ವಿದುಃ ಅಮೃತಾಸ್ತೇ ಭವಂತಿ—

*'ಆತನ' ರೂಪ ನಮ್ಮ ದೃಷ್ಟಿಕ್ಷೇತ್ರಕ್ಕೆ ಹೊರತಾದದ್ದು, ಯಾರೂ ಕಣ್ಣಿನಿಂದ ಆತನನ್ನು ನೋಡಲಾರರು. ಬುದ್ಧಿಯ ಪೂರ್ಣ ನಿಯಂತ್ರಣದಲ್ಲಿರುವ ಮನಸ್ಸು, ಹೃದಯ ದ್ವಾರದಲ್ಲಿ ಆತನನ್ನು ಬಯಲು ಮಾಡುತ್ತದೆ.*

ಯದಾ ಪಂಚಾವತಿಷ್ಠಂತೇ
ಜ್ಞಾನಾನಿ ಮನಸಾ ಸಹ ;

ಬುದ್ಧಿಶ್ಚನ ವಿಚೇಷ್ಟತೇ
ತಾಮಾಹುಃ ಪರಮಾಂ ಗತಿಂ—

*ಜ್ಞಾನದ ಪಂಚೇಂದ್ರಿಯಗಳು ಮನಸ್ಸಿನ ಜೊತೆಯಲ್ಲಿ ದೃಢವಾಗಿದ್ದರೆ, ಬುದ್ಧಿ ಕೂಡ ತಟಸ್ಥವಾಗಿದ್ದರೆ ಅದೇ ಪರಮಸ್ಥಿತಿ ಎಂದು ಜ್ಞಾನಿಗಳು ಹೇಳುತ್ತಾರೆ.*

ತಾಂ ಯೋಗಮಿತಿ ಮನ್ಯಂತೇ
ಸ್ಥಿರಾಂ ಇಂದ್ರಿಯಧಾರಣಾಂ ;
ಅಪ್ರಮತ್ತಃ ತದಾ ಭವತಿ
ಯೋಗೋ ಹಿ ಪ್ರಭವಾಪ್ಯಯೌ—

*ಸ್ಥಿರವಾದ ಇಂದ್ರಿಯಧಾರಣ ಶಕ್ತಿಯನ್ನೇ ಯೋಗ ಎಂದು ಕರೆಯುತ್ತಾರೆ. ಯೋಗಿಯು ತುಂಬ ಎಚ್ಚತ್ತಿರಬೇಕು, ಏಕೆಂದರೆ ಯೋಗವು ಸಂಪಾದಿತವಾಗಬಹುದು, ಕಳೆದುಹೋಗಲೂಬಹುದು.*

ಭಗವದ್ ಗೀತೆಯ ಆರು ಗಮನಾರ್ಹವಾದ ಸ್ಪಷ್ಟತೆಯುಳ್ಳ ಮತ್ತು ತೀಕ್ಷ್ಣ ಒಳನೋಟವುಳ್ಳ ಶ್ಲೋಕಗಳಲ್ಲಿ ಅನಂತವಾದ ಶುದ್ಧ ಜ್ಞಾನವು ತನ್ನೆಲ್ಲ ವೈಭವಗಳಿಂದ ಮಿಂಚುವ ಧ್ಯಾನಸ್ಥಿತಿಯ ಸುಂದರ ವರ್ಣನೆಯನ್ನು ಕಾಣುತ್ತೇವೆ. (VI. ೧೮-೨೩)

ಯದಾ ವಿನಿಯತಂ ಚಿತ್ತಂ
ಆತ್ಮನ್ಯೇವಾವತಿಷ್ಠತೇ ;
ನಿಸ್ಪೃಹಃ ಸರ್ವಕಾಮೇಭ್ಯೋ
ಯುಕ್ತ ಇತ್ಯುಚ್ಯತೇ ತದಾ—

*ಯಾವಾಗ ನಿಗ್ರಹಿತ ಚಿತ್ತವು ಆತ್ಮದಲ್ಲೇ ನಿಲ್ಲುತ್ತದೋ ಆಗ ಸರ್ವಕಾಮಗಳಲ್ಲಿ ಆಸಕ್ತಿ ಕಳೆದುಕೊಳ್ಳುತ್ತಾನೆ. ಅಂಥವನನ್ನು ಯೋಗಯುಕ್ತನಾದವನೆಂದು ಕರೆಯುತ್ತಾರೆ.*

ಯಥಾ ದೀಪೋ ನಿವಾತಸ್ಥೋ
ನೇಂಗತೇ ಸೋಪಮಾ ಸ್ಮೃತಾ ;
ಯೋಗಿನೋ ಯತ ಚಿತ್ತಸ್ಯ
ಯುಂಜತೋ ಯೋಗಮಾತ್ಮನಃ—

*ಗಾಳಿಯಿಲ್ಲದ ಪ್ರದೇಶದಲ್ಲಿ ದೀಪವು ಹೇಗೆ ನಿಶ್ಚಲವಾಗಿ ಉರಿಯುತ್ತದೋ ಹಾಗೆಯೇ ಆತ್ಮಯೋಗದಲ್ಲಿ ತೊಡಗಿರುವ ಯೋಗಿಯ ಚಿತ್ತವು ನಿಶ್ಚಲವಾಗಿರುತ್ತದೆ ಎಂದು ಹೇಳುತ್ತಾರೆ.*

ಯತ್ರೋಪರಮತೇ ಚಿತ್ತಂ
ನಿರುದ್ಧಂ ಯೋಗ ಸೇವಯಾ ;
ಯತ್ರ ಚೈವಾತ್ಮನಾತ್ಮಾನಂ
ಪಶ್ಯನ್ನಾತ್ಮನಿ ತುಷ್ಯತಿ—

*ಯಾವಾಗ ಯೋಗಾಭ್ಯಾಸದಿಂದ ನಿರೋಧಿಸಲ್ಪಟ್ಟ ಚಿತ್ತವು ಶಾಂತವಾಗುತ್ತದೋ, ಯಾವಾಗ ಮನಸ್ಸಿನಿಂದ ಆತ್ಮನನ್ನು ನೋಡುತ್ತಾ ತನ್ನಲ್ಲಿಯೇ ಸಂತೃಪ್ತಿ ಹೊಂದುತ್ತಾನೆಯೋ...*

ಸುಖಮಾತ್ಯಂತಿಕಂ ಯತ್ತದ್
ಬುದ್ಧಿ ಗ್ರಾಹ್ಯಮತೀಂದ್ರಿಯಂ ;
ವೇತ್ತಿ ಯತ್ರ ನ ಚೈವಾಯಂ
ಸ್ಥಿತಃ ಚಲತಿ ತತ್ತ್ವತಃ—

*ಇಂದ್ರಿಯಾತೀತವೂ ಆತ್ಯಂತಿಕವೂ (ನಿತ್ಯವೂ)ಆದ ಸುಖವಿದೆಯೆಂಬುದನ್ನು ಯಾವನು ತಿಳಿಯುತ್ತಾನೋ, ಯಾವುದರಲ್ಲಿ ಇದ್ದುಕೊಂಡು ಆ ಯೋಗಿಯು ತತ್ತ್ವದಿಂದ ಚಲಿಸುವುದಿಲ್ಲ...*

ಯಂ ಲಬ್ಧ್ವಾ ಚಾಪರಂ ಲಾಭಂ
ಮನ್ಯತೇ ನಾಧಿಕಂ ತತಃ ;
ಯಸ್ಮಿನ್ ಸ್ಥಿತೋನ ದುಃಖೇನ
ಗುರುಣಾಪಿ ವಿಚಾಲ್ಯತೇ

*ಯಾವುದನ್ನು ಹೊಂದಿ ಯಾರು ಬೇರೆ ಲಾಭವನ್ನು ಅದಕ್ಕಿಂತ ಅಧಿಕವೆಂದು ತಿಳಿಯುವುದಿಲ್ಲವೋ, ಹಾಗೆ ಯಾವುದರಲ್ಲಿ ಸ್ಥಿರವಾಗಿ ಇರುತ್ತಾನೆಯೋ ಅವನು ಮಹತ್ತಾದ ದುಃಖದಿಂದಲೂ ಚಲಿತನಾಗುವುದಿಲ್ಲ.*

ತಂ ವಿದ್ಯಾದ್ದುಃಖ ಸಂಯೋಗ
ವಿಯೋಗಂ ಯೋಗ ಸಂಜ್ಞಿತಂ ;
ಸ ನಿಶ್ಚಯೇನ ಯೋಕ್ತವ್ಯೋ
ಯೋಗೋಽನಿರ್ವಿಣ್ಣ ಚೇತಸಾ

*ದುಃಖ ಸಂಬಂಧವನ್ನು ದೂರಮಾಡುವ ಅದನ್ನು 'ಯೋಗ' ಎಂದು ತಿಳಿಯಬೇಕು. ಅಂತಹ ಯೋಗವನ್ನು ನಿಶ್ಚಯವಾದ ಮತ್ತು ಉತ್ಸಾಹಯುಕ್ತವಾದ ಚಿತ್ತದಿಂದ ಮಾಡಬೇಕು.*

ಈ ಅನಂತವಾದ ಶುದ್ಧ ಪ್ರಜ್ಞೆಯನ್ನು ಸಂಪಾದಿಸುವುದು ಪ್ರತಿಯೊಬ್ಬ ನಾಗರಿಕನ ಆಜನ್ಮಸಿದ್ಧ ಹಕ್ಕು ; ಅದರ ಸಿದ್ಧಿಯಿಂದ ಮನುಷ್ಯನ ನೆಲೆಯು ಭೂಮಂಡಲದ ಮತ್ತು ನಭೋಮಂಡಲದ ಜೀವಿಗಳ ಮಟ್ಟಕ್ಕಿಂತ ಎತ್ತರದ್ದಾಗಿರುತ್ತದೆ ; ಅದು ಈ ಜನ್ಮದಲ್ಲಿ ಈ ಜಗತ್ತಿನಲ್ಲಿಯೇ ಪಡೆಯಬೇಕಾದ ಸ್ಥಿತಿಯೇ ಹೊರತು ಮರಣಾನಂತರದ ಸ್ವರ್ಗದಲ್ಲಲ್ಲ; ಮತ್ತು ಅನೇಕರು ಈಗಾಗಲೇ ಈ ಉನ್ನತ ನೆಲೆಯ ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಂಡಿದ್ದಾರೆ ಎಂದು ವೇದಾಂತ ಮತ್ತು ಯೋಗಗಳು ಪ್ರತಿಪಾದಿಸುತ್ತವೆ.

### ೧೯. ಸಮಾಪ್ತಿ : ಆತ್ಮ ಸಕ್ಷಾತ್ಕಾರದ ವಿಧಾಯಕ ವಾಕ್ಯ

ಭಗವದ್ ಗೀತೆಯಲ್ಲಿ ಅಂತರ್ಯಾಮಿ ಭಗವಂತನು ಕೃಷ್ಣಾವತಾರದಲ್ಲಿ ಈ ಸತ್ಯವನ್ನು ಘೋಷಿಸುತ್ತಾನೆ (IV. ೧೦) :

ವೀತರಾಗ ಭಯಕ್ರೋಧಾ
ಮನ್ಮಯಾ ಮಾಮುಪಾಶ್ರಿತಾಃ ;
ಬಹವೋ ಜ್ಞಾನ ತಪಸಾ
ಪೂತಾ ಮದ್ಭಾವಮಾಗತಾಃ—

*ಆಸಕ್ತಿ, ಭಯ, ಕ್ರೋಧ—ಇವೊಂದೂ ಇಲ್ಲದೆ, ನನ್ನಲ್ಲಿಯೇ ಮನಸ್ಸನ್ನು ನೆಟ್ಟು, ನನ್ನನ್ನೇ ಆಶ್ರಯಿಸಿ ಅನೇಕರು ಜ್ಞಾನರೂಪವಾದ ತಪಸ್ಸಿನಿಂದ ಪವಿತ್ರರಾಗಿ ನನ್ನ ಭಾವವನ್ನು ಹೊಂದಿರುತ್ತಾರೆ :*

ಇದಕ್ಕೆ ಸಮಾನವಾದ ಭಾಷೆಯಲ್ಲಿ ಇದೇ ಸಂಗತಿಯನ್ನು ಗೌಡಪಾದರು ತಮ್ಮ ಮಾಂಡೂಕ್ಯ ಕಾರಿಕೆಯಲ್ಲಿ ಹೇಳಿದ್ದಾರೆ (II. 35) :

ವೀತರಾಗ ಭಯ ಕ್ರೋಧೈಃ
ಮುನಿಭಿಃ ವೇದಪಾರಗೈಃ
ನಿರ್ವಿಕಲ್ಪೋಹ್ಯಯಂ ದೃಷ್ಟಃ
ಪ್ರಪಂಚೋಪಶಮೋದ್ವಯಃ—

ಪ್ರಾಪಂಚಿಕ ಅಸ್ತಿತ್ವವನ್ನು ನಾಶಪಡಿಸಿಕೊಂಡು, ಅದ್ವೈತರಾಗಿ, ಈ ನೈಜ ನಿರ್ವಿಕಲ್ಪ ಸ್ಥಿತಿಯನ್ನು ಸಾಕ್ಷಾತ್ಕರಿಸಿಕೊಂಡಿರುವ ಈ ಯೋಗಿಗಳು ರಾಗ, ಭಯ, ಕ್ರೋಧಗಳಿಲ್ಲದವರಾಗಿದ್ದಾರೆ, ವೇದ ಪಾರಗರಾಗಿದ್ದಾರೆ.

ಅನು : ಪ್ರೊ. ಅ. ರಾ. ಮಿತ್ರ

೨೨

# ಪ್ರಜ್ಞಾ ಜಾಗೃತಿಯ ವಿಜ್ಞಾನ*

## ೧. ಪೀಠಿಕೆ

ಹಿಂದಿನ ವರ್ಷದಂತೆಯೇ ಈ ವರ್ಷವೂ ಈ ವಿಚಾರಗೋಷ್ಠಿಯಲ್ಲಿ ಭಾಗವಹಿಸಲು ನನ್ನನ್ನು ಕೇಳಿಕೊಂಡಿದ್ದಕ್ಕಾಗಿ ಮೊದಲು ನಾನು ಪ್ರೊ. ವಾನ್ ಪ್ರಾಗ್‌ರವರಿಗೂ ಅವರ ಸ್ಕೂಲ್ ಆಫ್ ಓರಿಯೆಂಟಲ್ ಸ್ಟಡೀಸ್‌ಗೂ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ಸಂಜೆಯ ಉಪನ್ಯಾಸದ ವಿಷಯ : 'ಪ್ರಜ್ಞಾ ಜಾಗೃತಿಯ ವಿಜ್ಞಾನ'. ಇದೊಂದು ಗಾಢವಾದ ವಿಷಯ. ಈಗಿನ ಯುದ್ಧೋತ್ತರ ಕಾಲದಲ್ಲಿ ಈ ವಿಷಯದ ಬೌದ್ಧಿಕ ಅಧ್ಯಯನದಲ್ಲಿ ಮಾತ್ರವಲ್ಲದೆ ಅದರ ಅನುಷ್ಠಾನದಲ್ಲಿಯೂ ಜನರು ಆಸಕ್ತಿಯನ್ನು ತೋರಿಸುತ್ತಿರುವುದು ಸಂತೋಷದ ವಿಷಯ. ಪ್ರೊ. ವ್ಯಾನ್ ಪ್ರಾಗ್‌ರವರು ನನ್ನ ಉಪನ್ಯಾಸಕ್ಕಾಗಿ ಈ ವಿಷಯವನ್ನು ಆರಿಸಿಕೊಂಡಿರುವುದು ಬುದ್ಧಿಜೀವಿಗಳ ವಲಯದಲ್ಲೂ ಹಾಗೂ ಜನಸಾಮಾನ್ಯರಲ್ಲೂ ಈ ವಿಷಯದ ಬಗ್ಗೆ ಇರುವ ತೀವ್ರ ಆಸಕ್ತಿಯನ್ನು ಪ್ರತಿಬಿಂಬಿಸುತ್ತದೆ.

## ೨. ಮಾನವನ ವಿಶಿಷ್ಟತೆ

ನಾನು ಈ ವಿಷಯದ ಮೇಲೆ ಮಾತನಾಡುವಾಗ ಸರ್ವಾತೀತ ಸ್ಥಿತಿಗೆ ಒಯ್ಯುವ ಪ್ರಜ್ಞೆಯ ಅನುಭಾವಿಕ ಆಯಾಮವನ್ನು ಕುರಿತು ಮಾತ್ರ ಹೇಳುವುದಿಲ್ಲ ಅಥವಾ ಅದರೊಂದಿಗೆ ಪ್ರಾರಂಭಿಸುವುದೂ ಇಲ್ಲ. ಪ್ರಜ್ಞೆಗೆ ಸಂಬಂಧಿಸಿದ ವಿಷಯದ ಸಮಗ್ರ ಅಧ್ಯಯನವು ಇಂದ್ರಿಯಾತೀತ ಮತ್ತು ಸಮಾಜಾತೀತ ಅನುಭವವನ್ನು ಒಳಗೊಳ್ಳುವುದು ಮಾತ್ರವಲ್ಲದೆ, ಮಾನವನ ವಿಷಯ ಜಗತ್ತಿನ ಅನುಭವವನ್ನೂ ಇತರ ಮಾನವರೊಡನೆ ಅವನ ಸಂಬಂಧವನ್ನೂ ಒಳಗೊಳ್ಳುತ್ತದೆ.

ವಿಕಾಸವು ಮಾನವನ ಹಂತಕ್ಕೆ ಏರಿದಂತೆಲ್ಲಾ ಪರಸ್ಪರ ಮಾನವ ಸಂಬಂಧವೂ ಉನ್ನತ ಮಟ್ಟಕ್ಕೆ ಏರುತ್ತದೆ. ಇದು ಪ್ರಾಣಿಗಳಲ್ಲಿರುವ ಪರಸ್ಪರ ಸಂಬಂಧದಂತಲ್ಲ. ಮಾನವನು ಪ್ರಜ್ಞಾಪೂರ್ವಕವಾಗಿ ಇತರರೊಡನೆ ವ್ಯವಹರಿಸುತ್ತ ಬಂದು ಸಮಾಜಬದ್ಧ ಜೀವಿಯಾಗಿದ್ದಾನೆ. ಇಲ್ಲಿ ಅವನ ಪ್ರಜ್ಞೆಯು ಇತರ ಮಾನವ ಪ್ರಜ್ಞೆಯೊಂದಿಗೆ ಪ್ರತಿಸ್ಪಂದಿಸಬೇಕಾಗುತ್ತದೆ. ಈ ಪರಸ್ಪರ ಮಾನವ ಸಂಬಂಧದ ಮೂಲಕ ಮಾನವನು ತನ್ನ ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೆ ಏರಿಸುವ ಪ್ರಥಮ ತರಬೇತಿಯನ್ನು ಪಡೆಯುತ್ತಾನೆ. ಇದರ ಮೂಲಕ ಸುಖಪ್ರದವೂ ಫಲಪ್ರದವೂ ಆದ ಮಾನವೀಯ ಸಂಬಂಧಗಳನ್ನು ಅವನು ಸಾಧಿಸುತ್ತಾನೆ. ಮಾನವ ಪ್ರಜ್ಞೆಯನ್ನು ಉನ್ನತ ಸ್ತರಕ್ಕೆ ಏರಿಸದೆ ಅಂತಹ ಸುಖಪ್ರದ

---

*ಈ ಲೇಖನವು ಸ್ವಾಮೀಜಿಯವರು ೧೯೮೨, ಮೇ ೧೪ ರಂದು ಹಾಲೆಂಡ್‌ನ ವೆಲ್‌ಧೋವೆನ್‌ನಲ್ಲಿ ನೀಡಿದ ಉಪನ್ಯಾಸವನ್ನು ಆಧರಿಸಿದೆ. ಪ್ರೊಫೆಸರ್ ವಾನ್ ಪ್ರಾಗ್‌ರವರ ಸ್ಕೂಲ್ ಆಫ್ ಓರಿಯಂಟಲ್ ಸ್ಟಡೀಸ್ ಎಂಬ ಸಂಸ್ಥೆ ಏರ್ಪಡಿಸಿದ್ದ "ಸ್ಪಿರಿಚುಯಲ್ ಕರೆಂಟ್ಸ್ ಆಫ್ ಇಂಡಿಯ" ಎಂಬ ವಿಷಯದ ಮೇಲೆ ನಡೆದ ವಿಚಾರಗೋಷ್ಠಿಯಲ್ಲಿ ಈ ಉಪನ್ಯಾಸವನ್ನು ನೀಡಲಾಯಿತು.

ಸಂಬಂಧ ಸಾಧ್ಯವಿಲ್ಲ. ವ್ಯಕ್ತಿಯನ್ನು ಈ ರೀತಿ ಮಾನವೀಯಗೊಳಿಸುವುದು ಶಿಕ್ಷಣದ ಒಂದು ಮುಖ್ಯ ಅಂಶ.

ಪ್ರಜ್ಞೆಯನ್ನು ಕುರಿತು ಮಾತನಾಡುವಾಗ ಇದೊಂದು ವಿಶಿಷ್ಟ ಅಂಶ ಎಂಬುದನ್ನು ನಾವು ತಿಳಿದಿರಬೇಕು. ವಿಕಾಸದ ಮುನ್ನಡೆಯಲ್ಲಿ ಜೀವಕೋಶದ ಆವಿರ್ಭಾವದೊಂದಿಗೆ ಇದು ಕಾಣಿಸಿಕೊಳ್ಳುತ್ತದೆ. ವಿಶ್ವವಿಕಾಸದ ಹಿಂದಿನ ಯಾವ ಹಂತದಲ್ಲಿಯೂ ಇದು ಕಾಣಸಿಗುವುದಿಲ್ಲ. ನೆಬುಲಾ, ನಕ್ಷತ್ರಗಳು ಅಥವಾ ಸೂರ್ಯ ಇವಾವುವೂ ಈ ಪ್ರಜ್ಞೆ ಅಥವಾ ಚಿದಂಶವನ್ನು ವ್ಯಕ್ತಪಡಿಸುವುದಿಲ್ಲ. ಇವು ಕೇವಲ ಸತ್ ಅಂಶವನ್ನು ಮಾತ್ರ ವ್ಯಕ್ತಪಡಿಸುತ್ತವೆ. ವಿಶ್ವವಿಕಾಸವು ಜೀವವಿಕಾಸದ ಹಂತವನ್ನು ತಲುಪಿದಾಗ ಮಾತ್ರ ಈ ಚಿದಂಶವು ಬೆಳಕಿಗೆ ಬರುವುದನ್ನು ಕಾಣುತ್ತೇವೆ. ಜೀವಕೋಶಗಳಲ್ಲಿ ಸತ್ ಮತ್ತು ಚಿತ್ ಎರಡೂ ಅಂಶಗಳಿವೆ. ಹೊರಗಿನ ವಾತಾವರಣದ ಒಂದು ಅಸ್ಪಷ್ಟ ಪ್ರಜ್ಞೆ, ಜೀವಕೋಶಗಳಿರುತ್ತವೆ. ಜೀವಶಾಸ್ತ್ರವು ಜೀವಕೋಶದ ಈ ವಿಶಿಷ್ಟ ಗುಣವನ್ನು ವಿಕಾಸದಲ್ಲಿ ಒಂದು ಅಭೂತಪೂರ್ವ ಘಟನೆ ಎಂದು ಪರಿಗಣಿಸುತ್ತದೆ. ಈ ಸ್ಥಿತಿಯಲ್ಲಿ ಭೌತವಸ್ತುವು ತಾನು ಬಹುವಾಗುವ ಸಾಮರ್ಥ್ಯವನ್ನು ಪಡೆಯುತ್ತದೆ. ಈ ಸಾಮರ್ಥ್ಯವೇ ಅದಕ್ಕೆ ವಿಶಿಷ್ಟತೆಯನ್ನು ನೀಡುವುದು. ವಿಕಾಸದ ಮುಂದಿನ ಹಂತಗಳುದ್ದಕ್ಕೂ ಈ ವಿಶಿಷ್ಟತೆಯು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಅಭಿವ್ಯಕ್ತಿಗೊಳ್ಳುವುದನ್ನು ಕಾಣುತ್ತೇವೆ. ಈ ಪ್ರಜ್ಞಾ ವಿಕಾಸವು ಜೀವಕೋಶದಿಂದ ಹಿಡಿದು ಮಾನವನವರೆಗೆ ಉನ್ನತೋನ್ನತ ಸ್ಥಿತಿಗೆ ಏರುವುದನ್ನು ನಾವು ಗಮನಿಸಬಹುದು.

ಆದರೆ ಮಾನವನ ಹಂತದಲ್ಲಿ ಈ ಪ್ರಜ್ಞೆಯು ಒಂದು ಹೊಸ ಆಯಾಮವನ್ನು ಪಡೆಯುತ್ತದೆ-ಅನಾತ್ಮ ಅಥವಾ ಬಾಹ್ಯ ವಿಷಯಗಳ ಪ್ರಜ್ಞೆಯ ಜತೆಗೆ ಆತ್ಮ-ಪ್ರಜ್ಞೆಯೆಂಬ ಅತ್ಯಂತ ವಿಶಿಷ್ಟ ಆಯಾಮವನ್ನು ಅದು ಪಡೆಯುತ್ತದೆ. ಎಲ್ಲಾ ಮಾನವೇತರ ಜೀವವರ್ಗಗಳೂ ವಿಷಯ ಅಥವಾ ಬಾಹ್ಯ ಜಗತ್ತಿನ ಪ್ರಜ್ಞೆಯನ್ನು ಹೊದಿರುತ್ತವೆ. ಮಾನವನು ಮಾತ್ರ ಇದರ ಜೊತೆಗೆ ವಿಷಯಿ ಅಥವಾ ಆತ್ಮ ಪ್ರಜ್ಞೆಯನ್ನೂ ಪಡೆದಿರುತ್ತಾನೆ. ಈ ಸಾಮರ್ಥ್ಯದಿಂದ ಅವನು ತನ್ನ ಪ್ರಜ್ಞೆಯನ್ನು ಉನ್ನತ ಸ್ತರಕ್ಕೆ ಏರಿಸುವ ಸವಾಲನ್ನು ಎದುರಿಸುವಂತಾಗಿದೆ. ಈ ಸವಾಲನ್ನು ಪ್ರಜ್ಞಾಪೂರ್ವಕವಾಗಿ ಎದುರಿಸುವ ಸಲುವಾಗಿ ಪ್ರಕೃತಿಯು, ತನ್ನ ಅತ್ಯುನ್ನತ ಸೃಷ್ಟಿಯಾದ ಮಾನವನಿಗೆ, ಜೈವಿಕ ಸಾಮರ್ಥ್ಯವನ್ನು ನೀಡಿರುವುದು. ಮಾನವೇತರ ಜೀವಿಗಳಾವುವೂ ತಮ್ಮ ಪ್ರಜ್ಞೆಯನ್ನು ಉನ್ನತಿಗೇರಿಸುವ ಈ ಕಾರ್ಯವನ್ನು ಎದುರಿಸಬೇಕಾಗಿಲ್ಲ. ಅವುಗಳ ಜೀವನ ಭೌತಿಕ ತೃಪ್ತಿ, ಭೌತಿಕ ಉಳಿವು ಮತ್ತು ತಮ್ಮ ಸಂಖ್ಯಾಭಿವೃದ್ಧಿ—ಇಷ್ಟಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಪ್ರಕೃತಿಯು ಅವುಗಳ ದೇಹರಚನೆಯನ್ನೇ ಆ ರೀತಿ ಮಾಡಿರುತ್ತದೆ. ಮಾನವನ ದೇಹರಚನೆಯೂ ಹೀಗೆಯೇ ಆಗಿದ್ದರೂ, ಈ ಜೈವಿಕ ಮಿತಿಯನ್ನು ಮೀರಿಹೋಗುವ ಸಾಮರ್ಥ್ಯವನ್ನು ಪ್ರಕೃತಿ ಅವನಿಗೆ ನೀಡಿರುವುದು. ಇದೇ ಸ್ವಾತಂತ್ರ್ಯ ಎಂಬ ಮೌಲ್ಯ. ಇದು ವಾತಾವರಣವನ್ನೇ ಬದಲಾಯಿಸುವ ಅಥವಾ ತನ್ನನ್ನೇ ಬದಲಾಯಿಸುವ ಸ್ವಾತಂತ್ರ್ಯ. ಮಾನವನ ಹಂತದಲ್ಲಿ ಈ ಸ್ವಾತಂತ್ರ್ಯದ ಅಂಕುರಾರ್ಪಣವಾಗುತ್ತದೆ. ಈ ಸ್ವಾತಂತ್ರ್ಯವು ತನ್ನ ಪ್ರಜ್ಞೆಯನ್ನು ಶಿಸ್ತುಗೊಳಿಸಿ, ಅದನ್ನು ಉನ್ನತ ಅಭಿವ್ಯಕ್ತಿಯ ಮಟ್ಟಕ್ಕೆ ಏರಿಸಿ, ಈ ಸ್ವಾತಂತ್ರ್ಯದ ವ್ಯಾಪ್ತಿಯನ್ನು ವಿಸ್ತಾರಗೊಳಿಸುವ ಅತ್ಯಂತ ಗುರುತರ ಜವಾಬ್ದಾರಿಯನ್ನು ಅವನಿಗೆ ನೀಡಿರುವುದು.

ಹತ್ತೊಂಬತ್ತನೆ ಶತಮಾನದ ಜೀವಶಾಸ್ತ್ರವು ವಿಕಾಸದಲ್ಲಿ ಮಾನವನ ಈ ವಿಶಿಷ್ಟತೆಯನ್ನು ಅರ್ಥಮಾಡಿಕೊಳ್ಳಲಿಲ್ಲ. ಕ್ರೈಸ್ತ ಧರ್ಮದ ದೇವತಾಶಾಸ್ತ್ರದ ದೃಷ್ಟಿಯಲ್ಲಿ ಭಗವಂತನ ವಿಶೇಷ ಸೃಷ್ಟಿಯಾಧ ಮಾನವನನ್ನು ಸಾಮಾನ್ಯ ಮಟ್ಟಕ್ಕಿಳಿಸುವುದೇ ಆ ಶತಮಾನದ ಜೀವಶಾಸ್ತ್ರದ ಕಾರ್ಯವಾಗಿತ್ತು. ಆದರೆ ಇಪ್ಪತ್ತನೆ ಶತಮಾನದ ಜೀವಶಾಸ್ತ್ರವು ಹೊಸ ವೈಜ್ಞಾನಿಕ ದೃಷ್ಟಿಯಿಂದ ಮಾನವನ ವಿಶಿಷ್ಟತೆಯನ್ನು ಪ್ರತಿಪಾದಿಸುತ್ತದೆ. ಈ ವಿಷಯವನ್ನು ಕುರಿತಾಗಿ ಪ್ರಸ್ತಾಪಿಸುತ್ತ ಜೂಲಿಯನ್ ಹಕ್ಸ್ಲೀ ಒಂದಲ್ಲ ಅನೇಕ ರೀತಿಯಲ್ಲಿ ಮಾನವನು ವಿಶಿಷ್ಟನು ಎಂದು ಹೇಳುತ್ತಾರೆ. *The Uniqueness of Man'* ಎಂಬ ತಮ್ಮ ಪುಸ್ತಕದಲ್ಲಿ (ಪುಟ ೨೨) ಅವರು ಹೇಳುತ್ತಾರೆ :

*ಮಾನವನ ಕೆಲವು ವಿಶಿಷ್ಟ ಲಕ್ಷಣಗಳನ್ನು ಮಾನಸಿಕ ಮತ್ತು ಸಾಮಾಜಿಕ ಎಂದು ಕರೆಯಬಹುದೇ ಹೊರತು ಸಂಕುಚಿತವಾಗಿ ಜೈವಿಕ ಎನ್ನಲಾಗುವುದಿಲ್ಲ. ಈ ವಿಶಿಷ್ಟತೆಯು ಈ ಕೆಳಗಿನ ಲಕ್ಷಣಗಳಲ್ಲಿ ಯಾವುದಾದರೊಂದರಿಂದ ಉದ್ಭವಿಸುತ್ತದೆ. ಮೊದಲನೆಯದು, ಸೂಕ್ಷ್ಮ ಮತ್ತು ಸಾಮಾನ್ಯ ಆಲೋಚನಾ ಸಾಮರ್ಥ್ಯ. ಎರಡನೆಯದು, ತನ್ನ ಮಾನಸಿಕ ಕ್ರಿಯೆಗಳನ್ನು ಸಾಪೇಕ್ಷವಾಗಿ ಒಂದುಗೂಡಿಸುವ ಶಕ್ತಿ. ಇದಕ್ಕೆ ವಿರುದ್ಧವಾಗಿ ಪ್ರಾಣಿಗಳ ಮನಸ್ಸು ಮತ್ತು ವರ್ತನೆ ಹೆಚ್ಚು ಪ್ರತ್ಯೇಕಗೊಂಡಿರುತ್ತವೆ. ಮೂರನೆಯದು, ಕ್ರಮಬದ್ಧ ಸಂಪ್ರದಾಯ ಸಂಸ್ಕೃತಿಯನ್ನು ಆಧರಿಸಿದ ಮತ್ತು ತಮ್ಮದೇ ನೈರಂತರ್ಯವನ್ನು ಪಡೆದಿರುವ ಜನಾಂಗ, ದೇಶ, ಪಕ್ಷ, ಮತ ಮುಂತಾದ ಸಾಮಾಜಿಕ ಘಟಕಗಳು.*

ಅವರು ಮುಂದುವರಿದು ಹೇಳುತ್ತಾರೆ (ಪುಟ ೨೯):

*ಮಾನವನ ಕ್ರಿಯೆಗಳಲ್ಲಿ ವಿಶಿಷ್ಟವಲ್ಲದುದನ್ನು ಕಂಡುಹಿಡಿಯುವುದೇ ಕಷ್ಟ. ಮೂಲಭೂತ ಜೈವಿಕ ಕ್ರಿಯೆಗಳಾದ ಆಹಾರ ನಿದ್ರೆ ಮೈಥುನಗಳನ್ನೂ ವಿಶಿಷ್ಟ ಕ್ರಿಯೆಗಳನ್ನಾಗಿ ಅವನು ಮಾರ್ಪಡಿಸಿರುವನು.*

ಮಾನವನ ಇನ್ನೂ ಉನ್ನತ ಆಯಾಮವನ್ನು ಸೂಚಿಸುತ್ತ ಅವರು ಹೇಳುತ್ತಾರೆ. (ಪುಟ ೩೧)

*ಈಗ ಅವನು ಭಾವಿಸುವುದಕ್ಕಿಂತಲೂ ಹೆಚ್ಚಿನ ವಿಶಿಷ್ಟತೆಯನ್ನು ಮಾನವನು ಮುಂದೆ ಪಡೆಯಬಹುದು*

ಮಾನವನ ಪ್ರಜ್ಞೆಯು ಬಾಹ್ಯಪ್ರಪಂಚದೆಡೆಗೆ ಪ್ರವಹಿಸುವುದು ಮಾತ್ರವಲ್ಲದೆ, ಸ್ವಮುಖಿ ವಾಗಿಯೂ ಪ್ರವಹಿಸುತ್ತವೆ. ಆಗ ಆತ್ಮ-ಪ್ರಜ್ಞೆ ಅಥವಾ ಆತ್ಮ-ಜ್ಞಾನ ಉಂಟಾಗುತ್ತದೆ. ಈ ವೈಶಿಷ್ಟ್ಯ ವನ್ನು ಜೀವಶಾಸ್ತ್ರವು ವಿಕಾಸದಲ್ಲಿ ಎರಡನೆಯ ಅಭೂತಪೂರ್ವ ಘಟನೆ ಎಂದು ಪರಿಗಣಿಸುತ್ತದೆ. ಈ ಸಾಮರ್ಥ್ಯದಿಂದಲೇ ಸಂಸ್ಕೃತಿಯ ಅಭಿವೃದ್ಧಿಯಾಗುವುದು. ಈ ಆತ್ಮ-ಪ್ರಜ್ಞೆಯಿಂದಾಗಿ ವಿಚಾರ, ಇಚ್ಛೆ, ಕಲ್ಪನೆ, ನಿರ್ಣಯ ಭಾಷಾಸಂಪರ್ಕ ಮುಂತಾದ ಅನೇಕ ಸಾಮರ್ಥ್ಯಗಳು ಮನುಷ್ಯನಿಗೆ ಲಭ್ಯವಾದುವು. ಇವುಗಳಿಂದಾಗಿಯೇ ಅವನು ಪ್ರಕೃತಿಯಲ್ಲಿ ಪ್ರಭುತ್ವವನ್ನು ಸ್ಥಾಪಿಸಲು ಸಾಧ್ಯವಾಗಿದೆ. ಈ ವಿಶಿಷ್ಟ ಶಕ್ತಿಗಳನ್ನು ಯೋಗ್ಯ ರೀತಿಯಲ್ಲಿ ಬಳಸಿಕೊಳ್ಳುವುದಕ್ಕೆ ಶಿಕ್ಷಣದ ಆವಶ್ಯಕತೆಯಿದೆ.

## ೩. ಲೋಕ ಮತ್ತು ಲೋಕೋತ್ತರ

ಈ ಶಿಕ್ಷಣವು ಸಮಾಜದಲ್ಲಿ ಇತರರೊಡನೆ ಕಲೆತು ಜೀವಿಸುವಾಗ ಮಾನವನಿಗೆ ದೊರೆಯುತ್ತದೆ. ಈ ಶಿಕ್ಷಣವು ಅವನಿಗೆ ತನ್ನ ಪ್ರಜ್ಞೆಯಲ್ಲಿ ಇತರರಿಗೂ ಒಂದು ಸ್ಥಾನವನ್ನು ಕೊಟ್ಟು ಅವರ ಬಗ್ಗೆ ಚಿಂತಿಸುವ, ಅವರಿಗೆ ಸಹಾನುಭೂತಿ ತೋರಿಸುವ ಸಾಮರ್ಥ್ಯವನ್ನು ನೀಡುತ್ತದೆ. ಜೈವಿಕ ಮಿತಿಗೆ ಒಳಪಟ್ಟ, ಶಾರೀರಿಕ ಆವಶ್ಯಕತೆಗಳಿಂದ ಸಂಪೂರ್ಣ ನಿಯಂತ್ರಿತವಾದ ವ್ಯಕ್ತಿಯಂತೆ ಮಾನವನು ತನ್ನ ಜೀವನವನ್ನು ಪ್ರಾರಂಭಿಸುತ್ತಾನೆ. ಆದರೆ ಅವನ ಹುಟ್ಟಿನಿಂದಲೂ ಪ್ರಾರಂಭವಾಗುವ ಶಿಕ್ಷಣವು ಹಂತಹಂತವಾಗಿ ಈ ಮಿತಿಗಳನ್ನು ಮೀರಿ ಬೆಳೆಯುವುದಕ್ಕೆ ಸಹಾಯ ಮಾಡುತ್ತದೆ. ಅವನು ನಿಧಾನವಾಗಿ ಇತರರನ್ನು ಪ್ರೀತಿಸುವ, ಇತರರು ತನ್ನನ್ನು ಪ್ರೀತಿಸುವಂತೆ ಮಾಡುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಪ್ರಜ್ಞೆಯು ಬೆಳವಣಿಗೆಯ ಈ ಹಂತವನ್ನು ತಲುಪಿದಾಗ ಸಂಪೂರ್ಣ ಜೈವಿಕ ನಿಯಂತ್ರಣಕ್ಕೊಳಪಟ್ಟ ವಿಷಯವಾಗಿ ಉಳಿಯುವುದಿಲ್ಲ, ಬದಲು ಅದು ವಿಷಯಿಯಾಗಿ ತನ್ನ ಅನಂತ ಸಾಧ್ಯತೆಗಳನ್ನು—ಅಭಿವ್ಯಕ್ತಪಡಿಸುವ ದೀರ್ಘಪ್ರಯಾಣವನ್ನು ಪ್ರಾರಂಭಿಸುತ್ತದೆ. ಈ ಸಾಧ್ಯತೆಗಳನ್ನು ಅಭಿವ್ಯಕ್ತಗೊಳಿಸಲು ಸಹಾಯಮಾಡುವುದೇ ಶಿಕ್ಷಣದ ಮುಖ್ಯ ಗುರಿ. ಈ ಸಾಧ್ಯತೆ ಗಳು ಪ್ರತ್ಯೇಕವಾದ ಆದರೆ ಸಂಪೂರ್ಣ ಬೇರೆಯಲ್ಲದ ಎರಡು ಆಧ್ಯಾತ್ಮಿಕ ಆಯಾಮಗಳನ್ನು

ಹೊಂದಿವೆ : ಮೊದಲನೆಯದು ಲೌಕಿಕ ಮತ್ತು ಸಾಮಾಜಿಕವಾದುದು ; ಎರಡನೆಯದು, ಲೋಕಾತೀತ ಮತ್ತು ಸಮಾಜಾತೀತ.

ಪುರಾತನ ಉಪನಿಷತ್ ಋಷಿಗಳು ಮತ್ತು ಬುದ್ಧ ಪ್ರಜ್ಞೆಯ ಬೆಳವಣಿಗೆಯನ್ನು ಲೋಕ ಮತ್ತು ಲೋಕೋತ್ತರ ಎಂದು ಎರಡು ಹಂತಗಳಾಗಿ ವಿಭಾಗಿಸುತ್ತಾರೆ. ಮಾನವಾಭಿವೃದ್ಧಿಯ ವಿಜ್ಞಾನದಲ್ಲಿ ಇವು ಪಾರಿಭಾಷಿಕ ಶಬ್ದಗಳು. ಲೋಕವೆಂದರೆ ಇಂದ್ರಿಯ ಜಗತ್ತು. ಮಾನವಾಭಿವೃದ್ಧಿಯ ವೈಯಕ್ತಿಕ ಹಂತದಲ್ಲಿ ಪ್ರಜ್ಞೆಯು ಲೋಕಾನುಭವಕ್ಕೆ ಸೀಮಿತವಾಗಿರುತ್ತದೆ. ಇಲ್ಲಿ ಪ್ರಜ್ಞೆಯ ಬೆಳವಣಿಗೆಯು ಪ್ರಾಕೃತಿಕ ಮತ್ತು ಸಾಮಾಜಿಕ ವಾತಾವರಣದೊಂದಿಗೆ ಪ್ರತಿಸ್ಪಂದಿಸುವುದರ ಮೂಲಕ ಆಗುತ್ತದೆ. ವೈಯಕ್ತಿಕ ಹಂತದಲ್ಲಿ ಸ್ವಲ್ಪಮಟ್ಟಿಗೆ ಅಂತರ್ಮುಖಿತ್ವವೂ ಇರುತ್ತದೆ. ಇದರ ಪರಿಣಾಮವಾಗಿ ಸಮಾಜದೊಡನೆ ಹೆಚ್ಚು ಮಾನವೀಯತೆಯಿಂದ ಪ್ರತಿಸ್ಪಂದಿಸಲು ಸಾಧ್ಯವಾಗುತ್ತದೆ. ಲೋಕಾನುಭವದ ಈ ಎರಡನೆಯ ಹಂತದಲ್ಲಿ ದೃಢವಾಗಿ ನೆಲೆನಿಂತಾಗ ವ್ಯಕ್ತಿಯ ನೈತಿಕ ಪ್ರಜ್ಞೆ ಮತ್ತು ಸೂಕ್ಷ್ಮತೆ ತೀವ್ರವಾಗುತ್ತದೆ. ಈಗ ಪ್ರಜ್ಞೆಯು ಲೋಕೋತ್ತರ ಹಂತವನ್ನು ತಲುಪುವ ಸಾಮರ್ಥ್ಯವನ್ನೂ ಸ್ಫೂರ್ತಿಯನ್ನೂ ಪಡೆಯುತ್ತದೆ. ಇದು ಸಾಧ್ಯವಾಗಬೇಕಾದರೆ ಲೋಕಾನುಭವದ ಹಂತದಲ್ಲಿ ಅಸಮರ್ಪಕ ತಾತ್ತ್ವಿಕ ಪ್ರಭಾವಗಳಿಗೆ ಒಳಗಾಗಿ ಪ್ರಜ್ಞೆಯ ವಿಕಾಸ ಕುಂಠಿತವಾಗಕೂಡದು.

ಲೋಕೋತ್ತರವೆಂದರೆ ಇಂದ್ರಿಯಾತೀತ. ಆಂಗ್ಲಭಾಷೆಯ Transcendental ಶಬ್ದವು ಇದರ ಪರ್ಯಾಯ ಪದ ಎನ್ನಬಹುದು. ಲೌಕಿಕ ಹಂತದ ಆವಶ್ಯಕವಾದ ನೈತಿಕ ಪರಿಪೂರ್ಣತೆಯನ್ನು ಪಡೆದ ಮೇಲೆ ಲೋಕೋತ್ತರ ಹಂತವನ್ನು ಸೇರುವ ಸಾಮರ್ಥ್ಯ ಬರುತ್ತದೆ. ಆದ್ದರಿಂದಲೇ ಉನ್ನತ ಆಧ್ಯಾತ್ಮಿಕ ಬೆಳವಣಿಗೆಗೆ ನೈತಿಕ ತಳಹದಿ ಆವಶ್ಯಕವೆಂದು ಪ್ರಪಂಚದ ಧರ್ಮಗಳೆಲ್ಲವೂ ಸಾರುತ್ತವೆ. ಉನ್ನತ ಆಧ್ಯಾತ್ಮಿಕ ಅನುಭೂತಿಗಳಾದ ಸಮಾಧಿ ಮತ್ತು ಪ್ರಜ್ಞಾಸ್ಥಿತಿಗಳನ್ನು ಮುಟ್ಟುವುದಕ್ಕೆ ಶೀಲವೇ ತಳಹದಿ ಎಂದು ವೇದಾಂತ ಮತ್ತು ಬೌದ್ಧ ಸಿದ್ಧಾಂತಗಳು ಹೇಳುತ್ತವೆ.

### ೪. ವೈಯಕ್ತಿಕತೆಯಿಂದ ಮಾನವೀಯತೆಯೆಡೆಗೆ

ಭಾರತದ ಪುರಾತನ ಶ್ರೇಷ್ಠ ತತ್ತ್ವವಾದ ವೇದಾಂತವು ಸಮಗ್ರ ಮಾನವಾಭಿವೃದ್ಧಿಯನ್ನು ನೋಡುವ ದೃಷ್ಟಿ ಇದು. ಮಾನವಾಭಿವೃದ್ಧಿಯ ಪ್ರಥಮ ಆವಿರ್ಭಾವವು ಲೌಕಿಕ ಕ್ಷೇತ್ರದಲ್ಲಿ ಆಗಬೇಕು.

ಮಾನವನು ಪ್ರಾಕೃತಿಕ ಮತ್ತು ಸಾಮಾಜಿಕ ಎಂಬ ಎರಡು ವಾತಾವರಣಗಳಿಂದ ಸುತ್ತುವರಿದಿರುವನು. ಪ್ರಾಕೃತಿಕ ವಾತಾವರಣವನ್ನು ತನಗೆ ಸುಖವನ್ನೂ ತೃಪ್ತಿಯನ್ನೂ ನೀಡುವ ವಸ್ತುಗಳಾಗಿ ಉಪಯೋಗಿಸುತ್ತಾನೆ. ಗಾಳಿ, ನೀರು, ಬೆಳಕು, ನದಿ, ಮರಗಳು, ಮೇಜು, ಕುರ್ಚಿ, ಮನೆ, ಪ್ರಾಣಿ ಇತ್ಯಾದಿಗಳು ಮಾನವನು ತನ್ನ ತೃಪ್ತಿಗೆ ಮತ್ತು ಬೆಳವಣಿಗೆಗೆ ಬಳಸಿಕೊಳ್ಳುವ ಪ್ರಾಕೃತಿಕ ವಸ್ತುಗಳ ವರ್ಗಕ್ಕೆ ಸೇರುತ್ತವೆ. ಇವೆಲ್ಲ ಅವನ ಬಳಕೆಯ ವಸ್ತುಗಳು. ಇವುಗಳನ್ನು ಅತಿಯಾಗಿ ಬಳಸಿ ವಾತಾವರಣದ ಸಮತೋಲನವನ್ನು ಕೆಡಿಸದಿದ್ದರೆ, ಮಾನವನು ಇವುಗಳನ್ನು ತನಗಾಗಿ ಉಪಯೋಗಿಸುವುದು ತಪ್ಪೇನಿಲ್ಲ. ಆದರೆ ಪ್ರಾರಂಭದ ಹಂತದಲ್ಲಿ ವ್ಯಕ್ತಿಯು ಸಾಮಾಜಿಕ ವಾತಾವರಣವಾದ ಇತರ ಮಾನವರನ್ನೂ ತನ್ನ ಬಳಕೆಯ ವಸ್ತುಗಳಾಗಿ ಪರಿಗಣಿಸುತ್ತಾನೆ. ತನ್ನ ಮಡದಿ, ಮಕ್ಕಳು, ಆಳು ನೆರೆಹೊರೆಯವರೆಲ್ಲರನ್ನೂ ತನ್ನ ಸುಖಕ್ಕಾಗಿ, ತನ್ನ ತೃಪ್ತಿಗಾಗಿ ಉಪಯೋಗಿಸಿಕೊಳ್ಳುತ್ತಾನೆ. ಅವರೆಲ್ಲರೂ ಅವನ ಭೋಗವಸ್ತುಗಳಾಗುತ್ತಾರೆ. ಗುಲಾಮಗಿರಿ ಮತ್ತು ಎಲ್ಲ ಬಗೆಯ ಮಾನವ ಶೋಷಣೆಗಳಿಗೂ ಈ ಪ್ರಜ್ಞಾಸ್ಥಿತಿಯೇ ಕಾರಣ. ಇತರ ಮಾನವರನ್ನು ತನ್ನ ಭೋಗವಸ್ತುಗಳಾಗಿ ಪರಿಗಣಿಸದೆ ತನ್ನಂತೆಯೇ ವ್ಯಕ್ತಿಗಳೆಂದು ಪರಿಗಣಿಸುವಂತೆ ಮಾನವನಿಗೆ ತರಬೇತಿಯನ್ನು ನೀಡುವುದೇ ಲೌಕಿಕ ಶಿಕ್ಷಣದ ಉದ್ದೇಶ. ಈ ಹಂತದಲ್ಲಿ ಪ್ರಜ್ಞೆಯು ನೈತಿಕ ಹಂತಕ್ಕೆ ಏರಿ, ನೈತಿಕ ಭಾವದಿಂದ ಪರಿಪಕ್ವವಾಗುತ್ತದೆ. ಇದನ್ನು ಸಾಮಾಜಿಕ ವಸ್ತುವಿನಲ್ಲಿ ಒಂದು

ವ್ಯಕ್ತಿಯನ್ನು ಗುರುತಿಸುವ ಸಾಮರ್ಥ್ಯ ಎಂದು ವಿವರಿಸಬಹುದು. ಪ್ರಜ್ಞೆಯನ್ನು ಸ್ವಲ್ಪಮಟ್ಟಿಗಾದರೂ ನೈತಿಕ ಹಂತಕ್ಕೆ ಏರಿಸದೆ ಯಾವ ಸಮಾಜವೂ ಉಳಿಯಲಾರದು. ಭಾರತೀಯ ತತ್ವಶಾಸ್ತ್ರವು ಈ ನೈತಿಕ ಪ್ರಜ್ಞೆಯನ್ನು ಧರ್ಮ ಎಂದು ಕರೆಯುತ್ತಾರೆ. ಈ ಮೌಲ್ಯವು ಮನುಷ್ಯ ಮನುಷ್ಯನನ್ನು ಕೂಡಿಸಿ ಒಂದು ಸಮಾಜವು ರೂಪಿತವಾಗುವಂತೆ ಮಾಡುತ್ತದೆ. ಒಂದು ಕಟ್ಟಡ ನಿರ್ಮಾಣದಲ್ಲಿ ಇಟ್ಟಿಗೆಗಳನ್ನು ಒಂದುಗೂಡಿಸುವ ಸಿಮೆಂಟಿನಂತೆ ಇದು ಕೆಲಸಮಾಡುತ್ತದೆ. ಮಾನವರ ಕೇವಲ ಮಿಶ್ರಣದಿಂದ ಒಂದು ಸಮಾಜವಾಗುವುದಿಲ್ಲ. ಇಟ್ಟಿಗೆಗಳ ಸಂಗ್ರಹದಿಂದ ಕಟ್ಟಡ ನಿರ್ಮಾಣವಾಗುವುದಿಲ್ಲ. ಭಾರತೀಯ ಮಹಾಕಾವ್ಯ "ಮಹಾಭಾರತವು" ನೀಡುವ ಈ ಕೆಳಗಿನ ವಿವರಣೆ ಪ್ರಸಿದ್ಧವಾದುದು :

ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ ॥

*ಧರ್ಮವು ಪರಸ್ಪರ ಒಂದುಗೂಡಿಸುವುದರಿಂದ ಅದನ್ನು ಆ ಹೆಸರಿನಿಂದ ಕರೆಯಲಾಗಿದೆ. ಧರ್ಮವು ಪ್ರಜೆಗಳನ್ನು ಒಂದುಗೂಡಿಸುತ್ತದೆ.* (ಕರ್ಣಪರ್ವ ೮, ೪೫.೫೦)

ಇತರ ಮಾನವರನ್ನು ಕೇವಲ ವಸ್ತುಗಳಾಗಿ ಪರಿಗಣಿಸದೆ ವ್ಯಕ್ತಿಗಳಾಗಿ ಪರಿಗಣಿಸುವ ಸಾಮರ್ಥ್ಯವನ್ನು ಜನರೆಲ್ಲರೂ ಬೆಳೆಸಿಕೊಳ್ಳಬೇಕು. ಆಗ ಇಡೀ ಮಾನವಕೋಟಿಯು ನೈತಿಕ ಪ್ರಜ್ಞೆಯ ಮತ್ತು ಮಾನವೀಯ ಕಳಕಳಿಯ ಹಂತಕ್ಕೆ ಏರುತ್ತದೆ. ಇದರಿಂದ ಮಾನವ ವಿಕಾಸದಲ್ಲಿ ಒಂದು ಅದ್ಭುತ ಮುನ್ನಡೆಯನ್ನು ಸಾಧಿಸಿದಂತಾಗುತ್ತದೆ. ಮಾನವ ಹಂತದಲ್ಲಿ ವಿಕಾಸದ ಒಂದು ನಿಜವಾದ ಅರ್ಥವನ್ನು ಮತ್ತು ದಿಕ್ಕನ್ನು ನಾವು ಕಾಣುವುದು ಇಲ್ಲಿಯೇ.

ಹತ್ತೊಂಬತ್ತನೇ ಶತಮಾನದ ಜೀವಶಾಸ್ತ್ರದಂತಲ್ಲದೆ, ಇಪ್ಪತ್ತನೆ ಶತಮಾನದ ಜೀವಶಾಸ್ತ್ರವು ವಿಕಾಸದಲ್ಲಿ ಒಂದು ನೈತಿಕಾಂಶವನ್ನು ಗುರುತಿಸುತ್ತದೆ. ಜೈವಿಕ ಹಂತದಿಂದ ಆಧ್ಯಾತ್ಮಿಕ ಹಂತಕ್ಕೆ ಏರಿಸುವ ಈ ನೈತಿಕ ವಿಕಾಸವನ್ನು ಮನೋ-ಸಾಮಾಜಿಕ ವಿಕಾಸ ಎಂದು ಅದು ಕರೆಯುತ್ತದೆ. ಹತ್ತೊಂಬತ್ತನೆ ಶತಮಾನದ ಜೀವಶಾಸ್ತ್ರವು ಮಾನವ ಹಂತದ ವಿಕಾಸವನ್ನು ಇತರ ಪ್ರಾಣಿಗಳ ಹಂತದ ವಿಕಾಸದಂತೆಯೇ ಪರಿಗಣಿಸಿತು. ಪ್ರಾಣಿಗಳ ಹಂತದಲ್ಲಿ ಇಂದ್ರಿಯತೃಪ್ತಿ, ಸಂತತಿ ವೃದ್ಧಿ ಮತ್ತು ಜೀವಧಾರಣೆ—ಇವಿಷ್ಟೇ ಮುಖ್ಯ ಗುರಿಯಾಗಿರುತ್ತದೆ. ಇಂದಿನ ಜೀವಶಾಸ್ತ್ರವು, ಮನುಷ್ಯನ ಮಟ್ಟಿಗೆ ಹೇಳುವುದಾದರೆ, ಈ ಮೂರು ಗುರಿಗಳು ಗೌಣ ಎಂದು ಹೇಳುತ್ತದೆ. ಮಾನವ ಹಂತದಲ್ಲಿ ಬೇರೊಂದು ಅಂಶ ಪ್ರಧಾನವಾಗುತ್ತದೆ. ಜೈವಿಕ ಮಿತಿಗಳನ್ನು ಮೀರಿಹೋಗಿ ಸಾರ್ಥಕತೆಯನ್ನು ಪಡೆಯುವುದೇ ಆ ಪ್ರಧಾನ ಅಂಶ. ಜೈವಿಕ ನಿಯಂತ್ರಣಕ್ಕೆ ಬದ್ಧವಾದ ತನ್ನ ಪ್ರಜ್ಞೆಯನ್ನು ಉನ್ನತ ಸ್ತರಕ್ಕೆ ಏರಿಸುವ ಸಾಮರ್ಥ್ಯವನ್ನು ಪ್ರಕೃತಿಯು ಮಾನವನಿಗೆ ನೀಡಿರುವುದು. ಈ ಸಾಮರ್ಥ್ಯವನ್ನು ಉಪಯೋಗಿಸಿದಾಗಲೇ ತನ್ನೊಳಗಿರುವ ಅಪಾರ ಸಾಧ್ಯತೆಗಳ ಅರಿವು ಮಾನವನಿಗಾಗುತ್ತದೆ. ಮನೋ-ಸಾಮಾಜಿಕ ವಿಕಾಸವು ಈ ಸಾಧ್ಯತೆಗಳ ಅಭಿವ್ಯಕ್ತಿಯಲ್ಲಿ ಮೊಲನೆಯ ಹಂತ.

ಇಪ್ಪತ್ತನೆ ಶತಮಾನದ ಜೀವಶಾಸ್ತ್ರದಲ್ಲಿ ಇದು ಆಶಾಭಾವವನ್ನು ಹುಟ್ಟಿಸುವ ಅತ್ಯಂತ ಮುಖ್ಯ ಭಾವನೆಯಾಗಿದೆ. ಮಾನವನ ಮೆದುಳಿನಲ್ಲಿ ಪ್ರಕೃತಿಯು ಈ ಎಲ್ಲಾ ಸಾಮರ್ಥ್ಯಗಳನ್ನು ನೀಡಿರುವುದು. ತನ್ನ ಉಳಿವಿಗಾಗಿ ಹೊಸ ಅಂಗಗಳನ್ನು ನಿರ್ಮಿಸಲು ಅವನು ಪ್ರಕೃತಿಯನ್ನು ಅವಲಂಬಿಸಬೇಕಾಗಿಲ್ಲ. ತನಗೆ ಬೇಕಾದ ಯಾವುದೇ ಅಂಶಗಳನ್ನು ತನ್ನ ಹೊರಗೆ ನಿರ್ಮಿಸಲು ಮೆದುಳು ಅವನಿಗೆ ಸಹಾಯ ಮಾಡುತ್ತದೆ. ಅವನು ಪ್ರಕೃತಿಗಿಂತಲೂ ಶೀಘ್ರವಾಗಿ ಹಾಗೂ ಉತ್ತಮವಾಗಿ ಅವನ್ನು ನಿರ್ಮಿಸಬಲ್ಲ. ಈ ಅಪೂರ್ವ ಅಂಗವಾದ ಮಿದುಳನ್ನು ಕೇವಲ ತನ್ನ ಉಳಿವಿಗಾಗಿ ಅಥವಾ ಇಂದ್ರಿಯ ತೃಪ್ತಿಗಾಗಿ ಮಾತ್ರವಲ್ಲದೆ ಉನ್ನತ ಉದ್ದೇಶಗಳಿಗಾಗಿ ಉಪಯೋಗಿಸಬೇಕೆಂಬುದು ಪ್ರಕೃತಿಯ ಉದ್ದೇಶ. ಈ ಉನ್ನತ ಉದ್ದೇಶಗಳು ಯಾವುವು ? ಅವು ವಿವಿಧ ಮನೋ-ಸಾಮಾಜಿಕ ವಿಕಾಸವೆಂದು ಜೀವಶಾಸ್ತ್ರ

ಹೇಳುತ್ತದೆ. ಈ ಅಭಿಪ್ರಾಯದಿಂದಾಗಿ ಜೀವಶಾಸ್ತ್ರವು ಪ್ರಧಾನ ವಿಶ್ವಧರ್ಮಗಳ ನೈತಿಕ ಮತ್ತು ಆಧ್ಯಾತ್ಮಿಕ ಭಾವನೆಗಳ ಸಮೀಪಕ್ಕೆ ಬರುವಂತಾಗಿದೆ. ಭೌತಿಕ ಮತ್ತು ಮಾನಸಿಕ ಬೆಳವಣಿಗೆಯ ಜೊತೆಗೆ ಮಾನವನು ಆಧ್ಯಾತ್ಮಿಕ ಬೆಳವಣಿಗೆಯನ್ನೂ ಹೊಂದಿರುವನು. ಅವನು ಮಾತ್ರ ಈ ಸಾಧ್ಯತೆಯನ್ನು ಪಡೆದಿರುವುದು. ಪ್ರಜ್ಞೆಯನ್ನು ಉನ್ನತೋನ್ನತ ಮಟ್ಟಕ್ಕೆ ಏರಿಸುವ ಈ ಪ್ರಕ್ರಿಯೆಯನ್ನೇ ವೇದಾಂತವು ಮಾನವನ ಆಧ್ಯಾತ್ಮಿಕ ಬೆಳವಣಿಗೆ ಮತ್ತು ಸಫಲತೆ ಅಥವಾ ಸಾರ್ಥಕತೆ ಎಂದು ಕರೆಯುತ್ತದೆ.

ಈ ಆಧ್ಯಾತ್ಮಿಕ ಬೆಳವಣಿಗೆಯ ಮೂಲಕ ವ್ಯಕ್ತಿಯಲ್ಲಿ ಅದ್ಭುತ ಆಂತರಿಕ ಪರಿವರ್ತನೆಯುಂಟಾಗುತ್ತದೆ. ಪ್ರಾರಂಭದಲ್ಲಿ ಅವನ ಗಮನವೆಲ್ಲ ಶರೀರದ ಕಡೆಗೇ ಇರುತ್ತದೆ. ಆಧ್ಯಾತ್ಮಿಕ ಬೆಳವಣಿಗೆ ಅಥವಾ ಮನೋ-ಸಾಮಾಜಿಕ ವಿಕಾಸದಿಂದ ಅವನು ತನ್ನ ಶಾರೀರಿಕ ಮಿತಿಯನ್ನು ಮೀರಿ ಹೋಗುತ್ತಾನೆ, ಮತ್ತು ಪ್ರೀತಿ, ದಯೆ, ಸಹಾನುಭೂತಿ, ಆತ್ಮಾರ್ಪಣೆ ಮುಂತಾದ ಗುಣಗಳ ಮೂಲಕ ತನ್ನನ್ನು ತಾನು ವಿಸ್ತರಿಸಿಕೊಳ್ಳುತ್ತಾನೆ. ಈ ರೀತಿ ವಿಸ್ತಾರಗೊಳ್ಳುವುದೇ ಆಧ್ಯಾತ್ಮಿಕ ವಿಕಾಸ. ಇದು ಅವನಿಗೆ ಇತರರೊಡನೆ ಸ್ಪಂದಿಸುವ ಮತ್ತು ಸುಖಪ್ರದ ಹಾಗೂ ಫಲಪ್ರದ ಸಂಬಂಧವನ್ನು ಹೊಂದುವ ಸಾಮರ್ಥ್ಯವನ್ನು ನೀಡುತ್ತದೆ. ಮಾನವನ ಹಂತದಲ್ಲಿ ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೆ ಏರಿಸುವ ಮೊದಲನೆಯ ಮಟ್ಟಲು ಇದು. ಇಲ್ಲಿಂದಲೇ ಮನೋ-ಸಾಮಾಜಿಕ ವಿಕಾಸವು ಪ್ರಾರಂಭವಾಗುತ್ತದೆ. ಮೊದಲೇ ಸೂಚಿಸಿದಂತೆ ಪ್ರಜ್ಞೆಯ ಎರಡು ಹಂತಗಳನ್ನು ನಿರ್ದೇಶಿಸುವ ಎರಡು ಬಗೆಯ ಶಬ್ದಗಳನ್ನು ಉಪಯೋಗಿಸಲಾಗಿದೆ. ಅದಾವುದೆಂದರೆ ವೈಯಕ್ತಿಕತೆ ಮತ್ತು ಮಾನವೀಯತೆ. ನನ್ನನ್ನು ನಾನು ವ್ಯಕ್ತಿಯಾಗಿ ಪರಿಗಣಿಸಿಕೊಂಡು ಇತರರೆಲ್ಲರನ್ನೂ ವಸ್ತುಗಳನ್ನಾಗಿ ಪರಿಗಣಿಸಿದರೆ, ನನ್ನ ಸ್ವಾತಂತ್ರ್ಯಕ್ಕೆ ಮಾತ್ರ ಬೆಲೆಯನ್ನು ಕೊಟ್ಟು ಇತರರ ಸ್ವಾತಂತ್ರ್ಯವನ್ನು ಸ್ವಲ್ಪವೂ ಲೆಕ್ಕಿಸದಿದ್ದರೆ, ನಾನು ಕೇವಲ ವೈಯಕ್ತಿಕ ಹಂತದಲ್ಲಿಯೇ ಉಳಿಯುತ್ತೇನೆ—ನನ್ನ ಪ್ರಜ್ಞೆ ನನ್ನ ವ್ಯಕ್ತಿತ್ವಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಇತರರ ಸ್ವಾತಂತ್ರ್ಯವನ್ನು ಪರಿಭಾವಿಸುವ ಶಕ್ತಿ ಅದಕ್ಕಿರುವುದಿಲ್ಲ. ಈ ವೈಯಕ್ತಿಕ ಪ್ರಜ್ಞೆಯನ್ನು ನಾವು ಮಕ್ಕಳಲ್ಲಿ ಕಾಣಬಹುದು. ಮಕ್ಕಳಲ್ಲಿ ಈ ವೈಯಕ್ತಿಕ ಪ್ರಜ್ಞೆಯನ್ನು ಬಲಗೊಳಿಸಲು ನಾವು ಸರ್ವಪ್ರಯತ್ನ ಮಾಡುತ್ತೇವೆ. ಇದು ನಿಜವಾಗಿಯೂ ಮಕ್ಕಳ ಶಿಕ್ಷಣದ ಮೊದಲನೆಯ ಹಂತ. ಈ ಶಿಕ್ಷಣವು ಮಕ್ಕಳಲ್ಲಿ ವೈಯಕ್ತಿಕ ಪ್ರಜ್ಞೆಯನ್ನು ಬೆಳಸಿ ಅವರು ಸ್ವಾತಂತ್ರ್ಯವನ್ನು ಪ್ರೀತಿಸುವಂತೆ ಮಾಡುತ್ತದೆ. ಮಗುವು ತಾಯಿಯ ಗರ್ಭದಲ್ಲಿರುವಾಗ ಅದಕ್ಕೆ ತನ್ನತನವಾಗಲೀ ವ್ಯಕ್ತಿಪ್ರಜ್ಞೆಯಾಗಲೀ ಇರುವುದಿಲ್ಲ. ಅದು ಹುಟ್ಟಿದ ಮೇಲೆ ಮೊದಲು ಭೌತಿಕ ವ್ಯಕ್ತಿತ್ವವನ್ನೂ, ಸುಮಾರು ಎರಡೂವರೆ ವರ್ಷದ ನಂತರ ಅಹಂಬಾವ ಸ್ಫುರಿಸಿದ ಮೇಲೆ ಮಾನಸಿಕ ವ್ಯಕ್ತಿತ್ವವನ್ನು ಪಡೆಯುತ್ತದೆ. ಈ ಅಹಂಭಾವವನ್ನೂ ವ್ಯಕ್ತಿಭಾವವನ್ನೂ ಬಲಗೊಳಿಸುವುದೇ ಶಿಕ್ಷಣದ ಮೊದಲನೆಯ ಪಾಠ. ಮಗುವು ಏನಾದರೂ ಮಾಡಿದಾಗ ಅದನ್ನು ಪ್ರಶಂಸಿಸುವುದು, ಕರತಾಡನ ಮಾಡುವುದು ಇತ್ಯಾದಿಗಳ ಮೂಲಕ ತಂದೆ ತಾಯಿಗಳು ಮತ್ತು ಇತರರು ಅದರ ವ್ಯಕ್ತಿಭಾವವನ್ನೂ ಅಹಂಪ್ರಜ್ಞೆಯನ್ನೂ ಬಲಗೊಳಿಸಲು ಪ್ರಯತ್ನಿಸುತ್ತಾರೆ. ವ್ಯಕ್ತಿತ್ವದ ಬೆಲೆಯನ್ನೂ, ಸ್ವಾತಂತ್ರ್ಯವನ್ನೂ ಘನತೆಯನ್ನೂ ಬಳಸಿಕೊಳ್ಳುವುದು ಆಧ್ಯಾತ್ಮಿಕ ಬೆಳವಣಿಗೆಯ ಮೊದಲ ಹಂತ.

ನೀವು ಒಬ್ಬರು ವ್ಯಕ್ತಿ, ಕೇವಲ ಒಂದು ಅಂಶವಲ್ಲ, ಬೇರೊಬ್ಬರ ಒಂದು ಭಾಗವಲ್ಲ, ನಿಮ್ಮದೇ ವೈಶಿಷ್ಟ್ಯತೆಯಿಂದ ಕೂಡಿದ ಒಬ್ಬರು ವ್ಯಕ್ತಿ—ಈ ರೀತಿ ಒತ್ತಿಹೇಳುವುದರ ಮೂಲಕ ಮಕ್ಕಳು ಮಾನವ ಪರಿಸರದಲ್ಲಿ ತಮ್ಮ ವ್ಯಕ್ತಿಭಾವವನ್ನು ಬೆಳೆಸಿಕೊಳ್ಳುವಂತೆ ಮಾಡಬಹುದು.

ಮಗುವು ವೈಯಕ್ತಿಕತೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಶಿಕ್ಷಣದ ಮೊದಲನೆಯ ಹಂತ. ಆದರೆ ಈ ಶಿಕ್ಷಣ ಇಲ್ಲಿಗೇ ನಿಲ್ಲದೆ ಮುಂದಿನ ಹಂತಗಳನ್ನು ತಲುಪಬೇಕು. ಹೀಗೆ ಶಿಕ್ಷಣದ ವಿವಿಧ ಹಂತಗಳ ಮೂಲಕ ಮಗುವು ತನ್ನ ಅನಂತ ಸಾಧ್ಯತೆಗಳನ್ನು ಅಭಿವ್ಯಕ್ತಗೊಳಿಸುವಂತಾಗಬೇಕು.

ಈ ಉನ್ನತ ಶಿಕ್ಷಣವು ಮಗುವಿನ ಪ್ರಜ್ಞೆಯು ಜೈವಿಕ ಮಿತಿಯನ್ನು ಮೀರಿ ಉನ್ನತೋನ್ನತ ಆಧ್ಯಾತ್ಮಿಕ ಸ್ತರಗಳನ್ನು ತಲುಪಲು ಸಹಾಯ ಮಾಡುತ್ತದೆ.

ಮಗುವಿನ ಬೆಳವಣಿಗೆಯ ಎರಡನೆಯ ಹಂತವೇ ಮಾನವೀಯತೆ. ವೈಯಕ್ತಿಕ ಹಂತದಲ್ಲಿ ವ್ಯಕ್ತಿಯು ಅಹಂ -ಕೇಂದ್ರೀಕೃತವಾದ ದೇಹೇಂದ್ರಿಯ ಮನೋಭೂಮಿಕೆಯಲ್ಲಿ ಮಾತ್ರ ಇರುತ್ತಾನೆ. ಮಾನವೀಯತೆಯ ಹಂತದಲ್ಲಿ ಅವನ ಅಹಂಭಾವವು ವೈಯಕ್ತಿಕ ಪರಿಧಿಯನ್ನು ಮೀರಿ ವಿಕಾಸಹೊಂದುತ್ತದೆ ಮತ್ತು ಸಮಾಜದ ಇತರ ವ್ಯಕ್ತಿಗಳನ್ನು ಅದು ಒಳಗೊಳ್ಳುತ್ತದೆ. ದೇಹೇಂದ್ರಿಯ ಮನಸ್ಸುಗಳ ಪರಿಧಿಯನ್ನು ಮೀರಿ ಪ್ರಜ್ಞೆಯು ವಿಕಾಸಹೊಂದಿದಾಗ ವ್ಯಕ್ತಿಯು ನಿಜವಾದ ಮಾನವನಾಗುತ್ತಾನೆ. ಆದ್ದರಿಂದಲೇ ಟೀಲ್‌ಹಾರ್ಡ್ ಡಿ ಚಾರ್ಡಿನ್‌ರ *The Phenomenon of Man* ಎಂಬ ಗ್ರಂಥದ ಪೀಠಿಕೆಯಲ್ಲಿ (ಪು.೩೦) ಜೂಲಿಯನ್ ಹಕ್ಸ್ಲೆ ಹೀಗೆ ಹೇಳುತ್ತಾರೆ:

> *ತನ್ನ ದೇಹಸಂಬಂಧವಾದ ವ್ಯಕ್ತಿತ್ವವನ್ನು ಮೀರಿ ಮಾನವ ಸಮಾಜದಲ್ಲಿ ಭಾಗಿಯಾದಾಗ ವ್ಯಕ್ತಿಯು ನಿಜವಾದ ಮಾನವನಾಗುತ್ತಾನೆ.*

ಆತ್ಮ-ಪ್ರಜ್ಞೆಯು ಸಮಾಜದ ಇತರ ಆತ್ಮ-ಪ್ರಜ್ಞಾ ಕೇಂದ್ರಗಳೊಡನೆ ಸಹಭಾಗಿಯಾದಾಗ ಅದು ಜೈವಿಕ ಅಸ್ತಿತ್ವದ ಮಿತಿಯನ್ನು ಮೀರಿಹೋಗುತ್ತದೆ. ಈ ಮೌಲ್ಯ ಮತ್ತು ಭಾವನೆಯೇ ನಮ್ಮನ್ನು ಉನ್ನತ ವ್ಯಕ್ತಿಗಳನ್ನಾಗಿ ಮಾರ್ಪಡಿಸುವುದು. "ನಮ್ಮನ್ನು ನಾವು ಉನ್ನತಿಗೇರಿಸಿಕೊಳ್ಳದಿದ್ದರೆ ಮಾನವ ಎಷ್ಟು ಅಲ್ಪನಾಗಿ ಉಳಿಯುತ್ತಾನೆ !"—ಎಂದು ಇಂಗ್ಲಿಷ್ ಕವಿ ವರ್ಡ್ಸ್‌ವರ್ತ್ ಹೇಳುತ್ತಾನೆ.

ಅಲ್ಪಾತ್ಮವು ಶ್ರೇಷ್ಠಾತ್ಮವಾಗಿ ಬೆಳೆಯುವುದು, ಅಥವಾ ಪ್ರಾಪ್ತವಾಗಿರುವ ಅಲ್ಪಾತ್ಮವನ್ನು ನಿಷೇಧಿಸಿ ಉನ್ನತಾತ್ಮದ ಆವಿರ್ಭಾವ—ಇದೇ ವೈಯಕ್ತಿಕತೆಯಿಂದ ಮಾನವೀಯತೆಯೆಡೆಗೆ ಮುನ್ನಡೆ. ಈ ಮುನ್ನಡೆಯನ್ನು ಸಾಧಿಸಿದಾಗಲೇ ವ್ಯಕ್ತಿಯು ಸಮಾಜದಲ್ಲಿ ಪರಸ್ಪರ ಸುಖಪ್ರದ ಸಂಬಂಧದಿಂದ ಬಾಳಲು ಸಾಧ್ಯ. ಇತರರನ್ನು ಪ್ರೀತಿಸುವುದು, ಇತರರ ಪ್ರೀತಿಗೆ ಪಾತ್ರರಾಗುವುದು—ಇದು ಈ ಬೆಳವಣಿಗೆಯಿಂದ ಮಾತ್ರ ಸಾಧ್ಯ. ವೈಯಕ್ತಿಕತೆಯ ಶಕ್ತಿ ಮತ್ತು ಸ್ವಾತಂತ್ರ್ಯಕ್ಕೆ ಜವಾಬ್ದಾರಿಯ ಪ್ರಜ್ಞೆಯನ್ನೂ ಮಾನವೀಯ ಪ್ರತಿಸ್ಪಂದನವನ್ನೂ ಸೇರಿಸಿದಾಗ ಮಾತ್ರ ಸಾಧ್ಯ. ಕೇವಲ ಶಕ್ತಿಶಾಲಿಯಾದ ವ್ಯಕ್ತಿಯನ್ನು ಬರ್ಟ್ರಾಂಡ್ ರಸೆಲ್ ಬಿಲಿಯರ್ಡ್ ಬಾಲಿಗೆ ಹೋಲಿಸುತ್ತಾರೆ. ಒಂದು ಬಿಲಿಯರ್ಡ್ ಬಾಲ್ ಮತ್ತೊಂದು ಬಿಲಿಯರ್ಡ್ ಬಾಲ್ ಇವುಗಳಿಗೆ ಇರಬಹುದಾದ ಏಕಮಾತ್ರ ಸಂಬಂಧ ಘರ್ಷಣೆ. ಹಾಗೆಯೇ ಬಲಶಾಲಿ ಮತ್ತು ಸ್ವತಂತ್ರ ವ್ಯಕ್ತಿಗಳು ಪರಸ್ಪರ ಸಂಘರ್ಷಿಸುತ್ತಾರೆ. ಪರಸ್ಪರ ಭಾವವಿನಿಮಯ, ಭಾವನಾತ್ಮಕ ಸಂಬಂಧ, ಪರಸ್ಪರರಲ್ಲಿ ಪ್ರೀತಿಯನ್ನು ಕೆರಳಿಸುವುದು, ಇತರರೊಡನೆ ಶಾಂತಿ ಸೌಹಾರ್ದತೆಯಿಂದ ಬಾಳುವುದು ಇದು ಸಾಧ್ಯವಾಗಬೇಕಾದರೆ ಮಾನವನು ವೈಯಕ್ತಿಕತೆಯಿಂದ ಮಾನವೀಯತೆಯೆಡೆಗೆ ಬೆಳೆಯಬೇಕು. ಇದು ಆಧ್ಯಾತ್ಮಿಕ ಬೆಳವಣಿಗೆ, ಕೇವಲ ಭೌತಿಕ ಅಥವಾ ಬೌದ್ಧಿಕ ಬೆಳವಣಿಗೆಯಲ್ಲ—ಏಕೆಂದರೆ ಇದು ಜೈವಿಕ ಮಿತಿಗಳನ್ನು ಮೀರಿ ಹೋಗುವುದಾಗಿದೆ. ವೈಯಕ್ತಿಕತೆಯಿಂದ ಮಾನವೀಯತೆಯೆಡೆಗೆ ಬೆಳೆಯುವ ಮಾನವ ವಿಕಾಸದ ಈ ಎರಡನೆಯ ಹಂತ ವನ್ನು ಪ್ರತಿಯೊಬ್ಬನೂ ತಲುಪದಿದ್ದರೆ ಈ ಜಗತ್ತಿನಲ್ಲಿ ಶಾಂತಿ ಮತ್ತು ಸಮನ್ವಯ ನೆಲೆಸಲಾರದು. ಈ ಬೆಳವಣಿಗೆಯ ಮೂಲಕ ಮಾನವ ಪ್ರಜ್ಞೆಯು ವಿಶಾಲವೂ ಸೃಜನಾತ್ಮಕವೂ ಆಗುತ್ತದೆ. ಪ್ರತಿ ಮಾನವನೂ ಕೊನೆಯ ಪಕ್ಷ ಈ ಮನೋ-ಸಾಮಾಜಿಕ ವಿಕಾಸದ ಹಂತವನ್ನಾದರೂ ತಲುಪಬೇಕು, ಹಾಗೂ ಕುಟುಂಬ, ಶಾಲೆ, ಸಮಾಜದಲ್ಲಿ ದೊರೆಯುವ ಶಿಕ್ಷಣ ಮತ್ತು ಎಲ್ಲ ಧರ್ಮಗಳು ಈ ಗುರಿಯನ್ನು ಸಾಧಿಸುವತ್ತ ಗಮನಕೊಡಬೇಕು. ಇಂತಹ ತರಬೇತಿಯ ಮೂಲಕ ನಮ್ಮ ಮಕ್ಕಳು ಬಿಲಿಯರ್ಡ್ ಬಾಲಿನ ಹಂತದಲ್ಲಿಯೇ ಉಳಿಯದೆ ಉನ್ನತ ಹೃದಯವಂತಿಕೆಯ ವ್ಯಕ್ತಿಗಳಾಗಿ ಬೆಳೆಯುವಂತಾಗುತ್ತದೆ.

ಈ ಮಾನವೀಯತೆಯ ಬೆಳವಣಿಗೆಯಲ್ಲಿ ಆಯಾಯ ವ್ಯಕ್ತಿಯು ಸಮಾಜದೊಡನೆ ಸ್ಪಂದಿಸುವ

ಸಾಮರ್ಥ್ಯಕ್ಕನುಸಾರವಾಗಿ ಹಲವು ಹಂತಗಳಿವೆ. ಈ ಮಾನವ ಬೆಳವಣಿಗೆಯಲ್ಲಿ ಬುಡಕಟ್ಟು ಜನಾಂಗದ ಹಂತವಿದೆ, ರಾಷ್ಟ್ರೀಯ ಹಂತವಿದೆ, ಇಂದು ಅಂತರರಾಷ್ಟ್ರೀಯ ಹಂತವಿದೆ. ಆಧುನಿಕ ಪರಿಸ್ಥಿತಿಯಲ್ಲಿ ನಾವೆಲ್ಲರೂ ನೆರೆಹೊರೆಯ ಅಡೆತಡೆಗಳನ್ನೆಲ್ಲ ಕತ್ತರಿಸಿ, ಮಾನವಕೋಟಿಯ ಪ್ರಜ್ಞೆಯನ್ನು ಮಾನವಕೋಟಿಯ ಸಹಾನುಭೂತಿಯನ್ನು, ಅಷ್ಟೇ ಅಲ್ಲದೆ ಪ್ರಾಣಿ ಮತ್ತು ಸಸ್ಯವರ್ಗಗಳನ್ನು ಆದರಿಸುವ ಮನೋವೈಶಾಲ್ಯತೆಯನ್ನೂ ಬೆಳೆಸಿಕೊಳ್ಳಬೇಕಾಗಿದೆ.

ಇವೆಲ್ಲವೂ ಮಾನವ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕಾರ್ಯಕಾರಿ ಹೇಳಿಕೆಗಳು. ನಾವೊಂದು ಚಿಕ್ಕ ಗ್ರಹದಲ್ಲಿದ್ದೇವೆ. ಇಲ್ಲಿ ನಾವೆಲ್ಲರೂ ಆಧುನಿಕ ತಾಂತ್ರಿಕತೆಯ ಮೂಲಕ ಅತ್ಯಂತ ಸಮೀಪವರ್ತಿಗಳಾಗಿದ್ದೇವೆ. ಶಾಂತಿ ನೆಮ್ಮದಿಯಿಂದ ಸಾರ್ಥಕ ಜೀವನವನ್ನು ನಡೆಸಬೇಕಾದರೆ ನಾವು ಮನೊ-ಸಾಮಾಜಿಕ ಆಯಾಮದಲ್ಲಿ ವಿಕಾಸವನ್ನು ಸಾಧಿಸಲೇಬೇಕಾಗಿದೆ. ನಾವು ಕೇವಲ ವ್ಯಕ್ತಿಗಳಾಗಿ ವರ್ತಿಸುತ್ತ ಬಿಲಿಯರ್ಡ್ ಬಾಲುಗಳಂತೆ ಪರಸ್ಪರ ಘರ್ಷಣೆಯಲ್ಲಿ ತೊಡಗಿದ್ದರೆ, ನಮ್ಮ ಪೂರ್ಣ ನಿರ್ನಾಮಕ್ಕೆ ನಾವೇ ಕಾರಣರಾಗಬಹುದು.

ಆದ್ದರಿಂದ ಮಾನವ ಬೆಳವಣಿಗೆಯ ದಿಕ್ಕು ಬದಲಾಯಿಸಬೇಕು. ಈ ದಿಕ್ಕು ಬಹಿರ್ಮುಖವಲ್ಲ, ಅಂತರ್ಮುಖಿ. ಇದು ಆಂತರಿಕ ಬೆಳವಣಿಗೆ. ಆದರೆ ಇದು ಬಾಹ್ಯದಲ್ಲಿ ಪ್ರೀತಿ, ದಯೆ, ಸೇವೆ ಮತ್ತು ಸಮರ್ಪಣೆ ಮುಂತಾದ ಸಮನ್ವಯ ಶಕ್ತಿಗಳಾಗಿ ವ್ಯಕ್ತವಾಗುತ್ತದೆ. ಈ ರೀತಿ ಪ್ರಜ್ಞೆಯನ್ನು ಉನ್ನತ ಸ್ತರಕ್ಕೆ ಏರಿಸುವುದು ಅತ್ಯಂತ ಮುಖ್ಯ. ಶಿಕ್ಷಣದ ಗುರಿಯನ್ನು ವಿಧಾನವನ್ನೂ ಹೊಸ ರೀತಿಯಲ್ಲಿ ರೂಪಿಸುವುದರ ಮೂಲಕ ನಾವು ಇದನ್ನು ಸಾಧಿಸಬೇಕಾಗಿದೆ.

### ೫. ಲೋಕೋತ್ತರ ಆಯಾಮ : ಮಾನವನಿಗೆ ಅದರ ಶ್ರೇಷ್ಠ ಸಂದೇಶ

ವೈಯಕ್ತಿಕತೆ ಮತ್ತು ಮಾನವೀಯತೆಯ ಬೆಳವಣಿಗೆಯ ನಂತರ ಪ್ರಜ್ಞಾ ವಿಕಾಸದ ಮುಂದಿನ ಹಂತಗಳಿವೆ. ಇವು ಮುಖ್ಯವಾಗಿ ಆಧ್ಯಾತ್ಮಿಕವಾದವುಗಳು ಮತ್ತು ಆಂತರಿಕವಾದವು. ಇವೇ ಲೋಕೋತ್ತರ ಬೆಳವಣಿಗೆ. ಲೌಕಿಕ ಸ್ತರದ ಎರಡನೆಯ ಹಂತವಾದ ಮಾನವೀಯತೆಯ ಬೆಳವಣಿಗೆಯು ಸಮಾಜದಲ್ಲಿ ಪರಸ್ಪರ ಮಾನವಸಂಪರ್ಕಕ್ಕೆ ಸಂಬಂಧಿಸಿದುದು. ಈ ಮಾನವ ಸನ್ನಿವೇಶದಲ್ಲಿ ವ್ಯಕ್ತಿಯು ಮಾನವ ಸಂಬಂಧದ ಪ್ರತಿಯೊಂದು ಘಟನೆಗೂ ಮಾನವೀಯವಾಗಿ ಪ್ರತಿಸ್ಪಂದಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಮಾನವನ ಬೆಳವಣಿಗೆಯಲ್ಲಿ ಇದು ಅತ್ಯಂತ ಮುಖ್ಯವಾದ ಹಂತ. ಆದರೆ ಇಲ್ಲಿಯೇ ನಿಲ್ಲಬಾರದೆಂದು ವೇದಾಂತ ಹೇಳುತ್ತದೆ. ಇನ್ನೂ ಉನ್ನತ ಮಾನವ ಸಾಧ್ಯತೆಗಳಿವೆ, ಮಾನವನ ಪ್ರಗಾಢ ಆಯಾಮವೊಂದಿದೆ. ಈ ಸತ್ಯವನ್ನೇ ಮುಖ್ಯವಾಗಿ ಉಪನಿಷತ್ತುಗಳು ಪ್ರತಿಪಾದಿಸುವುದು. ಲೋಕೋತ್ತರ ಸ್ತರದಲ್ಲಿ ಮಾನವನ ಆಧ್ಯಾತ್ಮಿಕ ಬೆಳವಣಿಗೆಯು ಹೇಗೆ ಹಂತ ಹಂತವಾಗಿ ಮುಂದುವರಿಯುತ್ತದೆ ಎಂಬ ರಹಸ್ಯವನ್ನು ಅವು ಭೇದಿಸಿ ತೋರಿಸುತ್ತವೆ. ಅವು ಪ್ರತಿಯೊಬ್ಬನಿಗೂ ಮುಕ್ತಿ ಮತ್ತು ಸಾರ್ಥಕತೆಯ ಸಂದೇಶವನ್ನು ಸಾರುತ್ತವೆ. ಈ ಉನ್ನತ ಆಧ್ಯಾತ್ಮಿಕ ಅನುಭವಗಳು ಸತ್ಯಸಾಕ್ಷಾತ್ಕಾರವನ್ನು ನೀಡುತ್ತವೆ, ಕೇವಲ ಜ್ಞಾನವನ್ನಲ್ಲ.

ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದೆ ಉಪನಿಷತ್ ಋಷಿಗಳು ಸತ್ಯ ಸಾಕ್ಷಾತ್ಕಾರವನ್ನು ಪಡೆದರು. ಅವರು ತಮ್ಮ ಅನುಭವಗಳನ್ನು ಸ್ಫೂರ್ತಿದಾಯಕ, ವಿಚಾರಪೂರ್ಣ ಉಕ್ತಿಗಳ ಮೂಲಕ ವ್ಯಕ್ತಪಡಿಸಿರುವರು. ಕೆಲವು ಶತಮಾನಗಳ ನಂತರ ಭಗವದ್ಗೀತೆಯು ಬೆಳಕಿಗೆ ಬಂತು. ಮಾನವನ ಜೀವನ ಮತ್ತು ಕಾರ್ಯಕ್ಷೇತ್ರದಲ್ಲಿ ಉನ್ನತ ಆಧ್ಯಾತ್ಮಿಕ ಬೆಳವಣಿಗೆಯನ್ನು ಕುರಿತ ಸಂದೇಶವನ್ನು ಅದು ನೀಡಿತು. ಮತ್ತೆ ಒಂದು ಸಾವಿರ ವರ್ಷಗಳ ನಂತರ ಕ್ರಿ.ಪೂ. ಆರನೇ ಶತಮಾದಲ್ಲಿ ಬುದ್ಧನ ಆವಿರ್ಭಾವವಾಯಿತು.

ಲೋಕೋತ್ತರ ಅನುಭವಗಳಲ್ಲಿ ಪ್ರಜ್ಞೆಯು ದೇಹೇಂದ್ರಿಯ ಮನಸ್ಸುಗಳ ಮಿತಿಯನ್ನು ಮೀರಿಹೋಗುತ್ತದೆ. ದೇಶ ಕಾಲ ನಿಮಿತ್ತಗಳನ್ನು ಮೀರಿಹೋಗುತ್ತದೆ. ಮೃತ್ಯುವು ಕಾಲಕ್ಕೆ ಸಂಬಂಧ

ಪಟ್ಟಿರುವುದು, ಅಮೃತತ್ತ್ವವು ಕಾಲವನ್ನು ಮೀರಿರುವುದು. ದೇಶದ ಮಿತಿಗೆ ಒಳಪಟ್ಟ ಪ್ರಜ್ಞೆಯು ವಿಚ್ಛಿನ್ನವಾಗಿ, ಬಹುವಾಗುತ್ತದೆ. ದೇಶಾತೀತವಾದಾಗ ಪ್ರಜ್ಞೆಯು ಏಕವಾಗುತ್ತದೆ. ನಿಮಿತ್ತದ ಒಳಗೆ ಪ್ರಜ್ಞೆಯು ಕಾರ್ಯಕಾರಣ ನಿಯಮಕ್ಕೆ ಒಳಪಟ್ಟಿರುತ್ತದೆ. ನಿಮಿತ್ತವನ್ನು ಮೀರಿದಾಗ ಅದು ತನ್ನ ಸ್ವಾಭಾವಿಕವಾದ ಸ್ವಾತಂತ್ರ್ಯ ಅಥವಾ ಮುಕ್ತಿಯನ್ನು ಪಡೆಯುತ್ತದೆ. ಆತ್ಯಂತಿಕ ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಪ್ರಜ್ಞೆಯು ತನ್ನ ನಿಜ ಸ್ವರೂಪವಾದ ಅಮೃತತ್ವ, ಅದ್ವಯತ್ವ ಮತ್ತು ಮುಕ್ತಿಯನ್ನು ಪಡೆಯುತ್ತದೆ.

ಉಪನಿಷತ್ತಿನ ಋಷಿಯೊಬ್ಬನು ಈ ಆತ್ಯಂತಿಕ ಸತ್ಯದ ಸಾಕ್ಷಾತ್ಕಾರವನ್ನು ಪಡೆದಮೇಲೆ ಆ ಸುವಾರ್ತೆಯನ್ನು ಜಗತ್ತಿಗೆ ಈ ಕೆಳಗಿನಂತೆ ಸಾರಿದನು (ಶ್ವೇತಾಶ್ವತರ ಉಪನಿಷತ್, ೨.೫ ಮತ್ತು ೩.೮) :

ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ
ಆಯೇ ಧಾಮಾನಿ ದಿವ್ಯಾನಿ ತಸ್ಥುಃ ।
ವೇದಾಹಮೇತಂ ಪುರುಷಂ ಮಹಾಂತಂ
ಆದಿತ್ಯವರ್ಣಂ ತಮಸಃ ಪರಸ್ತಾತ್ ।
ತಮೇವ ವಿದಿತ್ವಾತಿಮೃತ್ಯುಮೇತಿ
ನಾನ್ಯಃ ಪಂಥಾ ವಿದ್ಯತೇಽಯನಾಯ ॥

*ಅಮೃತ ಪುತ್ರರೇ ಕೇಳಿ! ಯಾರು ದಿವ್ಯ ಲೋಕಗಳಲ್ಲಿರುವಿರೋ ನೀವೂ ಕೇಳಿ ! ನಾನು ಆ ಅನಂತ ಪುರುಷನನ್ನು ಅರಿತಿರುವೆನು. ಆದಿತ್ಯ ವರ್ಣನಾದ ತಮಸ್ಸಿನ (ಅಜ್ಞಾನದ) ಆಚೆಗಿರುವ ಆ ದಿವ್ಯ ಪುರುಷನ ಸಾಕ್ಷಾತ್ಕಾರವನ್ನು ಪಡೆದವನು ಮೃತ್ಯುವನ್ನು ಮೀರಿ ಹೋಗುತ್ತಾನೆ. ಅಮೃತತ್ವಕ್ಕೆ ಬೇರೆ ಮಾರ್ಗವಿಲ್ಲ.*

ಅದ್ವಿತೀಯ ಅಮೃತ ಸ್ವರೂಪವಾದ ತನ್ನ ಪ್ರಜ್ಞಾಸ್ವರೂಪವನ್ನು ಅರಿತಮೇಲೆ ಆ ಋಷಿಯು ಇತರರೆಲ್ಲರಲ್ಲಿಯೂ ಅದೇ ಚೇತನ್ಯಸ್ವರೂಪವನ್ನು ಕಾಣುತ್ತಾನೆ. ಆದ್ದರಿಂದ ಅವನು ಎಲ್ಲರನ್ನೂ 'ಅಮೃತ ಪುತ್ರರೇ' ಎಂದು ಸಂಬೋಧಿಸುತ್ತಾನೆ. ಇಂದ್ರಿಯ ದೃಷ್ಟಿಗೆ ನಾವು ಮತ್ತು ಇತರರೆಲ್ಲರೂ ಸಾಂತರು ಸೀಮಿತರೂ ಮರ್ತ್ಯರೂ ಆಗಿ ಕಾಣುತ್ತಾರೆ. ಆದರೆ ನಮ್ಮ ಇಂದ್ರಿಯ ಮಿತಿಯನ್ನು ಮೀರಿಹೋದ ಮೇಲೆ ನಾವು ಶುದ್ಧ ಚೈತನ್ಯರೆಂದೂ ಅನಂತ, ಅದ್ವಿತೀಯ ಅಮೃತಸ್ವರೂಪರೆಂದೂ ಅರಿಯುತ್ತೇವೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರಜ್ಞೆಯನ್ನು ದೇಹೇಂದ್ರಿಯಗಳ ಮಿತಿಗಳಿಂದಾಚೆಗೆ ಕ್ರಮಕ್ರಮವಾಗಿ ಉನ್ನತ ಸ್ಥಿತಿಗೆ ಏರಿಸುತ್ತಾ ಈ ಸಾಕ್ಷಾತ್ಕಾರವನ್ನು ಪಡೆಯಬಹುದೆಂದು ವೇದಾಂತವು ಸಾರುತ್ತದೆ. ಇದು ಕೇವಲ ನಂಬಿಕೆಯಲ್ಲ, ಅನುಭೂತಿಯ ವಿಷಯ ಎಂದು ವೇದಾಂತ ಹೇಳುತ್ತದೆ. ಅಮೃತತ್ವವನ್ನು ಪಡೆಯುವುದಕ್ಕೆ ಬೇರಾವ ಮಾರ್ಗವೂ ಇಲ್ಲ.

ಉಪನಿಷತ್ತುಗಳ ನಂತರ ಹಲವು ಶತಮಾನಗಳು ಕಳೆದಮೇಲೆ ಬುದ್ಧನು ತನ್ನ ಅನುಭವದ ಮೂಲಕ ಈ ಸತ್ಯವನ್ನು ಪ್ರಮಾಣೀಕರಿಸಿದನು. ಶಬ್ದಗಳ ಮೂಲಕ ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ತನ್ನ ಅನುಭವದ ವಿವರಣೆಯನ್ನು ನೀಡುತ್ತಾನೆ (ಜೆ. ಜೆ. ಜೆನಿಂಗ್ಸ್, *The Vedantic Buddhism of the Buddha*, Oxford University Press, p.32) :

*ನನಗೆ ಯಥಾರ್ಥ ಜ್ಞಾನೋದಯವಾಯಿತು ; ನನ್ನ ವಿಮುಕ್ತಿಯು ಸುಸ್ಥಿರವಾಯಿತು. ಇಲ್ಲಿಯೇ (ಈ ಜನ್ಮದಲ್ಲಿಯೇ) ನನ್ನ ಜಾತಿ (ಅಂದರೆ, ಪ್ರತ್ಯೇಕ ಅಸ್ತಿತ್ವ) ಕೊನೆಗೊಂಡಂತಾಯಿತು. ನನಗಿನ್ನು ಪುನರ್ಜನ್ಮವಿಲ್ಲ.*

ಕೆಲವು ದಿನಗಳ ನಂತರ ತನ್ನ ಐದು ಜನ ಶಿಷ್ಯರನ್ನು ಉದ್ದೇಶಿಸಿ ಬುದ್ಧನು ಹೀಗೆ ಹೇಳುತ್ತಾನೆ (ಅದೇ ಪು. 40) :

*ಭಿಕ್ಷುಗಳೇ ಕೇಳಿ, ಅಮೃತತ್ವವನ್ನು ನಾನು ಪಡೆದಿರುವೆನು.*

## ೬. ಉಪನಿಷತ್ತುಗಳು ಮತ್ತು ಪ್ರಜ್ಞೆಯ ಲೋಕೋತ್ತರ ಹಂತಗಳು

ಮಾನವನ ಅರಿವನ್ನು ಹೀಗೆ ತೀವ್ರಗೊಳಿಸುವುದು, ಪ್ರಜ್ಞೆಯನ್ನು ಉನ್ನತ ಹಂತಗಳಿಗೆ ಏರಿಸುವುದು ಈ ಜನ್ಮದಲ್ಲಿಯೇ, ಈ ದೇಹದಲ್ಲಿಯೇ ನಡೆಯಬೇಕು. ಈ ಪ್ರಯೋಗವನ್ನು ಮಾಡುವುದಕ್ಕೆ ಈ ದೇಹವು ಅತ್ಯುತ್ತಮ ಪ್ರಯೋಗಶಾಲೆ, ಪ್ರಕೃತಿಯು ಅದಕ್ಕೆ ಈ ಲೋಕೋತ್ತರ ಪ್ರಗತಿಯನ್ನು ಸಾಧಿಸುವ ಸಾಮರ್ಥ್ಯವನ್ನು ನೀಡಿರುವುದು. ಪ್ರಜ್ಞೆಯನ್ನು ಹಂತಹಂತವಾಗಿ ಉನ್ನತಿಗೇರಿಸುತ್ತ ಆತ್ಯಂತಿಕ ಸ್ಥಿತಿಯನ್ನು ತಲುಪುವ ಮಹಾ ಸಾಹಸ ಕಥೆಯನ್ನು ನಾವು ಉಪನಿಷತ್ತುಗಳಲ್ಲಿ ಓದುತ್ತೇವೆ. ಇದು ಎವರೆಸ್ಟ್ ಶಿಖರವನ್ನು ಏರಿದಂತೆ. ಅತ್ಯಂತ ಪ್ರತಿಭಾವಂತ ಪುರುಷರು, ಸ್ತ್ರೀಯರು, ಮಕ್ಕಳು, ರಾಜರು, ಚಕ್ರವರ್ತಿಗಳು ಮತ್ತು ಬುದ್ಧಿಜೀವಿಗಳು ಹೀಗೆ ಒಂದು ಅಪೂರ್ವ ಜನರ ಮೆರವಣಿಗೆಯೇ ಈ ಸಾಹಸಯಾತ್ರೆಯಲ್ಲಿ ತೊಡಗಿರುವುದನ್ನು ನಾವು ಉಪನಿಷತ್ತುಗಳಲ್ಲಿ ನೋಡುತ್ತೇವೆ. ಇದರಲ್ಲಿಯೇ ಭಾರತದ ಈ ಪುರಾತನ ಗ್ರಂಥದ ಸೊಬಗು ಮತ್ತು ಶಕ್ತಿ ಅಡಗಿರುವುದು. ಉಪನಿಷತ್ತುಗಳು ಪ್ರಜ್ಞೆಯನ್ನು ಕುರಿತ ಪ್ರಗಾಢ ಅಧ್ಯಯನವನ್ನು ನೀಡುತ್ತವೆ. ಈ ಅಧ್ಯಯನದಿಂದ ಅನಂತ, ಅದ್ವಯ ಚೈತನ್ಯವು ಎಲ್ಲ ಜೀವಿಗಳಲ್ಲಿ ಬೆಳಗುತ್ತಿರುವುದೆಂಬ ಸತ್ಯದ ಸಾಕ್ಷಾತ್ಕಾರವು ಋಷಿಗಳಿಗಾಯಿತು. ಆದರೆ ಈ ಚೈತನ್ಯವು ದೇಹ, ಪ್ರಾಣ, ಮನಸ್ಸು ಮುಂತಾದ ಕೋಶಗಳೊಳಗೆ ಅಡಗಿಕೊಂಡಿರುವುದು.

ಬಾಹ್ಯ ಜೀವನದಲ್ಲಿ ನಮ್ಮ ಪ್ರಜ್ಞೆಯು ಬಾಹ್ಯ ವಿಷಯಗಳಲ್ಲಿ ತೊಡಗುತ್ತದೆ. ಆದರೆ ನಮ್ಮ ಆಂತರಿಕ ಜೀವನದಲ್ಲಿ ಪ್ರಜ್ಞೆಯೇ ಪ್ರಜ್ಞೆಯ ವಿಷಯವಾಗಿರುತ್ತದೆ. ನಮ್ಮ ಮನಸ್ಸು ತನ್ನ ಅಂತರಂಗದೊಳಗೆ ಪ್ರವೇಶಿಸುವಂತೆ ಅದಕ್ಕೆ ತರಬೇತಿ ನೀಡಬೇಕು. ಭೌತವಿಜ್ಞಾನದ ಕ್ಷೇತ್ರದಲ್ಲಿಯೂ ಕೂಡ ವೈಜ್ಞಾನಿಕವಾಗಿ ತರಬೇತಿಯನ್ನು ಹೊಂದಿದ ಮನಸ್ಸು ಮಾತ್ರ ಭೌತ ಜಗತ್ತಿನ ಅಂತರಾಳವನ್ನು ಪ್ರವೇಶಿಸಿ ಸತ್ಯಾಂಶಗಳನ್ನು ಆವಿಷ್ಕರಿಸುತ್ತದೆ ಮತ್ತು ಅಲ್ಲಿ ಹುದುಗಿರುವ ಶಕ್ತಿಯನ್ನು ನಿಯಂತ್ರಿಸುತ್ತದೆ. ಪ್ರಜ್ಞೆಯ ಅಂತರಾಳವನ್ನು ಪ್ರವೇಶಿಸಬೇಕಾದರೆ ಮನಸ್ಸು ಇನ್ನೂ ಹೆಚ್ಚಿನ ಶಿಸ್ತನ್ನು ಪಡೆದು ಅತ್ಯಂತ ಸೂಕ್ಷ್ಮವಾಗಬೇಕಾಗುತ್ತದೆ. ಸಾಮಾನ್ಯ ವಿಕಿರಣದ ಸ್ಪಂದನವನ್ನು ತೀವ್ರಗೊಳಿಸಿ ಎಕ್ಸ್‌ರೇ ಅಥವಾ ಕಾಸ್ಮಿಕ್‌ರೇ ರೂಪಕ್ಕೆ ಪರಿವರ್ತಿಸಿದಾಗ ಅದು ವಸ್ತುವನ್ನು ಭೇದಿಸಿಕೊಂಡು ಒಳಹೋಗುವ ಶಕ್ತಿಯನ್ನು ಪಡೆಯುತ್ತದೆ. ಹಾಗೆಯೇ ಮಾನವ ಮನಸ್ಸು ಕೂಡ ತೀವ್ರ ಸೂಕ್ಷ್ಮತೆಯನ್ನೂ ಅಂತಃ ಪ್ರವೇಶ ಶಕ್ತಿಯನ್ನೂ ಆಧ್ಯಾತ್ಮಿಕ ಸಾಧನೆಯ ಮೂಲಕ ಪಡೆಯುತ್ತದೆ. ಯೋಗ ಎಂಬುದರ ಅರ್ಥ ಇದೇ. ಇದೇ ಧರ್ಮ ವಿಜ್ಞಾನ, ಮಾನವ ಸಾಧ್ಯತೆಗಳ ವಿಜ್ಞಾನ. ಇಲ್ಲಿ ಮಾನವನ ಬೆಳವಣಿಗೆ ಮತ್ತು ಸಾಫಲ್ಯ ಪೂರ್ಣತೆಯನ್ನು ಮುಟ್ಟುತ್ತದೆ.

ಮಾನವ ಜೀವನದ ಒಂದು ಕ್ರಿಯಾತ್ಮಕ ದೃಷ್ಟಿಯನ್ನು ಉಪನಿಷತ್ತುಗಳು ನಮಗೆ ನೀಡುತ್ತವೆ. ಈ ಜೀವನವು ಸಾಫಲ್ಯದೆಡೆಗೆ ನಡೆಸುವ ಒಂದು ಯಾತ್ರೆ. ಈ ಯಾತ್ರೆ ಎರಡು ದಿಕ್ಕಿನಲ್ಲಿ ನಡೆಯುತ್ತದೆ: ಒಂದು ಹೊರಮುಖ, ಇನ್ನೊಂದು ಒಳಮುಖ ; ಒಂದು ಚಲನಶೀಲ ಜಗತ್ತಿನೆಡೆಗೆ, ಇನ್ನೊಂದು ನಿಶ್ಚಲಜಗತ್ತಿನೆಡೆಗೆ. ಈ ಎರಡೂ ಬಗೆಯ ಪ್ರಯಾಣದ ಸಾಮರ್ಥ್ಯವನ್ನು ಪ್ರಕೃತಿಯು ಮಾನವನಿಗೆ ನೀಡಿರುವುದು. ಬಹಿರ್ಮುಖ ಯಾತ್ರೆ ದೇಶ-ಕಾಲದೊಳಗೆ ನಡೆಯುತ್ತದೆ. ಅಂತರ್ಮುಖ ಯಾತ್ರೆ ದೇಶ-ಕಾಲವನ್ನು ಮೀರಿದುದು. ಆದರೆ ಈ ಅಂತರ್ಮುಖ ಯಾತ್ರೆಯು ಬಹಿರ್ಮುಖ ಯಾತ್ರೆಯೊಂದಿಗೇ ನಡೆಯಬೇಕು. ಒಂದು ಮಗುವು ಹುಟ್ಟಿದ ಕೂಡಲೇ ತನ್ನ ಬಹಿರ್ಮುಖ ಯಾತ್ರೆಯನ್ನು ಪ್ರಾರಂಭಿಸುತ್ತದೆ. ಕಾರ್ಲ್‌ಯುಂಗ್‌ನ ಮಾತಿನಲ್ಲಿ (*Modern Man in Search of a Soul* ಪು. ೧೧೮) ಈ ಪ್ರಮಾಣದ ಯಶಸ್ಸಿನ ಪ್ರಮಾಣ ಯಾವುದೆಂದರೆ

ಕಾರ್ಯಸಾಧನೆ. ಉಸಿರಾಟ, ಆಹಾರ ಸೇವನೆ ಮತ್ತು ದೈಹಿಕ ಬೆಳವಣಿಗೆ, ಶಿಕ್ಷಣ ಮತ್ತು ಮಾನಸಿಕ ಬೆಳವಣಿಗೆ, ಕೆಲಸ ಮತ್ತು ಸಂಪಾದನೆ, ವಿವಾಹ ಮತ್ತು ಕುಟುಂಬ ನಿರ್ವಹಣೆ. ಸತ್ಕಾರ್ಯ ಮತ್ತು ಸಾಮಾಜಿಕ ಮನ್ನಣೆ - ಇವೆಲ್ಲವೂ ಬಹಿರ್ಮುಖ ಪ್ರಯಾಣ. ಆಂತರಿಕ ಪ್ರಯಾಣವನ್ನು ಯುಂಗ್‌ನ ಮಾತಿನಲ್ಲಿ, ಸಂಸ್ಕೃತಿ ಅಥವಾ ವ್ಯಕ್ತಿತ್ವವಿಕಾಸ ಎಂದು ಕರೆಯಬಹುದು. ಇದು ನಿಜವಾಗಿಯೂ ಒಂದು ಪ್ರಯಾಣವಲ್ಲ, ತನ್ನ ನೈಜ ಆತ್ಮದೊಳಗೆ ಪ್ರವೇಶಿಸುವುದು. ಕಠೋಪನಿಷತ್ತು ಒಂದು ಸುಂದರವಾದ ರೂಪಕದ ಮೂಲಕ ಜೀವನಸಾಫಲ್ಯದೆಡೆಗೆ ನಡೆಯುವ ಈ ಅಂತರ್ಯಾತ್ರೆಯನ್ನು ವಿವರಿಸುತ್ತದೆ (ಕಠ, ೩.೩-೯). ಪ್ಲೇಟೋನ ಕೃತಿಯಲ್ಲಿಯೂ ಇದೇ ರೂಪಕವು ಬರುತ್ತದೆ. ಆದರೆ ಇಲ್ಲಿಯಷ್ಟು ವ್ಯಾಪಕ ಅರ್ಥದಲ್ಲಿ ಅಲ್ಲಿ ಇದನ್ನು ವಿವರಿಸಿಲ್ಲ. ಕಠೋಪನಿಷತ್ತಿನಲ್ಲಿ ಈ ರೀತಿ ವಿವರಿಸಲಾಗಿದೆ:

> *ದೇಹವನ್ನು ರಥವೆಂದೂ ಆತ್ಮನನ್ನು ರಥಿಯೆಂದೂ, ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಕಡಿವಾಣವೆಂದೂ ತಿಳಿ.*
>
> *ಇಂದ್ರಿಯಗಳನ್ನು ಕುದುರೆಗಳೆಂದೂ ಇಂದ್ರಿಯ ವಿಷಯಗಳನ್ನು ರಥವು ಚಲಿಸುವ ರಸ್ತೆಯೆಂದೂ ತಿಳಿ. ಇಂದ್ರಿಯ ಮನಸ್ಸುಗಳಿಂದ ಕೂಡಿದ ಆತ್ಮನನ್ನು ಭೋಕ್ತಾ (ಪ್ರಯಾಣ ಸುಖವನ್ನು ಅನುಭವಿಸುವವನು)ಎಂದು ಜ್ಞಾನಿಗಳು ಹೇಳುತ್ತಾರೆ.*
>
> *ಅಜ್ಞಾನಿಯಾದವನ ಮನಸ್ಸು ಅಸ್ಥಿರವಾಗಿರುತ್ತದೆ. ಇದರಿಂದಾಗಿ, ಸಾರಥಿಯ ತುಂಟ ಕುದುರೆಗಳಂತೆ, ಅವನ ಇಂದ್ರಿಯಗಳು ಅಶಿಸ್ತಿನಿಂದ ಕೂಡಿರುತ್ತವೆ.*
>
> *ಆದರೆ ಸ್ಥಿರವಾದ ಮನಸ್ಸಿನಿಂದ ಕೂಡಿದ ಜ್ಞಾನಿಯ ಇಂದ್ರಿಯಗಳು ಸಂಪೂರ್ಣ ನಿಗ್ರಹೀತವಾಗಿರುತ್ತವೆ—ಉತ್ತಮ ಸಾರಥಿಯ ಚೆನ್ನಾಗಿ ಪಳಗಿದ ಕುದುರೆಗಳಂತೆ.*
>
> *ಅಶುದ್ಧವಾದ ಚಂಚಲ ಮನಸ್ಸುಳ್ಳ ಅಜ್ಞಾನಿಯು (ಮುಕ್ತಿಯ) ಸ್ಥಿತಿಯನ್ನು ಪಡೆಯುವುದಿಲ್ಲ, ಮತ್ತೆ ಈ ಸಂಸಾರಕ್ಕೆ ಹಿಂದಿರುಗುತ್ತಾನೆ.*
>
> *ಆದರೆ ಸ್ಥಿರ ಮತ್ತು ಪರಿಶುದ್ಧ ಮನಸ್ಸುಳ್ಳ ಜ್ಞಾನಿಯು ಮತ್ತೆ ಸಂಸಾರಕ್ಕೆ ಹಿಂದಿರುಗದ ಮುಕ್ತಿಯ ಸ್ಥಿತಿಯನ್ನು ಪಡೆಯುತ್ತಾನೆ.*
>
> *ಆಧ್ಯಾತ್ಮಿಕ ಜಾಗೃತಿಯನ್ನು ಹೊಂದಿರುವ ಬುದ್ಧಿಯನ್ನು ಸಾರಥಿಯಾಗಿಯೂ ದೃಢವಾದ ಮನಸ್ಸನ್ನೇ ಕಡಿವಾಣವಾಗಿಯೂ ಉಳ್ಳವನು ಯಾತ್ರೆಯ ಅಂತಿಮ ಸ್ಥಿತಿಯನ್ನು ಮುಟ್ಟುತ್ತಾನೆ— ಅದೇ ಸರ್ವವ್ಯಾಪಿಯಾದ ಪರಮಪದ.*

ಈ ಮೇಲಿನ ಶ್ಲೋಕಗಳು ಮಾನವ ವ್ಯಕ್ತಿತ್ವವು ದೇಹ, ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಜೀವಾತ್ಮಗಳಿಂದ ಕೂಡಿರುವುದಾಗಿ ಸೂಚಿಸುತ್ತವೆ. ಇವೆಲ್ಲವು ಪ್ರಕೃತಿ ವಿಕಾಸದ ಮೇಲು ಮೇಲಿನ ಹಂತಗಳನ್ನು ಸೂಚಿಸುತ್ತವೆ.

ಮಾನವ ದೇಹವನ್ನು ರಥವೆಂದು ಪರಿಗಣಿಸಬೇಕೆಂದು ಉಪನಿಷತ್ತು ಹೇಳುತ್ತದೆ. ಚಕ್ರಗಳಿಂದ ಕೂಡಿದ ರಥದ ಕಲ್ಪನೆ ಪ್ರಯಾಣವನ್ನು ಸೂಚಿಸುತ್ತದೆ. ಆದರೆ ರಥಕ್ಕೆ ತನ್ನದೇ ಆದ ಉದ್ದೇಶ ಅಥವಾ ಗುರಿ ಇರುವುದಿಲ್ಲ ; ಹಾಗೆಯೇ ದೇಹಕ್ಕೂ ಕೂಡ. ರಥವು ಅದಕ್ಕೆ ಕಟ್ಟಿದ ಕುದುರೆಗಳಿಂದ ಮುನ್ನಡೆಯ ಶಕ್ತಿಯನ್ನು ಪಡೆಯುತ್ತದೆ. ಹಾಗೆಯೇ ದೇಹದ ಚಾಲಕ ಶಕ್ತಿಯೂ ನರಮಂಡಲ ಮತ್ತು ಮಿದುಳಿನಿಂದ ಕೂಡಿದ ಇಂದ್ರಿಯಗಳು.

ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳು ಪ್ರಾಣಿ ಮತ್ತು ಮಾನವ ದೇಹವನ್ನು ಪ್ರಕೃತಿಯಲ್ಲಿ ಅತ್ಯಂತ ತೀವ್ರ ಚಟುವಟಿಕೆಯ ಕೇಂದ್ರವಾಗಿ ಪರಿವರ್ತಿಸುತ್ತವೆ. ಆದರೆ ಈ ಕ್ರಿಯೆ ಕೇವಲ ಇಂದ್ರಿಯಗಳ ಹಂತದಲ್ಲಿಯೇ ಇದ್ದಾಗ ಸಮೀಕರಣಗೊಂಡಿರುವುದಿಲ್ಲ ; ಆದ್ದರಿಂದ ಜೈವಿಕ ಅಸ್ತಿತ್ವ ವನ್ನು ಮೀರಿದ ಸಾಧನೆಗೆ ಅದು ಅಯೋಗ್ಯವಾಗಿರುತ್ತದೆ. ಮಾನವನಲ್ಲಿ ಮಾತ್ರ ಈ ಸಮೀಕರಣವನ್ನು

ಕಾಣುತ್ತೇವೆ. ಈ ಹೊಸ ಅಂತಃಕರಣ ವೃತ್ತಿಯನ್ನು ಆಧುನಿಕ ನರಮಂಡಲ ವಿಜ್ಞಾನಿಗಳು ಕಲ್ಪನೆ ಎಂದು ಕರೆಯುತ್ತಾರೆ (ಗ್ರೇ ವಾಲ್ಟರ್ *The Living Brain*, p. 2). ಇದನ್ನೇ ಸಂಸ್ಕೃತದಲ್ಲಿ ಸಂಕಲ್ಪ-ವಿಕಲ್ಪಾತ್ಮಕ ಮನಸ್ ಎಂದು ಕರೆಯುವುದು. ಭಾರತೀಯ ದರ್ಶನವು ಇದನ್ನು ಜ್ಞಾನೇಂದ್ರಿಯಗಳ ಗುಂಪಿಗೇ ಸೇರಿಸಿ ಆರನೆಯ ಇಂದ್ರಿಯ ಎಂದು ಕರೆಯುತ್ತದೆ. ರಥರೂಪಕದಲ್ಲಿ ಕಡಿವಾಣವು ಈ ಮನಸ್ಸನ್ನು ನಿರ್ದೇಶಿಸುತ್ತದೆ.

ಕಡಿವಾಣವು ಸಾರಥಿಯ ಕೈಯಲ್ಲಿರಬೇಕು. ಸಾರಥಿ ಇಲ್ಲದಿದ್ದರೆ ಕಡಿವಾಣಕ್ಕೆ ಅರ್ಥವೇ ಇಲ್ಲ. ಸಾರಥಿಯ ಅನುಪಸ್ಥಿತಿಯಲ್ಲಿ ಕುದುರೆಗಳು ಕಡಿವಾಣವಿಲ್ಲದಿದ್ದರೇ ಸರಿಯಾಗಿ ವರ್ತಿಸುತ್ತವೆ. ಏಕೆಂದರೆ ಅವುಗಳಿಗೆ ತಮ್ಮದೇ ಜೀವಸಂಬಂಧವಾದ ಜೀವನಯಾತ್ರೆಯೊಂದಿದೆ. ಆದರೆ ಅವುಗಳನ್ನು ರಥಕ್ಕೆ ಕಟ್ಟಿ ಕಡಿವಾಣವನ್ನು ಹಾಕಿದಾಗ ಅವುಗಳ ಚಲನೆ ಅವುಗಳಿಗಾಗಿ ಅಲ್ಲದೆ ಬೇರೊಬ್ಬರಿಗಾಗಿ ಇರುತ್ತದೆ. ಹಾಗೆಯೇ ದೇಹ, ಇಂದ್ರಿಯಗಳು ಮತ್ತು ಮನಸ್ ಇವುಗಳ ಸಂಘಾತವು, ಅವುಗಳನ್ನು ನಿಗ್ರಹಿಸಿ, ಸರಿಯಾದ ದಿಕ್ಕಿನಲ್ಲಿ ನಡೆಸುವ (ರೂಪಕದಲ್ಲಿ ಬರುವ ಸಾರಥಿಯಂತಿರುವ) ಇನ್ನೊಂದು ಸತ್ಯವನ್ನು ಸೂಚಿಸುತ್ತದೆ. ಇದನ್ನೇ ಬುದ್ಧಿ ಅಥವಾ ವಿಜ್ಞಾನ ಎಂದು ಕರೆಯುವುದು. "ಬುದ್ಧಿಯನ್ನು ಸಾರಥಿಯೆಂದು ತಿಳಿ" ಎಂದು ಶ್ಲೋಕವು ಹೇಳುತ್ತದೆ.

ಕೇವಲ ಸಾರಥಿಯಿದ್ದರೆ ಸಾಕಾಗುವುದಿಲ್ಲ. ಅವನು ತನಗಿಂತ ಬೇರೆಯಾದ ಇನ್ನೊಂದು ಸತ್ಯವನ್ನು ಅಂದರೆ ರಥದ ಒಡೆಯನನ್ನು ಸೂಚಿಸುತ್ತಾನೆ. ನಿಜವಾಗಿಯೂ ಪ್ರಯಾಣ ಅವನಿಗೆ ಸಂಬಂಧಿಸಿದುದು. ಕುದುರೆಗಳು, ಕಡಿವಾಣ, ರಥ ಇವುಗಳೆಲ್ಲ ಅವನ ಉದ್ದೇಶ ಸಫಲತೆಯ ಬೇರೆ ಬೇರೆ ಉಪಕರಣಗಳು. ಹಾಗೆಯೇ ಬುದ್ಧಿಯು ತನಗೆ ಅತೀತವಾದ ಸತ್ಯವೊಂದನ್ನು ಸೂಚಿಸುತ್ತದೆ. ಆ ಸತ್ಯವೇ ಮಾನವನ ಆತ್ಮ. "ಆತ್ಮನನ್ನು ರಥದ ಒಡೆಯನೆಂದು ತಿಳಿ" ಎಂದು ಶ್ಲೋಕವು ಹೇಳುತ್ತದೆ.

ಆದರೆ ಆತ್ಮನು ರಥದ ಒಡೆಯ, ಅವನು ರಥದಲ್ಲಿ ಯಾತ್ರೆ ನಡೆಸುವವನು ಎಂಬ ಹೇಳಿಕೆಯನ್ನು ನಾವು ಬೇರೊಂದು ಅರ್ಥದಲ್ಲಿ ಗ್ರಹಿಸಬೇಕು. ಏಕೆಂದರೆ ಆತ್ಮನು ಶುದ್ಧ ಚೈತನ್ಯ, ಯಾವಾಗಲೂ ಪರಿಪೂರ್ಣ ಮತ್ತು ಮುಕ್ತ. ಅವನು ಪ್ರಯಾಣದಿಂದ ಏನನ್ನೂ ಪಡೆಯಬೇಕಾಗಿಲ್ಲ. ಆದರೂ ಪ್ರಯಾಣವೊಂದಿದೆ—ಇದು ನಮ್ಮ ಅನುಭವ ಸತ್ಯ. ಅಸಾರ್ಥಕತೆಯಿಂದ ಸಾರ್ಥಕತೆಯೆಡೆಗೆ ಈ ಜೀವನಯಾತ್ರೆ ಸಾಗುತ್ತಿರುವುದು. ಹಾಗೆಯೆ ಪ್ರಯಾಣಿಕನೂ ಇರುವನು. ಪ್ರಯಾಣಿಕನು ಆತ್ಮನಲ್ಲದಿದ್ದರೆ ಮತ್ತಿನ್ಯಾರು ? ಉಪನಿಷತ್ತು ಉತ್ತರಿಸುತ್ತದೆ : ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುಃ ಮನೀಷಿಣಃ "ದೇಹ, ಇಂದ್ರಿಯ, ಮನಸ್ (ಮತ್ತು ಬುದ್ಧಿ) ಇವುಗಳೊಡನೆ ತಾದಾತ್ಮ್ಯವನ್ನು ಹೊಂದಿದ ಆತ್ಮನು ಭೋಕ್ತ (ಪ್ರಯಾಣವನ್ನು ಅನುಭವಿಸುವವನು) ಎಂದು ಜ್ಞಾನಿಗಳು ಹೇಳುತ್ತಾರೆ." ಈ ರೀತಿ ಮಿತಿಗೆ ಒಳಪಟ್ಟ ಆತ್ಮನನ್ನೇ ಜೀವ ಎಂದು ಕರೆಯುವುದು.

ಜೀವ ಎನ್ನುವುದು ಒಂದು ವಿಶಿಷ್ಟಾಂಶ. ವೇದಾಂತವು ಇದನ್ನು ಜೀವಾತ್ಮ, ವಿಜ್ಞಾನಾತ್ಮ, ಬುದ್ಧಿ, ಚಿಜ್ಜಡಗ್ರಂಥಿ ಎಂದು ಮುಂತಾಗಿ ಕರೆಯುತ್ತದೆ. ಈ ಶಬ್ದಗಳು ಅದರ ಸಾಂತತೆಯನ್ನೂ, ಸೀಮಿತ ಪ್ರತ್ಯೇಕ ಅಸ್ತಿತ್ವವನ್ನೂ ವಿವರಿಸುತ್ತವೆ, ಹಾಗೂ ಅದರ ಬಹಿರ್ಮುಖ ಯಾತ್ರೆಯ ಕಾರಣವನ್ನೂ ವಿವರಿಸುತ್ತವೆ. ಬಹಿರ್ಮುಖ ಯಾತ್ರೆಯೆಂದರೆ ಸಾಫಲ್ಯವನ್ನು ಅರಸುತ್ತ ತನ್ನಿಂದ ಹೊರಗೆ ಹೋಗುವುದು. ಇಲ್ಲಿ ಸಾಫಲ್ಯವನ್ನು ಅರಸುವುದೆಂದರೆ ಮರೆತುಹೋದ ತನ್ನ ಸ್ವಭಾವವಾದ ಮುಕ್ತಿಯನ್ನೂ ಪರಿಪೂರ್ಣತೆಯನ್ನೂ ಅರಸುವುದು. ಈ ಮರೆಯುವಿಕೆಯೇ ಮಾನವ ಜೀವನದ ಒಂದು ದುರಂತ. ಬಹಿರ್ಮುಖ ಯಾತ್ರೆಯ ಉತ್ತಮ ಅಂಶಯಾವುದೆಂದರೆ, ಅದು ಆಧ್ಯಾತ್ಮಿಕ ಪ್ರಜ್ಞೆಯನ್ನೂ ಸ್ವಾತಂತ್ರ್ಯವನ್ನೂ ಮತ್ತೆ ಪಡೆಯಲು ಅವಶ್ಯಕವಾದ ಶಿಕ್ಷಣವನ್ನು ನೀಡುವಂತಾಗಬೇಕು. ಮಾನವನ ನೈಜ ಸ್ವರೂಪವಾದ ಮುಕ್ತಿ ಮತ್ತು ಪರಿಪೂರ್ಣಗಳಿಗೆ ವಿರುದ್ಧವಾಗಿ ಅವನು ಅನುಭವಿಸುವ ಬಂಧನ ಮತ್ತು ಅಸಾರ್ಥಕತೆಗಳು ಅವನ ಹೃದಯವನ್ನು ಒಂದು ಕುರುಕ್ಷೇತ್ರವನ್ನಾಗಿ ಪರಿವರ್ತಿಸುತ್ತವೆ, ಮತ್ತು ಅವನನ್ನು ಭಗವಂತನ ಸೃಷ್ಟಿಯಲ್ಲಿ ಏಕೈಕ ಅಸ್ಥಿರ ಯಾತ್ರಿಯನ್ನಾಗಿ

ಮಾಡಿರುವುವು. ಜೀವನದ ಈ ಯಾತ್ರೆಯನ್ನೇ ಉಪನಿಷತ್ತಿನ ಈ ಶ್ಲೋಕಗಳು ಪರಿಚಯಿಸುತ್ತಿರುವುದು. ಬಹಿರ್ಮುಖ ಯಾತ್ರೆಯನ್ನು ಇಂದ್ರಿಯ ಹಂತದಲ್ಲಿ ಪ್ರಾಪಂಚಿಕತೆಯೆಂದು ಕರೆಯಲಾಗಿದೆ, ನೈತಿಕ ಪ್ರಜ್ಞೆಯ ಉನ್ನತ ಹಂತದಲ್ಲಿ ಅದು ಆಧ್ಯಾತ್ಮಿಕವಾಗುತ್ತದೆ.

**೭. ರಥ ರೂಪಕದ ಅರ್ಥ**

ಈ ಏಳು ಶ್ಲೋಕಗಳು ರಥರೂಪಕದ ಅರ್ಥವನ್ನು ವಿಶದಪಡಿಸುತ್ತವೆ. ಅಂತರ್ಮುಖ ಯಾತ್ರೆಯ ಹಿನ್ನೆಲೆಯೂ ಕೂಡ ವಿಷಯ ಜಗತ್ತೇ. ಆದರೆ ಇದು ದೇಶಕಾಲದಲ್ಲಿ ನಡೆಯುವ ಬಹಿರ್ಮುಖ ಯಾತ್ರೆಯಲ್ಲ, ಅಂತಃಪ್ರವೇಶದ ಆಧ್ಯಾತ್ಮಿಕ ಯಾತ್ರೆ—ಮಾನವನ ಅಂತಃಸ್ವರೂಪದ ಜಾಗೃತಿಯ ಮೂಲಕ ಸತ್ಯದ ಅಂತರಾಳವನ್ನು ಪ್ರವೇಶಿಸುವುದು. ಜ್ಞಾನೇಂದ್ರಿಯಗಳು ರಥದಲ್ಲಿನ ಕುದುರೆಗಳಂತೆ, ಈ ಪ್ರಯಾಣಕ್ಕೆ ಚಾಲಕಶಕ್ತಿಯನ್ನು ನೀಡುತ್ತವೆ. ಆದರೆ ಅವುಗಳು ಪ್ರಯಾಣವನ್ನು ನಿಯಂತ್ರಿಸಲು ಮತ್ತು ಮಾರ್ಗದರ್ಶನ ಮಾಡಲು ಬಿಡಬಾರದು. ಹಾಗೆ ಮಾಡಿದಾಗ ಅದು ಅವುಗಳ ಪ್ರಯಾಣವಾಗಿಬಿಡುತ್ತದೆ ಮತ್ತು ರಥಿ ಹಾಗೂ ಸಾರಥಿ ನಿಃಸಹಾಯಕರಾಗಿ ಅವುಗಳನ್ನು ಅನುಸರಿಸಬೇಕಾಗುತ್ತದೆ. ಕುದುರೆಗಳ ಕಡಿವಾಣದಂತಿರುವ ಮನಸ್ಸು ಹೀಗಾಗದಂತೆ ತಡೆಯಬೇಕು. ಇಂದ್ರಿಯಗಳು ಅತ್ಯಂತ ಪ್ರಬಲವಾಗಿದ್ದರೆ ಅವುಗಳನ್ನು ಹತೋಟಿಗೆ ತರಲು ಮನಸ್ಸೂ ಅಷ್ಟೇ ದೃಢವಾಗಿರಬೇಕಾಗುತ್ತದೆ. ಆದರೆ ಮನಸ್ಸು ಇಂದ್ರಿಯಗಳನ್ನು ನಿಗ್ರಹಿಸಬೇಕಾದರೆ ಅದು, ಕಡಿವಾಣದಂತೆ ಸಾರಥಿಯಾದ ಬುದ್ಧಿಯ ದೃಢಹಸ್ತದಲ್ಲಿ ಇರಬೇಕು. ರಥಿಯ ಉದ್ದೇಶ ಮತ್ತು ಸಂತೋಷಕ್ಕೆ ಅನುಸಾರವಾಗಿ ಬುದ್ಧಿಯು ಪ್ರಯಾಣದ ಗತಿಯನ್ನು ನಿರ್ದೇಶಿಸುತ್ತದೆ. ಇದಕ್ಕೆ ಬುದ್ಧಿಯು ವಿಶುದ್ಧ ಜ್ಞಾನ ಮತ್ತು ವಿವೇಕದಿಂದ ಕೂಡಿರಬೇಕು. ನಮ್ಮ ಪ್ರಯಾಣದ ಜವಾಬ್ದಾರಿಯನ್ನು ಕುಡಿದು ಮತ್ತನಾದ, ಭಾವ ಸಮತೋಲನವಿಲ್ಲದ ಸಾರಥಿಗೆ ವಹಿಸುವುದು ಕ್ಷೇಮಕರವಲ್ಲ-ಅದು ಇಂದ್ರಿಯಗಳು ಅಥವಾ ಕುದುರೆಗಳಿಗೆ ಪ್ರಯಾಣದ ಹೊಣೆಯನ್ನು ವಹಿಸುವುದಕ್ಕಿಂತ ಕೇಡು.

ದೇಹ, ಇಂದ್ರಿಯಗಳು, ಮನಸ್, ಬುದ್ಧಿ ಮತ್ತು ಜೀವಗಳಂತೆ ರಥ, ಕುದುರೆಗಳು, ಕಡಿವಾಣ, ಸಾರಥಿ ಮತ್ತು ರಥಿ—ಇವರೆಲ್ಲರೂ ಪ್ರಯಾಣದಲ್ಲಿ ಅತಿಮುಖ್ಯ ಪಾತ್ರವನ್ನು ವಹಿಸುವರು. ಮುಂದು ಮುಂದಿನದು ಹಿಂದು ಹಿಂದಿನದಕ್ಕೆ ಚಾಲಕಶಕ್ತಿಯನ್ನು ನೀಡುತ್ತದೆ. ಆದರೆ ಪ್ರೇರಣೆಯು ಯಾವಾಗಲೂ ಬುದ್ಧಿಯಿಂದ ಮನಸ್ಸಿನ ಮೂಲಕ ಇಂದ್ರಿಯಗಳಿಗೆ ಹೋಗುವಂತೆ ನೋಡಿಕೊಳ್ಳುವುದು ಅತಿಮುಖ್ಯ. ಬುದ್ಧಿಯು ಧನ, ಅಧಿಕಾರ, ಕುಲ, ಸ್ಥಾನ ಮಾನಾದಿಗಳಿಂದ ಉನ್ಮತ್ತವಾಗಿದ್ದರೆ ತನ್ನ ನಿಜರೂಪದಿಂದ ಪತಿತವಾಗಿ ಇಂದ್ರಿಯಗಳ ಮಟ್ಟಕ್ಕೆ ಇಳಿಯುತ್ತದೆ. ಈ ಉನ್ಮತ್ತತೆಗಳಿಂದ ಮುಕ್ತವಾದ ಬುದ್ಧಿಯು ಪ್ರಕಾಶಮಾನವೂ ಶಾಂತವೂ ಆಗಿರುತ್ತದೆ ಮತ್ತು ಅದು ದೂರದೃಷ್ಟಿ ಸೂಕ್ಷ್ಮದೃಷ್ಟಿಗಳಿಂದ ಕೂಡಿರುತ್ತದೆ. ಅದರಲ್ಲಿ ಬುದ್ಧಿಶಕ್ತಿ, ಕಲ್ಪನಾಶಕ್ತಿ ಮತ್ತು ಇಚ್ಛಾಶಕ್ತಿಗಳು ಒಂದಾಗುತ್ತವೆ. ಜೀವನಕ್ಕೆ ಅದರ ಮಾರ್ಗದರ್ಶನ ಆಗ ಅತ್ಯುತ್ತಮ ರೀತಿಯಲ್ಲಿ ಆಗುತ್ತದೆ.

ಯಾವಾಗ ಇಂದ್ರಿಯಗಳೇ ಪ್ರಯಾಣದಲ್ಲಿ ಮುಖ್ಯಪಾತ್ರವನ್ನು ವಹಿಸುತ್ತವೋ ಆಗ ಜೀವನವು ಪ್ರಾಣಿಜೀವನದ ಸಮೀಪದಲ್ಲಿರುತ್ತದೆ. ಚೇತನವು ಮಾಂಸದ ಮಾರುಕಟ್ಟೆಯಲ್ಲಿ ವಿಕ್ರಯಿಸಲ್ಪಡುತ್ತದೆ.

ಈ ರಥರೂಪಕವು ಮಾನವ ಜೀವನವು ಒಂದು ನಿರಂತರ ಶಿಕ್ಷಣವೆಂಬುದನ್ನೂ ಪೂರ್ಣ ಸಫಲತೆಯೆಡೆಗೆ ಅದೊಂದು ಕ್ರಿಯಾತ್ಮಕ ಚಲನೆ ಎಂಬುದನ್ನೂ ತೋರಿಸಿಕೊಡುತ್ತದೆ. ಅದರ ಬೆಳಕಿನಲ್ಲಿ ಆಧ್ಯಾತ್ಮಿಕ ಅಭಿವ್ಯಕ್ತಿಗಾಗಿ ಮಾನವನು ನಡೆಸುವ ಹೋರಾಟವನ್ನು ನಾವು ನೋಡಬಹುದು. ದೇಹ, ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಜೀವಗಳ ಈ ಸಂಘಾತವು ಆತ್ಮಸಂಶೋಧನೆಗಾಗಿಯೇ ಪ್ರಕೃತಿಯು ನಿರ್ಮಿಸಿರುವ ಅತ್ಯಂತ ಸೂಕ್ಷ್ಮ ಯಂತ್ರ. ಮಾನವನು ತನ್ನೊಳಗೆ ಹುದುಗಿರುವ ಸ್ವಾತಂತ್ರ್ಯವೆಂಬ ಪರಿಮಳದಿಂದ ಮೋಹಿತನಾಗಿದ್ದಾನೆ ಎಂದು ವೇದಾಂತ ಹೇಳುತ್ತದೆ.

ಈ ಆಕರ್ಷಣೆಯೇ ಅವನನ್ನು ಅಸ್ಥಿರಗೊಳಿಸುವುದು, ಅಶಾಂತಗೊಳಿಸುವುದು, ಸದಾ ಹುಡುಕುತ್ತಿರುವಂತೆ ಮಾಡಿರುವುದು. ಇದರಿಂದ ಪ್ರೇರಿತನಾಗಿಯೇ ಅವನು ಒಂದಾದ ಮೇಲೊಂದನ್ನು ಸಾಧಿಸುತ್ತ ಮುಂದುವರಿಯುತ್ತಿರುವನು. ಈ ಯಾತ್ರೆ ಕೊನೆಯಿಲ್ಲದೆ ನಡೆಯುತ್ತಿದೆ. ತಾನೆಲ್ಲಿಗೆ ಹೋಗುತ್ತಿರುವನೆಂಬುದರ ಅರಿವೇ ಅವನಿಗಿಲ್ಲ. ಈ ಸುದೀರ್ಘಯಾತ್ರೆಯ ಸಂದರ್ಭದಲ್ಲಿ ಅವನು ಜ್ಞಾನ ಮತ್ತು ಸದ್ಗುಣಗಳನ್ನು ನಾಗರಿಕತೆ ಮತ್ತು ಸಂಸ್ಕೃತಿಯನ್ನು ಪಡೆದನು. ಈ ಎಲ್ಲ ಕ್ಷೇತ್ರಗಳಲ್ಲಿ ಸ್ವಾತಂತ್ರ್ಯವು ಸ್ಥಿರವಾಗಿ ಉಳಿಯುವಂತಹುದಲ್ಲ. ಈ ಅನಿತ್ಯ ಪ್ರಪಂಚದಲ್ಲಿ ಈ ಕಾರ್ಯ-ಕಾರಣ ನಿಮಿತ್ತ ಭೂಮಿಕೆಯಲ್ಲಿ ಸ್ವಾತಂತ್ರ್ಯವು ಅತಂತ್ರ ಸ್ಥಿತಿಯಲ್ಲಿರುತ್ತದೆ. ನಿತ್ಯ ಪ್ರಪಂಚದಲ್ಲಿ ಮಾತ್ರ ಆ ಸ್ವಾತಂತ್ರ್ಯವು ತನ್ನ ಸುಸ್ಥಿರರೂಪದಲ್ಲಿ ಉಳಿಯಬಲ್ಲದು. ಸ್ವಾಮಿ ವಿವೇಕಾನಂದರು ಹೇಳುತ್ತಾರೆ. (*Inspired talks, Complete Works of Swami Vivekananda*, Vol. III, fifth edition, pp. 52-53)

*ಯಾವ ನಿಯಮವೂ ನಿಮ್ಮನ್ನು ಮುಕ್ತರನ್ನಾಗಿ ಮಾಡದು, ನೀವಾಗಲೇ ಮುಕ್ತರು. ನೀವಾಗಲೇ ಮುಕ್ತಿಯನ್ನು ಹೊಂದಿರದಿದ್ದರೆ ಬೇರಾವುದೂ ನಿಮಗದನ್ನು ನೀಡಲಾರದು. ಆತ್ಮನು ಸ್ವಪ್ರಕಾಶನು. ಕಾರ್ಯಕಾರಣಗಳು ಅವನನ್ನು ಮುಟ್ಟಲಾರವು. ದೇಹಾಭಿಮಾನ ಶೂನ್ಯತೆಯೇ ಮುಕ್ತಿ. ಅತೀತ ಅನಾಗತಗಳ ಆಚೆ ಇರುವುದೆ ಬ್ರಹ್ಮ. ಮುಕ್ತಿಯು ಒಂದು ಪರಿಣಾಮವಾದರೆ ಅದಕ್ಕೆ ಯಾವ ಮೌಲ್ಯವೂ ಇಲ್ಲ. ಏಕೆಂದರೆ ಅದೊಂದು ಸಂಘಾತವಾಗುತ್ತದೆ. ಸಂಘಾತವೆಂದರೆ ಅದರಲ್ಲಿ ಬಂಧನದ ಬೀಜಗಳಿರುತ್ತವೆ. ಮುಕ್ತಿಯೆಂಬುದು ಪಡೆಯಬೇಕಾದುದಲ್ಲ, ಅದು ಆತ್ಮನ ನಿಜಸ್ವರೂಪವೇ ಆಗಿದೆ.*

### ೮. ಅಂತರ್ಮುಖೀಕರಣ

ಈ ಜ್ಞಾನ ಮತ್ತು ಶ್ರದ್ಧೆ ಸ್ವಾತಂತ್ರ್ಯಾನ್ವೇಷಣೆಯನ್ನು ಹೆಚ್ಚು ತುರ್ತಿನಿಂದ ಮಾಡಲು ಮಾನವನನ್ನು ಪ್ರೇರೇಪಿಸುತ್ತದೆ, ಅವನನ್ನು ಅಂತರ್ಮುಖಿಯನ್ನಾಗಿ ಮಾಡುತ್ತದೆ. ಲೌಕಿಕತೆಯಿಂದ ಲೋಕೋತ್ತರದೆಡೆಗೆ ಹೋಗುವಂತೆ ಹುರಿದುಂಬಿಸುತ್ತದೆ. ಈಗ ಅವನ ಅನ್ವೇಷಣೆ ಆತ್ಮನ ಕಡೆಗೆ ತಿರುಗುತ್ತದೆ. ಆದರೆ ಈ ಅನ್ವೇಷಣೆಯು ಬಾಹ್ಯಜಗತ್ತಿನ ಜೀವನ ಮತ್ತು ಕ್ರಿಯೆಗಳಿಗೆ ವಿರುದ್ಧವಾದುದಲ್ಲ. ಈ ಅಂತರ್ಮುಖ ಯಾತ್ರೆಯು ಜೀವನದ ಪರಮಾರ್ಥದಲ್ಲಿ ಪರಿಸಮಾಪ್ತಿಗೊಳ್ಳುವುದನ್ನೇ ಉಪನಿಷತ್ತು ನಮಗೆ ವಿಶದಪಡಿಸುತ್ತದೆ.

ಜ್ಞಾನಾಭಿವೃದ್ಧಿಯಾದಂತೆಲ್ಲ ಶಾಶ್ವತ, ಅಬಾಧಿತ, ಅನಂತ ಸತ್ಯವೊಂದು ಇರುವುದಾದರೆ ಅದು ಪ್ರಜ್ಞಾಕೇಂದ್ರದಲ್ಲಿಯೇ ಇರಬೇಕು ಎಂಬ ನಂಬಿಕೆ ಮಾನವನಿಗೆ ಉಂಟಾಯಿತು. ಈ ಕೇಂದ್ರದ ಅವಿಷ್ಕಾರವು ನಮ್ಮ ದೃಷ್ಟಿಯನ್ನು ಅಂತರ್ಮುಖಗೊಳಿಸುವ ಅಗಾಧ ಪ್ರಯತ್ನವನ್ನು ಅವಲಂಬಿಸಿದೆ. ಈ ಪ್ರಯತ್ನವು ಸತ್ಯವನ್ನು ಆವರಿಸಿರುವ ವಿವಿಧ ಕೋಶಗಳ ಸ್ವರೂಪವನ್ನು ಪ್ರಕಾಶಪಡಿಸುತ್ತದೆ. ಭಾರತದ ಪುರಾತನ ಋಷಿಗಳು ಗೈದ ಸಾಹಸವೇ ಇದು. ಇದನ್ನೇ ಉಪನಿಷತ್ತುಗಳು ಅನುಭವಪೂರ್ಣ ವಾಣಿಯಲ್ಲಿ ನಮಗೆ ತಿಳಿಸಿಕೊಡುತ್ತವೆ. ಕಠೋಪನಿಷತ್ತಿನ ಮೂರನೆ ಅಧ್ಯಾಯದ ೧೦ ಮತ್ತು ೧೧ನೇ ಶ್ಲೋಕಗಳು ಈ ಅಂತರ್ಮುಖೀಕರಣವು ಏಕೆ ಮತ್ತು ಹೇಗೆ ಎಂಬುದನ್ನು ತಿಳಿಸಿಕೊಡುತ್ತವೆ. ಈ ಶ್ಲೋಕಗಳ ಪೀಠಿಕಾರೂಪವಾಗಿ ಶಂಕರಾಚಾರ್ಯರು ಹೀಗೆ ಹೇಳುತ್ತಾರೆ :

*ಈಗ, ಆ ಸ್ಥಿತಿಯನ್ನೇ ಪ್ರತ್ಯಗಾತ್ಮ ಅಥವಾ ಅಂತರಾತ್ಮ ಎಂದು ಸಾಕ್ಷಾತ್ಕರಿಸಿಕೊಳ್ಳಬೇಕು. ಸ್ಥೂಲವಾದ ಜ್ಞಾನೇಂದ್ರಿಯಗಳಿಂದ ಪ್ರಾರಂಭವಾಗಿ ಸೂಕ್ಷ್ಮಾತಿಸೂಕ್ಷ್ಮ ಹಂತಗಳ ಮೂಲಕ ಮುಂದುವರಿಯುವ (ಆಧ್ಯಾತ್ಮಿಕ ಯಾತ್ರೆಯ ಮೂಲಕ) ಅದನ್ನು ಸಾಧಿಸಬೇಕು.*

*ಈ ಸತ್ಯವನ್ನು ತಿಳಿಸಿಕೊಡಲು ಉಪನಿಷತ್ತು ಮುಂದುವರಿಯುತ್ತದೆ*

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥

*ಇಂದ್ರಿಯ ವಿಷಯಗಳು (ತನ್ಮಾತ್ರಾವಸ್ಥೆಯು) ಇಂದ್ರಿಯಗಳಿಗಿಂತ ಶ್ರೇಷ್ಠವಾದುದು. ಮನಸ್ಸು ವಿಷಯಗಳಿಗಿಂತ ಶ್ರೇಷ್ಠವು. ಮನಸ್ಸಿಗಿಂತ ಶ್ರೇಷ್ಠವಾದುದು ಬುದ್ಧಿ. ಮಹಾನ್ ಆತ್ಮ (ವಿಶ್ವಮನಸ್ಸು) ಬುದ್ಧಿಗಿಂತಲೂ ಶ್ರೇಷ್ಠ.*

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

*ಮಹತ್ತಿಗಿಂತಲೂ ಅವ್ಯಕ್ತವು (ಅವಿಕೃತ ಪ್ರಕೃತಿ) ಶ್ರೇಷ್ಠವಾದುದು. ಅವ್ಯಕ್ತಕ್ಕಿಂತ ಶ್ರೇಷ್ಠನಾದವನು ಪುರುಷ (ಅನಂತಾತ್ಮ). ಪುರುಷನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಅವನೇ ಆತ್ಯಂತಿಕ ಸ್ಥಿತಿ, ಅವನೇ ಪರಮಗುರಿ.*

ಈ ಶ್ಲೋಕಗಳಲ್ಲಿ ಬರುವ ಪರಂ (ಶ್ರೇಷ್ಠ) ಎಂಬ ಶಬ್ದವನ್ನು ಶಂಕರಾಚಾರ್ಯರು ಸೂಕ್ಷ್ಮ, ಮಹಾಂತ (ಅಗಾಧವಾದುದು) ಪ್ರತ್ಯಗಾತ್ಮಭೂತ (ಅಂತರಾತ್ಮ ಸ್ವರೂಪದ್ದು) ಎಂದು ಅರ್ಥೈಸುತ್ತಾರೆ. ಅನುಭವದ ವೈಜ್ಞಾನಿಕ ಅಧ್ಯಯನವು ಆದರ ಆಳ ಆಳವಾದ ಪದರಗಳನ್ನು ಋಷಿಗಳಿಗೆ ಪ್ರಕಾಶಪಡಿಸಿತು. ಈ ಆಳದ ಮೂರು ಲಕ್ಷಣಗಳೇ ಮೇಲೆ ಹೇಳಿದ ಸೂಕ್ಷ್ಮತೆ, ಅಗಾಧತೆ ಮತ್ತು ಆಂತರಿಕತೆ. ಪ್ರತಿಯೊಂದು ಮುಂದಿನ ಪದರವು ಹಿಂದಿನದರ ಆತ್ಮ ಮತ್ತು ಅದನ್ನು ವ್ಯಾಪಿಸಿರುವುದು ಮಾತ್ರವಲ್ಲದೆ ಅದನ್ನು ಮೀರಿಯೂ ಇರುತ್ತದೆ. ಅನುಭವದ ಎಲ್ಲ ವಸ್ತುಗಳೂ—ಅವು ಸೂಕ್ಷ್ಮವಾಗಲಿ ಸ್ಥೂಲವಾಗಲಿ—ದೇಶಕಾಲನಿಮಿತ್ತಗಳಿಗೆ ಬದ್ಧವಾಗಿರುವುವು. ನಮ್ಮ ದೈನಂದಿನ ಅನುಭವದ ಭೌತ ವಸ್ತುಗಳು ಸತ್ಯದ ಅತ್ಯಂತ ಕೆಳಗಿನ ಹಂತಕ್ಕೆ ಸೇರಿದುವು, ಏಕೆಂದರೆ ಅವು ಅತ್ಯಂತ ಸ್ಥೂಲವೂ ಸೀಮಿತವೂ ಬಾಹ್ಯವೂ ಆಗಿವೆ. ಜ್ಞಾನೇಂದ್ರಿಯಗಳು ಅವುಗಳಿಗಿಂತ ಸೂಕ್ಷ್ಮವೂ ಅಗಾಧವೂ ಆಂತರಿಕವೂ ಆಗಿರುವುದರಿಂದ ಅವುಗಳಿಗಿಂತ ಶ್ರೇಷ್ಠ. ಇಂದ್ರಿಯ ವಿಷಯಗಳು, ಅವುಗಳ ತನ್ಮಾತ್ರರೂಪದಲ್ಲಿ, ಇಂದ್ರಿಯಗಳಿಗಿಂತ ಶ್ರೇಷ್ಠವಾದವು. ಮನಸ್ಸು ಇಂದ್ರಿಯ ವಿಷಯ ಮತ್ತು ಇಂದ್ರಿಯಗಳಿಗಿಂತ ಶ್ರೇಷ್ಠವಾದುದು. ಆರನೆಯ ಇಂದ್ರಿಯವಾದ ಅದು ಐದು ಇಂದ್ರಿಯಗಳ ಕ್ರಿಯೆಗಳನ್ನು ಸಂಯೋಜಿಸುತ್ತದೆ. ಇದಕ್ಕಿಂತಲೂ ಶ್ರೇಷ್ಠವಾದುದು ಬುದ್ಧಿ. ಇದು ಮನಸ್ಸು ಮತ್ತು ಇಂದ್ರಿಯಗಳನ್ನು ನಿಗ್ರಹಿಸುತ್ತದೆ. ಮನುಷ್ಯನಲ್ಲಿರುವ ಬುದ್ಧಿಯು ಮಹಾನಾತ್ಮದ ಒಂದು ಅಂಶ ಅಷ್ಟೇ. ಈ ಮಹಾನಾತ್ಮವು ಉಳಿದೆಲ್ಲಕ್ಕಿಂತಲೂ ಸೂಕ್ಷ್ಮವೂ ಅಗಾಧವೂ ಆಂತರಿಕವೂ ಆಗಿದೆ. ಇದನ್ನು ಕೆಲವು ಆಧುನಿಕ ವೈಜ್ಞಾನಿಕ ಬರಹಗಾರರು ಪ್ರಸ್ತಾಪಿಸುವ ವಿಶ್ವಮನಸ್ಸು ಎಂದು ಹೇಳಬಹುದು. ಈ ವಿಶ್ವಮನಸ್ಸು ಅಥವಾ ಮಹತ್ತಿಗಿಂತ ಅವ್ಯಕ್ತ ಅಥವಾ ಅವಿಕೃತ ಪ್ರಕೃತಿಯು ಶ್ರೇಷ್ಠವಾದುದು. ಮಹತ್ ಅವ್ಯಕ್ತದ ಪ್ರಥಮ ಅಭಿವ್ಯಕ್ತಿ. ಎಲ್ಲ ಅಭಿವ್ಯಕ್ತಿಯ ಹಿಂದೆಯೂ ಅನಭಿವ್ಯಕ್ತಿಯ ಒಂದು ಸ್ಥಿತಿ ಇದೆ. ಅವ್ಯಕ್ತವೇ ಇಡೀ ಭೌತ ಮತ್ತು ಮಾನಸಿಕ ಪ್ರಪಂಚದ ಹಿಂದಿರುವ ಅನಭಿವ್ಯಕ್ತ ಸ್ಥಿತಿ.

ಹೊರಗಿನ ಸ್ಥೂಲ ವಸ್ತುವಿನಿಂದ ಹಿಡಿದು ಅವ್ಯಕ್ತದವರೆಗೆ ಅನಂತಕಾರ್ಯಕಾರಣ ಸರಪಣಿಯು ಕೆಲಸಮಾಡುತ್ತಿದೆ. ಕಾರಣ ಯಾವಾಗಲೂ ಕಾರ್ಯಕ್ಕಿಂತ ಸೂಕ್ಷ್ಮವೂ ಹೆಚ್ಚು ಆಂತರಿಕವೂ ಆಗಿರುತ್ತದೆ; ಆದ್ದರಿಂದ ಪ್ರಮಾಣ ವ್ಯಾಪ್ತಿ ಮತ್ತು ಶಕ್ತಿಯಲ್ಲಿ ಹೆಚ್ಚು ಅಗಾಧವೂ ಆಗಿರುತ್ತದೆ. ಅವ್ಯಕ್ತಕ್ಕಿಂತಲೂ ಆಚೆ ಪುರುಷ ಅಥವಾ ನಿರ್ವಿಶೇಷ ಬ್ರಹ್ಮನಿರುವನು. ವಿಕಾರಾತ್ಮಕ ಜಗತ್ತಿನ ಹಿಂದಿರುವ ಅವಿಕಾರಿಯಾದ ಸತ್ಯವೇ ಅವನು. ಅವನು ಕಾರ್ಯಕಾರಣಗಳಿಗೆ ಅತೀತ. ಅಲೆಗಳಿಂದ ನಿರ್ಮುಕ್ತವಾದ ಶಾಂತ ಸಾಗರದಂತೆ ಶುದ್ಧಚೈತನ್ಯ ಸ್ವರೂಪನಾಗಿರುವನು ಅವನು. ಚೈತನ್ಯ ತತ್ತ್ವವಾದ ಈ ಪುರುಷನೇ ಮಾನವ ಮತ್ತು ಜಗತ್ತಿನ ಹಿಂದಿರುವ ಆತ್ಯಂತಿಕ ಸತ್ಯ ಎಂದು ವೇದಾಂತ ಸಾರುತ್ತದೆ. "ಪುರುಷನಿಗಿಂತ ಶ್ರೇಷ್ಠವಾದುದಿಲ್ಲ, ಅವನೇ ಆತ್ಯಂತಿಕ, ಅವನೇ ಪರಮಗುರಿ" ಎಂದು ಮೇಲಿನ ಶ್ಲೋಕವು ಹೇಳುತ್ತದೆ.

ಈ ಅಧ್ಯಯನದ ದೃಷ್ಟಿಯಲ್ಲಿ ಮಾನವನ ಶಕ್ತಿ ಮೂಲಗಳು ಅತ್ಯಂತ ಬಾಹ್ಯವಾದ ಭೌತಿಕ ಸ್ನಾಯುಬಲದಿಂದ ಪ್ರಾರಂಭವಾಗಿ ಅಂತರತಮವಾದ ಆತ್ಮಶಕ್ತಿಯವರೆಗೆ ವಿವಿಧ ಪ್ರಕಾರಗಳಿವುವು. ನರಬಲ ಮತ್ತು ಮನೋಬಲಗಳು ಇವುಗಳ ನಡುವೆ ಬರುತ್ತವೆ. ಇವೆಲ್ಲವೂ ಸೂಕ್ಷ್ಮತೆ, ಅಗಾಧತೆ ಮತ್ತು ಆಂತರಿಕತೆಗಳಲ್ಲಿ ಉನ್ನತೋನ್ನತ ಮಟ್ಟದಲ್ಲಿರುವುವು.

ನಮ್ಮ ಅನುಭವದ ಸೂಕ್ಷ್ಮಪರಿಶೀಲನೆಯು ಜ್ಞಾನ ಪ್ರಕ್ರಿಯೆಯ ಕೇಂದ್ರದಲ್ಲಿ ಅಪರಿಣಾಮಿಯಾದ ವಿಷಯಿ ಅಥವಾ ಜ್ಞಾತೃ ಇರುವುದನ್ನೂ ಪ್ರಕಾಶಪಡಿಸುತ್ತದೆ. ಶಂಕರಾಚಾರ್ಯರು "ವಿವೇಕಚೂಡಾಮಣಿ"ಯಲ್ಲಿ (ಶ್ಲೋಕ ೧೨೫, ೧೨೬) ಹೇಳುತ್ತಾರೆ :

ಅಸ್ತಿ ಕಶ್ಚಿತ್ ಸ್ವಯಂ ನಿತ್ಯಮಹಂಪ್ರತ್ಯಯಲಂಬನಃ ।
ಅವಸ್ಥಾತ್ರಯಸಾಕ್ಷೀ ಸನ್ ಪಂಚಕೋಶವಿಲಕ್ಷಣಃ ॥

*ಅಹಂ ಪ್ರಜ್ಞೆಗೆ ಆಲಂಬನನಾದ, ಸ್ವಭಾವತಃ ನಿತ್ಯನಾದ ಓರ್ವನು ಇರಬೇಕು. ಅವನು ಅವಸ್ಥಾತ್ರಯ ಸಾಕ್ಷಿಯೂ ಪಂಚಕೋಶಗಳಿಂದ ಬೇರೆಯೂ ಆಗಿರಬೇಕು.*

ಯೋ ವಿಜಾನಾತಿ ಸಕಲಂ ಜಾಗ್ರತ್‌ಸ್ವಪ್ನಸುಷುಪ್ತಿಷು ।
ಬುದ್ಧಿ-ತದ್ವೃತ್ತಿ-ಸದ್ಭಾವಮಭಾವಮಹಮಿತ್ಯಯಮ್ ॥

*ಜಾಗ್ರತ್-ಸ್ವಪ್ನ ಸುಷುಪ್ತಿಗಳಲ್ಲಿ ನಡೆಯುವ ಎಲ್ಲವನ್ನೂ ಅವನು ತಿಳಿಯುತ್ತಾನೆ. ಅವನು ಬುದ್ಧಿ ಮತ್ತು ಅದರ ವೃತ್ತಿಗಳ ಇರುವಿಕೆ ಮತ್ತು ಇಲ್ಲದಿರುವಿಕೆ ಎರಡನ್ನೂ ಅರಿಯುತ್ತಾನೆ. ಅವನು 'ನಾನು' ಎಂಬ ಅನುಭವದ ಆಧಾರ.*

ಕಠೋಪನಿಷತ್ತಿನ ಮೂರನೇ ಅಧ್ಯಾಯದ ಹನ್ನೆರಡನೆಯ ಶ್ಲೋಕವು ಆತ್ಮ ಅಥವಾ ಪುರುಷನ ಸರ್ವವ್ಯಾಪಿತ್ವವನ್ನೂ ಜೀವನದಲ್ಲಿ ಅವನನ್ನು ಅರಿಯುವ ಸಾಧ್ಯತೆಯನ್ನೂ ತಿಳಿಸುತ್ತದೆ :

ಏಷ ಸರ್ವೇಷು ಭೂತೇಷು ಗೂಢೋಽಽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥

*ಈ ಆತ್ಮನು ಎಲ್ಲ ಭೂತಗಳಲ್ಲೂ ಅಡಗಿಕೊಂಡಿರುವುದರಿಂದ ಎಲ್ಲರಿಗೂ ಕಾಣಿಸಿಕೊಳ್ಳುವುದಿಲ್ಲ. ಆದರೆ ಹರಿತವಾದ ಸೂಕ್ಷ್ಮವಾದ ಬುದ್ಧಿಯುಳ್ಳ ಸೂಕ್ಷ್ಮದರ್ಶಿಗಳಿಗೆ ಅವನು ಗೋಚರಿಸುತ್ತಾನೆ.*

ಆತ್ಮನು ವಿಷಯವಲ್ಲ, ಅವನು ವಿಷಯಿ ಅಥವಾ ಜ್ಞಾತೃ (ತಿಳಿಯುವವ). ವಿಷಯಿಯಾಗಿ ಅವನು ನಮ್ಮ ಎಲ್ಲಾ ಅನುಭವದ ಹಿಂದಿರುವ ಸತ್ಯ, ಕೇವಲ ತಾರ್ಕಿಕ ಊಹೆಯಲ್ಲ. ಅವನು ಎಲ್ಲರಿಗೂ ಗೋಚರನಲ್ಲ. ಸಾಮಾನ್ಯರಿಗೆ ಮಾತ್ರವಲ್ಲ ದೊಡ್ಡ ವಿದ್ವಾಂಸರಿಗೂ ಕೂಡ ಅವನು ಗೋಚರನಲ್ಲ. ಇದಕ್ಕೆ ಕಾರಣ, ಶ್ಲೋಕವು ಹೇಳುವಂತೆ, ಅವನು ಗೂಢನು. ಅವನ ಇರುವಿಕೆ ರಹಸ್ಯವಾದುದು. ಆದ್ದರಿಂದ 'ನ ಪ್ರಕಾಶತೇ' "ಕಾಣಿಸಿಕೊಳ್ಳುವುದಿಲ್ಲ" ಅಸಂಸ್ಕೃತ ಬುದ್ಧೇಃ ಅವಿಜ್ಞೇಯತ್ವಾತ್—"ಅಶುದ್ಧ ಬುದ್ಧಿಯುಳ್ಳವನಿಗೆ ಆತ್ಮನು ತಿಳಿಯುವುದಿಲ್ಲ" ಎಂದು ಶಂಕರಾಚಾರ್ಯರು ವ್ಯಾಖ್ಯಾನಿಸುತ್ತಾರೆ. ಅನುಭವದ ಮೇಲ್ಪದರದಲ್ಲಿ ಅವನು ಕಾಣಿಸುವುದಿಲ್ಲ. ಅದರ ಆಳದಲ್ಲಿ ಇರುವನು. ಶ್ಲೋಕದ ಎರಡನೆಯ ಭಾಗದಲ್ಲಿ ಉಪನಿಷತ್ತು, ಸತ್ಯಗಳಲ್ಲೆಲ್ಲ ಅತ್ಯಂತ ಸೂಕ್ಷ್ಮವಾದ ಮತ್ತು ಪ್ರಗಾಢವಾದ ಆತ್ಮಸತ್ಯವನ್ನು ತಿಳಿಯಲು ಬೇಕಾದ ಅಸಾಧಾರಣ ಶಿಸ್ತನ್ನು ಕುರಿತು ಹೇಳುತ್ತದೆ. ರಹಸ್ಯವಾದರೂ ಆತ್ಮನು ಯಾವಾಗಲೂ ಹಾಗೆಯೇ ಉಳಿಯುವು ದಿಲ್ಲ. ಅಜ್ಞಾತನಾದರೂ ಅಜ್ಞೇಯನೆಂದು ವೇದಾಂತ ಹೇಳುವುದಿಲ್ಲ. ಆದ್ದರಿಂದ ಶ್ಲೋಕವು ಹೇಳು ತ್ತದೆ ದೃಶ್ಯತೇ—"ಅವನು ಕಾಣಿಸುವನು." ಎಂದು. ಏಕೆಂದರೆ ಅವನು ಎಲ್ಲ ಅನುಭವದ ಹಿಂದಿರುವ

ಸತ್ಯ. ತಾರ್ಕಿಕ ಬುದ್ಧಿಗೆ ಆತ್ಮನು ರಹಸ್ಯವಾಗಿಯೇ, ಅಜ್ಞಾತ ಅಜ್ಞೇಯವಾಗಿಯೇ ಉಳಿಯುತ್ತಾನೆ. ಆದರೆ ಬುದ್ಧಿಯ ಸ್ವರೂಪವು ಬದಲಾದರೆ ಅದು ಅಸಾಧ್ಯವನ್ನು ಸಾಧಿಸುತ್ತದೆ. ಇದಕ್ಕೆ ಬುದ್ಧಿಯ ಸ್ಥಿತಿ ಹೇಗಿರಬೇಕು ? ಶ್ಲೋಕದ ಎರಡನೆಯ ಭಾಗವು ಉತ್ತರಿಸುತ್ತದೆ. ಅಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ : "ಸೂಕ್ಷ್ಮದರ್ಶಿಗಳಿಂದ ಹರಿತವೂ ಸೂಕ್ಷ್ಮವೂ ಆದ ಬುದ್ಧಿಯ ಮೂಲಕ."

ಈ ಶ್ಲೋಕದ ಅರ್ಥವನ್ನು ವಿವರಿಸುತ್ತ ಶಂಕರಾಚಾರ್ಯರು ಹೇಳುತ್ತಾರೆ :

*ಅವರು ಸೂಕ್ಷ್ಮದರ್ಶಿಗಳು—ಸೂಕ್ಷ್ಮವಾದುದನ್ನು ನೋಡಬಲ್ಲವರು. 'ವಿಷಯಗಳು ಇಂದ್ರಿಯಗಳಿಗಿಂತ ಶ್ರೇಷ್ಠ' ಇತ್ಯಾದಿ ಶ್ಲೋಕದಲ್ಲಿ ಹೇಳಿರುವಂತೆ ಹಂತ ಹಂತವಾಗಿ ಸೂಕ್ಷ್ಮಾತಿಸೂಕ್ಷ್ಮವಾದುದನ್ನು ಅರಿಯುತ್ತ ತರಬೇತಿಯನ್ನು ಪಡೆದು ಪರಮ ಸೂಕ್ಷ್ಮವಾದ ಸತ್ಯವನ್ನು (ಆತ್ಮನನ್ನು) ಅರಿಯಬಲ್ಲವರು.*

ಮುಂದಿನ ೧೩ನೇ ಶ್ಲೋಕದಲ್ಲಿ ಕಠೋಪನಿಷತ್ತು ಅಂತರ್ಮುಖೀಕರಣದ ವಿಧಾನವನ್ನು, ಉನ್ನತೋನ್ನತ ಲೋಕೋತ್ತರ ಹಂತಗಳಿಗೆ ಪ್ರಜ್ಞೆಯನ್ನು ಏರಿಸುವುದನ್ನು ವಿವರಿಸುತ್ತದೆ. ಇದೊಂದು ಸುದಂರವಾದ ಧ್ಯಾನವಿಧಾನ, ಮತ್ತು ಈ ಧ್ಯಾನವು ಆತ್ಮೈಕತ್ವ ಅನುಭವದಲ್ಲಿ ಪರಿಸಮಾಪ್ತಿಗೊಳ್ಳುತ್ತದೆ :

ಯಚ್ಛೇತ್ ವಾಕ್ ಮನಸಿ ಪ್ರಾಜ್ಞಃ ತದ್ಯಚ್ಛೇತ್ ಜ್ಞಾನ ಆತ್ಮನಿ ।
ಜ್ಞಾನಂ ಆತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇತ್ ಶಾಂತ ಆತ್ಮನಿ ॥

*ಪ್ರಾಜ್ಞನು ವಾಕ್ಕನ್ನು ಮನಸ್ಸಿನಲ್ಲಿಯೂ, ಮನಸ್ಸನ್ನು ಬುದ್ಧಿಯಲ್ಲಿಯೂ ಲಯಗೊಳಿಸಬೇಕು. ಅನಂತರ ಬುದ್ಧಿಯನ್ನು ಮಹತ್ತಿನಲ್ಲಿಯೂ ಅದನ್ನು ಮತ್ತೆ ಪುರುಷನಲ್ಲಿಯೂ ಲಯಗೊಳಿಸಬೇಕು.*

ಕಠೋಪನಿಷತ್ತು ಈ ಅಂತರ್ಮುಖೀಕರಣದ ಹಿಂದಿರುವ ತಾತ್ತ್ವಿಕಾಂಶವನ್ನು ಮುಂದಿನ ಅಧ್ಯಾಯದ ಪ್ರಾರಂಭದ ಶ್ಲೋಕದಲ್ಲಿ ವಿಶದಪಡಿಸುತ್ತದೆ.

ಆತ್ಮನ ಅಸ್ತಿತ್ವವು ಇಷ್ಟೊಂದು ರಹಸ್ಯಾತ್ಮಕವಾದುದಾದರೆ, ಅವನನ್ನು ಸಾಕ್ಷಾತ್ಕರಿಸಿಕೊಳ್ಳುವ ವಿಧಾನವೂ ಅಷ್ಟೇ ಕಷ್ಟಸಾಧ್ಯವಾಗಿರಬೇಕು. ಇದಕ್ಕೆ ಬೇಕಾಗಿರುವ ಮುಖ್ಯ ಆವಶ್ಯಕತೆ ಮಾನವನ ಆಂತರಿಕ ಜೀವನದ ಶಿಸ್ತು ಮತ್ತು ನಿಗ್ರಹ. ವೇದಾಂತದ ಪ್ರಕಾರ ಇದನ್ನು ಸಾಧಿಸುವುದಕ್ಕೆ ಎರಡು ಮಾರ್ಗಗಳಿವೆ. ಮೊದಲನೆಯದು ಜ್ಞಾನಮಾರ್ಗ—ನಿರ್ಗುಣ ಬ್ರಹ್ಮನನ್ನು ಕುರಿತು ಧ್ಯಾನಿಸುವುದು ; ಎರಡನೆಯದು ಭಕ್ತಿಮಾರ್ಗ—ಸಗುಣ ಬ್ರಹ್ಮೋಪಾಸನೆ (ಇದರಲ್ಲಿ ಕರ್ಮಯೋಗವೂ ಸೇರುತ್ತದೆ.) ಮೇಲಿನ ಶ್ಲೋಕವು ವಿಶೇಷವಾಗಿ ಜ್ಞಾನಮಾರ್ಗಕ್ಕೆ ಸಂಬಂಧಿಸಿದುದಾದರೂ ಭಕ್ತಿಮಾರ್ಗಕ್ಕೂ ಅದು ಅನ್ವಯಿಸುತ್ತದೆ. ವೇದಾಂತವು ಆತ್ಯಂತಿಕ ಸತ್ಯವು ಸುಗುಣವೂ ಹೌದು, ನಿಗುರ್ಣವೂ ಹೌದು ಎಂದು ಹೇಳುತ್ತದೆ. ಜ್ಞಾನ ಮಾರ್ಗದ ಆತ್ಯಂತಿಕ ಸಾಕ್ಷಾತ್ಕಾರದಲ್ಲಿ ಸಾಂತ ಪ್ರಜ್ಞೆಯು ಅನಂತ ಶುದ್ಧ ಪ್ರಜ್ಞೆಯಲ್ಲಿ ಲಯ ಹೊಂದುತ್ತದೆ. ಕಠೋಪನಿಷತ್ತು ಇದನ್ನು ಹೀಗೆ ವಿವರಿಸುತ್ತದೆ (೪.೧೫):

ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥

*ಓ ಗೌತಮ, ಶುದ್ಧ ನೀರನ್ನು ಶುದ್ಧನೀರಿಗೆ ಸುರಿದರೆ ಶುದ್ಧವೇ ಆಗಿರುವಂತೆ (ಬ್ರಹ್ಮ)ಜ್ಞಾನವನ್ನು ಪಡೆದ ಮುನಿಯ ಆತ್ಮವೂ (ಬ್ರಹ್ಮವೇ) ಆಗಿರುತ್ತದೆ.*

ಭಕ್ತಿಮಾರ್ಗದ ಆತ್ಯಂತಿಕ ಸಾಕ್ಷಾತ್ಕಾರದಲ್ಲಿ ಸಾಂತಪ್ರಜ್ಞೆಯು ಭಗವಂತನ ಸಾನ್ನಿಧ್ಯದ ಆನಂದ ವನ್ನು ಸವಿಯಲು ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತದೆ. ಇಲ್ಲಿ ಭಗವಂತನು ಅಥವಾ ಸಗುಣ ಬ್ರಹ್ಮನು ಭಕ್ತನ ಪಾಲಿಗೆ ಎಲ್ಲ ಮಾನವ ಸಂಬಂಧಗಳ ಹಿಂದಿರುವ ದಿವ್ಯ ಸೂತ್ರವಾಗುತ್ತಾನೆ. ಭಕ್ತನ ಈ ಭಾವವನ್ನು ಶ್ರೀರಾಮಕೃಷ್ಣರು, "ನಾನು ಸಕ್ಕರೆಯಾಗಲು ಇಷ್ಟಪಡುವುದಿಲ್ಲ, ಸಕ್ಕರೆಯನ್ನು ಸವಿಯಲು ಇಷ್ಟಪಡುತ್ತೇನೆ" ಎಂಬ ಮಾತಿನ ಮೂಲಕ ವ್ಯಕ್ತಪಡಿಸುತ್ತಿದ್ದರು.

*ಪ್ರಾಜ್ಞನು ವಾಕ್ಕನ್ನು ಮನಸ್ಸಿನಲ್ಲಿಯೂ ಮನಸ್ಸನ್ನು ಬುದ್ಧಿಯಲ್ಲಿಯೂ ಲಯಗೊಳಿಸ ಬೇಕು. ಅನಂತರ ಬುದ್ಧಿಯನ್ನು ಮಹತ್ತಿನಲ್ಲಿಯೂ, ಮತ್ತೆ ಅದನ್ನು ಪುರುಷನಲ್ಲಿಯೂ ಲಯ ಗೊಳಿಸಬೇಕು.*

ಈ ಶ್ಲೋಕದಲ್ಲಿ ಆತ್ಮ ಅಥವಾ ಪುರುಷನನ್ನು ಶಾಂತ ಎಂದು ಪರಿಗಣಿಸಲಾಗಿದೆ. ಇದನ್ನು ವ್ಯಾಖ್ಯಾನಿಸುತ್ತ ಶಂಕರಾಚಾರ್ಯರು ಹೇಳುತ್ತಾರೆ :

ಶಾಂತೇ ಸರ್ವ-ವಿಶೇಷ -ಪ್ರತ್ಯಯಾಸ್ತಿಮಿತ-ರೂಪೇ ಅವಿಕ್ರಿಯೇ ಸರ್ವಾಂತರೇ ಸರ್ವಬುದ್ಧಿ-ಪ್ರತ್ಯಯ-ಸಾಕ್ಷಿಣಿ ಮುಖ್ಯ ಆತ್ಮನಿ

*ಶಾಂತ ಸ್ವರೂಪನಾದ ಅಂದರೆ ಎಲ್ಲ ವಿಶೇಷ ಪ್ರತ್ಯಯಗಳೂ ಸ್ತಿಮಿತಗೊಂಡ ರೂಪನಾದ, ಅವಿಕ್ರಿಯನಾದ, ಸರ್ವಾಂತರವರ್ತಿಯಾದ, ಎಲ್ಲ ಮನೋವೃತ್ತಿಗಳ ಸಾಕ್ಷಿಯಾದ ಮುಖ್ಯ ಆತ್ಮನಲ್ಲಿ.*

ಅಂತರಾತ್ಮನಲ್ಲಿ ಎಲ್ಲ ಶಾಂತಿ, ಬಹಿರಾತ್ಮನಲ್ಲಿ ಎಂದರೆ ಭೌತಿಕ ಸ್ಥಿತಿಯಲ್ಲಿ ಎಲ್ಲ ಅಶಾಂತಿ, ಗಲಾಟೆ. ನಾವು ನಮ್ಮ ಆತ್ಮಕೇಂದ್ರದಿಂದ ದೂರವಾದಷ್ಟು ನಮ್ಮ ಜೀವನದಲ್ಲಿ ಗಲಾಟೆ, ಅಸ್ಥಿರತೆ ಅಶಾಂತಿ ಅಧಿಕವಾಗುತ್ತದೆ. ಶಾಂತಿಯು ಹೊರಗಿನ ವಸ್ತುಗಳಲ್ಲಿಲ್ಲ. ಅದು ಮಾನವನ ಅಂತರಾಳ ದಲ್ಲಿದೆ. ಈ ಶಾಂತಿಯನ್ನು ನಮ್ಮ ಇಹಜೀವನದಲ್ಲಿಯೇ ಸಾಧನೆಯ ಮೂಲಕ ಅಂತರ್ಮುಖಿಗಳಾಗಿ ಪಡೆಯಬೇಕು. ಶಾಶ್ವತ ಅಂತರಾತ್ಮನ ಬಂಡೆಯಮೇಲೆ ನಮ್ಮ ಜೀವನ ಸೌಧವನ್ನು ನಿರ್ಮಿಸಿದರೆ ಅದು ಸುಸ್ಥಿರವಾಗಿ ಉಳಿಯುತ್ತದೆ.

ಈ ಆತ್ಮತತ್ವದ ಅನುಷ್ಠಾನಿಕ ಅಂಶವು ಕಠೋಪನಿಷತ್ತಿನ ಆಗಲೇ ಉಲ್ಲೇಖಿಸಿದ ಹತ್ತು ಮತ್ತು ಹನ್ನೊಂದನೆಯ ಶ್ಲೋಕದಲ್ಲಿ ವಿವರಿಸಲಾಗಿದೆ. ಅತ್ಯಂತ ಸೂಕ್ಷ್ಮ ವಿಶ್ಲೇಷಣೆಯ ಮೂಲಕ ಉಪನಿಷತ್ತು ಆತ್ಮನು ಮಾನವನ ಮತ್ತು ಪ್ರಕೃತಿಯ "ಶಾಶ್ವತ ಅಂತರಾಳ" ಎಂಬುದನ್ನು ತೋರಿಸುತ್ತದೆ. ಅಂತರವು ಬಾಹ್ಯಕ್ಕಿಂತ ಹೆಚ್ಚು ಸೂಕ್ಷ್ಮವೂ ಅಗಾಧವೂ ಎಂಬುದನ್ನು ತೋರಿಸ ಲಾಗಿದೆ. ಮಾನವನು ತನ್ನೊಳಗೆ ಪ್ರವೇಶಿಸಿದಂತೆಲ್ಲ ಹೆಚ್ಚು ವಿಶಾಲವೂ ಶ್ರೀಮಂತವೂ ಆದ ಆಯಾಮಗಳನ್ನು ಗುರುತಿಸುತ್ತ ಹೋಗುತ್ತಾನೆ. "ಜೀವನವನ್ನು ಕಳೆದುಕೊಳ್ಳುವುದರ ಮೂಲಕ ಅದನ್ನು ಪಡೆಯುವುದು" ಎಂಬ ವಿರೋಧಾಭಾಸ ಹೇಳಿಕೆಯ ಮೂಲಕ ಯೇಸುಕ್ರಿಸ್ತನು ಇದೇ ಆಧ್ಯಾತ್ಮಿಕ ಅನ್ವೇಷಣೆಯನ್ನು ಪ್ರಸ್ತಾಪಿಸುತ್ತಾನೆ. ಬಾಹ್ಯಜೀವನವನ್ನು ಕಳೆದುಕೊಳ್ಳುವುದರ ಮೂಲಕ ನಾವು ಅಂತರ್ಜೀವನವನ್ನು ಹೆಚ್ಚು ಪಡೆಯುತ್ತೇವೆ. ಸಾಂತ, ಅಲ್ಪಜೀವನವನ್ನು ಕಳೆದುಕೊಂಡು, ಶಾಶ್ವತ, ಅನಂತ ಜೀವನವನ್ನು ಪಡೆಯುತ್ತೇವೆ.

ಮೂರನೆ ಅಧ್ಯಾಯದ ಹದಿನೈದನೇ ಶ್ಲೋಕದಲ್ಲಿ ಕಠೋಪನಿಷತ್ತು ಆತ್ಮನ ಸೂಕ್ಷ್ಮಾತಿಸೂಕ್ಷ್ಮ ಸತ್ಯವನ್ನೂ ಆತ್ಮ ಸಾಕ್ಷಾತ್ಕಾರದ ಫಲವನ್ನೂ ವಿವರಿಸುತ್ತದೆ :

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾರಸಂ ನಿತ್ಯಮಗಂಧವಚ್ಚಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥

*ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳ ಆಚೆ ಇರುವ ಅವ್ಯಯನಾದ, ನಿತ್ಯನಾದ, ಅನಾದ್ಯನಂತನಾದ, ಮಹತ್ತಿಗೆ ಅತೀತನಾದ ಸುಸ್ಥಿರನಾದ ಆತ್ಮನನ್ನು ಅರಿತುಕೊಂಡು ಮಾನವನು ಮೃತ್ಯುಮುಖದಿಂದ ಪಾರಾಗುತ್ತಾನೆ.*

ಮಾನವನು ಇಂದ್ರಿಯಗಳನ್ನು ಮತ್ತು ಇಂದ್ರಿಯಬದ್ಧ ಮನಸ್ಸನ್ನು ಶಾಂತಗೊಳಿಸಲು ಸಮರ್ಥನಾದರೆ ಅದ್ಭುತ ಪರಿವರ್ತನೆಯುಂಟಾಗುತ್ತದೆ ಎಂದು ಉಪನಿಷತ್ತು ಹೇಳುತ್ತದೆ. ಮಾನವನು ತನ್ನ ನೈಜ ಆತ್ಮನ ವೈಭವವನ್ನು ಕಾಣುತ್ತಾನೆ. ಭೌತಿಕ ವಿಜ್ಞಾನಗಳಲ್ಲಿ ಭೌತವಸ್ತುವಿನ ವರ್ತನೆಗಳನ್ನು ವಿವಿಧ ಉಷ್ಣಾಂಶಗಳಲ್ಲಿ ಮತ್ತು ಒತ್ತಡಗಳಲ್ಲಿ ಅಧ್ಯಯನ ಮಾಡುತ್ತೇವೆ, ಹಾಗೂ ಅದರಿಂದ ಉತ್ತಮ ಫಲಿತಾಂಶಗಳನ್ನು ಪಡೆಯುತ್ತೇವೆ. ಹೀಗೆಯೆ ಮಾನವನ ಅಂತರ್ಜೀವನದ ವಿಜ್ಞಾನದಲ್ಲಿ ಮಾನವನನ್ನು ಅನೇಕ ಆಂತರಿಕ ಸಾಧನೆಗಳ ಸ್ಥಿತಿಯಲ್ಲಿ ಅಧ್ಯಯನ ಮಾಡುತ್ತೇವೆ. ಈ ಅಧ್ಯಯನವು ಭೌತಿಕ ವಿಜ್ಞಾನಗಳಿಗಿಂತಲೂ ಉತ್ತಮ ಮತ್ತು ವಿಶಿಷ್ಟ ಫಲಿತಾಂಶಗಳನ್ನು ನೀಡಿವೆ. ಜೂಲಿಯನ್ ಹಕ್ಸ್ಲೆ ಈ ಅಧ್ಯಯನವನ್ನು ಮಾನವ ಸಾಧ್ಯತೆಗಳ ವಿಜ್ಞಾನ ಎಂದು ಕರೆಯುತ್ತಾರೆ. ಈ ಸಾಧನೆಯ ಆತ್ಯಂತಿಕ ಫಲವೇ ಜ್ಞಾನ ಅಥವಾ ಬೋಧಿ. ಮಾನವನು ಇದರ ಮೂಲಕ ಅಮೃತತ್ವವನ್ನು ಪಡೆಯುತ್ತಾನೆ. ಇದೇ ಮಾನವ ವಿಕಾಸದ ಆತ್ಯಂತಿಕ ಸ್ಥಿತಿ ಎಂದು ವೇದಾಂತ ಹೇಳುತ್ತದೆ. ಅಮೃತತ್ವವೆಂದರೆ ಮೃತ್ಯುವಿನ ನಂತರವೂ ಜೀವಾತ್ಮನ ಉಳಿಯುವಿಕೆಯಲ್ಲ; ಅಥವಾ ಮಾಯಾಮಂತ್ರಗಳಿಂದ ಪಡೆಯಬಹುದಾದ ಸಂದೇಹಾಸ್ಪದ ಸ್ಥಿತಿಯೂ ಅಲ್ಲ; ಅಥವಾ ಸುದೀರ್ಘ ಸ್ವರ್ಗವಾಸವೂ ಅಲ್ಲ. ಇದು ಇಲ್ಲಿಯೇ ಈಗಲೇ ಪಡೆಯಬಹುದಾದ ಸಾಕ್ಷಾತ್ಕಾರದ ಸ್ಥಿತಿ.

## ೯. ಲೌಕಿಕ ಮತ್ತು ಪಾರಮಾರ್ಥಿಕ

ಉಪನಿಷತ್ತಿನ ಈ ಮೇಲಿನ ಶ್ಲೋಕಗಳು ಪ್ರಜ್ಞೆಯನ್ನು ಹಂತ ಹಂತವಾಗಿ ಉನ್ನತಿಗೇರಿಸುವುದು ಹೇಗೆಂಬುದನ್ನು ತಿಳಿಸಿಕೊಡುತ್ತವೆ. ಈ ಆಧ್ಯಾತ್ಮಿಕ ವಿಕಾಸವು ಹಿಂದಿನ ನೈತಿಕಹಂತವನ್ನು ಮೀರಿ ಹೋಗುತ್ತದೆ. ಈ ಮಹಾಸಾಹಸಯಾತ್ರೆಯಲ್ಲಿ ತೊಡಗುವ ಅನುಭಾವಿಗಳನ್ನು ಆಧ್ಯಾತ್ಮ ವಿಜ್ಞಾನಿಗಳೆಂದು ಕರೆಯಬಹುದು. ಮಾಕ್ಸ್ ಮುಲ್ಲರ್ ಹೀಗೆ ವರ್ಣಿಸುತ್ತಾರೆ (*Three Lectures on Vedanta Philosophy*, p.171) :

*ಮೂಲತಃ Mystic ಎಂದರೆ ಸಿದ್ಧತೆ ಮತ್ತು ದೀಕ್ಷೆಯ ಆವಶ್ಯಕತೆಯನ್ನು ಸೂಚಿಸುತ್ತದೆ. Mysteries ಎಂದರೆ ಕತ್ತಲೆಯಲ್ಲಿಟ್ಟಿರುವ ಕಪ್ಪು ಪದಾರ್ಥವೆಂದಲ್ಲ, ಆದರೆ ಕಪ್ಪುಪದಾರ್ಥವನ್ನು ಪ್ರಕಾಶಗೊಳಿಸುವುದು, ಸ್ಪಷ್ಟಪಡಿಸುವುದು ಮತ್ತು ಅರ್ಥೈಸುವುದು ಎಂದರ್ಥ.*

ಭೌತಿಕ ವಿಜ್ಞಾನಗಳು ವಿಶ್ವದ ಸೂಕ್ಷ್ಮ ಪದರಗಳನ್ನು (ರಹಸ್ಯ) ಮಿಸ್ಟರೀಸ್ ಎಂದು ವಿವರಿಸುವಂತೆ, ಆಧ್ಯಾತ್ಮ ವಿಜ್ಞಾನವು ಆತ್ಮ-ಪರಮಾತ್ಮರನ್ನು ಮಿಸ್ಟರೀಸ್ (ರಹಸ್ಯ) ಎಂದು ಹೇಳುತ್ತದೆ. ಇವೆರಡು ಕೂಡ ಪ್ರಾಮಾಣಿಕ ಸಂಶೋಧಕರಿಗೆ ಈ ರಹಸ್ಯವನ್ನು ಭೇದಿಸಲು ಸಹಾಯಮಾಡುತ್ತವೆ.

ಅನುಭಾವಿಯು ಧರ್ಮದ ಬಗ್ಗೆ ಆತ್ಮ-ಪರಮಾತ್ಮರ ಬಗ್ಗೆ ಮಾತನಾಡುವುದರಿಂದ ತೃಪ್ತನಾಗುವುದಿಲ್ಲ. ಈ ಸತ್ಯಗಳನ್ನು ಅನುಭವಿಸಲು ತವಕಪಡುತ್ತಾನೆ. ಅವನ ಭಾಷೆ 'ನಾನು ನಂಬುತ್ತೇನೆ' ಎಂದಲ್ಲ, 'ನಾನು ಅನುಭವಿಸಿರುವೆನು' ಎಂದು. ಈ ಹಿಂದೆ ಪ್ರಸ್ತಾಪಿಸಿರುವಂತೆ, ಬುದ್ಧನು 2500 ವರ್ಷಗಳ ಹಿಂದೆ ಪೂರ್ಣಿಮೆಯಂದು ಸಾಕ್ಷಾತ್ಕಾರವನ್ನು ಪಡೆದ ಮೇಲೆ ಆನಂದದಿಂದ ಹೀಗೆ ಉದ್ಗರಿಸುತ್ತಾನೆ. "ನಾನು ಅಮೃತತ್ವವನ್ನು ಪಡೆದಿದ್ದಾಯಿತು ; ಎಲ್ಲ ಬಂಧನಗಳೂ ಕಳಚಿದವು ; ಮಾನವನು ಪಡೆಯಬೇಕಾದುದನ್ನು ನಾನು ಪಡೆದಿರುವೆನು."

ಆದ್ದರಿಂದ ವೇದಾಂತವು ಆಧ್ಯಾತ್ಮಿಕತೆಯ ಎರಡು ಸ್ತರಗಳನ್ನು ಕುರಿತು ಹೇಳುತ್ತದೆ. ಮೊದಲನೆಯ ಆಧ್ಯಾತ್ಮಿಕಸ್ತರವು ಲೌಕಿಕಕ್ಕೆ ಸಂಬಂಧಿಸಿದ ನೈತಿಕ ವಿಕಾಸ—ಇದನ್ನೇ ಧರ್ಮ

ಎಂದು ಕರೆಯುವುದು. ಎರಡನೆಯ ಆಧ್ಯಾತ್ಮಿಕ ಸ್ತರವು ಅನುಭಾವಿಕ ಆಯಾಮಕ್ಕೆ ಸಂಬಂಧಿಸಿದುದು. ಇದನ್ನೇ ಉಪನಿಷತ್ತು ಮತ್ತು ಗೀತೆ ಅಮೃತ ಎಂದು ಕರೆಯುತ್ತವೆ. ಧರ್ಮದ ಹಂತದಲ್ಲಿ ಮಾನವನು ಮನೋ-ಸಾಮಾಜಿಕ ಸ್ತರದಲ್ಲಿ ಆಧ್ಯಾತ್ಮಿಕ ಯಾತ್ರೆಯನ್ನು ಪ್ರಾರಂಭಿಸುತ್ತಾನೆ. ಅವನು ವೈಯಕ್ತಿಕತೆಯಿಂದ ಮಾನವೀಯತೆಯೆಡೆಗೆ ವಿಕಾಸ ಹೊಂದುತ್ತಾನೆ, ನೈತಿಕ ಪ್ರಜ್ಞೆಯನ್ನು ಪಡೆಯುತ್ತಾನೆ. ಆರೋಗ್ಯಕರ ಮಾನವ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾನೆ, ಮತ್ತು ಮಾನವೀಯ ಕಳಕಳಿಯನ್ನು ಮೈಗೂಡಿಸಿಕೊಳ್ಳುತ್ತಾನೆ. ಸಾಮಾಜಿಕ ಹಂತದಲ್ಲಿ ಮಾನವನು ತನ್ನ ಜೀವನದ ಸಾಫಲ್ಯವನ್ನು ಹೀಗೆ ಕಂಡುಕೊಂಡಮೇಲೆ ಅಮೃತ ಅಥವಾ ಉನ್ನತ ಆಧ್ಯಾತ್ಮಿಕ ವಲಯದಲ್ಲಿ ತನ್ನ ಆಧ್ಯಾತ್ಮಿಕ ಯಾತ್ರೆಯನ್ನು ಮುಂದೆವರಿಸುತ್ತಾನೆ. ಹಂತ ಹಂತವಾಗಿ ಮುಂದುವರಿದಂತೆಲ್ಲ ಭೌತಿಕ ಮತ್ತು ಮಾನಸಿಕ ಮಿತಿಗಳಿಂದ ಅವನ ಪ್ರಜ್ಞೆಯು ಮುಕ್ತವಾಗುತ್ತಾ ವಿಶಾಲವಾಗುತ್ತ, ವಿಶ್ವವ್ಯಾಪಿಯಾಗುತ್ತ ಹೋಗುತ್ತದೆ.

ನಾವು ಸಮಷ್ಟಿಸ್ಥಿತಿಯನ್ನು ಮುಟ್ಟಿದಾಗ ನಿಜವಾದ ವ್ಯಕ್ತಿಗಳಾಗುತ್ತೇವೆ. ಈ ಸಮಷ್ಟಿಸ್ಥಿತಿಯೇ ನಮ್ಮ ನಿಜವಾದ ಸ್ವರೂಪ. ಈ ಸ್ವರೂಪವು ಭೌತಿಕ ಮತ್ತು ಆಧ್ಯಾತ್ಮಿಕ ಉಪಾಧಿಗಳಿಂದ, ಹಾಗೂ ಜಾತಿ ಕುಲ ರಾಷ್ಟ್ರ ಲಿಂಗ ಮುಂತಾದ ಮಿತಿಗಳಿಂದ ಮರೆಯಾಗುತ್ತದೆ, ಸಂಕುಚಿತವಾಗುತ್ತದೆ. ವೇದಾಂತಬೋಧಕನು ಈ ಔಪಾಧಿಕ ಆವರಣಗಳನ್ನೆಲ್ಲಾ ಕಿತ್ತೆಸೆಯಬೇಕೆಂದು ಉಪದೇಶಿಸುತ್ತಾನೆ. ಈ ದಿಶೆಯಲ್ಲಿ ನಾವು ಮಾಡುವ ಪ್ರತಿಯೊಂದು ಪ್ರಯತ್ನದಿಂದಲೂ ನಮ್ಮ ಬಗೆಗಿನ ಭ್ರಾಂತಿ ನಿವಾರಣೆಯಾಗುತ್ತದೆ—ಎಂದು ವೇದಾಂತ ಹೇಳುತ್ತದೆ. ಶಂಕರಾಚಾರ್ಯರು "ವಿವೇಕಚೂಡಾಮಣಿ"ಯಲ್ಲಿ ತಾತ್ತ್ವಿಕವಾದ, ಗಾನ ಮಾಧುರ್ಯದಿಂದ ಕೂಡಿದ ಹತ್ತು ಶ್ಲೋಕಗಳಲ್ಲಿ ಈ ಸತ್ಯವನ್ನು ಪ್ರಕಾಶಪಡಿಸುತ್ತಾರೆ. ಅದರಲ್ಲಿ ಮೊದಲನೆಯ ಶ್ಲೋಕ (254):

ಜಾತಿ-ನೀತಿ-ಕುಲ-ಗೋತ್ರ-ದೂರಗಂ
ನಾಮ-ರೂಪ-ಗುಣ-ದೋಷ-ವರ್ಜಿತಮ್ ।
ದೇಶ-ಕಾಲ-ವಿಷಯಾತಿವರ್ತಿ ಯತ್
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥

*ಜಾತಿ, ಜಾತಿನಿಯಮಗಳು, ಕುಲ, ಗೋತ್ರ ಇವುಗಳಿಂದ ಅತ್ಯಂತ ದೂರವಾದ; ನಾಮ, ರೂಪ, ಗುಣ, ದೋಷಗಳಿಂದ ಮುಕ್ತವಾದ ; ದೇಶ, ಕಾಲ, ವಿಷಯಗಳನ್ನು ಮೀರಿದ ಆ ಬ್ರಹ್ಮ ತತ್ತ್ವವೇ ನೀನೆಂದು ನಿನ್ನಂತರಂಗದಲ್ಲಿ ಧ್ಯಾನಿಸು.*

ಇದೇ ಅನುಭಾವಿಕ ಅಥವಾ ಲೋಕೋತ್ತರ ಆಯಾಮ—ಇದು ಸಾಮಾಜಿಕ ಅಥವಾ ಲೌಕಿಕ ಆಯಾಮವನ್ನು ಮೀರಿದುದು. ಇಂದ್ರಿಯ ನಿಗ್ರಹವು ಈ ಆಂತರಿಕ ಆಯಾಮದ ಬಾಗಿಲನ್ನು ತೆರೆಯುತ್ತದೆ. ಇದರ ವಿಶಿಷ್ಟವಾದ ವಿಧಾನವೇ ಧ್ಯಾನ. ಧ್ಯಾನದಲ್ಲಿ ಮಾನವನು ಸಾಮೂಹಿಕತೆಯನ್ನು ಬಿಟ್ಟು ಏಕೈಕನಾಗುತ್ತಾನೆ. ಧ್ಯಾನದಲ್ಲಿ ಮಾನವನು ಪತಿ, ಪತ್ನಿ, ತಂದೆ, ತಾಯಿ, ಪುತ್ರ, ಪುತ್ರಿ, ಮಿತ್ರ ಮುಂತಾದ ಎಲ್ಲಾ ಮಾನವ ಸಂಬಂಧಗಳನ್ನೂ ಮೀರಿಹೋಗುತ್ತಾನೆ. ಭೌತಿಕವಾಗಿ ಅವರೊಡನೆ ಇದ್ದರೂ ಆಂತರಿಕವಾಗಿ ಅವರಿಂದ ದೂರವಾಗಿರುತ್ತಾನೆ. ಇದೇ ಮಾನವನು ಲೋಕದಿಂದ ಲೋಕೋತ್ತರಕ್ಕೆ ಏರುವ ವಿಧಾನ. ಅನಂತರ ಪ್ರಜ್ಞೆಯು ಲೋಕದ ಹಂತಕ್ಕೆ ಹಿಂದಿರುಗಿದಾಗ ಮಾನವನು ಹೆಚ್ಚು ಸ್ವಾತಂತ್ರ್ಯವನ್ನು ಅನುಭವಿಸುತ್ತಾನೆ. ಹೆಚ್ಚು ಇತರರನ್ನು ಪ್ರೀತಿಸುವ ಮತ್ತು ಇತರರ ಪ್ರೀತಿಗೆ ಭಾಗಿಯಾಗುವ ಸಾಮರ್ಥ್ಯವನ್ನು ಪಡೆಯುತ್ತಾನೆ.

ಈ ಆಧ್ಯಾತ್ಮಿಕ ವಿಕಾಸದಲ್ಲಿ ಮಾನವ ದೇಹದ ವೈಶಿಷ್ಟ್ಯತೆಯನ್ನು ಹಿಂದೂ ಶಾಸ್ತ್ರಗಳು ಒತ್ತಿ ಹೇಳುತ್ತವೆ. ಈ ಮಾನವ ಜನ್ಮದ ಸದಾವಕಾಶವನ್ನು ಪಡೆದಮೇಲೆ ಪ್ರತಿಯೊಬ್ಬನೂ ಈ ಆಧ್ಯಾತ್ಮಿಕ ಸಾಹಸವನ್ನು ಕೈಗೊಳ್ಳಲೇಬೇಕೆಂಬುದನ್ನೂ ಅವು ಒತ್ತಿ ಹೇಳುತ್ತವೆ. ಒಂದು ಸಂಸ್ಕೃತ ಶ್ಲೋಕ ಹೀಗೆ ಹೇಳುತ್ತದೆ :

ಮಹಾತಾ ಪುಣ್ಯ-ಪಣ್ಯೇನ ಕ್ರೀತೇಯಂ ಕಾಯ-ನೌಸ್ತ್ವಯಾ ।
ಪಾರಂ ದುಃಖೋದಧೇಃ ಗಂತುಂ ತರ ಯಾವನ್ನ ಭಿದ್ಯತೇ ॥

*ಮಹತ್ತರವಾದ ಪುಣ್ಯದ ಬೆಲೆಯನ್ನು ತೆತ್ತು ಈ ಮಾನವ ದೇಹವೆಂಬ ಹಡಗನ್ನು ಕೊಂಡುಕೊಂಡಿದ್ದೀಯೆ. ಇದು ದುಃಖಸಾಗರದ ಆಚೆಗೆ ಕರೆದುಕೊಂಡು ಹೋಗುವ ಸಾಮರ್ಥ್ಯವುಳ್ಳದ್ದು. ಆದ್ದರಿಂದ ಈ ಹಡಗು ಮುರಿಯುವುದಕ್ಕೆ ಮುಂಚೆಯೇ ಈ ಸಾಗರವನ್ನು ದಾಟು.*

ಈ ಭೌತಿಕ ದೇಹವೆಂಬ ದುರ್ಬಲ ಮತ್ತು ಸಾಂತ ಉಪಕರಣದ ಸಹಾಯದಿಂದ ಶೋಕಮೋಹಗಳನ್ನು ದಾಟಿಹೋಗುವುದರಲ್ಲಿಯೇ ಬುದ್ಧಿಯ ಪರೀಕ್ಷೆ ಅಡಗಿರುವುದು ಎಂದು "ಶ್ರೀಮದ್ ಭಾಗವತವು" ಸಾರುತ್ತದೆ. (xi. xxix.22):

ಏಷ ಬುದ್ಧಿಮತಾಂ ಬುದ್ಧಿರ್ಮನೀಷಾ ಚ ಮನೀಷಿಣಾಮ್ ।
ಯತ್ ಸತ್ಯಮನೃತೇನೇಹ ಮರ್ತ್ಯೇನಾಪ್ನೋತಿ ಮಾಮೃತಮ್ ॥

*ಬುದ್ಧಿವಂತರಲ್ಲಿ ಬುದ್ಧಿಯೇ ಇದು, ವಿಚಾರವಂತರಲ್ಲಿ ವಿಚಾರವೇ ಇದು—ಯಾವುದರ ಮೂಲಕ ಅನೃತದಿಂದ ಸತ್ಯವನ್ನೂ ಮರ್ತ್ಯದಿಂದ ಅಮೃತವನ್ನು ಪಡೆಯುತ್ತಾರೆಯೋ.*

ಈ ಅಲ್ಪ ಮಾನವದೇಹವು ಅವನ ಮುಕ್ತಿ ಮತ್ತು ಸಾಫಲ್ಯಕ್ಕೆ ಹೇಗೆ ಕಾರಣವಾಗಬಲ್ಲದು ಎಂದು ನಾವು ಆಶ್ಚರ್ಯಪಡುತ್ತೇವೆ. ಮಾನವ ದೇಹದಲ್ಲಿ ಆ ಸಾಮರ್ಥ್ಯ ಅಡಗಿದೆಯೆಂದೂ ಪ್ರಕೃತಿಯು ಅದಕ್ಕಾಗಿಯೇ ಅದನ್ನು ನಿರ್ಮಿಸಿದೆಯೆಂದೂ ವೇದಾಂತವು ಭರವಸೆ ನೀಡುತ್ತದೆ. ಪ್ರಕೃತಿಯನ್ನು ಅದರ ಅಂತರ್ಹಿತ ಸತ್ಯವನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ; ಅದರ ಅತ್ಯುತ್ತಮ ಸೃಷ್ಟಿಯಾದ ಮಾನವನು ಮನೋ-ಸಾಮಾಜಿಕ ವಿಕಾಸದಲ್ಲಿ ಮುಂದುವರಿಯುವಂತೆ ಮಾಡುವುದಕ್ಕಾಗಿ ; ಮತ್ತು ಪೂರ್ಣ ಸಫಲತೆಯನ್ನು ಅವನಿಗೆ ನೀಡುವುದಕ್ಕಾಗಿ ಪ್ರಕೃತಿಯು ಈ ಅತ್ಯಂತ ಸಮರ್ಥ ಉಪಕರಣವನ್ನು ನಿರ್ಮಿಸಿರುವುದು. ಈ ಸಿದ್ಧಿಯನ್ನು ಪಡೆದಮೇಲೆ ದೇಹದ ಕೆಲಸ ಮುಗಿದಂತಾಗುತ್ತದೆ. ಅನಂತರ ಅದು ಉಳಿದರೂ ಒಂದೇ, ಉಪಯೋಗಿಸಲ್ಪಟ್ಟ ದೋಣಿಯಂತೆ, ಮುರಿದುಹೋದರೂ ಒಂದೇ.

ಈ ಉನ್ನತ ಉದ್ದೇಶಕ್ಕಾಗಿ ದೇಹೇಂದ್ರಿಯಮನಸ್ಸುಗಳನ್ನು ಉಪಯೋಗಿಸಿಕೊಳ್ಳುವ ವಿಜ್ಞಾನ ಮತ್ತು ತಾಂತ್ರಿಕತೆ ಇದೆ. ಈ ವಿಜ್ಞಾನ ಮತ್ತು ತಾಂತ್ರಿಕತೆಯನ್ನೇ ಯೋಗ ಎಂದು ಕರೆಯುವುದು. ಉತ್ತರ ಸಮುದ್ರದಿಂದ ಕಚ್ಚಾ ತೈಲವನ್ನು ತೆಗೆದು, ಸಂಸ್ಕಾರಗೊಳಿಸಿ ವಿವಿಧ ತೈಲೋತ್ಪನ್ನಗಳನ್ನಾಗಿ ಪರಿವರ್ತಿಸುವ ವಿಜ್ಞಾನ ಮತ್ತು ತಾಂತ್ರಿಕತೆ ಇದೆ. ಇದೇ ರೀತಿ, ದೇಹೇಂದ್ರಿಯ ಮನಸ್ಸುಗಳ ವಲಯಕ್ಕೆ ಸೀಮಿತವಾದ ಪ್ರಜ್ಞೆಯನ್ನು ಉನ್ನತಮಟ್ಟಕ್ಕೇರಿಸಿ ಅನಂತ, ಶುದ್ಧ ಪ್ರಜ್ಞೆಯನ್ನಾಗಿ ಪರಿವರ್ತಿಸುವ ಯೋಗವೆಂಬ ವಿಜ್ಞಾನ ಮತ್ತು ತಾಂತ್ರಿಕತೆ ಇದೆ.

## ೧೦. ತ್ಯಾಗ : ಆನಂದಪ್ರದ ಮತ್ತು ಸ್ವಪ್ರೇರಿತ

ಪ್ರಜ್ಞೆಯನ್ನು ಉನ್ನತಿಗೇರಿಸುವ ಈ ಪ್ರಯತ್ನದಲ್ಲಿ ಮಾನವನು ಯಾವುದೋ ಶಕ್ತಿಯು ತನ್ನನ್ನು ಕೆಳಗೆಳೆಯುವುದನ್ನು ಅನುಭವಿಸುತ್ತಾನೆ ಮತ್ತು ತನಗೆ ಮೇಲೇರಲು ಹೆಚ್ಚಿನ ಶಕ್ತಿ ಆವಶ್ಯಕವೆನಿಸುತ್ತದೆ. ಈ ಕೆಳಗಿನ ಸೆಳೆತವನ್ನು ವೇದಾಂತವು ವಾಸನೆ ಅಥವಾ ಸಂಸ್ಕಾರ ಎಂದು ಕರೆಯುತ್ತದೆ. ಹಿಂದಿನ ಆಲೋಚನೆ, ಕೃತಿ ಮತ್ತು ವ್ಯಾಮೋಹಗಳ ಈ ಸಂಸ್ಕಾರಗಳನ್ನು ಹ್ರಸ್ವಗೊಳಿಸಬೇಕು. ಇದನ್ನೇ ತ್ಯಾಗ ಎಂದು ಕರೆಯುವುದು. ಉನ್ನತವಾದುದನ್ನು ಪಡೆಯುವುದಕ್ಕಾಗಿ ಅಲ್ಪವಾದುದನ್ನು ಆನಂದದಿಂದ, ಸ್ವಪ್ರೇರಣೆಯಿಂದ ಬಿಡುವುದೇ ತ್ಯಾಗ. ಇದು ಮಗುವು ಪುಸ್ತಕಗಳಿಗಾಗಿ ಆಟದ

ಗೊಂಬೆಗಳನ್ನು ಬಿಡುವಂತೆ. ನಾವು ಮನೆಯಲ್ಲಿರುವಾಗ ಅನೇಕ ಪೀಠೋಪಕರಣಗಳನ್ನು ಬೇರೆ ವಸ್ತುಗಳನ್ನು ಸಂಗ್ರಹಿಸಿಡುತ್ತೇವೆ. ಆದರೆ ನಾವು ರೈಲು ಪ್ರಯಾಣ ಮಾಡುವಾಗ ಎಷ್ಟೋ ಸಾಮಾನು ಗಳನ್ನು ಬಿಟ್ಟುಹೋಗುತ್ತೇವೆ, ವಿಮಾನ ಪ್ರಯಾಣ ಮಾಡುವಾಗ ಇನ್ನೂ ಕಡಮೆ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತೇವೆ, ಮತ್ತು ಬಾಹ್ಯಾಕಾಶದಲ್ಲಿ ಹಾರಬೇಕಾದರೆ ಅತ್ಯಂತ ಕಡಮೆ ವಸ್ತುಗಳಿರುತ್ತವೆ. ಪ್ರಜ್ಞಾಜಾಗೃತಿಯ ವಿಜ್ಞಾನವು ಬಾಹ್ಯಾಕಾಶ ಯಾತ್ರೆಗಿಂತ ಹೆಚ್ಚು ರೋಮಾಂಚಕ ಮತ್ತು ಫಲಪ್ರದ ಸಾಹಸವಾಗಿದೆ. ಇದರ ಮೌಲ್ಯವನ್ನು ಅರ್ಥಮಾಡಿಕೊಳ್ಳುವವರಿಗೆ ವ್ಯಾಮೋಹಗಳ ಮತ್ತು ಇಂದ್ರಿಯ ತೃಷ್ಣೆಗಳ ತ್ಯಾಗ ಸ್ವಪ್ರೇರಿತವಾಗುತ್ತದೆ, ಆನಂದದಾಯಕ ಅನುಭವವಾಗುತ್ತದೆ. ಬಾಹ್ಯಾಕಾಶ ಯಾತ್ರೆಯಲ್ಲಿ ಹೆಚ್ಚಿನ ಸಾಮಾನುಗಳನ್ನು ಬಿಟ್ಟುಹೋಗುವಾಗ ಏನನ್ನೋ ತ್ಯಜಿಸಿದ ಭಾವ ಉಂಟಾಗಿರುವಂತೆಯೇ ಇಲ್ಲಿಯೂ ಕೂಡ. ಶ್ರೀರಾಮಕೃಷ್ಣರು ಈ ಆನಂದಪೂರ್ಣ ತ್ಯಾಗಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಿದ್ದರು : ನೀವು ಮಗುವಿಗೆ ಒಂದು ರೂಪಾಯಿ ನಾಣ್ಯವನ್ನು ಕೊಡಿ. ಅನಂತರ ನೀವು ಕೇಳಿದರೆ ಅದು ಕೊಡುವುದಿಲ್ಲ. "ಇದು ನನ್ನದು" ಎನ್ನುತ್ತದೆ. ಆಗ ಅದಕ್ಕೆ ಒಂದು ಸಿಹಿತಿಂಡಿಯನ್ನು ಕೊಟ್ಟರೆ, ನಾಣ್ಯವನ್ನು ನಿರ್ದಾಕ್ಷಿಣ್ಯವಾಗಿ ಎಸೆದುಬಿಡುತ್ತದೆ. ಇದೇ ರೀತಿ ನಾವು ಜೀವನದ ಉನ್ನತ ಮೌಲ್ಯಗಳನ್ನು ಪ್ರೀತಿಸಿದರೆ ಕೆಳಗಿನ ಮೌಲ್ಯಗಳು ಸ್ವಾಭಾವಿಕ ವಾಗಿಯೇ ಕಳಚಿಬೀಳುತ್ತವೆ. ತಾಯಿ ತನ್ನ ಮಗುವಿನ ಮೇಲಿನ ಪ್ರೀತಿಯಿಂದಾಗಿ ಅದರ ಶುಶ್ರೂಷೆ ಯನ್ನು ಗೊಣಗಾಡದೆ ಮಾಡುತ್ತಾಳೆ.

ಸಂಸ್ಕಾರಗಳ, ಇಂದ್ರಿಯ ತೃಷ್ಣೆಯ ಸೆಳೆತಗಳಿಂದ ತಪ್ಪಿಸಿಕೊಂಡು ಪ್ರಜ್ಞಾವಿಕಾಸದಲ್ಲಿ ಉನ್ನತಿ ಯನ್ನು ಸಾಧಿಸುವುದು ಬಹಳ ನಿಧಾನವಾದ ಸಾಧನೆ. ಜೀವನದ ಎಲ್ಲ ಪ್ರಯತ್ನಗಳು ಈ ಸಾಹಸದಲ್ಲಿ ಒಂದಾಗಬೇಕು. ಇಂದ್ರಜಾಲದಿಂದಾಗಲಿ, ಕುಟಿಲೋಪಾಯಗಳಿಂದಾಗಲಿ, ಮಾದಕದ್ರವ್ಯಗಳಿಂದಾಗಲಿ ಇದನ್ನು ಸಾಧಿಸಲಾಗುವುದಿಲ್ಲ. ಕೆಲವರು ಭಾವಾತಿರೇಕದ ಮೂಲಕ ಇದನ್ನು ಪಡೆಯಲು ಪ್ರಯತ್ನಿಸುತ್ತಾರೆ. ಆದರೆ ಅದರಿಂದ ಪ್ರಯೋಜನವಾಗದು. ಭಾವಶಮನವಾದ ಕೂಡಲೇ ಪ್ರಜ್ಞೆಯು ಕೆಳಗಿಳಿಯುತ್ತದೆ. ಕೆಲವೊಮ್ಮೆ ತೀರ ಕೆಳಮಟ್ಟಕ್ಕೂ ಹೋಗುತ್ತದೆ.

ಪ್ರಜ್ಞೆಯನ್ನು ಉನ್ನತಿಗೇರಿಸುವುದರಿಂದ ಆತ್ಮಸಾಕ್ಷಾತ್ಕಾರದಿಂದ ಮಾನವನಿಗೆ ಲಭ್ಯವಾಗುವ ಅದ್ಭುತ ಶಕ್ತಿಯನ್ನು ಕೇನೋಪನಿಷತ್ತು ಪ್ರಸ್ತಾಪಿಸುತ್ತದೆ. (೨.೫) : ಆತ್ಮನಾ ವಿಂದತೇ ವೀರ್ಯಂ "ಮಾನವನು ಆತ್ಮನ ಮೂಲಕ ಉನ್ನತ ಶಕ್ತಿಯನ್ನು ಪಡೆಯುತ್ತಾನೆ." ಶಂಕರಾಚಾರ್ಯರು ಇದನ್ನು ವ್ಯಾಖ್ಯಾನಿಸುತ್ತ, ಆತ್ಮಜ್ಞಾನವೆಂದರೆ ಅಮೃತತ್ವದ ಜ್ಞಾನ ಮತ್ತು ಇದು ಮೃತ್ಯುವನ್ನು ಗೆಲ್ಲುವ ಶಕ್ತಿಯನ್ನು ಕೊಡುತ್ತದೆ ಎನ್ನುತ್ತಾರೆ :

ಕಥಂ ಪುನಃ ಯಥೋಕ್ತಯಾ ಆತ್ಮವಿದ್ಯಯಾ ಅಮೃತತ್ವಂ ವಿಂದತೇ, ಇತ್ಯತ ಆಹ... ಧನ-ಸಹಾಯ-ಮಂತ್ರೌಷಧಿ- ತಪೋ -ಯೋಗ-ಕೃತಂ ವೀರ್ಯಂ ಮೃತ್ಯುಂ ನ ಶಕ್ನೋತಿ ಅಭಿಭವಿತುಂ, ಅನಿತ್ಯ -ವಸ್ತು ಕೃತತ್ವಾತ್ । ಆತ್ಮವಿದ್ಯಾಕೃತಂ ತು ವೀರ್ಯಂ ಆತ್ಮನೈವ ವಿಂದತೇ, ನ ಅನ್ಯೇನ, ಇತ್ಯತಃ ಅನನ್ಯ- ಸಾಧಾರಣತ್ವಾತ್ ಆತ್ಮವಿದ್ಯಾ-ವೀರ್ಯಸ್ಯ, ತದೇವ ವೀರ್ಯಂ ಮೃತ್ಯುಂ ಶಕ್ನೋತಿ ಅಭಿಭವಿತುಂ—

*ಹೀಗೆ ಉಕ್ತವಾದ ಆತ್ಮವಿದ್ಯೆಯ ಮೂಲಕ ಅಮೃತತ್ವವನ್ನು ಪಡೆಯುವುದು ಹೇಗೆ ? ಇದಕ್ಕೆ ಉತ್ತರ: ಧನ, ಸಹಾಯ, ಮಂತ್ರ, ಔಷಧಿ, ತಪಸ್ಸು, ಯೋಗ ಇವುಗಳಿಂದ ದೊರೆತ ಶಕ್ತಿಯು ಮೃತ್ಯುವನ್ನು ಜಯಿಸಲಾರದು. ಏಕೆಂದರೆ ಅದು ಅನಿತ್ಯವಸ್ತುಗಳಿಂದ ಉಂಟಾದುದು. ಆದರೆ ಆತ್ಮವಿದ್ಯೆಯಿಂದ ಉಂಟಾದ ಶಕ್ತಿಯು ಆತ್ಮನಿಂದಲೇ ಬಂದಿರುವುದು, ಬೇರೆ ವಸ್ತುಗಳಿಂದಲ್ಲ. ಆದ್ದರಿಂದ, ಇತರ ವಸ್ತುಗಳಿಂದ ಉತ್ಪನ್ನವಾದುದಲ್ಲದುದರಿಂದ, ಆತ್ಮವಿದ್ಯೆಯಿಂದ ಉಂಟಾದ ಶಕ್ತಿಯು ಮೃತ್ಯುವನ್ನು ಜಯಿಸಬಲ್ಲದು.*

ಕ್ರಮಬದ್ಧವಾಗಿ ಪ್ರಜ್ಞಾವಿಕಾಸವನ್ನು ಸಾಧಿಸುವುದಕ್ಕೆ ದೃಢವಾದ ನೈತಿಕ ತಳಹದಿ ಅತ್ಯಾವಶ್ಯಕ, ಮತ್ತು ನಿರಂತರವಾಗಿ ಮನಸ್ಸನ್ನು ಶಿಸ್ತುಗೊಳಿಸುತ್ತ ಹೋಗಬೇಕು. ಹಾಗೂ ವಿರುದ್ಧ ಸಂಸ್ಕಾರಗಳೆಲ್ಲ ವನ್ನೂ ತೊಡೆದುಹಾಕಬೇಕು. ಆದಿಮಾನವನು ಬಾಹ್ಯ ವಾತಾವರಣದೊಂದಿಗೆ ಹೋರಾಡುತ್ತಾನೆ. ಈ ಹೋರಾಟವು ನಾಗರಿಕನಾದ ಉತ್ತಮ ವ್ಯಕ್ತಿಯಲ್ಲಿ ಆಂತರಿಕ ವಾತಾವರಣದೊಂದಿಗಿನ ಹೋರಾಟವಾಗಿ ಪರಿಣಮಿಸುತ್ತದೆ. ಸತ್ಸಂಗದ ಮೂಲಕ, ಸದ್ಗ್ರಂಥಗಳ ಅಧ್ಯಯನದ ಮೂಲಕ ಈ ಹೋರಾಟವು ಸುಲಭವಾಗುತ್ತದೆ.

## ೧೧. ಆಳಕ್ಕೆ ಮುಳುಗುವುದು

ಸಂಸ್ಕಾರಗಳ ತನೂಕರಣವನ್ನು ವೇದಾಂತದಲ್ಲಿ ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ತ್ರಿಗುಣ-ಕಲ್ಪನೆಯ ಮೂಲಕ ವಿವರಿಸಲಾಗಿದೆ. ಮನಸ್ಸು ತಮಃ ಪ್ರಧಾನವಾದಾಗ ಜಡವೂ ಆಲಸ್ಯವೂ ಆಗುತ್ತದೆ. ಆಗ ಅದು ಮೋಹಾತ್ಮಕವಾಗಿರುತ್ತದೆ. ರಜಸ್ಸು ಮನಸ್ಸನ್ನು ಕ್ರಿಯಾಶೀಲ ಮತ್ತು ಚಂಚಲಗೊಳಿಸುತ್ತದೆ. ಆಗ ಅದು ಬಹಿರ್ಮುಖ ಪ್ರವೃತ್ತಿಯುಳ್ಳದ್ದಾಗಿದ್ದು, ಅದನ್ನು ಅಂತರ್ಮುಖ ವಾಗಿ ಏಕಾಗ್ರಗೊಳಿಸುವುದು ಕಷ್ಟವಾಗುತ್ತದೆ. ಸತ್ವವು ಜಾಗ್ರತವಾದಾಗ ಮನಸ್ಸು ಶಾಂತವೂ ಪಾರದರ್ಶಕವೂ ತಿಳಿಯೂ ಆಗುತ್ತದೆ. ಆಗ ಅದು ಸ್ವಾಭಾವಿಕವಾಗಿ ಮೇಲ್ಮುಖ ಪ್ರವಹಿಸುತ್ತದೆ. ಪ್ರಜ್ಞೆಯನ್ನು ಉನ್ನತಿಗೇರಿಸುವುದಕ್ಕೆ ಸತ್ವಪ್ರಧಾನ ಮನಸ್ಸು ಅತ್ಯಾವಶ್ಯಕ. ಅದು ತ್ಯಾಗವನ್ನು ಆನಂದದಾಯಕವಾಗಿಸುತ್ತದೆ. ಸಂಸ್ಕಾರಗಳ ಸೆಳೆತವನ್ನು ಹ್ರಸ್ವಗೊಳಿಸುತ್ತದೆ ಮತ್ತು ಸತ್ಯದಾಳಕ್ಕೆ ಮುಳುಗುವುದನ್ನು ಸುಗಮಗೊಳಿಸುತ್ತದೆ.

ಈ ಮೂರು ಗುಣಗಳು ಪ್ರಕೃತಿಯ ಘಟಕಗಳು. ದೇಹ ಮನಸ್ಸುಗಳು ಪ್ರಕೃತಿಯ ಉತ್ಪನ್ನಗಳಾಗಿರುವುದರಿಂದ ಅವುಗಳಲ್ಲಿಯೂ ಈ ತ್ರಿಗುಣಗಳು ಕೆಲಸಮಾಡುತ್ತವೆ. ದೇಹ ಮನಸ್ಸು ಗಳಲ್ಲಿ ಬದ್ಧವಾಗಿರುವ ಪ್ರಜ್ಞೆಯ ಬಿಡುಗಡೆಯು ಮನಸ್ಸಿನಲ್ಲಿ, ಸತ್ವಗುಣದ ಆಧಿಕ್ಯದಿಂದ ಸಾಧ್ಯವಾಗುತ್ತದೆ. ಎಲ್ಲ ಅನ್ಯಾಯ, ಅತ್ಯಾಚಾರ, ಶೋಷಣೆ ಇವೇ ಮುಂತಾದ ಸಾಮಾಜಿಕ ಮತ್ತು ಮಾನಸಿಕ ಕೆಡಕುಗಳಿಗೆ ಕಾರಣ ಮನಸ್ಸು ತಮಸ್ಸು ಮತ್ತು ರಜಸ್ಸುಗಳಿಂದ ಅಭಿಭೂತವಾಗಿರುವುದು.

ಪ್ರಜ್ಞೆಯನ್ನು ಜಾಗ್ರತಗೊಳಿಸುವ-ಕಲೆಯನ್ನು ಶ್ರೀರಾಮಕೃಷ್ಣರು ಆಳಕ್ಕೆ ಮುಳುಗುವುದಾಗಿ ವಿವರಿಸುತ್ತಿದ್ದರು. ಇದಕ್ಕೆ ಸಂಬಂಧಪಟ್ಟಂತೆ ಎರಡು ಹಾಡುಗಳನ್ನು ಅವರು ಹೇಳುತ್ತಿದ್ದರು ("ಶ್ರೀರಾಮಕೃಷ್ಣ ವಚನವೇದ" ಪೂರ್ವಾರ್ಧ ೫೯-೬೦ ; ಉತ್ತರಾರ್ಧ ೪೪-೫)

ಜೈ ಕಾಳಿ ಎನ್ನುತ್ತ ಹೃದಯರತ್ನಾಕರನ
ಅಗಾಧ ಆಳಕ್ಕೆ ಮುಳುಗು ಮನವೇ,
ಮೊದಲೆರಡು ಸಲ ನೀನು ವಿಫಲನಾದರೆ ಒಳಗೆ
ಬರಿಶೂನ್ಯವೆಂದಿದನು ತೆಗಳಬೇಡ,
ದೃಢಮನದ ಸಂಯಮದಿ ಕುಲಕುಂಡಲಿ ಕೂಲ-
ದೊಳಗಿಳಿದು ಅನುಭವವ ಪಡೆದು ನೋಡ !

ಜ್ಞಾನಸಾಗರದೊಳಗೆ ಶಾಂತಿ ಮುಕ್ತಾಫಲಗಳ
ಭಂಡಾರವಿದೆ ಹೋಗು ಅದನು ಗಳಿಸು.

ಆಹಾರ ಲೋಭದಲಿ ಅಲೆವ ಅರಿವರ್ಗಗಳ
ವಿವೇಕಲೇಪನದಿ ದೂರಗೊಳಿಸು.
ರಾಮಪ್ರಸಾದನನು ಕೇಳು ಹೇಳುವನವನು ;
ಅಂತರಂಗದೊಳಿರುವ ಅನಂತ ರತ್ನವನು
ಮುಳುಗಿ ಮೇಲಕೆ ತಂದು ನೀನು ಧರಿಸು



* * *

ಮುಳುಗು ಮುಳುಗು ಮನವೇ
ಹಿರಿಯೊಲವಿನ ಕಡಲಾಳಕೆ
ಮುಳುಗು ಮುಳುಗು ಒಳಗೇ,
ತಲಾತಲ ಪಾತಾಲಕೆ ಮುಳುಗಲು
ಮುತ್ತುರತುನಗಳ ನೀ ತರುವೆ.

ಹುಡುಕು ಹುಡುಕು ನಿನ್ನೆದೆಯೊಳಗನು
ಬೃಂದಾವನವಿದೆ ಅಲ್ಲಿ !
ಗೋಪೀಜನ ಮನಮೋಹನವಲ್ಲಭ
ನಿತ್ಯ ಲೀಲೆಯಲಿ ಇಹನಲ್ಲಿ !

ಅರಿವಿನ ಹಣತೆಯ ಹಚ್ಚಿಕೊಳ್ಳೋ ಒಳಗೆ,
ನಿರಂತರವು ಅದು ಬೆಳಗುತಿರಲಿ.
ಘಟ್ಟನೆಲದ ಮೇಲಾರೂ ದೋಣಿಯನು
ಹುಟ್ಟುಹಾಕುತ ಇಂತು ನಡೆಸುವವರು ?
'ಅವನೇ ನಿನ್ನ ಗುರು' ಎನುವ ಕುಬೀರ
ಆತನ ಪಾದದಿ ಮನವನು ನಿಲಿಸೊ

೧೨. ಉಪಸಂಹಾರ

ಮಾನವನ ನಿಜಸ್ವರೂಪವನ್ನು ಮೂರು ಪದಪುಂಜಗಳಲ್ಲಿ ವಿವರಿಸುತ್ತಾರೆ : ನಿತ್ಯಶುದ್ಧ, ನಿತ್ಯಬುದ್ಧ ಮತ್ತು ನಿತ್ಯಮುಕ್ತ. ಆದರೆ ಮಾನವನು ದೇಹ ಮನಸ್ಸು ವಿಷಯಗಳೊಡನೆ ತಾದಾತ್ಮ್ಯವನ್ನು ಹೊಂದಿರುವುದರಿಂದ ಅವನಿಗೆ ಈ ಸ್ವರೂಪದ ಅರಿವಿಲ್ಲ. ಆದರೆ ಅವನೊಳಗೆ ಯಾವುದೂ ಒಂದು ಧ್ವನಿ ತಾನು ಮುಕ್ತ ಎಂಬುದನ್ನು ಉಸಿರುತ್ತಿರುತ್ತದೆ. ಆ ಧ್ವನಿಯ ಮೋಹಕತೆಯೇ ಅವನು ಮುಕ್ತಿಯನ್ನು ಪಡೆಯಲು ಹೋರಾಡುವಂತೆ ಮಾಡುತ್ತದೆ. ಈ ಎಲ್ಲ ಹೋರಾಟವೂ ಭ್ರಾಂತಿಯನ್ನು ಹೋಗಲಾಡಿಸುವುದೇ ಆಗಿದೆ. ಪಶ್ಚಿಮ ದೇಶಗಳಲ್ಲಿ ವೇದಾಂತದ ಮೇಲೆ ಉಪನ್ಯಾಸ ಮಾಡಿದ ಮೇಲೆ ಕೆಲವರು ಸ್ವಾಮಿ ವಿವೇಕಾನಂದರನ್ನು 'ನಿಮ್ಮ ವೇದಾಂತ ಬೋಧನೆ ಒಂದು ಭ್ರಾಂತಿ ದಾಯಕವಲ್ಲವೇ ?' ಎಂದು ಕೇಳುತ್ತಿದ್ದರು. ಅದಕ್ಕೆ ಅವರು 'ಇಲ್ಲ ಭ್ರಾಂತಿನಿವಾರಕ' ಎಂದು, ವೇದಾಂತ ರೀತಿಯ ಉತ್ತರವನ್ನು ನೀಡುತ್ತಿದ್ದರು. ನಿಮ್ಮನ್ನು ನೀವು ಸೀಮಿತವ್ಯಕ್ತಿಗಳೆಂದು ಬಿಳಿಯರು, ಕರಿಯರು, ಗಂಡಸರು, ಹೆಂಗಸರು ಎಂದು ಮುಂತಾಗಿ ತಿಳಿಯುತ್ತ ಆಗಲೆ ಭ್ರಾಂತಿಯಲ್ಲಿರುವಿರಿ. ಆದರೆ ನಿಜವಾದ ಸತ್ಯವೇನೆಂದರೆ ನೀವು ಅನಂತಾತ್ಮರು, ಮುಕ್ತರು, ಪರಿಶುದ್ಧರು. ಈ ಸತ್ಯವನ್ನೇ ಉಪನಿಷತ್ತಿನ ತತ್ತ್ವಮಸಿ "ನೀನು ಅದೇ ಆಗಿರುವೆ"—ಎಂಬ ಮಹಾವಾಕ್ಯವು ಸಾರುತ್ತದೆ. ಹಕ್ಕಿಮರಿಯು ತನ್ನ ರಕ್ಷಣೆಯ ಕೋಶವನ್ನೇ ಬಂಧನವಾಗಿ ಭಾವಿಸುವ ಸಮಯ ಬರುತ್ತದೆ. ಆಗ ಅದು ಅದನ್ನು ಭೇದಿಸಿಕೊಂಡು ಹೊರಗಿನ ವಿಶಾಲಜಗತ್ತನ್ನು ಪ್ರವೇಶಿಸುತ್ತದೆ. ಮಾನವ ಬೆಳವಣಿಗೆಯ ಇತಿಹಾಸವೆಂದರೆ ಜನಾಂಗೀಯ, ಮತೀಯ, ರಾಷ್ಟ್ರೀಯ ಇವೇ ಮುಂತಾದ ಬಂಧನಗಳನ್ನು ಕ್ರಮಕ್ರಮವಾಗಿ ಭೇದಿಸಿಕೊಂಡು ಇಡೀ ಮಾನವಕೋಟಿ ಪ್ರಜ್ಞೆಯ ವಿಶಾಲಜಗತ್ತನ್ನು ಪ್ರವೇಶಿಸುವುದೇ ಆಗಿದೆ. ಇದೇ ರೀತಿ ಮಾನವನು ತನ್ನ ನಿಜಸ್ವರೂಪವನ್ನು ಅರಿತುಕೊಂಡು ವಿಶ್ವಪ್ರಜ್ಞೆಯನ್ನು ಸಾಧಿಸುತ್ತಾನೆ. ಶಂಕರಾಚಾರ್ಯರಂತೆ ಚಿದಾನಂದರೂಪ : ಶಿವೋಽಹಂ ಶಿವೋಽಹಂ—"ಚಿದಾನಂದರೂಪನಾದ ಶಿವನೇ ನಾನು"—ಎಂದು ಹಾಡುತ್ತಾನೆ.

ಪ್ರಜ್ಞೆಯು ಏಕವೂ ಅವಿಭಾಜ್ಯವೂ ಆಗಿದ್ದರೂ ಪ್ರತ್ಯೇಕ ವಸ್ತು ಮತ್ತು ಜೀವಿಗಳಲ್ಲಿ ವಿಭಾಗವಾಗಿರುವಂತೆ ಕಾಣುತ್ತದೆ. ಇರ್ವಿನ್ ಶ್ರೋಡಿಂಜರ್ ಹೀಗೆ ಹೇಳುತ್ತಾರೆ. (*What is Life ?* **Epilogue pp. 94-5, Combridge University Press Edition) :**

ಪ್ರಜ್ಞೆಯನ್ನು ಬಹುವಾಗಿ ಅನುಭವಿಸಲಾಗುವುದಿಲ್ಲ... ಅದು ಏಕವಾಗಿಯೇ ಅನುಭವಕ್ಕೆ ಬರುತ್ತದೆ. (ಉಪನಿಷತ್ತಿನ ಬರಹಗಾರರು ಅಷ್ಟೊಂದು ಅವಧಾರಣಪೂರ್ವಕವಾಗಿ ವಿರೋಧಿಸಿದ) ಬಹುತ್ವದ ಭಾವನೆ ಹೇಗೆ ಉದ್ಭವಿಸುತ್ತದೆ ? ದೇಹವೆಂಬ ಭೌತಿಕ ಸ್ಥಿತಿಯ ಸೀಮಿತ ವಲಯದೊಂದಿಗೆ ಪ್ರಜ್ಞೆಯು ನಿಕಟವಾಗಿ ಸಂಬಂಧಿಸಿದೆ ಮತ್ತು ಅದನ್ನು ಅವಲಂಬಿಸಿದೆ. (ದೇಹವು ಬಾಲ್ಯ, ಕೌಮಾರ್ಯ, ಯೌವನ, ವಾರ್ಧಕ್ಯ ಮುಂತಾದ ಬದಲಾವಣೆಯನ್ನು ಹೊಂದಿದಾಗ ಹಾಗೂ ಜ್ವರ, ಅಮಲು, ಸಂಜ್ಞಾಹೀನತೆ ಮುಂತಾದ ಪರಿಣಾಮಗಳಿಗೆ ಒಳಗಾದಾಗ ಮನಸ್ಸಿನಲ್ಲಿ ಉಂಟಾಗುವ ಬದಲಾವಣೆಗಳನ್ನು ಗಮನಿಸಿ.) ಈಗ ಸಮಾನ ದೇಹಗಳು ಬಹುಸಂಖ್ಯೆಯಲ್ಲಿವೆ. ಆದ್ದರಿಂದ ಪ್ರಜ್ಞೆಯ ಅಥವಾ ಮನಸ್ಸಿನ ಬಹುತ್ವವೂ ಇರುವಂತೆ ಕಂಡುಬರುತ್ತದೆ. ಬಹುಶಃ ಸರಳ ಬುದ್ಧಿವಂತ ವ್ಯಕ್ತಿಗಳು ಹಾಗೂ ಪಶ್ಚಿಮದ ಬಹುತೇಕ ತತ್ತ್ವಜ್ಞಾನಿಗಳು ಇದನ್ನು ಒಪ್ಪಿಕೊಂಡಿರುವರು.

ಈ ಊಹೆಯು ಕೂಡಲೆ ದೇಹಗಳಿಗಿರುವಷ್ಟೆ ಜೀವಾತ್ಮಗಳಿರುವವೆಂಬ ಕಲ್ಪನೆಗೆ ಒಯ್ಯುತ್ತದೆ. ಈಗ ದೇಹಗಳಂತೆಯೇ ಅವೂ ಮರ್ತ್ಯವೇ ಅಥವಾ ಅವು ಸ್ವತಂತ್ರ ಶಾಶ್ವತ ಅಸ್ತಿತ್ವವುಳ್ಳವುಗಳೇ ಎಂಬ ಪ್ರಶ್ನೆ ಏಳುತ್ತದೆ.... ಇದಕ್ಕಿಂತಲೂ ಹಾಸ್ಯಾಸ್ಪದವಾದ ಪ್ರಶ್ನೆಗಳಿವೆ. ಪ್ರಾಣಿಗಳಲ್ಲಿಯೂ ಜೀವಾತ್ಮಗಳಿವೆ ? ಕೇವಲ ಗಂಡಸರಲ್ಲಿ ಮಾತ್ರವೇ ಅಥವಾ ಮಹಿಳೆಯರಲ್ಲಿಯೂ ಇವೆಯೆ?

ಈ ಪರಿಸ್ಥಿತಿ, ಅಷ್ಟೇನೂ ಮುಖ್ಯವಲ್ಲದಿದ್ದರೂ, ಪಾಶ್ಚಿಮಾತ್ಯ ತತ್ತ್ವಗಳಲ್ಲೆಲ್ಲ ಸಾಮಾನ್ಯವಾದ ಬಹುತ್ವದ ಊಹೆಯನ್ನು ಸಂದೇಹಿಸುವಂತೆ ಮಾಡುತ್ತದೆ...

ಉಳಿದಿರುವ ಒಂದೇ ಪರ್ಯಾಯವೆಂದರೆ ಪ್ರಜ್ಞೆಯು ಏಕವಾದುದು ಮತ್ತು ಅದರ ಬಹುತ್ವವು ಅಜ್ಞೇಯವಾದುದು ಎಂಬ ನೇರ ಅನುಭವವನ್ನೇ ಆಶ್ರಯಿಸುವುದು. ಒಂದೇ ಒಂದು ವಸ್ತುವಿರುವುದು. ಅದೇ ಭ್ರಮೆಯಿಂದಾಗಿ (ಮಾಯೆ) ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಈ ಸಂದರ್ಭದಲ್ಲಿ ಅಬ್ರಹಾಂ ಲಿಂಕನರ ಉಪನ್ಯಾಸದ ಒಂದು ಭಾಗವನ್ನು ಓದಲು ಇಷ್ಟ ಪಡುತ್ತೇವೆ. ಅವರು ಅಮೆರಿಕದ ಅಧ್ಯಕ್ಷರಾಗಿ ಚುನಾಯಿತರಾದಮೇಲೆ ವಾಷಿಂಗ್ಟನ್‌ಗೆ ತೆರಳುವಾಗ ಸ್ಪ್ರಿಂಗ್ ಫೀಲ್ಡ್‌ನಲ್ಲಿ ನೀಡಿದ ಉಪನ್ಯಾಸವಿದು. (*Abraham Lincon*, by Lord Charnwood p. 203, Henry Hold and Co. New York, 1916) :

*ಸ್ನೇಹಿತರೇ, ನಿಮ್ಮಿಂದ ಬೀಳ್ಕೊಳ್ಳುತ್ತಿರುವ ಈ ಸಂದರ್ಭದಲ್ಲಿ ನನಗಾಗುತ್ತಿರುವ ದುಃಖವನ್ನು ಬೇರಾರೂ ಅರ್ಥಮಾಡಿಕೊಳ್ಳಲಾರರು. ಈ ಸ್ಥಳಕ್ಕೆ, ಈ ಜನರ ದಯೆಗೆ ನಾನು ಸಂಪೂರ್ಣ ಋಣಿಯಾಗಿದ್ದೇನೆ. ಇಲ್ಲಿ ನಾನು ಇಪ್ಪತ್ತೈದು ವರ್ಷಗಳು ವಾಸಿಸಿದೆ, ಇಲ್ಲಿ ನಾನು ಯೌವನದಿಂದ ವಾರ್ಧಕ್ಯವನ್ನು ಮುಟ್ಟಿದೆ.... ಈಗ ನಾನು ಬಿಟ್ಟುಹೋಗುತ್ತಿದ್ದೇನೆ. ಮತ್ತೆ ಇಲ್ಲಿಗೆ ಹಿಂತಿರುಗುತ್ತೇನೋ ಇಲ್ಲವೊ ತಿಳಿಯದು. ವಾಷಿಂಗ್ಟನ್‌ನ ಮೇಲಿದ್ದುದಕ್ಕಿಂತಲೂ ಗುರುತರವಾದ ಕಾರ್ಯವನ್ನು ನಾನು ಎದುರಿಸಬೇಕಾಗಿದೆ. ಯಾವಾಗಲೂ ಅವನ ಹಿಂದಿದ್ದ ಆ ಭಗವಂತನ ಸಹಾಯವಿಲ್ಲದೆ ನಾನು ಯಶಸ್ವಿಯಾಗಲಾರೆ. ಅವನ ಸಹಾಯವಿದ್ದರೆ ನಾನು ಅಯಶಸ್ವಿಯಾಗುವುದು ಸಾಧ್ಯವೇ ಇಲ್ಲ. ನನ್ನೊಡನೆ ಬರುವ ಮತ್ತು ನಿಮ್ಮೊಡನಿರುವ ಹಾಗೂ ಒಳ್ಳೆಯದಕ್ಕಾಗಿ ಎಲ್ಲೆಲ್ಲಿಯೂ ಇರುವ ಆ ಭಗವಂತನಲ್ಲಿ ಶ್ರದ್ಧೆಯಿಟ್ಟು, ಎಲ್ಲವೂ ಸರಿಹೋಗುವುದೆಂಬ ಭರವಸೆಯನ್ನು ಹೊಂದೋಣ. ನಿಮ್ಮನ್ನು ಅವನ ರಕ್ಷಣೆಗೆ ಒಪ್ಪಿಸುತ್ತಾ ಮತ್ತು ನಿಮ್ಮ ಪ್ರಾರ್ಥನೆಯ ರಕ್ಷೆ ನನಗಿರುವುದೆಂಬ ಭರವಸೆಯೊಂದಿಗೆ, ಪ್ರೀತಿತುಂಬಿದ ಹೃದಯದೊಂದಿಗೆ ನಿಮ್ಮಿಂದ ಬೀಳ್ಕೊಳ್ಳುತ್ತೇನೆ.*

ಈ ಪ್ರಜ್ಞಾ ಜಾಗೃತಿಯ ವಿಷಯವು ಮಾನವ ಹಂತದಲ್ಲಿ ವಿಕಾಸದ ಕೇಂದ್ರಬಿಂದುವಾಗಬೇಕು. ಅದ್ಭುತ ಆಕಾಶಯುಗದ ಇಂದಿನ ದಾರುಣ ಪರಿಸ್ಥಿತಿಯಲ್ಲಿ, ಪರಮಾಣು ಯುದ್ಧದ ಭಯ ನಮ್ಮನ್ನು ಕಾಡುತ್ತಿರುವ ಈ ಸಂದರ್ಭದಲ್ಲಿ ಮಾನವಕೋಟಿಯು ಈ ವಿಷಯವನ್ನು ಗಂಭೀರವಾಗಿ ಸ್ವೀಕರಿಸಬೇಕಾಗಿದೆ. ಈ ಆಧ್ಯಾತ್ಮಿಕ ಬೆಳವಣಿಗೆಯ ಸ್ವಲ್ಪಮಾತ್ರವೂ ಕೂಡ ಮಹತ್‌ಭಯದಿಂದ ರಕ್ಷಿಸುತ್ತದೆ ಎಂದು ಗೀತೆ (೨.೪೦) ಹೇಳುತ್ತದೆ. ಆಧುನಿಕ ತಾಂತ್ರಿಕ ನಾಗರಿಕತೆ ಈ ವಿಕಾಸದ ಮುನ್ನಡೆಗೆ ಭೂಮಿಕೆಯನ್ನು ಸಿದ್ಧಗೊಳಿಸಿದೆ. ಈ ವಿಜ್ಞಾನವು ಎಲ್ಲ ಭೌತಿಕ ವಿಜ್ಞಾನಗಳಿಗಿಂತ ಬೇರೆಯಾದುದು. ಅವುಗಳಲ್ಲಿ ನಾವು ದೇಶಕಾಲದೊಳಗಿರುವ ವಸ್ತುಗಳನ್ನು ಅಧ್ಯಯಿಸುತ್ತೇವೆ. ಆದರೆ ಈ ವಿಜ್ಞಾನದಲ್ಲಿ ನಾವೇ ಅಧ್ಯಯನದ ವಿಷಯವಾಗಿರುವೆವು. ಈ ಕ್ಷೇತ್ರದ ಅಧ್ಯಯನ ಮತ್ತು ಜ್ಞಾನವೆಲ್ಲವೂ ಒಂದು ಪ್ರಯೋಗವಾಗುತ್ತದೆ, ಒಂದು ಅನುಭವವಾಗುತ್ತದೆ. ಹಾಗೂ ನಮ್ಮನ್ನು ಆಧ್ಯಾತ್ಮಿಕ ವ್ಯಕ್ತಿಗಳನ್ನಾಗಿ ಪರಿವರ್ತಿಸುತ್ತದೆ.

"ಬ್ರಹ್ಮಜ್ಞಾನವು ಬ್ರಹ್ಮಾನುಭವದಲ್ಲಿ ಪರ್ಯವಸಾನಗೊಳ್ಳುತ್ತದೆ"—ಅನುಭವಾವಸಾನಂ ಬ್ರಹ್ಮವಿಜ್ಞಾನಂ—ಎಂದು ಶಂಕರಾಚಾರ್ಯರು ಹೇಳುತ್ತಾರೆ. ವೇದಾಂತವು ಮಾನವನ ಮುಕ್ತಿ ಮತ್ತು ಅಭ್ಯುದಯವನ್ನು ಕುರಿತಾದುದು. ಶಂಕರಾಚಾರ್ಯರು ಇದನ್ನು ಪ್ರಸ್ತಾಪಿಸುತ್ತ, ಮಾತೃ-ಪಿತೃ-ಸಹಸ್ರೇಭ್ಯೋಽಪಿ ಹಿತೈಷಿಣಾ ವೇದೇನ—"ಸಹಸ್ರಾರು ಜನ ತಂದೆ ತಾಯಿಗಳಿಗಿಂತಲೂ ಅಧಿಕವಾಗಿ (ಮಾನವಕೋಟಿಯ)ಹಿತವನ್ನು ಬಯಸುವ ವೇದಗಳು"—ಎಂದು ಹೇಳುತ್ತಾರೆ. (ಕಠ, ೪.೧೫). ಮುಂಡಕ ಉಪನಿಷತ್ತು (೨.೨೬) ಎಲ್ಲರನ್ನೂ ಉದ್ದೇಶಿಸಿ ಹೀಗೆ ಹೇಳುತ್ತದೆ : ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್- "ಅಜ್ಞಾನ ಮೋಹಗಳ ಸಾಗರವನ್ನು ದಾಟುವ ನಿಮ್ಮ ಪ್ರಯತ್ನದಲ್ಲಿ ನಿಮಗೆಲ್ಲರಿಗೂ ಶುಭವಾಗಲಿ." ಕಠೋಪನಿಷತ್ತು (೩.೧೪) ಕೂಡ ಈ ಮಹಾ ಯಾತ್ರೆಯನ್ನು ಕೈಗೊಳ್ಳಲು ಎಲ್ಲರಿಗೂ ಕರೆನೀಡುತ್ತದೆ. ಸ್ವಾಮಿ ವಿವೇಕಾನಂದರು ನೀಡಿರುವ ಅದರ ಭಾವಾನುವಾದ ಹೀಗಿದೆ : 'ಏಳಿ ! ಎದ್ದೇಳಿ ! ಗುರಿ ಸೇರುವವರೆಗೂ ನಿಲ್ಲದಿರಿ !"

ಎಲ್ಲರಿಗೂ ಧನ್ಯವಾದ.

## ಪ್ರಶ್ನೋತ್ತರಗಳು

ಪ್ರಶ್ನೆ : ಪ್ರೊ. ವಾನ್ ಪ್ರಾಗ್ : ನೀವು ಹೇಳಿದಂತೆ ಭಾರತೀಯ ದೃಷ್ಟಿಕೋನದಲ್ಲಿ ಪ್ರಕೃತಿ ಅತ್ಯಂತ ವಿಶಾಲವಾದುದು. ಅದನ್ನು ಕೇವಲ ಭೌತಿಕ ಮತ್ತು ಜೈವಿಕ ದೃಷ್ಟಿಯಿಂದ ಮಾತ್ರ ನಾವು ನೋಡುವುದನ್ನು ಬಿಟ್ಟರೆ ಆಗ ಪ್ರಕೃತಿಯ ಹೊರಗೆ ಏನೂ ಇರಲಾರದೆಂಬುದು ತಿಳಿದುಬರುತ್ತದೆ. ಆದ್ದರಿಂದ ಆಧ್ಯಾತ್ಮಿಕತೆಯನ್ನು ಪ್ರಕೃತಿಯ ಒಂದು ಉನ್ನತ ರೂಪವೆಂದು ಪರಿಗಣಿಸಬಹುದು. ಈಗ ಐರೋಪ್ಯ ತತ್ತ್ವಶಾಸ್ತ್ರ ಮತ್ತು ದೇವತಾಶಾಸ್ತ್ರಗಳು ಕರೆಯುವ 'ಪ್ರಕೃತ್ಯಾತೀತ' (Supernatural) ವನ್ನು ಪ್ರಕೃತಿಯ ಉನ್ನತ ರೂಪವೆಂದು ಅನುವಾದಿಸಿದರೆ ಭಾರತೀಯ ಮತ್ತು ಪಾಶ್ಚಿಮಾತ್ಯ ಪ್ರಕೃತಿಸಂಬಂಧವಾದ ದೃಷ್ಟಿಕೋನಗಳನ್ನು ಸಮನ್ವಯಗೊಳಿಸಬಹುದು.

ಸ್ವಾಮೀಜಿ : ಆದರೆ ಭೌತಿಕ ವಿಜ್ಞಾನವು ಪ್ರಕೃತ್ಯಾತೀತವಾದುದಾವುದನ್ನೂ ಒಪ್ಪಿಕೊಳ್ಳುವುದಿಲ್ಲ, ಒಪ್ಪಿಕೊಳ್ಳಲಾರದು.

ಪ್ರೊ. ವಾನ್ ಪ್ರಾಗ್ : ಹೌದು. ಭೌತವಿಜ್ಞಾನದಲ್ಲಿ ನಾವು ಪ್ರಕೃತ್ಯಾತೀತವಾದುದಾವುದನ್ನೂ ಒಪ್ಪಿಕೊಳ್ಳುವುದಿಲ್ಲ. ಆದರೆ 'Nature' ಎಂಬ ಶಬ್ದವನ್ನು ಉಪಯೋಗಿಸುವುದು ಕಷ್ಟವಾಗುತ್ತದೆ. ಏಕೆಂದರೆ ಗ್ರೀಕ್ ಮೂಲವಾದ ಈ ಶಬ್ದವು ನಮ್ಮ ಈ ವಿಶ್ವದ ತಿಳಿವಳಿಕೆಗೆ ಸೀಮಿತವಾಗಿದೆ. ಆದರೆ ಭಾರತೀಯ ಶಬ್ದವಾದ 'ಪ್ರಕೃತಿ' ಮತ್ತು ಚೀನೀಯರ ಭಾವನೆಯಾದ ಹತ್ತುಸಾವಿರ ವಸ್ತುಗಳು

ವಿಶಾಲಾರ್ಥವನ್ನು ಪಡೆದಿವೆ. ಆದ್ದರಿಂದ Natureನ್ನು ನಿರ್ದೇಶಿಸಲು ವ್ಯಾಪಕ ಅರ್ಥದಲ್ಲಿ ಸಂಸ್ಕೃತ, ಹಿಬ್ರೂ ಮತ್ತು ಚೀನೀ ಶಬ್ದಗಳನ್ನು ಉಪಯೋಗಿಸಲು ಇಷ್ಟಪಡುತ್ತೇನೆ.

ಸ್ವಾಮೀಜಿ : ಸಂಸ್ಕೃತದಲ್ಲಿ 'Nature' ಅನ್ನು ಪ್ರಕೃತಿ ಎಂದು ಕರೆಯುತ್ತಾರೆ. ಪ್ರಕೃತಿಗೆ ಎರಡು ಆಯಾಮಗಳಿವೆ : ಅಪರಾ ಮತ್ತು ಪರಾ. ಅಪರಾ ಪ್ರಕೃತಿಯೇ ಭೌತಿಕ ಪ್ರಕೃತಿ. ಪರಾ ಎಂದರೆ ಅದರ ಆಧ್ಯಾತ್ಮಿಕ ರೂಪ. ಪರಾ ಮತ್ತು ಅಪರಾ ಇವೆರಡೂ ಪೂರ್ಣ ಪ್ರಕೃತಿಯನ್ನು, ಪೂರ್ಣ ಅಸ್ತಿತ್ವವನ್ನು ಪ್ರತಿನಿಧಿಸುತ್ತವೆ. ವೇದಾಂತದಲ್ಲಿ ಪರಾ ಪ್ರಕೃತಿಯು ಭಗವಂತನ ಒಂದು ರೂಪ, ಅದನ್ನು ಜಗನ್ಮಾತೆ ಎಂದು ಕರೆಯುತ್ತಾರೆ. ಆದ್ದರಿಂದ ಒಬ್ಬನಿಗೆ ಆಧ್ಯಾತ್ಮಿಕ ಅನುಭವವಾದಾಗ ಅದೂ ಪ್ರಕೃತಿಗೇ ಸೇರಿದುದು. ಆದರೆ ಅದು ಪರಾ ಪ್ರಕೃತಿ. ಇಂದ್ರಿಯಾನುಭವದ ಜಗತ್ತು ಅಪರಾ ಪ್ರಕೃತಿಗೆ ಸೇರಿದುದು. ಪಾಶ್ಚಾತ್ಯ ಶಬ್ದ 'Nature' ಭಾರತೀಯ ಭಾವನೆಯಾದ ಅಪರಾ ಪ್ರಕೃತಿಯನ್ನು ನಿರ್ದೇಶಿಸುತ್ತದೆ. ಅದು ಜಡ ಜಗತ್ತಿಗೆ ಸಂಬಂಧಿಸಿದುದು. ಅದರಲ್ಲಿ ಮನಸ್ಸೂ ಸೇರುತ್ತದೆ. ಏಕೆಂದರೆ ವೇದಾಂತದ ಪ್ರಕಾರ ಮನಸ್ಸು ಕೂಡ ಭೌತವಸ್ತುವೇ—ಆದರೆ ಅತ್ಯಂತ ಸೂಕ್ಷ್ಮವಾದುದು ಅಷ್ಟೇ. ಶುದ್ಧ ಪ್ರಜ್ಞೆ ಅಥವಾ ಚೈತನ್ಯವೇ ಪರಾಪ್ರಕೃತಿ. ಈ ಶುದ್ಧ ಚೈತನ್ಯವೇ, ಅಥವಾ ಪರಾ ಪ್ರಕೃತಿಯೇ ಅಪರಾ ಪ್ರಕೃತಿಯಾಗಿ, ಭೌತಪ್ರಕೃತಿಯಾಗಿ ಅಭಿವ್ಯಕ್ತಗೊಳ್ಳುತ್ತದೆ. ಪ್ರತಿಯೊಂದೂ ಶುದ್ಧ ಚೈತನ್ಯದಿಂದ ಬಂದಿರುವುದು. ಈ ಶುದ್ಧ ಚೈತನ್ಯವನ್ನು ಚಿತ್-ಶಕ್ತಿ, ಪರಾ-ಶಕ್ತಿ ಎಂದು ಮುಂತಾಗಿ ಕರೆಯುತ್ತಾರೆ. ಸಂಸ್ಕೃತದಲ್ಲಿ ಚಿತ್ ಎಂದರೆ Consciousness ಮತ್ತು ಜಡ ಎಂದರೆ Inert matter. ಮಾನವನನ್ನು ಚಿತ್-ಜಡ ಗ್ರಂಥಿ ಎಂದು ಕರೆಯಲಾಗಿದೆ.

ಪ್ರಶ್ನೆ : ಉನ್ನತ ಪ್ರಜ್ಞೆಯ ಬೆಳವಣಿಗೆಗೆ, ನಾನು ಅರ್ಥಮಾಡಿಕೊಂಡಂತೆ, ನೈತಿಕ ತಳಹದಿ ಆವಶ್ಯಕ. ಆದರೆ ಈ ನೈತಿಕ ತಳಹದಿ ಯಾವುದರಿಂದ ಬರುತ್ತದೆ ? ಅದು ನಮ್ಮಲ್ಲೇ ಇರುವುದೇ ಅಥವಾ ಹೊರಗಿನಿಂದ ಬರುತ್ತದೆಯೇ ?

ಸ್ವಾಮೀಜಿ : ಹೌದು, ಅದು ಮಾನವನಲ್ಲಿ ಆಗಲೇ ಇದೆ. ಅದು ಅವನ ಆಧ್ಯಾತ್ಮಿಕ ಸ್ವರೂಪ ದಲ್ಲಿಯೇ ಅಡಗಿದೆ. ನಾವದನ್ನು ಹೊರಗೆ ಪ್ರಕಾಶಪಡಿಸುತ್ತೇವೆ ಅಷ್ಟೆ. ಅದು ಮೊದಲು ಸಾಮಾಜಿಕ ಸಂಬಂಧಗಳ ವಲಯದಲ್ಲಿ ವ್ಯಕ್ತವಾಗುತ್ತದೆ. ನೈತಿಕ ಮೌಲ್ಯಗಳು ಬಾಹ್ಯವಸ್ತುಗಳಿಂದ ಉಂಟಾಗುವು ದಿಲ್ಲ. ಅವು ಮಾನವ ಚೇತನದ ಅಂತರಾಳದಿಂದ ಹೊರಗೆ ವ್ಯಕ್ತವಾಗುತ್ತದೆ. ಬರ್ಟ್ರ್ಯಾಂಡ್ ರಸೆಲ್ ಹೇಳುತ್ತಾರೆ: (*Impact of Science on Society*, p. 77) :

> *ಬೇರೆ ಯಾವುದೇ ಬೇಕಾದರೂ ಯಾಂತ್ರಿಕವಾಗಿರಬಹುದು, ಆದರೆ ಮೌಲ್ಯಗಳು ಮಾತ್ರ ಅಲ್ಲ. ಇದನ್ನು ಯಾವುದೇ ರಾಜನೀತಿ ಶಾಸ್ತ್ರಜ್ಞನೂ ಮರೆಯಬಾರದು.*

ಪ್ರಶ್ನೆ : ಈ ನೈತಿಕ ತಳಹದಿಯಿಲ್ಲದೆ ಮಾನವನು ಉನ್ನತ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದು ಅಸಾಧ್ಯವಲ್ಲವೆ ?

ಸ್ವಾಮೀಜಿ : ಹೌದು, ಅದು ನಿಜ. ದೃಢ ನೈತಿಕ ತಳಹದಿಯಿಲ್ಲದೆ ಪ್ರಜ್ಞೆಯನ್ನು ಉನ್ನತ ಆಧ್ಯಾತ್ಮಿಕ ಹಂತಗಳಿಗೆ ಏರಿಸುವುದು ಅಸಾಧ್ಯ. ಭಾವೋದ್ರೇಕದ ಮೂಲಕ ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೇರಿಸುವುದು ಸಾಧ್ಯ. ಆದರೆ ಅದು ತಾತ್ಕಾಲಿಕ. ಆ ಭಾವ ಶಮನದನಂತರ ಪ್ರಜ್ಞೆಯು ಕೆಳಮುಖ ಇಳಿಯುತ್ತದೆ. ಕೆಲವೊಮ್ಮೆ ತೀರ ಕೆಳಮಟ್ಟಕ್ಕೂ ಇಳಿಯುತ್ತದೆ. ಆಧ್ಯಾತ್ಮಿಕ ಪ್ರಜ್ಞೆಯನ್ನು ಉನ್ನತ ಸ್ಥಿತಿಯಲ್ಲಿ ಉಳಿಸಿಕೊಳ್ಳಬೇಕಾದರೆ ಸ್ಥಿರ ನೈತಿಕ ತಳಹದಿ ಆವಶ್ಯಕ. ಅಸ್ಥಿರ ಭಾವಾತಿರೇಕದ ಮೂಲಕ ಪ್ರಜ್ಞೆಯು ರಾಕೆಟ್ಟಿನಂತೆ ಕೂಡಲೇ ಮೇಲ್ಮುಖ ಪುಟಿಯುವಂತೆ ಮಾಡಬಹುದು. ಆದರೆ ಆ ಭಾವಶಕ್ತಿಯನ್ನು ಹಿಂತೆಗೆದುಕೊಂಡಮೇಲೆ ಪ್ರಜ್ಞೆಯು ರಾಕೆಟ್ಟಿನಂತೆಯೇ ಅಸಂಸ್ಕೃತ ಮನಸ್ಸಿನ ಗುರುತ್ವಾಕರ್ಷಣೆಯಿಂದ ಕೆಳಗೆಳೆಯಲ್ಪಡುತ್ತದೆ. ಸ್ಥಿರ ನೈತಿಕ ತಳಹದಿಯೂ ಕೂಡ ಆಧ್ಯಾತ್ಮಿಕ

ಸ್ವರೂಪದ ಪ್ರಥಮ ಸ್ಫುರಣ: ಇದು ಪ್ರಜ್ಞೆಯನ್ನು ದೇಹಬದ್ಧ ಅಹಂಕಾರದ ಹಂತದಿಂದ ವಿಶಾಲಾತ್ಮದ ಹಂತಕ್ಕೆ ಏರಿಸುವುದು. ಮಾನವನು ದೇಹಗತ ಪ್ರಾಣನಾಗಿರುವಾಗ ನೈತಿಕ ಮೌಲ್ಯಗಳನ್ನೂ ವ್ಯಕ್ತಪಡಿಸಲಾರನು. ಎಲ್ಲ ನೈತಿಕಮೌಲ್ಯಗಳೂ ಮಾನವನ ಆಧ್ಯಾತ್ಮಿಕ ಬೆಳವಣಿಗೆಯ ಉಪ-ಉತ್ಪನ್ನಗಳು.

ಪ್ರಶ್ನೆ : ಪ್ರಾಪಂಚಿಕ ಜೀವನವನ್ನು ಉತ್ತಮಪಡಿಸಿಕೊಳ್ಳಲು ಧ್ಯಾನವನ್ನು ಉಪಯೋಗಿಸಬಹುದೆ ? ಆ ಧ್ಯಾನದ ಸ್ವರೂಪವೇನು ?

ಸ್ವಾಮೀಜಿ: ಇಂದು ಪಶ್ಚಿಮದಲ್ಲಿ ಮಿಲಿಯಗಟ್ಟಲೆ ಜನರು ಧ್ಯಾನವನ್ನು ಮಾಡುತ್ತಿರುವರು. ಅವರಲ್ಲನೇಕರು ಅಲ್ಪಪ್ರಾಪಂಚಿಕ ಪ್ರಯೋಜನಕ್ಕಾಗಿ, ತಮ್ಮ ಪ್ರಾಪಂಚಿಕ ಕೆಲಸಗಳನ್ನು ಹೆಚ್ಚು ಸಮರ್ಥವಾಗಿ ಮಾಡುವುದಕ್ಕಾಗಿ ಧ್ಯಾನಾಭ್ಯಾಸವನ್ನು ಮಾಡುತ್ತಾರೆ. ಅದೂ ಒಳ್ಳೆಯದೇ. ಆದರೆ ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೇರಿಸುವುದಕ್ಕಾಗಿ ಧ್ಯಾನಾಭ್ಯಾಸವನ್ನು ಕೈಗೊಂಡರೆ ಅದು ಆಧ್ಯಾತ್ಮಿಕ ವಿಶಿಷ್ಟತೆಯನ್ನು ಪಡೆಯುತ್ತದೆ. ದುರಾದೃಷ್ಟವಶಾತ್, ಅನೇಕರು ಈ ಬೆಳವಣಿಗೆಯನ್ನು ಕೈಗೊಳ್ಳುವುದಿಲ್ಲ. ಪ್ರಜ್ಞೆಯ ಪ್ರಾಪಂಚಿಕ ಹಂತದಿಂದಲೇ ಅವರು ತೃಪ್ತರಾಗುತ್ತಾರೆ. ಇದರಿಂದ ಅತೃಪ್ತರಾಗಿ ಪ್ರಾಪಂಚಿಕ ಹಂತದಿಂದ ಮೇಲೇರುವ ತೃಷ್ಣೆಯನ್ನು ಬೆಳೆಸಿಕೊಳ್ಳದಿದ್ದರೆ ಪ್ರಜ್ಞೆಯ ಉನ್ನತ ಬೆಳವಣಿಗೆ ಸಾಧ್ಯವಿಲ್ಲ. ಈ ಬೆಳವಣಿಯ ವ್ಯಾಕುಲತೆ ಇದ್ದರೆ ಮಾತ್ರ ಧ್ಯಾನವು ಆಧ್ಯಾತ್ಮಿಕ ಉನ್ನತಿಯ ಸಾಧನವಾಗುತ್ತದೆ. ಇದು ಹಸಿವು ಇದ್ದಂತೆ, ಹಸಿವಾದಾಗ ಆಹಾರವನ್ನು ಸ್ವೀಕರಿಸಲೇಬೇಕಾಗುತ್ತದೆ. ಆದರೂ ಆಧ್ಯಾತ್ಮಿಕ ಬೆಳವಣಿಗೆಗಾಗಿ ಧ್ಯಾನವನ್ನು ಮಾಡುವವರೂ ಅನೇಕರಿರುವರು.

ಪ್ರಶ್ನೆ : ತಾನು ಧ್ಯಾನಸ್ಥಿತಿಯಲ್ಲಿರುವೆನೆಂಬುದು ಒಬ್ಬನಿಗೆ ಹೇಗೆ ಗೊತ್ತಾಗುತ್ತದೆ ?

ಸ್ವಾಮೀಜಿ: ಇದು ಧ್ಯಾನದ ಉದ್ದೇಶವನ್ನು ಅವಲಂಬಿಸಿರುತ್ತದೆ. ನಾನು ಮೊದಲೇ ಹೇಳಿದಂತೆ ಕೆಲವರು ಭೌತಿಕ ಉದ್ದೇಶವನ್ನಿಟ್ಟುಕೊಂಡು—ಉದಾಹರಣೆಗಾಗಿ ನರಸಡಿಲತೆಗಾಗಿ— ಧ್ಯಾನ ಮಾಡುತ್ತಾರೆ. ಹಣಸಂಪಾದನೆ, ಪ್ರಾಪಂಚಿಕ ಯಶಸ್ಸು ಇತ್ಯಾದಿಗಳು ಉದ್ರೇಕವನ್ನೂ ಬಿಗಿತವನ್ನೂ ಉಂಟುಮಾಡುತ್ತವೆ. ಅಂತಹ ವ್ಯಕ್ತಿಗಳು ನರಬಿಗಿತದಿಂದ ಪಾರಾಗಲು ಧ್ಯಾನದಲ್ಲಿ ತೊಡಗುತ್ತಾರೆ. ಆದರೆ ಅವರ ಗುರಿ ಹೆಚ್ಚು ಹಣವನ್ನು ಸಂಪಾದಿಸುವುದು ಅಥವಾ ಪ್ರಾಪಂಚಿಕ ಸುಖವನ್ನೋ ಯಶಸ್ಸನ್ನೋ ಗಳಿಸುವುದು. ಇಂತಹ ಧ್ಯಾನ ಆಧ್ಯಾತ್ಮಿಕ ಪ್ರಜ್ಞೆಯನ್ನು ಜಾಗೃತಗೊಳಿಸಲು ಸಹಾಯಕವಾಗುವುದಿಲ್ಲ. ಆಧ್ಯಾತ್ಮಿಕ ವ್ಯಾಕುಲತೆಯಿಂದ ಧ್ಯಾನಾಭ್ಯಾಸವನ್ನು ಕೈಗೊಂಡರೆ, ಅಂತಹ ಧ್ಯಾನ ಆಧ್ಯಾತ್ಮಿಕ ಪೋಷಣೆಯನ್ನು ನೀಡುತ್ತದೆ. ಈ ಆಂತರಿಕ ಪೋಷಣೆಯ ಅನುಭವ ಒಬ್ಬನಿಗಾದಾಗ ತಾನು ಧ್ಯಾನಸ್ಥಿತಿಯಲ್ಲಿರುವೆನೆಂಬುದು ತಿಳಿಯುತ್ತದೆ. ಅದರಿಂದ ಅವನಿಗೆ ಆಧ್ಯಾತ್ಮಿಕ ಪ್ರಯೋಜನ ಉಂಟಾಗುತ್ತದೆ.

ಪ್ರಶ್ನೆ : ಉನ್ನತ ಆಧ್ಯಾತ್ಮಿಕ ಪ್ರಜ್ಞೆಯನ್ನು ಬೆಳಸುವುದಕ್ಕೆ ಹೇಗೆ ಪ್ರಾರಂಭಿಸಬೇಕು ? ಪತಂಜಲಿಯ ಯೋಗಸೂತ್ರಗಳು ಮುಂತಾದ ಪುಸ್ತಕಗಳನ್ನು ಓದಬೇಕೆ ?

ಸ್ವಾಮೀಜಿ: ಇಲ್ಲ, ಕೇವಲ ಪುಸ್ತಕಗಳನ್ನು ಓದುವುದರಿಂದಲ್ಲ. ಆಧ್ಯಾತ್ಮಿಕ ಬೆಳವಣಿಗೆಗಾಗಿ ನಮ್ಮಲ್ಲಿ ಹಸಿವುಂಟಾಗುವಂತೆ ಮಾಡಬೇಕು. ಯೋಗಸೂತ್ರಗಳಂತಹ ಗ್ರಂಥಗಳ ಅಧ್ಯಯನ ಅಂತಹ ಹಸಿವನ್ನು ಸೃಷ್ಟಿಸಲು ಸಹಾಯಕವಾಗುತ್ತದೆ, ಮತ್ತು ಆಧ್ಯಾತ್ಮಿಕ ಹಾದಿಯಲ್ಲಿ ಮುಂದುವರಿಯಲು ಮಾರ್ಗದರ್ಶನ ನೀಡುತ್ತವೆ. ನಮಗೆ ಹಸಿವಾದಾಗ ಆ ಹಸಿವನ್ನು ನೀಗಿಸುವಂತಹ ಆಹಾರವನ್ನು ಹುಡುಕಿಕೊಂಡು ಹೋಗುತ್ತೇವೆ. ಆಧ್ಯಾತ್ಮಿಕ ಹಸಿವು ನಿಜವಾದ ಹಸಿವು. ನಿಮಗೆ ಒಮ್ಮೆ ಆ ಅನುಭವವಾದರೆ ಆ ಹಸಿವನ್ನು ನೀಗಿಸುವ ಆಹಾರವನ್ನು ಅರಸುವುದರಲ್ಲಿ ತೊಡಗುತ್ತೀರಿ. ಆ ಹಸಿವನ್ನು ಯಾವುದೇ ಭೌತಿಕ ಆಹಾರದಿಂದ, ಬೌದ್ಧಿಕ ಆಹಾರದಿಂದಲೂ ಕೂಡ,

ನೀಗಿಸಲಾಗುವುದಿಲ್ಲ. ಪುರಾತನವೂ ಆಧುನಿಕವೂ ಆದ ಆಧ್ಯಾತ್ಮಿಕ ಆಹಾರ ಬೇಕಾದಷ್ಟು ಇದೆ. ಈ ಆಧ್ಯಾತ್ಮಿಕ ಪರಂಪರೆಯಿಂದ ಬಂದ ಆಹಾರದಿಂದ ಸ್ತ್ರೀಪುರುಷರೆಲ್ಲರೂ ತಮ್ಮ ಆಧ್ಯಾತ್ಮಿಕ ಹಸಿವನ್ನು ನಿವಾರಿಸಿಕೊಳ್ಳಬಹುದು. ಆಧ್ಯಾತ್ಮಿಕ ಸ್ಫೂರ್ತಿಯನ್ನು ನೀಡುವ ಗ್ರಂಥಗಳು ಅಂತಹ ಆಹಾರದ ಗುಂಪಿಗೆ ಸೇರುತ್ತವೆ. ನಾವು ಇತರ ಎಲ್ಲ ಆಧ್ಯಾತ್ಮಿಕ ಪ್ರೇರಣೆಗಳ ಪ್ರಯೋಜನವನ್ನೂ ಪಡೆಯಬೇಕು. ಆಧ್ಯಾತ್ಮಿಕ ಜೀವನದಲ್ಲಿ ಗ್ರಂಥಗಳ ಪ್ರಾಮುಖ್ಯತೆ ಮತ್ತು ಮಿತಿಯನ್ನು ಕುರಿತ ಒಂದು ಶ್ಲೋಕವಿದೆ (ಪಂಚದಶಿ ೪.೪೫.):

ಗ್ರಂಥಮಭ್ಯಸ್ಯ ಮೇಧಾವಿ ಜ್ಞಾನ-ವಿಜ್ಞಾನ ತತ್ಪರಃ ।
ಪಲಾಲಮಿವ ಧಾನ್ಯಾರ್ಥೀ ತ್ಯಜೇತ್ ಗ್ರಂಥಮಶೇಷತಃ ॥

*ಜ್ಞಾನ ಮತ್ತು ಅನುಭವವನ್ನು ಅರಸುವ ಮೇಧಾವಿಯು (ಆಧ್ಯಾತ್ಮಿಕ) ಗ್ರಂಥಗಳ ಅಧ್ಯಯನ ಮಾಡಿದಮೇಲೆ, (ಅವುಗಳ ಸಾರವನ್ನು ಗ್ರಹಿಸಿದಮೇಲೆ) ಧಾನ್ಯವನ್ನು ಬಯಸುವವನು ಹೊಟ್ಟನ್ನು ಎಸೆಯುವಂತೆ, ಗ್ರಂಥಗಳನ್ನು ಸಂಪೂರ್ಣ ತ್ಯಜಿಸಬೇಕು.*

ಪ್ರಶ್ನೆ : ಪ್ರೊ. ವಾನ್ ಪ್ರಾಗ್ : ಸಂಸ್ಕಾರ ಮತ್ತು ಕರ್ಮಗಳಿಗಿರುವ ವ್ಯತ್ಯಾಸವನ್ನು ದಯವಿಟ್ಟು ಹೇಳುತ್ತೀರ ?

ಸ್ವಾಮೀಜಿ : ಸಾಮಾನ್ಯ ಅರ್ಥದಲ್ಲಿ ಕರ್ಮ ಎಂದರೆ ಕೆಲಸ, ಆದರೆ ವಿಶೇಷಾರ್ಥದಲ್ಲಿ ಕೆಲಸದ ಫಲ. ಈ ಫಲವನ್ನೇ ಸಂಸ್ಕಾರವೆನ್ನುವುದು. ಕರ್ತೃವಿನ ಮನಸ್ಸಿನ ಮೇಲೆ ಉಂಟಾಗುವ ಕ್ರಿಯೆಯ ಗುರುತು ಅಥವಾ ಮುದ್ರೆಯೇ ಸಂಸ್ಕಾರ. ನಮ್ಮ ಕ್ರಿಯೆಯ ಮೂಲಕ ಹೊರಪ್ರಪಂಚದಲ್ಲಿ ಒಂದು ಗುರುತನ್ನು ಬಿಡುತ್ತೇವೆ. ಅದೇ ಕ್ರಿಯೆಯ ಮೂಲಕ ನಮ್ಮ ಮನಸ್ಸಿನೊಳಗೂ ಒಂದು ಗುರುತನ್ನು ಬಿಡುತ್ತೇವೆ. ಅನೇಕರು ಈ ಎರಡನೆಯ ಅಂಶವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಕರ್ಮದಿಂದ ಉಂಟಾದ ಸಂಸ್ಕಾರಗಳೇ ವ್ಯಕ್ತಿಯ ಮನಸ್ಸನ್ನೂ ಶೀಲವನ್ನೂ ರೂಪಿಸುವುದು. ಪ್ರತಿಯೊಬ್ಬನೂ ತನ್ನ ಶೀಲವನ್ನು ರೂಪಿಸಿಕೊಳ್ಳಲು ಈ ಸಂಸ್ಕಾರಗಳ ಕಡೆ ಗಮನ ಕೊಡಬೇಕು. ಚಾರಿತ್ರ್ಯ ನಿರ್ಮಾಣ ದಲ್ಲಿ ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೇರಿಸುವುದು ಪ್ರಧಾನ ಪಾತ್ರವಹಿಸುತ್ತದೆ. ಸಂಸ್ಕಾರವನ್ನು ವಾಸನೆ ಎಂದೂ ಕರೆಯುತ್ತಾರೆ. ವಾಸನೆ ಎಂಬುದರ ಶಬ್ದಾರ್ಥ ಗಂಧ ಎಂದು—ಉದಾಹರಣೆಗೆ ಹೂವಿನ ಗಂಧ. ವಾಸನೆಗಳು ಮಾನವನ ಮನೋಗತಿಯನ್ನು ನಿರ್ದೇಶಿಸುತ್ತವೆ, ಅವನನ್ನು ನಿರ್ದಿಷ್ಟ ದಿಕ್ಕಿನಲ್ಲಿ ಎಳೆದುಕೊಂಡು ಹೋಗುವ ಶಕ್ತಿಕೇಂದ್ರಗಳು ಅವು. ಅವು ಈಗಿನ ಮತ್ತು ಹಿಂದಿನ ಕರ್ಮಗಳ ಪ್ರತಿಫಲಗಳು. ಮನಸ್ಸಿನ ಪ್ರಜ್ಞಾಸ್ತರ, ಪೂರ್ವ-ಪ್ರಜ್ಞಾಸ್ತರ, ಅಲ್ಪ-ಪ್ರಜ್ಞಾಸ್ತರ ಮತ್ತು ಅಪ್ರಜ್ಞಾಸ್ತರ ಇವೆಲ್ಲವು ಈ ಸಂಸ್ಕಾರಗಳಿಂದ ತುಂಬಿಹೋಗಿವೆ. ಅದರಲ್ಲಿ ಪ್ರಜ್ಞಾಸ್ತರವು ಪ್ರಸ್ತುತ ಕ್ರಿಯಾಸ್ಥಿತಿಯಾಗಿದೆ. ಉಳಿದವು ಮುಂದೆ ಕ್ರಿಯಾಶೀಲವಾಗುವುದರಲ್ಲಿವೆ. ಇವು ಮಾನವನ ಪ್ರಜ್ಞಾತ್ಮಕ ಜಾಗ್ರತಾನುಭವಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಆದ್ದರಿಂದ ನಾವು ಅವುಗಳನ್ನು ಗುರುತಿಸಿ ಕೇವಲ ಒಳ್ಳೆಯ ಸಂಸ್ಕಾರಗಳನ್ನು ತೆಗೆದುಕೊಳ್ಳಬೇಕು. ಒಂದು ಬಗೆಯ ಸಂಸ್ಕಾರಗಳು ನಮ್ಮನ್ನು ದೈಹಿಕ ಮತ್ತು ಇಂದ್ರಿಯ ಮಟ್ಟಕ್ಕೆ ಎಳೆಯುತ್ತವೆ. ಇನ್ನೊಂದು ಬಗೆಯ ಸಂಸ್ಕಾರಗಳು ಆಧ್ಯಾತ್ಮಿಕತೆಯ ಕಡೆಗೆ ಎಳೆಯುತ್ತವೆ. ಮೊದಲನೆಯ ಬಗೆಯವನ್ನು ಸತ್ಸಂಸ್ಕಾರ ಗಳೆಂದೂ ಎರಡನೆಯ ಬಗೆಯವನ್ನು ದುಸ್ಸಂಸ್ಕಾರಗಳೆಂದೂ ಕರೆಯುತ್ತಾರೆ. ಪ್ರಜ್ಞೆಯನ್ನು ಉನ್ನತ ಮಟ್ಟಕ್ಕೆ ಏರಿಸಲು ಸಹಾಯ ಮಾಡುವುದೆಲ್ಲ ಸತ್ಸಂಸ್ಕಾರಗಳು, ಪ್ರಜ್ಞೆಯನ್ನು ಕೆಳಮಟ್ಟಕ್ಕೆ ಇಳಿಸಿ ವ್ಯಕ್ತಿಯನ್ನು ಸ್ವಾರ್ಥಿಯನ್ನಾಗಿಯೂ ಪ್ರಾಪಂಚಿಕನನ್ನಾಗಿಯೂ ಮಾಡುವುದೆಲ್ಲ ದುಸ್ಸಂಸ್ಕಾರಗಳು.

ಪ್ರಶ್ನೆ : ಪ್ರಜ್ಞಾಸಿದ್ಧಾಂತವನ್ನು ಕುರಿತಂತೆ ಸಮಕಾಲೀನ ಬೆಳವಣಿಗೆ ಏನಾದರೂ ಇರುವುದೆ ?

ಸ್ವಾಮಿಜಿ : ಆಧುನಿಕ ಮನೋಚಿಕಿತ್ಸೆಯು ಪ್ರಜ್ಞೆಯ ಅಧ್ಯಯನವನ್ನು ಕೈಗೊಂಡಿದೆ. ಈ

ದಿಸೆಯಲ್ಲಿ ಅದು ಪೌರಸ್ತ್ಯ ತತ್ತ್ವಗಳಾದ ಯೋಗ, ವೇದಾಂತ, ಟಾವೋಇಸಂ, ಜೆನ್-ಇವುಗಳಿಂದ ಪ್ರಭಾವಿತವಾಗಿದೆ. ಈ ಪ್ರಭಾವಗಳು ಅದರ ಸಿದ್ಧಾಂತ ಮತ್ತು ತಂತ್ರವನ್ನು ಉತ್ತಮಪಡಿಸುತ್ತವೆ. ಪ್ರಜ್ಞೆಯ ಅಧ್ಯಯನಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳು ಈಗ ಪ್ರಕಟವಾಗುತ್ತಿವೆ. ಉದಾಹರಣೆಗೆ *Consiousness ; The Brain, Status of Awareness, and Alternate Realities*, edited by Daniel Goleman and Richard J. Davidson, and *Meeting of the ways ; Exploration in East / West Psychology* ; edited by John Welwood. ಈ ಪ್ರಭಾವಗಳು ಮನಶ್ಶಾಸ್ತ್ರ ಮತ್ತು ಮನೋಚಿಕಿತ್ಸೆಗಳನ್ನು, ರೋಗ ಪರಿಹಾರಕಗಳಾಗಿರುವುದು ಮಾತ್ರವಲ್ಲದೆ, ರೋಗನಿವಾರಕ ವಿಜ್ಞಾನಗಳನ್ನಾಗಿ ಪರಿವರ್ತಿಸುತ್ತಿವೆ. ಅದು ರೋಗನಿವಾರಕ ವಿಜ್ಞಾನವಾದಾಗ, ಪುರಾತನ ಭಾರತದಲ್ಲಿಯಂತೆ, ಅಧ್ಯಾತ್ಮ ವಿಜ್ಞಾನವಾಗಿ ಬೆಳೆಯುತ್ತದೆ. ಭಾರತದಲ್ಲಿ ಬಹಳ ಹಿಂದೆಯೇ ಮನಶಾಸ್ತ್ರವು ಬೆಳೆಯಿತು. ಇದರ ಆಧಾರದ ಮೇಲೆಯೇ ಧರ್ಮವು ಆಧ್ಯಾತ್ಮಿಕ ಅನುಭವದ ವಿಜ್ಞಾನವಾಗಿ ಬೆಳೆಯಿತು. ವೇದಾಂತ, ಬೌದ್ಧಧರ್ಮ ಮತ್ತು ಜೈನಧರ್ಮಗಳ ಹಿಂದಿರುವ ಶಕ್ತಿಯೇ ಇದು. ಇವೆಲ್ಲವೂ ಮನಶ್ಶಾಸ್ತ್ರದ ಆಳ ಅಧ್ಯಯನದ ಮೇಲೆ ನಿಂತಿವೆ. ಪಶ್ಚಿಮದಲ್ಲಿ ದೇವತಾಶಾಸ್ತ್ರವಾಗಲಿ, ಮನಶ್ಶಾಸ್ತ್ರವಾಗಲಿ ಮಾನವಮನಸ್ಸಿನ ಆಳ ಅಧ್ಯಯನದ ಸಹಾಯವನ್ನು ಪಡೆಯಲಿಲ್ಲ. ಆದರೆ ಈಗ ಪಶ್ಚಿಮದಲ್ಲಿ, ಯುದ್ಧೋತ್ತರ ಅವಧಿಯಲ್ಲಿ ಪೌರಸ್ತ್ಯ ಮನಶ್ಶಾಸ್ತ್ರದ ಸಂಪರ್ಕದಿಂದಾಗಿ ಮನಶ್ಶಾಸ್ತ್ರವು ಮಾನವ ಮನಸ್ಸಿನ ಆಳ ಅಧ್ಯಯನವನ್ನು ಕೈಗೊಂಡಿದೆ. ಹಾಗೆಯೇ ಪಾಶ್ಚಿಮಾತ್ಯ ಧರ್ಮವೂ ಕೂಡ ಕೇವಲ ಮತೀಯ ನಂಬಿಕೆಗೆ ಸೀಮಿತವಾಗಿರದೆ ಅನುಭವಕ್ಕೆ ಹೆಚ್ಚು ಒತ್ತನ್ನೂ ನೀಡುತ್ತಿದೆ. ಹಿಂದೆ ಪ್ರಸ್ತಾಪಿಸಿದ ಜಾನ್ ವೆಲ್‌ವುಡ್ ಸಂಪಾದಿಸಿದ ಪುಸ್ತಕದ ಮುನ್ನುಡಿಯಲ್ಲಿ ಅವರು ಹೇಳುತ್ತಾರೆ (ಪು. x) :

*ಪ್ರಜ್ಞೆಯ ಸ್ವರೂಪ, ವೈಯಕ್ತಿಕತೆ, ಮನಸ್ವಾಸ್ಥ್ಯ, ಮತ್ತು ಮನೋಚಿಕಿತ್ಸೆ—ಇವನ್ನು ಕುರಿತಾದ ಶಾಶ್ವತ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಹೊಸ ದೃಷ್ಟಿಕೋನವನ್ನು ಒದಗಿಸುವುದಕ್ಕಾಗಿ ಈ ಗ್ರಂಥವು ರಚಿತವಾಗಿದೆ. ಇದರ ಮೊದಲ ಭಾಗವು ಮಾನವ ಮನಸ್ಸಿನ ಸ್ವರೂಪದ ಬಗ್ಗೆ ಮೂಲಭೂತ ಪ್ರಶ್ನೆಗಳನ್ನು ಕೇಳುತ್ತದೆ. ಪ್ರಜ್ಞೆಯ ವಿವಿಧ ಸ್ತರಗಳ ಅಧ್ಯಯನವು ವ್ಯಕ್ತಿಯ ವೈಯಕ್ತಿಕತೆ ಅಥವಾ ಅಹಂಪ್ರಜ್ಞೆಯ ಸ್ವರೂಪವೇನು ಎಂಬ ಪ್ರಶ್ನೆಗೆ ಒಯ್ಯುತ್ತದೆ. ಇದು ಎರಡನೆಯ ಭಾಗದ ವಿಷಯ. ಕೇವಲ ಊಹಾತ್ಮಕ ಸಿದ್ಧಾಂತಗಳನ್ನು ಹೊರತುಪಡಿಸಲು, ಮನಸ್ಸು ಮತ್ತು ಆತ್ಮಗಳ ಸಂಶೋಧನೆಯಿಂದ ಉದ್ಭವಿಸಿದ ಪ್ರಶ್ನೆಗಳು ಹೆಚ್ಚು ವ್ಯಾವಹಾರಿಕ ಮತ್ತು ಶಿಸ್ತುಬದ್ಧ ಅಧ್ಯಯನದ ನೆಲೆಯನ್ನು ಆಧರಿಸಿರಬೇಕು. ಆದ್ದರಿಂದ ಮೂರನೆಯ ಭಾಗವು ಧ್ಯಾನ ಅಥವಾ ಈ ಪ್ರಶ್ನೆಗಳನ್ನು ನೇರವಾಗಿ ಮತ್ತು ವೈಯಕ್ತಿಕವಾಗಿ ನಮ್ಮ ಜೀವನದೊಂದಿಗೆ ಸಂಬಂಧಿಸಿಕೊಳ್ಳುವುದು ಹೇಗೆಂಬುದನ್ನು ಕುರಿತಾಗಿದೆ. ಕೊನೆಯ ಭಾಗವು ಮೊದಲ ಮೂರು ಭಾಗಗಳ ಅಂತರ್ಜ್ಞಾನವನ್ನು ಮನೋಚಿಕಿತ್ಸೆಗೆ ಅಳವಡಿಸಿಕೊಳ್ಳುವುದು ಹೇಗೆಂಬುದನ್ನು ತಿಳಿಸುತ್ತದೆ ಮತ್ತು ಜನರು ಜಾಗ್ರತ ಜೀವನವನ್ನು ನಡೆಸಲು ಸಹಾಯಕವಾಗುವಂತೆ ಕೆಲವು ಹೊಸ ಸಲಹೆಗಳನ್ನು ನೀಡುತ್ತದೆ.*

ಮತ್ತೆ ಹೇಳುತ್ತಾರೆ (ಅದೇ, ಪೀಠಿಕೆ, ಪು. xv-xvi) ;

*ಪ್ರಯೋಗಾತ್ಮಕ, ಪೂರ್ಣಾತ್ಮಕ ಮತ್ತು ಅನುಭವಾತ್ಮಕ ಪೌರಸ್ತ್ಯ ಸಂಪ್ರದಾಯಗಳು, ಯಥಾರ್ಥತೆ, ಸ್ಪಷ್ಟತೆ, ವೈಚಾರಿಕತೆ ಮತ್ತು ಸ್ವಾವಲಂಬಿತ್ವಗಳಿಂದ ಕೂಡಿದ ಪಾಶ್ಚಿಮಾತ್ಯ ವಿಧಾನಗಳೊಂದಿಗೆ ಈಗ ಸಂಧಿಸುತ್ತಿರುವುವು. ಈ ವಿಚಾರವಿನಿಮಯ ಸಾಂಸ್ಕೃತಿಕ ಮಿತಿಗಳನ್ನು ಮೀರಿದ ಒಂದು ಹೊಸ ಮನಃಶಾಸ್ತ್ರದ ಬೆಳವಣಿಗೆಗೆ ನಾಂದಿಯಾಗುತ್ತದೆ ಮತ್ತು ಅಬ್ರಹಾಂ ಮಾಸ್ಲೊ ಪ್ರಸ್ತಾಪಿಸುವ "ಮಾನವ ಪ್ರಕೃತಿಯ ಮುಂದಿನ ಆಯಾಮಗಳ" ಪ್ರಕಾಶಕ್ಕೆ*

*ಎಡೆಮಾಡಿಕೊಡಬಹುದು. ಈ ಗ್ರಂಥದಲ್ಲಿ ಪ್ರಕಟವಾಗಿರುವ ಲೇಖನಗಳಲ್ಲಿ ಭ್ರೂಣ ರೂಪದಲ್ಲಿ ವ್ಯಕ್ತವಾಗಿರುವ ಪೂರ್ವ-ಪಶ್ಚಿಮ ಮನಶ್ಶಾಸ್ತ್ರದ ಈ ಹೊಸ ರೂಪವು ಪ್ರಾರಂಭಾವಸ್ಥೆಯಲ್ಲಿದೆ ಅಷ್ಟೆ. ಆದರೆ ಇದು ಕೇವಲ ಸಾಂಸ್ಕೃತಿಕ ಕಲ್ಪನಾಚಿತ್ರವಲ್ಲ. ಇದರ ಮುಂದಿನ ಬೆಳವಣಿಗೆಗೆ ಈ ಗ್ರಂಥವು ಸಹಾಯಕವಾಗಲೆಂದು ಹಾರೈಸುತ್ತೇನೆ.*

ಪ್ರಶ್ನೆ : ಪ್ರೊ. ವಾನ್‌ಪ್ರಾಗ್ : ನನ್ನ ಈ ಪ್ರಶ್ನೆಯು ನಿಮ್ಮ ಉಪನ್ಯಾಸದ ಪೂರ್ಣ ರೂಪುರೇಖೆಗೆ ಸಂಬಂಧಿಸಿದುದು. ನೀವು ಪತಂಜಲಿಯ ಯೋಗಸೂತ್ರಗಳಲ್ಲಿ ಉಕ್ತವಾಗಿರುವಂತೆ ಒಂದು ಸಾಧನವಿಧಾನವನ್ನು ಹೇಳಿದಿರಿ. ನೀವು ಪ್ರಜ್ಞಾಜಾಗೃತಿಗೆ ತ್ಯಾಗದ ಆವಶ್ಯಕತೆಯನ್ನೂ ಹೇಳಿದಿರಿ. ನಾನು ಈ ವಿಧಾನವನ್ನು ಸಂಪೂರ್ಣವಾಗಿ ಒಪ್ಪುತ್ತೇನೆ. ಪ್ರಸ್ತುತ ಮಾನವ ಸಮಸ್ಯೆಗೂ ಇದು ಅನ್ವಯವಾಗುತ್ತದೆ. ಪಾಶ್ಚಿಮಾತ್ಯ ಸಂಸ್ಕೃತಿಯು ಬಾಹ್ಯಜೀವನದಲ್ಲಿ ಉನ್ನತ ಸ್ತರವನ್ನು ತಲುಪಿದೆ. ಈಗ ಅದಕ್ಕೆ ಒಂದು ಆಧ್ಯಾತ್ಮಿಕ ತಿರುವು ಆವಶ್ಯಕವಾಗಿದೆ. ವಿಶೇಷವಾಗಿ ಯುವಕರು ಅದರ ಆವಶ್ಯಕತೆಯನ್ನು ಭಾವಿಸುತ್ತಿದ್ದಾರೆ. ಈಗ, ನಿಮ್ಮ ಮಾತಿನಿಂದ ಸ್ಪಷ್ಟವಾಗುವುದೇನೆಂದರೆ, ತ್ಯಾಗದ ಆದರ್ಶಕ್ಕೆ ನಾವು ಹೆಚ್ಚು ಒತ್ತನ್ನು ನೀಡಬೇಕು. ತ್ಯಾಗಕ್ಕೆ ಅನೇಕ ಅರ್ಥಗಳು ಇರಬಹುದು. ನಾವು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲು, ನಮ್ಮ ತಾಂತ್ರಿಕತೆಯನ್ನು ತೊರೆದು ಪುರಾತನ ಸ್ಥಿತಿಗೆ ಹೋಗಬೇಕೆಂದು ಅದರರ್ಥವಾಗಬಹುದು. ನಮ್ಮ ಭೌತಿಕ ಸಂಪತ್ತನ್ನು ಮಾನವಕೋಟಿಯ ಪ್ರಯೋಜನಕ್ಕಾಗಿ, ಬಡವರಿಗಾಗಿ, ಬಡ ಮತ್ತು ಶ್ರೀಮಂತ ದೇಶಗಳ ಹಿಂದುಳಿದ ವರ್ಗಗಳಿಗಾಗಿ ಉಪಯೋಗಿಸಬಹುದು, ಮತ್ತು ಇದರ ಮೂಲಕ ನಮ್ಮ ಸಂಸ್ಕೃತಿಗೆ ಒಂದು ಆಧ್ಯಾತ್ಮಿಕ ಅರ್ಥವನ್ನು ನೀಡಬಹುದು. ಇದೂ ಒಂದು ಬಗೆಯ ತ್ಯಾಗ. ನನ್ನ ಪ್ರಶ್ನೆ ಏನೆಂದರೆ ನೀವು ಈ ಆದರ್ಶವನ್ನು ಕುರಿತು ಹೇಳುವಾಗ ಮತ್ತು ಅದನ್ನು ಪಾಶ್ಚಿಮಾತ್ಯ ಸಂಸ್ಕೃತಿಗೆ ಅನ್ವಯಿಸುವಾಗ ಈ ಸಂಸ್ಕೃತಿಯೇ ಉನ್ನತ ಆಧ್ಯಾತ್ಮಿಕ ಹಂತವನ್ನು ಏರುವ ಆವಶ್ಯಕತೆ ಮತ್ತು ಸಾಧ್ಯತೆಯ ಬಗ್ಗೆ ನೀವು ಏನು ಹೇಳುತ್ತೀರಿ ?

ಸ್ವಾಮೀಜಿ : ಪಾಶ್ಚಿಮಾತ್ಯ ನಾಗರಿಕತೆಯು ಇಂದು ಉನ್ನತ ಹಂತಕ್ಕೇರುವ ಆವಶ್ಯಕತೆಯೂ ಇದೆ, ಸಾಧ್ಯತೆಯೂ ಇದೆ. ಇದಕ್ಕೆ ಎರಡು ಕಾರಣಗಳುಂಟು ; ಒಂದು ಸೈದ್ಧಾಂತಿಕವಾದುದು, ಎರಡನೆಯದು ವ್ಯಾವಹಾರಿಕವಾದುದು. ಭೌತವಿಜ್ಞಾನವು, ಭೌತಶಾಸ್ತ್ರ ಮತ್ತು ಜೀವಶಾಸ್ತ್ರಗಳಲ್ಲಿ, ಒಂದು ನಿರ್ದಿಷ್ಟ ಹಂತವನ್ನು ತಲುಪಿರುವುದು, ಅದರ ಸಿದ್ಧಾಂತಗಳು ಉನ್ನತ ಸತ್ಯವನ್ನು ಮತ್ತು ಮಾನವ ಜೀವನದ ಉನ್ನತ ಬೆಳವಣಿಗೆಯನ್ನು ನಿರ್ದೇಶಿಸುತ್ತಿವೆ. ಭೌತಿಕ ವಿಜ್ಞಾನವು ತಾನೇ ಮಾನವ ಜೀವನವನ್ನು ಉನ್ನತ ಸ್ತರಕ್ಕೆ ತೆಗೆದುಕೊಂಡು ಹೋಗಲಾರದು. ಏಕೆಂದರೆ ಅದು ಎಷ್ಟಾದರೂ ಭೌತಿಕ ಹಂತಕ್ಕೆ ಸೀಮಿತವಾದುದು. ಆದರೆ ಉನ್ನತ ಬೆಳವಣಿಗೆಯ ಸಾಧ್ಯತೆಯ ಕಡೆಗೆ ಅದು ಬೊಟ್ಟುಮಾಡಿ ತೋರಿಸಬಲ್ಲದು. ಇಂದಿನ ವ್ಯಾವಹಾರಿಕ ಸ್ಥಿತಿಯೂ ಉನ್ನತ ಬೆಳವಣಿಗೆಯ ಆವಶ್ಯಕತೆಯ ಕಡೆಗೆ ಕೈ ತೋರಿಸುತ್ತದೆ. ಆಧುನಿಕ ನಾಗರಿಕತೆಯು ಹೊರಗಿನ ಶಕ್ತಿಗಳಿಂದ ಅಪಾಯಕ್ಕೀಡಾಗಿಲ್ಲ. ಆದರೆ ತನ್ನೊಳಗೆ ಉದ್ಭವಿಸಿದ ಶಕ್ತಿಗಳೇ ಅದನ್ನು ಅಲುಗಾಡಿಸುತ್ತಿವೆ. ಮಾನವನು ಶ್ರೀಮಂತ ತಾಂತ್ರಿಕ ನಾಗರಿಕತೆಯನ್ನು ನಿರ್ಮಿಸುತ್ತಾನೆ. ಅವನೇ ಅದನ್ನು ನಿರ್ನಾಮ ಮಾಡುತ್ತಾನೆ. ಮಾನವನು ತನ್ನ ನಾಗರಿಕತೆಯನ್ನೇ ನಾಶಗೊಳಿಸಬೇಕೆ ? ಈ ದುರಂತವನ್ನು ಅವನು ತಡೆಯುವುದು ಹೇಗೆ ? ಹಿಂಸೆ, ದೌರ್ಜನ್ಯ, ಮಾನಸಿಕವಿಕಾರಗಳು ದಿನದಿನಕ್ಕೂ ಹೆಚ್ಚುತ್ತಿರುವುದನ್ನು ಮತ್ತು ಪರಮಾಣು ಯುದ್ಧದಿಂದಾಗುವ ವಿನಾಶದ ಭಯವನ್ನೂ ತಡೆಗಟ್ಟಲು ನಾವೇನು ಮಾಡಬೇಕು ? ಈ ನಾಗರಿಕತೆಯಲ್ಲಿ ಜನರು ಸುಖದಿಂದ ಸಫಲತೆಯಿಂದ ಬಾಳುವಂತೆ ಮಾಡಲಾದೀತೆ ?

ಈ ಎಲ್ಲ ಸೈದ್ಧಾಂತಿಕ ಮತ್ತು ವ್ಯಾವಹಾರಿಕ ಪರಿಗಣನೆಗಳು ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಅವಶ್ಯಕತೆಯನ್ನು ಒತ್ತಿ ಹೇಳುತ್ತವೆ. ಈ ಮೌಲ್ಯಗಳ ಮೂಲಕವೇ ಈ ಶ್ರೀಮಂತ ನಾಗರಿಕತೆಯು ಸ್ಥಿರವಾಗಿ ಉಳಿಯಬಲ್ಲದು. ಈ ಉನ್ನತ ಬೆಳವಣಿಗೆಗೆ ಭೌತಿಕ ಮತ್ತು ಬೌದ್ಧಿಕ

ತಳಹದಿಯನ್ನು ಇಂದಿನ ವೈಜ್ಞಾನಿಕ ಚೌಕಟ್ಟು ಆಗಲೇ ಒದಗಿಸಿದೆ. ಬಾಹ್ಯದಿಂದ ಅಂತರದ ಕಡೆಗೆ ಬೆಳವಣಿಗೆಯ ಪ್ರಕ್ರಿಯೆಯನ್ನು ಮುಂದುವರಿಸಬೇಕಾಗಿದೆ ಅಷ್ಟೆ. ಅದು ಬಾಹ್ಯ ಹಂತದಲ್ಲಿಯೇ ಸಿಕ್ಕಿಕೊಳ್ಳದಂತೆ ನೋಡಿಕೊಳ್ಳಬೇಕು. ಆಧುನಿಕ ನಾಗರಿಕತೆಗೆ ವೇದಾಂತವು ಹೇಳುವುದು ಇದನ್ನು : ಬೆಳವಣಿಗೆ ಕುಂಠಿತವಾಗದಿರಲಿ. ಈಗ ಲಭ್ಯವಾಗಿರುವ ಭೌತಿಕ ಸ್ಥಿತಿಯಲ್ಲಿಯೆ, ಜೈವಿಕ ಸ್ಥಿತಿಯಲ್ಲಿಯೇ ನಿಂತನೀರಾಗಿ ಉಳಿಯಬೇಡ. ನಡೆ ಮುಂದೆ ! ನಡೆ ಮುಂದೆ ! ಇನ್ನೂ ತಿಳಿಯಬೇಕಾದ ಸೂಕ್ಷ್ಮ ಸತ್ಯಗಳಿವೆ, ಏರಬೇಕಾದ ಉನ್ನತ ಹಂತಗಳಿವೆ. ಭೌತಿಕ ಹಂತದಲ್ಲಿಯೇ ಉಳಿಯುವುದನ್ನು ವಿಜ್ಞಾನಿಗಳೇ ವಿರೋಧಿಸುತ್ತಿದ್ದಾರೆ. ಇಂದು ತಾಂತ್ರಿಕತೆಗೆ ಅತಿಒತ್ತನ್ನು ನೀಡುವುದನ್ನು ಜನಸಾಮಾನ್ಯರಲ್ಲಿಯೂ ಅನೇಕರು ವಿರೋಧಿಸುತ್ತಿದ್ದಾರೆ. ಜೂಲಿಯನ್ ಹಕ್ಸ್ಲೀಯವರ ಉಪನ್ಯಾಸದ ಒಂದು ಭಾಗವನ್ನು ಇಲ್ಲಿ ಹೇಳುತ್ತೇನೆ. ೧೯೫೯ರಲ್ಲಿ ಚಿಕಾಗೊ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಡಾರ್ವಿನ್‌ನ ಶತಮಾನೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ನೀಡಿದ ಉಪನ್ಯಾಸವಿದು, ವಿಷಯ : The Evolutionary Vision ಅವರು ಹೇಳುತ್ತಾರೆ. (*Evolution after Darwin* Vol. III, p. 259) :

*ಸಮಾಜದಲ್ಲಿ ಹೆಚ್ಚಿನ ಜನರು ಪೂರ್ಣ ಸಫಲತೆಯ ಜೀವನವನ್ನು ನಡೆಸುವಂತೆ ಮಾಡುವುದೇ ಮಾನವನ ಧ್ಯೇಯೋದ್ದೇಶವೆಂದು ನಾವು ನಿಜವಾಗಿಯೂ ನಂಬಿದ್ದೇ ಆದರೆ, ರೂಢಿಯ (ಭೌತಿಕ) ಅರ್ಥದಲ್ಲಿ ಉಪಯುಕ್ತತೆ(Utility) ಎಂಬುದು ಗೌಣವಾಗುತ್ತದೆ. ಭೌತಿಕ ಉತ್ಪನ್ನಗಳ ಮೊತ್ತವು ಮಾನವನ ಮೂಲಭೂತ ಆವಶ್ಯಕತೆಗಳ ಪೂರ್ತಿಗಾಗಿ ಅಗತ್ಯವಾಗುತ್ತದೆ. ಆದರೆ ಅದರ ವ್ಯಾಪ್ತಿ ಸೀಮಿತವಾದುದು. ಒಂದು ನಿರ್ದಿಷ್ಟ ಪ್ರಮಾಣಕ್ಕಿಂತ ಅಧಿಕವಾಗಿ ಕ್ಯಾಲೋರಿ ಅಥವಾ ಪಾನೀಯಗಳು ಅಥವಾ ಟಿ.ವಿ.ಗಳು ಅಥವಾ ಬಟ್ಟೆತೊಳೆಯುವ ಯಂತ್ರಗಳನ್ನು ಬಳಸುವುದು ಅನವಶ್ಯಕ ಮಾತ್ರವಲ್ಲದೆ ಕೆಟ್ಟದ್ದು ಕೂಡ. ಭೌತಿಕ ವಸ್ತುಗಳ ಉತ್ಪನ್ನದ ಪ್ರಮಾಣ ಒಂದು ಸಾಧನವೇ ಹೊರತು ಅದೇ ಸಾಧ್ಯವಿಲ್ಲ.*

ಮತ್ತೆ ಮಾನವ ವಿಕಾಸದ ಪ್ರಕ್ರಿಯೆಯಲ್ಲಿ ಗುಣದ ಪ್ರಾಧಾನ್ಯವನ್ನು ಒತ್ತಿ ಹೇಳುತ್ತ ಹಕ್ಸ್ಲೀ ಹೇಳುತ್ತಾರೆ (ಅದೇ, pp.260-61)

*ಹೀಗೆ ವಿಕಾಸ ದರ್ಶನವು ನಮ್ಮ ಅಸ್ತಿತ್ವವನ್ನು ಸರಳವಾದ ಆದರೆ ಅತ್ಯಂತ ಪ್ರಕಾಶಮಾನವಾದ ರೀತಿಯಲ್ಲಿ ಬೆಳಗುತ್ತದೆ. ಅದು ನಮ್ಮ ಕರ್ತವ್ಯವನ್ನು-ಭವಿಷ್ಯವನ್ನು ತೋರಿಸುತ್ತದೆ. ಅದು ಭೌತವಸ್ತುವಿನ ಮೇಲೆ ಆಧಿಪತ್ಯವನ್ನು ನಡೆಸುವ ಮನಸ್ಸನ್ನೂ ಪ್ರಮಾಣಕ್ಕಿಂತ ಗುಣ ಮುಖ್ಯವೆಂಬುದನ್ನೂ ತೋರಿಸುತ್ತದೆ.*

ವೇದಾಂತವು ಆಧ್ಯಾತ್ಮಿಕ ವಿಕಾಸವನ್ನು ಗುರಿತಿಸುವುದು ಹೀಗೆ. ಈ ವಿಕಾಸವು ಭೌತಿಕ ಅಭ್ಯುದಯವನ್ನು ಅವಲಂಬಿಸಿರಬೇಕು, ಹೊರಜೀವನದ ವಲಯದಲ್ಲಿಯೇ ಈ ಆಂತರಿಕ ಯಾತ್ರೆ ಪೂರ್ಣತೆಯನ್ನು ಮುಟ್ಟಬೇಕು. ಮಾನವನ ಬೌತಿಕ ಅಭ್ಯುದಯ ಮತ್ತು ಆಧ್ಯಾತ್ಮಿಕ ಪ್ರಗತಿ - ಇವುಗಳಲ್ಲಿ ಯಾವ ವಿರೋಧವನ್ನೂ ವೇದಾಂತವು ಕಾಣುವುದಿಲ್ಲ. ಭೌತಿಕ ಹಂತದಲ್ಲಿಯೇ ಜೀವನವು ಸಿಕ್ಕಿಕೊಳ್ಳಬಾರದೆಂದು ಅದು ಹೇಳುತ್ತದೆ, ಅಷ್ಟೆ. ನಾನಾಗಲೇ ಪ್ರಸ್ತಾಪಿಸಿದಂತೆ, ಕಠೋಪನಿಷತ್ತು ಇದನ್ನೇ ಹೇಳುತ್ತದೆ. (೩.೧೪) : "ಏಳಿ ! ಎದ್ದೇಳಿ ! ಗುರಿ ಸೇರುವವರೆಗೂ ನಿಲ್ಲದಿರಿ !"

ಪ್ರಶ್ನೆ : ನಿಮ್ಮ ಭಾರತೀಯ ಸಂಪ್ರದಾಯದಲ್ಲಿ ಗುರುಸಂಪ್ರದಾಯವಿದೆ. ಇದು ನಮ್ಮಲ್ಲಿಲ್ಲ. ಇದರ ನಿಜವಾದ ಮೂಲ ಮತ್ತು ತತ್ತ್ವವೇನು ?

ಸ್ವಾಮೀಜಿ : ಅನೇಕರಿಗೆ ಆಧ್ಯಾತ್ಮಿಕ ಯಾತ್ರೆಯು ಸಂಪೂರ್ಣ ಹೊಸತು ಮತ್ತು ಒಂದು ವಿಶಿಷ್ಟ ಅನುಭವ. ಅಷ್ಟೇ ಅಲ್ಲದೆ ಇಂದ್ರಿಯಗಳು ಯಾವಾಗಲೂ ಹೊರಮುಖ ಪ್ರವೃತ್ತಿಯುಳ್ಳವುಗಳು,

ಮಾನವನಿಗೆ ತನ್ನೊಳಗೆ ಏನಿದೆಯೆಂಬುದೇ ತಿಳಿಯದು. ಇದರಿಂದಾಗಿ ಅವನು ಮಾರ್ಗದರ್ಶನದ ಆವಶ್ಯಕತೆಯನ್ನು ಭಾವಿಸುತ್ತಾನೆ. ಆ ಮಾರ್ಗದಲ್ಲಿ ಆಗಲೇ ಮುಂದುವರಿದಿರುವ ವ್ಯಕ್ತಿಗಳಿಂದ ಮಾತ್ರ ಅಂತಹ ಮಾರ್ಗದರ್ಶನ ಸಾಧ್ಯ. ವ್ಯಕ್ತಿಯು ತನ್ನ ಪಾಡಿಗೆ ತಾನು ಇದ್ದರೆ ಪ್ರಕೃತಿಯ ವಿಕಾಸಕ್ರಿಯೆಯ ಮೂಲಕ ನಿಧಾನವಾಗಿ ಮುಂದುವರಿಯಬಹುದು ಅಷ್ಟೆ. ಉಪನಿಷತ್ತಿನ ಋಷಿಗಳೂ, ಬುದ್ಧ, ಜೀಸಸ್, ಶಂಕರಾಚಾರ್ಯ ಮತ್ತು ಶ್ರೀರಾಮಕೃಷ್ಣ ಇವರು ಪರಮಶ್ರೇಷ್ಠ ಗುರುಗಳು. ಇವರೆಲ್ಲರೂ ಹೇಳುತ್ತಾರೆ : ನಾವು ಸತ್ಯವನ್ನು ಅನುಭವಿಸಿರುವೆವು, ಅದನ್ನು ಅನುಭವಿಸಲು ನಿಮಗೂ ಸಹಾಯ ಮಾಡಬಲ್ಲೆವು. ಬುದ್ಧನು, ಆಧ್ಯಾತ್ಮಿಕ ಮಾರ್ಗವು ಒಂದು ಪುರಾತನ ಮಾರ್ಗವೆಂದು ಹೇಳಿ, ಕಳೆಗಳಿಂದ ಮುಚ್ಚಿಹೋಗಿರುವ ಅದನ್ನು ತನ್ನ ಜೀವನ ಮತ್ತು ಅನುಭವದ ಮೂಲಕ ಸ್ಪಷ್ಟಗೊಳಿಸಿ, ಬೇರೆ ಸಾಧಕರಿಗೆ ಸುಲಭವಾಗಿ ನಡೆದುಕೊಂಡು ಹೋಗಲು ಸುಗಮವಾಗಿ ಮಾಡಿರುವೆನು ಎನ್ನುತ್ತಾನೆ. ಗುರುವಿನ ಕಾರ್ಯ ಇದು. ಅನೇಕ ವೇದಾಂತ ಗ್ರಂಥಗಳಲ್ಲಿ, ವಿಶೇಷ ವಾಗಿ ಶಂಕರಾಚಾರ್ಯರ "ವಿವೇಕಚೂಡಾಮಣಿ"ಯಲ್ಲಿ, ಗುರು-ಶಿಷ್ಯರ ಲಕ್ಷಣಗಳನ್ನು ಕುರಿತ ಸುಂದರ ವಿವರಣೆಯನ್ನು ನೋಡುತ್ತೇವೆ. ಧರ್ಮವನ್ನು ಮಾರುವವನು ಗುರುವೇ ಅಲ್ಲ. ಶಿಷ್ಯನ ಮೇಲಿನ ಪ್ರೀತಿ ಸಹಾನುಭೂತಿಯಿಂದ ಮಾತ್ರವೇ ನಿಜವಾದ ಆಧ್ಯಾತ್ಮಿಕ ಬೋಧನ ಸಾಧ್ಯವಾಗುವಂತಹುದು. ಆಧ್ಯಾತ್ಮಿಕ ಸತ್ಯ ಅತ್ಯಂತ ಶ್ರೇಷ್ಠವಾದುದು, ಅದನ್ನು ಮಾರುವ ಮತ್ತು ಕೊಂಡುಕೊಳ್ಳುವ ಮಟ್ಟಕ್ಕೆ ಇಳಿಸಲಾಗುವುದಿಲ್ಲ.

ಪ್ರಶ್ನೆ : ನಮ್ಮ ಪಾಶ್ಚಿಮಾತ್ಯ ಸಮಾಜದಲ್ಲಿ, ತನ್ನ ಮನಸ್ಸಿನೊಡನೆ ಯುದ್ಧ ಮಾಡುವುದೆಂದರೆ ಏನು ?

ಸ್ವಾಮೀಜಿ : ನಾವು ಮನಸ್ಸನ್ನು ನಿಗ್ರಹಿಸಿ ಅದನ್ನು ಅಂತರ್ಮುಖಗೊಳಿಸಲು ಪ್ರಾರಂಭಿಸಿದಾಗ ಅದರೊಡನೆ ಯುದ್ಧ ಪ್ರಾರಂಭವಾಗುತ್ತದೆ. ಹೊರ ಜಗತ್ತಿನಲ್ಲಿ ಜ್ಞಾನವನ್ನು ಅರಸುವಾಗ ಮತ್ತು ಅದರ ಶಕ್ತಿಗಳನ್ನು ತಾಂತ್ರಿಕವಾಗಿ ಹತೋಟಿಗೆ ತರಲು ಪ್ರಯತ್ನಿಸುವಾಗ ಅದರೊಡನೆ ಯುದ್ಧ ನಡೆಯುತ್ತದೆ. ಆದರೆ ಆಧ್ಯಾತ್ಮಿಕ ಜೀವನದಲ್ಲಿ ಮನಸ್ಸು ತನ್ನನ್ನು ತಾನೇ ನಿಗ್ರಹಿಸಬೇಕಾಗಿದೆ. ಕೆಲವೊಮ್ಮೆ ವಿಶೇಷವಾಗಿ ಸಾಧನೆಯ ಪ್ರಾರಂಭಾವಸ್ಥೆಯಲ್ಲಿ, ಮನಸ್ಸನ್ನು ಹಿಡಿಯುವುದೇ ಕಷ್ಟವಾಗುತ್ತದೆ. ಭೌತಿಕ ವಿಜ್ಞಾನ ಇಲ್ಲಿ ಸಹಾಯಕ್ಕೆ ಬರುವುದಿಲ್ಲ. ನಮ್ಮ ದುಷ್ಪ್ರವೃತ್ತಿಗಳನ್ನು ನಿಗ್ರಹಿಸುವಲ್ಲಿ ಭೌತಿಕ ವಿಜ್ಞಾನ ಏನು ಮಾಡಲಾದೀತು ?

ಐನ್‌ಸ್ಟೀನರ ಮಾತಿನಲ್ಲಿ :

*ವಿಜ್ಞಾನವು ಪ್ಲುಟೋನಿಯಂನ ಸ್ವರೂಪವನ್ನು ನಾಶಮಾಡಬಲ್ಲದು. ಆದರೆ ಮನುಷ್ಯನ ಹೃದಯದಲ್ಲಿರುವ ದುಷ್ಟತನವನ್ನು ನಾಶಮಾಡಲಾರದು.*

ಭೌತಿಕ ವಿಜ್ಞಾನದ ಕೆಲಸ ಅದಲ್ಲ. ಈ ಕೆಲಸ ಆಧ್ಯಾತ್ಮಿಕ ವಿಜ್ಞಾನಕ್ಕೆ ಸೇರಿದುದು. ಪಾಶ್ಚಿಮಾತ್ಯ ಸಮಾಜವು ವೈಜ್ಞಾನಿಕ ಹಿನ್ನೆಲೆಯನ್ನು ಹೊಂದಿದೆ. ಈ ಹಿನ್ನೆಲೆಯನ್ನು ಹಾಗೆಯೇ ಉಳಿಸಿಕೊಂಡು ಮಾನವ ಬೆಳವಣಿಗೆಯ ಆಧ್ಯಾತ್ಮಿಕ ಕ್ಷೇತ್ರವನ್ನು ಅದು ಪ್ರವೇಶಿಸಬೇಕು. ಇದೆಲ್ಲವೂ ವೈಚಾರಿಕ ಮಾರ್ಗದಲ್ಲಿ ನಡೆಯಬೇಕು. ಇಲ್ಲದಿದ್ದರೆ ಮೂಢನಂಬಿಕೆಗಳು, ಮಾಯೆ ಮಾಟ ಮಂತ್ರಾದಿ ರಹಸ್ಯ ವಿದ್ಯೆಗಳು ಬಳಕೆಗೆ ಬರುತ್ತವೆ. ಮಾನವನ ದಿವ್ಯ ಸ್ವರೂಪವನ್ನು ಕಂಡುಹಿಡಿಯುವುದು, ಪ್ರಜ್ಞೆಯನ್ನು ದಿವ್ಯಜೀವನದ ಹಂತಕ್ಕೆ ಏರಿಸುವುದು—ಇದು ಮುಖ್ಯ ಉದ್ದೇಶ. ಮಾನವನ ಆಂತರಿಕ ದಿವ್ಯತೆ, ವೇದಾಂತದ ಪ್ರಕಾರ, ಒಂದು ಅನುಭವಾತ್ಮಕ ಸತ್ಯ, ಕೇವಲ ಒಂದು ಮತವಲ್ಲ. ಈ ಸತ್ಯವನ್ನು ಪ್ರಮಾಣೀಕರಿಸಬಹುದು. ಇದು ಭಾರತೀಯ ಮಾರ್ಗ. ಆಧ್ಯಾತ್ಮಿಕ ವಿಜ್ಞಾನವು ಬೇರೆ ವಿಜ್ಞಾನಗಳಂತೆ ಪರಿಪ್ರಶ್ನೆ ಮತ್ತು ವಿಚಾರವನ್ನು ಅವಲಂಬಿಸಿದೆ. ಅದು ಮತತತ್ವವನ್ನಾಗಲಿ ನಂಬಿಕೆಯನ್ನಾಗಲೀ ಒತ್ತಿ ಹೇಳುವುದಿಲ್ಲ. ಅದು ಅನುಭವ ಪ್ರಧಾನ. ಇಂದ್ರಿಯಮನಸ್ಸುಗಳನ್ನು ನಿಗ್ರಹಿಸಿ ಧ್ಯಾನವನ್ನು

ಮಾಡತೊಡಗಿದಾಗ, ಆಂತರಿಕ ದಿವ್ಯತೆಯ ಸ್ಪರ್ಶವನ್ನು ಪಡೆದಾಗ, ನಿಮ್ಮ ವ್ಯಕ್ತಿತ್ವದಲ್ಲಿ ಅದ್ಭುತ ಬದಲಾವಣೆ ಕಂಡುಬರುತ್ತದೆ. ಒಬ್ಬನು ಪಾರತಂತ್ರ್ಯದಿಂದ ಸ್ವಾತಂತ್ರ್ಯದೆಡೆಗೂ ದೈನ್ಯತೆಯಿಂದ ಧನ್ಯತೆಯೆಡೆಗೂ ಒಯ್ಯಲ್ಪಡುತ್ತಾನೆ. ನೀವು ಈ ಪ್ರಶ್ನೆಯನ್ನು ಕೇಳಿರುವುದರಿಂದ, ಭಾರತದ ಅತ್ಯಂತ ಶ್ರೇಷ್ಠ ಆಧ್ಯಾತ್ಮಿಕ ಗ್ರಂಥಗಳಲ್ಲಿ ಒಂದಾದ "ಶ್ರೀಮದ್ಭಾಗವತ"ದಿಂದ ಐದು ಶ್ಲೋಕಗಳನ್ನು ಉದ್ಧರಿಸುತ್ತೇನೆ. (೧. ೨. ೧೭-೨೧) ಅದರಲ್ಲಿ ಮಾನವನ ಆಧ್ಯಾತ್ಮಿಕ ಬೆಳವಣಿಗೆಯ ವಿವಿಧ ಹಂತಗಳು ನಿರೂಪಿತವಾಗಿದೆ. ಅದು ಯಹೂದ್ಯ, ಹಿಂದೂ, ಕ್ರೈಸ್ತ, ಬೌದ್ಧ, ಇಸ್ಲಾಂ ಮುಂತಾದ ಉನ್ನತ ಧರ್ಮಗಳೆಲ್ಲಕ್ಕೂ ಸಮಾನವಾದ ಭಗವನ್ನಾಮ ಜಪವೆಂಬ ಆಧ್ಯಾತ್ಮಿಕ ಸಾಧನೆಯೊಂದಿಗೆ ಪ್ರಾರಂಭಿಸುತ್ತದೆ. ನಾವು ಭಕ್ತಿಪೂರ್ವಕವಾಗಿ ನಾಮಜಪ ಮಾಡಿದಾಗ ಏನಾಗುತ್ತದೆ ? ಈ ಶ್ಲೋಕಗಳಲ್ಲಿ ಇದನ್ನು ಹಂತ ಹಂತವಾಗಿ ವಿವರಿಸಲಾಗಿದೆ. ಮೊದಲನೆಯ ಶ್ಲೋಕ ಹೇಳುತ್ತದೆ :

ಶೃಣ್ವತಾಂ ಸ್ವಕಥಾಃ ಕೃಷ್ಣಃ ಪುಣ್ಯಶ್ರವಣ-ಕೀರ್ತನಃ ।
ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥

*ಎಲ್ಲರ ಹೃದಯದಲ್ಲಿ ವಾಸಿಸುವ ದಿವ್ಯ ಕೃಷ್ಣನು ತನ್ನ ನಾಮಸ್ಮರಣೆಯನ್ನು ಕೇಳಿದಾಗ ಭಕ್ತನ ಹೃದಯದಲ್ಲಿರುವ ಅಶುಭಗಳನ್ನೆಲ್ಲ ಮೃದುವಾಗಿ ತೊಳೆದುಹಾಕುತ್ತಾನೆ. ಏಕೆಂದರೆ ಅವನು ಎಲ್ಲ ಸತ್ಪುರುಷರ ಸ್ನೇಹಿತನು.*

ಹಿಂದೂಗಳು ಕೃಷ್ಣ, ಶಿವ, ಹರಿ, ಮುಂತಾದ ಭಗವನ್ನಾಮಗಳನ್ನು ಜಪಿಸುತ್ತಾರೆ. ಕ್ಯಾಥೊಲಿಕ್ ಧರ್ಮದಲ್ಲಿ ave Maria ಎಂಬ ಮಂತ್ರವನ್ನು ಜಪಿಸುತ್ತಾರೆ. ಹಾಗೆಯೆ ಬೇರೆ ಧರ್ಮಗಳಲ್ಲಿ ಬೇರೆ ದಿವ್ಯ ನಾಮಗಳಿವೆ. ದೇವರು ಭಕ್ತನ ಸ್ನೇಹಿತನಾಗಿ ಅವನ ಆಧ್ಯಾತ್ಮಿಕ ಪ್ರಗತಿಯಲ್ಲಿ ಸಹಾಯ ಮಾಡುತ್ತಾನೆ. ಮುಂದಿನ ಶ್ಲೋಕ ಹೇಳುತ್ತದೆ :

ನಷ್ಟ-ಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ ।
ಭಗವತ್ಯುತ್ತಮ ಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥

*ನಿರಂತರ ಭಗವತ್ಸೇವೆಯ ಮೂಲಕ ಹೃದಯದ ಬಹುತೇಕ ಅಶುದ್ಧಿಗಳು ನಾಶವಾದಮೇಲೆ ಮಾನವನಿಗೆ ಪರಮಪಾವನನಾದ ಭಗವಂತನ ಮೇಲೆ ನಿಷ್ಠಾಭಕ್ತಿ ಉಂಟಾಗುತ್ತದೆ.*

ಮನಸ್ಸು ಕೆಲವೊಮ್ಮೆ ಭಗವದ್ಭಕ್ತಿಯಿಂದ ಕೂಡಿರುತ್ತದೆ. ಮತ್ತೆ ಕೆಲವೊಮ್ಮೆ ಆಧ್ಯಾತ್ಮಿಕ ಜೀವನದಲ್ಲಿಯೇ ಆಸಕ್ತಿಯನ್ನು ಕಳೆದುಕೊಳ್ಳುತ್ತದೆ. ಅದು ಒಬ್ಬನ ಆಧ್ಯಾತ್ಮಿಕ ಜೀವನದ ಪ್ರಾರಂಭದ ಸ್ಥಿತಿ. ಆದರೆ ಈಗ ಭಕ್ತಿಯು ಸ್ಥಿರವಾಗುತ್ತದೆ, ಉತ್ತರಮುಖಿಯ ಮುಳ್ಳು ಯಾವಾಗಲೂ ಉತ್ತರದಿಕ್ಕಿಗೆ ತಿರುಗಿರುವಂತೆ. ಇದನ್ನು ನೈಷ್ಠಿಕ ಭಕ್ತಿ ಎನ್ನುತ್ತಾರೆ. ದುಃಖ, ಸೋಲು ಮುಂತಾದವು ಈ ಭಕ್ತಿಯನ್ನು ಅಲುಗಾಡಿಸಲಾರವು. ಅನೇಕ ಕ್ರೈಸ್ತ ಸಂತರ ಜೀವನದಲ್ಲಿಯೂ ಈ ನಿಷ್ಠಾಭಕ್ತಿಯ ಬೆಳವಣಿಗೆಯನ್ನು ನಾವು ಕಾಣಬಹುದು. ಈ ಸ್ಥಿರತೆಯು ಮನಶ್ಶುದ್ಧಿಯ ಪರಿಣಾಮ. ಅನಂತರ ಏನಾಗುತ್ತದೆ ? ಇವನ್ನು ಮುಂದಿನ ಶ್ಲೋಕವು ಸುಂದರವಾಗಿ ವರ್ಣಿಸುತ್ತದೆ :

ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ ।
ಭಗವತ್ತತ್ತ್ವ-ವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥

*ಭಗವತ್ ಭಕ್ತಿಯೋಗದ ಮೂಲಕ ಮನಸ್ಸು ಪ್ರಸನ್ನವಾದ ಮೇಲೆ, ಎಲ್ಲ ಸಂಗದಿಂದಲೂ ಮುಕ್ತನಾದ ಭಕ್ತನಿಗೆ ಭಗವತ್ ತತ್ವದ ವಿಶೇಷ ಜ್ಞಾನ ಉಂಟಾಗುತ್ತದೆ.*

ಕೊನೆಯದಾಗಿ, ಇಂತಹ ಸಾಕ್ಷಾತ್ಕಾರದಿಂದ ಸಾಧಕನಿಗೆ ಏನಾಗುತ್ತದೆ ? ಉತ್ತರ ಕೊನೆಯ ಶ್ಲೋಕದಲ್ಲಿ :

ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥

*ತನ್ನೊಳಗೇ ಭಗವಂತನ ಸಾಕ್ಷಾತ್ಕಾರವಾದ ಮೇಲೆ ಹೃದಯದ ಗಂಟುಗಳೆಲ್ಲಾ ಕತ್ತರಿಸಲ್ಪಡುತ್ತವೆ. ಎಲ್ಲ ಸಂಶಯಗಳೂ ನಾಶವಾಗುತ್ತವೆ. ಮತ್ತು ಎಲ್ಲಾ ಕರ್ಮಗಳೂ ಮತ್ತು ಅವುಗಳ ಸಂಸ್ಕಾರಗಳೂ ಅಳಿಸಿಹೋಗುತ್ತವೆ.*

ಆಧುನಿಕ ಮನಃಶಾಸ್ತ್ರಜ್ಞರು ಯಾವುದನ್ನು Complexes ಎಂದು ಕರೆಯುತ್ತಾರೋ ಆ ಹೃದಯಗಂಟುಗಳೆಲ್ಲಾ ನಾಶವಾಗುತ್ತವೆ. ಇಂತಹ ಗಂಟುಗಳೇ ಮಾನವ ಮನಸ್ಸನ್ನು ವಿಕೃತಗೊಳಿಸುವುದು. ನಮ್ಮ ಎಲ್ಲ ಅನುಭವಗಳನ್ನು ಆಧ್ಯಾತ್ಮಶಕ್ತಿಯ ಮೂಲಕ ನಾವು ಅರಗಿಸಿಕೊಳ್ಳಲು ಅಸಾಧ್ಯವಾದಾಗ ಈ ಗಂಟುಗಳು ಉಂಟಾಗುತ್ತವೆ. ಮಾನವನು ಅನುಭವಗಳನ್ನು ಅರಗಿಸಿಕೊಳ್ಳುವ ಬದಲು ಅನುಭವಗಳೇ ಅವನನ್ನು ಅರಗಿಸಿಕೊಂಡಾಗ ಹೀಗಾಗುತ್ತದೆ. ಆಧ್ಯಾತ್ಮಿಕ ಶಕ್ತಿಯಿಂದ ಮಾತ್ರವೇ ಅನುಭವಗಳನ್ನು ಅರಗಿಸಿಕೊಳ್ಳಲು ಸಾಧ್ಯ ; ಭೌತಿಕ ಅಥವಾ ಬೌದ್ಧಿಕ ಶಕ್ತಿ ಇದನ್ನು ಸಾಧಿಸಲಾರದು. ಎಲ್ಲರ ಆತ್ಮವಾದ ಭಗವಂತನ ಸಾಕ್ಷಾತ್ಕಾರವು ಗಂಟುಗಳನ್ನೆಲ್ಲ ಸಂಪೂರ್ಣ ನಾಶಮಾಡುತ್ತವೆ. ಹಾಗೆಯೇ ಸಾಕ್ಷಾತ್ಕಾರದಿಂದ ಎಲ್ಲಾ ಸಂಶಯಗಳೂ ನಾಶವಾಗುತ್ತವೆ ; ಆದರೆ ಕೇವಲ ನಂಬಿಕೆಯಿಂದಾಗಲಿ, ವಾದದಿಂದಾಗಲಿ, ಚರ್ಚೆಯಿಂದಾಗಲಿ ಅಲ್ಲ. ಆಧ್ಯಾತ್ಮಿಕ ಅನುಭವದ ಅಗ್ನಿಯಲ್ಲಿ ನಮ್ಮನ್ನು ಇಂದ್ರಿಯ ಜೀವನಕ್ಕೆ ಬಂಧಿಸಿರುವ ಸಂಸ್ಕಾರಗಳೆಲ್ಲವೂ ಸುಟ್ಟು ಭಸ್ಮವಾಗುತ್ತವೆ.

ಇದೇ ಆಧ್ಯಾತ್ಮಿಕ ಸಾಧನೆಯ ಮತ್ತು ಆಧ್ಯಾತ್ಮಿಕ ಜೀವನದ ಆತ್ಯಂತಿಕ ಸ್ಥಿತಿ. ನಾಮಜಪ, ಧ್ಯಾನ, ಶಾಸ್ತ್ರಾಧ್ಯಯನ, ಸಂಕೀರ್ತನೆ ಮತ್ತು ಸತ್ಸಂಗ ಇವೆಲ್ಲವೂ ಸಾಧನೆಯ ವಿವಿಧ ಮುಖಗಳು. ನೈತಿಕ ಜೀವನದ ಹಿನ್ನೆಲೆಯೊಂದಿಗೆ ಈ ಸಾಧನೆಗಳಲ್ಲಿ ತೊಡಗಿದಾಗ ಸೀಮಿತ ದೈಹಿಕ ಹಂತದಲ್ಲಿರುವ ಪ್ರಜ್ಞೆಯು ಅನಂತ ವಿಶಾಲ ಆಧ್ಯಾತ್ಮಿಕ ಹಂತಕ್ಕೆ ಏರುತ್ತದೆ. ಇದೇ ಆಧ್ಯಾತ್ಮಿಕ ಬೆಳವಣಿಗೆಯ ಮತ್ತು ಸಾಫಲ್ಯದ ವಿಜ್ಞಾನ. ಎಲ್ಲ ವಿಜ್ಞಾನಗಳೂ ಅಂತರರಾಷ್ಟ್ರೀಯವೂ ಸಾರ್ವತ್ರಿಕವೂ ಆಗಿರುವಂತೆ, ಈ ಆಧ್ಯಾತ್ಮಿಕ ವಿಜ್ಞಾನವೂ ಸಾರ್ವತ್ರಿಕ. ವಿವಿಧ ಬಗೆಯ ಜನರ ಆಹಾರಗಳಲ್ಲಿ ಎಷ್ಟೇ ವೈವಿಧ್ಯತೆ ಇದ್ದರೂ ಪೌಷ್ಟಿಕ ವಿಜ್ಞಾನವು ಎಲ್ಲರಿಗೂ ಸಮಾನವಾಗಿರುವಂತೆ, ಇದೂ ಕೂಡ ವಿವಿಧ ಜನಾಂಗೀಯ ಧರ್ಮಗಳಿಗೆಲ್ಲ ಸಮಾನವಾಗಿದೆ.

ಅನು : ಸ್ವಾಮಿ ನಿತ್ಯಸ್ಥಾನಂದ

೨೩

# ಮಾನವನ ಬಾಹ್ಯಜೀವನ ಮತ್ತು ಮಾನವನ ಅಂತರಂಗ ಜೀವನ*

## ೧. ಪೀಠಿಕೆ

ಇಂದು ಮಧ್ಯಾಹ್ನದ ಭಾಷಣದ ವಿಷಯ 'ಮಾನವನ ಬಾಹ್ಯಜೀವನ ಮತ್ತು ಮಾನವನ ಅಂತರಂಗ ಜೀವನ'—ಎಂಬುದನ್ನು ಪ್ರೊ. ವಾನ್ ಪ್ರಾಗ್ ನಿಮಗೆ ಈಗತಾನೆ ತಿಳಿಸಿದ್ದಾರೆ. ಇದೊಂದು ಅತಿ ವಿಲಕ್ಷಣವಾದ ವಿಷಯ ; ಆದರೆ ಇಂದಿನ ಮಾನವನ ಬದುಕಿನ ಸ್ಥಿತಿಯನ್ನು ನಾವು ಗಮನಿಸುವಾಗ ಅವನ ಬಾಹ್ಯಜೀವನ ಸುವ್ಯವಸ್ಥಿತ ಹಾಗು ಸಂಪತ್ಸಮೃದ್ಧವಾಗಿದೆಯೆಂದು ತೋರಿದರೂ ಅವನ ಅಂತರಂಗ ಜೀವನಕ್ಕೂ ಅವನ ಉತ್ತಮ ಬಾಹ್ಯ ಜೀವನಕ್ಕೂ ಪರಸ್ಪರ ಹೊಂದಾಣಿಕೆ ಇಲ್ಲವೆನಿಸುತ್ತದೆ. ಆಧುನಿಕ ನಾಗರಿಕ ಜಗತ್ತಿನಲ್ಲಿ ಮಾನವನ ಅಂತರಂಗ ಜೀವನವನ್ನು ಕುರಿತ ತಿಳಿವಳಿಕೆ ತೀರಾ ವಿರಳ ; ಅತ್ಯಲ್ಪ ಪ್ರಮಾಣದ್ದು. ಈ ತಿಳಿವಳಿಕೆಯ ಅಭಾವವೇ ನಮ್ಮ ಅಂತರಂಗ ಜೀವನದ ಅನೇಕ ವ್ಯಾಧಿಗಳಿಗೆ ಕಾರಣವಾಗಿದೆ. ಭಾರತದ ಪ್ರಾಜ್ಞ ಋಷಿಗಳು ಮಾನವನ ಹಾಗೂ ಪ್ರಕೃತಿಯ ಬಾಹ್ಯ ಬದುಕನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮಾನವನ ಅಂತರಂಗ ಜೀವನವನ್ನು, ಪ್ರಕೃತಿಯ ಒಳಬದುಕನ್ನು ಕುರಿತು ಆಳವಾಗಿ ವಿಚಾರ ಮಾಡಿದ್ದರು. ತತ್ಫಲವಾಗಿ ಅವರು, ಮನುಷ್ಯ ಜೀವನದ ಬಾಹ್ಯ ಹಾಗೂ ಅಂತರಂಗ ಜೀವನಗಳ ನಡುವೆ ಸಮತೋಲನ ಸಾಧಿಸಲು ನೆರವಾಗುವ ವೇದಾಂತವೆಂಬ ತತ್ತ್ವಜಿಜ್ಞಾಸೆಯನ್ನು ರೂಪಿಸಿದರು.

## ೨. ಆಧುನಿಕ ಚಿಂತನೆ ಮತ್ತು ಮಾನವನ ಅಂತರಂಗ ಜೀವನ

ನಿತ್ಯಜೀವನದಲ್ಲಿ ಕಾರ್ಯಪ್ರವೃತ್ತರಾಗಿರುವಾಗ ನಾವು ನಮ್ಮ ಕಾರ್ಯಚಟುವಟಿಕೆಗಳ ಬಾಹ್ಯ ಲೋಕದಲ್ಲಿದ್ದರೂ ಸಹ ಒಳಬದುಕೆಂಬ ಇನ್ನೊಂದು ಲೋಕ ಸದಾ ಕ್ರಿಯಾಶೀಲವಾಗಿಯೇ ಇರುತ್ತದೆ. ಆದರೆ ಹೆಚ್ಚಾಗಿ ನಾವು ಅದನ್ನು ಗಮನಿಸಿರುವುದಿಲ್ಲ. ಬಾಹ್ಯಲೋಕದಲ್ಲಿನ ಕ್ರಿಯೆ, ಮನುಷ್ಯನ ಅಂತರಂಗ ಬದುಕು—ಈ ಎರಡೂ ಪರಸ್ಪರ ಪ್ರಭಾವ ಬೀರುತ್ತಲೇ ಇರುತ್ತವೆ. ಈ ವಾಸ್ತವಾಂಶವನ್ನು ಪರಿಗಣಿಸಿದರೆ ನಾವು ನಮ್ಮ ಅಂತರಂಗ-ಬಹಿರಂಗ ಬದುಕಿನ ಆಯಾಮಗಳೆರಡರಲ್ಲೂ ಒಂದೇ ಸಮನಾದ ಶಾಂತಿಯುತ ಮುನ್ನಡೆ ಸಾಧಿಸಬಹುದು. ಈ ಅಂತರಂಗ ಜೀವನದ ಆಯಾಮಕ್ಕೆ ಸಂಬಂಧಿಸಿದ ಹಾಗೆ ನಾವು ಆಧುನಿಕ ಪಾಶ್ಚಾತ್ಯ ವಿಜ್ಞಾನದಲ್ಲಿ ಆಗುತ್ತಿರುವ ಹೊಸ

---

*೧೯೮೨ರ ಮೇ ೧೫ರಂದು ಹಾಲೆಂಡಿನ ಕೊನಿಂಗ್‌ಪಾವ್ (ವೆಲೊಡ್ಡೀವೆನ್)ನ ಪ್ರೊಫೆಸರ್ ವಾನ್ ಪ್ರಾಗ್ ಪೌರ್ವಾತ್ಯ ಅಧ್ಯಯನ ಕೇಂದ್ರದಲ್ಲಿ "ಭಾರತದ ಆಧ್ಯಾತ್ಮಿಕ ಪ್ರವಾಹಗಳು" ಎಂಬ ಮಾಲೆಯಲ್ಲಿ ನೀಡಿದ ಉಪನ್ಯಾಸದ ಧ್ವನಿ ಮುದ್ರಿಕೆಯನ್ನು ಆಧರಿಸಿದ್ದು.

ಬೆಳವಣಿಗೆಗಳು ಮತ್ತು ಪ್ರಚಲಿತವಾಗುತ್ತಿರುವ ಹೊಸ ಆಲೋಚನಾ ಪರಂಪರೆಯ ಬಗ್ಗೆ ತಿಳಿದುಕೊಳ್ಳುವುದು ಒಳ್ಳೆಯದು. ಪಾಶ್ಚಾತ್ಯ ವಿಜ್ಞಾನವು ಅನೇಕ ಶತಮಾನಗಳ ಕಾಲ ಮಾನವನ ಅಂತರಂಗ ಜೀವನದತ್ತ ದೃಷ್ಟಿ ಹಾಯಿಸಿರಲಿಲ್ಲ. ಆದರೆ ಈ ಶತಮಾನದಲ್ಲಿ ಹೆಚ್ಚುತ್ತಿರುವ ಮನೋದೈಹಿಕ ರೋಗಗಳು, ನಾನಾ ವಿಜ್ಞಾನಿಗಳು ನಡೆಸುತ್ತಿರುವ ಪ್ರಯೋಗ-ಪರೀಕ್ಷೆಗಳು, ಆಧುನಿಕ ವಿಜ್ಞಾನವು ಮಾನವನ ಅಂತರಂಗಲೋಕದ ವಾಸ್ತವಿಕತೆ ಹಾಗೂ ಅವನ ಒಳಬದುಕಿನ ಮಹತ್ವದ ಕಡೆ ದೃಷ್ಟಿ ಹಾಯಿಸಲು ನೆರವಾಗಿವೆ.

ಇದಕ್ಕೆ ಸಂಬಂಧಿಸಿದಂತೆ, ಭಾರತದ ಸ್ವಾಮಿ ವಿವೇಕಾನಂದರು (೧೮೬೩-೧೯೦೨), (ಫ್ರೆಂಚ್) ನಷ್ಟವಂಶ ಜೀವಶಾಸ್ತ್ರಜ್ಞ ಟ-ಯಾರ್-ಡ-ಷಾರ್ಡ ಮತ್ತು ಇಂಗ್ಲೆಂಡಿನ ನರರೋಗತಜ್ಞ ಸರ್ ಚಾರ್ಲ್ಸ್ ಷೆರಿಂಗ್‌ಟನ್—ಇವರುಗಳ ಅಭಿಪ್ರಾಯವನ್ನು ನಾನು ಉಲ್ಲೇಖಿಸಲು ಆಶಿಸುತ್ತೇನೆ. ಪ್ರಕೃತಿಯ ಬಾಹ್ಯ ಆಯಾಮಕ್ಕಿಂತ ಮಿಗಿಲಾದ ಹಾಗೂ ಅದನ್ನು ಮೀರಿದಂಥ ಅದರ ಅಂತಃಸತ್ವವನ್ನು ಕುರಿತು ಮೂವರೂ ಒತ್ತಿ ಹೇಳಿದ್ದಾರೆ. ಸ್ವಾಮಿ ವಿವೇಕಾಂದರು ಪುರಾತನ ವೇದಾಂತದ ದೃಷ್ಟಿಕೋನದಿಂದಲೂ, ಉಳಿದ ಇಬ್ಬರು ಆಧುನಿಕ ವಿಜ್ಞಾನ ದೃಷ್ಟಿಯಿಂದಲೂ ಈ ವಿಷಯವನ್ನು ವಿಚಾರ ಮಾಡಿದ್ದಾರೆ. ಸ್ವಾಮಿ ವಿವೇಕಾಂದರು (ನೋಡಿ - The Complete Works, Vol. III, pp. 393-94, 8th Edition) ಹೀಗೆ ಹೇಳುತ್ತಾರೆ :

*ಬಾಹ್ಯಪ್ರಪಂಚ ಮತ್ತು ಅಂತರಂಗದ ಲೋಕ ಎಂಬ ಎರಡು ವಿಭಿನ್ನ ಸ್ತರಗಳಲ್ಲಿ ನಾವು ಜೀವಿಸುತ್ತೇವೆ. ಮಾನವ ಪ್ರಗತಿ ಎಂಬುದು ಪ್ರಾಚೀನ ಕಾಲದಿಂದಲೂ ಈ ಎರಡು ಸ್ತರಗಳಲ್ಲಿ ಸಮಾನಾಂತರವಾಗಿ ರೂಪುಗೊಳ್ಳುತ್ತ ಬಂದಿದೆ. ಮಾನವನು ಮೊಟ್ಟಮೊದಲು ತನ್ನ ಅನ್ವೇಷಣೆಯನ್ನು ಬಾಹ್ಯಪ್ರಪಂಚದಲ್ಲಿ ಪ್ರಾರಂಭಿಸಿ ವಸ್ತುಲೋಕದ ಪ್ರಕೃತಿಯಿಂದ ತನ್ನ ಎಲ್ಲ ಗಾಢ ಸಮಸ್ಯೆಗಳಿಗೂ ಉತ್ತರಗಳನ್ನು ಪಡೆಯಲು ಇಚ್ಛಿಸಿದ. ಸುತ್ತಲಿನ ಸಮಗ್ರ ವಸ್ತುಲೋಕದಿಂದ ತನ್ನ ಸೌಂದರ್ಯ ತೃಷೆ ಹಾಗೂ ಮಹೋನ್ನತಿಯ ಬಯಕೆಯನ್ನು ಪೂರೈಸಿಕೊಳ್ಳಲು ಆಶಿಸಿದ. ತನ್ನ ವ್ಯಕ್ತಿತ್ವ ಹಾಗೂ ಅಂತರಂಗದ ಸಕಲ ಅಪೇಕ್ಷೆಗಳನ್ನು ನಿರ್ದಿಷ್ಟ ಮೂರ್ತ ಭಾಷೆಯಲ್ಲಿ ಅಭಿವ್ಯಕ್ತಿಗೊಳಿಸಲುದ್ದೇಶಿಸಿದ...: ಅವನು ಈ ಅನ್ವೇಷಣೆಯಲ್ಲಿ ಪಡೆದ ಫಲಗಳು ಭವ್ಯವಾಗಿದ್ದವು.*

*ಆದರೆ ಬಹುಕಾಲದ ನಂತರ ಮಾನವಕೋಟಿಯ ಎದುರಿಗೆ ತೆರೆದುನಿಂತ ಇನ್ನೊಂದು ಪ್ರಪಂಚವು ಪರಮೋತ್ಕೃಷ್ಟವೂ ಅತಿ ಸುಂದರವೂ, ವಸ್ತುಲೋಕಕ್ಕಿಂತ ಹೆಚ್ಚು ವಿಶಾಲವೂ ಆಗಿತ್ತು.... ಅಲ್ಲಿ ನಾವು ಕಾಣುವ ಕಾರ್ಯವಿಧಾನವೇ ಬೇರೆ ತೆರನಾದುದು. ಉಪನಿಷತ್ತಿನ ಕೆಚ್ಚೆದೆಯ, ಇಂದಿನ ಕಲ್ಪನೆಗೆ ಸಿಲುಕದಂಥ ಮಹಾಪ್ರಚಂಡ ಮಹರ್ಷಿ ಚೇತನಗಳು ಮಾನವ ವರ್ಗಕ್ಕೆ ಹಿಂದೆಂದೂ ಯಾರೂ ಬೋಧಿಸದಂಥ ಉಜ್ವಲ ಉದಾತ್ತ ಸತ್ಯಗಳನ್ನು ಯಾವೊಂದು ಭೀತಿ ಆತಂಕವಿಲ್ಲದೆ, ಏನನ್ನೂ ರಾಜಿಮಾಡಿಕೊಳ್ಳದೆ ಘೋಷಿಸಿದರು.*

ಪ್ರಾಚೀನಕಾಲದ ನಮ್ಮ ಋಷಿಗಳು ತಮ್ಮ ಸತ್ಯಶೋಧನೆಯಲ್ಲಿ ಹೀಗೆ ಬಾಹ್ಯ ಪ್ರಪಂಚವನ್ನು ಬಿಟ್ಟು ಅಂತರಂಗದ ಲೋಕ ಕುರಿತ ಚಿಂತನೆಯತ್ತ ಏಕೆ ಹೊರಳಿದರು ? ಅವರನ್ನು ಹಾಗೆ ಒತ್ತಾಯಿಸಿದ ಪ್ರೇರಣೆಗಳು ಯಾವುವು ?—ಈ ವಿಚಾರವನ್ನು ವಿಶ್ಲೇಷಿಸುತ್ತ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ : (ಅದೇ. ಪುಟ. ೩೩೦-೩೧)

*ಹೇಗೆ ಗ್ರೀಕರ ಮನಸ್ಸು ಅಥವಾ ಆಧುನಿಕ ಐರೋಪ್ಯರ ಮನಸ್ಸು ಜೀವನದ ಸಮಸ್ಯೆಗೆ, ಬದುಕಿನ ಯಾವುದೇ ಪಾವನ ಸಮಸ್ಯೆಗಳಿಗೆ, ಪರಿಹಾರಗಳನ್ನು ಕಂಡುಹಿಡಿಯಲು ಬಾಹ್ಯಪ್ರಪಂಚವನ್ನು ಶೋಧಿಸಹೊರಟಿತೋ ಹಾಗೆಯೇ ನಮ್ಮ ಪೂರ್ವಜರೂ ಅದೇ ದಾರಿಯಲ್ಲಿ ನಡೆದರು. ಈ ಸಾಹಸದಲ್ಲಿ ಐರೋಪ್ಯರು ಹೇಗೆ ಸೋತರೋ ನಮ್ಮವರೂ*

ಹಾಗೆಯೇ ಸೋತರು. ಆದರೆ ಪಾಶ್ಚಾತ್ಯರು ಪುನಃ ಮುಂದಕ್ಕೆ ಚಲಿಸಲಾಗಲಿಲ್ಲ ; ನಿಂತಲೇ ನಿಂತರು ; ಬಾಹ್ಯಲೋಕದ ಜೀವನ ಮರಣಗಳ ಮಹತ್ತಾದ ಸಮಸ್ಯೆಗೆ ಅವರು ಪರಿಹಾರ ಶೋಧಿಸಲಾರದೆ ಹೋದರು ; ಮುಂದುವರಿಯಲಾರದೆ ಹಿಂದೆ ಬಿದ್ದರು.

ನಮ್ಮ ಪೂರ್ವಜರಿಗೂ ಅದು ಅಸಾಧ್ಯವಾದ ಸಮಸ್ಯೆಯೇ ಆಗಿತ್ತು. ಆದರೆ ಕೇವಲ ನಮ್ಮ ಪಂಚೇಂದ್ರಿಯಗಳು ಈ ಸಮಸ್ಯೆಯ ಪರಿಹಾರ ಕಂಡುಹಿಡಿಯಲಾರವು ಎಂದು ಒಪ್ಪಿಕೊಳ್ಳುವಷ್ಟು ಧೈರ್ಯ ನಮ್ಮವರಿಗಿತ್ತು. ಇದನ್ನು ಅತ್ಯಂತ ಸಮರ್ಪಕವಾಗಿ ಈ ಉಪನಿಷತ್ ವಾಕ್ಯಗಳು ವ್ಯಕ್ತಪಡಿಸುತ್ತವೆ (ತೈತ್ತಿರೀಯ ಉಪನಿಷತ್ ೨.೪) :

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ—ಯಾವುದನ್ನು ಹೇಳಲು ಹೋಗಿ ಸೋತು, ಶಬ್ದಗಳು (ಮತ್ತು ಸಕಲ ಪಂಚೇಂದ್ರಿಯಗಳು, ಇಂದ್ರಿಯಬದ್ಧ) ಚಿತ್ತದೊಡನೆ ಹಿಂತಿರುಗಿ ಬಂದುಬಿಡುತ್ತವೆಯೋ (ಅಂಥ ಪರತತ್ತ್ವ)

ನ ತತ್ರ ಚಕ್ಷುರ್ಗಚ್ಛತಿ ನ ವಾಕ್ ಗಚ್ಛತಿ—ಯಾವುದನ್ನು ಕಣ್ಣು ವೀಕ್ಷಿಸಲಾರದೋ, ಯಾವುದನ್ನು ಮಾತು ಅಭಿವ್ಯಕ್ತಿಗೊಳಿಸಲಾರದೋ (ಕೇನೋಪನಿಷತ್ತು I.3)

ಹೀಗೆ ಪಂಚೇಂದ್ರಿಯಗಳ ಸಂಪೂರ್ಣ ಅಸಹಾಯಕತೆಯನ್ನು ಸಾರಿ ಹೇಳುವ ನಾನಾ ವಾಕ್ಯಗಳು ಅಲ್ಲಿ ಕಾಣಸಿಗುತ್ತವೆ ; ಆದರೆ ನಮ್ಮವರು ಅಷ್ಟಕ್ಕೆ ಸುಮ್ಮನಾಗಲಿಲ್ಲ ; ಅವರು ಮಾನವನ ಆಂತರಿಕ ಪ್ರಕೃತಿಯನ್ನು ಅವಲಂಬಿಸಿದರು. ತಮಗೆ ಅಗತ್ಯವಾದ ಉತ್ತರಗಳನ್ನು ತಮ್ಮ ಅಂತರಾತ್ಮನಿಂದಲೇ ಪಡೆಯಲುದ್ಯುಕ್ತರಾದರು; ಆತ್ಮವಿಮರ್ಶೆಯಲ್ಲಿ ತೊಡಗಿದರು.

ಬಾಹ್ಯಪ್ರಕೃತಿಯ ವೈಫಲ್ಯವನ್ನರಿತು ಅದನ್ನು ಕೈಬಿಟ್ಟರು, ಯಾಕೆಂದರೆ ಅದರೊಂದಿಗೆ ಯಾವ ಪ್ರಕ್ರಿಯೆಯೂ ಸಾಧ್ಯವಿರಲಿಲ್ಲ, ಅದರಿಂದ ತಮಗೆ ಬೇಕಾಗಿದ್ದ ಪ್ರತ್ಯುತ್ತರವಾಗಲಿ ಭರವಸೆಗಳಾಗಲಿ ಸಿಕ್ಕುವಂತಿರಲಿಲ್ಲ. ಜಡ, ನಿರ್ಜೀವ ವಸ್ತು ತಮಗೆ ಸತ್ಯದ ಅರ್ಥವನ್ನು ನೀಡಲಾರದೆಂಬುದನ್ನು ಅರಿತು ಮಾನವನ ಪ್ರಜ್ವಲಿತ ಅಂತರಾತ್ಮವನ್ನು ಅವರು ಅವಲಂಬಿಸಿದರು, ಅಲ್ಲಿ ಮಾತ್ರ ಅವರಿಗೆ ನಿರೀಕ್ಷಿತ ಪ್ರತಿಫಲ ಸಿಕ್ಕಿತು.

'ಕೇವಲ ಹೊರಗಿನಿಂದ ಗ್ರಹಿಸಬಹುದಾದ ವಸ್ತು ಲೋಕವನ್ನಲ್ಲದೆ ವಿಜ್ಞಾನವು, ಇಲ್ಲಿಯವರೆಗೆ ಎಂದಾದರೂ ಬೇರೆ ದೃಷ್ಟಿಕೋನದಿಂದ ಅದನ್ನು ಪರೀಕ್ಷಿಸುವ ಗೋಜಿಗೆ ಹೋಗಿದೆಯೇ ?' ಎಂದು ದಿವಂಗತ ಷಾರ್ಡನ್ ಪ್ರಶ್ನಿಸುತ್ತಾರೆ. (*The Phenomenon of Man*, ಸರ್ ಜೂಲಿಯನ್ ಹಕ್ಸ್‌ಲಿ ಪೀಠಿಕೆಯೊಂದಿಗೆ. Collins, London, ಪುಟ ೫೨)—ಆ ಪ್ರಶ್ನೆಗೆ ಉತ್ತರವನ್ನೂ ಅವರೇ ಹೇಳಲು ಮುಂದಾಗುತ್ತಾರೆ. (ಅದೇ. ಪುಟ ೫೫)

ಭೌತಶಾಸ್ತ್ರದ ದೃಷ್ಟಿಯಲ್ಲಿ, ಸದ್ಯಕ್ಕಂತೂ, ವಸ್ತುವಿನ ಭೌತಸ್ವರೂಪವನ್ನು ಬಿಟ್ಟರೆ ಅದಕ್ಕೆ ಯಾವ ವೈಜ್ಞಾನಿಕ ಅಸ್ತಿತ್ವವೂ ಇಲ್ಲ. ಬ್ಯಾಕ್ಟೀರಿಯಾ ವಿಜ್ಞಾನಿಯೂ ಸಹ ಇನ್ನೂ ಅದೇ ರೀತಿಯ ಬೌದ್ಧಿಕ ಮನೋಭಾವ ತಳೆದಿರುತ್ತಾನೆ—ಅವನು ತಾನು ಸಾಕಿ ವೃದ್ಧಿ ಪಡಿಸಿದ ಸೂಕ್ಷ್ಮ ಜೀವಿಗಳ ರಾಶಿಯನ್ನು (ಕೆಲವು ಗಣನೀಯ ಸಮಸ್ಯೆಗಳನ್ನುಳಿದು) ಕೇವಲ ಪ್ರಯೋಗಶಾಲೆಯ ಪರೀಕ್ಷಕ ದ್ರವ್ಯವೆಂದೇ ತಿಳಿದು ವರ್ತಿಸುತ್ತಾನೆ. ಸಸ್ಯಲೋಕಕ್ಕೆ ಬಂದರೆ ಸಮಸ್ಯೆ ಮತ್ತಷ್ಟು ಜಟಿಲವಾಗುತ್ತದೆ. ಒಬ್ಬ ಜೀವವಿಜ್ಞಾನಿ ಕೀಟಗಳ ಅಥವಾ ಸಿಲಂಟಿರೇಟ್‌ಗಳ ವರ್ತನೆ ಕುರಿತು ಅಧ್ಯಯನ ನಡೆಸುವಾಗ ಅದೊಂದು ಅಪಾಯಕರ ಜೂಜಾಟದ ಮಾರ್ಗವನ್ನೇ ಹಿಡಿಯುವ ಸಾಧ್ಯತೆ ಉಂಟು. ಕಶೇರುಕಗಳ ವಿಷಯದಲ್ಲಂತೂ ಅದು ಕೇವಲ ವ್ಯರ್ಥ ಸಾಹಸವೆಂದೇ ತೋರುತ್ತದೆ. ಇನ್ನು ಕೊನೆಯಲ್ಲಿ ಮನುಷ್ಯನ ಬಗ್ಗೆ ಹೇಳುವುದಾದರೆ ಮೇಲೆ ಹೇಳಿದ ಅಧ್ಯಯನ ಪ್ರಯೋಗಗಳೂ ಸಂಪೂರ್ಣವಾಗಿ ವಿಫಲಗೊಳ್ಳುತ್ತವೆ—ಯಾಕೆಂದರೆ ಸಕಲ ಜ್ಞಾನ, ಅಂತರ್ಬೋಧೆಗಳಿಗೆ ವಸ್ತುವಾಗಿ ಒದಗುವ ಮಾನವನ ಅಭ್ಯಂತರ ಲೋಕವನ್ನು ಅದು ಪರಿಗಣಿಸಲೇಬೇಕಾಗುತ್ತದೆ.

ಷಾರ್ಡ ಮುಂದುವರಿದು ಹೀಗೆನ್ನುತ್ತಾನೆ (ಅದೇ. ಪುಟ ೫೦) : 'ನಮ್ಮೊಳಗೆ, ಅಂತರಾಳ ದಲ್ಲಿ, ಜೀವಿಗಳ ಹೃದಯಾಂತರಂಗದೊಳಗೆ, ಬಿರುಕಿನ ಮೂಲಕ ದೃಷ್ಟಿಗೋಚರವಾಗುವಂಥ ಇನ್ನೊಂದು ಲೋಕವಿದೆಯೆಂಬುದನ್ನು ಯಾರೂ ಅಲ್ಲಗಳೆಯಲಾಗದು.. ಈ ಒಳಲೋಕವು ಪ್ರಕೃತಿ ಯನ್ನೆಲ್ಲಾ ಅನಾದಿಕಾಲದಿಂದ ಹೆಚ್ಚು ಕಡಮೆ ಆವರಿಸಿಕೊಂಡಿದೆಯೆಂಬುದಕ್ಕೆ ಇದಿಷ್ಟೆ ಸಾಕ್ಷಿ ಸಾಕು. ಬ್ರಹ್ಮಾಂಡದ ಮೂಲ ದ್ರವ್ಯಕ್ಕೆ ಎಲ್ಲೋ ಒಂದೆಡೆ ಇನ್ನೊಂದು ಮುಖವೂ ಇರುವುದರಿಂದ, ಕಾಲದೇಶ ಗಳ ಪ್ರತಿ ನಿಟ್ಟಿನಲ್ಲಿ ಅದರ ವಿನ್ಯಾಸಕ್ಕೆ ಎರಡು ಭಾಗಗಳಿರುತ್ತವೆ—ಹೇಗೆ ಹೊರನೋಟಕ್ಕೆ ಒಮ್ಮೈಯಾಗಿ ತೋರುವ ವಸ್ತುವಿನಲ್ಲಿ ಅಗಣಿತ ಕಣಕಣಗಳಿರುತ್ತವೆಯೋ ಹಾಗೆ.

ಪ್ರಸಿದ್ಧ ಬ್ರಿಟಿಷ್ ನರರೋಗ ತಜ್ಞ ದಿ. ಸರ್ ಚಾರ್ಲ್ಸ್ ಷೆರಿಂಗ್‌ಟನ್ (Man on His Nature P. 38, Pelican Edition) ಹೀಗೆ ಹೇಳುತ್ತಾರೆ :

> *ಇವತ್ತು ಎಂದಿಗಿಂತ ಹೆಚ್ಚಾಗಿ ಪ್ರಕೃತಿ ಬಹು ವ್ಯಾಪಕವಾಗಿ ಕಾಣಿಸಿಕೊಳ್ಳುತ್ತಿದ್ದು ಅದು ಹಿಂದೆಂದಿಗಿಂತ ಹೆಚ್ಚಾಗಿ ಮನುಷ್ಯಕೋಟಿ ಯನ್ನೂ ಒಳಗೊಳ್ಳುತ್ತದೆ. ನೀವು ಅದನ್ನು ಒಂದು ಯಂತ್ರವೆಂದು ಬೇಕಾದರೂ ಕರೆಯಿರಿ—ಅದು ಭಾಗಶಃ ಮನಃಶಕ್ತಿ ಹೊಂದಿರುವ ಯಂತ್ರ. ಯಾಕೆಂದರೆ ಅದು ಮನುಷ್ಯನನ್ನೂ ತನ್ನೊಳಗೆ ಸೇರಿಸಿಕೊಳ್ಳುವುದರಿಂದ ಅದಕ್ಕೆ ಮನುಷ್ಯನ ಮನಸ್ಸಿನ ಗುಣಲಕ್ಷಣಗಳೂ ಇರುತ್ತವೆ. ಅದು ಮಾನವ ನಿರ್ಮಿತ ಯಂತ್ರಗಳ ಹಾಗಲ್ಲ—ಮಾನಸಿಕ ಹಾಗೂ ಭೌತಿಕ ಶಕ್ತಿಯಿಂದ ಕೂಡಿ, ಭಾವಾವೇಶಗಳು, ರಾಗದ್ವೇಷಗಳು, ಭಯ ಭರವಸೆಗಳಿಂದ ಪ್ರಚೋದಿತವಾಗಿ, ನಿರಂತರ ಚೈತನ್ಯಧಾರೆಯಾಗಿ ಪ್ರವಹಿಸುವ ನದಿ.*

ನಿಸರ್ಗದ ಈ ವಿಭಿನ್ನ ಆಯಾಮಗಳನ್ನು ಸೂಚಿಸಲು ಸಂಸ್ಕೃತದಲ್ಲಿ ಎರಡು ಶಬ್ದಗಳಿವೆ. ನಿಸರ್ಗ ಎಂಬುದಕ್ಕೆ ಸಂಸ್ಕೃತದಲ್ಲಿ 'ಪ್ರಕೃತಿ' ಎಂದು ನಾನು ಈಗಾಗಲೇ ನೆನ್ನೆ ಬೆಳಗಿನ ಭಾಷಣದಲ್ಲಿ ಹೇಳಿಯಾಗಿದೆ. ನಿಸರ್ಗ ಅಥವಾ ಪ್ರಕೃತಿಗೆ ಎರಡು ಸ್ವರೂಪ ಅಥವಾ ಮುಖಗಳಿವೆ. 'ಪರಾಕ್' ಎಂದರೆ ಹೊರಗಿನದು, 'ಪ್ರತ್ಯಕ್' ಎಂದರೆ ಒಳಗಿನದು. ಪರಾಕ್ ಸ್ವರೂಪವೆಂದರೆ ನೀವು ನಿಮ್ಮ ಪಂಚೇಂದ್ರಿಯಗಳ ಮೂಲಕ ಅನುಭವಿಸಬಲ್ಲ ನಿಸರ್ಗದ ಹೊರಮುಖ ಅಥವಾ ಹೊರಸ್ವರೂಪ. ಇನ್ನೊಂದು ನಿಸರ್ಗದ ಒಳಮುಖ ಅಥವಾ ಒಳಲೋಕವಾಗಿರುವ ಪ್ರತ್ಯಕ್ ಸ್ವರೂಪ. 'ಪರಾಕ್' ಎಂದರೆ ಹೊರಗಿನದನ್ನು ಕುರಿತು ಹೇಳುವ ತೋರುಬೆರಳನ್ನು ಸೂಚಿಸಿದರೆ, ಪ್ರತ್ಯಕ್ ಎಂಬುದು ಅಂತರಂಗದ ಒಳಗಿನದನ್ನು ವ್ಯಕ್ತಪಡಿಸುತ್ತದೆ. ಪ್ರಾರಂಭದಲ್ಲಿ, ಅಂತರಂಗದೊಳಗಿರುವುದು ಏನೆಂಬುದು, ಮನುಷ್ಯನಿಗೆ ತೋಚಿರಲಿಲ್ಲ. ಆದರೆ ತನ್ನೊಳಗೆ ಸತ್ಯದ ಅಗಾಧ ಆಯಾಮಗಳಡಗಿವೆ ಎಂಬುದನ್ನು ಅವನು ಬದುಕಿನಿಂದ ಗ್ರಹಿಸಿದ ತಿಳಿವಳಿಕೆಯ ಮೂಲಕ ಅರ್ಥ ಮಾಡಿಕೊಳ್ಳುತ್ತಾನೆ. ಷಾರ್ಡ ಹೊರಗಿನ ಭೌತಿಕ ಪ್ರಪಂಚದಲ್ಲಿ ಮೈದಳೆಯುವ ನಿಸರ್ಗಶಕ್ತಿಯನ್ನು 'ಟ್ಯಾಂಜೆಂಷಿಯಲ್ ಎನರ್ಜಿ' ಎಂದೂ, ಮನುಷ್ಯನಲ್ಲಿ ಸುಪ್ತವಾಗಿರುವ ಶಕ್ತಿಗಳನ್ನು 'ರೇಡಿಯಲ್ ಎನರ್ಜಿ' ಎಂದೂ ಬೇರೆ ಬೇರೆಯಾಗಿ ವಿಭಜಿಸುತ್ತಾರೆ. ನಾವು ಈ ಎರಡನ್ನೂ ಒಟ್ಟಿಗೆ ಪರಿಗಣಿಸಿದಾಗ ಮಾತ್ರ ನಮಗೆ ಪ್ರಕೃತಿಯ ಸಂಪೂರ್ಣ ಅರ್ಥ ಲಭಿಸುತ್ತದೆ. ಎಲ್ಲಾ ಭೌತ ವಿಜ್ಞಾನಗಳಲ್ಲೂ ಪ್ರಕೃತಿಯ ಬಗ್ಗೆ ವಿಚಾರ ಮಾಡುವಾಗ ಅದರ 'ಟ್ಯಾಂಜೆಂಷಿಯಲ್' ಅಥವಾ ಬಾಹ್ಯ ಆಯಾಮವನ್ನು ಮಾತ್ರ ಕುರಿತು ಹೇಳಲಾಗುತ್ತದೆ. ಆದ್ದರಿಂದಲೇ ಭೌತವಿಜ್ಞಾನಗಳು ಬಹುಕಾಲ ಪ್ರಕೃತಿಯಲ್ಲಿರುವುದು ಕೇವಲ ಈ ಬಾಹ್ಯ ಆಯಾಮವಷ್ಟೆ ಎಂದುಕೊಡಿದ್ದವು.

ಈ ಕಾರಣಗಳಿಂದ ಕಳೆದ ಶತಮಾನದಲ್ಲಿ ಪ್ರಕೃತಿಯ ಸ್ವರೂಪದ ಬಗ್ಗೆ ನಾನಾ ಬಗೆಯ ಜೈವಯಾಂತ್ರಿಕ (mechanistic) ಹಾಗೂ ದ್ರವ್ಯವಾಸ್ತವತಾ (materialistic) ವಿಶ್ಲೇಷಣೆಗಳು ಪ್ರಚಲಿತವಾಗಿದ್ದವು—ಈ ತೆರನಾದ ವಿಚಾರ ವಿಶ್ಲೇಷಣಗಳು ಮನುಷ್ಯನನ್ನು ಸಹ ಕೇವಲ ಒಂದು ಪ್ರಾಣಿಯನ್ನಾಗಿಯೂ, ಸಕಲ ಪ್ರಾಣಿಗಳನ್ನೂ ಮನುಷ್ಯನನ್ನೂ ಯಾಂತ್ರಿಕ ಸ್ವರೂಪಗಳನ್ನಾಗಿಯೂ

ಪರಿಗಣಿಸಿದವು. ಕೇವಲ ಇತ್ತೀಚಿನ ದಶಕಗಳಲ್ಲಿ ಭೌತಿಕ ವಿಜ್ಞಾನವು ಕ್ರಮೇಣ ಪ್ರಕೃತಿಯಲ್ಲಿನ ಅಭ್ಯಂತರ ಆಯಾಮವನ್ನು ಗುರುತಿಸುತ್ತಿದೆ. ಹೊರಗಿನ ನಿಸರ್ಗದ ಗಾಢ ರಹಸ್ಯವನ್ನು ಶೋಧಿಸುವ ಪ್ರಯತ್ನಗಳ ತುತ್ತತುದಿಯ ಹಂತದಲ್ಲಿ ಭೌತವಿಜ್ಞಾನವು ಮನುಷ್ಯನೊಳಗಿನ ಗಹನ ರಹಸ್ಯವನ್ನು ಈಗೀಗ ಕ್ರಮೇಣ ಒಪ್ಪಿಕೊಳ್ಳುತ್ತಿದೆ. ಮನುಷ್ಯನು ನಡೆಸುವ ಅಧ್ಯಯನದಲ್ಲಿ, ಸದಾ ಅವನನ್ನು ಎದುರಿಸುವ ನಿಗೂಢ ಸಮಸ್ಯೆಯೆಂದರೆ ಪ್ರಕೃತಿಯ ಗಾಢ ರಹಸ್ಯಮಯತೆ. ಅವನ ಈ ಅಧ್ಯಯನ ಮುಂದುವರಿದ ಹಾಗೆಲ್ಲ ಈ ಬಾಹ್ಯಲೋಕದ ರಹಸ್ಯಮಯತೆ ಮತ್ತಷ್ಟು ಗಾಢವಾಗುತ್ತ ಹೋಗುತ್ತದೆ—ಕೊನೆಯಲ್ಲಿ ಮನುಷ್ಯನ ಅಂತರಂಗದಲ್ಲೇ ಅಡಗಿರುವ ರಹಸ್ಯವನ್ನು ಅದು ಸೂಚಿಸುತ್ತದೆ. ಈ ಎರಡನೇ ಮುಖ್ಯ ನಿಗೂಢತೆಯನ್ನು ನಿಭಾಯಿಸುವತನಕ ಮೊದಲನೆಯದು ನಿರಂತರ ಹೆಚ್ಚು ಗಾಢವಾಗುತ್ತ ಹೋಗುವ ರಹಸ್ಯ ಸಮಸ್ಯೆಯಾಗಿಯೇ ಉಳಿಯುತ್ತದೆ. ಐನ್‌ಸ್ಟಿನ್ ಜೊತೆಗೂಡಿ ಬರೆದ ತನ್ನ ಪುಸ್ತಕ (*The Universe and Dr. Einstein*, pp. 26-27) ದಲ್ಲಿ ಲಿಂಕನ್ ಬಾರ್ನೆಟ್ ಹೀಗೆ ಹೇಳುತ್ತಾರೆ :

*ವಿಜ್ಞಾನ ಚಿಂತನೆಯ ವಿಕಸನ ಕ್ರಮದಲ್ಲಿ ಒಂದಂಶ ಸುಸ್ಪಷ್ಟವಾಗಿದೆ. ಹೊರಗಿನ ವಸ್ತುಲೋಕದ ಯಾವುದೇ ರಹಸ್ಯವು ತನ್ನನ್ನೂ ಮೀರಿ ಆಚೆ ನಿಂತ ರಹಸ್ಯ ಪರಂಪರೆಯನ್ನು ಸೂಚಿಸದೆ ಇರುವುದಿಲ್ಲ. ಬುದ್ಧಿಯ ಎಲ್ಲ ರಾಜಮಾರ್ಗಗಳು, ಸಿದ್ಧಾಂತ ಊಹನೆಗಳ ಅಡ್ಡಹಾದಿಗಳು ಅಂತಿಮವಾಗಿ ಮಾನವ ಚಾತುರ್ಯವು ಎಂದೆಂದೂ ಹಾಯಲಾಗದಂಥ ಅಗಾಧ ಕಂದರದ ಬಳಿ ಬಂದು ನಿಲ್ಲುತ್ತವೆ. ಯಾಕೆಂದರೆ ಮಾನವನ ಇರುವಿನ ಸ್ಥಿತಿ, ಅವನ ಪರಿಮಿತಿ ಹಾಗೂ ಪ್ರಕೃತಿಯೊಂದಿಗೆ ಅಂತರ್ಗತವಾಗಿರುವ ಅವನ ಜಟಿಲ ಸಂಬಂಧ—ಇವುಗಳಿಂದಾಗಿಯೇ ಅವನು ಬಂಧನಕ್ಕೆ ಸಿಕ್ಕಿರುತ್ತಾನೆ. ಅವನು ತನ್ನ ದಿಗಂತವನ್ನು ವಿಸ್ತರಿಸುತ್ತ ಹೋದ ಹಾಗೆಲ್ಲ ಅವನಿಗೆ ಒಂದು ವಿಷಯ ಸ್ಪಷ್ಟವಾಗುತ್ತದೆ—(ಡಾ. ನೀಲ್ಸ್ ಬೋರ್ ಹೇಳುವಂತೆ) "ನಾವೇ ಈ ಬದುಕಿನ ಈ ಮಹಾನ್ ನಾಟಕದ ಪಾತ್ರಗಳೂ ಪ್ರೇಕ್ಷಕರೂ ಆಗಿಬಿಡುತ್ತೇವೆ." ಹೀಗೆ ಮನುಷ್ಯ ತನಗೆ ತಾನೇ ಒಂದು ಅತ್ಯಂತ ದೊಡ್ಡ ರಹಸ್ಯವಾಗುತ್ತಾನೆ. ತನ್ನನ್ನು ತಾನೇ ಅರ್ಥ ಮಾಡಿಕೊಳ್ಳಲಾರದ ಕಾರಣದಿಂದ ಅವನು ತನ್ನನ್ನು ಇಲ್ಲಿಗೆ ತಂದು ಚೆಲ್ಲಿರುವ ಈ ನಿಗೂಢ ಲೋಕವನ್ನು ಅರ್ಥಮಾಡಿಕೊಳ್ಳಲಾರ. ತನ್ನ ಜೈವಿಕ ಪ್ರಕ್ರಿಯೆಗಳ ಬಗ್ಗೆಯಾಗಲಿ, ತನ್ನ ಸುತ್ತಲಿನ ಲೋಕವನ್ನೇ ವೀಕ್ಷಿಸಿ, ಅರ್ಥವಿಸಿ, ಕನಸು ಕಟ್ಟಬಲ್ಲ ತನ್ನ ಅನನ್ಯ ಶಕ್ತಿಯ ಬಗ್ಗೆಯಾಗಲಿ ಅವನಿಗೆ ಏನೊಂದೂ ಗ್ರಹಿಕೆ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ತನ್ನನ್ನು ತಾನೇ ಮೀರಿನಿಂತು ತನ್ನ ಪರಿವೀಕ್ಷಣೆಯ ಪ್ರಕ್ರಿಯೆಯಲ್ಲಿ ತನ್ನನ್ನು ತಾನೇ ಗುರುತಿಸಿಕೊಳ್ಳಬಲ್ಲ ಅವನ ಅತ್ಯಂತ ಉದಾತ್ತ, ನಿಗೂಢ ಸಾಮರ್ಥ್ಯವನ್ನೂ ಸಹ ಅವನು ಅರ್ಥಮಾಡಿಕೊಳ್ಳಲಾರ.*

## ಮಾನವನ ಅಭ್ಯಂತರ ಜೀವನ : ಅದರ ಸಂಶೋಧನೆಯ ತುರ್ತು

ಒಂದು ಯಂತ್ರಕ್ಕೆ ತನ್ನದೆ ಆದ ಅಭ್ಯಂತರ ಜೀವನವಿಲ್ಲ. ಹೊರಗಿನ ಪ್ರಪಂಚದಲ್ಲಿ ಬದಲಾವಣೆಗಳನ್ನುಂಟುಮಾಡುವುದಷ್ಟೆ ಅದರ ಕೆಲಸ. ಹಾಗೆ ಮಾಡುವಾಗ ಅದು ತುಕ್ಕು ಹಿಡಿದು, ಸವೆದು ತನ್ನ ಶಕ್ತಿ ಮೌಲ್ಯಗಳನ್ನು ಕಳೆದುಕೊಳ್ಳುತ್ತದೆ. ಆಮೇಲೆ ಅದನ್ನು ಬಿಚ್ಚಿ ಕಸದ ರಾಶಿಗೆ ಬಿಸಾಡುತ್ತಾರೆ. ಆದರೆ ಮನುಷ್ಯನಿಗೆ ಅಂತರಂಗ ಜೀವನವಿದೆ. ಅದು ಕಾರ್ಯಪ್ರವೃತ್ತವಾದಾಗ ಬೇರೆ ಬೇರೆ ಪ್ರಭಾವಗಳಿಂದ ಬಾಧಿತವಾಗಿ ಒಳ್ಳೆಯ ಅಥವಾ ಕೆಟ್ಟ ಬದಲಾವಣೆ ಹೊಂದುತ್ತದೆ. ಪ್ರತಿಯೊಂದು ಬಾಹ್ಯ ಕ್ರಿಯೆಯೂ ಮನುಷ್ಯನ ಮನಸ್ಸಿನ ಮೇಲೆ ತನ್ನ ಗುಣಪ್ರಭಾವಗಳ ಗುರುತನ್ನು ಮೂಡಿಸುತ್ತದೆ. ಇದನ್ನೇ ನಾವು ಸಂಸ್ಕೃತದಲ್ಲಿ 'ಸಂಸ್ಕಾರಗಳು' ಅಥವಾ 'ವಾಸನೆಗಳು' ಎನ್ನುತ್ತೇವೆ. ಇವು ಮಾನವನ ಜಾಗೃತ ಪೂರ್ವಸ್ಥಿತಿ, ಜಾಗೃತ ಚೇತನ, ಪ್ರಜ್ಞಾಶೂನ್ಯತೆ ಹಾಗೂ ಸುಪ್ತ ಚೇತನದ ಮೇಲೆ ಬೀಳುವ

ಗುರುತುಗಳು. ಈ ಪ್ರಭಾವಗಳ ಸಾಕಲ್ಯದಿಂದ ಮನುಷ್ಯನ ಚಾರಿತ್ರ್ಯವು ರೂಪುಗೊಳ್ಳುತ್ತದೆ. ಮನುಷ್ಯನು ತನ್ನ ಜೀವನದಲ್ಲಿ ದೈಹಿಕ-ಮಾನಸಿಕ ಆರೋಗ್ಯವನ್ನೂ, ಜೀವನ ಸಾರ್ಥಕತೆಯನ್ನೂ ಪಡೆಯಬೇಕಾದರೆ ಈ ಸಂಸ್ಕಾರಗಳನ್ನು ಗುರುತಿಸಿ ಸಮರ್ಥ ರೀತಿಯಲ್ಲಿ ಅವುಗಳನ್ನು ನಿರ್ವಹಿಸ ಬೇಕಾಗುತ್ತದೆ.

ಪ್ರಕೃತಿಯ ವಿಕಸನಕ್ರಮದ ಅತ್ಯಂತ ಶ್ರೇಷ್ಠ ನಿರ್ಮಿತಿಯಾದ ಮಾನವನ ಅಭ್ಯಂತರ ಆಯಾಮದ ಅನ್ವೇಷಣೆಯೇ ಒಂದು ವಿಶಿಷ್ಟ ವಿಜ್ಞಾನವೆನಿಸಿಕೊಳ್ಳುತ್ತದೆ. ಆಧುನಿಕ ಸಂದರ್ಭದಲ್ಲಿ ಭೌತಪ್ರಕೃತಿಗೆ ಸಂಬಂಧಿಸಿದ ವಿಜ್ಞಾನಗಳು ಬಹುದೂರದ ಮುನ್ನಡೆ ಸಾಧಿಸಿವೆಯಾದರೂ ಮನುಷ್ಯನನ್ನು ಕುರಿತ ವಿಜ್ಞಾನ ಬಹಳ ಹಿಂದೆ ಬಿದ್ದಿದೆ—ಆದ್ದರಿಂದ ಮನುಷ್ಯ ಕುಬ್ಜನಾಗಿದ್ದಾನೆ, ಮಾನಸಿಕವಾಗಿ ದುರ್ಬಲನಾಗಿದ್ದಾನೆ ; ತಾನೆ ಸಮರ್ಥವಾಗಿ ಸೃಷ್ಟಿಸಿದ ಭೌತಿಕ ವಿಜ್ಞಾನ ತಂತ್ರಜ್ಞಾನಗಳು ಉತ್ಪತ್ತಿ ಮಾಡುವ ಬಾಹ್ಯಶಕ್ತಿಗಳ ಕೈಗೊಂಬೆಯಾಗಿದ್ದಾನೆ. ಮನುಷ್ಯನಲ್ಲಿ ದಿನದಿನಕ್ಕೂ ಮಾನಸಿಕ ವಿಕಾರ-ವಿಕಲ್ಪಗಳು ಹೆಚ್ಚುತ್ತಿರುವುದು ಆಧುನಿಕ ಯುಗದ ಪ್ರಮುಖ ಲಕ್ಷಣವಾಗಿದೆ. ಈ ಮಾನಸಿಕ ವಿಕಾರ ವಿಕಲ್ಪಗಳೇ ಸಮಾಜದ ಬಹಿರಂಗ ಜೀವನದ ವಿಕಾರ ವಿಕಲ್ಪಗಳಿಗೂ ಕಾರಣವಾಗಿವೆ. ಬಾಹ್ಯ ಸನ್ನಿವೇಶಗಳ ಕೃಪಾಶಿಶುವಾಗುವ ಅಪಾಯದಿಂದ ಭೌತಿಕ ವಿಜ್ಞಾನಗಳು ಮನುಷ್ಯನನ್ನು ಕಾಪಾಡಿವೆ. ಆದರೆ ಅವನು ಆಂತರಿಕ ಶಕ್ತಿಗಳಿಗೆ ಸಿಕ್ಕಿ ನಿಸ್ಸಹಾಯಕನಾಗುವುದನ್ನು ತಪ್ಪಿಸುವುದು ಇಂದಿನ ಅಗತ್ಯ ವಾಗಿದೆ.

ಮನುಷ್ಯನ ಅಭ್ಯಂತರ ಜೀವನವನ್ನು ಕುರಿತ ಈ ಸಂಶೋಧನೆಯ ತುರ್ತಿಗೆ ವ್ಯಾವಹಾರಿಕ ಹಾಗೂ ತಾತ್ವಿಕ ಕಾರಣಗಳುಂಟು. ಪರಮಾಣು ವಿಜ್ಞಾನ ಹಾಗೂ ನರರೋಗಶಾಸ್ತ್ರಗಳೆರಡೂ ಮನುಷ್ಯನ ಪ್ರಜ್ಞೆಯನ್ನು ಕುರಿತ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ವ್ಯಾವಹಾರಿಕ ದೃಷ್ಟಿಯಿಂದ ಮನುಷ್ಯನ ನಿಗೂಢವೂ ಆಳವೂ ಆದ ಅಂತರಂಗದ ಪ್ರಜ್ಞೆ ಇಂದಿನ ಮಾನವ ವರ್ಗದ ವಿನಾಶ ಅಥವಾ ಉಳಿವನ್ನು ನಿರ್ಧರಿಸುವಂತಾಗಿದೆ. ಅದು ಅವನ ಅಂತರಂಗವನ್ನು ವಿಕಾರವಾದ ಉದ್ವೇಗ, ತುಡಿತ ಬಡಿತಗಳಿಂದ ತುಂಬಬಹುದು, ಇಲ್ಲವೇ ಆತ್ಮಶಾಂತಿ, ಶಕ್ತಿಸ್ವಾಧೀನತೆಗಳಿಂದ ಕೂಡಿರುವಂತೆ ಮಾಡಲೂಬಹುದು. ಇಂದಿನ ನಾಗರಿಕ ಮಾನವನನ್ನು ಕಾಡುವ ಹತ್ತು ಹಲವು ರೋಗಗಳಿಗೆಲ್ಲ ಅವನು ಅಭ್ಯಂತರ ಜೀವನ ಕಾರಣವಾಗಿದೆಯೇ ಹೊರತು ಅವನ ಬಾಹ್ಯ ಬದುಕಲ್ಲ. ಅವನಿಗೆ ಬರುವ ರೋಗಗಳಿಗೆ, ಪ್ರಮುಖವಾಗಿ, ಮಾನಸಿಕ, ಮನೋದೈಹಿಕ ಅಸ್ವಸ್ಥತೆಯೇ ಕಾರಣ—ಕೇವಲ ದೈಹಿಕ ಅಸ್ವಸ್ಥತೆಯಲ್ಲ. ಇದನ್ನು ಇಂದಿನ ವೈದ್ಯಶಾಸ್ತ್ರಗಳು ಹೆಚ್ಚು ಹೆಚ್ಚಾಗಿ ಸಮರ್ಥಿಸುತ್ತಿವೆ. ಆಧುನಿಕ ಮನೋವಿಜ್ಞಾನ, ಮನೋರೋಗ ಚಿಕಿತ್ಸಾಶಾಸ್ತ್ರ, ಮನೋವಿಶ್ಲೇಷಣೆ—ಇವು ಈತನಕ ರೋಗಪರಿಹಾರಕ ಸಾಧನಗಳಾಗಿ ಕೆಲಸಮಾಡಿವೆ ಮತ್ತು ಈ ಕ್ಷೇತ್ರದಲ್ಲಿ ಸ್ತುತ್ಯರ್ಹವೆನಿಸಿಕೊಂಡಿವೆ. ಆದರೆ ಈಚೆಗೆ ಮನುಷ್ಯನ ಮಾನಸಿಕ ದೈಹಿಕ ಸ್ವಾಸ್ಥ್ಯ ಹಾಗೂ ಯೋಗಕ್ಷೇಮ ಸಾಧಿಸಲು ರೋಗ ಪರಿಹಾರಕಗಳಿಗಿಂತ ರೋಗಪ್ರತಿಬಂಧಕ ಉಪಾಯಗಳು ಹೆಚ್ಚು ಅಗತ್ಯವೆಂದು ಅವುಗಳ ಮೇಲೆ ಹೆಚ್ಚು ಒತ್ತು ಹಾಕಲಾಗುತ್ತಿದೆ. ಈ ಕಾರಣಗಳಿಂದ ಆಧುನಿಕ ವಿಜ್ಞಾನ ನಮ್ಮ ಶಾಸ್ತ್ರಗಳ ಹತ್ತಿರಕ್ಕೆ ಬಂದು ಪೂರ್ವ ದೇಶಗಳಲ್ಲಿ ಮಾನವನ ಆಂತರಿಕ ಅಸ್ವಾಸ್ಥ್ಯಕ್ಕಾಗಿ ಕಂಡುಹಿಡಿದ ರೋಗಪ್ರತಿಬಂಧಕ ವಿಧಾನಗಳನ್ನು ಹೆಚ್ಚಾಗಿ ಅಳವಡಿಸಿಕೊಳ್ಳುತ್ತಿವೆ. ಮನುಷ್ಯನ ಆಳ ಒಳಬದುಕಿನ ಕಾಯಿಲೆಗಳಿಗೆ ವೇದಾಂತ, ಯೋಗ, ಟಾವೋಇಸಮ್, ಜೆನ್ ತತ್ತ್ವಗಳು ಹೆಚ್ಚು ಪರಿಹಾರಗಳನ್ನು ಸೂಚಿಸು ತ್ತಿವೆಯೆಂದು ಒಪ್ಪಿಕೊಳ್ಳುತ್ತಿದ್ದಾರೆ.

ವಾಸ್ತವಿಕ ಬದುಕನ್ನು ಅನ್ವೇಷಿಸಲೆತ್ನಿಸುವ ಯಾವುದೇ ವಿಜ್ಞಾನದ ಶಾಖೆ ತನ್ನ ಸಮಗ್ರತೆಯನ್ನುಳಿಸಿಕೊಳ್ಳಲು ನಿಸರ್ಗ ಹಾಗೂ ಮಾನವನ ಬಾಹ್ಯಾಭ್ಯಂತರ ಜೀವನದ ಅಧ್ಯಯನ ಒಳಗೊಳ್ಳಲೇಬೇಕು. ಕೇವಲ ಅಂಥ ಸಮಗ್ರ ವಿಜ್ಞಾನವು ಮಾತ್ರ ಜೀವನ ವೇದಾಂತದ ಸಾಕಲ್ಯ ವನ್ನುಳಿಸಿ ಮನುಷ್ಯನನ್ನು, ಸಮಾಜವನ್ನು ಹೆಚ್ಚು ಹೆಚ್ಚು ಪೀಡಿಸುತ್ತಿರುವ ಮಾನಸಿಕ ಹಾಗೂ

ಸಾಮುದಾಯಕ ರೋಗಗಳನ್ನು ತಡೆಗಟ್ಟಲು ನೆರವಾಗಬಹುದು. ಯುಗಯುಗಗಳಿಂದ ಮಾನವ ವರ್ಗವು ಬೆಳಸಿ ಅಭಿವೃದ್ಧಿಗೊಳಿಸುತ್ತಿರುವ ಹಲವಾರು ವಿಜ್ಞಾನ ಶಾಖೆಗಳ, ತತ್ತ್ವಶಾಸ್ತ್ರಗಳ ನಡುವೆ ವೇದಾಂತದ ಸ್ಥಾನ ಎಷ್ಟು ಪ್ರಮುಖವೆಂದು ಇದರಿಂದ ತಿಳಿಯುತ್ತದೆ.

**೪. ಆಧುನಿಕ ಪಾಶ್ಚಾತ್ಯ ತಳಸ್ಪರ್ಶಿ ಮನೋವಿಜ್ಞಾನ ಮತ್ತು ಫ್ರಾಯ್ಡ್ ತತ್ತ್ವಕ್ಕೆ ಸವಾಲುಗಳು**

ಮನುಷ್ಯನ ಆಂತರಿಕ ಪ್ರಕೃತಿಯ ಅಧ್ಯಯನ ಅನನ್ಯವಾದುದು. ಇಲ್ಲಿ ನಾವು ಮನಸ್ಸನ್ನೇ ಮನಸ್ಸಿನ ಮೂಲಕ ವ್ಯಾಸಂಗ ಮಾಡುತ್ತೇವೆ. ಅಂಥ ಅಧ್ಯಯನಕ್ಕಾಗಿಯೇ ಮನೋವಿಜ್ಞಾನವನ್ನು ಉದ್ದೇಶಿಸಲಾಗಿತ್ತು. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಇತ್ತೀಚಿನವರೆಗೆ ಮನುಷ್ಯನ ಅಭ್ಯಂತರ ಅಸ್ತಿತ್ವ ವನ್ನು ಹೊರಗಿನಿಂದ ಪರಿಶೀಲಿಸಲಾಗುತ್ತಿತ್ತು. ನಾವು ಮನುಷ್ಯನ ಅನ್ವೇಷಣೆಯನ್ನು ಅವನ ಶರೀರ ವಿಜ್ಞಾನ, ಅಂಗರಚನಾಶಾಸ್ತ್ರ, ನರರೋಗ ಶಾಸ್ತ್ರ, ಕೊನೆಗೆ ಚರ್ಯಾಮೂಲ ಮನೋವಿಜ್ಞಾನವು ಸೇರಿದಂತೆ—ಈ ಎಲ್ಲಾ ಶಾಸ್ತ್ರಗಳಿಂದ ಪ್ರಾರಂಭಿಸಬಹುದು. ಆದರೆ ನಮ್ಮ ಈ ಅಧ್ಯಯನ ಅಷ್ಟರಲ್ಲೇ ಪರ್ಯವಸಾನವಾಗಬಾರದು.

೧೯ನೆಯ ಶತಮಾನದಲ್ಲಿ ಭೌತವಿಜ್ಞಾನ ಹಾಗೂ ಶರೀರಶಾಸ್ತ್ರಗಳ ಬೆಳಕಿನಲ್ಲಿ ನಡೆಸಲಾದ ಅಧ್ಯಯನದ ಫಲವಾಗಿ ವರ್ತನ ಸಿದ್ಧಾಂತವನ್ನೊಳಗೊಂಡ ಮನೋವಿಜ್ಞಾನ ಹುಟ್ಟಿಕೊಂಡಿತು. ಅದು ಜೀವಸತ್ತ್ವವನ್ನು ಹೊರಗಿನಿಂದ ವೀಕ್ಷಿಸುವ ವಿಧಾನವಾಗಿತ್ತು. ಫ್ರಾಯ್ಡ್ ಮತ್ತು ಅವನ ಪಂಥದವರು ಸ್ವಪ್ನಗಳ ಅಧ್ಯಯನದ ಮೂಲಕ ಆರಂಭಿಸಿದ ಮಾನವ ಸ್ವಭಾವದ ತಳಸ್ಪರ್ಶಿ ಸಂಶೋಧನೆಗಳು ಜೀವಸತ್ತ್ವವನ್ನು ಮನುಷ್ಯನ ಒಳಗಿನಿಂದಲೇ ವಿಶ್ಲೇಷಿಸುವ ಹೊಸದೊಂದು ದಾರಿ ಹಾಕಿಕೊಟ್ಟವು. ಆದರೆ ಭಾರತೀಯರ ದೃಷ್ಟಿಯಲ್ಲಿ ಫ್ರಾಯ್ಡ್ ಪ್ರವರ್ತಿಸಿದ ತಳಸ್ಪರ್ಶಿ ಮನೋ ವಿಜ್ಞಾನವು ಸಾಕಷ್ಟು ತಳಸ್ಪರ್ಶಿಯಾಗಿರಲಿಲ್ಲ. ಪ್ರಜ್ಞಾಪೂರ್ವಸ್ಥಿತಿ, ಸುಪ್ತಚೇತನ, ಪ್ರಜ್ಞಾಶೂನ್ಯತೆ ಮತ್ತು ಜಾಗ್ರತ್ ಚೇತನದ ಮೇಲೆ ಅವುಗಳ ಗಾಢಪ್ರಭಾವ—ಮುಂತಾದ ಕಲ್ಪನೆಗಳು ಕ್ರಾಂತಿಕಾರಿ ಆವಿಷ್ಕಾರಗಳಾಗಿದ್ದವು. ಆದರೆ ಅವುಗಳನ್ನು ಹಾಗೆ ಭಾವಿಸಿದವರು ಪಾಶ್ಚಾತ್ಯ ತಾತ್ವಿಕ-ವಿಜ್ಞಾನಿಗಳು ಮಾತ್ರ ; ಪ್ರಾಚ್ಯ ತತ್ವಚಿಂತನೆಯಲ್ಲಿ ಅದರಲ್ಲೂ ಭಾರತೀಯರಿಗೆ, ಅವು ಯಾವುವೂ ಹೊಸ ವಿಚಾರಗಳೆನಿಸಲಿಲ್ಲ. ಆದರೆ ಅವು ಕೇವಲ ಜೀವತತ್ತ್ವದ ಜಾಗ್ರತ್‌ಚೇತನದ ಮೇಲೆ ಸ್ಥಾಪಿತವಾದ ಪಾಶ್ಚಾತ್ಯರ ಸುಲಭಸಾಧ್ಯ ವೈಚಾರಿಕತೆ ಹಾಗೂ ವ್ಯಕ್ತಿತ್ವವಾದಗಳಿಗೆ ಆಘಾತವನ್ನುಂಟುಮಾಡಿದವು. ಮನುಷ್ಯನ ಜೀವಸತ್ತ್ವದ ಆಳದೊಳಗಿನ ವಿಚಾರಶೂನ್ಯತೆಗೆ ಅವನ ಜಾಗ್ರತ್ ಚೇತನದ ವೈಚಾರಿಕತೆ ಹೆದರಿ ಪಲಾಯನ ಮಾಡುವಂತಾಗಿತ್ತು.

ಸ್ವಪ್ನಗಳ ಅಧ್ಯಯನದ ಮೂಲಕ ಮೊಟ್ಟಮೊದಲು ಫ್ರಾಯ್ಡ್ ಅಜಾಗ್ರತ್‌ಚೇತನವನ್ನು ಭೇದಿಸಲು ಮಾಡಿದ ಪ್ರಯತ್ನಗಳ ಆಘಾತವು ದುರದೃಷ್ಟಕರ ಪರಿಣಾಮಗಳನ್ನುಂಟುಮಾಡಿತು. ಮನುಷ್ಯನ ವೈಚಾರಿಕತೆಯನ್ನು ಬೆಳೆಸುವ, ಮಾನವನ ಸಮಗ್ರ ಆರೋಗ್ಯವನ್ನು ಕಾಪಾಡುವ ಅಗತ್ಯದ ಸಂದರ್ಭದಲ್ಲಿ ಫ್ರಾಯ್ಡ್‌ನ ಸಿದ್ಧಾಂತಗಳು ಪ್ರಗತಿವಿರೋಧ ದಾರಿಯನ್ನು ಹಿಡಿದವು. ಯಾಕೆಂದರೆ ಅದರಿಂದ ವೈಚಾರಿಕತೆಯು ವಿಚಾರಶೂನ್ಯತೆಯಲ್ಲಿ ಮುಳುಗಿಹೋದಂತಾಗಿ ಮನುಷ್ಯನ ಸ್ವಭಾವವು ಅತ್ಯಂತ ಕರಾಳ, ವಿಕಾರ ರೀತಿಯಲ್ಲಿ ಚಿತ್ರಿತವಾಯಿತು. ಫ್ರಾಯ್ಡ್‌ನು ಅಜಾಗ್ರತ್‌ಚೇತನವು ಲೈಂಗಿಕ ಪ್ರವೃತ್ತಿಗಳಿಂದ ತುಂಬಿದೆಯೆಂದು ಪ್ರತಿಪಾದಿಸಿದ. ಆಡ್ಲರ್‌ನು ಅದು ಅಧಿಕಾರ ಲಾಲಸೆಗಳಿಂದ ಕೂಡಿದೆ ಎಂದ. ಈ ವಾದಗಳಿಂದ ಹುಟ್ಟಿದ ವೈಚಾರಿಕ ಕಲ್ಪನೆಗಳು ಹಲವಾರು ದಶಕಗಳವರೆಗೆ ಸಾಹಿತ್ಯ-ಕಲೆಗಳ ಕ್ಷೇತ್ರವನ್ನೂ ರಾಜಕೀಯ, ಸಾಮಾಜಿಕ ಜೀವನವನ್ನೂ ಕಲುಷಿತಗೊಳಿಸಿದವು. ಹೀಗೆ ಮನುಷ್ಯನ ವಿಕೃತ, ವಿಚಾರಶೂನ್ಯ ವ್ಯಕ್ತಿತ್ವವನ್ನು ದೈವತ್ವಕ್ಕೇರಿಸಿದುದರ ಫಲವಾಗಿ ನೀತಿನಿಯಮಗಳು ಕೀಳುಮಟ್ಟಕ್ಕೆ ಇಳಿದವು—ಸಂಕಲ್ಪ ಶಕ್ತಿ ಕಳೆದುಕೊಂಡ ಮನುಷ್ಯ ತನ್ನ ಸ್ವಭಾವಸಿದ್ಧ ಪ್ರವೃತ್ತಿಗಳನ್ನೂ ಪ್ರಚೋದನೆಗಳನ್ನೂ ನಿಯಂತ್ರಿಸಿಕೊಳ್ಳಲಾರದಂಥ ದುರ್ಬಲನಾಗಿ ತೋರಿದ.

ಕಾರ್ಲ್ ಯೂಂಗ್‌ನು, ಫ್ರಾಯ್ಡ್ ಮತ್ತು ಆ್ಯಡ್ಲರ್ ಇಬ್ಬರೂ ಅಜಾಗ್ರತ ಚೇತನದ ಬಗ್ಗೆ ಕೊಟ್ಟ ಘೋರವರ್ಣದ ಚಿತ್ರಗಳನ್ನು, ಕಟುವಾಗಿ ವಿರೋಧಿಸಿದ. ಅವನು ಪ್ರತಿಪಾದಿಸಿದ ತತ್ತ್ವಗಳೇ ಹೆಚ್ಚು ಸಮಂಜಸವಾಗಿದ್ದವು. ಅವನು ಹೀಗೆ ಹೇಳಿದ : (*Modern Man Insearch of a Soul*, pp. 12-13).

*ಕನಸುಗಳು ಕೇವಲ ಒಳಗೆ ಅದುಮಿಟ್ಟ, ಬಯಕೆಗಳ ಕಾಲ್ಪನಿಕ ಪೂರೈಕೆಗಳೆಂಬ ವಿಚಾರವನ್ನು ಬಹಳ ಹಿಂದೆಯೇ ತಳ್ಳಿಹಾಕಲಾಗಿದೆ. ಮುಚ್ಚಿಟ್ಟ ಕೆಲವು ಆಸೆ-ಆತಂಕಗಳು ಕನಸುಗಳ ರೂಪ ತಾಳುತ್ತವೆಂಬುದೇನೋ ನಿಜವಾದರೂ, ಹಾಗೆ ಕೆಲವೊಮ್ಮೆ ಕನಸುಗಳಾಗಿ ಮೈತಾಳದ ಭಾವನೆಗಳೇನಾದರೂ ಇವೆಯೇ ? ಅಪರಿಹಾರ್ಯ ಸತ್ಯಗಳು, ತಾತ್ತ್ವಿಕ ಘೋಷಣೆಗಳು, ಭ್ರಮೆ-ಹುಚ್ಚು ಕಲ್ಪನೆಗಳು, ನೆನಪುಗಳು, ಯೋಜನೆಗಳು, ನಿರೀಕ್ಷೆಗಳು, ವಿಚಾರಶೂನ್ಯ ಅನುಭಾವಗಳು, ಕೊನೆಗೆ ದೂರಪ್ರೇಷಕ(telepathic) ಕಾಣ್ಕೆಗಳು—ದೇವರಿಗೇ ಗೊತ್ತು. ಇನ್ನೂ ಏನೇನು ಇವೆಯೋ ?—ಇವುಗಳೆಲ್ಲವೂ ಕನಸುಗಳಾಗಿ ಅಭಿವ್ಯಕ್ತಿ ಪಡೆಯಬಹುದು. ಆದರೆ ಒಂದು ಮಾತನ್ನು ನಾವು ಎಂದಿಗೂ ಮರೆಯಬಾರದು. ನಮ್ಮ ಬದುಕಿನ ಅರ್ಧಕ್ಕಿಂತ ಹೆಚ್ಚು ಕಾಲ, ಹೆಚ್ಚು ಕಡಿಮೆ ಅಜಾಗ್ರತ ಅವಸ್ಥೆಯಲ್ಲಿ ಕಳೆದುಹೋಗುತ್ತದೆ. ಕನಸೆಂಬುದು ನಿಸ್ಸಂದೇಹವಾಗಿ ಅಜಾಗೃತ ಚೇತನದ ಅಭಿವ್ಯಕ್ತಿ ಹೌದು.*

ಕೇವಲ ನಮ್ಮ ಅಜಾಗ್ರತ್‌ಚೇತನದಲ್ಲಿನ ಮೂಲಪ್ರವೃತ್ತಿಗಳಿಗಿಂತ ಹೆಚ್ಚು ಉದಾತ್ತವಾದುದು ಬೇರೆ ಏನೋ ಇದೆ ಎಂಬುದನ್ನು ನಾವು ಒಪ್ಪಿಕೊಳ್ಳಬೇಕು ಎಂದು ಯೂಂಗ್ ವಾದಿಸುತ್ತಾ ಹೀಗೆನ್ನುತ್ತಾನೆ :

*ಮನುಷ್ಯನ ಬದುಕಿನಲ್ಲಿ ಅವನ ಸಹಜ ಪ್ರವೃತ್ತಿಗಳು ಅಥವಾ ಒಲವುಗಳು ಪ್ರಚೋದಕ ಶಕ್ತಿಗಳೆಂಬುದನ್ನು ನಾನು ಸಂದೇಹಿಸುವುದಿಲ್ಲ—ಅವುಗಳು ಲೈಂಗಿಕ ಪ್ರವೃತ್ತಿಗಳಾಗಿರಬಹುದು, ಅಧಿಕಾರಲಾಲಸೆಯಾಗಿರಬಹುದು. ಅದೇ ರೀತಿ ಸಹಜ ಪ್ರವೃತ್ತಿಗಳು ಜೀವಚೇತನದ ವಿರುದ್ಧ ಘರ್ಷಿಸುತ್ತವೆಂಬುದನ್ನೂ ನಾನು ಸಂದೇಹಿಸುವುದಿಲ್ಲ. ಯಾಕೆಂದರೆ ಈ ಪ್ರವೃತ್ತಿಗಳು ಯಾವುದಾದರೂ ಇನ್ನೊಂದರ ಜತೆ ನಿರಂತರವಾಗಿ ಸಂಘರ್ಷಿಸುತ್ತಿರುತ್ತವೆ. ಆ 'ಇನ್ನೊಂದನ್ನೇ ಏಕೆ ನಾವು ಜೀವಚೇತನ ಎಂದು ಕರೆಯಬಾರದು ? ಆ 'ಜೀವಚೇತನವೆಂಬುದು ತನ್ನಷ್ಟಕ್ಕೆ ತಾನು ಏನು ? ಆ ಪ್ರವೃತ್ತಿಗಳೆಂಬುದರ ಅರ್ಥವೇನು ? ಇದು ನನಗೆ ತಿಳಿಯದು. ನನ್ನ ಪಾಲಿಗೆ ಒಂದು ಇನ್ನೊಂದರಷ್ಟೆ, ರಹಸ್ಯಮಯ... ಆದರೂ ನಾನು ಒಂದನ್ನು ಇನ್ನೊಂದರ ಪರಿಭಾಷೆಯಲ್ಲಿ ವಿವರಿಸಿ ತಳ್ಳಿಹಾಕಲಾರೆ.... ಯಾವುದರ ಗುಣವನ್ನು ನಾವು ತಿಳಿಯಲಾರೆವೋ ಅಂಥ ಪ್ರಬಲ ಶಕ್ತಿಗಳನ್ನು ಗುರುತಿಸಲು ಮಾತ್ರ ನಾವು ಆ ಪರಿಭಾಷೆಯನ್ನು ಇಟ್ಟುಕೊಂಡಿದ್ದೇವೆ ಅಷ್ಟೆ.' (ಅದೇ. ಪು. ೧೩೬-೩೭)*

ಜೀವಚೇತನದಲ್ಲಿ ಲೈಂಗಿಕ ಪ್ರವೃತ್ತಿ ಅಡಗಿದೆಯೆಂಬ ಫ್ರಾಯ್ಡ್‌ನ ವಾದವನ್ನೂ ಯೂಂಗ್ ಪ್ರತಿಭಟಿಸುತ್ತಾ ಹೀಗೆ ಹೇಳುತ್ತಾನೆ (ಅದೇ. ಪು. ೧೩೮-೪೧) :

*ಭೌತಿಕ ಶಕ್ತಿಯಲ್ಲಿ ಹೇಗೆ ವಿಭಿನ್ನ ಸ್ಥಿತಿ ಶಕ್ತಿಗಳಿವೆಯೋ ಅದೇ ರೀತಿ ಅಭೌತ ಶಕ್ತಿಯಲ್ಲಿಯೂ ವೈರುಧ್ಯಗಳಿವೆ ಎಂದು ಭಾವಿಸುತ್ತೇನೆ.... ಮನುಷ್ಯನ ಜೀವಚೈತನ್ಯವನ್ನು ಕುರಿತ ಎಲ್ಲಾ ಚರ್ಚೆಯಲ್ಲಿಯೂ ಬಳಸಲಾಗುವ ಲೈಂಗಿಕ ಪರಿಭಾಷೆ ಅತಿರೇಕಕ್ಕೆ ಹೋಗುತ್ತಿದೆ. ಚರ್ಚೆಯನ್ನು ಕಲುಷಿತಗೊಳಿಸುತ್ತಿದೆ. ಅದಕ್ಕೆ ಅಗತ್ಯ ಮಿತಿಯನ್ನು ವಿಧಿಸಿ ಲೈಂಗಿಕತೆಯನ್ನು ಅದಕ್ಕೆ ತಕ್ಕ ಸ್ಥಾನದಲ್ಲಿಡಬೇಕೆನ್ನುತ್ತೇನೆ. ಲೈಂಗಿಕತೆಯು ಬದುಕಿನ ಹಲವು ಪ್ರವೃತ್ತಿಗಳಲ್ಲಿ ಒಂದು—ಹಲವು ಮನೋದೈಹಿಕ ಕ್ರಿಯೆಗಳಲ್ಲಿ ಒಂದು—ಆದರೆ ಅದು ಅತ್ಯಂತ ಮುಖ್ಯವೂ,*

ಬಹು ವ್ಯಾಪಕವೂ ಆದುದೆಂಬುದರಲ್ಲಿ ಸಂದೇಹವಿಲ್ಲ ಎಂದು ನಮ್ಮ ಸಾಮಾನ್ಯ ವ್ಯವಹಾರ ಜ್ಞಾನ ಮತ್ತೆ ಮತ್ತೆ ನೆನಪಿಸುತ್ತದೆ.

....ಅದಕ್ಕೆ ವಿರೋಧ ಪ್ರೇರಣೆಯಾದ ಜೀವಚೇತನವನ್ನು ಬಿಟ್ಟರೆ ಅದರ ಬಂಧನದಿಂದ ಬೇರೆ ಯಾವುದೂ ನಮ್ಮನ್ನು ಮುಕ್ತಿಗೊಳಿಸಲಾರದು. ಇಂಥ ಮುಕ್ತಿಯ ಅರ್ಥ ತಿಳಿದಿರುವುದು ವಿಷಯಾಸಕ್ತಿಯ ಕೂಸುಗಳಿಗಲ್ಲ, ದೇವ ಶಿಶುಗಳಿಗೆ, ಮಾತ್ರ. ಆದರೆ ಫ್ರಾಯ್ಡ್‌ಗೆ ಇದು ಎಂದಿಗೂ ಅರ್ಥವಾಗದು. ಅವನ ಅಭಿಪ್ರಾಯಗಳನ್ನು ಸಮರ್ಥಿಸುವವರಂತೂ ಇದನ್ನು ಅರ್ಥಮಾಡಿಕೊಳ್ಳಬಾರದೆಂದೇ ತೀರ್ಮಾನಿಸಿದ್ದಾರೆ. ಹೋಗಲಿ, ಈ ತಿಳಿವಳಿಕೆಯನ್ನು ಗ್ರಹಿಸಲು ನೆರವಾಗುವಂಥ ಕೀಲಿಕೈ ಸಹ ಅವರಲ್ಲಿಲ್ಲ.... ಆಧುನಿಕರಾದ ನಮಗೆ ಅಂತರಂಗದ ಜೀವಚೇತನವನ್ನು ಮತ್ತೆ ಕಂಡುಕೊಳ್ಳುವ ಆವಶ್ಯಕತೆಯುಂಟಾಗಿದೆ.... ಹೊಸದಾಗಿ ಅದರ ಅನುಭವವನ್ನು ನಮ್ಮಷ್ಟಕ್ಕೆ ನಾವೇ ಪಡೆಯಬೇಕಾಗಿದೆ. ಜೈವಿಕ ಘಟನೆಗಳ ಚಕ್ರದೊಳಕ್ಕೆ ನಮ್ಮನ್ನು ಕಟ್ಟಿ ಹಾಕಿರುವ ಗಾರುಡಿಶಕ್ತಿಯಿಂದ ತಪ್ಪಿಸಿಕೊಳ್ಳಲು ನಮಗೆ ಉಳಿದಿರುವ ಒಂದೇ ಮಾರ್ಗ ಅದು.

....ಇನ್ನು ಫ್ರಾಯ್ಡ್ ಹೇಳುವ 'ಲೋಕಾತೀತ ಅಹಂ' ಅಥವಾ 'ಸೂಪರ್ ಇಗೊ' ಅಂತೂ ಮನೋವೈಜ್ಞಾನಿಕ ವೇಷತೊಟ್ಟು, ಪುರಾತನ ಕಾಲದ ಜಿಹೋವಾನ ಕಲ್ಪನೆಯನ್ನು ಕಣ್ಣು ಮರೆಸಿ ಕಳ್ಳಸಾಗಣೆಯಿಂದ ಒಳಕ್ಕೆ ತರುವ ಪ್ರಯತ್ನವೇ ಆಗಿದೆ. ಯಾರಾದರೂ ಇಂಥ ಕೆಲಸಕ್ಕೆ ಕೈಹಾಕುವಾಗ ಅದನ್ನು ಅವರು ಬಹಿರಂಗವಾಗಿ ಹೇಳಿಬಿಡುವುದು ವಾಸಿ.'

ಮಾನವ ಜೀವಚೇತನದ ಅಧ್ಯಯನಕ್ಕೆ ಉಚಿತವಾದ ವೈಜ್ಞಾನಿಕ ಮಾರ್ಗ ಯಾವುದೆಂಬುದನ್ನು ವಿವರಿಸುತ್ತಾ ಯೂಂಗ್ ಹೀಗೆ ಮುಕ್ತಾಯಗೊಳಿಸುತ್ತಾನೆ : (ಅದೇ. ಪು. ೧೪೧)

ವಿಜ್ಞಾನವು ತನ್ನ ಅನ್ವೇಷಣಾ ಕ್ಷೇತ್ರವನ್ನು ವಿಂಗಡಿಸಿಕೊಂಡು ಪರಿಮಿತ ಊಹನೆ (hypothesis)ಗಳನ್ನು ರಚಿಸಿಕೊಳ್ಳುವುದು ನ್ಯಾಯವಾಗಿದೆ; ಏಕೆಂದರೆ ವಿಜ್ಞಾನವು ಅನುಸರಿಸಬೇಕಾದ ಮಾರ್ಗವೇ ಅದು. ಆದರೆ ಮಾನವಜೀವಚೇತನವನ್ನು ಭಾಂಗಿ ಕಟ್ಟಿ ಈ ಅನ್ವೇಷಣಾ ಕ್ಷೇತ್ರದಿಂದ ಹೊರಕ್ಕೆ ರವಾನಿಸಬೇಕಾಗಿಲ್ಲ. ಅದು ಜಾಗ್ರದವಸ್ಥೆಯನ್ನು ತನ್ನೊಳಗೆ ಸೇರಿಸಿಕೊಂಡಿರುವ ಅಖಂಡತೆ, ಹಾಗೂ ಜಾಗ್ರದವಸ್ಥೆ ಜನಿಸಿರುವುದೇ ಅದರಿಂದ. ವೈಜ್ಞಾನಿಕ ಚಿಂತನೆ ಎಂಬುದು ಅದರ ಕಾರ್ಯಗಳಲ್ಲಿ ಒಂದು ; ಆದ್ದರಿಂದ ಅದು ಬದುಕಿನ ಇನ್ನುಳಿದ ಎಲ್ಲಾ ಸಾಧ್ಯತೆಗಳನ್ನೂ ನಿಶ್ಶೇಷವಾಗಿಸಿ ಬಿಡುವುದಿಲ್ಲ. ಮನೋರೋಗ ಚಿಕಿತ್ಸೆ ನಡೆಸುವವನು ರೋಗ ನಿಧಾನಶಾಸ್ತ್ರ (Pathology)ದ ಕನ್ನಡಕ ಧರಿಸಿ ತನ್ನ ದೃಷ್ಟಿಯನ್ನು ವಿವರ್ಣಗೊಳಿಸಿಕೊಳ್ಳಬಾರದು ; ಏನೇ ಹೇಳಿದರೂ, ಅಸ್ಪಷ್ಟವಾಗಿರುವ ಮನಸ್ಸು, ಮನುಷ್ಯನ ಮನಸ್ಸು, ಹಾಗೂ ಅದರ ವ್ಯಾಧಿಗಳೇನೆ ಇರಲಿ, ಅದು ಮನುಷ್ಯನ ಸಮಗ್ರ ಅಭೌತಿಕ ಜೀವನದಲ್ಲಿ ಭಾಗಿಯಾಗುತ್ತದೆ ಎಂಬುದನ್ನು ಮನೋರೋಗ ಚಿಕಿತ್ಸೆ ನಡೆಸುವವರು ಮರೆಯಬಾರದು.

## ೫. ಪುರಾತನ ವೇದಾಂತ ಹಾಗೂ ಅದರ ತಳಸ್ಪರ್ಶಿ ಮನೋವಿಜ್ಞಾನ

ಸುಮಾರು ೪೦೦೦ ವರ್ಷಗಳಿಗೂ ಹಿಂದೆ ಭಾರತವು ಅತ್ಯುನ್ನತ ಮುನ್ನಡೆ ಸಾಧಿಸಿದುದು ಈ ತಳಸ್ಪರ್ಶಿ ಅಧ್ಯಯನ ಕ್ಷೇತ್ರದಲ್ಲೇ. ಪ್ರತಿ ಮಾನವಜೀವಿಯ ಮನೋದೈಹಿಕ ಸಂಕೀರ್ಣದೊಳಗೆ ಸದಾ ಪರಿಶುದ್ಧವೂ ಸದಾ ಅನಿರ್ಬಂಧಿತವೂ, ಪ್ರಜ್ವಲಿತವೂ ಆದ ದೈವಿಕ ತೇಜೋಬಿಂದು ಅಡಗಿರುತ್ತದೆಂದು ಕಂಡುಹಿಡಿದ ಅವರು ಈ ದೇದೀಪ್ಯಮಾನ ಶಕ್ತಿಯನ್ನು ಆತ್ಮ, ಹುಟ್ಟಿನ ದೃಷ್ಟಿಯಿಂದ ಪರಿಮಿತ ಕೇಂದ್ರಸ್ಥಾನದಲ್ಲಿರುವ 'ಅಹಂ' ಎಂದು ಕರೆದರು. ಇದು ಪ್ರಕೃತಿಯ ವಿಕಾಸಕ್ರಮದಲ್ಲಿ ಲಭಿಸಿದ ಅತ್ಯುತ್ಕೃಷ್ಟ ಸಂಭೂತಿಯೂ ಮಾನವನ ಅಭ್ಯಂತರ ಆಯಾಮದ ಮೂಲಕ ನಿಸರ್ಗದ ಅಭ್ಯಂತರ ಆಯಾಮವನ್ನು ಭೇದಿಸಿ ಕಂಡುಹಿಡಿದ ಕಲ್ಪನೆಯೂ ಆಗಿತ್ತು. ಇದೊಂದು 'ಥಿಯರಿ' ಅಲ್ಲ ; ಇದೊಂದು ಅಭಿಪ್ರಾಯವಲ್ಲ ; ಪ್ರತಿಯೊಬ್ಬ ಮಾನವನೂ ಸರಿಯೋ ತಪ್ಪೋ ಎಂದು

ತಾಳೆಹಾಕಿ ನೋಡಬಹುದಾದ ಸತ್ಯದ ಆವಿಷ್ಕಾರ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಈ ಮಾತುಗಳು ಬರುತ್ತವೆ. (2, 15) :

ಯದಾತ್ಮತತ್ತ್ವೇನ ತು ಬ್ರಹ್ಮ ತತ್ತ್ವಂ
ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ ।
ಅಜಂ ಧ್ರುವಂ ಸರ್ವತತ್ತ್ವೈರ್ವಿಶುದ್ಧಂ
ಜ್ಞಾತ್ವಾ, ದೇವಂ ಮುಚ್ಯತೇ ಸರ್ವಪಾಪೈಃ ॥

*ಆತ್ಮಸಂಯಮಿಯಾದ ಆಧ್ಯಾತ್ಮಿಕ ಉತ್ಕಾಂಕ್ಷಿಯು ಈ ದೇಹದಲ್ಲೇ ಆತ್ಮನ ಸತ್ಯದ ಮೂಲಕ(ಈ ಬ್ರಹ್ಮಾಂಡದ ಪರತತ್ತ್ವವಾದ) ಬ್ರಹ್ಮನ ಸತ್ಯವನ್ನು (ಮಾನವನ ಆತ್ಮಸ್ವರೂಪವನ್ನು), ಯಾವುದು ಬೆಳಕಿನಂತೆ ಸ್ವಯಂ ಪ್ರಕಾಶಿತವಾಗಿರುತ್ತದೆಯೋ ಅಂತಹ ಆತ್ಮವನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳುವನು—ಯಾವುದು ಅಪ್ರಸೂತವೂ ಪ್ರಕೃತಿಯಲ್ಲಿ ಅಪರಿವರ್ತಶೀಲವೋ ಅಂಥ ಪರಬ್ರಹ್ಮ ತತ್ತ್ವವನ್ನು ಗ್ರಹಿಸಿ ಸಕಲ ಪಾಪಗಳಿಂದ ಮುಕ್ತನಾಗುವನು.)*

ಈ ದಿವ್ಯದರ್ಶನವು ಭಾರತೀಯ ಆಧ್ಯಾತ್ಮಿಕ ಚಿಂತನೆಯಲ್ಲಿ ಪ್ರತಿಷ್ಠಾಪಿತವಾಗಿದೆ ಮಾತ್ರವಲ್ಲ, ಪ್ರಪಂಚದ ಶ್ರೇಷ್ಠ ಧರ್ಮಗಳಲ್ಲಿನ ಪ್ರಮುಖ ತಾತ್ತ್ವಿಕ ಅಂಶವೂ ಆಗಿದೆ. ಸ್ವರ್ಗಸಾಮ್ರಾಜ್ಯವೆಂಬುದು ನಿನ್ನೊಳಗೇ ಇದೆ ಎಂದು ಏಸುಕ್ರಿಸ್ತನು ಅಭಯದ ಭರವಸೆ ನೀಡುತ್ತಾನೆ. ಜಲಾಲುದ್ದೀನ್ ರೂಮಿ ಎಂಬ ಪರ್ಷಿಯನ್ ಸೂಫಿ ಕವಿ ಇದೇ ಸತ್ಯವನ್ನು ಒಂದು ಸುಂದರ ಕವನದಲ್ಲಿ ವ್ಯಕ್ತಪಡಿಸುತ್ತಾನೆ :

ಪ್ರತಿ ಮಾನವ ಚೇತನದೊಳಡಗಿಹನೊಬ್ಬಬ್ಬ ಏಸು
ಅವನೇ ಪಾಲಕ, ಮಾರ್ಗದರ್ಶಿ, ಬಲಿಪಶು, ರೋಗ ನಿವಾರಕ ;
ಯಾವನೊಬ್ಬನ ಅಂತರಾತ್ಮದ ತೆರೆಯ ಕಳಚಿನೋಡು
ಸತ್ಯವಾಗಿ ನೀ ಕಾಣುವೆಯಲ್ಲಡಗಿ ಕುಳಿತ ಏಸುವನು

ಕ್ರಿ.ಶ. ನಾಲ್ಕನೆಯ ಶತಮಾನದ ಕ್ಯಾಥಲಿಕ್ ಜ್ಞಾನಿ, ಸಂತ ಅಗಸ್ಟಿನ್ ದೇವರನ್ನು ನಮ್ಮ ಜೀವದೊಳಗಿನ ಜೀವ ಎನ್ನುತ್ತಾನೆ (*Confessions*, Book X, Everyman's Library Edn. Chap. 6)

*ನಾನು ಭೂಮಿಯನ್ನು ಕೇಳಿದೆ, ಅದು ಹೇಳಿತು: ನಾನು ಅವನಲ್ಲ.... ನಾನು ಸಾಗರವನ್ನು, ಆಳ ಅಂತರಾಳಗಳನ್ನು ಕೇಳಿದೆ, ಭೂಮಿಯ ಮೇಲೆ ಸರಿದಾಡುವ ಜೀವಿಗಳನ್ನು ಕೇಳಿದೆ, ಅವು ಮಾರುಲಿದವು: "ನಿನ್ನ ದೇವರು ನಮ್ಮೊಳಗಿಲ್ಲ. ನಮ್ಮಿಂದ ಬಹು ದೂರಕ್ಕೇರಿ ಹುಡುಕಿ ನೋಡು." ನಾನು ಚಲಿಸುವ ಗಾಳಿಯನ್ನು ಕೇಳಿದೆ : ಆ ಸರ್ವವ್ಯಾಪಕ, ಸರ್ವಧಾರಿ, ವಾಯು ಉಸುರಿತು, "ಎನಾಕ್ಸಿಮಿನ್ಸ್ ಮೋಸ ಹೋಗಿದ್ದಾನೆ, ನಾನು ದೇವರಲ್ಲ." ನಾನು ಸೂರ್ಯಚಂದ್ರ ತಾರಾಗಣ ವ್ಯೋಮಗಳನ್ನು ಕೇಳಿದೆ. ಅವು ಪ್ರತಿಧ್ವನಿಸಿದವು : "ನೀನು ಅನ್ವೇಷಿಸುತ್ತಿರುವ ಭಗವಂತ ನಾವಂತೂ ಅಲ್ಲ...." ನನ್ನ ಪಂಚೇಂದ್ರಿಯಗಳ ದ್ವಾರವನ್ನು ಸುತ್ತುವರಿದ ಸಕಲವನ್ನೂ ಕೇಳಿದೆ: "ನೀವುಗಳು, ಯಾರೂ ಅವನಲ್ಲ ಎಂದು ನನ್ನ ದೇವರ ಬಗ್ಗೆ ಹೇಳಿದ್ದೀರಿ; ಆದರೆ ನೀವು ಆ ದೇವರನ್ನು ನನಗೆ ಸ್ವಲ್ಪ ವಿವರಿಸುತ್ತೀರಾ?" ಅವರೆಲ್ಲರೂ ಒಕ್ಕೊರಲಾಗಿ ಉಚ್ಚ ಸ್ವರದಲ್ಲಿ ಹೇಳಿದರು : "ನಮ್ಮೆಲ್ಲರನ್ನು ಸೃಷ್ಟಿಸಿದವನು ಅವನೇ...." ಸತ್ಯವು ಹೇಳುತ್ತದೆ. "ಭೂಮಿಯಾಗಲಿ, ಅಂತರಿಕ್ಷವಾಗಲಿ, ಅಥವಾ ಇನ್ನು ಯಾವುದೇ ಕಾಯವಾಗಲಿ—ಅದು ನಿನ್ನ ದೇವರಲ್ಲ.... ಈಗ ನಾನು ನಿನ್ನನ್ನುದ್ದೇಶಿಸಿ ಹೇಳುತ್ತೇನೆ....ನನ್ನ ಅಂತರಾತ್ಮವೇ, ನನ್ನ ಉತ್ತಮಾರ್ಧ ಭಾಗ ನೀನು... ಯಾಕೆಂದರೆ ನೀನು ನನ್ನ ಈ ದೇಹಪಿಂಡಕ್ಕೆ ಬೇರೆ ಯಾರಿಂದಲೂ ಸಾಧ್ಯವಾಗದ ರೀತಿಯಲ್ಲಿ, ಜೀವವಿತ್ತು ಚುರುಕುಗೊಳಿಸುವೆ ; ಆದರೆ ನಿನ್ನ ದೇವರೆಂಬುವನು ನಿನ್ನ ಜೀವದ ಒಳಗಿನ ಜೀವವೇ.'*

ಸಕಲ ಜೀವಿಗಳೊಳಗಿರುವ ಈ ಏಕೈಕ ಆತ್ಮವನ್ನು ಕಂಡುಹಿಡಿಯಲು ಉಪನಿಷತ್ ಋಷಿಗಳು ಅನುಸರಿಸಿದ ವೈಜ್ಞಾನಿಕ ತಂತ್ರವನ್ನು ಇನ್ನೊಂದು ಪ್ರಸಿದ್ಧ ಉಪನಿಷತ್ ವಾಕ್ಯಪಂಕ್ತಿ ಹೀಗೆ ವಿಶ್ಲೇಷಿಸುತ್ತದೆ (ಕಠೋಪನಿಷತ್ತು ೪.೧) :

ಪರಾಂಚಿ ಖಾನಿ ವ್ಯಾತೃಣತ್ ಸ್ವಯಂಭೂಃ
ತಸ್ಮಾತ್ ಪರಾನ್ ಪಶ್ಯತಿ ನಾಂತರಾತ್ಮನ್ ;
ಕಶ್ಚಿತ್ ಧೀರಾಃ ಪ್ರತ್ಯಾಗಾತ್ಮಾನಮೈಕ್ಷತ್
ಆವೃತ್ತಚಕ್ಷುಃ ಅಮೃತತ್ವಮಿಚ್ಛನ್—

*ಸ್ವಯಂಭುವಾದ ಪರತತ್ವವು ಮನುಷ್ಯನ ಪಂಚೇಂದ್ರಿಯಗಳನ್ನು (ಮತ್ತು ಇಂದ್ರಿಯ ಸಂಬಂಧ ವಾದ ಮನಸ್ಸನ್ನು) ಸೃಷ್ಟಿಸುವಾಗ ಬಹಿರ್ಮುಖ ಪ್ರವೃತ್ತಿ ಎಂಬ ನ್ಯೂನತೆಯನ್ನು ಅವುಗಳಲ್ಲಿ ಸೇರಿಸಿತು. ಆದ್ದರಿಂದ ಅವು ಹೊರಕ್ಕೆ ತಿರುಗಿ ಪರತತ್ವವನ್ನು ಬಾಹ್ಯ ಪ್ರಪಂಚದಲ್ಲೇ ಹುಡುಕುತ್ತವೆ, ಅಭ್ಯಂತರದೊಳಗಿನ ಆತ್ಮ ಸ್ವರೂಪವನ್ನಲ್ಲ. ಆದರೆ ಯಾರೋ ಒಬ್ಬ ಪ್ರತಿಭಾ ಸಂಪನ್ನ ಧೀರನು ಅನಿತ್ಯದೊಳಗಿನ ನಿತ್ಯಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ತನ್ನ ಸಮಗ್ರ ಇಂದ್ರಿಯ ಶಕ್ತಿಗಳೆಲ್ಲವನ್ನೂ ಹಿಂದುಮುಂದಾಗಿ ತಿರುಗಿಸಿ ಅಂತರಾತ್ಮದ ಸತ್ಯವನ್ನು ನಿಜರೂಪ ದಲ್ಲಿ ಗ್ರಹಿಸಿದನು.*

## ೬. ವೇದಾಂತ ವಿಜ್ಞಾನ, ತಳಸ್ಪರ್ಶಿ ಅನ್ವೇಷಣೆಯ ತಂತ್ರ ಹಾಗೂ ಅದರ ಮಧುರ ಫಲಗಳು

ಬಾಹ್ಯಲೋಕದ ನಿಸರ್ಗವನ್ನು ಕುರಿತ ಅಧ್ಯಯನದಲ್ಲಿ ಮನಸ್ಸನ್ನು ತರಬೇತುಗೊಳಿಸುವಾಗ ನಾವು ವಿಷಯದ ಸಾರವನ್ನು ಭೇದಿಸಿ ಅರ್ಥಮಾಡಿಕೊಳ್ಳುವ ಶಕ್ತಿಯನ್ನು ಬೆಳೆಸಿಕೊಳ್ಳುತ್ತೇವೆ. ಈ ಶಕ್ತಿಯಿಂದ ಮನುಷ್ಯನಿಗೆ ಭೌತದ್ರವ್ಯವನ್ನು ಕುರಿತು ಹೆಚ್ಚು ಹೆಚ್ಚು ಆಳವಾದ ಸತ್ಯವನ್ನು ಕುರಿತ ತಿಳಿವಳಿಕೆಯನ್ನು ಪಡೆಯಲು ಸಾಧ್ಯವಾಗಿದೆ. ಅತ್ಯಂತ ಆಳವಾದ ಆ ಸತ್ಯವೇನೆಂಬುದನ್ನು ಇಂದಿನ ಪರಮಾಣು ವಿಜ್ಞಾನ ತೋರಿಸುತ್ತಿದೆ—ಒಂದು ಚೂರು ಭೌತದ್ರವ್ಯದಲ್ಲಿ ಅದ್ಭುತ ಅಸಾಧಾರಣ ಶಕ್ತಿ ಅಡಗಿದೆ ಎಂಬುದೇ ಆ ಸತ್ಯ. ಪರಮಾಣು ವಿಜ್ಞಾನದ ಬಗ್ಗೆ ಐನ್‌ಸ್ಟಿನ್ ನೀಡಿದ ಲೋಕಪ್ರಸಿದ್ಧ $e = mc^2$ ಎಂಬ ಸಮೀಕರಣ ಇದನ್ನು ವಿಶದಪಡಿಸುತ್ತದೆ. ಆದಿಕಾಲದ ಮಾನವನು ಭೌತದ್ರವ್ಯದಲ್ಲಿ ಪರಿಮಿತಿ ಪ್ರಮಾಣದ ದಹನಶಕ್ತಿಯನ್ನು ಕಂಡುಹಿಡಿದ; ಆಮೇಲೆ 19ನೆಯ ಶತಮಾನದ ವಿಜ್ಞಾನಿಗಳು ಮೂಲವಸ್ತುವಿನಲ್ಲಿ ಹೆಚ್ಚು ವ್ಯಾಪಕವಾದ ವಿದ್ಯುತ್‌ಶಕ್ತಿಯನ್ನು ಕಂಡುಹಿಡಿದರು. ಇಪ್ಪತ್ತನೆಯ ಶತಮಾನದ ವಿಜ್ಞಾನಿಗಳು ಭೌತದ್ರವ್ಯದಲ್ಲಿ ಅಪರಮಿತಿ ಪರಮಾಣು ಶಕ್ತಿಯನ್ನು ಪತ್ತೆಹಚ್ಚಿದರು. ಹೀಗೆ ಹಂತಹಂತವಾಗಿ ಬೆಳೆದ ಶಕ್ತಿಯ ಮನಮೋಹಕ ಕಥೆಯು ಮನುಷ್ಯನ ಮನಸ್ಸು ಹೇಗೆ ಅಸಾಧಾರಣ ರೀತಿಯಲ್ಲಿ ಸತ್ಯದ ಮೂಲವನ್ನು ಭೇದಿಸಿ ಕಂಡುಹಿಡಿಯಬಲ್ಲದೆಂದು ತೋರಿಸುತ್ತದೆ. ಪ್ರತಿಯೊಬ್ಬ ಜೀವಿಯಲ್ಲೂ ಅಡಗಿರುವ ಆತ್ಮದ ಸತ್ಯವನ್ನು ಅಂದರೆ ಅವನಲ್ಲಿರುವ ಅಪರಿಮಿತ ಅಂತರ್ಗತ ದೈವಿಕ ಶಕ್ತಿಯ ಮೂಲವನ್ನು ಮರ್ಮಭೇದಿಯಾದ ಇದೇ ಮಾನವನ ಚಿಚ್ಛಕ್ತಿಯು ಆಧ್ಯಾತ್ಮಿಕ ಶಿಕ್ಷಣದಿಂದ ಇನ್ನಷ್ಟು ಚುರುಕಾಗಿ ಕಂಡುಹಿಡಿಯಿತು. ಭಾರತದ ದಾರ್ಶನಿಕರು ಈ ಎರಡು ಶಕ್ತಿಗಳ ನಡುವೆ ಯಾವ ಸಂಘರ್ಷವೂ ಇಲ್ಲವೆಂಬುದನ್ನು ಗ್ರಹಿಸಿದರು. ಈ ಎರಡು ವಿಧಾನಗಳೂ ಒಂದೇ ಸತ್ಯದ ಎರಡು ವಿಭಿನ್ನ ಆಯಾಮಗಳ ಅನ್ವೇಷಣೆಯ ಮಾರ್ಗವಾಗಿತ್ತು ಅಷ್ಟೆ. ನಾನು ಮೊದಲೇ ಹೇಳಿದಂತೆ ಬಾಹ್ಯ ಪ್ರಕೃತಿಯು ಪರಾಕ್ ಸ್ವರೂಪವಾದರೆ, ಅಭ್ಯಂತರ ಪ್ರಕೃತಿಯು ಅದೇ ಪ್ರಕೃತಿಯ ಪ್ರತ್ಯಕ್ ಸ್ವರೂಪ.

ಹೀಗೆ ಪರಿಮಿತ ಮಾನವ ವ್ಯಕ್ತಿತ್ವದಲ್ಲಿ ಅಡಗಿರುವ ಅನಂತತೆ, ಮರ್ತ್ಯನಲ್ಲಿರುವ ಅಮೃತತ್ವ ಗಳ ಸತ್ಯವನ್ನು ಕುರಿತು ಹೇಳುವ ನಾನಾ ವಾಕ್ಯಪಂಕ್ತಿಗಳು ಉಪನಿಷತ್ತುಗಳಲ್ಲಿ ಕಾಣಸಿಗುತ್ತವೆ.

ಆಧುನಿಕ ಪಾಶ್ಚಾತ್ಯ ವಿಜ್ಞಾನಿಗಳೂ ಸಹ ಪದೇಪದೇ ಉಲ್ಲೇಖಿಸುವ ಒಂದು ಪ್ರಸಿದ್ಧ ಮಾತು—ಮೂರು ಅತ್ಯಂತ ಅರ್ಥವತ್ತಾದ ಶಬ್ದಗಳಿರುವ ಪದಗುಚ್ಛ—'ತತ್‌ತ್ವಮ್ ಅಸಿ'—ನೀನು ಅದೇ ಆಗಿದ್ದೀಯೆ. ಹೀಗೆ ಮನುಷ್ಯನ ಅಸ್ತಿತ್ವದ ಮೂಲಸತ್ಯವನ್ನು ತಮ್ಮೊಳಗೇ ಸಾಕ್ಷಾತ್ಕಾರ ಮಾಡಿಕೊಂಡ ಪ್ರಾಚೀನ ಋಷಿಗಳು ಆ ಗಹನ ಸತ್ಯವನ್ನು ಮಾನವಲೋಕಕ್ಕೆ ಈ ಮಹಾಸೂತ್ರದ ಮೂಲಕ ನಿವೇದಿಸಿದರು : 'ನೀನು ಕೇವಲ ಒಂದು ಪುಟಾಣಿ ಜೈವಿಕ ರಚನೆ ಅಲ್ಲ, ಕೇವಲ ಪರಿಮಿತ ಅಲ್ಪತಮ 'ಅಹಂ' (Ego) ಅಲ್ಲ ; ಇವೆಲ್ಲವೂ ನೀರಿನಲ್ಲಿ ಮುಳುಗಿ ನಿಂತ ಮಹಾಶಿಲೆಯ ದೃಷ್ಟಿಗೋಚರ ಅಗ್ರಭಾಗಗಳ ಹಾಗೆ. ನಮ್ಮ ಇಂದ್ರಿಯಗಳು ಈ ಅಗ್ರಭಾಗಗಳನ್ನು ಮಾತ್ರ ಗಮನಿಸಬಲ್ಲವು ; ಆದರೆ ಭೌತಶಾಸ್ತ್ರವು ಹೇಗೆ ಸಾಮಾನ್ಯ ರೇಡಿಯೋ ವಿಕಿರಣವನ್ನು ಪಟುಗೊಳಿಸಿ ಉಚ್ಚಾವರ್ತನ, ತೀಕ್ಷ್ಣವಿಕಿರಣ ಶಕ್ತಿಯನ್ನಾಗಿ ಮಾಡುತ್ತದೆಯೋ ಹಾಗೆಯೇ ಮನುಷ್ಯನ ಇಂದ್ರಿಯ ಹಾಗೂ ಮಾನಸಿಕ ಶಕ್ತಿವ್ಯವಸ್ಥೆಯನ್ನು ಪಟುಗೊಳಿಸಬಹುದು—ಆ ಮೂಲಕ ಪರಿಮಿತಿಯೊಳಗಿನ ಅನಂತತೆ, ಮರ್ತ್ಯದೊಳಗಿನ ಅಮೃತತತ್ವವನ್ನು ಭೇದಿಸಿ ಗ್ರಹಿಸುವ ಶಕ್ತಿಯನ್ನು ರೂಢಿಸಿಕೊಳ್ಳಬಹುದು.

ಮನುಷ್ಯನ ಇಂದ್ರಿಯ ಹಾಗೂ ಮಾನಸಿಕ ಶಕ್ತಿಗಳಿಗೆ ಇಂಥ ಸಹಜ ಬಹಿರ್ಮುಖ ಪ್ರವೃತ್ತಿ ಇದೆ ಎನ್ನುವ (ಮೇಲೆ ಹೇಳಿದ) ಉಪನಿಷತ್ತಿನ ವಾಕ್ಯಗಳು ಗಹನ ಅರ್ಥದಿಂದ ತುಂಬಿವೆ. ಇಂದ್ರಿಯ, ಮಾನಸಿಕ ಶಕ್ತಿಗಳು ವಸ್ತುಲೋಕವನ್ನು, ಇಂದ್ರಿಯಗ್ರಾಹ್ಯ ದತ್ತಾಂಶವನ್ನು ಮಾತ್ರ ಅನ್ವೇಷಿಸಿ ಅರ್ಥವಿಸಬಲ್ಲವು, ಆಂತರಿಕ ಆತ್ಮಶಕ್ತಿಯನ್ನಲ್ಲ. ಹಾಗೆ ಅವು ಆಂತರಿಕ ಆತ್ಮಶಕ್ತಿಯನ್ನು ಗ್ರಹಿಸಬೇಕಾದರೆ ಅವುಗಳಿಗೆ ಹೊಸದಾಗಿ ತರಬೇತಿ ನೀಡಬೇಕು. ಈ ಹೊಸ ತರಬೇತಿ ತಂತ್ರವನ್ನು ಉಪನಿಷತ್ತು 'ಆವೃತ್ತ ಚಕ್ಷು' ಅಥವಾ 'ಅಂತರ್ದೃಷ್ಟಿ' ಎನ್ನುತ್ತದೆ. 'ಧ್ಯಾನ'ವೆಂಬುದರ ಅರ್ಥವೇ ಇದು. ಇದು ಒಬ್ಬ 'ಧೀರ'ನಿಗೆ—ಅಂದರೆ ಯಾವನಲ್ಲಿ ಬುದ್ಧಿಶಕ್ತಿಯು ಮನೋಸ್ಥೈರ್ಯದೊಂದಿಗೆ ಸಮ್ಮಿಳಿತವಾಗಿರುವುದೋ—ಅಂಥವನಿಗೆ ಮಾತ್ರ ಸಾಧ್ಯ. ಮನಸ್ಸು, ಇಂದ್ರಿಯ ಶಕ್ತಿಗಳು ಸಹಜವಾಗಿ ಹೊರಕ್ಕೆ ಪ್ರವಹಿಸುತ್ತವೆ. ಈ ಸಹಜ ಪ್ರವಾಹವನ್ನು ತಡೆದು ಮನುಷ್ಯನಲ್ಲಿರುವ ಇನ್ನೊಂದು ಹೆಚ್ಚು ಉನ್ನತ ಶಕ್ತಿ ಅರಳುವಂತೆ ಮಾಡಬೇಕು. ಅಸಾಧಾರಣ ಛಾತಿ ಹಾಗೂ ಶಕ್ತಿಯನ್ನುಳ್ಳವನಿಗೆ ಮಾತ್ರ ಇದು ಸಾಧ್ಯ.

ಸಂಸ್ಕೃತದಲ್ಲಿ 'ಧೀರ'ನೆನ್ನುವ ಶಬ್ದದ ಅರ್ಥವೇ ಅದು. ಅದು ವೇದಾಂತ ಸಾಹಿತ್ಯದಲ್ಲಿ ಪದೇ ಪದೇ ಬರುತ್ತದೆ—ಹಲವೊಮ್ಮೆ ಆ ಮಾತಿಗೆ 'ವಿವೇಕಿ' ಎನ್ನುವ ಅರ್ಥವನ್ನು ಕೊಡುವುದುಂಟು ; ತನ್ನ ಸಾಹಸಮಯ ಅಂತರಂಗ ಯಾತ್ರೆಯ ಅತ್ತ ತುದಿಯಲ್ಲಿ ಒಂದು ಮಹಾನ್ ಸತ್ಯ ತನಗಾಗಿ ಕಾಯುತ್ತಿದೆ ಎಂಬುದು ಯಾವುದೇ ವ್ಯಕ್ತಿಗೆ ಮನವರಿಕೆಯಾದಾಗ ಆ ವ್ಯಕ್ತಿ ಅಂಥ ಮನಸ್ಥೈರ್ಯವನ್ನು ತಂದುಕೊಳ್ಳಲು ಸಾಧ್ಯ. ದುರ್ಗಮ ಪ್ರದೇಶದಲ್ಲಿ ಅತ್ಯಮೂಲ್ಯ ಚಿನ್ನದ ನಿಕ್ಷೇಪವಿದೆಯೆಂಬುದು ಪತ್ತೆಯಾದಾಗ ಜನರು ಚಿನ್ನದ ಲಾಲಸೆಗೆ ಸೋತು ಕಷ್ಟಕೋಟಲೆಗಳನ್ನು ಎದುರಿಸಲು ಶಕ್ಯರಾಗುತ್ತಾರೆ. ಇಲ್ಲಿಯವರೆಗೆ ಯಾರೂ ಹತ್ತದಿರುವ ಪ್ರತಿ ಪರ್ವತಶಿಖರವೂ ಮನುಷ್ಯನಿಗೊಂದು ಸವಾಲಾಗಿ ಅವನು ಅದಕ್ಕಾಗಿ ಎಲ್ಲಾ ಕಷ್ಟಕಾರ್ಪಣ್ಯಗಳನ್ನೂ ಅಪಾಯಗಳನ್ನೂ ಕೊನೆಗೆ ಸಾವನ್ನೂ ಎದುರಿಸಲು ಸಿದ್ಧನಾಗುತ್ತಾನೆ. ಹಾಗೆಯೇ ಮನುಷ್ಯನಿಗೆ ತನ್ನೊಳಗೆ ಒಂದು ಅಪರಿಮಿತ, ಅಮರ್ತ್ಯ ಆಯಾಮವಿದೆಯೆಂದು ಮನದಟ್ಟಾದಾಗ ಅವನು ತನ್ನ ಮನೋದೈಹಿಕ ಶಕ್ತಿಗಳನ್ನು ಹಿಂದುಮುಂದಾಗಿ ತಿರುಗಿಸಿಬಿಡುವಷ್ಟು ಧೈರ್ಯವನ್ನು ಪಡೆಯುತ್ತಾನೆ. ಈ ದೇಹ, ಮನಸ್ಸುಗಳು, ಮನುಷ್ಯನ ವ್ಯಕ್ತಿತ್ವದ ಮರ್ತ್ಯಭಾಗವಾದರೆ, 'ಆತ್ಮ' ಅದರ ಅಮರ್ತ್ಯ ಭಾಗವಾಗುತ್ತದೆ. ಮಹಾಭಾರತದಲ್ಲಿನ (XII, 169, 28 Bhandarkar Research Institute Edition) ಈ ಮಾತುಗಳನ್ನು ಗಮನಿಸಿ :

ಅಮೃತಂ ಚೈವ ಮೃತ್ಯುಶ್ಚ
ದ್ವಯಂ ದೇಹೇ ಪ್ರತಿಷ್ಠಿತಮ್ ;

ಮೃತ್ಯುರಾಪಾದ್ಯತೇ ಮೋಹಾತ್
ಸತ್ಯೇನಾಪಾದ್ಯತೇಽಮೃತಮ್—

*ಪ್ರತಿಯೊಬ್ಬ ವ್ಯಕ್ತಿಯ ದೇಹದಲ್ಲೂ ಮರ್ತ್ಯತೆ, ಅಮೃತತ್ವಗಳು ಪ್ರತಿಷ್ಠಿತವಾಗಿರುತ್ತವೆ; ಮೋಹದ ಸೆಳೆತಕ್ಕೆ ಸಿಕ್ಕಾಗ ಸಾವು ; ಸತ್ಯವನ್ನು ಗುರಿಯಾಗಿಟ್ಟುಕೊಂಡು ನಡೆದರೆ ಅಮೃತತ್ವ ಸಿದ್ಧಿಯಾಗುತ್ತದೆ*

ನಾವೆಲ್ಲರೂ ಧ್ಯಾನ ಮಾಡುವಾಗ ಹೀಗೆ ನಮ್ಮ ಮನೋದೈಹಿಕ ಶಕ್ತಿಗಳನ್ನು ಹಿಂದುಮುಂದಾಗಿ ತಿರುಗಿಸುವ ಪ್ರಯತ್ನ ಮಾಡುತ್ತೇವೆ. ಅದು ಅತ್ಯಂತ ಕಠಿಣವಾದ ಕೆಲಸ ; ನಿಧಾನವಾಗಿ, ನಿರಂತರ ಸಾಧನೆಯ ಮೂಲಕ, ಬಹಿರ್ಮುಖವಾಗಿ ಎತ್ತೆತ್ತಲೋ ಎಳೆಯುವ ನಮ್ಮ ಇಂದ್ರಿಯಗಳ ನಿಗ್ರಹ ದಿಂದ ಮಾತ್ರ ಇದನ್ನು ಸಾಧಿಸಬಹುದು.

ಶಂಕರಾಚಾರ್ಯರು (ಕ್ರಿ.ಶ. ೭೮೮-೮೨೦) ಈ ವಾಕ್ಯಗಳ ಮೇಲೆ ಭಾಷ್ಯ ಬರೆಯುತ್ತಾ ಈ ಸಾಧನೆಯನ್ನು ವಸ್ತುಪ್ರಪಂಚದಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳ ಪಾತ್ರವನ್ನು ಪೂರ್ವದಿಕ್ಕಿಗೆ ತಿರುಗಿಸುವ, ಪೂರ್ವಾಭಿಮುಖವಾಗಿ ಹರಿಯುವವನ್ನು ಪಶ್ಚಿಮ ದಿಕ್ಕಿನತ್ತ ತಿರುಗಿಸುವ ಎಂಜಿನಿಯರಿಂಗ್ ತಂತ್ರದೊಡನೆ ಹೋಲಿಸುತ್ತಾರೆ. ಉಪನಿಷತ್ ವಾಕ್ಯಗಳಲ್ಲಿ ಇಂಥ ತಂತ್ರವನ್ನು ಧ್ಯಾನಚಿಂತನೆಗಳಿಗೆ ಪ್ರಯೋಗಿಸಿದ ವ್ಯಕ್ತಿಯನ್ನು 'ಕಶ್ಚಿತ್ ಧೀರಃ' ಎಂದಷ್ಟೇ ವರ್ಣಿಸಲಾಗಿದೆ— ಆ ಯಾವನೋ ವಿವೇಕಿ, ಧೀರ, ಒಬ್ಬ ಅಸಾಧಾರಣ ಅಜ್ಞಾತ ಅಗ್ರಗಾಮಿ, ಮಾರ್ಗದರ್ಶಕ. ವಿಜ್ಞಾನ ಕ್ಷೇತ್ರದಲ್ಲಿಯೂ ಹಲವು ಅಂಥ ಅಜ್ಞಾತ, ಆದರೆ ಕ್ರಾಂತಿಕಾರಕ ಅಗ್ರಗಾಮಿಗಳು ಆಗಿ ಹೋಗಿದ್ದಾರಷ್ಟೆ. ಬೆಂಕಿಯನ್ನು ಯಾರು ಕಂಡುಹಿಡಿದರು ? ಚಕ್ರವನ್ನು ಕಂಡುಹಿಡಿದವನು ಯಾರು ? ಅದೇ ರೀತಿ, 'ಆತ್ಮ' ಎಂಬ ಕಲ್ಪನೆಯ ಪಥವನ್ನು ಗುರುತಿಸಿದವನು ಯಾರು ? ಅವನೊಬ್ಬ ಧೀರಚೇತನ, ಒಬ್ಬ 'ಕಶ್ಚಿತ್ ಧೀರ'. ಅವನು ತನ್ನ ಮುಂಚೂಣಿ ಸಾಹಸಗಳಿಂದ, ಪ್ರಚಂಡ ವೈಜ್ಞಾನಿಕ ಹಾಗೂ ಮಾನವೀಯ ಅರ್ಥವಂತಿಕೆಯಿಂದ ಕೂಡಿದ, ಚೈತನ್ಯ, ಸಾರ್ಥಕ್ಯ, ಎದೆಗಾರಿಕೆ, ಹೃದಯವಂತಿಕೆಗಳಿಂದ ತುಂಬಿದ, ಅಜ್ಞಾತ ಅಲೌಕಿಕ ಪ್ರಪಂಚವನ್ನೇ ತೆರೆದು ತೋರಿಸಿದ. ಮರ್ತ್ಯ ದೊಳಗಿನ ಅಮರ್ತ್ಯವನ್ನು, ಅನಿತ್ಯದೊಳಗಿನ ನಿತ್ಯವನ್ನು ಕಂಡುಹಿಡಿದ. ಅದು ಮಾನವಾಂತಃ ಕರಣವು ಸಾಧಿಸಿದ ಲೋಕೋತ್ತರ ಅನ್ವೇಷಣೆಯಾಗಿತ್ತು.

ಪರಿವರ್ತನಶೀಲವಾದ ಈ ಲೋಕದಲ್ಲಿ ಸ್ಥಿರವಾದುದು ಏನಾದರೂ ಇದೆಯೇ ಎಂದು ಮಾನವ ಹೃದಯ ಪದೇಪದೇ ಪ್ರಶ್ನಿಸುತ್ತದೆ. ನಮ್ಮ ಇಂದ್ರಿಯಗಳಿಗೆ ಗೋಚರವಾಗುವುದು ನಮಗೆ ಅತಿ ಹತ್ತಿರವಿರುವ ಈ ಭೂಲೋಕದ ಅಸ್ಥಿರತೆ, ಪರಿವರ್ತನೆಗಳು, ಚಂಚಲತೆಗಳು ಮಾತ್ರ. ಆದರೆ ನಮ್ಮಿಂದ ಬಹುದೂರದ ದಿವ್ಯಲೋಕದಲ್ಲಿನ್ನೂ ಹೆಚ್ಚಿನ ಬದಲಾವಣೆಗಳನ್ನು ನೋಡಬಹುದು. ಆದ್ದರಿಂದ ನಮ್ಮ ಹೊರಗಿನ ಪ್ರಕೃತಿಲೋಕದಲ್ಲಿ ಸ್ಥಿರತೆಯನ್ನೂ (ನಿತ್ಯತೆಯನ್ನೂ) ಹುಡುಕುವುದು ವ್ಯರ್ಥ. ಅಂಥ ಸ್ಥಿರ ನಾಭಿ ಅಥವಾ ಕೇಂದ್ರಬಿಂದುವೇನಾದರೂ ಪ್ರಕೃತಿಯಲ್ಲಿ ಇರುವುದಾದರೆ ಅದನ್ನು ನಾವು ಪ್ರಕೃತಿಯ ಒಳ ಇರುವಿನಲ್ಲಿ ಹುಡುಕಬೇಕು—ಪ್ರಕೃತಿಯ ವಿಕಾಸಕ್ರಮದಲ್ಲಿ ರೂಪು ಗೊಂಡ ಅತ್ಯುತ್ಕೃಷ್ಟ ನಿರ್ಮಿತಿಯಾದ ಮಾನವನ ಮೂಲಕ ಆ ಸ್ಥಿರ ಕೇಂದ್ರಬಿಂದುವನ್ನು ಅನ್ವೇಷಿಸ ಬೇಕು. ಸ್ಥಿರವಾದುದು ಏನೂ ಅದರಲ್ಲಿಲ್ಲ ಎಂದು ಕಂಡುಬಂದರೆ, ಈ ವಿಶ್ವದಲ್ಲಿ ದೇವರೆಂಬ ಕಲ್ಪನೆಗೆ ಹೊಂದುವಂಥದು ಅದರಲ್ಲಿ ಏನೂ ಇಲ್ಲವೆಂದು ನಾವು ಧೈರ್ಯವಾಗಿ ನಿರ್ಣಯಿಸಬಹುದು. ಎಲ್ಲವೂ ಸಾವು-ಅಳಿವುಗಳಿಗೆ ಒಳಪಡುತ್ತವೆ. ದೇವತಾಶಾಸ್ತ್ರಗಳು ನಿರ್ವಿಕಾರ ದೈವವನ್ನು ಬ್ರಹ್ಮಾಂಡದ ಆಚೆ ಸ್ಥಾಪಿಸಿದಾಗ ಆಧುನಿಕ ವೈಜ್ಞಾನಿಕ ಚಿಂತಕರು ಅಂಥ ಕಲ್ಪನೆಯನ್ನು ಪ್ರಶ್ನಿಸುತ್ತಾರೆ. ಇಂಥ ಬ್ರಹ್ಮಾಂಡಾತೀತ ಬ್ರಹ್ಮ, ಸೃಷ್ಟಿಕರ್ತ ಬ್ರಹ್ಮನ ಕಲ್ಪನೆ ಕಟುವಾದ ವಿವಾದಕ್ಕೊಳಗಾಗಿದ್ದು ಇತ್ತೀಚಿನ ಕಾಲದಲ್ಲಿ 'ದೇವರು ಸತ್ತುಹೋಗಿದ್ದಾನೆ' ಎಂಬ ತೀರ್ಮಾನಕ್ಕೆ ದಾರಿ ಮಾಡಿಕೊಟ್ಟಿದೆ.

ಹಿಂದಿನ ಸೋವಿಯತ್ ಒಕ್ಕೂಟದ ನಾಯಕ ದಿವಂಗತ ಕ್ರುಷ್ಚೆವ್ ಒಮ್ಮೆ ನಿಷ್ಠುರವಾಗಿ ಹೇಳಿದ : 'ನಾವು ಮೊದಲ ಸಲ ನಮ್ಮ ಅಂತರಿಕ್ಷ ಯಾತ್ರಿಗಳನ್ನು ಗಗನಕ್ಕೆ ಕಳುಹಿಸಿದಾಗ ಅವರು ಅಲ್ಲಿ ದೇವರನ್ನು ಹುಡುಕಿ, ನಿಷ್ಫಲರಾಗಿ ಹಿಂತಿರುಗಿದರು. ಎರಡನೆಯ ಸಲ ನಾವು ಇನ್ನೊಂದು ತಂಡವನ್ನು ಕಳುಹಿಸಿದಾಗ ಅವರು ಸಹ ಗಗನದಲ್ಲೆಲ್ಲಾ ಹುಡುಕಿ ಅಲ್ಲೆಲ್ಲೂ ದೇವರನ್ನು ಕಾಣದೆ ಹಿಂತಿರುಗಿದರು.' ಆದರೆ ಭಾರತದ ಪುರಾತನ ತತ್ವಶಾಸ್ತ್ರವಾದ 'ವೇದಾಂತ'ವು ಮಾತ್ರ ನಿರ್ವಿಕಾರವೂ, ಅವಿನಾಶಿಯೂ ಆದ ದೈವವನ್ನು ಬ್ರಹ್ಮಾಂಡದಾಚೆ ಸ್ಥಾಪಿಸುವ, ಆಮೇಲೆ ಅದನ್ನು ಅತಿಲೌಕಿಕ, ಅದ್ಭುತ ಶಕ್ತಿಯೆಂಬ ಅವೈಜ್ಞಾನಿಕ ಕಲ್ಪನೆಯ ಮೂಲಕ ಸಮರ್ಥಿಸುವ, ಪ್ರಮಾದವೆಸಗಲಿಲ್ಲ. ಉಪನಿಷತ್ತಿನ ಋಷಿಗಳು ನಿರ್ಜರ ದೈವಿಕ ಶಕ್ತಿಯನ್ನು ಪ್ರಕೃತಿಯ ಒಳಗೇ, ಮಾನವ ಹೃದಯದಲ್ಲೇ ಕಂಡುಕೊಂಡರು. ಅದು ಬ್ರಹ್ಮಾಂಡದ ಕೇಂದ್ರ ಚೇತನ, ಮಾನವ ಹೃದಯಾಂತರಾಳದ ಜೀವಶಕ್ತಿ, ಎಂಬುದನ್ನು ಸ್ಥಿರಪಡಿಸಿದರು.

'ಕಶ್ಚಿತ್ ಧೀರ'ನು ಕ್ರಮಬದ್ಧವಾಗಿ ಪರೀಕ್ಷಿಸಿ ಕಂಡುಹಿಡಿದು, ಮಾನವ ಶಕ್ತಿ ಸಾಧ್ಯತೆಗಳೆಂಬ ವಿಜ್ಞಾನ ಕ್ಷೇತ್ರದಲ್ಲಿ ಹೊಸದೊಂದು ಹಾದಿಯನ್ನೇ ತೋರಿಸಿಕೊಟ್ಟನು.

ಈ 'ಆವೃತ್ತ ಚಕ್ಷು'ವಿನ ತಂತ್ರ ಹಾಗೂ ಅದರ ಆಧ್ಯಾತ್ಮಿಕ ಸಿದ್ಧಿಯನ್ನೇ ಕಠೋಪನಿಷತ್ತಿನಲ್ಲಿ 'ಯೋಗ'ವೆನ್ನುತ್ತಾರೆ (ಕಠೋಪನಿಷತ್ತು, ೬.೧೦-೧೧) :

ಯದಾ ಪಂಚಾವತಿಷ್ಠಂತೇ
ಜ್ಞಾನಾನಿ ಮನಸಾ ಸಹ
ಬುದ್ಧಿಶ್ಚ ನ ವಿಚೇಷ್ಟತೇ
ತಮಾಹುಃ ಪರಮಾಮ್ ಗತಿಮ್ ;
ತಮ್ ಯೋಗಮಿತಿ ಮನ್ಯಂತೇ—

*ಪಂಚೇಂದ್ರಿಯಗಳು ಹಾಗೂ ಮನಸ್ಸು ಯಾವಾಗ ಸ್ಥಿರವೂ ಸ್ತಿಮಿತವೂ ಆಗಿ, ಬುದ್ಧಿಯೂ ಸಹ ಚಂಚಲಗೊಳ್ಳದೆ ನಿಲ್ಲುವುದೋ ಅದನ್ನೇ ಋಷಿಗಳು ಅತ್ಯುನ್ನತ 'ಯೋಗಾವಸ್ಥೆ' ಎನ್ನುತ್ತಾರೆ.*

ಉಪನಿಷತ್ತುಗಳ ನಂತರ ೧೦೦೦ ವರ್ಷಗಳ ಮೇಲೆ, ಕ್ರಿ.ಪೂ. ೬ನೆಯ ಶತಮಾನದಲ್ಲಿ ಮಹಾತ್ಮ ಬುದ್ಧನು ಒಂದು ಪ್ರಶಾಂತ ಹುಣ್ಣಿಮೆರಾತ್ರಿ ಬೋಧಿ ವೃಕ್ಷದಡಿ ಕುಳಿತು ತಪಸ್ಸು ಮಾಡುವಾಗ ಕಂಡುಹಿಡಿದುದು ಸಹ ಈ ಯೋಗ ತಂತ್ರವನ್ನೇ. ಅವನು ತನ್ನ ಮನೋದೈಹಿಕ ಶಕ್ತಿ ಎಲ್ಲವನ್ನು ಹಿಂದುಮುಂದಾಗಿ ತಿರುಗಿಸಿ, ಆಳವಾದ ಯೋಗನಿದ್ರೆಯಲ್ಲಿರುವಾಗ ಮರ್ತ್ಯದೊಳಗೆ ಅಡಗಿದ ಅಮೃತತತ್ವವನ್ನು ಕಂಡುಹಿಡಿದ.

## ೭. 'ತತ್ ತ್ವಮ್ ಅಸಿ'

ಮಾನವಕೋಟಿಯ ಒಳಿತಿಗಾಗಿ ಕಂಡುಹಿಡದ ಈ ಸತ್ಯವನ್ನೇ ಉಪನಿಷತ್ತಿನ ಋಷಿಗಳು 'ಶ್ವೇತಾಶ್ವತರ ಉಪನಿಷತ್ತಿ'ನಲ್ಲಿ ಪ್ರಸ್ತಾಪಿಸಿದ್ದಾರೆ (ಅದನ್ನು ಈಗಾಗಲೇ ನಾನು ನೆನ್ನೆ ಬೆಳಗಿನ ಉಪನ್ಯಾಸದಲ್ಲಿ ವಿವರಿಸಿದ್ದೇನೆ) : ಶೃಣ್ವಂತು ವಿಶ್ವೇ ಅಮೃತಸ್ಯಪುತ್ರಾಃ —ಮನುಷ್ಯನು ಪಾಪದ ಅಥವಾ ಭ್ರಮೆಯ ಕೂಸಲ್ಲ, ಅಮೃತ ಪುತ್ರರೇ ಕೇಳಿ ! ಅವನು ಅಮೃತತತ್ವದ ಪುತ್ರ. ಅವನಿಗೆ ಸತ್ಯವನ್ನು ಮನಗಾಣಬಲ್ಲ ದೈವಿಕ ಶಕ್ತಿ ಇದೆ. ಅಂತಿಮವಾಗಿ ಮನುಷ್ಯನ ಒಳ ಬದುಕೆಂಬುದು ತನ್ನೊಳಡಗಿದ ಪರಮ ಸತ್ಯದೆಡೆಗೆ ಸಾಗುವ ಅಂತರಂಗ ಯಾತ್ರೆ. ಇಂಥ ಯಾತ್ರೆ ಕೈಕೊಳ್ಳುವುದರ ಮೂಲಕ ಅವನ ದೈವಿಕಶಕ್ತಿ ಸಾಧ್ಯತೆಗಳು ವಿಕಾಸಗೊಳ್ಳುತ್ತವೆ ; ಅವನ ಒಳ ಬದುಕು ಹಾಗೂ ಅಂತರ್‌ಮಾನವ ಸಂಬಂಧಗಳು ಅತ್ಯಂತ ಉಪಯುಕ್ತ ರೀತಿಯಲ್ಲಿ ಪ್ರಭಾವಗೊಳ್ಳುತ್ತವೆ.

ಈ ಹಿಂದೆ ಆಗಲೇ ನಾನು ಛಾಂದೋಗ್ಯೋಪನಿಷತ್ತಿನ 'ತತ್ ತ್ವಮ್ ಅಸಿ' ಎನ್ನುವ ಸಂಕ್ಷಿಪ್ತ ಶಬ್ದಗಳಲ್ಲಿ ಅಡಗಿರುವ ಮಹತ್ವದ ಸಂದೇಶವನ್ನು ಕುರಿತು ಹೇಳಿ ಆಗಿದೆ. ಇವು ಗುರುವೂ ತಂದೆಯೂ ಆದ ಆರುಣಿ ಎಂಬುವನು ಶ್ವೇತಕೇತು ಎಂಬ ತನ್ನ ಮಗನಿಗೆ ಹೇಳಿದ ಮಾತುಗಳು. ಎಲ್ಲಾ ಸತ್ಯಗಳಾಚೆಯ ಸತ್ಯವನ್ನು ತನ್ನ ಮಗನಿಗೆ ಸ್ಪಷ್ಟೀಕರಿಸುತ್ತಾ ಆರುಣಿ ಹೇಳುತ್ತಾನೆ : (VI. 8.7)

ಸ ಯ ಈಶೋ ಅಣಿಮಾ ಐತತ್ ಆತ್ಮ್ಯಮಿದಂ ಸರ್ವಮ್ ;
ತತ್ ಸತ್ಯಮ್, ಸ ಆತ್ಮಾ, ತತ್‌ತ್ವಮ್ ಅಸಿ, ಶ್ವೇತಕೇತೋ—

*ಈ ಸತ್ಯ ಅತಿ ಸೂಕ್ಷ್ಮವಾದುದು. ಈ ಬ್ರಹ್ಮಾಂಡವು ತನ್ನೊಳಗಿರಿಸಿಕೊಂಡಿರುವುದು ಇದನ್ನೇ; ಇದೇ ಸತ್ಯ ; ಅದೇ 'ಆತ್ಮನ್ ಎಂಬುದು ; ಅದು ನೀನೇ, ಶ್ವೇತಕೇತೂ!—*

ಮನುಷ್ಯನನ್ನು ಇಂದ್ರಿಯಗಳ ದೃಷ್ಟಿಯಿಂದ ನೋಡುವಾಗ ಅವನು ಒಂದು ಪರಿಮಿತ, ಸಾವಯವ ರಚನೆಯಾಗಿ ತೋರುತ್ತಾನೆ. ವೇದಾಂತ ಹೇಳುತ್ತದೆ—ಇದು ಕೇವಲ ಮೇಲ್ಮೈ ನೋಟ, ಮನುಷ್ಯನ ಜೀವಕೋಶಗಳು ಉತ್ಪನ್ನವಾದಾಗ ಪ್ರಜ್ಞೆಯು ಪತ್ತೆಮಾಡಲು ಸಾಧ್ಯವಾದ ದತ್ತಾಂಶವಾಗಿ ಕಾಣಿಸಿಕೊಂಡಿತು. ಆಗ ಅದು ಇಂದ್ರಿಯಗಳ ವಿಕಾಸ ಕ್ರಿಯೆಯ ಘಟ್ಟವನ್ನು ಪ್ರಾರಂಭಿಸಿತು. ಪ್ರಜ್ಞೆಯ ದತ್ತಾಂಶವು ಆತ್ಮ-ಪ್ರಜ್ಞೆಯಾಗಿ ವಿಕಾಸಗೊಂಡಿತು. ಇಂದ್ರಿಯ ವಿಕಾಸಕ್ರಿಯೆಯ ಅತ್ಯುತ್ಕೃಷ್ಟ ಸ್ವರೂಪವಾದ ಮಾನವನ ಉದಯವಾದಾಗ ಅದು ಸಾಧ್ಯವಾಯಿತು.

ಆತ್ಮ-ಪ್ರಜ್ಞೆಯ ದತ್ತಾಂಶವನ್ನು ಪರೀಕ್ಷಿಸಿದಾಗ ಅದು ಮನುಷ್ಯನಲ್ಲಿರುವ ಪ್ರಕೃತಿಯ ಪ್ರತ್ಯಕ್ ರೂಪ, ಅದರಿಂದ ಸಕಲ ಮಾನವ ಪ್ರಕೃತಿಗಳೊಳಗಿನ ಪರಿಶುದ್ಧ ಪ್ರಜ್ಞಾರೂಪದ ಅದ್ವೈತವನ್ನೂ ಸಂಪೂರ್ಣತೆಯನ್ನೂ ಕಂಡುಹಿಡಿಯಲು ಸಾಧ್ಯವಾಯಿತು.

ಅಶಾಶ್ವತವಾದುದರೊಳಗಿನ ಶಾಶ್ವತ ವಸ್ತುವಿನ ಅನುಸಂಧಾನ ಅದು—ಅದು ಅಲೆಗಳೊಳಗಿನ ಕಡಲು, ಆಧುನಿಕ ಭೌತವಿಜ್ಞಾನ ಹೇಳುವ, ಶಕ್ತಿಯ ಕಣಗಳೊಳಗಿನ ಶಕ್ತಿಕ್ಷೇತ್ರ.

ಮನುಷ್ಯನ ಕುರಿತ 'ತತ್‌ತ್ವಮ್ ಅಸಿ' ಎನ್ನುವ ಸತ್ಯದ ಕಲ್ಪನೆ ಹಲವು ಆಧುನಿಕ ವಿಜ್ಞಾನಿಗಳಿಗೆ ಸ್ಫೂರ್ತಿಯಾಗಿದೆ.

ಅದಕ್ಕೆ ಹಿಂದೆಯೂ, ಕೆಲವು ವಿಜ್ಞಾನಿಗಳು ಈ ಕಲ್ಪನೆಯ ಕುರಿತು ಸೂಕ್ಷ್ಮ ಸೂಚನೆ ಸಲಹೆಗಳನ್ನು ವ್ಯಕ್ತಪಡಿಸಿದ್ದರು. ಅಂಥವರಲ್ಲಿ ೧೭ನೆಯ ಶತಮಾನದ ಫ್ರೆಂಚ್ ತತ್ತ್ವಶಾಸ್ತ್ರಜ್ಞ ಬ್ಲೆಜ್ ಪ್ಯಾಸ್ಕಲ್ ಒಬ್ಬನು. ಪ್ರಿನ್ಸ್ ಲೂಯಿ ಡಿ ಬ್ರೋಗ್ಲಿ ಎಂಬ ಪರಮಾಣು ವಿಜ್ಞಾನಿಯು Mirror ಎಂಬ ಲಂಡನ್ ನಿಯತಕಾಲಿಕ ಪತ್ರಿಕೆಯಲ್ಲಿ ಪ್ರಕಟಿಸಿದ 'ಪರಿಶುದ್ಧ ವಿಜ್ಞಾನದ ಕಾವ್ಯಮಯತೆ' (The Poetry of Pure Science) ಎಂಬ ಲೇಖನದಲ್ಲಿ ಪ್ಯಾಸ್ಕಲ್‌ನ ಪ್ರಸಿದ್ಧ ವಾಕ್ಯಗಳನ್ನುಲ್ಲೇಖಿಸಿದ್ದ :

*ಆಕಾಶದಲ್ಲಿ ಈ ಬ್ರಹ್ಮಾಂಡವು ನನ್ನನ್ನು ಸಂಪೂರ್ಣವಾಗಿ ನುಂಗಿ ನನ್ನನ್ನು ಒಂದು ಸೂಜಿಮೊನೆಯಷ್ಟು ಪ್ರಮಾಣಕ್ಕೆ ಇಳಿಸಿಬಿಡುತ್ತದೆ ; ಆದರೆ ನಾನು ನನ್ನ ಚಿಂತನಾಶಕ್ತಿಯ ಮೂಲಕ ಆ ಬ್ರಹ್ಮಾಂಡವನ್ನು ಅರ್ಥಮಾಡಿಕೊಳ್ಳುತ್ತೇನೆ.*

ಮತ್ತೆ ಈ ವಾಕ್ಯಗಳಿಗೊಂದು ಟಿಪ್ಪಣಿ ಸೇರಿಸುತ್ತಾ ಹೀಗೆನ್ನುತ್ತಾನೆ: 'ಈ ಭವ್ಯ ಶ್ಲೇಷೆಯೊಳಗೆ ಪರಿಶುದ್ಧ ವಿಜ್ಞಾನದ ಕಾವ್ಯಮಯತೆ ಹಾಗೂ ಅದರ ಉನ್ನತ ಬೌದ್ಧಿಕ ಮೌಲ್ಯಗಳೆರಡೂ ಸೇರಿವೆ.'

ಭೌತಿಕ ದೃಷ್ಟಿಯಲ್ಲಿ ಮನುಷ್ಯನು ಈ ಅಗಾಧ ಬ್ರಹ್ಮಾಂಡದ ಒಂದು ಧೂಳಿನ ಕಣ ; ಆದರೆ ಈ ಬ್ರಹ್ಮಾಂಡದ ಅಗಾಧತೆಯನ್ನು ಅರಿತು ಗ್ರಹಿಸಬಲ್ಲ ಯಾವುದೋ ಶಕ್ತಿ ಅವನಲ್ಲಿದೆ. ಚಿಂತನಾ ಶೀಲನಾದ ಅವನು ನಿಸರ್ಗವನ್ನು ಅರ್ಥಮಾಡಿಕೊಳ್ಳುತ್ತಾನೆ; ಆ ಶಕ್ತಿಯು ಅವನ ಗಾಢ ಆಯಾಮ ವನ್ನು ಸೂಚಿಸುತ್ತದೆ. ಆದರೆ ಆತ್ಮಸ್ವರೂಪಿಯಾದ ಅವನ ಆಯಾಮ ಅನಂತ, ಅಮರ್ತ್ಯ; ಅದು ಅವನ ಅತ್ಯಂತ ಸೂಕ್ಷ್ಮವೂ ಗಾಢವೂ ಆದ ಆಯಾಮ ಎನ್ನುತ್ತದೆ ಭಾರತದ ಪುರಾತನ ವೇದಾಂತ.

೫೦ ವರ್ಷಗಳ ಹಿಂದೆ, ಬ್ರಿಟಿಷ್ ವಿಜ್ಞಾನಿ ಸರ್ ಆರ್ಥರ್ ಎಡ್ಡಿಂಗ್‌ಟನ್ ಬಿ. ಬಿ. ಸಿ. ಪ್ರಸಾರ ಭಾಷಣವೊಂದರಲ್ಲಿ ಈ ಪ್ರಶ್ನೆ ಕೇಳಿದರು : '(ಮನುಷ್ಯರಾದ) ನಾವು, ಸತ್ಯವಾಗಿ ಯಾರು ?' ಮುಂದುವರಿದು ಅವರೇ ಈ ಪ್ರಶ್ನೆಗೆ ಉತ್ತರ ಹೇಳಿದರು :

*ಇದಕ್ಕೆ ಅನೇಕ ರೀತಿಯ ಉತ್ತರಗಳನ್ನು ನೀಡಬೇಕೆನಿಸಬಹುದು: ನಿಜವಾಗಿ, (ಮನುಷ್ಯರಾದ) ನಾವು, ತಾರಾಮಂಡಲದಲ್ಲಿ ದಾರಿತಪ್ಪಿದ ಯಾವುದೋ ನಕ್ಷತ್ರವೊಂದರ ತುಣುಕು (ಧೂಳಿನ ಕಣ)*

ಈ ಮಾತಿನ ಅರ್ಥವೇನು ? ಮಿಲಿಯಗಟ್ಟಲೆ ವರ್ಷಗಳ ಹಿಂದೆ, ಒಂದು ನಕ್ಷತ್ರ, ಸ್ವಲ್ಪಕಾಲ, ಸೂರ್ಯನ ಹತ್ತಿರಕ್ಕೆ ಬಂದಿರಬಹುದು ; ತನ್ನ ಗುರುತ್ವಾಕರ್ಷಣೆಯಿಂದಾಗಿ ಸೂರ್ಯನು ಬೃಹತ್ ಪ್ರಮಾಣದಲ್ಲಿ ತೇಜಃಪುಂಜ ತುಣುಕುಗಳನ್ನು ಹೊರಚೆಲ್ಲಿದ. ಅವು ಸೂರ್ಯನ ಸುತ್ತ ಪರಿಭ್ರಮಣ ಮಾಡುತ್ತಿದ್ದು, ಕಟ್ಟಕಡೆಯಲ್ಲಿ ಗ್ರಹಗಳಾದವು. ಅಂಥ ಒಂದು ಗ್ರಹವಾದ ಭೂಮಿಯ ಮೇಲೆ ಜೀವಿಗಳು ಹುಟ್ಟಿ, ಮಿಲಿಯಗಟ್ಟಲೆ ವರ್ಷಗಳ ಕಾಲ ವಿಕಾಸ ಹೊಂದಿದವು—ತತ್ಫಲವಾಗಿ ನಾನು, ನೀವು ಎಲ್ಲರೂ ಜೀವ ತಾಳಿದೆವು. ಇದು ೧೯ನೆಯ ಶತಮಾನದ ಖಗೋಳ ವಿಜ್ಞಾನದ ದೃಷ್ಟಿಯಿಂದ ಲಭಿಸಿದ ಉತ್ತರ : 'ನಾವು ತಾರಾಮಂಡಲದಲ್ಲಿ, ದಾರಿತಪ್ಪಿದ ಯಾವುದೋ ನಕ್ಷತ್ರವೊಂದರ ತುಣುಕು'. ಅದಾದ ಮೇಲೆ ಅವರು (ಸರ್ ಎಡ್ಡಿಂಗ್‌ಟನ್) ೧೯ನೆಯ ಶತಮಾನದ (mechanistic) ಜೈವ ಯಾಂತ್ರಿಕವಾದದ ದೃಷ್ಟಿಗೆ ತೋರಿರಬಹುದಾದ ಇನ್ನೊಂದು ಉತ್ತರವನ್ನು ಪ್ರಸ್ತುತ ಪಡಿಸುತ್ತಾ 'ನಾವು ಜಟಿಲವಾದ ಭೌತಿಕ ಯಂತ್ರಗಳು—ಕೆಳಗೆ ನಿಂತು, ಕಾಲನ ಕೈ ತಿರುಗಿಸುತ್ತಿರುವ ಗೊಂಬೆಗಳು—ಬಿಂಕದಿಂದ ಸಡೆತು ನಡೆಯುವ, ನಗುವ, ಮಾತನಾಡುವ ಗೊಂಬೆಗಳು, ನಾವು.'

ಇದು ೧೯ನೆಯ ಶತಮಾನದ ವಿಜ್ಞಾನಕ್ಷೇತ್ರದಲ್ಲಿ ಬಹುವ್ಯಾಪಕವಾಗಿ ಹರಡಿ ಹಲವು ವಿಜ್ಞಾನಿಗಳ ಮೇಲೆ ಪ್ರಬಲ ಪ್ರಭಾವ ಬೀರಿದ, ಪ್ರಕೃತಿ-ಮಾನವರನ್ನು ಕುರಿತ, ತಾತ್ತ್ವಿಕ ಚಿಂತನೆ—ಇದು ಈ ೨೦ನೆಯ ಶತಮಾನದ ವಿಜ್ಞಾನಿಗಳ ಮೇಲೆಯೂ ಪ್ರಭಾವ ಬೀರುತ್ತಿದೆ. ಆದರೆ ಎಡ್ಡಿಂಗ್‌ಟನ್ ಮನುಷ್ಯನನ್ನು ಜ್ಞೇಯ ವಸ್ತುವಿನ ಜ್ಞೇಯ ವಸ್ತುವನ್ನಾಗಿ ಪರಿಗಣಿಸದೆ, ಅಂತಿಮವಾಗಿ, ಅಗಾಧ ಸತ್ಯಾಂಶವೊಂದರ ಸೂಚನೆ ನೀಡುತ್ತಾ ಹೀಗೆನ್ನುತ್ತಾರೆ :

*ಆದರೆ ನಾವು ಮರೆಯಬಾರದು—ಒಂದು ಮೂಲಭೂತ, ಅನಿವಾರ್ಯ ಉತ್ತರವೊಂದಿದೆ: ಯಾವುದು ಪ್ರಶ್ನೆಯನ್ನು ಕೇಳುವುದೋ ಅದು ನಾವೇ ಆಗಿದ್ದೇವೆ.*

ಹೀಗೆ, ನಾವು ಜ್ಞಾತೃವೇ ಹೊರತು ಜ್ಞೇಯ ವಸ್ತುವಲ್ಲ—ನಾನು 'ಅಹಂ'—'ಅಹಂ'ನಿಂದ ವಿಭಿನ್ನವಾದ 'ಅದು' ಅಲ್ಲ. ಇದೊಂದೇ ವಾಕ್ಯದಲ್ಲಿ, ಎಡ್ಡಿಂಗ್‌ಟನ್, 'ಛಾಂದೋಗ್ಯೋಪನಿಷತ್ತು' ಮನುಷ್ಯನನ್ನು ಕುರಿತು ಹೇಳುವ ತತ್-ತ್ವಮ್-ಅಸಿ (ನೀನು 'ಅದೇ' ಆಗಿರುವೆ) ಎನ್ನುವ ಅರ್ಥಪೂರ್ಣ ಕಲ್ಪನೆಯನ್ನು ಪ್ರತಿಧ್ವನಿಸುತ್ತಾರೆ.

ಪರಮಾಣು ವಿಜ್ಞಾನಿ, ಎರ್ವಿನ್ ಷ್ರೋಡಿಂಜರ್, ನೇರವಾಗಿ, 'ಛಾಂದೋಗ್ಯೋಪನಿಷತ್ತಿ'ನ ಈ ಮಾತನ್ನುಲ್ಲೇಖಿಸಿ ಹೇಳಿದ್ದಾರೆ (*What is Life ? Mind and Matter*, p. 93) : 'ಪುರಾತನ ಭವ್ಯ ಉಪನಿಷತ್ತುಗಳ ಕಾಲದಿಂದಲೂ 'ಆತ್ಮನ್' ಎಂದರೆ 'ಬ್ರಹ್ಮನ್' ('ಅಹಂ'=ನಾನೇ ಬ್ರಹ್ಮನ್= ಸರ್ವವ್ಯಾಪಿಯೂ, ಸರ್ವಜ್ಞನೂ, ಅನಂತನೂ ಆದ ಬ್ರಹ್ಮ) ಎನ್ನುವ ಮಾತು ಭಾರತೀಯ ತತ್ತ್ವಶಾಸ್ತ್ರ ಚಿಂತನೆಯಲ್ಲಿ ಎಂದೂ ಧರ್ಮನಿಂದೆಯಾಗಿರಲಿಲ್ಲ—ಮಾತ್ರವಲ್ಲ ಅದು ಈ ಬ್ರಹ್ಮಾಂಡದ ವ್ಯಾಪಾರಗಳನ್ನು ಕುರಿತು ನಡೆಸಿದ ಗಾಢ ಚಿಂತನೆಗಳ ಸಾರಸರ್ವಸ್ವವೆಂದೇ ಪರಿಗಣಿತ ವಾಗಿತ್ತು. ಶಬ್ದಗಳ ಉಚ್ಚಾರಣೆಯನ್ನು ಕಲಿತ ಮೇಲೆ ಈ ಅತ್ಯುನ್ನತ ಚಿಂತನೆಗಳನ್ನು ಮೈಗೂಡಿಸಿ ಕೊಳ್ಳಬೇಕೆನ್ನುವುದು ನಿಜವಾಗಿ ಎಲ್ಲಾ ವೇದಾಂತ ಪಂಡಿತರ ಮಹಾಪ್ರಯತ್ನವಾಗಿರುತ್ತಿತ್ತು.'

ಪ್ರಸಿದ್ಧ ಬ್ರಿಟಿಷ್ ಅಣುಜೀವ ವಿಜ್ಞಾನಿ (molecular biologist) ಪ್ರೊ. ಜೆ.ಬಿ. ಎಸ್. ಹಾಲ್ಡೆನ್ Unity and Diversity of Life (ಜೀವನದ ಏಕತೆ ಮತ್ತು ಅನೇಕತೆ) ಎಂಬ ವಿಷಯದ ಮೇಲೆ ನೀಡಿದ ಉಪನ್ಯಾಸ ಒಂದರಲ್ಲಿ (Quoted in *Religion in the Light of Reason and Science* by R. B. Lal, Pub. by The Bharatheeya Vidya Bhavan, Bombay, p. 43) ಹೀಗೆ ಹೇಳಿದರು :

*ಪ್ರೊ. ರೆನ್ಸ್ಟಿಚ್ ತಮ್ಮ ಪ್ರಾಣಿಶಾಸ್ತ್ರ ಪ್ರಯೋಗಾಲಯದಲ್ಲಿ ಜೀವಂತ ಪ್ರಾಣಿಗಳನ್ನಿಟ್ಟು ದೊಡ್ಡ ಕೊಠಡಿಯ ಗೋಡೆಗಳ ಮೇಲೆ 'ತತ್ತ್ವಮ್ ಅಸಿ' ಎಂಬ ವಾಕ್ಯವನ್ನು ಬರೆಸಿದ್ದರು. ಮಹತ್ವವುಳ್ಳ ಈ ಮಾತುಗಳನ್ನು ನೀವು ಅರ್ಥಮಾಡಿಕೊಳ್ಳಲು ನನ್ನಿಂದ ನಿಮಗೇನಾದರೂ ಪ್ರಯೋಜನವಾಗಿದ್ದರೆ, ನನ್ನ ಈ ಭಾಷಣಗಳು ವ್ಯರ್ಥವಾಗಿಲ್ಲವೆಂದು ಭಾವಿಸುತ್ತೇನೆ.*

ಇವತ್ತು ಬೆಳಗಿನ ಸಭೆಯಲ್ಲಿ ಶ್ರೀಮತಿ ಮೆಹ್ತಾ ಹಾಡಿದ ಶಂಕರಾಚಾರ್ಯರ ಶ್ಲೋಕದಲ್ಲಿ ಈ ಸತ್ಯವನ್ನು ವಿಷದಪಡಿಸಲಾಗಿದೆ. ಅದೇನೆಂದರೆ :

'ಚಿದಾನಂದರೂಪಃ, ಶಿವೋऽಹಂ ಶಿವೋऽಹಂ'—ಪರಿಪೂರ್ಣ ಜ್ಞಾನ ಮತ್ತು ಪರಿಶುದ್ಧ ಆನಂದದಿಂದ ಕೂಡಿರುವ ಶಿವನೇ ನಾನು, ನಾನೇ ಶಿವನು.'

### ಆ. ವೇದಾಂತ ಮತ್ತು ಮಾನವೀಯ ಶಕ್ತಿಯ ಸಾಧನ ಸಂಪತ್ತುಗಳ ವಿಜ್ಞಾನ

ಮನುಷ್ಯನಲ್ಲಿ ಇಂದ್ರಿಯಾತೀತ ಆಧ್ಯಾತ್ಮಿಕ ಆಯಾಮವಿದೆ. ಮಾನವ ವರ್ಗವು ವೈಯಕ್ತಿಕ ಸಾರ್ಥಕತೆ ಹಾಗೂ ಶಾಂತಿಯುತ ಅಂತರರಾಷ್ಟ್ರೀಯ ಸಾಮಾಜಿಕ ರಾಜಕೀಯ ವ್ಯವಸ್ಥೆಯನ್ನು ಸಾಧಿಸಬೇಕಾದರೆ ಹೆಚ್ಚು ಹೆಚ್ಚಾಗಿ ಇಂದಿನವರು ಮನುಷ್ಯನ ಆಂತರಿಕ ಆಧ್ಯಾತ್ಮಿಕತೆಯನ್ನು ಅರ್ಥಮಾಡಿಕೊಳ್ಳಬೇಕು. ಇಂಥ ಅಪೇಕ್ಷಣೀಯ ಸಾಧನೆಯನ್ನು ಕೇವಲ ಹೆಚ್ಚು ಹೆಚ್ಚು ಭೌತಿಕ ವಿಜ್ಞಾನ, ತಂತ್ರಜ್ಞಾನಗಳ ಮೂಲಕ ಕೈಗೂಡಿಸಿಕೊಳ್ಳಲು ಸಾಧ್ಯವಿಲ್ಲ. ಹೆಚ್ಚು ಹೆಚ್ಚು ಮಂದಿ ಸ್ತ್ರೀಪುರುಷರು ತಮ್ಮ ಬಾಹ್ಯಜೀವನದ ಸಂದರ್ಭದಲ್ಲಿ ತಮ್ಮ ಆಂತರಿಕ ಜೀವನಶಕ್ತಿಯನ್ನು ರೂಢಿಸಿಕೊಳ್ಳುವುದರಿಂದ ಮಾತ್ರ ಇದು ಸಾಧ್ಯ. ಹೀಗೆ ಒಳಬದುಕನ್ನು ಹಸನುಗೊಳಿಸಿಕೊಂಡಾಗ ಮಾನವ ವ್ಯಕ್ತಿತ್ವದಿಂದ ಹೆಚ್ಚು ಸೂಕ್ಷ್ಮವೂ, ಉತ್ಕೃಷ್ಟವೂ, ಆರೋಗ್ಯಕರವೂ ಆದ ಪ್ರೇಮ, ಶಾಂತಿ, ಕರುಣೆ, ನಿಷ್ಠೆ ಮುಂತಾದ ಅಂತಃಕರಣ ಶಕ್ತಿಗಳನ್ನು ವಿಕಾಸಗೊಳಿಸಿಕೊಳ್ಳಬಹುದು. ನೆನ್ನೆ ಬೆಳಿಗ್ಗೆ ನಾನು ಸೂಕ್ಷ್ಮವಾಗಿ ಪ್ರಸ್ತಾಪಿಸಿದ 'ಕಠೋಪನಿಷತ್ತಿ'ನ (೩, ೧೦ ಮತ್ತು ೧೧) ಶ್ಲೋಕಗಳಲ್ಲಿ, ಹಾಗೂ ಅದರ ಕುರಿತ ಶಂಕರಾಚಾರ್ಯರ ಟೀಕೆಯಲ್ಲಿ, ಮನುಷ್ಯನಲ್ಲಿ ಸುಪ್ತವಾಗಿರುವ ಶಕ್ತಿಸಾಧನ ಸಂಪತ್ತುಗಳ ಅನ್ವೇಷಣೆ ಇದೆ. ಅದನ್ನು ಇವತ್ತು ಸ್ವಲ್ಪ ಹೆಚ್ಚಾಗಿ ವಿವರಿಸಲಿದ್ದೇನೆ.... ಈ ಅನ್ವೇಷಣೆಯ ಮೂಲಕ ನಾವು ಮಾನವ ಶಕ್ತಿ ಸಾಧ್ಯತೆಯನ್ನು ಹಾಗೂ ಅದನ್ನು ಹೇಗೆ ರೂಢಿಸಿಕೊಳ್ಳಬೇಕೆಂಬುದನ್ನು ಅರಿಯಬಹುದು.

ನವಜಾತ ಶಿಶುವೊಂದನ್ನು ನೋಡಿ ; ಅದು ಎಷ್ಟು ಮೃದವಾಗಿದೆ, ನಿಸ್ಸಹಾಯಕವಾಗಿದೆ ! ಆದರೆ ಆ ಮಗುವಿನೊಳಗೆ ಎಷ್ಟು ಅಗಾಧ ಶಕ್ತಿಗಳು ಸುಪ್ತವಾಗಿವೆ, ಹಾಗೂ ಆ ಮಗುವು ಬೆಳೆದ ಹಾಗೆಲ್ಲ ಆ ಶಕ್ತಿಗಳು ಹೇಗೆ ಕೊಂಚಕೊಂಚವಾಗಿ ಅಭಿವೃದ್ಧಿಯಾಗುತ್ತ ಹೋಗುತ್ತದೆಂಬುದನ್ನು ಮಾನವನ ಬಗ್ಗೆ ಕೇವಲ ಅತ್ಯಲ್ಪ ಜ್ಞಾನವಿರುವ ನಾವೆಲ್ಲರೂ ಬಲ್ಲೆವು. ಇವತ್ತಿನ ಈ ಅಸಹಾಯಕ ಕೂಸು ನಾಳೆ ಒಲಿಂಪಿಕ್ ಓಟಗಾರನಾಗನೋ ಅಥವಾ ಮಹಮ್ಮದ್ ಅಲಿಯಂಥ ಮುಷ್ಟಿಕಾಳಗ ಪಟುವೋ ಇಲ್ಲವೇ ಒಬ್ಬ ಐನ್‌ಸ್ಟೀನನೋ, ಬುದ್ಧನೋ ಆಗಲು ಸಾಧ್ಯ. ಈ ಎಲ್ಲ ಸಾಧ್ಯತೆಗಳೂ ಆ ಮಗುವಿನಲ್ಲಡಗಿವೆ. ಭೌತಿಕ ಪ್ರಪಂಚದ ಸುಪ್ತ ಸಾಧ್ಯತೆಗಳನ್ನು ಕುರಿತು ನಡೆಯುತ್ತಿರುವ ಅದ್ಭುತ ಸಂಶೋಧನೆಗಳ ಹಿನ್ನೆಲೆಯಲ್ಲಿ ಮತ್ತು ಆ ಪ್ರಯತ್ನಗಳನ್ನೇ ಮುಂದುವರಿಸುವ ದಾರಿಯಲ್ಲಿ ವಿಜ್ಞಾನವು ಮನುಷ್ಯನ ಅಂತರಂಗವನ್ನು ಅನ್ವೇಷಿಸುವ ಸಾಧ್ಯತೆಗಳನ್ನು ವಿಚಾರ ಮಾಡಬೇಕು.

ಮೇಲೆ ಹೇಳಿದ ನವಜಾತ ಶಿಶುವಿನ ವಿಚಾರವಾಗಿ ನಾವು ಬಳಸಬೇಕಾದ ಶಬ್ದಗಳು 'ಆವಿರ್ಭಾವ', 'ಅಭಿವ್ಯಕ್ತಿ'. ಮಗುವಿನೊಳಗೇ ಇರುವ ಶಕ್ತಿಸಾಧ್ಯತೆಗಳು 'ಆವಿರ್ಭಾವ'ಗೊಳ್ಳಲು ನಾವು ಹೇಗೆ ನೆರವಾಗಬಲ್ಲೆವು ಎಂಬುದು ಇಲ್ಲಿ ಪ್ರಸ್ತುತ. ಶಿಕ್ಷಣದ ಧ್ಯೇಯವೇ ಅದು.... ಭೌತಿಕ ಹಾಗೂ ಬೌದ್ಧಿಕ ಆಯಾಮಗಳಾಚೆಯಲ್ಲಿನ ಆಧ್ಯಾತ್ಮಿಕ ಶಕ್ತಿಗಳನ್ನು ವೇದಾಂತವು ಹೇಳುವ ರೀತಿಯಲ್ಲಿ ಬೆಳೆಸಿ ಪಟುಗೊಳಿಸುವಂಥ ಸಾತತ್ಯ ಶಿಕ್ಷಣವನ್ನು ಅನುಗೊಳಿಸಬೇಕು. ಮನುಷ್ಯನ ದೇಹವು ಸ್ವಾಭಾವಿಕವಾಗಿ ಆರೋಗ್ಯ ಸ್ಥಿತಿಯಲ್ಲಿರುವುದರಿಂದ ರೋಗರುಜಿನಗಳೂ ಸಹ ಕೇವಲ ತಾತ್ಕಾಲಿಕ ಅಸ್ವಸ್ಥತೆ ಎನ್ನಲಾಗುತ್ತಿದೆ. ಮಾನಸಿಕ ಕಾಯಿಲೆಗಳು ಸಹ ಹಾಗೆಯೇ. ನಾವು ಮಾನಸಿಕವಾಗಿ ಅನಾರೋಗ್ಯ ಸ್ಥಿತಿಯಲ್ಲಿರುವಾಗ ಮನೋರೋಗ ಚಿಕಿತ್ಸಕನ ನೆರವು ಪಡೆಯುತ್ತೇವೆ. ಔಷಧೋಪಚಾರಗಳಿಂದ ನಮ್ಮ ರೋಗವನ್ನು ಗುಣಪಡಿಸಲು ಅವನು ಪ್ರಯತ್ನಿಸುತ್ತಾನೆ. ಆದರೆ ಆಧ್ಯಾತ್ಮಿಕತೆಯೆಂಬ ವಿಜ್ಞಾನವು ಮನುಷ್ಯ ಮಾನಸಿಕವಾಗಿ ಅಸ್ವಸ್ಥನಾಗುವುದನ್ನೇ ತಪ್ಪಿಸುತ್ತದೆ. ಅದು ಅವನ ಮನೋದೈಹಿಕ ವ್ಯವಸ್ಥೆಯ ಹಿಂದೆ ಅಡಗಿರುವ ಅತ್ಯುನ್ನತ, ಅತಿಸೂಕ್ಷ್ಮ ಶಕ್ತಿಗಳನ್ನು ಉದ್ದೀಪನಗೊಳಿಸುತ್ತದೆ. ಈ ವಿಜ್ಞಾನದ ತಂತ್ರದ ನೆರವಿನಿಂದ ಪ್ರತಿಯೊಬ್ಬನೂ ತನ್ನೊಳಗಿನ ಸತ್ಯ ಶಕ್ತಿಗಳನ್ನು ತಾನೇ ಕಂಡುಹಿಡಿದು, ಚೈತನ್ಯ, ನಿರ್ಭಯತೆ ಹಾಗೂ ಅಚಲ ವಿವೇಕಗಳನ್ನು ಬೆಳೆಸಿಕೊಳ್ಳಬಹುದು.

ಸಂಪನ್ಮೂಲಗಳೆಂಬ ಮಾತನ್ನು ನಾವು ಹೆಚ್ಚಾಗಿ ಹಣದ ಸಂಬಂಧದಲ್ಲೇ ಬಳಸುತ್ತೇವೆ ; ನಿನ್ನ ಬ್ಯಾಂಕ್ ಲೆಕ್ಕದಲ್ಲಿ ಸಾಕಷ್ಟು ಹಣ ಜಮಾ ಇದೆಯೇ ಎಂದು ನಾವು ಒಬ್ಬರನ್ನೊಬ್ಬರು ವಿಚಾರಿಸುತ್ತೇವೆ. ಅದು ಬಾಹ್ಯಸಂಪನ್ಮೂಲ ; ಅದಕ್ಕೆ ತಕ್ಕಷ್ಟು ಮೌಲ್ಯವಿದೆ. ಜ್ಞಾನದ ಬೌದ್ಧಿಕ ಸಂಪನ್ಮೂಲವೂ ಅದೇ ರೀತಿಯದು. ಆದರೆ ಮನುಷ್ಯ ಜೀವನದಲ್ಲಿ ಸುಖಶಾಂತಿ, ಸಂತೋಷ, ಪ್ರೇಮ-ಕರುಣೆ ಇವುಗಳನ್ನು ರೂಢಿಸಿಕೊಳ್ಳಲು ಕೇವಲ ಮೇಲೆ ಹೇಳಿದ ಸಂಪನ್ಮೂಲಗಳಷ್ಟೇ ಸಾಲದು, ಅವು ನಮ್ಮ ಚಿತ್ತವೃತ್ತಿಯನ್ನು ನಿತ್ಯಜೀವನದ ಗೋಜುಗೊಂದಲಗಳಿಂದ ಉದ್ಧರಿಸಿ ಕಾಪಾಡಲಾರವು. ಅದಕ್ಕೆ ಆಧ್ಯಾತ್ಮಿಕತೆಯ ಶಕ್ತಿ ಸಂಪನ್ಮೂಲಗಳ ಅಗತ್ಯವಿದೆ. ಅಂಥ ಸಂಪನ್ಮೂಲ ಪ್ರತಿಯೊಬ್ಬನಲ್ಲೂ ಇದೆ ಎಂದು ಸಾರುತ್ತದೆ ವೇದಾಂತ. 'ತತ್-ತ್ವಮ್-ಅಸಿ' ಎಂಬ ಸೂಕ್ತಿಯಲ್ಲಿ ಅದು ಅಡಗಿದೆ. ಉಪನಿಷತ್ತುಗಳ ಮಹರ್ಷಿಗಳು ತಮ್ಮ ನಿರಂತರ ಚಿಂತನ-ಮಂಥನಗಳಿಂದ ನಮಗೆ ನೀಡಿರುವ ಅನನ್ಯ ಆವಿಷ್ಕಾರ ಅದು.

ಸ್ನಾಯುಗಳ ಶಕ್ತಿ ನಿಸ್ಸಂದೇಹವಾಗಿ ಮೊಟ್ಟಮೊದಲನೆಯ ಶಕ್ತಿ ಸಂಪನ್ಮೂಲ. ನವಜಾತ ಶಿಶು ಕೈಕಾಲು ಬಡಿಯುತ್ತಾ, ಪದಾರ್ಥಗಳನ್ನು ಎಳೆದು ನೂಕುತ್ತಾ ತನ್ನ ಸ್ನಾಯುಶಕ್ತಿಯನ್ನು ಅಭಿವೃದ್ಧಿಗೊಳಿಸಿಕೊಳ್ಳುತ್ತದೆ. ಸ್ನಾಯುಶಕ್ತಿ ಒರಟಾದುದು. ಮುಂದಿನ ಶಕ್ತಿಯ ಸಂಪನ್ಮೂಲ ಹೆಚ್ಚು ಸೂಕ್ಷ್ಮತೆರನಾದುದು—ನಮ್ಮ ನರಮಂಡಲದ ಮೂಲಕ ವ್ಯಕ್ತವಾಗುವ ಶಕ್ತಿ ಹೆಚ್ಚು ಸೂಕ್ಷ್ಮ, ಪ್ರಬಲ ಮತ್ತು ಸ್ನಾಯುಶಕ್ತಿಗಿಂತ ಹೆಚ್ಚು ಒಳಮುಖವಾದುದು. ಒಂದು ಸ್ನಾಯುವಿನೊಳಗಿನ ನರತಂತು ಕಡಿದುಹೋದರೆ ಅದು ಎಷ್ಟೇ ದೊಡ್ಡ ಸ್ನಾಯುವಾಗಿದ್ದರೂ ಸತ್ತುಹೋಗುತ್ತದೆ. ಸಂಸ್ಕೃತದಲ್ಲಿ, ಸ್ನಾಯು 'ಸ್ಥೂಲ''ವಾಗಿದೆ, ನರವು 'ಸೂಕ್ಷ್ಮ'ವಾಗಿದೆ ಎನ್ನುತ್ತೇವೆ. ಹೀಗೆ ಪ್ರಕೃತಿಗೆ ಒಂದು ಸ್ಥೂಲ ಸ್ವಭಾವವೂ, ಮತ್ತು ಬೇರೆ ಬೇರೆ ಹಂತದ ಸೂಕ್ಷ್ಮಾತಿಸೂಕ್ಷ್ಮಗಳೂ ಇರುತ್ತವೆ. ಭೌತಿಕ ವಿಜ್ಞಾನ ಕ್ಷೇತ್ರದಲ್ಲಿ ನಮ್ಮ ತಿಳಿವಳಿಕೆ 'ಸ್ಥೂಲ'ದಿಂದ ಮುಂದುವರಿದು 'ಸೂಕ್ಷ್ಮ'ವಾಗುತ್ತ ಹೋಗುತ್ತದೆ. ಹಾಗೆಯೇ ಮಾನವಶಾಸ್ತ್ರದಲ್ಲಿಯೂ ಶಕ್ತಿಯ ಸ್ಥೂಲದಿಂದ ಸೂಕ್ಷ್ಮಕ್ಕೂ, ಸೂಕ್ಷ್ಮದಿಂದ ಸೂಕ್ಷ್ಮಾತಿಸೂಕ್ಷ್ಮಕ್ಕೂ ಏರುತ್ತದೆ. ನರಗಳ ಹಿಂದೆ ಮನಸ್ಸು ಅಥವಾ ಚೈತನ್ಯವಿದೆ. ಅದೇನಾದರೂ ಕೆಟ್ಟುಹೋದರೆ ಸ್ನಾಯು ನರಗಳೆರಡೂ ನಿಷ್ಫಲಗೊಳ್ಳುತ್ತವೆ.

ಮನುಷ್ಯನ ಆಳದೊಳಕ್ಕೆ ಇಳಿದ ಹಾಗೆಲ್ಲ ಶಕ್ತಿಯು ಹೆಚ್ಚು ಸೂಕ್ಷ್ಮವಾದಂತೆ ಅದು ತನ್ನ ವ್ಯಾಪ್ತಿಯನ್ನೂ ಬಲವನ್ನೂ ಹೆಚ್ಚಿಸಿಕೊಳ್ಳುತ್ತದೆ. ಅದು ಹೆಚ್ಚು ಒಳಮುಖ 'ಪ್ರತ್ಯಕ್' ಆಯಾಮವನ್ನು ಪಡೆದುಕೊಳ್ಳುತ್ತದೆ. ಕಠೋಪನಿಷತ್ತಿನ ಈ ಶ್ಲೋಕಪಂಕ್ತಿಯ (ಕಠೋಪನಿಷತ್ತು ೧೦.೧೧)

ಮೇಲೆ ಶಂಕರಾಚಾರ್ಯರು ಬರೆದ ವ್ಯಾಖ್ಯಾನದಲ್ಲಿ ಇದರ ಬಗ್ಗೆ ವೈಜ್ಞಾನಿಕ ವಿವರಣೆ ಇದೆ : 'ಮನುಷ್ಯನ ಶಕ್ತಿ ಸಂಪನ್ಮೂಲಗಳು ಮೇಲೇರಿದಂತೆ ಹೆಚ್ಚು ಹೆಚ್ಚು 'ಸೂಕ್ಷ್ಮ'ವಾಗುವ ರೀತಿಯಲ್ಲಿ ವ್ಯವಸ್ಥೆಗೊಂಡಿವೆ—'ಮಹಾಂತಶ್ಚ (ಅದು ಹೆಚ್ಚು ಅಗಾಧವೂ), ಪ್ರತ್ಯಗಾತ್ಮಾ (ಹೆಚ್ಚು ಆಂತರಂಗಿಕವೂ) ಆಗುತ್ತದೆ'. ಇದು ನಾವು ಈಗಾಗಲೆ ವಿಶ್ಲೇಷಿಸಿರುವ ಮೂರು ರೀತಿಯ ಶಕ್ತಿಗಳಿಗೂ ಅನ್ವಯಿಸುತ್ತದೆ. ವೇದಾಂತದ ಸಂಶೋಧನಾ ಕ್ರಮವು ಇನ್ನೂ ಒಂದು ಹೆಜ್ಜೆ ಒಳಕ್ಕಿಳಿದು 'ಆತ್ಮ'ನ ಬಳಿಗೆ ಒಯ್ಯುತ್ತದೆ—ಆಗ ಪರಿಶುದ್ಧ 'ಪ್ರಜ್ಞೆ'ಯೊಳಗಿನ ಸೂಕ್ಷ್ಮತೆ, ಅಗಾಧತೆ ಹಾಗೂ ಆಂತರಂಗಿಕವೆನ್ನುವ ಗುಣಗಳು, ವ್ಯಾಪ್ತಿ ಹಾಗೂ ಪ್ರಬಲತೆಯಲ್ಲಿ, ಅನಂತ ಆಯಾಮವನ್ನು ಪಡೆದುಕೊಳ್ಳುತ್ತವೆ. ಎಲ್ಲಾ ರೀತಿಯ ಶಕ್ತಿಗಳ ಹಿಂದಿರುವ ಅಪರಿಮಿತ ಪ್ರಜ್ಞಾಶಕ್ತಿಯ ಕ್ಷೇತ್ರವೇ ಇದು. ಇದನ್ನೇ 'ತತ್-ತ್ವಮ್-ಅಸಿ' ಎನ್ನುವ ಸೂತ್ರ ಸಾರಿ ಹೇಳುತ್ತದೆ.

### ೮. ವೇದಾಂತದಲ್ಲಿನ ನಿರ್ಭಯತಾ ಸಂದೇಶ

ನಮ್ಮ ವ್ಯಾವಹಾರಿಕ ವಸ್ತುಜೀವನದಲ್ಲಿ ಭೌತಿಕ ಶಕ್ತಿಗಳನ್ನು ಭೌತಿಕ ವಿಜ್ಞಾನ ಹಾಗೂ ತಂತ್ರವಿಜ್ಞಾನಗಳ ಮೂಲಕ ಹೇಗೆ ಕಾರ್ಯರೂಪದಲ್ಲಿ ಬಳಸಿಕೊಳ್ಳುತ್ತೇವೆಯೋ ಅದೇ ರೀತಿ, ಮೇಲೆ ವಿವರಿಸಿದ ತತ್ತ್ವಬೋಧನೆಯನ್ನು ಸಹ ಅಭ್ಯಂತರ ಜೀವನದಲ್ಲಿ ಕಾರ್ಯರೂಪಕ್ಕಿಳಿಸಬೇಕು. ಮೊದಲು ಕಂಡುಹಿಡಿದ ದಹನಶಕ್ತಿ, ಆಮೇಲೆ ಬಂದ ವಿದ್ಯುಚ್ಛಕ್ತಿ, ಪರಮಾಣು ಶಕ್ತಿಗಳು—ಹೀಗೆ ಹಂತ ಹಂತವಾಗಿ ಮಾನವನು ನಾಗರಿಕತೆಯ ಮೆಟ್ಟಿಲುಗಳನ್ನೇರಿ ಬಂದಿದ್ದಾನೆ. ಮಾನವನ ಅಭ್ಯಂತರ ಜೀವನ ವಿಜ್ಞಾನ ಮತ್ತು ಅದರಿಂದ ಲಭಿಸುವ ಶಕ್ತಿ ಸಂಪನ್ಮೂಲಗಳು ಈ ನಾಗರಿಕತೆಗೆ ಸ್ವಾಸ್ಥ್ಯ, ಬಲ ಹಾಗೂ ಸ್ಥಿರತೆ ಒದಗಿಸಲು ನೆರವಾಗುತ್ತವೆ. ಆಧ್ಯಾತ್ಮಿಕತೆಯ ವಿಜ್ಞಾನವು ಮಾನವನನ್ನು ಪ್ರಾಣಿತ್ವದಿಂದ, ಅಸಹಾಯ ಸ್ಥಿತಿಯಿಂದ, ಉದ್ಧರಿಸಿ ಸ್ವಾಯತ್ತತೆ, ಸುಖ ಸಂತೋಷಗಳನ್ನು ಗಳಿಸಿ ಕೊಟ್ಟಿತು. ತನ್ನ ಆದಿಕಾಲೀನ ಸ್ಥಿತಿಗೆ ಸಂಬಂಧಿಸಿದ 'ಪ್ರಾಣಿತ್ವ'ದಿಂದ ಮೇಲೇರಿರುವ ನಾಗರಿಕ ಮಾನವ, ಪುನಃ ಮತ್ತೊಂದು ತೆರನಾದ 'ಪ್ರಾಣಿತ್ವ'ದ ಸ್ಥಿತಿಗೆ ಏಕೆ ಸಿಕ್ಕಿಬೀಳಬೇಕು ? ಅದರಲ್ಲೂ ಈಗ ಭೌತಿಕ ವಿಜ್ಞಾನಗಳು ಮಹತ್ವದ ಆವಿಷ್ಕಾರಗಳನ್ನು ಸಾಧಿಸುತ್ತಿರುವಾಗ ಮತ್ತೆ ಏಕೆ ಹಳೆಯ ಗೋಜಲು ? ಅವನು ತನ್ನ 'ಪ್ರಾಣಿತ್ವ'ವನ್ನು ತೊಡೆದುಹಾಕಿ ನಿಜವಾದ ಸ್ವಾತಂತ್ರ್ಯ ಘನತೆಗಳನ್ನೇಕೆ ಗಳಿಸಬಾರದು ? ಇದೊಂದು ಪ್ರಚಂಡ ಸವಾಲು. ವೇದಾಂತದ ಆಧ್ಯಾತ್ಮಿಕವಿಜ್ಞಾನ, ತಂತ್ರಗಳ ಕೊಡುಗೆಯೇ ಇದು. ಅದು ಮನುಷ್ಯನನ್ನು, ಮಾತೃವಾತ್ಸಲ್ಯದಿಂದಲೋ ಎಂಬಂತೆ ಸಂಬೋಧಿಸಿ ಹೇಳುತ್ತದೆ : 'ನಿನ್ನ ಹತೋಟಿ ಮೀರಿದಂಥ ಬಾಹ್ಯಾಭ್ಯಂತರ ಶಕ್ತಿಗಳಿಗೆ ಪಕ್ಕಾದ ಪ್ರಾಣಿತ್ವದ ಸ್ಥಿತಿಯಲ್ಲಿರಬೇಡ ; ಪ್ರಕೃತಿದತ್ತವಾದ ನಿನ್ನ ಸಾವಯವ ಶಕ್ತಿಯನ್ನು ನಿನ್ನ ಆಧ್ಯಾತ್ಮಿಕ ಬೆಳವಣಿಗೆಗೆ ಉಪಯೋಗಿಸು ; ಎಲ್ಲ ಶಕ್ತಿಯನ್ನೂ ನಿನ್ನ ಹಿಡಿತದಲ್ಲಿಟ್ಟುಕೊಂಡು, ಸ್ವತಂತ್ರನಾಗಿರು, ನಿರ್ಭಯನಾಗಿರು—ಈಗ, ಇಲ್ಲಿ ; ಮರಣಾನಂತರದ ಸ್ಥಿತಿಯಲ್ಲಿ ಅಲ್ಲ !

ಸ್ವಾತಂತ್ರ್ಯ, ನಿರ್ಭಯತೆ—ಈ ಎರಡು ಶಬ್ದಗಳೂ 'ಭಗವದ್ಗೀತೆ' ಮತ್ತು ಉಪನಿಷತ್ತುಗಳಲ್ಲಿ ಮತ್ತೆ ಮತ್ತೆ ಬರುತ್ತವೆ. ವೇದಾಂತದ ಒಟ್ಟಾರೆ ಸಂದೇಶವೇ ಅವುಗಳಲ್ಲಿ ಅಡಗಿದೆ. ಮನುಷ್ಯ ನಿರ್ಭಯನಾಗಿರಬೇಕು, ಹೇಗೆ ? ಮನುಷ್ಯ ಸ್ವತಂತ್ರನಾಗಿರಬೇಕು, ಹೇಗೆ ? ಭೌತಿಕ ವಿಜ್ಞಾನ ಹಾಗೂ ತಂತ್ರಜ್ಞಾನಗಳ ಮೂಲಕ ನಿರ್ಭಯತೆಯನ್ನು ಭಾಗಶಃ ಸಾಧಿಸಬಹುದು. ಆದಿಮಕಾಲದ ಮಾನವನು ಪ್ರಕೃತಿಯನ್ನು ಕಂಡು ತುಂಬಾ ಹೆದರುತ್ತಿದ್ದ. ಸಿಡಿಲು-ಮಿಂಚುಗಳು ಅವನನ್ನು ತಲ್ಲಣಗೊಳಿಸುತ್ತಿದ್ದವು. ಆದರೆ ವಿಜ್ಞಾನ ನಿರ್ಮಿತ ಲೋಕದಲ್ಲಿ ವಾಸಿಸುವ ಇಂದಿನ ಮಾನವನಿಗೆ ಅವು ಹಾಗೆ ಹೆದರಿಕೆಯನ್ನುಂಟುಮಾಡುವ ಕಾರಣಗಳೇ ಅಲ್ಲ—ಯಾಕೆಂದರೆ ಅವನು ಪ್ರಕೃತಿಯ ವ್ಯಾಪಾರಗಳನ್ನು ಅರ್ಥಮಾಡಿಕೊಂಡು ಆ ಶಕ್ತಿಗಳನ್ನು ಹೇಗೆ ಹತೋಟಿಯಲ್ಲಿಟ್ಟು ಅವುಗಳನ್ನು ತನ್ನ ಸ್ವಂತ ಬೆಳವಣಿಗೆ, ಅಭ್ಯುದಯಗಳಿಗೆ ರೂಢಿಸಿಕೊಳ್ಳಬಹುದೆಂಬುದನ್ನು ಅರಿತಿದ್ದಾನೆ. ಆದರೆ ವಿಜ್ಞಾನ

ಯುಗದ ಮಾನವ ಎಲ್ಲಾ ಭಯಭೀತಿಗಳನ್ನೂ ನಿವಾರಿಸಿಕೊಂಡಿರುವನೇ ? ನಾವು ಒಂದು ರೀತಿಯ ಭಯವನ್ನು ನಿವಾರಿಸಿದ್ದರೆ, ಇನ್ನೊಂದು ರೀತಿಯ ಭೀತಿಗಳಿಗೆ ಸಿಕ್ಕಿಬಿದ್ದಿದ್ದೇವೆ. ನಾವು ಬಾಹ್ಯ ಶಕ್ತಿಗಳಿಗೆ ಹೆದರಬೇಕಾಗಿಲ್ಲ. ಆದರೆ ಭೀತಿ ಎಂಬುದು ನಮ್ಮೊಳಗೇ ಹುಟ್ಟಿ ನಮ್ಮನ್ನು ಕಾಡುತ್ತಿದೆ. ಆದ್ದರಿಂದಲೇ ಆಧುನಿಕ ನಾಗರಿಕ ಮಾನವ ಸಾಮಾನ್ಯವಾಗಿ ನಿರಂತರಕಾಲ ಆತಂಕ, ಕಳವಳಗಳಿಗೆ ಸಿಕ್ಕಿ ನರಳುತ್ತಿದ್ದಾನೆ. ಆತಂಕ ಕಳವಳಗಳು ಒಂದು ರೀತಿಯ ಭಯವೇ. ಅದು ನರವ್ಯಾಧಿಗಳಿಗೂ, ಮಾನಸಿಕ ವಿಘಟನೆಗೂ ಕಾರಣವಾಗುತ್ತದೆ. ಅದು ಮನುಷ್ಯನ ಜೀವಶಕ್ತಿಯನ್ನೆ ತಿಂದುಹಾಕುತ್ತದೆ. ಅವನ ಮಾನಸಿಕ, ಸಾಮಾಜಿಕ ಸ್ಥಿತಿಯನ್ನು ಪಲ್ಲಟಗೊಳಿಸುತ್ತದೆ. ತಿಳಿವಳಿಕೆ-ನಿಯಂತ್ರಣಗಳ ಮೂಲಕ ಮನುಷ್ಯ ನಿರ್ಭೀತನಾಗುವುದಾದರೆ, ಆ ನಿಯಂತ್ರಣ ಶಕ್ತಿಗಳು ಮನುಷ್ಯನ ಬಾಹ್ಯಾಭ್ಯಂತರ ಗಳೆರಡರಲ್ಲೂ ಕಾರ್ಯಪ್ರವೃತ್ತವಾಗಬೇಕು. ಇದು ವೇದಾಂತದ ಸಂದೇಶ. ವೇದಾಂತವು ಬಾಹ್ಯಾಭ್ಯಂತರಗಳೆರಡರ ವಿಜ್ಞಾನಗಳನ್ನೂ ಸಮನ್ವಯಗೊಳಿಸಿ, ಒಂದು ಸಮಗ್ರ ಸತ್ಯವನ್ನು ಬೀರುವ ಒಂದು ಸಂಘಟಿತ ವಿಜ್ಞಾನವನ್ನಾಗಿ ರೂಪಿಸುತ್ತದೆ.

## ೧೦. ವೇದಾಂತ ಮತ್ತು ಮಾನವನ ವಿಕಾಸಾತ್ಮಕ ದೃಷ್ಟಿ

ವೇದಾಂತವು ಆಧುನಿಕ ವಿಜ್ಞಾನವನ್ನು ವಿಪುಲವಾಗಿ ಗೌರವಿಸುತ್ತದೆ. ಭಾರತದಲ್ಲಿ ವಿಕಾಸಗೊಂಡ ಹಿಂದೂ, ಬೌದ್ಧ ಹಾಗೂ ಜೈನಧರ್ಮಗಳೆಲ್ಲವೂ ಇಂದ್ರಿಯಗಳಿಗೆ ಸಂಬಂಧಿಸಿದ ಹಾಗೆ ಅಥವಾ ವೇದಾಂತವೂ ಬುದ್ಧನೂ ಹೇಳುವ ಲೌಕಿಕ ಸ್ತರದಲ್ಲಿ ಮನುಷ್ಯನು ಸುಖಶಾಂತಿಯ ಜೀವನ ನಡೆಸಲು ಭೌತ ವಿಜ್ಞಾನವು ಅದ್ಭುತ ಸಾಧನವಾಗಿದೆಯೆಂದು ಒಪ್ಪಿಕೊಂಡಿವೆ. ಆದರೆ ವೇದಾಂತವು ಪಾಶ್ಚಾತ್ಯರ ಹಾಗೆ ಭೌತಿಕ ವಿಜ್ಞಾನಕ್ಕೆ ಸರ್ವಜ್ಞತೆಯ ಪಟ್ಟಕಟ್ಟಲು ಒಪ್ಪುವುದಿಲ್ಲ. ಆಧುನಿಕ ವಿಜ್ಞಾನವು ಮನುಷ್ಯನ ಪ್ರಜ್ಞೆಯನ್ನು ಭೇದಿಸಿ ಒಳಹೊಕ್ಕು ಅದರ ಸಮಗ್ರ ಬುದ್ಧ ಮತ್ತು ವೇದಾಂತ ಹೇಳುವ ಲೋಕೋತ್ತರ ಸ್ತರವನ್ನು, ಸ್ವರೂಪವನ್ನು, ಅರ್ಥಮಾಡಿಕೊಳ್ಳುವ ವಿಧಾನವನ್ನು ಹೆಚ್ಚು ಹೆಚ್ಚು ರೂಢಿಸಿಕೊಳ್ಳಬೇಕೆಂದು ವೇದಾಂತವು ಹೇಳುತ್ತದೆ. ಹೀಗೆ ವಿಜ್ಞಾನವು ಮನುಷ್ಯನ, ಪ್ರಕೃತಿಯ ಬಾಹ್ಯಾಭ್ಯಂತರಗಳೆರಡರ ಮೇಲೆಯೂ ಸ್ವಾಮ್ಯವನ್ನು ಗಳಿಸಿಕೊಂಡರೆ ಮಾತ್ರ ಅದು ವಾಸ್ತವಿಕತೆಯ ವಿಜ್ಞಾನವಾಗುತ್ತದೆ ; ಮನುಷ್ಯನು ಹೀಗೆ ಎರಡೂ ಲೋಕಗಳ ಸಂಪೂರ್ಣ ಅರಿವನ್ನು ಗಳಿಸಿದರೆ ಅವನ ಬದುಕು ಸಾರ್ಥಕವಾಗುತ್ತದೆ, ಅವನು 'ಪ್ರಾಣಿತ್ವ'ದ ಸ್ಥಿತಿಯಿಂದ ಮೇಲೇರಿ ಸ್ವಾತಂತ್ರ್ಯ, ಸಂತೋಷ ಗಳನ್ನು ಗಳಿಸುತ್ತಾನೆ. ಮಾನವ ವಿಕಾಸದ ಮಾರ್ಗ, ಅದರ ಸಾರ್ಥಕತೆ ಇದೇ, ಎಂದು ವೇದಾಂತವು ಘೋಷಿಸುತ್ತದೆ. ಇಪ್ಪತ್ತನೆಯ ಶತಮಾನದ ಮಾನವ ವಿಕಾಸವನ್ನು ಕುರಿತ ವಿಚಾರ ಪರಂಪರೆಯಲ್ಲಿ ಮೇಲೆ ಹೇಳಿದ ಸತ್ಯದ ಸುಳಿವು ಸೂಚನೆಗಳಿವೆ. ನೆನ್ನೆ ಬೆಳಗಿನ ನನ್ನ ಭಾಷಣದಲ್ಲಿ ನಾನು ಜೂಲಿಯನ್ ಹಕ್ಸ್‌ಲಿಯ ವಾಕ್ಯಪಂಕ್ತಿಯನ್ನು ಉಲ್ಲೇಖಿಸಿದೆನಷ್ಟೆ. ಮನುಷ್ಯನ ಸಂದರ್ಭದಲ್ಲಿ ವಿಕಾಸಕ್ರಮವು ಹೇಗೆ ಸಾಗಿಬಂತೆಂದು ಹೇಳುವ ಹಕ್ಸ್‌ಲಿಯ ಇನ್ನೊಂದು ವಾಕ್ಯ ಸಮುಚ್ಚಯವನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಿದ್ದೇನೆ (*Evolution after Darwin*, Vol. 1, p. 20) :

> *ಇಂದಿನ ತಿಳಿವಳಿಕೆಯ ಬೆಳಕಿನಲ್ಲಿ ಮನುಷ್ಯನ ಸಮಗ್ರ ಉದ್ದೇಶ, ಕೇವಲ ಜೀವಂತವಾಗಿ ಉಳಿದಿರುವುದು ಮಾತ್ರವಲ್ಲ ; ಪ್ರಜಾಸಂಖ್ಯೆಯ ಒಲವನ್ನು ಮಾತ್ರ ಹೆಚ್ಚಿಸಿಕೊಂಡು, ತನ್ನ ಜೀವನ ವ್ಯವಸ್ಥೆಯನ್ನು ಹೆಚ್ಚು ಹೆಚ್ಚು ಸಂಕೀರ್ಣಗೊಳಿಸಿಕೊಳ್ಳುವುದು ಅಥವಾ ಪರಿಸರದ ಮೇಲೆ ಹೆಚ್ಚು ಹೆಚ್ಚು ನಿಯಂತ್ರಣವನ್ನು ಸಾಧಿಸುವುದಷ್ಟೇ ಜೀವನದ ಉದ್ದೇಶವಲ್ಲವೆಂದು ಅವನಿಗೆ ಅರ್ಥವಾಗುತ್ತಿದೆ. ಜೀವನದ ಸಾರ್ಥಕತೆ ಇರುವುದು—ಸಮಷ್ಟಿ ಬದುಕಿನಲ್ಲಿ ಮಾತ್ರ. ಮನುಷ್ಯ ಜೀವಿಗಳು ಹೆಚ್ಚು ಹೆಚ್ಚು ಸಾಧಿಸಬಹುದೆಂಬುದರ ಅರಿವಿನಲ್ಲಿ ; ಕೇವಲ ಅವನ ವೈಯಕ್ತಿಕ ಸಾಧನೆಗಳು ಮಾತ್ರ ಸಾಲದು ಎಂಬುದನ್ನು ಮನಗಂಡರೆ ಜೀವನ ಹೆಚ್ಚು ಅರ್ಥಪೂರ್ಣವಾಗುತ್ತದೆ.*

ಇಂಥ ಅರ್ಥಪೂರ್ಣತೆಯನ್ನು ಸಾಧಿಸಲು ಅದರ ಕುರಿತ ವೈಜ್ಞಾನಿಕ ಅಧ್ಯಯನದ ಅಗತ್ಯ ಒತ್ತಿ ಹೇಳುತ್ತಾ ಹಕ್ಸ್‌ಲಿ ಹೀಗೆ ಮುಕ್ತಾಯ ಮಾಡುತ್ತಾನೆ (ಅದೇ ಗ್ರಂಥ, ಪು. ೨೧) 'ಮನುಷ್ಯನ ಅಂತಿಮ ಅಥವಾ ಪ್ರಧಾನ ಉದ್ದೇಶ ಬದುಕಿನಲ್ಲಿ ಸಾರ್ಥಕತೆ ಸಾಧಿಸಬೇಕು ಎನ್ನುವುದಾದರೆ ಮುಂದಿನ ಮನೋವೈಜ್ಞಾನಿಕ ವಿಕಾಸದ ಹಾದಿಯಲ್ಲಿ ಮಾನವ ಸಾಧ್ಯತೆಗಳನ್ನು ಆಳವಾಗಿ ಅಧ್ಯಯನ ಮಾಡಬೇಕು.' The Evolutionary Vision ಎನ್ನುವ ವಿಷಯದ ಮೇಲಿನ ಉಪನ್ಯಾಸಗಳಲ್ಲಿ ಹಕ್ಸ್‌ಲಿ ಆಧುನಿಕ ವಿಜ್ಞಾನದ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ, ವಿಕಾಸದ ಮಾನದಂಡವು ಗುಣಮೌಲ್ಯಗಳೇ ಹೊರತು ಮನುಷ್ಯಪೂರ್ವ ಘಟ್ಟದ ಸಾವಯವ ವಿಕಾಸ ಕಾಲದಲ್ಲಿ ಗಣನೆಗೆ ಬಂದ ಪ್ರಮಾಣ ಮೊತ್ತಗಳಲ್ಲ (ಅದೇ ಗ್ರಂಥ, Vol. III, ಪು. ೨೫೭) ಎಂಬುದನ್ನು ಪ್ರಸ್ತುತಪಡಿಸಿದ್ದಾನೆ.

'ನಾನು ಗುಣಮೌಲ್ಯಗಳ ವಿಷಯ ಕುರಿತು ಹೇಳಿದೆ. ಇದು ನಮ್ಮ ಹೊಸ ನಂಬಿಕೆ-ವ್ಯವಸ್ಥೆಯಲ್ಲಿ ಮುಖ್ಯ ಸೂತ್ರವಾಗಬೇಕು—ಪ್ರಮಾಣ ಮೊತ್ತಗಳಿಗಿಂತ ಗುಣ ಮೌಲ್ಯಗಳು ಹೆಚ್ಚು ಪ್ರಧಾನವಾಗ ಬೇಕು.' ಪ್ರಯೋಜಕತೆ ಎಂಬ ತತ್ವಕ್ಕೆ ವಿರುದ್ಧವಾದ ನಮ್ಮ ಹೊಸ ನಂಬಿಕೆ ವ್ಯವಸ್ಥೆಯನ್ನು ಕುರಿತು ಚರ್ಚಿಸುತ್ತಾ ಜೂಲಿಯನ್ ಹಕ್ಸ್‌ಲಿ ಹೀಗೆನ್ನುತ್ತಾನೆ (ಅದೇ ಗ್ರಂಥ, Vol. III, ಪು. ೨೫೫) :

*ಮನುಷ್ಯನ ಗುರಿ, ಮಾನವಕೋಟಿ ಹೆಚ್ಚು ಮಹತ್ವವಾದ ಸಾಧನೆಗಳನ್ನು ಕೈಗೂಡಿಸಿಕೊಳ್ಳು ವಂತೆ, ಸಮುದಾಯಗಳು ಹೆಚ್ಚು ಸುಖಸಂತೋಷಗಳನ್ನು ಗಳಿಸುವಂತೆ ಮಾಡುವುದು ಎಂಬುದನ್ನು ನಾವು ಒಪ್ಪಿಕೊಂಡರೆ, ಸಾಮಾನ್ಯ ಅರ್ಥದಲ್ಲಿ ಪ್ರಾಯೋಜಕತೆ ಅಥವಾ ಐಹಿಕ ಸುಖಸಾಧನೆ ಎಂಬುದು ಅಷ್ಟೊಂದು ಪ್ರಮುಖವಾಗುವುದಿಲ್ಲ. ಮಾನವನ ಮೂಲ ಅಗತ್ಯಗಳ ಪೂರೈಕೆಗಾಗಿ ಹೆಚ್ಚು ಪ್ರಮಾಣದಲ್ಲಿ ಉಪಯುಕ್ತ ಸಾಮಗ್ರಿಗಳ ಉತ್ಪಾದನೆಯಾಗಬೇಕು, ನಿಜ. ಆದರೆ ಅದಕ್ಕೂ ಒಂದು ಮಿತಿ ಇದೆ. ಪ್ರತಿಯೊಬ್ಬನ ಅಗತ್ಯಕ್ಕಿಂತ ಹೆಚ್ಚಾದ ಕ್ಯಾಲರಿಗಳು, ಕಾಕ್‌ಟೈಲ್ ಪಾನೀಯಗಳು, ಟಿ.ವಿ. ಸೆಟ್ಟುಗಳು ಅಥವಾ ಬಟ್ಟೆ ಒಗೆಯುವ ಯಂತ್ರಗಳ ಉತ್ಪಾದನೆ ಅನವಶ್ಯಕ ಮಾತ್ರವಲ್ಲ, ನಿಷ್ಪ್ರಯೋಜಕವೂ ಹೌದು. ಕೇವಲ ಪ್ರಮಾಣ-ಸಂಖ್ಯೆಗಳ ಮೇಲೆ ನಿರ್ಧಾರವಾಗುವ ಉತ್ಪಾದನೆ, ಸಾಧನವೇ ವಿನಾ ಅಂತಿಮ ಗುರಿಯಲ್ಲ.*

ಮಾನವ ವಿಕಾಸದ ಹಂತದಲ್ಲಿ ಹೇಗೆ ದೇಹಕ್ಕಿಂತ ಆತ್ಮಕ್ಕೆ ಹೆಚ್ಚು ಪ್ರಾಧಾನ್ಯ ಒದಗಿತೆಂಬುದನ್ನು ಒತ್ತಿಹೇಳುತ್ತಾ ಹಕ್ಸ್‌ಲಿ ಹೀಗೆ ಮುಕ್ತಾಯ ಮಾಡುತ್ತಾನೆ :

*ಹೀಗೆ ವಿಕಾಸದ ದೃಷ್ಟಿ ನಮ್ಮ ಜೀವನವನ್ನು ಸರಳವಾದ ಅರ್ಥದಲ್ಲಿ, ಆದರೆ ಅತ್ಯದ್ಭುತ ರೀತಿಯಲ್ಲಿ, ಉದ್ದೀಪನಗೊಳಿಸುತ್ತದೆ... ನಮ್ಮ ಜೀವನದ ಗುರಿ, ನಮ್ಮ ಕರ್ತವ್ಯ, ಏನೆಂಬು ದನ್ನು ಸೂಚಿಸುತ್ತದೆ... ಅದು ನಮ್ಮ ಆಧ್ಯಾತ್ಮ ಶಕ್ತಿ ಹೇಗೆ ಭೌತಿಕ ಶಕ್ತಿಯನ್ನು ಮೀರಿಸುತ್ತದೆ, ಗುಣಮೌಲ್ಯಗಳು ಪ್ರಮಾಣಮೊತ್ತಗಳ ಪ್ರಾಧಾನ್ಯವನ್ನು ಹೇಗೆ ತಗ್ಗಿಸುತ್ತಾವೆಂಬುದನ್ನು ತೋರಿಸುತ್ತವೆ.*

ಇದನ್ನೇ ವೇದಾಂತವು, ಮನುಷ್ಯನು ತನ್ನ ಆಧ್ಯಾತ್ಮ ಜೀವನದ ಸಾರ್ಥಕತೆಯತ್ತ ನಡೆಸುವ ಅಂತರಂಗದ ಯಾತ್ರೆ ಎಂದು ಮಾನ್ಯಮಾಡುತ್ತದೆ. ಮನುಷ್ಯನ ಅಭ್ಯಂತರ ಜೀವನಕ್ಕೆ ಸಂಬಂಧಿಸಿದ ಈ 'ವಿಜ್ಞಾನ'ವು ಇವತ್ತು ಅಭಿವೃದ್ಧಿಯಾಗದಿದ್ದರೆ, ಮುಂದಿನ ಕೆಲವು ದಶಕಗಳಲ್ಲಿ ವಿಕಸನಗೊಳ್ಳುವು ದೆಂದು ನಿರೀಕ್ಷಿಸಬಹುದು. ಅದರಲ್ಲೂ ವಿಶೇಷವಾಗಿ, ಅಣುಜೀವ ವಿಜ್ಞಾನದಿಂದ (Molecular Biology) ಶಾಂತಿ ಹಾಗೂ ಭಾವಸ್ಥಿರತೆಯನ್ನು ನಿರೀಕ್ಷಿಸಬಹುದು. ಇತ್ತೀಚಿನ ಕೆಲವು ವರ್ಷಗಳಲ್ಲಿ ಪ್ರಕಟವಾಗಿರುವ ಕೆಲವು ಗ್ರಂಥಗಳಲ್ಲಿ ಇಂಥ ಸಾಧ್ಯತೆಗಳ ಸೂಚನೆ ಇದೆ. ಅಂಥ ಒಂದು ಪುಸ್ತಕ—ಅದರ ಹೆಸರೇ ಭಯಂಕರವಾಗಿದೆ—ರಾಬರ್ಟ್ ಟೇಲರ್‌ನ The Biological Time-Bomb—

ಎನ್ನುವುದು. ಮಾನವ ಯಂತ್ರಶಿಲ್ಪದ ಕ್ಷೇತ್ರದಲ್ಲಿ ಜೀವವಿಜ್ಞಾನ ಬಹುದೂರ ಮುನ್ನಡೆ ಸಾಧಿಸುತ್ತಿದೆ. ಅದು ಮನುಷ್ಯನಿಗೆ ಹೇಳುತ್ತದೆ : "ನೀನು ಸುಖಶಾಂತಿಯಿಂದಿರಬೇಕೇ ? ಹಾಗಾದರೆ ನನ್ನ ಪ್ರಯೋಗಶಾಲೆಗೆ ಬಾ, ನೀನರಸುತ್ತಿರುವುದನ್ನು ನಾನು ಕೊಡುತ್ತೇನೆ." ಜೀವವಿಜ್ಞಾನ ನಿರ್ದೇಶಿಸುವ ಮಾನವ ಯಂತ್ರಶಿಲ್ಪವು ಮನುಷ್ಯನ ಮೆದುಳಿನೊಳಕ್ಕೆ ವಿದ್ಯುಧ್ಧ್ರುವಗಳನ್ನು (Electrods) ಹುದುಗಿಸಿಟ್ಟು ಆ ವ್ಯಕ್ತಿ ತನಗೆ ಯಾವುದೋ ಭಾವನಾತ್ಮಕ ಅಗತ್ಯಬಿದ್ದಾಗ ಆ ವಿದ್ಯುಧ್ಧ್ರುವಗಳನ್ನು 'ಸ್ವಿಚ್' ಅಥವಾ ಗುಂಡಿ ಒತ್ತಿದರೆ ಸಾಕು. ಗಂಡನಿಗೆ ಕೋಪ ಬಂದಾಗ ಹೆಂಡತಿ ಆ ಸ್ವಿಚ್ ಒತ್ತಿ ಅವನನ್ನು ಸಂತವಿಸಬಹುದು ಅಥವಾ ಅಂಥ ಸ್ಥಿತಿಯಲ್ಲಿನ ಹೆಂಡತಿಯನ್ನು ಗಂಡನೇ ಆರೈಸಬಹುದು. ಈ ರೀತಿ ನಾವು ಪ್ರಪಂಚದೆಲ್ಲೆಡೆ ಜೈವಿಕ ಪ್ರಯೋಗಾಲಯಗಳನ್ನು ಸ್ಥಾಪಿಸಿ ಅವನು ಕೇಳಿದ ಅಗತ್ಯಗಳನ್ನೆಲ್ಲಾ ಪೂರೈಸುತ್ತಾ ಮನುಷ್ಯನನ್ನು ಸುಖಶಾಂತಿಗಳಲ್ಲಿರಿಸಬಹುದು. ಆಗ ಮನುಷ್ಯನ ಗತಿ ಏನಾಗಬಹುದು ? ಅವನು ಕೇವಲ ಒಂದು ಪ್ರಾಣಿ ಅಥವಾ ಬಾಹ್ಯವಸ್ತುವಾಗುತ್ತಾನೆ. ಈ ಘೋರ ಸಾಧ್ಯತೆಯನ್ನು ತಪ್ಪಿಸಬೇಕಾದರೆ ಮನುಷ್ಯ ಆಧ್ಯಾತ್ಮಿಕ ವಿದ್ಯೆಗೆ ಮರೆಹೋಗಬೇಕಾಗುತ್ತದೆ. ಮೇಲೆ ರ್ ಜೂಲಿಯನ್ ಹಕ್ಸ್ಲಿ ಹೇಳಿದ ರೀತಿಯ ಆತ್ಮವಿದ್ಯೆಯನ್ನು ರೂಢಿಸಿಕೊಳ್ಳಬೇಕು. ಇದೊಂದೇ ಮನುಷ್ಯನನ್ನು ಮೂಲಭೂತವಾಗಿ ಸಶಕ್ತನನ್ನಾಗಿಸಬಲ್ಲದು—ಆಗ ಆಧ್ಯಾತ್ಮ ವಿಜ್ಞಾನ ಗಳೆರಡೂ ಪರಸ್ಪರ ರೂಪಕವಾಗಬಲ್ಲವು. ಸುಮಾರು ೪೦೦೦ ವರ್ಷಗಳ ಹಿಂದೆ ವೇದಾಂತವು ನಮ್ಮತ್ತ ಎಸೆದ ಈ ಸವಾಲು ನಾವು ವಾಸಿಸುತ್ತಿರುವ ಈ ಅದ್ಭುತ ಗಗನಯಾತ್ರಾಯುಗದಲ್ಲಿ ಅತ್ಯಂತ ಪ್ರಸ್ತುತವೆನಿಸಿದೆ. (ಶ್ವೇತಾಶ್ವತರ ಉಪನಿಷತ್ತಿನ) ಈ ವಾಕ್ಯ ಪಂಕ್ತಿಯನ್ನು ನೋಡಿ :

ಯದಾ ಚರ್ಮವದ್ ಆಕಾಶಂ<br>
ವೇಷ್ಟಯಿಷ್ಯಂತಿ ಮಾನವಾಃ<br>
ತದಾ ದೇವಮವಿಜ್ಞಾಯ<br>
ದುಃಖಸ್ಯಾಂತೋ ಭವಿಷ್ಯತಿ

*ತನ್ನ ತಾಂತ್ರಿಕ ಜ್ಞಾನ-ಪರಿಣತಿಗಳ ಮೂಲಕ ಮನುಷ್ಯನು ಇಡೀ ಬ್ರಹ್ಮಾಂಡವನ್ನು ಒಂದು ಚರ್ಮದ ಚೂರಿನಂತೆ ಸುತ್ತಿ ಬಿಡಬಲ್ಲನಾದರೂ ಅವನು ದುಃಖ-ವಿಭ್ರಮೆಗಳನ್ನು, ತನ್ನೊಳಗಿನ ಪ್ರದೀಪ್ತ ಆತ್ಮ ಜ್ಞಾನದ ಸಾಕ್ಷಾತ್ಕಾರವಿಲ್ಲದೆ, ಕೊನೆಗಾಣಿಸಲಾರ.*

### ೧೧. ಆಧುನಿಯ ಯುಗದ ಅತ್ಯದ್ಭುತ ಸಂಶೋಧನೆಗಳ ಸಂದರ್ಭದಲ್ಲಿ ಆಧ್ಯಾತ್ಮಿಕತೆ

ವೇದಾಂತದಲ್ಲಿ, ಟಿಬೆಟನ್ ಹಿಮಾಲಯ ಪ್ರದೇಶದಲ್ಲಿ ವಾಸಿಸುವ ಕಸ್ತೂರಿ ಮೃಗದ ಉದಾಹರಣೆ ಬರುತ್ತದೆ. ವರ್ಷದ ಯಾವುದೋ ಋತುವಿನಲ್ಲಿ ಕಸ್ತೂರಿಮೃಗ ಎಲ್ಲಿಂದಲೋ ಬರುತ್ತಿರುವ ಕಸ್ತೂರಿಯ ನರುಗಂಪನ್ನು ಆಘ್ರಾಣಿಸುತ್ತದೆ. ಅದು ಅತ್ತಿತ್ತ ಆ ಸುವಾಸನೆಯ ಮೂಲ ವನ್ನು ಹುಡುಕುತ್ತಾ ಓಡಾಡುತ್ತ, ಕೊನೆಗೆ ಆಯಾಸಗೊಂಡು ಒಂದೆಡೆ ಸುಮ್ಮನೆ ಕುಳಿತಾಗ ಅದಕ್ಕೆ ಅರಿವಾಗುತ್ತದೆ, ಆ ಸುವಾಸನೆಯ ಮೂಲ ತನ್ನ ನಾಭಿಯೇ ಎಂದು. ಶ್ರೀರಾಮಕೃಷ್ಣಪರಮಹಂಸರು (೧೮೩೬-೧೮೮೬) ಹೇಳುವಂತೆ 'ಅಲ್ಲಿ' ಅಲ್ಲಿ' ಎಂಬ ಈ ಭ್ರಾಂತಿಯೇ ಅಜ್ಞಾನ. 'ಇಲ್ಲಿ ಇಲ್ಲಿ' ಎಂಬ ಭಾವನೆಯೇ ಜ್ಞಾನ. ಜಾನ್ ದಿ ಬ್ಯಾಪ್ಟಿಸ್ಟ್ ಮಹತ್ವದ ಸತ್ಯವನ್ನು ನುಡಿಯುತ್ತಾ, ಘೋಷಿಸಿದ ; 'ಪಶ್ಚಾತ್ತಾಪಪಡು, ಏಕೆಂದರೆ ಸ್ವರ್ಗಸಾಮ್ರಾಜ್ಯವು ಅನತಿ ದೂರದಲ್ಲಿದೆ.' ಆಮೇಲೆ ಏಸು ಕ್ರಿಸ್ತ ಕೂಡಲೆ ಬಂದು ಸತ್ಯವನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತಾ ಹೇಳಿದ (ಲ್ಯೂಕ್, xvii, 20-21) :

*(ಧರ್ಮಪ್ರತಿಷ್ಠೆಯ) ಫಾರಸಿಗಳು ಬಂದು ಅವನನ್ನು ಒತ್ತಾಯಿಸಿ ಕೇಳಿದರು; ಭಗವಂತನ ರಾಜ್ಯ ಯಾವಾಗ ಬರುತ್ತದೆ? ಅವನೆಂದ: ಭಗವಂತನ ರಾಜ್ಯ ಕೇವಲ ಟೀಕಾತ್ಮಕ ಹೇಳಿಕೆಯಿಂದ*

*ಬರುವಂಥದಲ್ಲ ! 'ಇಹೊ ಇಲ್ಲಿ' ಅಹೊ ಅಲ್ಲಿ !' ಎಂದು ಹೇಳಲಾರಿರಿ... ಅಗೊ ನೋಡಿ ಗಮನಿಸಿ; ಅದು ನಿಮ್ಮೊಳಗೇ ಇದೆ.*

ವೇದಾಂತವು ಧರ್ಮದ ಎರಡು ಮುಖಗಳನ್ನು ಗುರುತಿಸುತ್ತದೆ : ಒಂದು ನೈತಿಕ, ಇನ್ನೊಂದು ವೈಜ್ಞಾನಿಕ. ನೈತಿಕ ಧರ್ಮದಲ್ಲಿ ನಮಗೆ ಆಯ್ಕೆ ಇಲ್ಲ... ನಾವು ಅದನ್ನು ಉದ್ವೇಶಿಸಿ ಕೋರಲಾರೆವು. ಅದು ಆಜನ್ಮಸಿದ್ಧವಾದುದು. ಆದರೆ ಧರ್ಮವನ್ನು ಕುರಿತು ಅನ್ವೇಷಿಸಲು ಹೊರಟಾಗ ಮಾತ್ರ ಅದು ವಿಜ್ಞಾನವಾಗುತ್ತದೆ. ಆದರೆ ವಿಜ್ಞಾನವು ನಮಗೆ ಆಜನ್ಮಸಿದ್ಧವಾಗಿ ಬಂದುದಲ್ಲ. ಸರ್ ಆರ್ಥರ್ ಎಡ್ಡಿಂಗ್‌ಟನ್ ಹೇಳುತ್ತಾರೆ. (*Science and the Unseen World* p. 54) :

*ಅನ್ವೇಷಣೆಯನ್ನು ಮುಂದಿಟ್ಟುಕೊಳ್ಳದಿದ್ದರೆ ನಿಮಗೆ ವಿಜ್ಞಾನದ ಸ್ವರೂಪವಾಗಲಿ ಧರ್ಮದ ಸ್ವರೂಪವಾಗಲಿ ಅರ್ಥವಾಗುವುದಿಲ್ಲ.*

ಆದ್ದರಿಂದ ಧರ್ಮವೆಂಬ ವಿಜ್ಞಾನವನ್ನು ಕುರಿತು ಸ್ವಾಮಿ ವಿವೇಕಾನಂದರು 'ಅದು ಮಾನವನಲ್ಲಿ ಈಗಾಗಲೇ ಅಡಗಿರುವ ದೈವಿಕತೆಯ ಸಾಕ್ಷಾತ್ಕಾರ' ಎಂದರು. ಧರ್ಮವೆಂಬ ವಿಜ್ಞಾನವು ಹಿಂದೂ, ಬೌದ್ಧ, ಜೈನ, ಇಸ್ಲಾಮ್, ಕ್ರೈಸ್ತ, ಯೆಹೂದಿ ಧರ್ಮಗಳೆಂಬ ಜನಾಂಗೀಯ ಭೇದಭಾವಗಳನ್ನು ನಿವಾರಿಸಿಬಿಡುತ್ತದೆ. ಏಕೆಂದರೆ ನೀವು ಕೇವಲ ಒಬ್ಬ ಶ್ರದ್ಧಾಳುವಾದರೆ ನೀವು ಅಂತರಂಗ ಜೀವನದ ಪ್ರಯೋಗ ಪರೀಕ್ಷಕರಾಗಿಬಿಡುವಿರಿ.

ನಾನು ಈ ಭಾಷಣ ಮುಗಿಸುವ ಮೊದಲು '*Sieman's Journal*, Electro Medica 5/1970'ದಲ್ಲಿ H. Schipperges ಎಂಬ ವಿಜ್ಞಾನಿ 'ಔಷಧ ಶಾಸ್ತ್ರದಲ್ಲಿ ಆಗುತ್ತಿರುವ ವಿಪ್ಲವದ ಮುಖಗಳು' ಎಂಬುದರ ಬಗ್ಗೆ ಬರೆದ ಲೇಖನವನ್ನು ಉಲ್ಲೇಖಿಸಬಯಸುತ್ತೇನೆ. ಆತ ಇದರಲ್ಲಿ ನಾನೀಗಾಗಲೇ ವಿವರಿಸಿರುವ ಮನುಷ್ಯನ ಒಳ ಬದುಕನ್ನು ಕುರಿತ ವಿಜ್ಞಾನ ಎಷ್ಟು ಅಗತ್ಯವೆಂದು ಸೂಚಿಸುತ್ತಾನೆ. (p. 300)

*ಈಗತಾನೆ ನಾವು ವಿಶ್ವವನ್ನು ಸಂಶೋಧಿಸಿ ಚಂದ್ರನ ಮೇಲಿಳಿದಿದ್ದೇವೆ... ಆಗಲೇ ನಮ್ಮ ಮುಂದೆ ಹೊಸದೊಂದು ಬ್ರಹ್ಮಾಂಡ, ನಿಸರ್ಗದ ಸಮಗ್ರ ಒಳ ಇರವು, ಯಾವುದನ್ನು ಈ ಹಿಂದೆ ಆತ್ಮದೊಳಗಿನ ಲೋಕ ಎಂದು ಕರೆಯಲಾಗಿತ್ತೋ, ಗಟೆ (Goethe) ಯಾವುದನ್ನು 'ಅಂತರಾಳದೊಳಗಿನ ವಿಶ್ವ' ಎಂದು ಕರೆಯುವನೊ, ನಿಜವಾಗಿ ಒಂದು ವೈವಿಧ್ಯಮಯ ಬ್ರಹ್ಮಾಂಡ, ಗೋಚರವಾಗು ತ್ತಿದೆ. ಇದು ಒಂದು ಪ್ರಪಂಚವನ್ನಲ್ಲ, ನೂರಾರು ಪ್ರಪಂಚಗಳನ್ನು, ಸಂದರ್ಭಗಳನ್ನು, ಮಾನವ ಶಾಸ್ತ್ರಗಳನ್ನು, ಘಟಕಗಳನ್ನು ವಿಪ್ಲವದ ನೂರಾರು ಮುಖಗಳನ್ನು ಹೊಂದಿದೆ. ಈ ಘನೋದ್ದೇಶದ ಭಾವೋದ್ರೇಕ, ದೃಶ್ಯಪರಂಪರೆ ಇಪ್ಪತ್ತನೆಯ ಶತಮಾನದ ತುತ್ತತುದಿಯಲ್ಲಿ ನೀವು ಇನ್ನೊಂದು ವಿವೇಚನಾಯುಗ(The Enlightenment)ದ ನಡುವೆ ನಿಂತಿದ್ದೇವೆ, ಎಂದು ನಿರ್ಣಾಯಕವಾಗಿ ಹೇಳುತ್ತಿದೆ.*

ಆಧುನಿಕ ಯುಗ ಪ್ರಾರಂಭವಾದುದು ಭೂಮಂಡಲದ ಅನ್ವೇಷಣೆಯಿಂದ. ಕೊಲಂಬಸ್ ಪಶ್ಚಿಮಾರ್ಧಗೋಳವನ್ನು 'ಕಂಡುಹಿಡಿದ'. ವಾಸ್ಕೋಡಿಗಾಮ ಪೂರ್ವಾರ್ಧಗೋಳವನ್ನು ಶೋಧಿಸಿದ. ಈ ಅನ್ವೇಷಣೆಯ ಹಿಂದೆಯೇ ಮಾನವ ಪುನಃ ಅನ್ವೇಷಣೆಗಳನ್ನು ಮುಂದುವರಿಸಿದ. ಮೊದಲು ಭೂಮಿಯ ಸಮಗ್ರ ಭಾಗಗಳು ; ಆಮೇಲೆ ಪರ್ವತ ಶಿಖರಗಳು ; ಆಮೇಲೆ ಉತ್ತರ-ದಕ್ಷಿಣ ಧ್ರುವಗಳು ಆಮೇಲೆ ಸಾಗರದ ಅಂತರಾಳಗಳು—ಹೀಗೆ ಈ ಭೂಗೋಳದಾದ್ಯಂತ ಪ್ರಸರಿಸಿದ ಸಾಹಸಗಳಿಂದ ತೃಪ್ತನಾಗದೆ, ಮಾನವ ಚೇತನವು ವ್ಯೋಮದೇವತೆಗೆ ಹಾರಲು ನಿರ್ಧರಿಸಿತು. ರಾಕೆಟ್ಟುಗಳನ್ನು ಅಂತರಿಕ್ಷಕ್ಕೆ ಕಳುಹಿಸುವುದರ ಮೂಲಕ ನಾವು ಈ ಅನ್ವೇಷಣೆಯನ್ನು ಪ್ರಾರಂಭಿಸಿದೆವು.

ಮೊಟ್ಟಮೊದಲಿನ ರಾಕೆಟ್ಟುಗಳು 60-70 ಮೈಲಿಗಳಿಂದ ಮೇಲಕ್ಕೇರಲಿಲ್ಲ. ಆಮೇಲೆ ಹೆಚ್ಚು ಪ್ರಬಲ ರಾಕೆಟ್ಟುಗಳನ್ನು ಕಂಡುಹಿಡಿದಾಗ ಅವು ಭೂಮಿಯನ್ನು ಆವರಿಸಿದ ಅಂತರಿಕ್ಷವನ್ನು ಕಂಡು ಹಿಡಿದವು. ಈಗ ಸದ್ಯಕ್ಕೆ "ಪಯನಿರ್ ೧೦" ಎಂಬ ರಾಕೆಟ್ಟು ಸೌರವ್ಯೂಹದ ಎಲ್ಲೆಗಳತ್ತ ನುಗ್ಗಿ, ಅಂತರಿಕ್ಷದಾಚೆಗೂ ಧಾವಿಸುತ್ತಿದೆ. ಇವೆಲ್ಲವೂ ಪ್ರಪಂಚ ಅನ್ವೇಷಣಾ ಯಾತ್ರೆಗಳು.

ಆದರೆ ಇನ್ನೊಂದು ಅನ್ವೇಷಣೆ ಆಧುನಿಕ ಮಾನವನಿಗಾಗಿ ಕಾಯುತ್ತಿದೆ. ಅದು ಯಾವುದು ? ಅದು ಮಾನವನ ಅಭ್ಯಂತರದೊಳಗಿನ ಪ್ರಜ್ಞೆಯ ಹಿನ್ನಾಡು ಪ್ರದೇಶ.

ಅದು ಅವನ ಪಾಲಿಗೆ ಇನ್ನೂ ಅಜ್ಞಾತವಾಗುಳಿದಿದೆ. ಅದು ಅವನ, ಅವನ ನಾಗರಿಕತೆಯ ಎದುರಿಗೆ ಅನನ್ಯ ಆಕರ್ಷಣೆಯ ಸವಾಲು ಒಡ್ಡಿರುವ ಅನ್ವೇಷಣಾ ಕ್ಷೇತ್ರ. ನಾವು ಈ ಅಂತರ್ಲೋಕದ ಅನ್ವೇಷಣೆಯನ್ನು ಪ್ರಾರಂಭಿಸಿ ಸ್ವಲ್ಪ ಮುಂದುವರಿದರೆ ಸಾಕು, ಆಗ ಪ್ರೇಮ, ಕರುಣೆ, ಶಾಂತಿ ಮತ್ತಿತರ ಮಹತ್ತರ ಮಾನವೀಯ ಗುಣ ಮೌಲ್ಯಗಳ ಪರಿಮಳ ಬೀರುತ್ತೇವೆ. ಮಾಸ್ಟರ್ ಎಕ್‌ಹರ್ಟ್ ಹೇಳಿದ ಮಾತು ಇದು : 'ನಾವು ಧ್ಯಾನದ ಮಡಿಲಿನಿಂದೆತ್ತಿಕೊಂಡುದನ್ನು ಪ್ರೇಮದ ರೂಪದಲ್ಲಿ ಹೊರ ಸೂಸುವೆವು'.

## ೧೨. ಉಪಸಂಹಾರ

ಪ್ರಪಂಚದ ಮೇಲೆ ದ್ವೇಷ, ದುರಾಸೆ, ಕಾಮ, ಹಿಂಸಾಚಾರ ಮೊದಲಾದವುಗಳ ಬಾಂಬುಧಾಳಿ, ಮಾಡುವುದರ ಬದಲು ಶಾಂತಿ, ಪ್ರೇಮ; ಲೋಕಸೇವೆಯಂಥ ಸದ್ಗುಣಗಳ ಅಮೃತಸೇಚನವೆಸಗುವುದನ್ನು ನಾವು ಕಲಿಯಬೇಕು. ಮನುಷ್ಯನ ಬಾಹ್ಯಜೀವನದ ನಿರ್ಣಾಯಕ ಅಂಶ ಅವನು ಮಾಡುವ ಕೆಲಸಕಾರ್ಯಗಳು. ಆದರೆ ಅವನ ಅಭ್ಯಂತರ ಜೀವನದ ಅಳತೆಗೋಲು—ಅವನ ಪೂರ್ಣ ಅಸ್ತಿತ್ವ, ಅವನ ಸಮಗ್ರ ಬಾಳಿನ ಇರುವಿಕೆ. ಮಾನವ ಇತಿಹಾಸದಲ್ಲಿ, ಪ್ರಪಂಚವನ್ನೇ ಬದಲಾಯಿಸಿದ ಮಹತ್ವದ ಶಕ್ತಿಸಾಮರ್ಥ್ಯಗಳು ಪ್ರದರ್ಶಿತವಾದುದು ಅವನ ಅಭ್ಯಂತರ ಜೀವನದ ಆಯಾಮದಲ್ಲಿ, ಅವನ ಪೂರ್ಣ ಅಸ್ತಿತ್ವದಲ್ಲಿ, ಅವನ ಇರುವಿಕೆಯಲ್ಲಿ ; ಅವನ ಬಾಹ್ಯಜೀವನದ ಕೆಲಸಕಾರ್ಯಗಳಲ್ಲಲ್ಲ. ಇದರ ಸತ್ಯವನ್ನು ತಿಳಿಯಬೇಕಾದರೆ ನಾವು ಒಬ್ಬ ನೆಪೋಲಿಯನ್‌ನನ್ನು ಒಬ್ಬ ಏಸು ಅಥವಾ ಒಬ್ಬ ಬುದ್ಧನೊಡನೆ ಹೋಲಿಸಿ ನೋಡಬಹುದು. ಸ್ವತಃ ನೆಪೋಲಿಯನ್‌ನೇ ನಮಗಾಗಿ ಇಂಥ ಮೌಲ್ಯಮಾಪನ ಮಾಡಿದ್ದಾನೆ. ಅವನ ಸೈಂಟ್ ಹೆಲಿನಾ ದಿನಗಳಲ್ಲಿ ಯಾರೊಡನೆಯೋ ಮಾತನಾಡುವಾಗ ಅವನು ಈ ಸತ್ಯವನ್ನು ಒಪ್ಪಿಕೊಂಡನೆನ್ನಲಾಗಿದೆ:

*ಈ ಲೋಕದಲ್ಲಿ ಎರಡು ಶಕ್ತಿಗಳಿವೆ. ಒಂದು ಕತ್ತಿ, ಇನ್ನೊಂದು ಆತ್ಮಶಕ್ತಿ. ಆತ್ಮಶಕ್ತಿಗೆ ಲೋಕ ಯಾವಾಗಲೂ ಮಣಿದಿದೆ.*

*ಅಲೆಕ್ಸಾಂಡರ್ ಸೀಜರ್, ಷಾರ್ಲ್‌ಮೆನ್, ಹಾಗೂ ನಾನು ಮಹತ್ವದ ಸಾಮ್ರಾಜ್ಯಗಳನ್ನು ಸ್ಥಾಪಿಸಿದೆವು. ಆದರೆ ನಮ್ಮ ಪ್ರತಿಭೆ ಪ್ರಕಟವಾದುದು ಯಾವ ರೀತಿಯಲ್ಲಿ ? ಹಿಂಸೆ, ಬಲಾತ್ಕಾರ ಶಕ್ತಿ ಇವುಗಳ ಮೂಲಕ. ತನ್ನ ಸಾಮ್ರಾಜ್ಯವನ್ನು ಪ್ರೀತಿಯ ತಳಹದಿಯ ಮೇಲೆ ಕಟ್ಟಿದವನು ಏಸು ಕ್ರಿಸ್ತನೊಬ್ಬನೇ. ಇಂದಿಗೂ ಅವನಿಗೋಸ್ಕರ ಕೋಟ್ಯಂತರ ಜನ ಬಲಿದಾನಮಾಡಲು ಸಿದ್ಧರಿದ್ದಾರೆ.*

ಏಸು ಕ್ರಿಸ್ತ, ಬುದ್ಧ, ಶ್ರೀರಾಮಕೃಷ್ಣರಂಥ ದಿವ್ಯ ಚೇತನಗಳ ಮತ್ತಿತರ ಬೋಧಕರ ದೈವೀಶಕ್ತಿಯು ಇತಿಹಾಸದ ಪ್ರವಾಹದಲ್ಲಿಯೂ ಕೋಟ್ಯಂತರ ವಿಜ್ಞಾನಿಗಳು, ಕಲೆಗಾರರು, ಬುದ್ಧಿಜೀವಿಗಳು ಮತ್ತು ಬೇರೆ ಬೇರೆ ಆಧ್ಯಾತ್ಮ ಪಿಪಾಸುಗಳ ಜೀವನದ ಮೇಲೆಯೂ ಪ್ರಭಾವ ಬೀರುತ್ತದೆ. ಆ ಪ್ರಭಾವ ವಿಳಂಬಗತಿಯದಾಗಿರಬಹುದು. ಆದರೆ ಅದು ತೀಕ್ಷ್ಣವಾಗಿದ್ದು, ವ್ಯಾಪಕವೂ, ಚಿರಂತನವೂ ಆದ ಪರಿಣಾಮ ಸಾಧಿಸುತ್ತದೆ.... ರೊಮೈನ್ ರೋಲಾ ಅವರು ನೀಡಿರುವ ಶ್ರೀರಾಮಕೃಷ್ಣ ಪರಮಹಂಸರ

ವ್ಯಕ್ತಿತ್ವದ ಅಧ್ಯಯನ ಈ ಸಂದರ್ಭದಲ್ಲಿ ಬಹಳ ಪ್ರಬೋಧಕವಾಗುತ್ತದೆ (*Life of Ramakrishna* Preface : To the Western Readers, P.14)

*ಇಲ್ಲಿ ನಾನು ಮೂಡಿಸಲಿರುವ ವ್ಯಕ್ತಿ ಚಿತ್ರಣವು ಮುವ್ವತ್ತು ಕೋಟಿ ಜನರ, ಎರಡು ಸಾವಿರ ವರ್ಷಗಳ ಅವಧಿಯ ಆಧ್ಯಾತ್ಮಿಕ ಬದುಕು, ಚಿಂತನೆಗಳ, ಪರಿಪೂರ್ಣ ಅಭಿವ್ಯಕ್ತಿ, ಅವರ ಆತ್ಮಶಕ್ತಿಯ ಪರಾಕಾಷ್ಠೆ. ಅವರು ನಲ್ವತ್ತು ವರ್ಷಗಳ ಹಿಂದೆಯೇ ಗತಿಸಿದ್ದರೂ, ಅವರ ಆತ್ಮವು ಆಧುನಿಕ ಭಾರತಕ್ಕೆ ಉಸಿರೆರೆಯುತ್ತದೆ. ಅವರು ಗಾಂಧೀಜಿಯವರಂತೆ ಕರ್ಮವೀರರಲ್ಲ. ಗಯಟೆ, ಠಾಕೂರರಂತೆ ಕಲೆ-ಚಿಂತನೆಗಳಲ್ಲಿ ಅಸಾಧಾರಣ ಪ್ರತಿಭಾನ್ವಿತರೂ ಅಲ್ಲ. ಅವರೊಬ್ಬರು ಬಂಗಾಳದ ಚಿಕ್ಕ ಗ್ರಾಮವಾಸಿ ಬ್ರಾಹ್ಮಣ. ಅವರ ಬಾಹ್ಯಬದುಕು ಅವರ ಕಾಲದ ರಾಜಕೀಯ, ಸಾಮಾಜಿಕ ಕ್ಷೇತ್ರಗಳಿಂದ ದೂರವಾದ ಪರಿಮಿತ ಚೌಕಟ್ಟಿನೊಳಗೆ ಸೀಮಿತವಾಗಿದ್ದು ಅವರ ಜೀವನದಲ್ಲಿ ಅಂಥ ಮಹತ್ವದ ಘಟನೆಗಳು ಯಾವುವೂ ಸಂಭವಿಸಿರಲಿಲ್ಲ. ಆದರೆ ಅವರ ಅಭ್ಯಂತರ ಜೀವನ ಇಡೀ ದೇವಮಾನವ ಕೋಟಿಯನ್ನು ಒಳಗೊಂಡಿತ್ತು.*

ಇವತ್ತು ಅತ್ಯಗತ್ಯವಾಗಿ ಬೇಕಾಗಿರುವ ಮಾನವ ಮಾರ್ಪಾಡು ಇದು. ನಾವು ಈಗಾಗಲೇ ಸೌರಶಕ್ತಿಯನ್ನು ನಿಯಂತ್ರಿಸಿ, ನದಿಸಾಗರಗಳನ್ನು ಗಾಳಿ ಮಿಂಚುಗಳನ್ನು ಪಳಗಿಸಿ, ಪರಮಾಣುವಿನ ನಾಭಿಯನ್ನು ಚಾಲಕಶಕ್ತಿಯನ್ನಾಗಿ ಸಜ್ಜುಗೊಳಿಸಿದ್ದೇವೆ. ಈಗ ನಾವು ನಮ್ಮ ಗಮನವನ್ನು ಮಾನವನಲ್ಲಿ ಅಡಗಿದ ಶಕ್ತಿಸಂಪನ್ಮೂಲಗಳ ವರ್ಣಪಟಲದ ಅನ್ವೇಷಣೆಯತ್ತ ಹರಿಸುವುದಾದರೆ ನಾವು ವಿವೇಕಿಗಳೆನಿಸಿಕೊಳ್ಳುತ್ತೇವೆ. ಈ ಆಧ್ಯಾತ್ಮಿಕ ವಿಜ್ಞಾನದಲ್ಲಿ ಅಸಾಧ್ಯವಾದುದು ಏನೂ ಇಲ್ಲ ; ಈ ಯುಗದ ಭೌತಿಕ ವಿಜ್ಞಾನಗಳು ತಂತ್ರಜ್ಞಾನಗಳು ಅಸಾಧ್ಯವೆಂಬುದನ್ನೂ ಕಾರ್ಯಸಾಧ್ಯವೆನಿಸಿವೆ. ಉದಾಹರಣೆಗೆ : ಚಂದ್ರನ ಇನ್ನೊಂದು ಮುಖವನ್ನು ವೀಕ್ಷಿಸಿ ಚಂದ್ರಲೋಕದಲ್ಲಿಳಿದಿರುವುದು. ಆಧ್ಯಾತ್ಮಿಕ ತಂತ್ರಜ್ಞಾನದಲ್ಲಿಯೂ ನಾವು ಅಸಾಧ್ಯವನ್ನು ಸಾಧ್ಯವಾಗಿಸಬಹುದು. ನಮ್ಮ ಜೀರ್ಣಾಂಗ ವ್ಯವಸ್ಥೆಯಲ್ಲಿ ಆಹಾರವಸ್ತುವನ್ನು ಪರಿಷ್ಕರಿಸಿ ಅದನ್ನು ಜೀವ ಶಕ್ತಿಯನ್ನಾಗಿಸಿ ಕಾರ್ಯಪ್ರವೃತ್ತಗೊಳಿಸುತ್ತೇವೆ. ನಾವು ಅಧ್ಯಯನ ಮಾಡಿರುವುದನ್ನು ಚಿಂತನೆಯಲ್ಲಿ ಪರಿಪಚನ ಮಾಡಿ ಅದನ್ನು ಜ್ಞಾನ ಹಾಗೂ ಸಮರ್ಥ ಕಾರ್ಯಶೀಲತೆಯನ್ನಾಗಿ ಪರಿವರ್ತಿಸುತ್ತೇವೆ. ಅದೇ ರೀತಿ ನಮ್ಮೊಳಗಿನ ದುಷ್ಟಪ್ರವೃತ್ತಿಗಳನ್ನು ಪಳಗಿಸಿ, ಪ್ರೇಮಶಕ್ತಿಯನ್ನಾಗಿ ಪರಿವರ್ತಿಸಿ ಲೋಕವನ್ನು ಪ್ರದೀಪಗೊಳಿಸಬಹುದು. ನಾವು ಭೂಮಿಯೊಳಗಿನಿಂದ ಕಚ್ಚಾಎಣ್ಣೆ ತೆಗೆದು, ಅದರಿಂದ ಸೊಗಸಾದ, ಉಪಯುಕ್ತ ಪೆಟ್ರೋಲಿಯಂ ವಸ್ತುಗಳನ್ನು ತಯಾರಿಸುವ ಹಾಗೆ ನಮ್ಮ ಮನೋದೈಹಿಕ ಸಂಕೀರ್ಣವನ್ನು ಶುದ್ಧೀಕರಣ ಪ್ರಯೋಗಾಲಯ ಅಥವಾ ಸಾಧನವನ್ನಾಗಿ ಮಾರ್ಪಡಿಸಬೇಕು. ಮನುಷ್ಯನ ಬಾಹ್ಯಜೀವನದ ಸಂದರ್ಭದಲ್ಲಿ ಅವನ ಅಭ್ಯಂತರ ಜೀವನದ ಸ್ಥಾನವೆನ್ನುವ ಈ ವಿಷಯದ ಅರ್ಥವೆಂದರೆ ಇದೇ. ನಿಮಗೆಲ್ಲಾ ವಂದನೆಗಳು.

## ಪ್ರಶ್ನೋತ್ತರ ಅಧಿವೇಶನ

ಪ್ರಶ್ನೆ : ಪ್ರೊ. ವಾನ್ ಪ್ರಾಗ್ : ಪ್ರಾಚೀನ ಭಾರತದ ತತ್ತ್ವಶಾಸ್ತ್ರದಲ್ಲಿ ಹೇಳುವ ಮಾನವ ವ್ಯಕ್ತಿತ್ವದ ಗಾಢಸ್ತರಗಳನ್ನು ಕುರಿತು ನೀವು ಪ್ರಸ್ತಾಪಿಸಿದಿರಿ. ನಾನೂ ಸಹ ಒಬ್ಬ ಮನೋವಿಜ್ಞಾನಿ. ನಾನು ಮನೋರೋಗ ಚಿಕಿತ್ಸೆಯ ಕ್ಷೇತ್ರದಲ್ಲಿ ಕೆಲಸಮಾಡುತ್ತೇನೆ ; ಪಾಶ್ಚಾತ್ಯ ಮನೋವಿಜ್ಞಾನದ ವಿಚಾರಗಳನ್ನು ಭಾರತೀಯ ತತ್ತ್ವಚಿಂತನೆಯೊಡನೆ ಹೇಗೆ ಸಮನ್ವಯಗೊಳಿಸಬಹುದೆಂಬುದರ ಬಗ್ಗೆ ಚಿಂತಿಸುತ್ತಿರುತ್ತೇನೆ. ಈ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳಿಗಾಗಿ ಹುಡುಕುತ್ತಿದ್ದೇನೆ. ಅಂಥ ಒಂದು ಪುಸ್ತಕ ನನಗೆ ಸಿಕ್ಕಿದೆ. . ಅದು ಸ್ವಾಮಿ ಅಖಿಲಾನಂದರ (ಬ್ಯಾಸ್ಟನ್‌ನ ರಾಮಕೃಷ್ಣ ವೇದಾಂತ ಕೇಂದ್ರ) **Hindu Psychology ; Its Meaning for the West** ಎಂಬುದು.

ಸ್ವಾಮಿ : ಹೌದು. ಅದೊಂದು ಒಳ್ಳೆಯ ಪುಸ್ತಕ. ಅದನ್ನು ಅಮೆರಿಕದಲ್ಲಿ (USA) ಅಧ್ಯಯನ ಮಾಡಲಾಗುತ್ತಿದೆ.

ಪ್ರಶ್ನೆ : ಪ್ರೊ. ವ್ಯಾನ್ ಪ್ರಾಗ್ : ಅದು ಬಹಳ ಮೌಲಿಕವಾದ ಗ್ರಂಥ ನಿಜ. ಆದರೆ ಅದು ವ್ಯಾವಹಾರಿಕವಾಗಿ ಅಷ್ಟು ಸಹಾಯಕ ಅಲ್ಲ. ನನ್ನ ಪ್ರಶ್ನೆ : ಆಧುನಿಕ ಪಾಶ್ಚಾತ್ಯ ಮನೋವಿಜ್ಞಾನ ಹಾಗೂ ಭಾರತೀಯ ತತ್ತ್ವಶಾಸ್ತ್ರಗಳ ನಡುವಣ ಸಂಪರ್ಕ ಸೂಚಿಸುವಂಥ ಪುಸ್ತಕಗಳು ಭಾರತದಲ್ಲಿ ಸಿಕ್ಕುತ್ತವೆಯೋ ?

ಸ್ವಾಮಿ : ಆಧುನಿಕ ಮನೋವಿಜ್ಞಾನ ಹಾಗೂ ಮನೋರೋಗ ಚಿಕಿತ್ಸೆಯ ವಿಷಯಗಳನ್ನು ಭಾರತೀಯ ಆಧ್ಯಾತ್ಮಿಕ ತಾತ್ತ್ವಿಕ ಚಿಂತನೆಗಳೊಂದಿಗೆ ಸಮನ್ವಯಗೊಳಿಸುವ ಈ ಕಾರ್ಯವನ್ನು ಭಾರತೀಯರಿಗಿಂತ ಪಾಶ್ಚಾತ್ಯ ವಿದ್ವಾಂಸರುಗಳೇ ಹೆಚ್ಚಾಗಿ ಮಾಡುತ್ತಿದ್ದಾರೆ. ಕಳೆದ ೨೦ ವರ್ಷಗಳಲ್ಲಿ ಪಶ್ಚಿಮದೇಶಗಳಲ್ಲಿ ಈ ವಿಷಯದ ಮೇಲೆ ಹಲವಾರು ಗ್ರಂಥಗಳು ಬಂದಿವೆ. ನಾನೂ ಕೆಲವನ್ನು ನೋಡಿದ್ದೇನೆ ; ಇವುಗಳಲ್ಲಿ ಅಧ್ಯಯನದ ಮುಖ್ಯ ಕೇಂದ್ರವಸ್ತು, ಮಾನವ ಪ್ರಜ್ಞೆ. ನಾನು ಭಾರತಕ್ಕೆ ಹಿಂದಿರುಗಿದ ಮೇಲೆ ನಾನು ಬರೆದ Science of Consciousness in the Light of Vedanta and Yoga ಎಂಬ ಲೇಖನದ ಪ್ರತಿ ನಿಮಗೆ ಕಳುಹಿಸಿಕೊಡುತ್ತೇನೆ. ನಾನು ಭಾರತೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ (ಬೆಂಗಳೂರು) ೧.೧.೧೯೮೮ ರಲ್ಲಿ ಏರ್ಪಡಿಸಿದ್ದ Brain, Consciousness and Yoga ಎಂಬ ವಿಚಾರ ಸಂಕಿರಣದಲ್ಲಿ ಆ ಲೇಖನವನ್ನು ಮಂಡಿಸಿದ್ದೆ. ಆಧುನಿಕ ಪಾಶ್ಚಾತ್ಯ ವಿದ್ವಾಂಸರ ಇತ್ತೀಚಿನ ಪುಸ್ತಕಗಳಲ್ಲಿ ಕೆಲವನ್ನು ಇದರಲ್ಲಿ ಉಲ್ಲೇಖಿಸಿದ್ದೇನೆ.

ಪ್ರಶ್ನೆ : ಪ್ರೊ. ವಾನ್ ಪ್ರಾಗ್ : ಈ ಸಮಸ್ಯೆಯ ವಿಷಯದಲ್ಲಿ ಹಾಲೆಂಡಿನ ಬಹಳಷ್ಟು ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಆಸಕ್ತಿ ಇರುವುದನ್ನು ನಾನು ಗಮನಿಸಿದ್ದೇನೆ.

ಸ್ವಾಮಿ :- ನಾನು ೧೯೭೮-೭೯ರ ಅವಧಿಯಲ್ಲಿ ಅಮೆರಿಕದಲ್ಲಿದ್ದಾಗ American Hand book of Psychiatry (ಹಲವು ಲೇಖನಗಳ ಸಂಗ್ರಹ) ಎಂಬ ಗ್ರಂಥ ಓದಿದೆ. ಅದರಲ್ಲಿ ಚರ್ಚಿಸಲಾದ ಹಲವು ಮುಖ್ಯ ವಿಷಯಗಳಲ್ಲಿ ಒಂದು ಸಿಲ್ವಾನೋ ಏರಿಯಟಿ ಬರೆದ Creativity and its Cultivation ಎಂಬ ಲೇಖನ (Vol. 3 Chapter 44, pp. 723-36). ಅದರಲ್ಲಿ ಅವರು 'ಅಮೆರಿಕದ ಮಕ್ಕಳನ್ನು ಕಲ್ಪನಾಸಾಮರ್ಥ್ಯವಿಲ್ಲದಂತೆ ಮಾಡುವುದರ ಬದಲು ನಿಜವಾಗಿ ಸೃಜನಶೀಲರನ್ನಾಗಿ ಮಾಡುವುದು ಹೇಗೆಂಬ ಸಮಸ್ಯೆಯನ್ನು ಚರ್ಚಿಸಿದ್ದಾರೆ. ಅವರು ಹೀಗೆನ್ನುತ್ತಾರೆ :

*ಪ್ರಸ್ತುತ ಲೇಖನದ ಪ್ರಕಾರ 'ಸೃಜನಶೀಲತೆ' ಎಂದರೆ ಮನುಷ್ಯನು ಪ್ರಚೋದನೆ- ಪ್ರತಿಕ್ರಿಯೆ (Stimulus-response) ಎಂಬ ಮಾಮೂಲೀ ಮನೋವೈಜ್ಞಾನಿಕ ಸೂತ್ರವನ್ನು ಅಪೇಕ್ಷಣೀಯ ರೀತಿಯಲ್ಲಿ 'ಮೀರಿ' ನಿಲ್ಲಬಲ್ಲ ಅವನ ಒಂದು ವಿಶಿಷ್ಟ ಕಾರ್ಯವಿಧಾನ...*

*ಸೃಜನಶೀಲತೆಯು ಮನುಷ್ಯನಿಗೆ ಅವನ ಅಮುಖ್ಯವಾದ ತಾರ್ಕಿಕ ಪ್ರತಿಕ್ರಿಯೆಗಳೆಂಬ ಸಂಕೋಲೆಯಿಂದ ಬಿಡಿಸಿಕೊಳ್ಳಲು ಅನುವಾಗುತ್ತದೆ. ಅದು ಒಂದು ಹೊಸ ವಸ್ತುವಿಗಾಗಿ ಅವನು ಹಾತೊರೆಯುವಂತೆ ಅದನ್ನು ಅನ್ವೇಷಿಸುವಂತೆ ಮಾಡುತ್ತದೆ. ಸುಲಭಸಾಧ್ಯವಲ್ಲದ ಒಂದು ಅಸ್ತಿತ್ವದ ಅಥವಾ ಅನುಭವಸ್ಥಿತಿಯನ್ನು ಅವನು ಹುಡುಕುವಂತೆ ಪ್ರೇರೇಪಿಸುತ್ತದೆ.*

ಅದೇ ಲೇಖಕ ನೀಡುವ ಸಲಹೆಗಳಲ್ಲಿ ಒಂದು : ಮಕ್ಕಳು ಸೃಜನಶೀಲರಾಗಬೇಕಾದರೆ ಅವರು ಏಕಾಂತದಲ್ಲಿ ತಮ್ಮಷ್ಟಕ್ಕೆ ತಾವೇ ತೆಪ್ಪಗಿರುವುದನ್ನು ಕಲಿಯಬೇಕು ; ಅವರು ಗುಂಪುಗುಂಪಾಗಿ ಸೇರಿಕೊಂಡರೆ ಅದರಿಂದ ಸೃಜನಶೀಲತೆ ಬೆಳೆಯುವುದಿಲ್ಲ.....

ಪ್ರಶ್ನೆ : ಧ್ಯಾನದ ಮೂಲಕ ಆಧ್ಯಾತ್ಮಿಕ ಶಕ್ತಿಮೂಲದ ಆಳ ಸ್ತರಗಳನ್ನು ಹೇಗೆ ಪ್ರವೇಶಿಸಬಹುದು ?

ಸ್ವಾಮಿ : ಇದಕ್ಕೆ ಇರುವ ಮಾರ್ಗಗಳಲ್ಲಿ ಒಂದು, ಧ್ಯಾನ. ನಮ್ಮ ಬಾಹ್ಯಜೀವನವನ್ನೂ, ಇತರ ಮಾನವಸಂಬಂಧಗಳನ್ನೂ ನಿರ್ವಹಿಸುವಾಗ ನಾವು ಆಧ್ಯಾತ್ಮಿಕ ಮನೋಧರ್ಮ ರೂಢಿಸಿಕೊಳ್ಳಬೇಕು. ಅದರಿಂದ ಧ್ಯಾನಮಾರ್ಗಕ್ಕೆ ಅಗತ್ಯವಾದ ಆಸರೆ ಸಿಕ್ಕುತ್ತದೆ. ಅಂತರಂಗದಲ್ಲಿ ಧ್ಯಾನ, ಬಹಿರಂಗಜೀವನದಲ್ಲಿ ನಮ್ಮ ಕರ್ತವ್ಯಗಳ ನಿರ್ವಹಣೆ ಎರಡೂ ಜತೆ ಜತೆಯಾಗಿ ಸಾಗುತ್ತಾ ಒಂದನ್ನೊಂದು ಬಲಪಡಿಸುತ್ತಿರಬೇಕು. ಹೀಗಾಗದೆ ಹೋದರೆ, ಒಂದನ್ನು ಇನ್ನೊಂದು ನಿಷ್ಫಲಗೊಳಿಸುತ್ತದೆ. ಒಬ್ಬ ವ್ಯಕ್ತಿಯ ಸುಸಂಘಟಿತ ಆಧ್ಯಾತ್ಮಿಕ ಜೀವನದಲ್ಲಿ ಧರ್ಮನಿಷ್ಠ ಚಿಂತನೆ ಹಾಗೂ ಧರ್ಮನಿಷ್ಠ ಕಾರ್ಯಗಳೆರಡೂ ಸಮನ್ವಯಗೊಂಡಿರುತ್ತವೆ.

ಪ್ರಶ್ನೆ : ತನ್ನ ಅಂತರಾತ್ಮದೊಡನೆ ಸಂಘಟನೆಯಾಗುವುದರ ಜೊತೆಗೆ ಹೊರಗಿನ ನಿಸರ್ಗದೊಡನೆಯೂ ಸಂಘಟನೆಯಾಗಬೇಕೆ ?

ಸ್ವಾಮಿ : ಹೌದು ಹೊರಗಿನ ನಿಸರ್ಗ ಹಾಗೂ ಇತರ ಸಹಜೀವಿಗಳೆರಡರ ಜತೆಯೂ ಸಂಘಟನೆ ಆಗಬೇಕು. ಇದೇ ಆಂತರಿಕ ಸಂಘಟನೆಯ ಪರೀಕ್ಷಾ ಕ್ಷೇತ್ರ. ಯಾರಿಗಾದರೂ ಧ್ಯಾನದಿಂದ ಒಳ್ಳೆಯದೇನಾದರೂ ಸಿಕ್ಕಿದ್ದರೆ ಅದನ್ನು ಮಾನವ ಸಂಬಂಧಗಳ ಸಂದರ್ಭದಲ್ಲಿ ಒರೆಹಚ್ಚಿ ನೋಡಲು ಸಾಧ್ಯವಾಗಬೇಕು.

ಭೌತಿಕ ವಿಜ್ಞಾನಗಳಲ್ಲಿ ಫಲಿತಾಂಶಗಳನ್ನು ತಾಳೆಹಚ್ಚಿ ನೋಡುವುದಿಲ್ಲವೇ ? ಇದು ಸಹ ಹಾಗೆಯೇ. ಧ್ಯಾನದಲ್ಲಿ ಉತ್ತಮ ಫಲಿತಾಂಶ ಲಭಿಸಿತೆನ್ನುವುದು, ಕೇವಲ ಆತ್ಮಸಮರ್ಥನೆಯ ಹೇಳಿಕೆಯಾಗಬಾರದು, ಅದು ರುಜುವಾತಾದ ಸತ್ಯಾಂಶವಾಗಬೇಕು.

ಪ್ರಶ್ನೆ : ಇದನ್ನು ಸಾಧಿಸಲು ಬೇರೆ ಮಾರ್ಗಗಳಿವೆಯೇ ಅಥವಾ ಇದೊಂದೇ ಸಾಕೇ ?

ಸ್ವಾಮಿ : ನಿಜವಾಗಿ ಹೇಳಬೇಕೆಂದರೆ, ಬಾಹ್ಯಾಭ್ಯಂತರವೆನ್ನುವ ಈ ಎರಡು ಮಾರ್ಗಗಳನ್ನು ಬಿಟ್ಟು ಅನ್ಯಮಾರ್ಗವಿಲ್ಲ. ಆದ್ದರಿಂದಲೇ 'ಭಗವದ್ಗೀತೆ'ಯಲ್ಲಿ ಶ್ರೀಕೃಷ್ಣ ಸತ್ಯಶೋಧಕರನ್ನುದ್ದೇಶಿಸಿ, ಹೇಳುತ್ತಾನೆ : ಮಾಮ್ ಅನುಸ್ಮರ ಯುಧ್ಯ ಚ 'ಅಂತರಂಗದಲ್ಲಿ ನನ್ನನ್ನು ಧ್ಯಾನಿಸು : ಬಹಿರಂಗದಲ್ಲಿ(ಜೀವನ)ಸಂಗ್ರಾಮ ನಡೆಸುತ್ತಾ ಹೋಗು' ಹೀಗೆ ನಾವು ಆಧ್ಯಾತ್ಮಿಕ ಪ್ರಗತಿಯನ್ನು ಕ್ರಮಕ್ರಮವಾಗಿ ಸಂಚಯಿಸಿಕೊಳ್ಳಬೇಕು. ನಾವು ಒಂದು ಸಮಗ್ರ ಜೀವನತತ್ತ್ವವನ್ನು ರೂಪಿಸಿಕೊಳ್ಳಬೇಕು. ಅದರ ಒಂದು ಮುಖ ಧ್ಯಾನವಾದರೆ, ಇನ್ನೊಂದು ದಿನನಿತ್ಯದ ಕಾಯಕವಾಗಬೇಕು.

ಪ್ರೊ. ವಾನ್ ಪ್ರಾಗ್ : ಇನ್ನೇನು ಪ್ರಶ್ನೆಗಳಿಲ್ಲವೋ ? ಈಗ ಹೇಳಿರುವುದೆಲ್ಲವನ್ನೂ ಒಪ್ಪಿದ್ದೇವೆ. ಇದೆಲ್ಲವನ್ನೂ ಅರಗಿಸಿಕೊಳ್ಳಲು ನಮಗೆ ಇನ್ನೂ ಹೆಚ್ಚು ಕಾಲಾವಕಾಶಬೇಕು.

ಸ್ವಾಮಿ : ನೀವು ಪರ್ಯಾಲೋಚಿಸಿ ನಿಮ್ಮ ಪ್ರಶ್ನೆಗಳನ್ನು ರೂಪಿಸಿಕೊಳ್ಳಿ. ಏತನ್ಮಧ್ಯೆ ನಾನು ಛಾಂದೋಗ್ಯೋಪನಿಷತ್ತಿನ ಒಂದು ವಾಕ್ಯ ಪಂಕ್ತಿಯನ್ನುದ್ಧರಿಸುತ್ತೇನೆ. ಮಾನವ ಚೇತನವು ಮುಕ್ತಿ ಹಾಗೂ ಪೂರ್ಣ ಸಿದ್ಧಿಯತ್ತ ಕೈಕೊಂಡ ಸಮಗ್ರ ಆಧ್ಯಾತ್ಮಿಕ ಯಾತ್ರೆಯನ್ನು ಕೇವಲ ಈ ಮೂರು ಸಾಲುಗಳು ಸಂಕ್ಷೇಪಿಸುತ್ತವೆ (೭, ೨೬, ೨) :

ಆಹಾರ-ಶುದ್ಧೌ ಸತ್ತ್ವಶುದ್ಧಿಃ
ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ
ಸ್ಮೃತಿಲಾಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ

*ಆಹಾರ ಶುದ್ಧವಾಗಿದ್ದರೆ (ಅದು ದೈಹಿಕ ಆಹಾರವಾಗಿರಲಿ, ಮಾನಸಿಕ ಆಹಾರವಾಗಿರಲಿ,) ಮನಸ್ಸು ಶುದ್ಧವಾಗಿರುತ್ತದೆ; ಮನಸ್ಸು ಶುದ್ಧವಾಗಿದ್ದರೆ ಸ್ಮೃತಿ ಅಥವಾ ನೆನಪು (ತನ್ನ ದೈವತ್ವದ*

*ನೆನಪು) ಅವಿಕೃತವೂ ಸ್ಥಿರವೂ ಆಗಿರುತ್ತದೆ. ಅಂಥ ಸ್ಮೃತಿಯನ್ನು ಸಾಧಿಸಿದಾಗ(ಹೃದಯದ)ಸಕಲ ತೊಡಕು, ಬಂಧನಗಳಿಂದ ಮುಕ್ತರಾಗುತ್ತೇವೆ.*

ಆಹಾರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ ; 'ಮಾನಸಿಕ' ಆಹಾರ, ಅಂದರೆ ಬಾಹ್ಯ ಜೀವನದ ಪ್ರಭಾವಗಳು ಮನಸ್ಸಿನ ಮೇಲೆ ಇನ್ನೂ ಆಳ ಪರಿಣಾಮ ಬೀರುತ್ತವೆ. ಆದ್ದರಿಂದ ಮನುಷ್ಯನ ಶರೀರ ವ್ಯವಸ್ಥೆಯ ಮೇಲೆ ಬೀಳುವ ಈ ಪ್ರಭಾವಗಳನ್ನು ಶೋಧಿಸುವ ಅಗತ್ಯವಿದೆ. ಹಾಗಾದರೆ ಮನಸ್ಸು ಪರಿಶುದ್ಧವಾಗುತ್ತದೆ. ಅಶುದ್ಧ ಆಹಾರವನ್ನು ವಿಷದ ಆಹಾರವನ್ನು ನಾವು ತ್ಯಜಿಸುತ್ತೇವೆ. ಹಾಗೆಯೇ ನೀವು ಮಲಿನಗೊಂಡ, ವಿಷಪೂರಿತ ಪ್ರಭಾವಗಳನ್ನು ತ್ಯಜಿಸಬೇಕು. ಪರಿಶುದ್ಧವಾದುದನ್ನು ಮಾತ್ರ ಸ್ವೀಕರಿಸಬೇಕು. ಇದನ್ನು ಸಾಧಿಸಬೇಕಾದರೆ ನಾವು ವಿವೇಚನಾಶಕ್ತಿಯನ್ನು, 'ವಿವೇಕ'ವನ್ನು ಬೆಳೆಸಿಕೊಳ್ಳಬೇಕು. ಇವತ್ತು ನಾವು ಕಲುಷಿತಗೊಂಡ ನೀರು, ಪರಿಸರ ಮಾಲಿನ್ಯಗಳ ಬಗ್ಗೆ ಹಲುಬುತ್ತೇವೆ.; ಆದರೆ ಇವತ್ತು ಟಿ.ವಿ. ಮೊದಲಾದ ಮಾಧ್ಯಮಗಳ ಮೂಲಕ ಆಗುತ್ತಿರುವ ಮಾನಸಿಕ ಮಾಲಿನ್ಯ ಇನ್ನೂ ಹೆಚ್ಚು ಕೇಡು ತರುತ್ತಿವೆ. ಹುಚ್ಚು ಹುಚ್ಚಾದ ಲೈಂಗಿಕತೆ, ಹಿಂಸಾಚಾರ ಮೊದಲಾದವು ಜನರ ಮೇಲೆ, ಅದರಲ್ಲೂ ಮಕ್ಕಳ ಮನಸ್ಸಿನ ಮೇಲೆ ಬೀರುತ್ತಿರುವ ದುಷ್ಪರಿಣಾಮಗಳು ಇನ್ನೂ ಹೆಚ್ಚು ಘೋರವೆನಿಸುತ್ತಿವೆ. ಮನಸ್ಸು ಪರಿಶುದ್ಧವಾದರೆ, ಮನುಷ್ಯನು ತನ್ನ ದೈವತ್ವದ ಸ್ಮೃತಿಯನ್ನು ಸಾಧಿಸಿ, ಸ್ಥಿರವಾಗಿ ಉಳಿಸಿಕೊಳ್ಳುತ್ತಾನೆ. ವೇದಾಂತವು ನಮ್ಮ ಒಳಗಡೆ ಮೂಲತಃ ದೈವತ್ವವಿದೆ, ಭಗವಂತ ನಮ್ಮೆಲ್ಲರ ಹೃದಯದಲ್ಲಿ ಪ್ರತಿಷ್ಠಿತನಾಗಿರುವನು. ಎಂದು ಬೋಧಿಸುತ್ತದೆ. ಆದರೆ ಹೊರಗಿನಿಂದ ಬರುವ ದುಷ್ಟ 'ಸಂಸ್ಕಾರಗಳು' ಈ ಸತ್ಯವನ್ನು ನಮ್ಮಿಂದ ಮರೆಮಾಚಿಸಿಬಿಡುತ್ತವೆ. ಮನಸ್ಸು ನಿರ್ಮಲವಾದಾಗ ಈ ದೃಢ ಸತ್ಯ ಅನುಭವವಾಗಿ ಪರಿಣಮಿಸುತ್ತದೆ. 'ಅಂತರಂಗ ಶುದ್ಧಿಯುಳ್ಳವರೇ ಭಾಗ್ಯವಂತರು, ಏಕೆಂದರೆ ಅವರಿಗೆ ಭಗವಂತನ ಸಾಕ್ಷಾತ್ಕಾರವಾಗುತ್ತದೆ' ಎಂದು ಏಸುಕ್ರಿಸ್ತನು ಅಭಯಪ್ರದಾನ ಮಾಡುತ್ತಾನೆ. ಈ ದೈವಿಕ ತಿಳಿವಿನಿಂದ ಮನುಷ್ಯನು ಈಗ, ಇಲ್ಲಿ, ಈ ದೇಹದಲ್ಲಿ, ತನ್ನ ಅಂತರ್ನಿಹಿತ ಸ್ವಾತಂತ್ರ್ಯದ ಅನುಭವ ಪಡೆಯುತ್ತಾನೆ. ಮನಸ್ಸಿನ ಜಟಿಲತೆಗಳನ್ನೂ ಕಗ್ಗಂಟಾದ ಸಮಸ್ಯೆಗಳನ್ನೂ ನಿವಾರಿಸಿ ಬಂಧವಿಮುಕ್ತನಾಗುತ್ತಾನೆ. ಸ್ವಾತಂತ್ರ್ಯ ಸಿದ್ಧಿಗಳತ್ತ ಹೊರಟ ಮಾನವನ ಆಧ್ಯಾತ್ಮಿಕ ಯಾತ್ರೆಯಲ್ಲಿ ಇವು ಮೂರು ಘಟ್ಟಗಳು.

ಪ್ರಶ್ನೆ : ಪ್ರೊ. ವಾನ್ ಪ್ರಾಗ್ : ಈಗ ನಾನು ಇನ್ನೊಂದು ಪ್ರಶ್ನೆ ಕೇಳಲು ಸಿದ್ಧವಾಗಿದ್ದೇನೆ. ಅದು 'ಗುರು'ವಿನ ಕಲ್ಪನೆಗೆ ಸಂಬಂಧಿಸಿದುದು. ಆದರೆ ಸಾಮಾನ್ಯ ಅರ್ಥದಲ್ಲಿ ಪ್ರಸ್ತುತ ಪ್ರಶ್ನೆಗೆ ಸಂಬಂಧಿಸಿದೆ. ಒಬ್ಬ ವ್ಯಕ್ತಿ ಇನ್ನೊಬ್ಬನಿಗೆ ಈ ಅಭ್ಯಂತರ ಬದುಕಿನ ಗಹನ ಅನುಭವ ಪಡೆಯಲು ನೆರವಾಗಬಲ್ಲನೇ ?

ಸ್ವಾಮಿ : ಒಬ್ಬನೇ 'ಗುರು' ಮಾತ್ರವಲ್ಲ. ಹಲವು 'ಗುರು'ಗಳು ಇದರಲ್ಲಿ ನೆರವಾಗಬಲ್ಲರು. ಈ ಮಾರ್ಗದರ್ಶನ ಆಧ್ಯಾತ್ಮಿಕವಾಗಿ ಸ್ವಲ್ಪ ಹೆಚ್ಚಿನ ಆತ್ಮಪ್ರಬುದ್ಧತೆ ಸಾಧಿಸಿರುವವರಿಂದ ಸಿಕ್ಕಬಹುದು. ಆತ, ಆಕೆ ನಿಮ್ಮ ನೆರೆಹೊರೆಯವರಾಗಿರಬಹುದು. ಅವರೂ ಸಹ ಒಂದು ವಿಶಿಷ್ಟ ದಿಕ್ಕಿನ ಆಧ್ಯಾತ್ಮಿಕ ಬೆಳವಣಿಗೆಗಾಗಿ ನಿಮ್ಮ ಮಾರ್ಗದರ್ಶಿಗಳಾಗಬಹುದು. ಇನ್ನೂ ಹೆಚ್ಚು ಉನ್ನತ ಪ್ರಬುದ್ಧತೆ ಪಡೆದವರಿಂದ ಇನ್ನೂ ಹೆಚ್ಚಿನ ಸಹಾಯವಾಗಬಹುದು. ಆದರೆ ಸಾಮಾನ್ಯವಾಗಿ ಅಷ್ಟು ಹೆಚ್ಚು ಪ್ರಬುದ್ಧ ಜ್ಞಾನ ಅನಗತ್ಯ. ಏಕೆಂದರೆ ಅದು ಸಾಮಾನ್ಯರ ಗ್ರಹಿಕೆಗೆ ಎಟುಕದೆ ಹೋಗಬಹುದು. ಆದರೆ ನಿತ್ಯಜೀವನದ ನಮ್ಮ ಮಾನವೀಯ ಸಂಬಂಧಗಳಲ್ಲಿ ಆಧ್ಯಾತ್ಮಿಕ ಕೊಡುಕೊಳ್ಳುವಿಕೆಯಿಂದ ಉಪಯೋಗವಾಗಬಹುದು. ಅಂಥ ಮಾರ್ಗದರ್ಶನವನ್ನು ನಿಮಗೆ ಯಾರು ಕೊಡುವರೋ ಅವರೇ ನಿಮ್ಮ ಗುರು 'ಸಮಾನ'ರಾಗುತ್ತಾರೆ. ನಾವು ಆಧ್ಯಾತ್ಮಿಕವಾಗಿ ನಿಜವಾದ ಎತ್ತರಕ್ಕೆ ಏರಿದಾಗ ಮಾತ್ರ ಅಂಥ ಉನ್ನತ ಸ್ಥಾನದ ಗುರುಗಳು ಬೇಕಾಗಬಹುದು. ಅದರಿಂದ ನಮಗೆ ಲಾಭವಾಗಬಹುದು.

'ಛಾಂದೋಗ್ಯೋಪನಿಷತ್ತಿ'ನಲ್ಲಿ (೭.೧೪) (೧.೨) ಒಂದು ಸಾಮತಿ ಬರುತ್ತದೆ. ಅಲ್ಲಿ ಆಧ್ಯಾತ್ಮಿಕ ಬೆಳಕಿಗಾಗಿ ಹುಡುಕುತ್ತಾ ಪರಿತಪಿಸುವವನನ್ನು, ದಾರಿಗಳ್ಳರು ಕೈಕಾಲುಪಡೆಮುರಿಕಟ್ಟಿ, ಕಣ್ಣು ಕಟ್ಟಿ ಉರುಳಿಸಿರುವ ಅಸಹಾಯಕ ದಾರಿಹೋಕನಿಗೆ ಹೋಲಿಸಲಾಗಿದೆ. ವಿಕ್ಕುಗಾಣದ ಆ ವ್ಯಕ್ತಿ ಸಹಾಯಕ್ಕಾಗಿ ಹುಯಿಲಿಡುತ್ತಾನೆ. ಯಾರೋ ಇನ್ನೊಬ್ಬ ಕರುಣಾಮಯಿ ಆ ದಾರಿಯಲ್ಲಿ ಬಂದು ಅವನನ್ನು ಬಂಧನದಿಂದ ಬಿಡಿಸಿ ಮನೆಯತ್ತ ದಾರಿತೋರಿಸುತ್ತಾನೆ. ಗುರುವಿನಿಂದ ಆಗುವ ಕೆಲಸವನ್ನು ಹೀಗೆ ಅಲ್ಲಿ ವಿವರಿಸಲಾಗಿದೆ. ಬುದ್ಧ, ಏಸುಕ್ರಿಸ್ತ, ಶ್ರೀರಾಮಕೃಷ್ಣ ಮುಂತಾದ ಪ್ರೌಢ ಸ್ತರದ ಗುರುಗಳು ಈ ಲೋಕದಲ್ಲಿ ಸದಾ ಸಿಕ್ಕುವುದಿಲ್ಲ. ಹಾಗೆ ಅವರು ಮತ್ತೆ ಮತ್ತೆ ಭೂಮಿಗೆ ಇಳಿದು ಬರುವ ಅಗತ್ಯವೂ ಇಲ್ಲ. ಏಕೆಂದರೆ ಅವರ ಬೋಧನೆ, ಹಿತವಚನ, ಅವರು ಉಳಿಸಿ ಹೋಗಿರುವ ಅವರ ಜೀವನದ ಮಾದರಿ, ಇವುಗಳೇ ಕೋಟ್ಯಾನುಕೋಟಿ ಜನರಿಗೆ ಸಹಸ್ರಾರು ವರ್ಷಕಾಲ 'ಗುರು'ವಿನ ಹಾಗೆಯೇ ಸ್ಫೂರ್ತಿಯಾಗಲು ಸಾಧ್ಯ. ಇನ್ನು ಸಣ್ಣಪುಟ್ಟ 'ಗುರು'ಗಳು ಯಾವಾಗಲೂ ಲಭ್ಯರಾಗಿದ್ದು ಅವರ ಗುರುವಚನಗಳು ಜನಸಾಮಾನ್ಯರ ಗ್ರಹಿಕೆಗೆ ಸಾಕಾಗಬಹುದು.

ಈಗೀಗ ಬಹಳ ಜನರು 'ಧರ್ಮ' ಎಂದರೆ ಒಬ್ಬ ಗುರುವನ್ನು ಹುಡುಕಿ ಅವನಿಗೆ ಒಂದಿಷ್ಟು ಡಾಲ್‌ಗಳನ್ನು ತೆತ್ತು ಅವನಿಂದ ಮಂತ್ರದೀಕ್ಷೆ ಪಡೆಯುವುದು ಎಂದೇ ಭ್ರಮಿಸುತ್ತಾರೆ. ಧರ್ಮವೆಂದರೆ ಗುರುವಿಗಾಗಿ ನಡೆಸುವ ಅನ್ವೇಷಣೆಯಲ್ಲ, ಅದು ಸತ್ಯಶೋಧನೆ, ಭಗವಂತನನ್ನು ಹುಡುಕುವ ಕ್ರಿಯೆ. ಪ್ರಾರಂಭದಲ್ಲಿ ನಾವು ನಮ್ಮ ನಮ್ಮ ಅಲ್ಪಜ್ಞಾನ ಹಾಗೂ ಬುದ್ಧಿಶಕ್ತಿಯನ್ನೇ ಅವಲಂಬಿಸಿ, ಭಗವಂತನ ಮಾರ್ಗದಲ್ಲಿ ಕ್ರಮಿಸಬೇಕು. ನಮಗೆ ನಿಜವಾಗಿ ಹೊರಗಿನ ನೆರವು ಬೇಕಾದಾಗ, ಅದಕ್ಕಾಗಿ ಒಬ್ಬ ಗುರುವನ್ನು ಹುಡುಕಿ ಅಗತ್ಯ ನೆರವು ಪಡೆಯಿರಿ.

ಮನಸ್ಸು ಜಾಗರೂಕವೂ ಸಂಶೋಧನಾತ್ಮಕವೂ ಆಗಿದ್ದರೆ ಬದುಕಿನ ವಿವಿಧ ಸಂದರ್ಭಗಳಿಂದ ಹೇಗೆ ಆಧ್ಯಾತ್ಮಿಕ ಬೋಧನೆಗಳನ್ನು ಗ್ರಹಿಸಬಹುದೆಂಬುದನ್ನು ತಿಳಿದುಕೊಳ್ಳುತ್ತದೆ. ಶ್ರೀಮದ್ ಭಾಗವತ (೧೧, ೭, ೩೪)ದಲ್ಲಿನ ಅತ್ಯಂತ ಸೊಗಸಾದ ಕಥೆಗಳಲ್ಲಿ ಒಂದು ಹೀಗಿದೆ : ಒಬ್ಬಾನೊಬ್ಬ ಅವಧೂತ (ಎಲ್ಲ ಬಗೆಯ ಅಭಿಮಾನವನ್ನೂ ತೊರೆದ, ಆಧ್ಯಾತ್ಮಿಕವಾಗಿ ಉನ್ನತ ಪ್ರಬುದ್ಧತೆ ಗಳಿಸಿರುವ ಚೇತನ) ನನ್ನು ಕುರಿತು ಯಾರೋ ಕೇಳಿದರಂತೆ : ಇಷ್ಟೊಂದು ಜ್ಞಾನಿಯಾದ ನಿನ್ನ ಗುರು ಯಾರು ? ಅದಕ್ಕೆ ಅವನಿತ್ತ ಉತ್ತರ : ನನಗೆ ಇರುವುದು ಒಬ್ಬ ಗುರುವಲ್ಲ. ಇಪ್ಪತ್ತನಾಲ್ಕು ಗುರುಗಳಿದ್ದಾರೆ. ಅವರು ನೇರವಾಗಿ ನನಗೆ ಏನನ್ನೂ ಬೋಧಿಸಲಿಲ್ಲ. ಆದರೆ ನಾನು ಅವರ ರೀತಿ ನೀತಿಗಳನ್ನು ಗಮನಿಸಿ ಎಲ್ಲವನ್ನೂ ಅರಿತೆ. ಹಣಕ್ಕಾಗಿ ಧರ್ಮವನ್ನು ಮಾರಿಕೊಳ್ಳುವ 'ಗುರು'ಗಳನ್ನು ಹಿಂದೂಧರ್ಮಶಾಸ್ತ್ರಗಳು ಖಂಡಿಸುತ್ತವೆ. ಸದ್ಗುರು ಶಂಕರಾಚಾರ್ಯರ ದೊಡ್ಡತನವನ್ನು ಕುರಿತ ಒಂದು ಪ್ರಸಿದ್ಧ ಸಂಸ್ಕೃತ ಸುಭಾಷಿತವಿದೆ.

ಗುರವೋ ಬಹವಃ ಸಂತಿ
ಶಿಷ್ಯ ವಿತ್ತಾಪಹಾರಿಣಃ
ತಮೇಕಂ ಶಂಕರಂ ವಂದೇ
ಶಿಷ್ಯಸಂತಾಪಹಾರಿಣಮ್

*ಶಿಷ್ಯರ ಜೇಬು ಕತ್ತರಿಸುವ ಗುರುಗಳು ಹಲವರಿದ್ದಾರೆ! ಆದರೆ (ಎಲ್ಲಾ ಗುರುಗಳ ಪೈಕಿ) ನಾನು ಶಂಕರಾಚಾರ್ಯರಿಗೆ ಸಾಷ್ಟಾಂಗವೆರಗುತ್ತೇನೆ, ಯಾಕೆಂದರೆ ಅವರು ಮಾತ್ರ ಶಿಷ್ಯರ ದುಃಖ ನಿವಾರಿಸುವುದರಲ್ಲಿ ನಿಪುಣರು.*

ಪ್ರಶ್ನೆ : ಎಷ್ಟು ಜ್ಞಾನೇಂದ್ರಿಯಗಳಿವೆ, ಸ್ವಾಮಿ ಪ್ರಕಾರ ?

ಸ್ವಾಮಿ : ವೇದಾಂತದಲ್ಲಿ ಹತ್ತು ಗ್ರಹಣೇಂದ್ರಿಯಗಳ ಮಾತು ಬರುತ್ತದೆ. ಐದು ಜ್ಞಾನೇಂದ್ರಿಯಗಳು ಇನ್ನುಳಿದವು ಕರ್ಮೇಂದ್ರಿಯಗಳು. ಜ್ಞಾನವೆಂದರೆ ತಿಳಿವಳಿಕೆ, ಕರ್ಮವೆಂದರೆ ಕಾಯಕ.

ಇಂದ್ರಿಯವೆಂದರೆ ಅವಯವ. ಜ್ಞಾನೇಂದ್ರಿಯಗಳ ಮೂಲಕ ನಾವು ವಸ್ತುಪ್ರಪಂಚದ ಅರಿವನ್ನು ಗ್ರಹಿಸುತ್ತೇವೆ. ಕರ್ಮೇಂದ್ರಿಯಗಳ ಮೂಲಕ ನಾವು ವಸ್ತುಪ್ರಪಂಚದಲ್ಲಿ ಸವಿಸುತ್ತೇವೆ. ಕೆಲಸ ಮಾಡುತ್ತೇವೆ.

ಪ್ರಶ್ನೆ : ಮನೋವಿಶ್ಲೇಷಣೆಗೂ, ಧ್ಯಾನಕ್ಕೂ ಏನು ವ್ಯತ್ಯಾಸ ?

ಸ್ವಾಮಿ : ಮುಖ್ಯವ್ಯತ್ಯಾಸ ಇದು ; ಮನೋವಿಶ್ಲೇಷಣೆ ಬೇರೊಬ್ಬರು ನಿಮ್ಮ ಮೇಲೆ ಮಾಡುವ ಕ್ರಿಯೆ. ಧ್ಯಾನ ನಿಮ್ಮಿಂದಲೇ ನಡೆಯತಕ್ಕದ್ದು, ಸ್ವಗತ. ಮನೋವಿಶ್ಲೇಷಣೆಯಲ್ಲಿ ನೀವು ಬೇರೊಬ್ಬರ ಚಿಕಿತ್ಸೆಗೊಳಗಾದ ರೋಗಿ. ಧ್ಯಾನದಲ್ಲಿ ನೀವೇ ನಿಮ್ಮ ವೈದ್ಯರು, ಚಿಕಿತ್ಸಕರು. ಧ್ಯಾನದಿಂದ ನಿಮ್ಮ ಸಂವೇದನೆ ಭಾವನೆಗಳನ್ನು ನಿಮ್ಮ ಸಂಕಲ್ಪ ಬುದ್ಧಿಶಕ್ತಿಗಳ ಸಹಾಯದಿಂದ ನೀವೇ ನಿಯಂತ್ರಿಸಿ ಕೊಳ್ಳುವಿರಿ. ಅದರಿಂದ ಆರೋಗ್ಯಕರ, ಸ್ಥಿರಜೀವನಕ್ಕೆ ಅನುವಾಗುತ್ತದೆ. ಆದರೆ ನನಗೆ ನನ್ನೊಳಗಿನ ಸ್ಥಿತಿಯ ಅರಿವಿಲ್ಲದಾಗ, ನಾನು ನನ್ನ ಭಾವನೆ ಸಂವೇದನಗಳ ಒತ್ತಡಕ್ಕೆ ಸಿಕ್ಕಿಬಿದ್ದಾಗ, ನನಗೆ ನಾನೇ ಸಹಾಯವಾಗಲು ಸಾಧ್ಯವಿಲ್ಲ. ಆಗ ನನ್ನ ಒಳಬದುಕಿಗೆ ಸ್ಥಿರತೆಯನ್ನು ತಂದುಕೊಡಲು ಬೇರೊಬ್ಬರ ನೆರವನ್ನು ಅರಸಿ ಹೋಗಬೇಕು. ಈ ಕಾರಣದಿಂದಲೇ ಮನೋವಿಜ್ಞಾನ, ಮನೋ ವಿಶ್ಲೇಷಣೆ, ಮನೋರೋಗ ಚಿಕಿತ್ಸೆ, ಮನೋರೋಗ ಚಿಕಿತ್ಸಾಶಾಸ್ತ್ರ ಇವು ಅತ್ಯಂತ ಉಪಯುಕ್ತ ಕಾರ್ಯವಿಧಾನ (ಶಿಸ್ತು)ಗಳಾಗಿದ್ದು ತಮಗೆ ತಾವೇ ಸಹಾಯವಾಗಲು ಸಾಧ್ಯವಿಲ್ಲದವರ ಅಗತ್ಯಗಳನ್ನು ಅವು ಪೂರೈಸುತ್ತವೆ. ಆದರೆ ನಮ್ಮ ಆರೋಗ್ಯ, ಕ್ಷೇಮಾಭಿವೃದ್ಧಿಗಾಗಿ ಇನ್ನೊಬ್ಬರನ್ನು ಅನಿವಾರ್ಯವಾಗಿ ಅವಲಂಬಿಸದೆ, ನಾವೇ ಸ್ವತಂತ್ರರಾಗಿರುವುದು ಒಳ್ಳೆಯದು. ಈ ಆಧ್ಯಾತ್ಮಿಕ ಜ್ಞಾನ ಹಾಗೂ ಶಿಕ್ಷಣಗಳು (ಅದರಲ್ಲಿ ಧ್ಯಾನವು ಒಂದು ಮುಖ್ಯ ಭಾಗವಾಗಿರುತ್ತದೆ) ನಮ್ಮ ಆತ್ಮಾವಲಂಬನೆಯನ್ನು ಹೆಚ್ಚಿಸುತ್ತವೆ.

ಪ್ರೊ. ವಾನ್ ಪ್ರಾಗ್ : ಹೊತ್ತು ಮೀರುತ್ತಿದೆ. ಇನ್ನು ಪ್ರಶ್ನೆಗಳು ಸಾಕು, ದಯವಿಟ್ಟು.

ಪೂಜ್ಯ ರಂಗನಾಥಾನಂದರನ್ನು ಅವರ ಉಪನ್ಯಾಸಕ್ಕಾಗಿ ಪ್ರಶ್ನೋತ್ತರಗಳಿಗಾಗಿ ನಾನು ವಂದಿಸು ತ್ತೇನೆ. ಮನೋವಿಜ್ಞಾನ, ಮನೋರೋಗಚಿಕಿತ್ಸೆಗಳೆರಡೂ ಪಾಶ್ಚಾತ್ಯ ಸಂಸ್ಕೃತಿಗೆ ಅಗತ್ಯವಾಗಿದ್ದವು. ಯಾಕೆಂದರೆ ಜನಗಳಿಗೆ ತಮ್ಮ ಚೇತನಶಕ್ತಿಯನ್ನು ತಾವೇ ನಿಭಾಯಿಸುವ ಪರಿಪಾಟವಿರಲಿಲ್ಲ. ಆದ್ದರಿಂದ ಅವರಿಗೆ ತಮ್ಮ ಆಂತರಿಕ ಸ್ಥಿತಿಯನ್ನು ನಿಭಾಯಿಸಲು ಒಂದು ವಿಶಿಷ್ಟ ಸಹಾಯಸಾಧನ ಬೇಕಾಗಿತ್ತು. ಆದರೆ ಈಗೀಗ ಮನೋವೈಜ್ಞಾನಿಕರು, ಮನೋರೋಗ ಚಿಕಿತ್ಸಕರುಗಳೇ ಆಧ್ಯಾತ್ಮಿಕ ವಿಜ್ಞಾನದಿಂದ ಹೆಚ್ಚು ಆಳವಾದ ನೆರವನ್ನರಸುತ್ತಿರುವುದು ಉತ್ಸಾಹಕರ ಸಂಗತಿ ; ಮತ್ತು ಭಾರತೀಯ ತತ್ತ್ವಚಿಂತನೆಯೊಂದಿಗಿನ ಈ ಪ್ರಸ್ತುತ ಮುಖಾಬಿಲೆ ತುಂಬಾ ಮುಖ್ಯವಾದುದು. ಇಂಥ ಮುಖಾಬಿಲೆ ಹೋದ ಶತಮಾನದಲ್ಲಿ ಹಾಗೂ ಇಪ್ಪತ್ತನೆಯ ಶಕಮಾನದ ಆದಿಭಾಗದಲ್ಲಿ ಇಲ್ಲದೆ ಹೋದುದರಿಂದ ಪಾಶ್ಚಾತ್ಯನಿಗೆ ಮನೋವಿಶ್ಲೇಷಣೆ, ಮನೋರೋಗಚಿಕಿತ್ಸೆ, ಮನೋರೋಗಶಾಸ್ತ್ರ ಎಂದು ಮುಂತಾದ ಚಿಕಿತ್ಸಾ ವಿಧಾನಗಳ ಮೊರೆ ಹೋಗದೆ ಬೇರೆ ದಾರಿ ಇರಲಿಲ್ಲ.

ಪೂಜ್ಯ ರಂಗನಾಥನಂದರೆ, ನಿಮಗೆ ನನ್ನ ಹೃತ್ಪೂರ್ವಕ ವಂದನೆಗಳು. ಮುಂದೆ ಬರಲಿರುವ ವರ್ಷಗಳಲ್ಲಿ ನಾವು ಇಲ್ಲಿ ನಿಮ್ಮನ್ನು ಮತ್ತೆ ಮತ್ತೆ ನೋಡಲು ಆಶಿಸುತ್ತೇನೆ.

ಅನು : ಎಸ್. ಕೆ. ರಾಮಕೃಷ್ಣಮೂರ್ತಿ



## ಸ್ವಾಮಿ ರಂಗನಾಥಾನಂದ

ಕೇರಳ ಪ್ರಾಂತದ ತ್ರಿಕ್ಕೂರಿನಲ್ಲಿ ೧೯೦೮ರ ಡಿಸೆಂಬರ್ ೧೫ ರಂದು ಜನಿಸಿದ ಸ್ವಾಮಿ ರಂಗನಾಥಾನಂದರು ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ಅಂತರ್‌ರಾಷ್ಟ್ರೀಯ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಸಂಘಟನೆಯಾದ ಶ್ರೀರಾಮಕೃಷ್ಣ ಮಹಾಸಂಘವನ್ನು ಅದರ ಮೈಸೂರು ಶಾಖೆಯಲ್ಲಿ ೧೯೨೬ ರಲ್ಲಿ ಸೇರಿದರು. ಶ್ರೀರಾಮಕೃಷ್ಣ ಪರಮಹಂಸರ ಪ್ರತ್ಯಕ್ಷ ಶಿಷ್ಯರೂ, ರಾಮಕೃಷ್ಣ ಮಹಾಸಂಘದ ಎರಡನೆಯ ಅಧ್ಯಕ್ಷರೂ ಆದ ಸ್ವಾಮಿ ಶಿವಾನಂದರಿಂದ ಅವರಿಗೆ ೧೯೩೩ರಲ್ಲಿ ಸಂನ್ಯಾಸ ದೀಕ್ಷೆ ದೊರೆಯಿತು. ಆಶ್ರಮ ಜೀವನದ ಮೊದಲ ಹನ್ನೆರಡು ವರ್ಷಗಳನ್ನು ಅವರು ಮೈಸೂರು ಮತ್ತು ಬೆಂಗಳೂರಿನಲ್ಲಿ ಸೇವಾಕಾರ್ಯಗಳಲ್ಲಿ ಕಳೆದರು. ೧೯೩೯ ರಿಂದ ೧೯೪೨ ರವರೆಗೆ ರಾಮಕೃಷ್ಣ ಮಹಾಸಂಘದ ರಂಗೂನ್ ಶಾಖೆಯ ಕಾರ್ಯದರ್ಶಿಯಾಗಿ, ಗ್ರಂಥಪಾಲರಾಗಿ ಅವರು ಸಲ್ಲಿಸಿದ ಸೇವೆ ಚಿರಸ್ಮರಣೀಯ. ೧೯೪೨ ರಿಂದ ೧೯೪೮ರ ವರೆಗೆ ಕರಾಚಿಯ ರಾಮಕೃಷ್ಣಮಠ ಮತ್ತು ಮಿಷನ್ನಿನ ಅಧ್ಯಕ್ಷರಾಗಿ ಸಹ ಅವರು ಕಾರ್ಯವೆಸಗಿದರು.

೧೯೪೯ ರಿಂದ ೧೯೬೨ ರವರೆಗೆ ಪೂಜ್ಯರು ದೆಹಲಿ ಆಶ್ರಮದ ಕಾರ್ಯದರ್ಶಿಯಾಗಿದ್ದರು. ೧೯೬೨ ರಿಂದ ೧೯೬೭ ರವರೆಗೆ ಕಲ್ಕತ್ತೆಯ ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್‌ನ ಕಾರ್ಯದರ್ಶಿಯಾಗಿ, ಅಲ್ಲಿನ ಸ್ಕೂಲ್ ಆಫ್ ಹ್ಯೂಮನಿಸ್ಟಿಕ್ ಅಂಡ್ ಕಲ್ಚರಲ್ ಸ್ಟಡೀಸ್‌ನ ನಿರ್ದೇಶಕರಾಗಿ, ಅಲ್ಲಿನ ಮಾಸಿಕ ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಮುಂದೆ ಅವರು ಹೈದರಾಬಾದಿನಲ್ಲಿರುವ ರಾಮಕೃಷ್ಣ ಮಠದ ಅಧ್ಯಕ್ಷರಾಗಿ ದೀರ್ಘಕಾಲ ಅಭಿವೃದ್ಧಿಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಏಪ್ರಿಲ್ ೧೯೮೯ರಲ್ಲಿ ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾಗಿ ಚುನಾಯಿತರಾದರು. ಈಗ ೧೯೯೮ರಿಂದ ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾಗಿ ಸಂಘದ ಬಹುಮುಖ ಚಟುವಟಿಕೆಗಳನ್ನು ಸಮರ್ಥವಾಗಿ ನಿರ್ದೇಶಿಸುತ್ತಿದ್ದಾರೆ.

ರಾಷ್ಟ್ರೀಯ ಮತ್ತು ಜಾಗತಿಕ ಸಮಸ್ಯೆಗಳ ಬಗ್ಗೆ ಆಳವಾಗಿ ಚಿಂತಿಸಬಲ್ಲ, ಅಪಾರ ವಿದ್ವತ್ತನ್ನು ಪಡೆದಿರುವ ಪೂಜ್ಯ ಸ್ವಾಮೀಜಿಯವರು ಶ್ರೇಷ್ಠ ವಾಗ್ಮಿಗಳೆಂದೂ ಬರಹಗಾರರೆಂದೂ ಪ್ರಸಿದ್ಧರಾಗಿರುವರು. ಭಾರತ ಸರ್ಕಾರದ ಸಾಂಸ್ಕೃತಿಕ ಪ್ರತಿನಿಧಿಯಾಗಿ ಹಲವು ಸಲ ಇಂಗ್ಲೆಂಡ್, ಆಸ್ಟ್ರೇಲಿಯಾ, ಅಮೇರಿಕಾ, ಹಾಲೆಂಡ್, ಪಶ್ಚಿಮ ಜರ್ಮನಿ, ರಷ್ಯಾ ಮುಂತಾದ ದೇಶಗಳಿಗೆ ಭೇಟಿ ಇತ್ತು; ವೇದಾಂತ ಸಂದೇಶವನ್ನು ಬಿತ್ತರಿಸಿರುವರು. ಪ್ರಪ್ರಥಮ ಇಂದಿರಾಗಾಂಧಿ ರಾಷ್ಟ್ರೀಯ ಭಾವೈಕ್ಯತಾ ಪ್ರಶಸ್ತಿಯನ್ನು ಪೂಜ್ಯ ಸ್ವಾಮೀಜಿಯವರಿಗೆ ನೀಡಿ ಸನ್ಮಾನಿಸಲಾಗಿದೆ.

**Parivarthanasheela Samajakke Shashvatha Moulyagalu** Rs. 100/-

Sri Ramakrishna Ashrama, Yadavagiri, Mysore 570 020